ಶ್ರೀರಸ್ತು.

ಶ್ರೀಮನ್ಮಹಾರಾಜಾಧಿರಾಜ

ಶ್ರೀಕೃಷ್ಣರಾಜ ಒಡೆಯರ್ ಬಹದರವರಿಂದ



ರಚಿಸಲ್ಪಟ್ಟ

## ಶ್ರೀ ಕೃಷ್ಣರಾಜ ವಾಣೀವಿಲಾಸ

ಎಂಬ

# ಶ್ರೀಮದ್ಭಾಗವತದ ಕನ್ನಡ ಟೀಕು

## ದಶಮಸ್ಕಂಧ.

ಶ್ರೀಮನ್ಮಹಿಸೂರು ಮಹಾರಾಣೀ ರೀಜೆಂಟ್ ಅವರುಗಳ ಅಪ್ಪಣೆಯನ್ನು ಪಡೆದು



ಎಂ. ರುದ್ರಪ್ಪ ಅಂಡ್ ಸನ್ ಅವರುಗಳಿಂದ

ಸ್ವಕೀಯ "ಶ್ರೀ ಚಾಮುಂಡೇಶ್ವರೀ" ಮುದ್ರಾಕ್ಷರಶಾಲೆಯಲ್ಲಿ ಮುದ್ರಾಪಿಸಿ ಪ್ರಕಟಿಸಲ್ಪಟ್ಟಿತು.

ಬೆಂಗಳೂರು:

೧೮೯೭.

ಮೊದಲನೇ ಛಾಪೆ—೧೦೦೦ ಪ್ರತಿಗಳು.



# ಪೀಠಿಕೆ.

ಶ್ರೀ ಲಕ್ಷ್ಮೀದೇವಿಗೆ ಆವಾಸಸ್ಥಾನವಾದ ವಕ್ಷಸ್ಥಳವುಳ್ಳ ಶ್ರೀಮಹಾವಿಷ್ಣುವಿನ ಅನೇಕವಾದ ಅವತಾರಗಳನ್ನು ವಿಸ್ತರಿಸುವ ಶ್ರೀಕೃಷ್ಣರಾಜ ವಾಣೀವಿಲಾಸ ಎಂಬ ಕನ್ನಡ ಶ್ರೀಮದ್ಭಾಗವತ ಪುರಾಣದಲ್ಲಿ ಅತ್ಯಂತ ವಿಸ್ತಾರವಾದ್ದಾಗಿ ಲೀಲಾಮಾನುಷಾವತಾರನಾಗಿ ಯದುವಂಶತಿಲಕನಾದ ಶ್ರೀಕೃಷ್ಣನ ಅತ್ಯದ್ಭುತ ಚರಿತ್ರವುಳ್ಳದ್ದಾಗಿ ಅತಿ ರಮಣೀಯವಾದ ದಶಮಸ್ಕಂಧವನ್ನು ಮುದ್ರಿಸಿ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢ ಪ್ರತಾಪ ಪ್ರತಿಮ ವೀರ ನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲ ಪಯಃಪಾರಾವಾರ ಕಳಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಮಹಿಶೂರ ಪುರವರಾಧೀಶ ಶ್ರೀಚಾಮರಾಜ ಮಹೀಪಾಲ ಧರ್ಮಪತ್ನಿ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಶ್ರೀಕೃಷ್ಣರಾಜ ಒಡೆಯರ್ ಬಹದೂರವರುಗಳ ಪಟ್ಟಾಭಿಷೇಕ ವರ್ಧಂತಿಯಲ್ಲಿ ಪ್ರಕಟಿಸುವಷ್ಟು ಭಾಗ್ಯವುಂಟಾದದ್ದಕ್ಕಾಗಿ ಭಗವಂತನನ್ನು ನಾವು ಬಹಳವಾಗಿ ಸ್ತೋತ್ರಮಾಡುತ್ತೇವೆ. ಶ್ರೀಕೃಷ್ಣದೇವರ ಪರಂಪರೆಯಲ್ಲಿ ಉದ್ಭವರಾದ ಆಳಿದ ಮಹಾಸ್ವಾಮಿ ಶ್ರೀಕೃಷ್ಣರಾಜ ಒಡೆಯರ್ ಬಹದೂರವರುಗಳಿಂದ ರಚಿಸಲ್ಪಟ್ಟ ಈ ಗ್ರಂಥವನ್ನು ಶ್ರೀರ್ಮ ಮಹಾರಾಣೀ ರೀಜೆಂಟರವರುಗಳು ಲೋಕೋಪಕಾರಾರ್ಥವಾಗಿ ಮುದ್ರಿಸಿ ಪ್ರಕಟಿಸಲು ನಮ್ಮ ಮೇಲೆ ಪೂರ್ಣಕಟಾಕ್ಷವಿಟ್ಟು ಅಪ್ಪಣೆ ಕೊಟ್ಟಿರುವದ್ದರಿಂದ ಈಗ ದಶಮಸ್ಕಂಧವು ಪೂರೈಸಿತು ; ಮಿಕ್ಕ ಸ್ಕಂಧಗಳು ಕ್ಷಿಪ್ರದಲ್ಲಿಯೇ ಪ್ರಕಟಿಸಲ್ಪಡುವವು. ಯಲ್ಲಾ ವಿಷಯದಲ್ಲಿಯೂ ಶ್ರೀರ್ಮ ಮಹಾರಾಣಿಯವರಿಗೆ ತಮ್ಮ ಪ್ರಜೆಗಳಲ್ಲಿ ಅನುರಾಗವು ಅಧಿಕವಾಗಿರುವದರಿಂದ ಸಕಲ ಜನರಿಗೂ ಕ್ಷೇಮವುಂಟಾಗುವದರಲ್ಲಿ ನಾವು ವಿಶೇಷರಾಗಿ ಅರಿಕೆ ಮಾಡಲು ಅಶಕ್ತರಾಗಿದ್ದೇವೆ.

ಮಹಾಭಾರತ ರಾಮಾಯಣ ಭಾಗವತಗಳ ಪ್ರಚುರಗಳಲ್ಲಿ ದಿವಾನ್ ಬಹದೂರ್ ಸರ್ ಕೆ. ಶೇಷಾದ್ರಿ ಐಯ್ಯರ್ ಕೆ. ಸಿ. ಎಸ್. ಐ. ಯವರು ಮತ್ತು ರಾಯಬಹದೂರ್ ಆರ್ಕಾಡ್ ಶ್ರೀನಿವಾಸಾಚಾರ್ಯರವರು ಮೊದಲಾದ ದೊಡ್ಡ ಮನುಷ್ಯರು ನಮಗೆ ಬಹಳವಾಗಿ ಸಹಾಯಮಾಡುವದರಿಂದ ಅವರಿಗೆ ನಾವು ಬಹಳ ಕೃತಜ್ಞತೆಯುಳ್ಳವರಾಗಿದ್ದೇವೆ.

ಬೆಂಗಳೂರು,
೧೮೯೭, ಫಿಬ್ರವರಿ ತಾ|| ೧.

ಎಂ. ರುದ್ರಪ್ಪ, ಅಂಡ್ ಸನ್,
ಪ್ರೊಪ್ರೈಟರಸ್, ಶ್ರೀಚಾಮುಂಡೇಶ್ವರೀ ಪ್ರೆಸ,
ಲಾಲ್‌ಬಾಗ್ ರೋಡ್, ಬೆಂಗಳೂರು.

## ದಶಮಸ್ಕಂಧ—ವಿಷಯಸೂಚಿಕೆ.





ಶ್ರೀಬಾದರಾಯಣೇಣ ಸಮಾಕಲಿತಂ ರಸಾರ್ದ್ರಂ ವೇದಾನುರದ್ಯಮಫಲಂ ।
ಶುಕವಕ್ತ್ರಮುಕ್ತಂ ಕೃಷ್ಣಾವತಾರಚರಿತಾಮೃತಪೂರಪೂರ್ಣಂ ಭೋಭಾವುಕಾಃ ॥

## ಶ್ರೀ ಕೃಷ್ಣರಾಜ ವಾಣೀವಿಲಾಸ

# ಶ್ರೀಮದ್ಭಾಗವತದ ಕನ್ನಡ ಟೀಕು

## ದಶಮಸ್ಕಂಧ.

### ೧ನೇ ಅಧ್ಯಾಯ.

### ಕಂಸನ ವೃತ್ತಾಂತವು.

ಅನಂತರದಲ್ಲಿ ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳನ್ನು ಕುರಿತು ಇಂತೆಂದನು :

ಎಲೈ ಋಷಿಗಳಿರಾ, ಈ ಪ್ರಕಾರದಲ್ಲಿ ಶುಕಮುನಿಯು ಕ್ರಮವಾಗಿ ಸೂರ್ಯ-ಚಂದ್ರ ವಂಶಗಳಲ್ಲಿ ಹುಟ್ಟಿದ ರಾಜರ ಚರಿತ್ರಗಳನ್ನು ನಿರೂಪಿಸುತ ಧರ್ಮ-ಶೀಲನಾದ ಯದುರಾಜನ ವೃತ್ತಾಂತವನ್ನು ವಿಶೇಷವಾಗಿ ತಿಳುಹಿಸಿ ಆ ರಾಜನ ವಂಶದಲ್ಲಿ ಸಮಸ್ತ ಕಲ್ಯಾಣ ಗುಣನಿಲಯನಾದ ಶ್ರೀ ಮಹಾವಿಷ್ಣುವು ತನ್ನ ಅಂಶದಿಂದ ವಸುದೇವನಿಂದ ದೇವಕೀದೇವಿಯಲ್ಲಿ ನಿಜರೂಪದಿಂದವತರಿಸಿ ಅನಂತರದಲ್ಲಿ ಮನುಷ್ಯಾಕಾರವುಳ್ಳವನಾಗಿ ಪಿತೃಗೃಹದಿಂದ ನಂದಗೋಕುಲವನ್ನೈದಿ ಅಲ್ಲಿ ನಂದನು ಮೊದಲಾದ ಸಮಸ್ತ ಗೋಪಗೋಪೀಜನರಿಗೆ ಗೋಸಂಪತ್ಸಮೃದ್ಧಿಗಳನ್ನುಂಟುಮಾಡುತ ಪೂತನೆ ಶಕಟ ತೃಣಾವರ್ತ ವತ್ಸ ಅಘಾಸುರರು ಮೊದಲಾದ ಶತ್ರುಗಳನ್ನು

ಸಂಹರಿಸಿ ರುಕ್ಮಿಣೀದೇವಿ ಮೊದಲಾದ ಅನೇಕಸಹಸ್ರ ಸ್ತ್ರೀಯರನ್ನು ವಿವಾಹಮಾಡಿಕೊಂಡು ಅವರಲ್ಲಿ ಅನೇಕಸಹಸ್ರ ಪುತ್ರರನ್ನು ಪಡೆದು ತನ್ನ ಸಂಬಂಧವಾದ ವೇದಮಾರ್ಗವನ್ನು ಸಮಸ್ತ ಜನರಲ್ಲಿಯೂ ವಿಸ್ತಾರಮಾಡುತ್ತಿದ್ದನು—ಎಂದು ಸಂಕ್ಷೇಪವಾಗಿ ನುಡಿದನು.

ಪರೀಕ್ಷಿದ್ರಾಯನು ಅದನ್ನು ಕೇಳಿ ಶ್ರೀಕೃಷ್ಣನ ಚರಿತ್ರವನ್ನು ವಿಸ್ತಾರವಾಗಿ ತಿಳಿಯಲೋಸುಗ ಆತನನ್ನು ಕುರಿತು—ಎಲೈ ಶುಕಮುನಿಯೆ, ಷಡ್ಗುಣೈಶ್ವರ್ಯಸಂಪನ್ನನಾಗಿ ಸರ್ವಪ್ರಾಣಿಗಳನ್ನೂ ಸೃಜಿಸುವವನಾಗಿ ಸರ್ವಾತ್ಮಕನಾದ ಶ್ರೀಹರಿಯು ಯದುವಂಶದಲ್ಲಿ ಉದ್ಭವಿಸಿ ಯಾವ ಚರಿತ್ರಗಳನ್ನು ಆಚರಿಸಿದನೋ ಅವುಗಳನ್ನು ನಮಗೆ ವಿಸ್ತರಿಸಿ ನಿರೂಪಿಸು ; ವಿಷಯಾಭಿಲಾಷೆಯಿಲ್ಲದ ಮುಕ್ತರಿಂದ ಗಾನಮಾಡಲ್ಪಡುತ್ತಿರುವದಾಗಿ ಮೋಕ್ಷೇಚ್ಛೆಯುಳ್ಳ ಪುರುಷರ ಸಂಸಾರವೆಂಬವ್ಯಾಧಿಗೆ ಔಷಧರೂಪವಾಗಿ ವಿಷಯಾಭಿಲಾಷೆಯುಳ್ಳ ಜನರಶ್ರೋತ್ರಮನಸ್ಸುಗಳಿಗೂ ಅತ್ಯಂತ ರಮಣೀಯವಾದ್ದಾಗಿ ಪುಣ್ಯಕರ್ವದ ಭಗವಂತನ ಗುಣಕಥನದಲ್ಲಿ ಪಶುಘಾತಿಯಾದ ಹಿಂಸಕನೂ ಆತ್ಮದ್ರೋಹಿಯೂ ಹೊರತು ಮತ್ಯಾವ ಪುರುಷನೂ ಉಪೇಕ್ಷೆಯುಳ್ಳವನಾಗನು ; ಯುದ್ಧದಲ್ಲಿ ದೇವತೆಗಳನ್ನಾದರೂ ಜಯಿಸಬಲ್ಲ ಭೀಷ್ಮದ್ರೋಣರು ಮೊದಲಾದ ಅತಿರಥರೆಂಬ ಮಹಾಮತ್ಸ್ಯಗಳುಳ್ಳದ್ದಾಗಿ ದಾಟಲಶಕ್ಯವಾದ ಕೌರವಸೇನೆಯೆಂಬ ಮಹಾಸಮುದ್ರವನ್ನು ನನ್ನ ಪಿತಾಮಹರಾದ ಯುಧಿಷ್ಠಿರ ಭೀಮಾರ್ಜುನ ನಕುಲ ಸಹದೇವರು ಯಾವ ಶ್ರೀಕೃಷ್ಣನೆಂಬ ನಾವೆಯುಳ್ಳವರಾಗಿ ಕರುವಿನ ಹೆಜ್ಜೆಯನ್ನು ದಾಟುವಂತೆ ತುಚ್ಛೀಕರಿಸಿ ದಾಟಿದರೋ ಅಂಥಾ ಶ್ರೀಕೃಷ್ಣನ ಚರಿತ್ರವನ್ನು ನಿರೂಪಿಸು ! ದ್ರೋಣಾಚಾರ್ಯನ ಪುತ್ರನಾದ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ದಹಿಸಲ್ಪಟ್ಟ ಕುರುಪಾಂಡವ ವಂಶೋದ್ಧಾರಕನಾದ ನನ್ನ ದೇಹವನ್ನು ಶರಣಾಗತಳಾದ ನನ್ನ ತಾಯಿಯ ಗರ್ಭವನ್ನು ಪ್ರವೇಶಿಸಿ ಚಕ್ರವನ್ನು ಧರಿಸಿ ಯಾವನು ಸಂರಕ್ಷಣೆಮಾಡಿದನೋ ಅಂಥಾ ಶ್ರೀಕೃಷ್ಣನ ಚರಿತ್ರವನ್ನು ನಿರೂಪಿಸು ! ಸಮಸ್ತ ಪ್ರಾಣಿಗಳ ಒಳಗೂ ಹೊರಗೂ ವ್ಯಾಪ್ತನಾಗಿದ್ದುಕೊಂಡು ಅಂತರ್ದೃಷ್ಟಿಯುಳ್ಳ ಪುರುಷರಿಗೆ ಅಂತರ್ಯಾಮಿರೂಪದಿಂದ ಮೋಕ್ಷವನ್ನೂ ಬಾಹ್ಯದೃಷ್ಟಿಯುಳ್ಳ ಪುರುಷರಿಗೆ ಕಾಲರೂಪದಿಂದ ಸಂಸಾರವನ್ನೂ ಕೊಡುವ ಮಾಯಾಮನುಷ್ಯನಾದ ಆ ಭಗವಂತನ ಆಶ್ಚರ್ಯಕರಗಳಾದ ಚರಿತ್ರಗಳನ್ನು ನಿರೂಪಿಸು ! ಸಂಕರ್ಷಣಮೂರ್ತಿಯಾದ ಬಲರಾಮನು ರೋಹಿಣೀದೇವಿಯ ಪುತ್ರನೆಂತಲೂ ದೇವಕೀದೇವಿಯ ಪುತ್ರನೆಂತಲೂ ನಿನ್ನಿಂದ ನಿರೂಪಿಸಲ್ಪಟ್ಟಿತು ; ರೋಹಿಣೀಗರ್ಭೋತ್ಪನ್ನನಾದ ಬಲರಾಮನು ಅದೇ ದೇಹದಿಂದ ದೇವಕೀದೇವಿಯ ಗರ್ಭದಲ್ಲಿ ಹ್ಯಾಗೆ ಉತ್ಪನ್ನನಾದನೋ ಅದನ್ನು ತಿಳಿಸು ! ಭಗವಂತನಾದ ಶ್ರೀಮುಕುಂದನು ತನ್ನ ಪಿತೃವಾದ ವಸುದೇವನ ಗೃಹದಿಂದ ನಂದವ್ರಜಕ್ಕೆ ಯಾಕೆ ಹೋದನು ? ಸಮಸ್ತ ಯಾದವರಿಗೂ ಅಧಿಪತಿಯಾದ ಶ್ರೀಕೃಷ್ಣನು ಜ್ಞಾತಿಗಳೊಡಗೂಡಿ ಯಾವ ಸ್ಥಳದಲ್ಲಿ ವಾಸವಾಗಿದ್ದನು ? ಶ್ರೀಕೃಷ್ಣನು ನಂದಗೋಕುಲದಲ್ಲಿಯೂ ಮಥುರಾಪುರದಲ್ಲಿಯೂ ಯಾವ ವ್ಯಾಪಾರಗಳನ್ನು ಮಾಡಿದನು ? ದೇವಕೀದೇವಿಯ ಭ್ರಾತೃವಾದ್ದರಿಂದ ತನ್ನಿಂದ ಸಂಹರಿಸಲ್ಪಡತಕ್ಕವನಲ್ಲದ ಸೋದರಮಾವನಾದ ಕಂಸನನ್ನು ಯಾವಕಾರಣದಿಂದ ಸಂಹರಿಸಿದನು ? ಮನುಷ್ಯದೇಹವನ್ನು ಆಶ್ರಯಿಸಿ ಶ್ರೀಕೃಷ್ಣನು ವೃಷ್ಣಿಗಳೊಡಗೂಡಿ ದ್ವಾರಕಾನಗರದಲ್ಲಿ ಎಷ್ಟು ಸಂವತ್ಸರಗಳು ವಾಸಮಾಡಿದನು ? ಆತನಿಗೆ ಪತ್ನಿಯರೆಷ್ಟು ಮಂದಿ ? ಎಲೈ ಸರ್ವಜ್ಞನಾದ ಶುಕಮುನಿಯೇ, ಈ ಅರ್ಥವೆಲ್ಲವನ್ನೂ ಮತ್ತು ಶ್ರೀಕೃಷ್ಣನ ಸಮಸ್ತವಾದ ವ್ಯಾಪಾರಗಳನ್ನೂ ವಿಶ್ವಾಸದಿಂದ ಕೇಳುವ ನನಗೆ ವಿಸ್ತಾರವಾಗಿ ಹೇಳು ; ನಿನ್ನ ಮುಖಾರವಿಂದದ ದೆಸೆಯಿಂದ ಹೊರಡುವ ಶ್ರೀಹರಿಕಥಾಮೃತವನ್ನು ಪಾನಂಗೈಯುತ್ತಿರುವ ನನ್ನನ್ನು ಅತ್ಯಂತ ಸಹಿಸಲಶಕ್ಯವಾದ ಹಸಿವು ಬಾಯಾರಿಕೆಗಳೂ ಬಾಧಿಸಲಾರವು—ಎಂದು ನುಡಿದನು.

ಎಲೈ ಭೃಗುವಂಶೋತ್ಪನ್ನನಾದ ಶೌನಕಮುನಿಯೇ, ಈ ರೀತಿಯಲ್ಲಿ ಕೇಳಿದ ಪರೀಕ್ಷಿದ್ರಾಯನ ಶುಭಕರವಾದ ಪ್ರಶ್ನವಾಕ್ಯವನ್ನು ಕೇಳಿ ವ್ಯಾಸಪುತ್ರನಾಗಿ ಜ್ಞಾನಾದಿಗುಣಸಂಪನ್ನನಾಗಿ ಭಾಗವತಶ್ರೇಷ್ಠನಾದ ಶುಕಮುನಿಯು ಕಲಿದೋಷಪರಿಹಾರಕವಾದ ಶ್ರೀಕೃಷ್ಣಚರಿತ್ರವನ್ನು ವರ್ಣಿಸಲುಪಕ್ರಮಿಸಿದನದೆಂತೆನೆ :

ಎಲೈ ರಾಜರ್ಷಿಶ್ರೇಷ್ಠನಾದ ಪರೀಕ್ಷಿದ್ರಾಜನೆ, ಶ್ರೀವಾಸುದೇವನ ಕಥೆಯಲ್ಲಿ ನಿನಗೆ ಅತಿ ದೃಢವಾದ ಆಸಕ್ತಿಯುಂಟಾಗಿರುವದರಿಂದ ನಿನ್ನ ಬುದ್ಧಿಯು ಅತಿ ಶ್ರೇಷ್ಠವಾದದ್ದು; ಶ್ರೀವಾಸುದೇವನ ಕಥಾವಿಷಯಕವಾದ ಇತಿಹಾಸವು ಹೇಳುವವರು ಪ್ರಶ್ನೆಮಾಡುವವರು ಶ್ರವಣಮಾಡುವವರು ಎಂಬ ತ್ರಿವಿಧಪುರುಷರನ್ನೂ (ಶ್ರೀವಾಸುದೇವನ ಪಾದಾರವಿಂದದಲ್ಲಿ ಉದ್ಭವಿಸಿದ ಗಂಗೆಯು ಸ್ವರ್ಗ ಭೂಮಿ ಪಾತಾಳಗಳಲ್ಲಿರುವ ತ್ರಿವಿಧರಾದ ಜನರನ್ನು ಪರಿಶುದ್ಧರಾಗಿ ಮಾಡುವಹಾಗೆ) ಪರಿಶುದ್ಧರಾಗಿ ಮಾಡುವದು! ಎಲೈ ಅರಸೆ, ಪೂರ್ವದಲ್ಲಿ ಭೂದೇವಿಯು ಗರ್ವಿತರಾಗಿ ದುಷ್ಟರಾಗಿ ಕ್ಷತ್ರಿಯರ ರೂಪದಿಂದ ಉತ್ಪನ್ನರಾದ ದೈತ್ಯರ ಅಸಂಖ್ಯಾತಗಳಾದ ಸೇನೆಗಳಿಂದ ಆಕ್ರಮಿಸಲ್ಪಟ್ಟ ಆ ಭಾರವನ್ನು ಸಹಿಸಲಾರದೆ ಬ್ರಹ್ಮದೇವನನ್ನು ಶರಣುಹೊಂದಿದಳು; ಆ ದೇವಿಯು ಗೋರೂಪವನ್ನು ಧರಿಸಿ ಬಾಷ್ಪಪೂರ್ಣವಾದ ಮುಖವುಳ್ಳವಳಾಗಿ ಖಿನ್ನಳಾಗಿ ಅತಿ ದೈನ್ಯದಿಂದ ರೋದನಂಗೈಯುತ ಪ್ರಭುವಾದ ಬ್ರಹ್ಮದೇವನ ಸಮೀಪದಲ್ಲಿ ನಿಂತು ಆತನನ್ನು ಕುರಿತು ತನ್ನ ಕಷ್ಟವನ್ನು ವಿಜ್ಞಾಪಿಸಲು; ಬ್ರಹ್ಮದೇವನು ಆ ದೇವಿಯ ವ್ಯಸನವನ್ನು ಆದರಣೆಯಿಂದ ಕೇಳಿ ಪರಮೇಶ್ವರನು ಇಂದ್ರಾದಿ ದೇವತೆಗಳು ಭೂದೇವಿ ಮೊದಲಾದವರ ಸಹಿತನಾಗಿ ಕ್ಷೀರಸಮುದ್ರದ ತೀರವನ್ನೈದಿ ಲೋಕನಾಥನಾಗಿ ಪೂರ್ವದಲ್ಲಿ ವರಾಹರೂಪವನ್ನು ತಾಳಿ ಭೂಮಿಯನ್ನುದ್ಧರಿಸಿದವನಾಗಿ ಪರಮಪುರುಷನಾದ ಶ್ರೀವಾಸುದೇವನನ್ನು ಏಕಾಗ್ರಚಿತ್ತನಾಗಿ ಪುರುಷಸೂಕ್ತ ಮಂತ್ರಗಳಿಂದ ಸ್ತೋತ್ರಮಾಡುತ ಧ್ಯಾನಾರೂಢನಾಗಿದ್ದು ಆ ಕಾಲದಲ್ಲಿ ನುಡಿಯಲ್ಪಟ್ಟ ಅಶರೀರವಾಕ್ಯವನ್ನು ಕೇಳಿ ಇಂದ್ರಾದಿ ದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ, ಭಗವಂತನಿಂದ ನುಡಿಯಲ್ಪಟ್ಟ ಅಶರೀರ ವಾಕ್ಯವನ್ನು ಕೇಳಿ ಆ ಬಳಿಕ ವಿಳಂಬವಿಲ್ಲದೆ ಆ ಪ್ರಕಾರದಲ್ಲಿ ಆಚರಿಸಿರೀ! ಎಲೈ ದೇವತೆಗಳಿರಾ, ನಾವು ವಿಜ್ಞಾಪನೆಮಾಡುವದಕ್ಕೆ ಮೊದಲೇ ಶ್ರೀಹರಿಯಿಂದ ಈ ಭೂದೇವಿಯ ಸಂತಾಪವು ತಿಳಿಯಲ್ಪಟ್ಟಿದೆ; ಆದ್ದರಿಂದ ಲೋಕನಾಥರಿಗೂ ನಿಯಾಮಕನಾದ ಆ ಭಗವಂತನು ಭೂಮಿಯಲ್ಲಿ ಅವತರಿಸಿ ತನ್ನ ಕಾಲಶಕ್ತಿಯಿಂದ ಭೂಭಾರವನ್ನು ಪರಿಹರಿಸುವನು; ಎಷ್ಟುಪರ್ಯಂತವು ಆತನು ಭೂಮಿಯಲ್ಲಿ ವಾಸಮಾಡುವನೋ ಅಷ್ಟುಪರ್ಯಂತವು ನೀವು ಯಾದವರಲ್ಲಿ ನಿಮ್ಮ ನಿಮ್ಮ ಅಂಶಗಳಿಂದ ಉತ್ಪನ್ನರಾಗಿ ಆ ಭಗವಂತನನ್ನೇ ಅನುವರ್ತಿಸಿಕೊಂಡಿರೀ! ಷಡ್ಗುಣೈಶ್ವರ್ಯಸಂಪನ್ನನಾಗಿ ಪರಮಪುರುಷನಾದ ಶ್ರೀಹರಿಯು ವಸುದೇವನ ಗೃಹದಲ್ಲಿ ಸಾಕ್ಷಾತ್ತಾಗಿ ಅವತರಿಸುವನು; ಆ ಭಗವಂತನ ಸೇವಾರ್ಥವಾಗಿ ಅಪ್ಸರಸ್ತ್ರೀಯರು ಭೂಮಿಯಲ್ಲಿ ಜನಿಸಲಿ; ಮತ್ತು ಋಷಿಗಳು ಕ್ಷೀರವನ್ನು ಸಮರ್ಪಿಸುವ ವ್ಯಾಜದಿಂದ ಶ್ರೀವಿಷ್ಣುವನ್ನು ತೃಪ್ತಿಹೊಂದಿಸಲೋಸುಗ ಗೋರೂಪವುಳ್ಳವರಾಗಿ ಕಲ್ಪಿಸಲ್ಪಡಲಿ; ಶ್ರೀವಾಸುದೇವನ ಅಂಶರೂಪನಾಗಿ ಸಹಸ್ರಮುಖಗಳುಳ್ಳವನಾಗಿ ಸ್ವಯಂಪ್ರಕಾಶನಾದ ಆದಿಶೇಷನು ಶ್ರೀಹರಿಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ಆತನಿಗಿಂತಲು ಮೊದಲೇ ಅವತರಿಸುವನು; ಯಾವ ದೇವಿಯಿಂದ ಈ ಜಗತ್ತು ಅತ್ಯಂತ ಮೋಹವನ್ನೈದುವದೋ ಅಂತಾ ಷಡ್ಗುಣೈಶ್ವರ್ಯಸಂಪನ್ನೆಯಾದ ವಿಷ್ಣುಮಾಯಾದೇವಿಯು ಪ್ರಭುವಾದ ಶ್ರೀಹರಿಯಿಂದ ಆಜ್ಞಾಪಿಸಲ್ಪಟ್ಟು ದೇವಕೀದೇವಿಯ ಗರ್ಭಕರ್ಷಣವು ಯಶೋದಾದೇವಿಯ ಮೋಹವು ಮೊದಲಾದ ಕಾರ್ಯಗಳನ್ನು ಮಾಡಲೋಸುಗ ತನ್ನ ಅಂಶದಿಂದ ಈಗ ಅವತರಿಸುವಳು" ಎಂದು ನುಡಿದು ನವಪ್ರಜೇಶ್ವರರಿಗೂ ಪ್ರಭುವಾದ ಆ ದೇವನು ಭೂದೇವಿಯನ್ನು ಮಧುರವಚನಗಳಿಂದ ಸಮಾಧಾನಗೊಳಿಸಿ ಸರ್ವೋತ್ತಮವಾದ ತನ್ನ ಸತ್ಯಲೋಕವನ್ನೈದಿದನು.

ಎಲೈ ಪರೀಕ್ಷಿತ್ತು ಮಹಾರಾಯನೆ, ಪೂರ್ವದಲ್ಲಿ ಯಾದವರಿಗೆ ಅಧಿಪತಿಯಾದ ಉಗ್ರಸೇನರಾಯನು ಮಧುರಾಪುರದಲ್ಲಿ ವಾಸಮಾಡುತ ಮಾಥುರಗಳೆಂಬ ದೇಶಗಳನ್ನೂ ಶೂರಸೇನಗಳೆಂಬ ದೇಶಗಳನ್ನೂ ಆಳುತ್ತಿದ್ದನು; ಭಗವಂತನಾದ ಶ್ರೀಹರಿಯು ನಿರಂತರದಲ್ಲಿಯೂ ಸಾನ್ನಿಧ್ಯವಾಗಿರುವಂಥಾ ಮಧುರಾಪುರವು ಆ ಕಾಲದಲ್ಲಿ ಸಮಸ್ತ ಯಾದವರಿಗೂ ಆವಾಸಸ್ಥಾನವಾಗಿತ್ತು; ಒಂದು ಸಮಯದಲ್ಲಿ ಶೂರಸೇನರಾಯನ ಪುತ್ರನಾದ ವಸುದೇವನು ವಿವಾಹಮಾಡಿಕೊಂಡು ಮದವಣಗಿತ್ತಿಯಾದ ದೇವಕೀದೇವಿಯೊಡನೆ ತನ್ನ ಗೃಹವನ್ನು ಕುರಿತು ತೆರಳಲೋಸುಗ ರಥವನ್ನೇರಿದನು; ಆಗ ಉಗ್ರಸೇನರಾಯನ ಪುತ್ರನಾದ ಕಂಸನು ತನ್ನ ಒಡಹುಟ್ಟಿದ ದೇವಕೀದೇವಿಗೆ ಪ್ರೀತಿ

ಯುಂಟಾಗುವಂತೆ ಸುವರ್ಣಮಯವಾದ ಅನೇಕ ರಥಗಳಿಂದ ಪರಿವೃತನಾಗಿ ವಸುದೇವನ ರಥಕ್ಕೆ ಸಾರಥಿಯಾಗಿ ಕುಳಿತು ಆ ರಥಾಶ್ವಗಳ ವಾಘೆಗಳನ್ನು ತನ್ನ ಹಸ್ತದಿಂದಿಡಿದಿದ್ದನು ; ಆಗ ಉಗ್ರಸೇನರಾಯನ ಅಣ್ಣನಾದ ದೇವಕನು ತನ್ನ ಪುತ್ರಿಯಾದ ದೇವಕೀದೇವಿಯಲ್ಲಿ ವಾತ್ಸಲ್ಯವುಳ್ಳವನಾಗಿ ಸುವರ್ಣಮಾಲಿಕೆಗಳುಳ್ಳ ನಾನೂರು ಗಜಗಳನ್ನೂ ಹದಿನೈದುಸಾವಿರ ಕುದುರೆಗಳನ್ನೂ ಆರುನೂರು ರಥಗಳನ್ನೂ ಸೌಂದರ್ಯಯುಕ್ತರಾಗಿ ಸರ್ವಾಲಂಕಾರಭೂಷಿತರಾದ ಇನ್ನೂರು ದಾಸಿಯರನ್ನೂ ಮಗಳಿಗೆ ಸ್ತ್ರೀಧನವಾಗಿ ಕೊಟ್ಟನು ; ಆ ಸಮಯದಲ್ಲಿ ಮೃದಂಗ ಶಂಖ ಭೇರಿ ನಗಾರಿ ಮುಂತಾದ ವಾದ್ಯಗಳು ಏಕಕಾಲದಲ್ಲಿ ಅತ್ಯಂತ ಶುಭಕರವಾಗಿ ಮೊಳಗುತ್ತಿದ್ದವು ಅನಂತರದಲ್ಲಿ ಕಂಸನು ದೇವಕೀದೇವಿಯ ರಥಸಾರಥ್ಯವನ್ನು ಮಾಡಿಕೊಂಡು ತೆರಳಿ ಹೋಗುತ್ತಿರಲು ಮಾರ್ಗದಲ್ಲಿ "ಎಲೈ ಅಜ್ಞನಾದ ಕಂಸನೇ, ನೀನು ಸಾರಥ್ಯವನ್ನು ಮಾಡುತ್ತಿರುವ ದೇವಕೀದೇವಿಯ ಎಂಟನೇ ಗರ್ಭವು ನಿನ್ನನ್ನು ಸಂಹರಿಸುವದು" ಎಂದು ಅಶರೀರವಾಕ್ಯವುಂಟಾಯಿತು ; ಅದನ್ನು ಕೇಳಿ ದುಷ್ಟನಾಗಿ ಪಾಪಿಷ್ಠನಾಗಿ ಭೋಜಕುಲಕ್ಕೆ ದೂಷಕನಾದ ಕಂಸನು ತನ್ನ ಒಡಹುಟ್ಟಿದ ದೇವಕೀದೇವಿಯನ್ನು ಕೊಲ್ಲಲುದ್ಯುಕ್ತನಾಗಿ ಒಂದು ಕೈಯಲ್ಲಿ ಖಡ್ಗವನ್ನಿಡಿದು ಮತ್ತೊಂದು ಕೈಯಿಂದ ಆ ದೇವಿಯ ಜಡೆಯನ್ನಿಡಿದನು ! ಆ ಸಮಯದಲ್ಲಿ ಮಹಾಬುದ್ಧಿವಂತನಾದ ವಸುದೇವನು ನಿಂದಿತವಾದ ವ್ಯಾಪಾರವುಳ್ಳವನಾಗಿ ಕ್ರೂರನಾಗಿ ಲಜ್ಜಾರಹಿತನಾದ ಕಂಸನಿಗೆ ದಯೆ ಹುಟ್ಟುವಹಾಗೆ ಸ್ತೋತ್ರವಾಕ್ಯಗಳಿಂದ ಆತನನ್ನು ಕುರಿತು "ಎಲೈ ಕಂಸನೇ, ನೀನು ಶೂರರಿಂದ ಶ್ಲಾಘಿಸಲು ಯೋಗ್ಯವಾದ ಗುಣಗಳುಳ್ಳವನು ; ಭೋಜಕುಲಕ್ಕೆ ಕೀರ್ತಿಯುಂಟುಮಾಡುವವನು ; ಅಂಥಾ ನೀನು ಈ ವಿವಾಹೋತ್ಸವದಲ್ಲಿ ನಿನ್ನ ತಂಗಿಯಾದ ದೇವಕೀದೇವಿಯನ್ನು ಸಂಹರಿಸಬಹುದೇ ! ಎಲೈ ವೀರನಾದ ಕಂಸನೇ, ಜನ್ಮವುಳ್ಳ ಪ್ರಾಣಿಗಳಿಗೆ ಮೃತ್ಯುವು ದೇಹದೊಡನೇ ಹುಟ್ಟಿರುವದು ; ಈಗಲಾದರೂ ನೂರು ವರುಷಗಳಮೇಲಾದರೂ ಪ್ರಾಣಿಗಳಿಗೆ ಮೃತ್ಯುವು ನಿಶ್ಚಯವಾಗಿ ತಪ್ಪುವದಿಲ್ಲ ; ಈ ಅರ್ಥವು ಬ್ರಹ್ಮದೇವನಿಂದ ಹಣೆಯಲ್ಲಿ ಬರೆಯಲ್ಪಟ್ಟಿರುವದು ; ಈ ದೇಹವು ನಷ್ಟವಾದಮೇಲೆ ದೇಹಾಂತರ ಪ್ರಾಪ್ತಿಯುಂಟಾಗದಪಕ್ಷದಲ್ಲಿ ಪಾಪಾಚರಣೆಯಿಂದಾದರೂ ದೇಹವನ್ನು ಉಳಿಸಿಕೊಳ್ಳುವದು ಯುಕ್ತವು ; ಮೃತ್ಯುಕಾಲದಲ್ಲಿ ಕರ್ಮಾಧೀನರಾಗಿರುವ ಜೀವನು ಮೊದಲು ದೇಹಾಂತರವನ್ನೈದಿ ಅನಂತರದಲ್ಲಿ ಪೂರ್ವದೇಹವನ್ನು ತ್ಯಜಿಸುವನು ; ನಡೆಯುವ ಪುರುಷನು ಮುಂದಿನ ಪಾದವನ್ನು ಗಟ್ಟಿಯಾಗಿ ಊರಿಕೊಂಡು ಅದರ ಆಧಾರದಲ್ಲಿ ದೇಹಭಾರವನ್ನು ನಿಕ್ಷಿಸಿ ಅನಂತರದಲ್ಲಿ ಹಿಂದಣಹೆಜ್ಜೆಯನ್ನು ತೆಗೆದು ಮುಂದಿಟ್ಟು ನಡೆಯುವಂತೆಯೂ ತೃಣಗಳಮೇಲೆ ಸಂಚರಿಸುವ ತೃಣಜಲೂಕವೆಂಬ ಕೀಟಕವು ಮುಂದಣ ತೃಣವನ್ನು, ದೃಢವಾಗಿಡಿದು ಹಿಂದಣ ತೃಣವನ್ನು ಬಿಡುವಂತೆಯೂ ಕರ್ಮಮಾರ್ಗದಲ್ಲಿರುವ ದೇಹಿಯು ದೇಹಾಂತರವನ್ನವಲಂಬಿಸಿ ದೇಹವನ್ನು ಬಿಡುವನು ; ಪುರುಷನು ಜಾಗ್ರದವಸ್ಥೆಯಲ್ಲುಂಟಾದ ರಾಜಾದಿಗಳ ದರ್ಶನದಿಂದಲೂ ಇಂದ್ರಾದಿಗಳ ಶ್ರವಣದಿಂದಲೂ ಉತ್ಪನ್ನವಾದ ಸಂಸ್ಕಾರವುಳ್ಳ ಮನಸ್ಸಿನಿಂದ ಆ ರಾಜಾದಿಗಳನ್ನೂ ಇಂದ್ರಾದಿಗಳನ್ನೂ ಚಿಂತಿಸುತ ಸ್ವಪ್ನದಲ್ಲಿಯೂ ಆ ಸಂಸ್ಕಾರಬಲದಿಂದ ರಾಜಾದಿಗಳ ದೇಹಕ್ಕೆ ಸಮಾನವಾದ ದೇಹವನ್ನೂ ಇಂದ್ರಾದಿಗಳ ದೇಹಕ್ಕೆ ಸಮಾನವಾದ ದೇಹವನ್ನೂ ಸ್ಫುಟವಾಗಿ ನೋಡಿ ಆ ದೇಹವೇ ತಾನೆಂದು ತಿಳಿದು ಉತ್ತರಕ್ಷಣದಲ್ಲಿ ತನ್ನ ಪೂರ್ವದೇಹವನ್ನು ಮರೆಯುವಂತೆಯೂ ಜಾಗ್ರದವಸ್ಥೆಯಲ್ಲಿಯೇ ಮನೋರಥಾಭಿನಿವೇಶದಾರ್ಢ್ಯದಿಂದ ಪೂರ್ವಾನುಭೂತವಾದ ರಾಜಾದಿಗಳ ದೇಹವನ್ನೇ ತಾನೆಂದೆಣಿಸಿ ಪೂರ್ವದೇಹ ಸ್ಮೃತಿಯನ್ನು ಬಿಡುವಂತೆಯೂ ಕರ್ಮವಶದಿಂದ ಜೀವನು ದೇಹಾಂತರವನ್ನೈದಿ ಪೂರ್ವದೇಹವನ್ನು ಮರೆಯುವನು ; ವಿಚಿತ್ರವಾದ ದೇಹಗಳಿಗೆ ಕಾರಣಗಳಾದ ವಿಚಿತ್ರಕರ್ಮಗಳು ಮಾಡಲ್ಪಟ್ಟಿದ್ದರೆ ವರ್ತಮಾನದೇಹದ ವಿಲಯಾನಂತರದಲ್ಲಿ ಕರ್ಮಾನುಗುಣವಾದ ದೇಹವೇ ನಿಯತವಾಗಿ ಬರುವದು ; ದೇಹಾಂತರಸಮಯದಲ್ಲಿ ಪಂಚಭೂತಗಳಲ್ಲಿ ಮಾಯೆಯಿಂದ ನಾನಾರೂಪದಿಂದ ರಚಿಸಲ್ಪಟ್ಟ ದೇಹಗಳಲ್ಲಿ ಫಲಾಭಿಮುಖವಾದ ಕರ್ಮದಿಂದ ಪ್ರೇರಿಸಲ್ಪಟ್ಟ ನಾನಾವಿಕಾರಾತ್ಮಕವಾದ ಮನಸ್ಸು ದೇವತಿರ್ಯಗ್ಯಾದಿರೂಪವಾದ ಯಾವ ದೇಹವನ್ನು ಕುರಿತು ಅತಿ ತ್ವರೆಯಿಂದ ಅಭಿನಿವೇಶಗೈಯುವದೋ ಆ ದೇಹದಲ್ಲಿ ಜೀವನು ಜನಿಸುವನು ; ಮನಸ್ಸೇ ಕರ್ಮಕರ್ತೃವಾದ್ದರಿಂದ ಜನಿಸಿದರೂ ಅಕರ್ತೃ

ವಾದ ಆತ್ಮನೂ ಆ ದೇಹವನ್ನು ತಾನೆಂದು ಅಭಿನಿವೇಶಗೊಳ್ಳುವ ಕಾರಣದಿಂದ ದೇಹದೊಡನೆ ಜನಿಸುವನು ; ಯಾವದೋ ಒಂದು ದೇಹವು ಉಂಟಾಗುವದು ನಿಶ್ಚಯವಾದಕಾರಣ ಅತಿ ಪ್ರಿಯವಾದ ಈ ರಾಜದೇಹದ ರಕ್ಷಣೆಗಾಗಿ ಅಕೃತ್ಯವನ್ನಾದರೂ ಮಾಡುವದೇ ಸರಿಯೆಂದೆಣಿಸಬಾರದು ; ಚಂದ್ರಾದಿಗಳ ಜ್ಯೋತಿಸ್ಸು ನೀರು ಮತ್ತು ಅದಕ್ಕೆ ಸಂಬಂಧಗಳಾದ ಎಣ್ಣೆ ತುಪ್ಪ ಮುಂತಾದವುಗಳುಳ್ಳ ಮಡಿಕೆ ಮೊದಲಾದವುಗಳಲ್ಲಿ ಪ್ರತಿಬಿಂಬದಿಂದಿದ್ದುಕೊಂಡು ವಾಯುವಿನ ವೇಗದಿಂದ ಆ ಜಲಾದಿಗಳು ಚಲಿಸುವಾಗ ತಾವೂ ಚಲಿಸುವಂತೆ ತನ್ನ ಅವಿದ್ಯೆಯಿಂದ ರಚಿಸಲ್ಪಟ್ಟ ದೇಹವಲ್ಲಿ ಜೀವನು ಅನುರಾಗದಿಂದ ಪ್ರವೇಶಿಸಿ ಮೋಹದಿಂದ ದೇಹಧರ್ಮಗಳಾದ ಕೆಲಸಗಳನ್ನೂ ಸ್ವನಿಷ್ಠಗಳಾದ ಪ್ರೇಮಾಸ್ಪದತ್ವಾದಿ ಧರ್ಮಗಳನ್ನೂ ತಿಳಿಯುವನು ; ಹೀಗೆ ರಾಜದೇಹಕ್ಕೂ ಸೂಕರದೇಹಕ್ಕೂ ಹೆಚ್ಚುಕಡಮೆಯಿಲ್ಲವಾದ್ದರಿಂದ ಮೃತ್ಯುವಿಗೆ ಪ್ರತಿಕಾರಪ್ರಯತ್ನವು ವ್ಯರ್ಥವು ; ಆದಕಾರಣ ತನ್ನ ಕ್ಷೇಮವನ್ನು ಬಯಸುವವನು ಯಾರಿಗೂ ದ್ರೋಹವನ್ನು ಮಾಡಬಾರದು ; ದ್ರೋಹಮಾಡುವವನಿಗೆ ದ್ರೋಹಮಾಡಲ್ಪಟ್ಟವರಿಂದಲೂ ಇಹಲೋಕದಲ್ಲಿ ಅವರ ಸಂಬಂಧಿಗಳಿಂದಲೂ ಪರಲೋಕದಲ್ಲಿ ಯಮನಿಂದಲೂ ಭಯವುಂಟಾಗುವದು ! ಎಲೈ ದೀನರಲ್ಲಿ ದಯೆಯುಳ್ಳ ಕಂಸನೇ, ಮೋಹನಾಂಗಿಯಾದ ಈ ದೇವಕೀದೇವಿಯು ನಿನ್ನ ಒಡಹುಟ್ಟಿದವಳು ; ಬಾಲೆಯು ; ದಾರುಮಯವಾದ ಪ್ರತಿಮೆಯಂತೆ ಅಚೇತನಪ್ರಾಯಳು ; ಇವಳು ನಿನ್ನಿಂದ ಕೊಲ್ಲಲ್ಪಡುವದಕ್ಕೆ ಯೋಗ್ಯಳಲ್ಲ” ಎಂದು ನುಡಿದನು.

ಈ ರೀತಿಯಲ್ಲಿ ವಸುದೇವನಿಂದ ಸಾಮೋಪಾಯದಿಂದಲೂ ಭೇದೋಪಾಯದಿಂದಲೂ ಬೋಧಿಸಲ್ಪಟ್ಟ ಕಂಸನು ದೈತ್ಯಪಕ್ಷಪಾತಿಯಾದ್ದರಿಂದಲೂ ಸ್ವತಃ ಕ್ರೂರನಾದ್ದರಿಂದಲೂ ದೇವಕೀದೇವಿಯ ಸಂಹಾರಪ್ರಯತ್ನವನ್ನು ಬಿಡಲಿಲ್ಲ; ವಸುದೇವನು ಅದನ್ನು ತಿಳಿದು ಅದಕ್ಕೆ ಪ್ರತಿಕಾರವಾಗಿಯೂ ಪ್ರಕೃತ ಕಾಲಾನುಸಾರವಾಗಿಯೂ ಮಾಡತಕ್ಕ ಕಾರ್ಯವನ್ನು ಆಲೋಚಿಸುತ “ಲೋಕದಲ್ಲಿ ಬುದ್ಧಿವಂತನಾದ ಪುರುಷನು ತನ್ನ ಬುದ್ಧಿಶಕ್ತಿಯಿರುವವರಿಗೂ ಮೃತ್ಯುಪರಿಹಾರಪ್ರಯತ್ನವನ್ನು ಮಾಡಬೇಕು ; ಅದರಿಂದ ಪರಿಹಾರವಾಗದಿದ್ದರೆ ಆತನಿಗೆ ದೋಷವಿಲ್ಲ ; ಈಗ ಮೃತ್ಯುರೂಪನಾಗಿರುವ ಕಂಸನಿಗೆ ದೇವಕೀ ಗರ್ಭೋತ್ಪನ್ನರಾಗುವ ಪುತ್ರರನ್ನು ಒಪ್ಪಿಸಿಯಾದರೂ ದೀನಳಾಗಿರುವ ಈ ದೇವಿಯನ್ನು ಮೃತ್ಯುಭಯದಿಂದ ತಪ್ಪಿಸಿ ರಕ್ಷಿಸಬೇಕು ; ಹಾಗೆ ಮಾಡಿದರೆ ದೇವಕೀಗರ್ಭದಲ್ಲಿ ನನಗೆ ಪುತ್ರರು ಹುಟ್ಟುವರು ; ಆಮೇಲೆ ದೈವಸಂಕಲ್ಪವಿದ್ದಹಾಗಾಗಲಿ ; ಅಷ್ಟರೊಳಗೆ ಕಂಸನೇ ಮರಣವನ್ನೈದಿದರೂ ಐದಬಹುದು ; ನನ್ನ ಪುತ್ರನಿಂದಲೇ ಈತನಿಗೆ ಮರಣವುಂಟಾದರೂ ಆಗಬಹುದು ; ದೈವಗತಿಯು ಯಾರಿಂದಲೂ ತಿಳಿಯಲಶಕ್ಯವಾದದ್ದು ; ಪ್ರಾಪ್ತವಾದ ಮೃತ್ಯುವು ತಪ್ಪಿಹೋಗುವದೂ ಉಂಟು ; ತಪ್ಪಿಹೋದ ಮೃತ್ಯುವು ಪುನಶ್ಚ ಪ್ರಾಪ್ತವಾಗುವದೂ ಉಂಟು ; ವನದಲ್ಲಿರುವ ವೃಕ್ಷಗಳನ್ನು ದಹಿಸುವ ಅಗ್ನಿಯು ಒಂದು ಸಮಯದಲ್ಲಿ ಸಮೀಪದಲ್ಲಿರುವ ವೃಕ್ಷಗಳನ್ನು ಬಿಟ್ಟು ದೂರದಲ್ಲಿರುವ ವೃಕ್ಷಗಳನ್ನು ದಹಿಸುವದು ; ಗ್ರಾಮಗಳಲ್ಲಿರುವ ಮನೆಗಳನ್ನು ದಹಿಸುವ ಅಗ್ನಿಯು ಹಾಗೇ ಸಮೀಪದಲ್ಲಿರುವ ಮನೆಗಳನ್ನು ಬಿಟ್ಟು ದೂರದಲ್ಲಿರುವ ಮನೆಗಳನ್ನು ದಹಿಸುವದು ; ಆದ್ದರಿಂದ ಪ್ರಾಣಿಗಳ ಜನನಮರಣಗಳಿಗೆ ಅದೃಷ್ಟವೇ ಕಾರಣವು” ಎಂದು ತನ್ನ ಬುದ್ಧಿಬಲದಿಂದ ವಿಚಾರಿಸಿ ನಿಶ್ಚಯಿಸಿ ದುಃಖಿತವಾದ ಮನಸ್ಸುಳ್ಳವನಾದಾಗ್ಯೂ ಹೊರಗೆ ಮುಗುಳುನಗೆಯೊಡಗೂಡಿದ ಮುಖವಿಲಾಸವುಳ್ಳವನಾಗಿ ಪಾಪಿಷ್ಠನಾಗಿ ನಿರ್ಲಜ್ಜನಾಗಿ ಕ್ರೂರನಾದ ಕಂಸನನ್ನು ಕುರಿತು ಬಹುಮಾನಪುರಸ್ಕರವಾಗಿ “ಎಲೈ ಸೌಮ್ಯನಾದ ಕಂಸನೆ, ಅಶರೀರವಾಕ್ಕಿನಿಂದ ನುಡಿಯಲ್ಪಟ್ಟಂತೆ ದೇವಕೀದೇವಿಯ ಅಷ್ಟಮಗರ್ಭದಿಂದ ನಿನಗೆ ಭಯವೇ ಹೊರ್ತಾಗಿ ಈಕೆಯಿಂದ ನಿನಗೆ ಭಯವಿಲ್ಲ ; ಆದ್ದರಿಂದ ಯಾವ ಪುತ್ರರಿಂದ ನಿನಗೆ ಭಯವೋ ಆ ಪುತ್ರರನ್ನು ನಿನಗೆ ಒಪ್ಪಿಸುತ್ತೇನೆ” ಎಂದು ನುಡಿದನು.

ಕಂಸನು ಆ ವಾಕ್ಯವನ್ನು ಕೇಳಿ ಅವರ ಸ್ವಾರಸ್ಯವನ್ನು ತಿಳಿದು ತನ್ನ ತಂಗಿಯಾದ ದೇವಕೀದೇವಿಯ ಸಂಹಾರಪ್ರಯತ್ನವನ್ನು ಬಿಟ್ಟನು ; ವಸುದೇವನು ಸಂತುಷ್ಟನಾಗಿ ಕಂಸನನ್ನು ಶ್ಲಾಘಿಸಿ ನುಡಿಯುತ ದೇವಕೀದೇವಿಯ

ಸಮೇತನಾಗಿ ತನ್ನ ಮನೆಗೆ ಹೋದನು. ಆ ಬಳಿಕ ಸರ್ವಾತ್ಮನಾದ ಶ್ರೀಹರಿಯನ್ನೇ ದೇವತೆಯನ್ನಾಗುಳ್ಳವಳಾಗಿದ್ದ ದೇವಕೀದೇವಿಯು ಕ್ರಮವಾಗಿ ಗರ್ಭಗಳನ್ನು ಧರಿಸುತ ವರುಷಕ್ಕೆ ಒಂದರಮೇರೆಗೆ ಎಂಟುಮಂದಿ ಪುತ್ರರನ್ನೂ ಒಬ್ಬ ಪುತ್ರಿಯನ್ನೂ ಪಡೆದಳು; ವಸುದೇವನು ಸತ್ಯಕ್ಕೆ ಭಯಪಟ್ಟು ಅತ್ಯಂತ ವ್ಯಸನಯುಕ್ತವಾದ ಮನಸ್ಸುಳ್ಳವನಾಗಿ ಆ ಪುತ್ರರನ್ನು ಕಂಸನಿಗೆ ಒಪ್ಪಿಸಲು ನಿಶ್ಚಯಿಸಿ ಮೊದಲು ಕೀರ್ತಿಮಂತನೆಂಬ ನಾಮಧೇಯವುಳ್ಳ ಪ್ರಥಮ ಕುಮಾರನನ್ನು ಒಪ್ಪಿಸಿದನು.

ಎಲೈ ಪರೀಕ್ಷಿತ್ ರಾಯನೆ, ಸತ್ಯಪ್ರತಿಜ್ಞೆಯುಳ್ಳ ಮಹಾತ್ಮರಿಗೆ ಸಹಿಸಲಶಕ್ಯವಾದ ದುಃಖವಿಲ್ಲ; ಅವರಿಗೆ ಸರ್ವದುಃಖಗಳನ್ನೂ ಸಹಿಸಿಕೊಂಡು ಸತ್ಯವನ್ನೇ ಅವಲಂಬಿಸುವದು ಸ್ವಭಾವವು; ತತ್ವಪರಿಜ್ಞಾನವುಳ್ಳ ಪುರುಷರಿಗೆ ಯಾವ ವಸ್ತುಗಳಲ್ಲಿಯೂ ಅಪೇಕ್ಷೆಯಿರದು; ಅವರಿಗೆ ಸರ್ವವಸ್ತುಗಳಲ್ಲಿಯೂ ಅಪೇಕ್ಷೆಯಿಲ್ಲದೆ ಪರಮಾತ್ಮನಲ್ಲೇ ದೃಷ್ಟಿಯನ್ನಿರಿಸುವದು ಸ್ವಾಭಾವಿಕ ಗುಣವು. ಆದರೂ ಸತ್ಯವಂತನಾದ ವಸುದೇವನಿಂದ ಸಮರ್ಪಿಸಲ್ಪಟ್ಟ ಕುಮಾರನನ್ನು ಕಂಸನು ಸಂಹರಿಸಿದನು; ಕ್ಷುದ್ರರಿಗೆ ಅಕಾರ್ಯವ್ಯಾವದೂ ಇಲ್ಲ; ಯಾವ ಹಿಂಸಾಕೃತ್ಯವನ್ನಾದರೂ ಮಾಡುವದು ಅವರ ಸ್ವಭಾವವು! ದೇವಕೀದೇವಿಯೂ ಆ ಪುತ್ರನನ್ನು ತ್ಯಾಗಕ್ಕೆ ಒಪ್ಪಿಸಿದಳು; ಪರಮಾತ್ಮನನ್ನೇ ಮನಸ್ಸಿನಲ್ಲಿ ದೃಢವಾಗಿ ಧ್ಯಾನಿಸುವ ಜನರಿಗೆ ಯಾವ ವಸ್ತುಗಳಲ್ಲಿಯೂ ಅಪೇಕ್ಷೆಯಿರಲಾರದು; ಸಮಸ್ತವಸ್ತುಗಳನ್ನೂ ತುಚ್ಛಗಳಾಗಿ ತಿಳಿದು ಪರಮಾತ್ಮನನ್ನೇ ಮುಖ್ಯವಾಗಿ ತಿಳಿಯುವದೇ ಅವರ ಸ್ವಭಾವವು! ಎಲೈ ಪರೀಕ್ಷಿತ್ ರಾಯನೇ, ಅನಂತರದಲ್ಲಿ ಕಂಸನು ವಸುದೇವನ ಸದ್ಬುದ್ಧಿಯನ್ನೂ ಸತ್ಯದಲ್ಲಿರುವ ಅಭಿರುಚಿಯನ್ನೂ ತಿಳಿದು ಸಂತುಷ್ಟವಾದ ಮನಸ್ಸುಳ್ಳವನಾಗಿ ನಗುತ ಆತನನ್ನು ಕುರಿತು “ಎಲೈ ವಸುದೇವನೆ, ನಿಮ್ಮ ಎಂಟನೇ ಗರ್ಭದಿಂದ ನನಗೆ ಮೃತ್ಯುವು ನಿಶ್ಚಯಿಸಲ್ಪಟ್ಟಿರುವದಾದ್ದರಿಂದ ಈ ಶಿಶುವಿನಿಂದ ನನಗೆ ಭಯವಿಲ್ಲ; ಆದಕಾರಣ ಈ ಬಾಲಕನು ಮನೆಗೆ ಹೋಗಲಿ” ಎಂದು ನುಡಿದನು.

ಅದನ್ನು ಕೇಳಿ ವಸುದೇವನು ಆ ಬಾಲಕನನ್ನು ತೆಗೆದುಕೊಂಡು ತನ್ನ ಗೃಹಕ್ಕೆ ಹೋದನು; ಆದಾಗ್ಯೂ ಅಸ್ವಾಧೀನಮನಸ್ಸುಳ್ಳವನಾಗಿ ದುಷ್ಟನಾದ ಕಂಸನ ವಾಕ್ಯದಲ್ಲಿ ವಿಶ್ವಾಸಮಾಡಲಿಲ್ಲ; ಗೋಕುಲದಲ್ಲಿದ್ದ ನಂದನು ಮೊದಲಾದ ಗೋಪಾಲಕರೂ ಯಶೋದೆ ಮೊದಲಾದ ಗೋಪಸ್ತ್ರೀಯರೂ ವಸುದೇವನು ಮೊದಲಾದ ಯಾದವರೂ ದೇವಕೀದೇವಿ ಮೊದಲಾದ ಯಾದವಸ್ತ್ರೀಯರೂ ದೇವತೆಗಳ ಅಂಶಗಳಿಂದುದ್ಭವಿಸಿದವರು! ಸರ್ವಜ್ಞನಾದ ನಾರದನು ಈ ಅರ್ಥವನ್ನೂ ದೇವತೆಗಳು ಭೂಭಾರರೂಪರಾದ ದೈತ್ಯರ ಸಂಹಾರಪ್ರಯತ್ನ ಮಾಡುವದನ್ನೂ ಕಂಸನಿಗೆ ಹೇಳಿದನು; ಆ ರಹಸ್ಯಾರ್ಥವನ್ನು ತಿಳಿದು ಕಂಸನು ಯಾದವರನ್ನು ದೇವತೆಗಳೆಂದೂ ತನ್ನನ್ನು ಸಂಹರಿಸುವದಕ್ಕೋಸ್ಕರ ದೇವಕೀ ಗರ್ಭದಲ್ಲಿ ವಿಷ್ಣುವಿನ ಅಂಶವು ಉದ್ಭವಿಸುವದೆಂದೂ ತಿಳಿದು ದೇವಕೀ ವಸುದೇವರಿಬ್ಬರನ್ನು ಸಂಕೋಲೆಗಳಿಂದ ಬಂಧಿಸಿ ಕಾವಲಲ್ಲಿರಿಸಿ ಅವರಿಗೆ ಹುಟ್ಟಿದ ಮಕ್ಕಳನ್ನು ಲೋಕಾಪವಾದಕ್ಕೂ ಭಯಪಡದೆ ಸಂಹರಿಸುತಿದ್ದನು! ಭೂಮಿಯಲ್ಲಿ ಸ್ವಪ್ರಾಣಪೋಷಕರಾಗಿ ಧನಲುಬ್ಧರಾದ ಕ್ಷತ್ರಿಯರು ಮಾತೃಪಿತೃಗಳನ್ನಾದರೂ ಭ್ರಾತೃಗಳನ್ನಾದರೂ ಪುತ್ರಮಿತ್ರರನ್ನಾದರೂ ಸಂಹರಿಸುವರು; ಕಂಸನು ತಾನು ಪೂರ್ವದಲ್ಲಿ ವಿಷ್ಣುವಿನಿಂದ ಸಂಹೃತನಾದ ಕಾಲನೇಮಿ ಎಂಬ ಮಹಾ ಅಸುರನಾದ್ದರಿಂದ ಯಾದವರೊಡನೆ ವಿರೋಧವನ್ನು ಮಾಡುತ ಭೋಜರು ಅಂಧಕರು ಮೊದಲಾದ ಸಕಲ ಯಾದವರಿಗೂ ಅಧಿಪತಿಯಾಗಿ ತನಗೆ ಪಿತೃವಾದ ಉಗ್ರಸೇನರಾಯನನ್ನು ನಿಗ್ರಹಿಸಿ ಶೂರಸೇನ ದೇಶಗಳಿಗೆ ತಾನೆ ರಾಜನಾಗಿ ರಾಜಭೋಗಗಳನ್ನು ಅನುಭವಿಸುತಿದ್ದನು.

## ೨ನೇ ಅಧ್ಯಾಯ.

### ದೇವಕೀದೇವಿಯ ಗರ್ಭದಲ್ಲಿದ್ದ ಶ್ರೀಕೃಷ್ಣನನ್ನು ಬ್ರಹ್ಮಾದಿಗಳು ಸ್ತುತಿಸಿದ್ದು.

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ಕಂಸನು ಪ್ರಲಂಬ ಬಕ ತೃಣಾವರ್ತ ಅಘಾಸುರರು ಮೊದಲಾದ ರಾಕ್ಷಸರೊಡನೆಯೂ ಚಾಣೂರ ಮುಷ್ಟಿಕ ಅರಿಷ್ಟರು ಮೊದಲಾದ ಮಲ್ಲರೊಡನೆಯೂ ದ್ವಿವಿದನೆಂಬ ಕಪಿನಾಯಕನೊಡನೆಯೂ ಪೂತನಿ ಕೇಶಿ ಧೇನುಕ ಬಾಣ ನರಕಾಸುರರು ಮೊದಲಾದ ಅಸುರರೊಡನೆಯೂ ಜರಾಸಂಧ ಶಿಶುಪಾಲರು ಮೊದಲಾದ ಭೂಪಾಲಕರೊಡನೆಯೂ ಸ್ನೇಹವನ್ನು ಬೆಳಸಿಕೊಂಡು ಮಹಾ ಬಲಿಷ್ಠನಾಗಿ ಯಾದವರೊಡನೆ ಕಾಳಗವನ್ನು ಮಾಡಿದನು; ಅವರು ಆ ಉಪದ್ರವವನ್ನು ಸಹಿಸಲಾರದೆ ಕುರು ಪಾಂಚಾಲ ಕೇಕಯ ಸಾಳ್ವ ವಿದರ್ಭ ನಿಷಧ ವಿದೇಹ ಕೋಸಲ ಮೊದಲಾದ ದೇಶಗಳಿಗೆ ಹೋಗಿ ಅಲ್ಲಲ್ಲಿ ವಾಸಮಾಡುತಿದ್ದರು; ಕಂಸನ ಜ್ಞಾತಿಗಳು ಆತನನ್ನೆ ಅನುವರ್ತಿಸಿಕೊಂಡು ಮಧುರಾಪುರದಲ್ಲೇ ವಾಸವಾಗಿದ್ದರು! ಅಲ್ಲಿ ಉಗ್ರಸೇನನ ಮಗನಾದ ಕಂಸನಿಂದ ದೇವಕೀದೇವಿಯ ಆರುಮಂದಿ ಬಾಲಕರು ಹತರಾದ ಬಳಿಕ ಅನಂತನೆಂದು ಪ್ರಸಿದ್ಧನಾದ ಶ್ರೀಮಹಾವಿಷ್ಣುವಿನ ಅಂಶರೂಪನಾದ ಮಹಾಶೇಷನು ದೇವಕೀದೇವಿಯ ಏಳನೇ ಗರ್ಭದಲ್ಲಿ ನಿಂತು ಆ ದೇವಿಗೆ ಹರ್ಷಶೋಕಗಳನ್ನು ವೃದ್ಧಿಮಾಡುತ ಬೆಳೆದನು; ದೇವಕೀದೇವಿಗೆ ಆನಂದರೂಪವಾದ ಭಗವದಂಶವು ಉದರದಲ್ಲಿ ನಿಂತದ್ದರಿಂದ ಹರ್ಷವೂ ಪೂರ್ವಗರ್ಭಗಳಂತೆ ಆ ಗರ್ಭವೂ ಕಂಸನಿಂದ ಹತವಾಗುವದೆಂಬ ಶೋಕವೂ ಉಂಟಾಗಿತ್ತು! ಅನಂತರದಲ್ಲಿ ವಿಶ್ವಾತ್ಮನಾಗಿ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯು ತನ್ನನ್ನೇ ಸ್ವಾಮಿಯಾಗುಳ್ಳ ಆ ಯಾದವರಿಗೆ ಕಂಸನಿಂದುಂಟಾದ ಭಯವನ್ನು ತಿಳಿದು ಯೋಗಮಾಯೆಯನ್ನು ಕುರಿತು “ಎಲೇ ಮಂಗಳಕರಳಾದ ಯೋಗಮಾಯಾದೇವಿಯೆ, ನೀನು ಗೋಪಕರಿಂದಲೂ ಗೋಪಸ್ತ್ರೀಯರಿಂದಲೂ ಗೋವುಗಳಿಂದಲೂ ಅಲಂಕೃತವಾದ ನಂದವ್ರಜವನ್ನು ಕುರಿತು ಹೋಗು; ಅಲ್ಲಿ ವಸುದೇವನ ಪತ್ನಿಯರಾದ ರೋಹಿಣೀದೇವಿಯಿದ್ದಾಳೆ; ಮತ್ತು ಕಂಸನಿಂದ ಭಯವನ್ನೈದಿರುವ ಮಿಕ್ಕ ವಸುದೇವನ ಪತ್ನಿಯರು ಮೊದಲಾದ ಯಾದವಸ್ತ್ರೀಯರು ಅಲ್ಲಲ್ಲಿ ಗೂಢವಾಗಿ ವಾಸವನ್ನು ಮಾಡುತ್ತಿದ್ದಾರೆ; ಈಗ ದೇವಕೀದೇವಿಯ ಉದರದಲ್ಲಿ ನನ್ನ ಅಂಶರೂಪವಾದ ಆದಿಶೇಷನಾಮಕವಾದ ತೇಜಸ್ಸಿದೆ; ನೀನು ಆ ತೇಜಸ್ಸನ್ನು ಆಕರ್ಷಣೆಮಾಡಿಕೊಂಡು ಹೋಗಿ ರೋಹಿಣೀದೇವಿಯ ಉದರದಲ್ಲಿ ಪ್ರವೇಶಮಾಡಿಸು; ನೀನು ಆ ಗರ್ಭವನ್ನಾಕರ್ಷಿಸಿಕೊಂಡು ಹೋದಮೇಲೆ ನಾನು ನನ್ನ ಪರಿಪೂರ್ಣಸ್ವರೂಪದಿಂದ ದೇವಕೀದೇವಿಯ ಉದರವನ್ನು ಪ್ರವೇಶಿಸಿ ಆ ದೇವಕೀದೇವಿಗೆ ಪುತ್ರಭಾವವನ್ನು ವಹಿಸುತ್ತೇನೆ; ನೀನು ನಂದಗೋಪನ ಪತ್ನಿಯಾದ ಯಶೋದಾದೇವಿಯ ಪುತ್ರಿಯಾಗಿ ಜನಿಸು! ಎಲೇ ಮಾಯಾದೇವಿಯೆ, ನೀನು ಸಮಸ್ತ ಜನರಿಗೂ ಇಷ್ಟಗಳಾದ ವರಗಳನ್ನು ಕೊಡುವದರಲ್ಲಿ ಸ್ವತಂತ್ರೆಯಾಗಿರು; ನಿನ್ನನ್ನು ಅರ್ಚಿಸುವಂಥಾ ಭಕ್ತರಿಗೆ ಸಕಲಕಾಮ್ಯವರಗಳನ್ನೂ ಕೊಡುತಲಿರು; ನಿನ್ನನ್ನು ದೂಪದೀಪ ನೈವೇದ್ಯ ಕಾಣಿಕೆಗಳು ಮೊದಲಾದವುಗಳಿಂದ ಎಲ್ಲರೂ ಆರಾಧಿಸುವರು; ಮತ್ತು ಭೂಮಿಯಲ್ಲಿ ನಿನಗೆ ಅನೇಕವಾದ ಸ್ಥಾನಗಳನ್ನು ರಚಿಸಿ ‘ದುರ್ಗಾದೇವಿ ಭದ್ರಕಾಳೀದೇವಿ ವಿಜಯಾದೇವಿ ವೈಷ್ಣವೀದೇವಿ ಕುಮುದಾದೇವಿ ಚಂಡಿಕಾದೇವಿ ಕೃಷ್ಣಾದೇವಿ ಮಾಧವೀದೇವಿ ಕನ್ಯಕಾದೇವಿ ಮಾಯಾದೇವಿ ನಾರಾಯಣೀದೇವಿ ಈಶಾನಾದೇವಿ ಶಾರದಾದೇವಿ ಅಂಬಿಕಾದೇವಿ’ ಎಂಬ ನಾಮಧೇಯಗಳಿಂದ ಸ್ತೋತ್ರಮಾಡುವರು! ಎಲೇ ಮಾಯಾದೇವಿಯೆ, ನೀನು ಗರ್ಭವನ್ನು ಆಕರ್ಷಣಮಾಡುವದರಿಂದ ಆ ಗರ್ಭೋತ್ಪನ್ನನಾಗುವ ಪುತ್ರನನ್ನು ಭೂಮಿಯಲ್ಲಿ ಸಂಕರ್ಷಣನೆಂದು ಕರೆಯುವರು; ಲೋಕಗಳನ್ನು ರಮಿಸುವಂತೆ ಮಾಡುವದರಿಂದ ರಾಮನೆಂದು ನುಡಿಯುವರು; ಅಧಿಕವಾದ ಬಲವುಳ್ಳವನಾದ್ದರಿಂದ ಬಲಭದ್ರನೆಂದೂ ನುಡಿಯುವರು” ಎಂದು ನುಡಿದನು.

ಈ ಪ್ರಕಾರದಲ್ಲಿ ಭಗವಂತನಿಂದ ಅಜ್ಞಾಪಿಸಲ್ಪಟ್ಟ ಮಾಯಾದೇವಿಯು ಹಾಗೆ ಆಗಲೆಂದು ಅಂಗೀಕರಿಸಿ ಆತನಿಗೆ ಪ್ರದಕ್ಷಿಣವನ್ನು ಮಾಡಿ ಭೂಮಿಗೆ ಬಂದು ದೇವಕೀದೇವಿಯ ಗರ್ಭವನ್ನಾಕರ್ಷಿಸಿ ತೆಗೆದುಕೊಂಡು ಹೋಗಿ

ರೋಹಿಣೀದೇವಿಯ ಉದರದಲ್ಲಿರಿಸಲು ಮಧುರಾಪುರವಾಸಿಗಳಾದ ಜನರು ದೇವಕೀದೇವಿಯ ಗರ್ಭವು ಸ್ರವಿಸಿಹೋಯಿತೆಂದು ವ್ಯಸನದಿಂದ ಹೇಳಿಕೊಳ್ಳುತ್ತಿದ್ದರು ; ಆ ಸಮಯದಲ್ಲಿ ಸರ್ವಾತ್ಮನಾದ ಭಗವಂತನು ಭೂಭಾರವನ್ನು ಪರಿಹರಿಸುವದಕ್ಕೋಸ್ಕರ ತನ್ನ ಪೂರ್ಣಸ್ವರೂಪದಿಂದ ವಸುದೇವನ ಮನಸ್ಸಿನಲ್ಲಿ ಸಾನ್ನಿಧ್ಯವನ್ನೈದಿದನು; ಜೀವರಂತೆ ರೇತಸ್ಸಂಬಂಧವಿಲ್ಲದಕಾರಣ ಮನಸ್ಸಿನಲ್ಲೆ ಪ್ರವೇಶವನ್ನು ಮಾಡಿದನು ; ವಸುದೇವನು ಸರ್ವೋತ್ಕೃಷ್ಟನಾದ ಭಗವಂತನ ಶ್ರೀಮೂರ್ತಿಯನ್ನು ತನ್ನ ದೇಹದಲ್ಲಿ ಧರಿಸಿದವನಾದಕಾರಣ ಸೂರ್ಯನಂತೆ ಪ್ರಕಾಶಿಸುತ ಪ್ರಾಣಿಗಳಿಗೆ ನಿಗ್ರಹಿಸಲಶಕ್ಯನಾಗಿದ್ದನು ; ಅನಂತರಗಲ್ಲಿ ಶುದ್ಧಸತ್ವಗುಣದಿಂದ ಪ್ರಕಾಶಮಾನೆಯಾದ ದೇವಕೀದೇವಿಯು ಶೂರಸೇನ ಪುತ್ರನಾದ ವಸುದೇವನಿಂದ ಸಮರ್ಪಿಸಲ್ಪಟ್ಟ ಜಗನ್ಮಂಗಳರೂಪವಾಗಿ ಸರ್ವಾತ್ಮಕವಾಗಿ ಸರ್ವಲೋಕಗಳಿಗೂ ಅಂತರಾತ್ಮರೂಪವಾದ ಭಗವಂತನ ತೇಜಸ್ಸನ್ನು (ಪೂರ್ವದಿಕ್ಕು ಪೂರ್ಣಚಂದ್ರನನ್ನು ಧರಿಸುವಂತೆ) ಮನಸ್ಸಿನಿಂದಲೆ ಗ್ರಹಿಸಿ ಧರಿಸಿದಳು ; ಸರ್ವಲೋಕಗಳಿಗೂ ಆಶ್ರಯನಾದ ಭಗವಂತನಿಗೆ ಆಶ್ರಯರೂಪಳಾದಾಗ್ಯೂ ಆ ದೇವಿಯು ಕಂಸನಿಂದ ಬಂಧನಗೃಹದಲ್ಲಿ ಕಾವಲುಮಾಡಲ್ಪಟ್ಟದ್ದರಿಂದ ಘಟಾದಿಗಳಲ್ಲಿಡಲ್ಪಟ್ಟ ದೀಪದಂತೆಯೂ ವಿದ್ಯಾವಂಚಕನಾದ ಪುರುಷನ ಸರಸ್ವತಿಯಂತೆಯೂ ಸರ್ವಜನಕ್ಕೂ ಆಹ್ಲಾದಕಳಾಗಿ ಪ್ರಕಾಶಿಸಲಿಲ್ಲ ! ಅನಂತರದಲ್ಲಿ ಕಂಸನು ಶ್ರೀಹರಿಯನ್ನು ಗರ್ಭದಲ್ಲಿ ಧರಿಸಿಕೊಂಡು ತನ್ನ ಶರೀರಪ್ರಭೆಯಿಂದ ಬಂಧನಗೃಹವನ್ನು ಬೆಳಗಿಸುತ ಮುಗುಳುನಗೆಯೊಡಗೂಡಿದ ಮುಖವುಳ್ಳವಳಾಗಿದ್ದ ದೇವಕೀದೇವಿಯನ್ನು ನೋಡಿ ತನ್ನ ಮನಸ್ಸಿನಲ್ಲಿ " ಈ ದೇವಕೀದೇವಿಯು ಪೂರ್ವದಲ್ಲಿ ಅನೇಕಾವರ್ತಿ ಗರ್ಭಿಣಿಯಾಗಿದ್ದಾಗ ಇಂಥಾ ದೇಹಕಾಂತಿಯುಳ್ಳವಳಾಗಿರಲಿಲ್ಲ ; ಈಗ ಈಕೆಯ ಗರ್ಭದಲ್ಲಿ ನನ್ನ ಪ್ರಾಣಾಪಹಾರಿಯಾದ ಹರಿಯು ವಾಸವಾಗಿರುವದು ನಿಶ್ಚಯವೇ ಸರಿ ; ದೇವಕಾರ್ಯಪ್ರಧಾನನಾದ ಹರಿಯು ನನ್ನನ್ನು ಸಂಹರಿಸುವ ಪ್ರಯತ್ನವನ್ನು ಮಾಡದಿರನು ; ಈಗ ನನ್ನಿಂದ ಮಾಡತಕ್ಕ ಪ್ರತಿಕಾರವೇನು ! ಒಡಹುಟ್ಟಿದವಳಾಗಿ ಗರ್ಭಿಣಿಯಾದ ಈ ದೇವಕೀದೇವಿಯ ಸಂಹಾರವು ಕೀರ್ತಿಯನ್ನೂ ಐಶ್ವರ್ಯವನ್ನೂ ಸಮಸ್ತ ಭೋಗಗಳಿಗೂ ಅನುಕೂಲವಾದ ಆಯುಸ್ಸನ್ನೂ ಅಪಹರಿಸುವದು ; ಅತ್ಯಂತ ಕ್ರೂರಭಾವದಿಂದಿರುವ ಪುರುಷನು ಪಡೆಯಲಶಕ್ಯವಾಗಿ ಉತ್ತಮವಾದ ಕೀರ್ತಿಯನ್ನು ನಾಶಮಾಡಿಕೊಳ್ಳುವನು ; ಕೀರ್ತಿಹೀನನಾದ ಪುರುಷನನ್ನು ಸತ್ಪುರುಷರು ತ್ಯಜಿಸುವರು ; ಆತನು ಜೀವವಂತನಾಗಿದ್ದಾಗ್ಯೂ ಮೃತಪ್ರಾಯನೇ ಸರಿ ; ಅಂಥಾ ಕ್ರೂರಪುರುಷನು ಮೃತನಾದರೆ ಶಪಿಸಲ್ಪಟ್ಟ ಪಾಪಿಷ್ಠರಿಗೆ ಯೋಗ್ಯವಾದ ಅಂಧಂತಮವೆಂಬ ನರಕವನ್ನು ಹೊಂದುವನು " ಎಂದು ಆಲೋಚಿಸಿ ಕ್ರೂರಕೃತ್ಯವನ್ನು ಬಿಟ್ಟು ಶ್ರೀಹರಿಯಲ್ಲಿ ವೈರವನ್ನು ಬೆಳೆಸುತ ಆತನ ಜನ್ಮವನ್ನು ನಿರೀಕ್ಷಿಸುತ ಕುಳಿತಿರುವಾಗಲೂ ಮಲಗಿರುವಾಗಲೂ ನಿಂತಿರುವಾಗಲೂ ಭೋಜನಮಾಡುವಾಗಲೂ ಸಂಚರಿಸುವಾಗಲೂ ಪಾನಮಾಡುವಾಗಲೂ ಶ್ರೀಹರಿಯನ್ನೇ ಚಿಂತಿಸುತ ಜಗತ್ತೆಲ್ಲವನ್ನು ಆತನ ಸ್ವರೂಪವಾಗಿಯೇ ಕಾಣುತ್ತಿದ್ದನು !

ಅನಂತರದಲ್ಲಿ ಬ್ರಹ್ಮದೇವನೂ ಪರಮೇಶ್ವರನೂ ನಾರದನು ಮೊದಲಾದ ಋಷಿಗಳೊಡನೆಯೂ ದೇವತೆಗಳೊಡನೆಯೂ ಕೂಡಿಕೊಂಡು ತಮ್ಮ ಪರಿವಾರ ಸಮೇತರಾಗಿ ದೇವಕೀ ವಸುದೇವರ ಮನೆಗೆ ಬಂದು ರಮ್ಯಗಳಾದ ವಾಕ್ಯಗಳಿಂದ ಭಗವಂತನನ್ನು ಸ್ತೋತ್ರಮಾಡುತ ಮೊದಲು ತಾವು ಕ್ಷೀರಸಮುದ್ರಕ್ಕೆ ಹೋಗಿ ಪುರುಷಸೂಕ್ತ ಮಂತ್ರಗಳಿಂದ ಪೂಜಿಸಿದಾಗ ಆತನಿಂದ ನುಡಿಯಲ್ಪಟ್ಟ ವಾಕ್ಯವು ಸತ್ಯವಾಯಿತೆಂದು ಹರ್ಷಯುಕ್ತರಾಗಿ ಆ ಭಗವಂತನ ಸತ್ಯತ್ವವನ್ನೇ ಪುರಸ್ಕರಿಸಿ ಸ್ತುತಿಸುತ ಆತನನ್ನು ಕುರಿತು " ಎಲೈ ವಿಷ್ಣುವೇ, ಸತ್ಯಸಂಕಲ್ಪನಾಗಿ ಸತ್ಯಕ್ಕೆ ಮುಖ್ಯ ಸಾಧನನಾಗಿ ಜಗತ್ತಿನ ಸೃಷ್ಟಿಗೆ ಆದಿಕಾಲದಲ್ಲಿಯೂ ಸ್ಥಿತಿಕಾಲದಲ್ಲಿಯೂ ಪ್ರಳಯಕಾಲದಲ್ಲಿಯೂ ಶಾಶ್ವತವಾಗಿರುವವನಾಗಿ ಸತ್ಯಶಬ್ದಾರ್ಥಗಳಾದ ಆಕಾಶಾದಿ ಪಂಚಭೂತಗಳಿಗೆ ಕಾರಣನಾಗಿ ನಿನ್ನಿಂದ ನಿರ್ಮಿಸಲ್ಪಟ್ಟ ಕಾರ್ಯರೂಪವಾದ ಆಕಾಶಾದಿ ಪ್ರಪಂಚಗಳಲ್ಲಿ ಅಂತರ್ಯಾಮಿಯಾಗಿರುವವನಾಗಿ ವ್ಯವಹಾರಿಕ ಸತ್ಯಸ್ವರೂಪವಾದ ಪ್ರಪಂಚದ ಪ್ರಳಯಾನಂತರದಲ್ಲಿ ಪಾರಮಾರ್ಥಿಕ ಸತ್ಯಸ್ವರೂಪದಿಂದ ಉಳಿಯುವವನಾಗಿ ಸತ್ಯವಾಕ್ಯಕ್ಕೂ ಸಮದೃಷ್ಟಿಗೂ ಪ್ರೇರಕನಾದ ನೀನು ಸರ್ವಪ್ರಕಾರದಿಂದಲು ಸತ್ಯಾತ್ಮಕನಾದ್ದರಿಂ ನಿನ್ನನ್ನು ನಾವು ಶರಣು

ಹೊಂದಿದ್ದೇವೆ! ನಾವು ಲೋಕೇಶ್ವರರಾದರೂ ನಿನಗೆ ಸಮಾನರಲ್ಲ; ನೀನು ಸಮಸ್ತ ಜಗತ್ತಿನ ಸೃಷ್ಟ್ಯಾದಿ ಕಾರಣರೂಪನಾದ್ದರಿಂದ ನೀನೊಬ್ಬನೇ ಸರ್ವರಿಗೂ ಈಶ್ವರನು; ನಾವೆಲ್ಲರು ನಿನ್ನನ್ನು ಆಶ್ರಯಿಸಿಕೊಂಡಿರುವವರು! ಸಮಷ್ಟಿ ವ್ಯಷ್ಟಿದೇಹರೂಪವಾದ ಪ್ರಪಂಚವೆಂಬ ಆದಿವೃಕ್ಷವು ಒಂದಾದ ಪ್ರಕೃತಿಯನ್ನು ಆಶ್ರಯವಾಗುಳ್ಳದ್ದು; ಸುಖದುಃಖಗಳೆಂಬ ಎರಡು ಫಲಗಳುಳ್ಳದ್ದು; ಸತ್ವರಜಸ್ತಮಸ್ಸುಗಳೆಂಬ ಮೂರು ಬೇರುಗಳುಳ್ಳದ್ದು; ಧರ್ಮಾರ್ಥ ಕಾಮಮೋಕ್ಷಗಳೆಂಬ ನಾಲ್ಕು ರಸಗಳುಳ್ಳದ್ದು; ತ್ವಕ್ ಚಕ್ಷುಸ್ ಕರ್ಣ ಜಿಹ್ವಾಘ್ರಾಣಗಳೆಂಬ ಐದು ಬಿಳಲುಗಳುಳ್ಳದ್ದು; ಕ್ಷುದ್ ತೃಷ್ಣೆ ಶೋಕ ಮೋಹ ಜರಾ ಮರಣಗಳೆಂಬ ಆರು ಸ್ವಭಾವಗಳುಳ್ಳದ್ದು; ತ್ವಕ್ಕು ಚರ್ಮ ಮಾಂಸ ರಕ್ತ ಮೇಧಸ್ಸು ಮಜ್ಜ ಅಸ್ತಿಗಳೆಂಬ ಏಳು ಹೊರಕೆಗಳುಳ್ಳದ್ದು; ಪೃಥಿವಿ ಅಪ್ಪು ತೇಯು ವಾಯು ಆಕಾಶ ಮನಸ್ಸು ಬುದ್ಧಿ ಅಹಂಕಾರಗಳೆಂಬ ಎಂಟು ಶಾಖೆಗಳುಳ್ಳದ್ದು; ನೇತ್ರಗಳು ಶ್ರೋತ್ರಗಳು ನಾಸಿಕೆಗಳು ಮುಖ ಗುದಲಿಂಗಛಿದ್ರಗಳೆಂಬ ನವರಂಧ್ರಗಳುಳ್ಳದ್ದು; ಪ್ರಾಣಾಪಾನ ವ್ಯಾನ ಉದಾನ ಸಮಾನ ನಾಗ ಕೂರ್ಮ ಕೃಕರ ದೇವದತ್ತ ಧನಂಜಯಗಳೆಂಬ ಹತ್ತು ಪತ್ರಗಳುಳ್ಳದ್ದು; ಅಂಥಾ ಸಂಸಾರರೂಪವಾದ ವೃಕ್ಷಕ್ಕೆ ನಿನ್ನಿಂದಲೇ ಉತ್ಪತ್ತಿಯುಂಟಾಗಿರುವದರಿಂದ ಅದು ನಿನ್ನಲ್ಲೇ ಅಡಗುವದು; ಆದ್ದರಿಂದ ಅದರ ಲಯಕ್ಕೂ ನೀನೆ ಅಧಿಷ್ಠಾನನು; ಅದರ ಸ್ಥಿತಿಸಮಯದಲ್ಲಿಯೂ ನೀನೆ ಅನುಗ್ರಹಿಸಿ ಸಂರಕ್ಷಣೆ ಮಾಡುವೆ; ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಬ್ರಹ್ಮ ವಿಷ್ಣು ಮಹೇಶ್ವರರು ಕರ್ತರೆಂದು ಪ್ರಸಿದ್ಧವಾಗಿದ್ದರೂ ನೀನೇ ಆ ವ್ಯಾಪಾರಗಳನ್ನು ಮಾಡುವವನಾಗಿದ್ದೀ; ನಿನ್ನ ಮಾಯೆಯಿಂದ ಆವರಿಸಲ್ಪಟ್ಟ ಜ್ಞಾನವುಳ್ಳ ಅಜ್ಞರು ನಿನ್ನನ್ನು ಬ್ರಹ್ಮ ರುದ್ರಾದಿ ನಾನಾಪ್ರಕಾರಗಳಾದ ನಾಮರೂಪ ಭೇದಗಳಿಂದ ತಿಳಿಯುವರು; ವಿದ್ವಾಂಸರು ನಿನ್ನ ನಾಮಭೇದಗಳನ್ನೆಣಿಸದೆ ಅಖಂಡರೂಪದಿಂದ ನೋಡುವರು; ದೇವಕೀದೇವಿಯ ಪುತ್ರನಾದರೂ ನೀನು ನಮ್ಮಿಂದ ಸ್ತೋತ್ರಮಾಡಲ್ಪಡತಕ್ಕವನು; ಕೇವಲ ಜ್ಞಾನಸ್ವರೂಪನಾಗಿ ಆತ್ಮನಾದ ನೀನೊಬ್ಬನೇ ಚರಾಚರಾತ್ಮಕವಾದ ಲೋಕದ ಕ್ಷೇಮಕ್ಕೋಸ್ಕರ ಸತ್ಪುರುಷರಿಗೆ ಸುಖಕರವಾಗಿ ಸತ್ವಗುಣಯುಕ್ತವಾಗಿ ದುಷ್ಟರಿಗೆ ಮೃತ್ಯುರೂಪವಾಗಿರುವ ಅವತಾರಗಳನ್ನು ಬಾರಿಬಾರಿಗೂ ಧರಿಸುತ್ತೀ; ಅಷ್ಟುಮಾತ್ರವೇ ಹೊರ್ತು ನೀನು ಯಾರಿಗೂ ಪುತ್ರನಲ್ಲ! ಎಲೈ ಭಗವಂತನೇ, ನೀನು ದುಷ್ಟನಿಗ್ರಹ ಶಿಷ್ಟಪರಿಪಾಲನಾರ್ಥವಾಗಿಮಾತ್ರವೇ ಅವತರಿಸುವದಲ್ಲದೆ ಭಕ್ತರಿಗೆ ಮೋಕ್ಷಾರ್ಥವಾಗಿಯೂ ಅವತರಿಸುತ್ತೀ! ಎಲೈ ಅರವಿಂದಲೋಚನನೆ, ಸಕಲ ಪ್ರಾಣಿಗಳಿಗೂ ಆಶ್ರಯನಾದ ನಿನ್ನಲ್ಲಿ ಧ್ಯಾನಯೋಗದಿಂದ ಪ್ರವೇಶಮಾಡಿರುವ ಸುಚಿತ್ತದಿಂದ ವಿವೇಕಿಗಳಾದ ಪುರುಷರು ಮಹಾತ್ಮರ ಸೇವಾರ್ಥವಾದ್ದಾಗಿಯೂ ಪರಮಸಾಧನವಾದ್ದಾಗಿಯೂ ನಿಶ್ಚಯಿಸಲ್ಪಟ್ಟಿರುವ ನಿನ್ನ ಪಾದವೆಂಬ ನಾವೆಯನ್ನಾಶ್ರಯಿಸಿ ಸಂಸಾರವೆಂಬ ಸಮುದ್ರವನ್ನು ಕರುವಿನ ಹೆಜ್ಜೆಯನ್ನು ದಾಟುವಂತೆ ತುಚ್ಛೀಕರಿಸಿ ದಾಟುವರು! ಎಲೈ ಸ್ವಪ್ರಕಾಶನಾದ ಸ್ವಾಮಿಯೆ, ನಿನ್ನ ಭಕ್ತರಾದ ಪೂರ್ವಿಕರು ಸರ್ವಪ್ರಾಣಿಗಳಲ್ಲಿಯೂ ಪ್ರೀತಿಯುಕ್ತರಾದ್ದರಿಂದ ದಾಟಲಶಕ್ಯವಾಗಿ ಭಯಂಕರವಾದ ಸಂಸಾರಸಮುದ್ರವನ್ನು ನಿನ್ನ ಪಾದಾರವಿಂದವೆಂಬ ನಾವೆಯ ಸಾನ್ನಿಧ್ಯಮಾತ್ರದಿಂದಲೆ (ಹಿಂದೆ ಬರುವ ಭಕ್ತರಿಗಾಗಿ ನಿನ್ನ ಪಾದಾರವಿಂದವೆಂಬ ನಾವೆಯನ್ನು ಇಲ್ಲೇ ಇರಿಸಿ) ಪರಮಪದವನ್ನೈದಿದರು! ಎಲೈ ಅರವಿಂದನಯನನಾದ ಶ್ರೀಭಗವಂತನೇ, ನಿನ್ನ ಭಕ್ತರಲ್ಲದ ಪುರುಷರು ತಾವು ಮುಕ್ತರೆಂಬ ಅಭಿಮಾನದಿಂದ ಅಶುದ್ಧವಾದ ಬುದ್ಧಿಯುಳ್ಳವರಾಗಿ ನಿನ್ನ ಪಾದಾಂಬುಜವನ್ನಾಶ್ರಯಿಸದೆ ಮೂರ್ಖರಾಗಿ ಬಹುಜನ್ಮಗಳಲ್ಲಿ ಶ್ರಮಪಟ್ಟು ತಾವು ಮಾಡುವ ತಪಸ್ಸಿನಿಂದ ಸತ್ಕುಲದಲ್ಲಿ ಜನಿಸಿ ಶ್ರವಣ ಮನನಾದಿಗಳನ್ನು ಮಾಡಿ ಮುಕ್ತಿಯ ಸಾನ್ನಿಧ್ಯವನ್ನು ಸಂಪಾದಿಸಿದಾಗ್ಯೂ ನಿನ್ನಲ್ಲಿ ಭಕ್ತಿಯಿಲ್ಲದ್ದರಿಂದ ಮುಕ್ತಿಯನ್ನೈದದೆ ಅಧೋಗತಿಯನ್ನೈದುವರು; ನಿನ್ನ ಭಕ್ತರಾದ ಮಹಾತ್ಮರು ಒಂದು ಕಾಲದಲ್ಲಿಯೂ ವಿಘ್ನಗಳಿಂದ ತಿರಸ್ಕಾರವನ್ನೈದರು! ಎಲೈ ರಮಾರಮಣನಾದ ಶ್ರೀಹರಿಯೆ, ನಿನ್ನಲ್ಲಿ ದೃಢವಾದ ಭಕ್ತಿಯುಳ್ಳ ಮಹಾಪುರುಷರು ಭಕ್ತಿಯಿಲ್ಲದವರಂತೆ ಒಂದು ಕಾಲದಲ್ಲಾದರೂ ತಮ್ಮ ಸದ್ಭಕ್ತಿ ಮಾರ್ಗಗಳಿಗೆ ವಿಘ್ನಗಳನ್ನು ಪಡೆಯರು! ಎಲೈ ಪ್ರಭುವಾದ ಶ್ರೀಹರಿಯೇ, ನಿನ್ನ ಭಕ್ತರು ನಿನ್ನಿಂದ ಸಂರಕ್ಷಿತರಾಗಿ ಭಯರಹಿತರಾಗಿ ಮಹಾ ವಿಘ್ನಗಳ ಶಿರಸ್ಸುಗಳಮೇಲೆ ತಮ್ಮ ಹೆಜ್ಜೆಗಳನ್ನಿಟ್ಟು ಜಯಿಸಿ ಕೃತಾರ್ಥರಾಗಿ ನಿನ್ನ ಸಾರೂಪ್ಯವ

ನ್ನು ಪಡೆದು ನಿನ್ನಂತೆ ಗರುಡಾರೂಢರಾಗಿ ಸಂಚರಿಸುವರು ! ನೀನು ಧರಿಸುವ ರೂಪಗಳು ಸತ್ಪುರುಷರಿಗೆ ಸುಖವನ್ನುಂಟುಮಾಡುವವು ; ನೀನು ಬ್ರಹ್ಮಚರ್ಯಾಶ್ರಮಕ್ಕೆ ಯೋಗ್ಯವಾದ ವೇದಾಧ್ಯಯನದಿಂದಲೂ ಗೃಹಸ್ಥಾಶ್ರಮಕ್ಕೆ ಯೋಗ್ಯವಾದ ಕರ್ಮಯೋಗದಿಂದಲೂ ವಾನಪ್ರಸ್ಥಾಶ್ರಮಕ್ಕೆ ಯೋಗ್ಯವಾದ ತಪಸ್ಸಿನಿಂದಲೂ ಸನ್ಯಾಸಾಶ್ರಮಕ್ಕೆ ಯೋಗ್ಯವಾದ ಧ್ಯಾನಯೋಗದಿಂದಲೂ ಸರ್ವಜನರೂ ನಿನ್ನನ್ನು ಪೂಜಿಸುವಂಥಾ ಶುದ್ಧ ಸತ್ವಮಯವಾಗಿ ಪ್ರಾಣಿಗಳಿಗೆ ಕರ್ಮಫಲರೂಪವಾದ ಶ್ರೇಯಸ್ಸನ್ನುಂಟುಮಾಡುವ ದಿವ್ಯದೇಹವನ್ನು ಜಗತ್ತಿನ ಪರಿಪಾಲನೆಕ್ಕೋಸ್ಕರ ಧರಿಸುತ್ತೀ! ಎಲೈ ಪರಮೇಶ್ವರನೆ, ಶುದ್ಧ ಸತ್ವಗುಣಯುಕ್ತವಾದ ನಿನ್ನ ದಿವ್ಯದೇಹವು ಅವತರಿಸದಿದ್ದರೆ ಅಜ್ಞಾನವನ್ನೂ ಅಜ್ಞಾನದಿಂದ ಕಲ್ಪಿತವಾದ ಭೇದವನ್ನೂ ಪರಿಹರಿಸುವ ಅಪರೋಕ್ಷಜ್ಞಾನವುಂಟಾಗಲಾರದು ; ಜಡಗಳಾದ ಬುದ್ಧ್ಯಾದಿಗಳಿಗೆ ಬ್ರಹ್ಮತತ್ವದಿಂದ ಪ್ರಕಾಶವುಂಟಾಗಿ ಜ್ಞಾನವುಂಟಾಗುವದು ; ವಿಷಯ ಪ್ರಕಾಶಗಳಿಂದ ನೀನು ಸರ್ವಸಾಕ್ಷಿಯೂ ಪರಿಪೂರ್ಣನೂ ಎಂದು ಅನುಮಾನರೂಪವಾಗಿಯೇ ಹೊರ್ತು ಸಾಕ್ಷಾತ್ಕಾರವಾಗಿ ತಿಳಿಯುವದಿಲ್ಲ; ಈ ರೀತಿಯಲ್ಲಿ ನಿನ್ನ ಭಕ್ತರ ಭೋಗಮೋಕ್ಷಾರ್ಥವಾಗಿ ನೀನು ರೂಪಗಳನ್ನು ಧರಿಸುತ್ತೀ ! ಎಲೈ ಸ್ವಾಮಿಯೆ, ಮಂಗಳಪ್ರದಗಳಾದ ನಿನ್ನ ನಾಮಧೇಯಗಳನ್ನೂ ರೂಪಗಳನ್ನೂ ಶ್ರವಣ ಪಠಣ ಧ್ಯಾನಮಾಡುತ ಅನ್ಯರಿಗೂ ಉಪದೇಶವನ್ನು ಮಾಡುತ ಪೂಜಾದಿಕ್ರಿಯೆಗಳನ್ನಾಚರಿಸುತ ನಿನ್ನ ಚರಣಾರವಿಂದಗಳಲ್ಲಿ ಪ್ರವೇಶಮಾಡಲ್ಪಟ್ಟ ಮನಸ್ಸುಳ್ಳವನಾಗುವ ಪುರುಷನು ಪುನಹ ಸಂಸಾರವನ್ನು ಹೊಂದನು ! ಎಲೈ ಶ್ರೀಹರಿಯೆ, ನಿನ್ನ ಪಾದರೂಪಳಾದ ಈ ಭೂಮಿಯ ಭಾರವು ಪರಮೇಶ್ವರನಾದ ನಿನ್ನ ಅವತಾರದಿಂದಲೇ ಪರಿಹರಿಸಲ್ಪಟ್ಟಿತು ; ಮತ್ತು ವಜ್ರಾಂಕುಶಾದಿ ಶುಭಲಕ್ಷಣಗಳಿಂದ ಶೋಭಿಸುವ ಕೋಮಲಗಳಾದ ನಿನ್ನ ಪಾದಗಳಿಂದಲಂಕರಿಸಲ್ಪಟ್ಟ ಭೂಮಿಯನ್ನೂ ನಿನ್ನಿಂದ ದಯೆಮಾಡಲ್ಪಟ್ಟ ಸ್ವರ್ಗವನ್ನೂ ನೋಡುತ್ತಿರುವದೇ ನಮಗೆ ಮಹಾಭಾಗ್ಯವು ! ಎಲೈ ನಿತ್ಯಮುಕ್ತನಾದ ಜಗದೀಶ್ವರನೆ, ಸಂಸಾರಿಯಲ್ಲದ ನಿನಗೆ ಜನ್ಮಕ್ಕೆ ಕಾರಣವು ವಿನೋದವೇ ಹೊರ್ತು ಮತ್ಯಾವ ನಿಮಿತ್ತವನ್ನೂ ಊಹಿಸಿ ತಿಳಿಯಲಾರೆವು ; ಜೀವಾತ್ಮನೂ ಉತ್ಪತ್ತಿಸ್ಥಿತಿಲಯಗಳೂ ಜೀವನ ಅವಿದ್ಯೆಯಿಂದ ಕಲ್ಪಿಸಲ್ಪಟ್ಟಿರುವವೇ ಹೊರ್ತು ಪರಮಾರ್ಥಗಳಲ್ಲವಾದ್ದರಿಂದ ನಿನಗೆ ಜನ್ಮವೇ ಇಲ್ಲ ! ಎಲೈ ಯಾದವರೊಳಗೆ ಶ್ರೇಷ್ಠನಾದ ಶ್ರೀಹರಿಯೆ, ಮತ್ಸ್ಯಾವತಾರ ಹಯಗ್ರೀವಾವತಾರ ಕೂರ್ಮಾವತಾರ ನರಸಿಂಹಾವತಾರ ಹಂಸಾವತಾರ ರಾಮಾವತಾರ ನರನಾರಾಯಣಾವತಾರ ತ್ರಿವಿಕ್ರಮಾವತಾರ ಮೊದಲಾದ ಅನೇಕ ಅವತಾರಗಳಿಂದ ಮೂರು ಲೋಕಗಳನ್ನೂ ನಮ್ಮನ್ನೂ ಪರಿಪಾಲಿಸಿದೆ ; ಅದೇ ರೀತಿಯಲ್ಲಿ ಈಗಲೂ ಅವತಾರವನ್ನು ಮಾಡಿ ಭೂಭಾರವನ್ನು ಪರಿಹರಿಸು ; ನಿನಗೆ ನಮಸ್ಕರಿಸುತ್ತೇವೆ ! ” ಎಂದು ನುಡಿದರು.

ಎಲೈ ರಾಯನೆ, ಈ ಪ್ರಕಾರದಲ್ಲಿ ನುಡಿದು ದೇವತೆಗಳು ಶಿರಸ್ಸಿನಿಂದ ನಮಸ್ಕಾರವನ್ನಾಚರಿಸಿ ಅನಂತರದಲ್ಲಿ ದೇವಕೀದೇವಿಯನ್ನು ಕುರಿತು “ ಎಲೌ ದೇವಕೀದೇವಿಯೇ, ಪರಮಪುರುಷನಾದ ಸಾಕ್ಷಾತ್‌ಭಗವಂತನು ಜಗತ್ತಿನ ಕ್ಷೇಮಕ್ಕೋಸ್ಕರ ನಿನ್ನ ಪುಣ್ಯವಶದಿಂದ ತನ್ನ ಪೂರ್ಣಾಂಶದಿಂದ ನಿನ್ನ ಗರ್ಭವನ್ನು ಪ್ರವೇಶಮಾಡಿದ್ದಾನೆ ; ಅತನು ಯಾದವರನ್ನು ಸಂರಕ್ಷಣೆ ಮಾಡುವನು ; ಮರಣವನ್ನೈದಲಿಚ್ಛೆಯುಳ್ಳ ಕಂಸನ ದೆಸೆಯಿಂದ ನಿನಗೆ ಭಯವು ಬರಲಾರದು ” ಎಂದು ಪರಮಪುರುಷನಾದ ಭಗವಂತನ ಸ್ವರೂಪವನ್ನು ಯಥಾರ್ಥವಾಗಿ ತಿಳಿಸಿ ಬ್ರಹ್ಮದೇವನನ್ನೂ ಪರಮೇಶ್ವರನನ್ನೂ ಮುಂದಿಟ್ಟುಕೊಂಡು ಸ್ವರ್ಗವನ್ನು ಕುರಿತು ಹೋದರು !

---

## ೩ ನೇ ಅ ಧ್ಯಾ ಯ .

## ಶ್ರೀ ಕೃ ಷ್ಣ ನ ಜ ನ ನ ವು .

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ಶ್ರೀ ನಾರಾಯಣನಿಂದುತ್ಪನ್ನನಾದ ಬ್ರಹ್ಮದೇವನನ್ನೇ ದೇವತೆಯಾಗುಳ್ಳ ರೋಹಿಣೀ ನಕ್ಷತ್ರವು ಉದಯವಾಗಿ ಪರಮ ಶಾಂತಗಳಾದ ಅಶ್ವಿನ್ಯಾದಿ ನಕ್ಷತ್ರಗಳೂ ಸೂರ್ಯಾದಿ ಗ್ರಹಗ

ಳೂ ಮಿಕ್ಕ ತಾರಕಗಳೂ ಪ್ರಕಾಶವಾನವಾಗಿ ಸಮಸ್ತ ಸದ್ಗುಣಗಳೊಡಗೂಡಿದ ಪರಮ ಮಂಗಳಕರವಾದ ಮುಹೂರ್ತವು ಪ್ರಾಪ್ತವಾಯಿತು ; ದಶದಿಕ್ಕುಗಳು ಪ್ರಸನ್ನಗಳಾದವು ; ಆಕಾಶವು ನಿರ್ಮಲವಾಗಿ ನಕ್ಷತ್ರ ಸಮೂಹಗಳುಳ್ಳದ್ದಾಯಿತು ; ಭೂಮಿಯು ಸಮಸ್ತ ಮಂಗಳಗಳ ಯುಕ್ತವಾದ ಪುರಗಳಿಂದಲೂ ಗ್ರಾಮಗಳಿಂದಲೂ ಗೋಕುಲಗಳಿಂದಲೂ ರತ್ನೋತ್ಪತ್ತಿ ಸ್ಥಾನಗಳಿಂದಲೂ ಯುಕ್ತವಾಗಿ ಶೋಭಿಸಿತು ; ನದಿಗಳು ನಿರ್ಮಲಜಲವುಳ್ಳದ್ದಾದವು ; ಮಡುವುಗಳು ಕಮಲಗಳ ಕಾಂತಿಯಿಂದ ಪ್ರಕಾಶಿಸಿದವು ; ವನಗಳು ಪಕ್ಷಿಗಳ ಮಧುರಧ್ವನಿಗಳಿಂದಲೂ ಭ್ರಮರ ಸಮೂಹಗಳ ಝೇಂಕಾರಗಳಿಂದಲೂ ರಮಣೀಯವಾಗಿ ಫಲಪುಷ್ಪಗಳ ಗೊಂಚಲುಗಳಿಂದ ಮನೋಹರವಾಗಿದ್ದವು ; ಮಂದಮಾರುತಗಳು ಪುಣ್ಯಕರವಾದ ಸುಗಂಧಗಳುಳ್ಳವಾಗಿ ಸುಖಸ್ಪರ್ಶವುಳ್ಳವಾಗಿ ಮೆಲ್ಲಮೆಲ್ಲನೆ ಸುಳಿದವು ; ಬ್ರಾಹ್ಮಣೋತ್ತಮರ ಗಾರ್ಹಪತ್ಯ ಆಹವನೀಯ ದಕ್ಷಿಣಾಗ್ನಿಗಳೆಂಬ ತ್ರೇತಾಗ್ನಿಗಳು ಪ್ರಸನ್ನವಾಗಿ ಪ್ರದಕ್ಷಿಣಾಕಾರವಾಗಿ ಜ್ವಲಿಸಿದವು ; ಸಮಸ್ತ ಸಾಧುಗಳ ಮನಸ್ಸುಗಳೂ ಪ್ರಸನ್ನಗಳಾದವು ; ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು ; ಕಿನ್ನರ ಕಿಂಪುರುಷ ಗಂಧರ್ವರು ಗಾನವನ್ನು ಮಾಡಿದರು ; ಸಿದ್ಧಚಾರಣರು ಸ್ತೋತ್ರವನ್ನು ಮಾಡಿದರು ; ವಿದ್ಯಾಧರಾಪ್ಸರಸ್ತ್ರೀಯರು ನರ್ತನವನ್ನು ಮಾಡಿದರು; ಮುನಿಗಳೂ ದೇವತೆಗಳೂ ಸಂತೋಷಯುಕ್ತರಾಗಿ ಮಂದಾರ ಪಾರಿಜಾತಾದಿ ಕುಸುಮಗಳನ್ನು ವರ್ಷಿಸಿದರು ; ಮೇಘಗಳು ಸಮುದ್ರವನ್ನನುಸರಿಸಿ ಮನೋಹರವಾಗಿ ಗುಡುಗುತ್ತಿದ್ದವು ! ನಿಬಿಡವಾದ ಅಂಧಕಾರವುಳ್ಳ ಆ ಅರ್ಧರಾತ್ರಿಯಲ್ಲಿ ದೇವತಾಸ್ತ್ರೀಯಂತೆ ದಿವ್ಯ ರೂಪವುಳ್ಳ ದೇವಕೀದೇವಿಯಲ್ಲಿ ಸರ್ವ ಪ್ರಾಣಿಗಳಲ್ಲಿಯೂ ವ್ಯಾಪ್ತನಾಗಿರುವ ಸಾಕ್ಷಾತ್ ಶ್ರೀವಿಷ್ಣುವು ಪೂರ್ವ ದಿಕ್ಕಿನಲ್ಲಿ ಉದಯಿಸುವ ಪೂರ್ಣಚಂದ್ರನಂತೆ ತನ್ನ ನಿಜರೂಪದಿಂದ ಆವಿರ್ಭವಿಸಿದನು ! ಕೆಂದಾವರೆಯೋಪಾದಿಯಲ್ಲಿ ನೇತ್ರಗಳುಳ್ಳವನಾಗಿ ಶಂಖ ಚಕ್ರ ಶಾರ್ಙ್ಗ ಗದಾಪದ್ಮಗಳೆಂಬ ಆಯುಧಗಳನ್ನು ಧರಿಸಿದ ಚತುರ್ಭುಜಗಳುಳ್ಳವನಾಗಿ ಶ್ರೀವತ್ಸದಿಂದಲಂಕೃತವಾದ ವಕ್ಷಸ್ಥಳವುಳ್ಳವನಾಗಿ ರಂಜಿಸುವ ಕೌಸ್ತುಭಮಣಿಯುಳ್ಳ ಕಂಠಪ್ರದೇಶ ವುಳ್ಳವನಾಗಿ ಪೀತಾಂಬರಧಾರಿಯಾಗಿ ನೀಲಮೇಘ ಸಮಾನವಾದ ಕಾಂತಿಯಿಂದ ಸೌಂದರ್ಯಯುಕ್ತನಾಗಿ ಅನರ್ಘ್ಯವಾದ ವೈಡೂರ್ಯ ರತ್ನಕಾಂತಿಯಿಂದ ಯುಕ್ತವಾದ ಕಿರೀಟ ಕರ್ಣಕುಂಡಲಗಳಲ್ಲಿ ಪ್ರಕಾಶಿಸುವ ಅನೇಕ ಸಹಸ್ರ ಕುಟಿಲ ಕುಂತಳಗಳುಳ್ಳವನಾಗಿ ಅನರ್ಘ್ಯಗಳಾದ ವಡ್ಯಾಣ ಬಾಹುಪುರಿ ಕಂಕಣ ಕಾಲಂದಿಗೆಗಳಿಂದ ದೇದೀಪ್ಯಮಾನನಾದ ಆ ಬಾಲಕನನ್ನು ಕಂಡು ವಸುದೇವನು ಆಶ್ಚರ್ಯದಿಂದ ವಿಕಸಿತವಾಗಿ ವಿಶೇಷವಾಗಿ ಚಲಿಸುತ್ತಿದ್ದ ಲೋಚನದ್ವಯವುಳ್ಳವನಾಗಿ ಶ್ರೀ ಕೃಷ್ಣಾವತಾರ ಸಂಭ್ರಮದಿಂದುಂಟಾದ ಸಂತೋಷದಿಂದ ವ್ಯಾಪ್ತನಾಗಿ ಕಂಸನಿಂದ ಕಾರಾಗೃಹದಲ್ಲಿ ಬಂಧನ ಮಾಡಲ್ಪಟ್ಟದ್ದರಿಂದ ಗೋದಾನವನ್ನು ಮಾಡುವದಕ್ಕೆ ಶಕ್ತಿಯಿಲ್ಲದೆ ಮನಸ್ಸಿನಲ್ಲೇ ಬ್ರಾಹ್ಮಣರಿಗೋಸ್ಕರ ಹತ್ತುಸಾವಿರ ಗೋವುಗಳನ್ನು ಧಾರೆ ಎರೆದು ಪರಿಶುದ್ಧವಾದ ಬುದ್ಧಿಯುಳ್ಳವನಾಗಿ ಆ ಭಗವಂತನ ಪ್ರಭಾವವನ್ನು ಬಲ್ಲವನಾದಕಾರಣ ಅತ್ಯಂತ ನಮ್ರನಾಗಿ ಭಯರಹಿತನಾಗಿ ಅಂಜಲೀಬದ್ಧನಾಗಿ ತನ್ನ ದೇಹಕಾಂತಿಯಿಂದಲೆ ಆ ಪ್ರಸೂತೀಗೃಹವನ್ನು ಪ್ರಕಾಶಮಾಡುತ್ತಿದ್ದ ಆ ಪುತ್ರನಲ್ಲಿ ಮೊದಲು ಹುಟ್ಟಿದ ಪುತ್ರಬುದ್ಧಿಯನ್ನು ಬಿಟ್ಟು ಆತನು ಸಾಕ್ಷಾತ್ ಪರಮಪುರುಷನೆಂದು ನಿಶ್ಚಯಿಸಿ ಆ ಭಗವಂತನನ್ನು ಸ್ತೋತ್ರವನ್ನು ಮಾಡುತ "ಎಲೈ ಭಗವಂತನೆ, ನೀನು ಪ್ರಕೃತಿಗೆ ಪರನಾಗಿ ಕೇವಲಾನಂದಸ್ವರೂಪನಾಗಿ ಸರ್ವಬುದ್ಧಿ ಪ್ರೇರಕನಾಗಿರುವ ಸಾಕ್ಷಾತ್ ಪರಮಪುರುಷನು ! ಎಲೈ ಭಗವಂತನೆ, ನೀನು ನಿನ್ನ ಮಾಯೆಯಿಂದ ತ್ರಿಗುಣಾತ್ಮಕವಾದ ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಪ್ರವೇಶಮಾಡದಿದ್ದಾಗ್ಯೂ ಪ್ರವೇಶ ಮಾಡಿದವನಂತೆ ಭಾವಿಸಲ್ಪಡುತ್ತೀ ! ವಿಕಾರರಹಿತಗಳಾದ ಮಹದಾದಿ ತತ್ವಗಳು ಷೋಡಶ ವಿಕಾರಗಳಿಂದ ಯುಕ್ತಗಳಾಗಿ ನಾನಾ ಶಕ್ತಿಗಳುಳ್ಳವಾಗಿರುವದರಿಂದ ವಿಶೇಷ ಕಾರ್ಯಂಗೈಯಲು ಸಮರ್ಥಗಳಲ್ಲದೆ ವಿರಾಡ್ದೇಹ ಮಾತ್ರವನ್ನು ಸೃಷ್ಟಿಸಿ ಆ ದೇಹದಲ್ಲಿ ತಾವು ಪ್ರವೇಶಂಗೈದಿರುವಂತೆ ತೋರಿದರೂ ಕಾರ್ಯೋತ್ಪತ್ತಿಗೆ ಪೂರ್ವದಲ್ಲೇ ಕಾರಣಭಾವದಿಂದ ಸಿದ್ಧವಾಗಿದ್ದದ್ದರಿಂದ ಸೃಷ್ಟಿಸಲ್ಪಟ್ಟ ಆ ಕಾರ್ಯದಲ್ಲಿ ಅವುಗಳಿಗೆ ಪುನಃ ಪ್ರವೇಶವು ಹ್ಯಾಗಿಲ್ಲವೋ ಅದೇ ರೀತಿಯಲ್ಲಿ ನೀನು ರೂಪಾದಿ ಜ್ಞಾನದಿಂದ ಊಹಿಸಲು ಯೋಗ್ಯವಾದ ಸ್ವರೂಪವುಳ್ಳ ಇಂದ್ರಿಯಗಳಿಂದಲೂ ಗ್ರಹಿಸಲು ಯೋ

ಗ್ಯವಾದ ರೂಪಾದಿ ವಿಷಯಗಳೊಡನೆಯೂ ಇರುವವನಾದಾಗ್ಯೂ ಆ ಇಂದ್ರಿಯಗಳಿಂದ ಗ್ರಹಿಸಲು ಯೋಗ್ಯನಾಗುವದಿಲ್ಲ! ಸರ್ವಾಂತರ್ಯಾಮಿಯಾಗಿ ಸರ್ವಸ್ವರೂಪನಾಗಿ ಪರಮಾತ್ಮ ವಸ್ತುವಾದ ನೀನು ಅಪರಿಚ್ಛಿನ್ನನಾದ್ದರಿಂದ ನಿನಗೆ ಹೊರಗೆಂತಲೂ ಒಳಗೆಂತಲೂ ಇಲ್ಲ; ಆದ್ದರಿಂದ ನಿನ್ನಿಂದ ಸೃಷ್ಟಿಸಲ್ಪಟ್ಟ ಈ ಜಗತ್ತಿನಲ್ಲಿ ನಿನಗೆ ಪುನಃ ಪ್ರವೇಶವಿಲ್ಲ! ಆತ್ಮನಿಗೆ ದೃಶ್ಯಗಳಾದ ದೇಹೇಂದ್ರಿಯಾದಿಗಳು ಆತ್ಮನನ್ನು ಹೊರತು ಪ್ರತ್ಯೇಕವಾಗಿ ಸತ್ಯವಾಗಿರುವವೆಂಬ ಬುದ್ಧಿಯುಳ್ಳ ಪುರುಷನು ಪ್ರಾಜ್ಞನಲ್ಲ; ವಿವೇಕದಿಂದ ವಿಚಾರಿಸಲ್ಪಡುವ ಈ ದೇಹೇಂದ್ರಿಯಾದಿ ಸರ್ವವೂ ವಾಙ್ಮಾತ್ರದಿಂದ ಹೇಳತಕ್ಕದ್ದೇ ಹೊರ್ತು ಸತ್ಯವಲ್ಲವಾದಕಾರಣ ವಸ್ತುವಲ್ಲವೆಂದು ತಿರಸ್ಕಾರ ಮಾಡಲ್ಪಡುವದು; ಅಂಥಾದ್ದನ್ನು ವಸ್ತುವೆಂಬ ಬುದ್ಧಿಯಿಂದ ಸತ್ಯವೆಂದು ತಿಳಿಯುವ ಪುರುಷನು ಅಜ್ಞನು! ಎಲೈ ಪರಿಪೂರ್ಣನಾದ ಭಗವಂತನೇ, ನಿರ್ಗುಣನಾಗಿ ನಿರಪೇಕ್ಷಿತನಾಗಿ ನಿರ್ವಿಕಾರಿಯಾದ ನಿನ್ನ ದೆಸೆಯಿಂದ ಈ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳುಂಟಾಗುವವೆಂದು ಋಷಿಗಳು ನುಡಿಯುವರು! ಈಶ್ವರನಾಗಿ ಪರಬ್ರಹ್ಮನಾದ ನೀನು ಕರ್ತೃತ್ವವುಳ್ಳವನಾಗಿಯೂ ಇಲ್ಲದವನಾಗಿಯೂ ಇದ್ದೀ! ಸತ್ವರಜಸ್ತಮೋಗುಣಗಳಿಗೆ ನೀನು ಆಶ್ರಯನಾದ್ದರಿಂದ ಆ ಗುಣಗಳಿಂದ ಮಾಡಲ್ಪಡುವ ಸೃಷ್ಟ್ಯಾದಿ ಕರ್ತೃತ್ವವು ಭೃತ್ಯರಿಂದ ಮಾಡಲ್ಪಟ್ಟ ಶತ್ರುಜಯಾದಿ ವ್ಯಾಪಾರಗಳು ಅರಸನಲ್ಲಿ ಉಪಚಾರದಿಂದ ಆರೋಪಿಸಲ್ಪಡುವಂತೆ ನಿನ್ನಲ್ಲಿ ಆರೋಪಿಸಲ್ಪಡುವದು! ಪರಬ್ರಹ್ಮಸ್ವರೂಪನಾದ ನೀನು ಮೂರು ಲೋಕಗಳನ್ನೂ ಪಾಲಿಸುವದಕ್ಕೋಸ್ಕರ ಶುಕ್ಲವರ್ಣವಾದ ಸತ್ವಗುಣವನ್ನು ಸ್ವತಃ ಧರಿಸುವೆ; ಜಗತ್ತಿನ ಸೃಷ್ಟಿಗೋಸ್ಕರ ರಜೋಗುಣದಿಂದ ವೃದ್ಧಿಹೊಂದಿದ ರಕ್ತವರ್ಣವನ್ನು ಧರಿಸುವೆ; ಪ್ರಳಯಕಾಲದಲ್ಲಿ ತಮೋಗುಣದಿಂದ ಅತ್ಯಂತ ವೃದ್ಧಿಹೊಂದಿದ ಕೃಷ್ಣವರ್ಣವನ್ನು ಧರಿಸುವೆ! ಎಲೈ ಸರ್ವ ದೇವತೆಗಳಿಗೂ ಈಶ್ವರನಾಗಿ ಸರ್ವತ್ರಪರಿಪೂರ್ಣನಾದ ಸ್ವಾಮಿಯೆ, ಈ ಲೋಕದ ಸಂರಕ್ಷಣೇಚ್ಛೆಯಿಂದ ಇಂದ್ರನೀಲಮಾಣಿಕ್ಯದಂತೆ ಕೃಷ್ಣವರ್ಣದಿಂದ ನನ್ನ ಗೃಹದಲ್ಲಿ ನೀನು ಅವತರಿಸಿದ್ದೀ; ಸಾಧುಗಳನ್ನು ಸಂರಕ್ಷಣ ಮಾಡುವದಕ್ಕೋಸ್ಕರ ಅರಸುಗಳೆಂಬ ನಾಮಧೇಯವುಳ್ಳ ಅಸುರಕೋಟಿ ಸೇನಾನಾಯಕರನ್ನು ಸಂಹಾರ ಮಾಡುವೆ! ಎಲೈ ದೇವತೆಗಳಿಗೂ ಈಶ್ವರನಾದ ಸ್ವಾಮಿಯೇ, ದುಷ್ಟನಾದ ಕಂಸನು ನಮ್ಮ ಗೃಹದಲ್ಲಿ ನೀನು ಅವತಾರ ಮಾಡುವೆ ಯೆಂದು ತಿಳಿದು ನಿನಗೆ ಜೇಷ್ಠರಾದ ಆರುಜನ ಬಾಲಕರನ್ನು ಸಂಹರಿಸಿದನು; ಈಗ ನೀನು ಇಲ್ಲಿ ಅವತರಿಸಿದ ವಾರ್ತೆಯನ್ನು ಭೃತ್ಯರ ಮುಖದಿಂದ ಕೇಳಿದರೆ ಆಯುಧ ಧಾರಿಯಾಗಿ ಇಲ್ಲಿಗೆ ಓಡಿಬರುವನು" ಎಂದು ವಿಜ್ಞಾಪಿಸಿದನು.

ಅನಂತರದಲ್ಲಿ ಮನೋಹರವಾದ ಮುಗುಳುನಗೆಯುಳ್ಳ ದೇವಕೀದೇವಿಯು ಮಹಾಪುರುಷನಾದ ಶ್ರೀನಾರಾಯಣನ ಲಕ್ಷಣಗಳಿಂದ ಶೋಭಿಸುತಿದ್ದ ತನ್ನ ಕುಮಾರನನ್ನು ನೋಡಿ ಕಂಸನನ್ನು ನೆನೆದು ಭಯಪಡುತ ಆ ಭಗವಂತನನ್ನು ಸ್ತೋತ್ರ ಮಾಡುತ "ಎಲೈ ಭಗವಂತನೆ, ಯಾವನ ಸ್ವರೂಪವು ಅವ್ಯಕ್ತವಾಗಿ ಸರ್ವಕ್ಕೂ ಕಾರಣರೂಪವಾಗಿ ಬೃಹತ್ತಾಗಿ ಸ್ವಪ್ರಕಾಶವಾಗಿ ಗುಣಸಂಬಂಧರಹಿತವಾಗಿ ಸದ್ರೂಪವಾಗಿ ವಿಶೇಷರಹಿತವಾಗಿ ಕ್ರಿಯಾರಹಿತವಾಗಿ ಇರುವದೆಂದು ಮಹಾ ಯೋಗಿಗಳು ಹೇಳುವರೋ ಅಂಥಾ ಆತ್ಮಜ್ಞಾನ ಪ್ರಕಾಶನಾದ ಸಾಕ್ಷಾತ್ ವಿಷ್ಣುವು ನೀನೇ! ಎಲೈ ಭಗವಂತನೆ, ದ್ವಿಪರಾರ್ಧ ಸಂಖ್ಯಾತವಾದ ಬ್ರಹ್ಮಕಲ್ಪವು ಪರಿಪೂರ್ಣವಾಗುವ ಕಾಲದಲ್ಲಿ ಚರಾಚರಾತ್ಮಕವಾದ ಈ ಪ್ರಪಂಚವು ಪೃಥಿವ್ಯಾದಿ ಪಂಚಮಹಾ ಭೂತಗಳಲ್ಲಿ ಲೀನವಾಗುವದು; ಆ ಮಹಾಭೂತಗಳು ಭೂತಸೂಕ್ಷ್ಮಗಳೆಂಬ ತನ್ಮಾತ್ರೆಗಳಲ್ಲಿ ಪ್ರವೇಶಮಾಡುವವು; ವ್ಯಕ್ತಗಳಾದ ಆ ಸೂಕ್ಷ್ಮಭೂತಗಳು ಕಾಲವೇಗದಿಂದ ಅವ್ಯಕ್ತವನ್ನೈದುವವು; ಅಶೇಷಸ್ವರೂಪವಾದ ಆ ಅವ್ಯಕ್ತದಲ್ಲಿ ಅಂತರ್ಯಾಮಿಯಾಗಿರುವ ನೀನೊಬ್ಬನೆ ಉಳಿದಿರುವೆ! ಎಲೈ ಪ್ರಕೃತಿ ಪ್ರೇರಕನಾದ ಸ್ವಾಮಿಯೆ, ಈ ಪ್ರಪಂಚದ ವ್ಯಾಪಾರವನ್ನೂ ನಿಮೇಷ ಮೊದಲುಗೊಂಡು ಸಂವತ್ಸರವೇ ಕಡೆಯಾಗುಳ್ಳ ಮಹತ್ತಾದ ಕಾಲವ್ಯಾಪಾರವನ್ನೂ ನಿನ್ನ ವ್ಯಾಪಾರವೆಂದು ಹೇಳುವರು; ಕ್ಷೇಮಪ್ರದನಾಗಿ ಈಶ್ವರನಾದ ಅಂಥಾ ನಿನ್ನನ್ನು ಶರಣುಹೊಂದುತ್ತೇನೆ! ಎಲೈ ಆದಿಪುರುಷನಾದ ಶ್ರೀಹರಿಯೆ, ಮನುಷ್ಯನು ಮೃತ್ಯುವೆಂಬ ಸರ್ಪದಿಂದ ಭೀತನಾಗಿ ಪಲಾಯನವನ್ನೈದಿ ಲೋಕಗಳೆಲ್ಲಾ ತಿರುಗುತ ಎಲ್ಲಿಯೂ ಅಭಯವನ್ನು ಕಾಣದೆ ವಿಶ್ರಾಂತನಾಗಿ ಪೂರ್ವಜನ್ಮದಲ್ಲಿ ಸಂಪಾದಿಸಿದ ಸುಕೃತ ವಿಶೇಷದಿಂದ ನಿನ್ನ ಚರಣಾರವಿಂದ

ವನ್ನೈದಿ ಸ್ವಸ್ಥನಾಗಿ ಸುಖವನ್ನೈದಿ ಮೃತ್ಯುಭಯವಿಲ್ಲದಿರುವವನು ; ನೀನು ಭೃತ್ಯರಭಯವನ್ನು ಪರಿಹರಿಸುವವನಾದ್ದರಿಂದ ಉಗ್ರಸೇನನ ಪುತ್ರನಾಗಿ ಘೋರರೂಪನಾದ ಕಂಸನ ದೆಸೆಯಿಂದ ಭಯವನ್ನೈದಿರುವ ನನ್ನನ್ನು ಪರಿಪಾಲಿಸು ! ಭಕ್ತರಿಗೆ ಧ್ಯಾನಂಗೈಯಲು ಯೋಗ್ಯವಾಗಿ ಈಶ್ವರ ಸಂಬಂಧವಾದ ಈ ನಿನ್ನ ರೂಪವನ್ನು ನಮ್ಮಂಥಾ ಪ್ರಾಕೃತ ಚಕ್ಷುಸ್ಸುಳ್ಳವರಿಗೆ ಪ್ರತ್ಯಕ್ಷವಾಗಿ ತೋರಿಸಬಹುದೇ ! ಎಲೈ ಶ್ರೀ ಮಧುಸೂಧನನೆ, ನಾನು ಅಧೈರ್ಯ ಚಿತ್ತವುಳ್ಳವಳಾದಕಾರಣ ನಿನ್ನ ನಿಮಿತ್ತವಾಗಿ ಕಂಸನಿಗೆ ಭಯಪಡುತ್ತೇನೆ ; ಪಾಪಿಷ್ಠನಾದ ಕಂಸನು ನನ್ನಲ್ಲಿ ನೀನು ಅವತರಿಸಿದ್ದನ್ನು ಹ್ಯಾಗೆ ತಿಳಿಯದಿರುವನೊ ಹಾಗೆ ಮಾಡು ! ಎಲೈ ಸರ್ವಾತ್ಮನಾದ ಶ್ರೀಹರಿಯೆ, ಶಂಖ ಚಕ್ರ, ಗದಾಪದ್ಮಗಳ ಪ್ರಭೆಯಿಂದ ಯುಕ್ತಗಳಾದ ಚತುರ್ಭುಜಗಳುಳ್ಳದ್ದಾಗಿ ಲೋಕಸಾಧಾರಣವಲ್ಲದ ಈ ದಿವ್ಯ ಮಂಗಳರೂಪವನ್ನು ಅಗೋಚರವಾಗಿ ಮಾಡು ; ಇಂಥಾ ದಿವ್ಯರೂಪವುಳ್ಳ ಪುತ್ರನಾದ ನಿನ್ನಿಂದ ನನಗೆ ಮಹಾ ಶ್ಲಾಘ್ಯತೆಯುಂಟಾಗುವದು ! ಎಲೈ ಸ್ವಾಮಿಯೆ, ಪ್ರಳಯಕಾಲದಲ್ಲಿ ಪರಮಪುರುಷನಾದ ನೀನು ನಿನ್ನ ಉದರದೊಳಗೆ ಈ ಸಮಸ್ತ ಲೋಕಗಳನ್ನೂ ಸ್ಥಳ ಸಂಕೋಚವಿಲ್ಲದೆ ಧರಿಸುತ್ತೀ ! ಅಂಥಾ ನೀನು ನನ್ನ ಗರ್ಭದಲ್ಲಿ ಅವತರಿಸಿದ್ದು ಅತಿ ಆಶ್ಚರ್ಯಕರವಾಗಿದೆ” ಎಂದು ವಿಜ್ಞಾಪಿಸಿದಳು.

ಆ ಬಳಿಕ ಆ ಕುಮಾರನು ಆ ದೇವಿಯನ್ನು ಕುರಿತು “ಎಲೈ ತಾಯಾದ ದೇವಕೀದೇವಿಯೆ, ಸ್ವಾಯಂಭುವ ಮನ್ವಂತರದಲ್ಲಿ ನೀನು ಪೃಶ್ನಿಯೆಂಬ ನಾಮಧೇಯವುಳ್ಳ ಸ್ತ್ರೀಯಾಗಿದ್ದೆ ; ಆ ಕಾಲದಲ್ಲಿ ವಸುದೇವನು ನಿಷ್ಕಲ್ಮಷನಾದ ಸುತಪಸ್ಸು ಎಂಬ ನಾಮಧೇಯವುಳ್ಳ ಮನುವಾಗಿದ್ದನು ; ನೀವು ಪ್ರಜಾಸೃಷ್ಟಿಯನ್ನು ಮಾಡಬೇಕೆಂದು ಬ್ರಹ್ಮದೇವನಿಂದ ಆಜ್ಞಾಪಿಸಲ್ಪಟ್ಟವರಾಗಿ ಇಂದ್ರಿಯಗಳನ್ನು ನಿಗ್ರಹಿಸಿ ಸರ್ವೋತ್ಕೃಷ್ಟವಾದ ತಪಸ್ಸನ್ನು ಮಾಡಿದಿರಿ ; ಮತ್ತು ಆಯಾ ಋತುಗಳಲ್ಲುಂಟಾಗುವ ಮಳೆಯನ್ನೂ ಗಾಳಿಯನ್ನೂ ಬಿಸಿಲನ್ನೂ ಹಿಮವನ್ನೂ ಸಹಿಸಿಕೊಂಡು ಯೋಗಧಾರಣೆಯಿಂದ ಪ್ರಾಣವಾಯುಗಳನ್ನು ನಿರೋಧಿಸಿ ಮನಶ್ಚಾಂಚಲ್ಯಾದಿ ದೋಷಗಳಿಲ್ಲದವರಾಗಿ ವೃಕ್ಷಗಳ ಕೆಳಗೆ ಉದುರಿದ ಎಲೆಗಳನ್ನೂ ವಾಯುವನ್ನೂ ಆಹಾರಮಾಡುತ ಉಪಶಾಂತವಾದ ಚಿತ್ತದಿಂದ ನನ್ನ ದೆಸೆಯಿಂದ ಇಷ್ಟಾರ್ಥಗಳನ್ನಪೇಕ್ಷಿಸುತ ನನ್ನ ಸೇವೆಯನ್ನು ಮಾಡುತ್ತಿದ್ದಿರಿ ! ಎಲೌ ಮಂಗಳಕರಳಾದ ದೇವಕೀದೇವಿಯೆ, ನನ್ನಲ್ಲಿ ಚಿತ್ತವನ್ನರ್ಪಿಸಿ ಈ ರೀತಿಯಲ್ಲಿ ಅತ್ಯಂತ ದುಷ್ಕರವಾದ ತಪಸ್ಸನ್ನು ಮಾಡುತಿದ್ದ ನಿಮ್ಮಿಬ್ಬರಿಗೂ ದೇವಮಾನದಲ್ಲಿ ಹನ್ನೆರಡುಸಾವಿರ ವರುಷಗಳು ಸಂದವು ; ಅನಂತರದಲ್ಲಿ ನಿರಂತರವೂ ನಿಮ್ಮ ಹೃದಯದಲ್ಲಿ ಧ್ಯಾನವನ್ನು ಮಾಡಲ್ಪಟ್ಟ ನಾನು ನಿಮ್ಮ ತಪಸ್ಸಿನಿಂದಲೂ ಭಕ್ತಿ ಶ್ರದ್ಧೆಗಳಿಂದಲೂ ಸಂತುಷ್ಟನಾಗಿ ಈ ದೇಹದಿಂದಲೇ ಪ್ರತ್ಯಕ್ಷವಾಗಿ ನಿಮ್ಮಿಬ್ಬರ ಇಷ್ಟಾರ್ಥಗಳನ್ನು ಕೊಡುವದಕ್ಕುದ್ಯುಕ್ತನಾಗಿ ನಿಮಗೆ ಯಾವ ವರವು ಅಪೇಕ್ಷಿತವೆಂದು ಕೇಳಿದೆನು ; ನೀವು ನನಗೆ ಸಮಾನವಾದ ಪುತ್ರನುಂಟಾಗಬೇಕೆಂದು ಬೇಡಿದಿರಿ ; ಪ್ರಾಕೃತ ಜನರಿಗೆ ಯೋಗ್ಯಗಳಾದ ವಿಷಯಭೋಗಗಳನ್ನನುಭವಿಸದೆಯೂ ಪುತ್ರವಂತರಲ್ಲದೆಯೂ ತಪಸ್ಸು ಮಾಡುತ್ತಿದ್ದ ನೀವು ನನ್ನ ಮಾಯೆಯಿಂದ ಮೋಹಿತರಾಗಿ ಮೋಕ್ಷವನ್ನು ಪ್ರಾರ್ಥಿಸಲಿಲ್ಲ ; ನಾನು ಹಾಗೇ ಆಗಲೆಂದು ವರವನ್ನು ಕೊಟ್ಟು ಅಂತರ್ಧಾನವನ್ನೈದಿದೆನು ! ಅನಂತರದಲ್ಲಿ ನೀವು ನನಗೆ ಸಮಾನವಾದ ಪುತ್ರನನ್ನು ಪಡೆದು ಪೂರ್ಣಮನೋರಥರಾಗಿ ಪ್ರಾಕೃತ ಜನರಿಂದನುಭವಿಸಲು ಯೋಗ್ಯವಾದ ವಿಷಯಸುಖವನ್ನನುಭವಿಸಿದಿರಿ ; ಆಗ ಶೀಲದಿಂದಲೂ ಔದಾರ್ಯದಿಂದಲೂ ಸದ್ಗುಣಗಳಿಂದಲೂ ನನಗೆ ಸಮಾನನಾದ ಅನ್ಯನನ್ನು ಲೋಕದಲ್ಲಿ ಕಾಣದೆ ಪೃಶ್ನಿಗರ್ಭನೆಂಬ ನಾಮಧೇಯದಿಂದ ನಾನೇ ನಿಮಗೆ ಪುತ್ರನಾಗಿ ಜನಿಸಿದೆನು ! ಅನಂತರದಲ್ಲಿ ಸುತಪಸ್ಸು ಪೃಶ್ನಿದೇವಿಯರೆಂಬ ನೀವೀರ್ವರೂ ಕಶ್ಯಪಮುನಿ ಅದಿತಿದೇವಿಯರಾಗಿ ಹುಟ್ಟಿದಿರಿ ; ಆಗ ನಾನು ನಿಮ್ಮಲ್ಲಿ ಎರಡನೇವರ್ತಿ ಜನಿಸಿ ಉಪೇಂದ್ರದೇವನೆಂದೂ ಹ್ರಸ್ವರೂಪನಾದ್ದರಿಂದ ವಾಮನಮೂರ್ತಿಯೆಂದೂ ಪ್ರಸಿದ್ಧನಾದೆನು ! ಎಲೈ ಪತಿವ್ರತೆಯಾದ ದೇವಕೀದೇವಿಯೆ, ಈಗ ವಸುದೇವ ದೇವಕೀಯರಾದ ನಿಮಗೆ ನಾನು ನಿಜದೇಹದಿಂದ ಮೂರನೇವರ್ತಿ ಪುತ್ರನಾಗಿ ಅವತಾರಮಾಡಿದೆನು ; ನಿಮಗೆ ನನ್ನಿಂದ ಕೊಡಲ್ಪಟ್ಟ ವರವು ಯಥಾರ್ಥವಾಯಿತು ; ಪೂರ್ವಜನ್ಮಗಳ ಸ್ಮರಣೆಗೋಸ್ಕರವೂ ನಿಮಗೆ ನನ್ನ ಅವತಾರವು ತಿಳಿಯಲೋಸುಗವೂ ನನ್ನ ನಿಜರೂಪವು ನಿಮಗೆ ತೋರಿಸಲ್ಪಟ್ಟಿತು ; ತೋ

ರಿಸದಿದ್ದರೆ ನನ್ನ ಸ್ವರೂಪ ಪರಿಜ್ಞಾನವು ಮನುಷ್ಯದೇಹದಲ್ಲಿ ನಿಮಗುಂಟಾಗದು ! ಇನ್ನು ನಿಮ್ಮ ಇಚ್ಛಾನುಸಾರವಾಗಿ ಬಾಲಕನಾಗುತ್ತೇನೆ ; ಪುತ್ರಭಾವದಿಂದಲೂ ಬ್ರಹ್ಮಭಾವದಿಂದಲೂ ಬಾರಿಬಾರಿಗೂ ನೀವು ನನ್ನನ್ನು ಚಿಂತಿಸುವವರಾಗಿ ನನ್ನಲ್ಲಿ ಸ್ನೇಹವುಳ್ಳವರಾಗಿರುವದರಿಂದ ಮೋಕ್ಷಸ್ವರೂಪವಾದ ನನ್ನ ಪರಮಪದವನ್ನೈದುವಿರಿ !——ಎಲೈ ತಂದೆಯಾದ ವಸುದೇವನೆ, ಕಂಸನಿಗೆ ನೀನು ಭಯಪಟ್ಟರೆ ನನ್ನನ್ನು ನಂದಗೋಕುಲಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ನಂದಗೋಪನ ಪತ್ನಿಯಾದ ಯಶೋದಾದೇವಿಯ ಸಮೀಪದಲ್ಲಿರಿಸು ; ಆ ದೇವಿಯು ನನ್ನ ಯೋಗಮಾಯಾರೂಪಳಾದ ದುರ್ಗಾದೇವಿಯನ್ನು ಹೆತ್ತಿರುವಳು ; ಆ ಶಿಶುವನ್ನು ಇಲ್ಲಿಗೆ ತಂದು ಶೀಘ್ರವಾಗಿ ದೇವಕೀದೇವಿಯ ಸಮೀಪದಲ್ಲಿರಿಸು ; ಈ ಬಾಗಲುಗಳೆಲ್ಲವು ತಾವೇ ತೆರೆಕೊಂಡು ನನಗೆ ಮಾರ್ಗವನ್ನು ಕೊಡುವವು ; ದಾಟಲಶಕ್ಯವಾದ ಯಮುನಾನದಿಯೂ ನನ್ನನ್ನು ಕರೆದುಕೊಂಡು ಹೋಗುವ ನಿನ್ನನ್ನು ನೋಡಿ ಶೀಘ್ರವಾಗಿ ಮಾರ್ಗವನ್ನು ಕೊಡುವದು " ಎಂದು ನುಡಿದು ತಾಯಿ ತಂದೆಗಳು ನೋಡುತಿದ್ದಾಗಲೇ ಒಂದು ಕ್ಷಣಮಾತ್ರದಲ್ಲೆ ತನ್ನ ಮಾಯೆಯಿಂದ ಪ್ರಾಕೃತ ಶಿಶುವಾದನು !

ಅನಂತರದಲ್ಲಿ ವಸುದೇವನು ಪ್ರಸೂತಿಗೃಹದಿಂದ ಆ ಪುತ್ರನನ್ನು ತೆಗೆದುಕೊಂಡು ಹೊರಗೆ ಹೊರಡಲಪೇಕ್ಷಿಸಿದ ಸಮಯದಲ್ಲಿ ಉತ್ಪತ್ತಿ ರಹಿತಳಾದ ಯೋಗಮಾಯೆಯು ನಂದನಪತ್ನಿಯಾಗಿ ನಿಮಿತ್ತಮಾತ್ರಳಾದ ಯಶೋದಾದೇವಿಯಲ್ಲಿ ಉತ್ಪನ್ನಳಾದಳು ! ಮತ್ತು ಆ ಭಗವಂತನ ಯೋಗಮಾಯಾಶಕ್ತಿಯಿಂದಲೆ ಮೋಹಿತರಾದ ಮನಸ್ಸು ಮೊದಲಾದ ಸರ್ವೇಂದ್ರಿಯ ವೃತ್ತಿಗಳುಳ್ಳ ದ್ವಾರಪಾಲಕರೂ ಮಥುರಾಪಟ್ಟಣದಲ್ಲಿದ್ದ ಜನರೂ ನಿದ್ರಾಪರವಶರಾಗಿರಲು ಲೋಹಗಳ ಕೀಲುಗಳಿಂದ ಯುಕ್ತವಾದ ಸರಪಣಿಗಳಿಂದ ದಾಟಲಶಕ್ಯವಾಗಿ ಮುಚ್ಚಲ್ಪಟ್ಟದ್ದ ಸಮಸ್ತ ಬಾಗಲುಗಳೂ ಶ್ರೀ ಕೃಷ್ಣದೇವನನ್ನು ತೆಗೆದುಕೊಂಡು ವಸುದೇವನು ಬಂದ ಕ್ಷಣದಲ್ಲೇ ಸೂರ್ಯನ ದೆಸೆಯಿಂದ ಅಂಧಕಾರಗಳು ತೊಲಗುವ ರೀತಿಯಲ್ಲಿ ತಾವೆ ತೊಲಗಿದವು! ಆ ಸಮಯಲ್ಲಿ ಮೇಘವು ಮೆಲ್ಲಮೆಲ್ಲನೆ ಗರ್ಜಿಸುತ ವರ್ಷಿಸಿತು ಆದಿಶೇಷನು ತನ್ನ ಹೆಡೆಗಳಿಂದ ಆ ಮಳೆಯ ನೀರನ್ನು ಛತ್ರದಂತೆ ಪರಿಹರಿಸುತ ವಸುದೇವನ ಸಂಗಡಲೆ ಅನುಸರಿಸಿ ನಡೆದನು ; ಆಗ ಇಂದ್ರನು ಅಧಿಕವಾಗಿ ವೃಷ್ಟಿಯನ್ನು ಕರೆಯುತ್ತಿರಲು ಯಮದೇವನ ಸಹೋದರಿಯಾದ ಯಮುನಾನದಿಯು ಅಗಾಧವಾದ ಉದಕಪ್ರವಾಹದಿಂದ ಅತ್ಯಂತ ವೇಗವೂ ತೆರೆಗಳೂ ನೊರೆಗಳೂ ಉಳ್ಳದ್ದಾಗಿ ಭಯಂಕರಗಳಾದ ಸುಳಿ ಸಹಸ್ರಗಳಿಂದ ಭೀಷಣವಾಗಿದ್ದಾಗ್ಯೂ ಸೀತಾಪತಿಯಾದ ಶ್ರೀರಾಮಚಂದ್ರನಿಗೆ ಸೇತುಬಂಧನ ಸಮಯದಲ್ಲಿ ಸಮುದ್ರವು ಮಾರ್ಗವನ್ನಿತ್ತಂತೆ ದಾರಿಯನ್ನು ಕೊಟ್ಟಿತು ; ಅನಂತರದಲ್ಲಿ ವಸುದೇವನು ನಂದಗೋಕುಲವನ್ನು ಸೇರಿ ಅಲ್ಲಿದ್ದ ಗೋಪಾಲಕರು ಯೋಗಮಾಯಾದೇವಿಯ ಪ್ರಭಾವದಿಂದ ಸುಷುಪ್ತಿಯೈದಿದ್ದದ್ದನ್ನು ತಿಳಿದು ತನ್ನ ಸುತನಾದ ಶ್ರೀಹರಿಯನ್ನು ಯಶೋದಾದೇವಿಯ ಹಾಸಿಗೆಯಲ್ಲಿ ಮಲಗಿಸಿ ಆ ದೇವಿಯ ಹೆಣ್ಣುಶಿಶುವನ್ನು ತೆಗೆದುಕೊಂಡು ಮಥುರಾಪಟ್ಟಣದಲ್ಲಿದ್ದ ತನ್ನ ಗೃಹವನ್ನು ಕುರಿತು ತಿರಿಗಿ ಬಂದು ಆ ಹೆಣ್ಣು ಶಿಶುವನ್ನು ದೇವಕಿದೇವಿಯ ಹಾಸಿಗೆಯಲ್ಲಿ ಮಲಗಿಸಿ ತನ್ನ ಕಾಲುಗಳಲ್ಲಿ ಯಥಾಪ್ರಕಾರವಾಗಿ ಸಂಕೋಲೆಗಳನ್ನು ಧರಿಸಿಕೊಂಡನು ! ಅಲ್ಲಿ ನಂದಗೋಪನ ಪತ್ನಿಯಾದ ಯಶೋದಾದೇವಿಯು ಯೋಗನಿದ್ರಾದೇವಿಯಿಂದ ಅಪಹರಿಸಲ್ಪಟ್ಟ ಸ್ಮೃತಿಯುಳ್ಳವಳಾಗಿ ಪ್ರಸೂತಿಯಿಂದ ಬಳಲಿದವಳಾಗಿ ತನಗೆ ಜನಿಸಿದ ಶಿಶುವು ಹೆಣ್ಣೋ—ಗಂಡೋ ಎಂಬದನ್ನು ಸಹಾ ಅರಿಯದಿದ್ದಳು.

---

## ೪ನೇ ಅಧ್ಯಾಯ.

### ಕಂಸನು ದೇವಕೀವಸುದೇವರನ್ನು ಸೆರೆಬಿಡಿಸಿದ್ದು.

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ವಸುದೇವ ದೇವಕೀದೇವಿಯರ ಗೃಹದ ಬಾಗಲುಗಳೂ ಮಥುರಾ ಪಟ್ಟಣದ ಸಮಸ್ತ ದ್ವಾರಗಳೂ ಪೂರ್ವದಂತೆ ಮುಚ್ಚಲ್ಪಟ್ಟವು ; ಆಗ ಗೃಹಪಾಲಕರು ಆ ಶಿಶುವಿನ ರೋದನ ಧ್ವನಿಯನ್ನು

ಕೇಳಿ ನಿದ್ರೆಯಿಂದೆದ್ದು ಜಾಗ್ರತೆಯಾಗಿ ಹೋಗಿ ಆತನು ಕಂಸನಿಗೆ ಯಾವ ಅಷ್ಟಮಗರ್ಭದ ದೆಶೆಯಿಂದ ಭಯಪಡುತ ಪ್ರಸವಕಾಲವನ್ನು ಪ್ರತೀಕ್ಷಿಸುತಿದ್ದನೋ ಅಂಥಾ ಅಷ್ಟಮಗರ್ಭದ ಉತ್ಪತ್ತಿಯನ್ನು ಹೇಳಿದರು ; ಕಂಸನು ಆ ಗರ್ಭೋತ್ಪತ್ತಿಯನ್ನು ಕೇಳಿ ಆ ಗರ್ಭವೇ ತನಗೆ ಮೃತ್ಯುವೆಂದು ಪರವಶನಾಗಿ ಹಾಸಿಗೆಯಿಂದೆದ್ದು ಕೇಶಗಳನ್ನು ಕೆದರಿಕೊಂಡು ಮಾರ್ಗದಲ್ಲಿ ಎಡವುತ ತ್ವರೆಯಿಂದ ದೇವಕೀದೇವಿಯ ಸೂತಿಕಾಗೃಹವನ್ನು ಹೊಕ್ಕನು ; ಅತಿ ಕೃಪಣೆಯಾಗಿ ಪತಿವ್ರತೆಯಾದ ದೇವಕೀದೇವಿಯು ಭ್ರಾತೃವಾದ ಕಂಸನನ್ನು ಕುರಿತು "ಎಲೈ ಮಂಗಳರೂಪನಾದ ಕಂಸನೆ, ನಿನಗೆ ಸೋದರ ಸೊಸೆಯಾದ ಈ ಶಿಶುವು ಸಂಹಾರಕ್ಕೆ ಯೋಗ್ಯವಾದ್ದಲ್ಲ ! ಎಲೈ ಭ್ರಾತೃವಾದ ಕಂಸನೆ, ಅಗ್ನಿಗೆ ಸಮಾನವಾದ ಬಹು ಶಿಶುಗಳು ದೈವದಿಂದ ಪ್ರೇರಿಸಲ್ಪಟ್ಟ ನಿನ್ನಿಂದ ಸಂಹರಿಸಲ್ಪಟ್ಟವು ; ಈ ಒಬ್ಬ ಮಗಳನ್ನಾದರೂ ನನಗೋಸ್ಕರ ದಯೆಯಿಂದ ಬಿಟ್ಟುಕೊಡು ! ಎಲೈ ಪ್ರಭುವಾದ ಕಂಸನೆ, ನಾನು ನಿನಗೆ ಒಡಹುಟ್ಟಿದವಳು ; ನಷ್ಟರಾದ ಪುತ್ರರುಳ್ಳವಳು ; ಮತ್ತು ದೈನ್ಯವನ್ನೈದಿದವಳು ; ಆದ್ದರಿಂದ ಎಲೈ ಅಣ್ಣನೆ, ಮಂದಭಾಗ್ಯಳಾದ ನನಗೆ ಕಡೆಯಲ್ಲಿ ಹುಟ್ಟಿದ ಈ ಪುತ್ರಿಯನ್ನಾದರೂ ಉಳಿಸು" ಅಂದಳು.

ಈ ರೀತಿಯಲ್ಲಿ ತನ್ನ ಶಿಶುವನ್ನಪ್ಪಿಕೊಂಡು ಅತಿ ದೈನ್ಯದಿಂದ ರೋದನ ಮಾಡುತ ದೇವಕೀದೇವಿಯು ಯಾಚಿಸುತ್ತಿದ್ದರೂ ದುಷ್ಟನಾದ ಕಂಸನು ದೇವಕೀದೇವಿಯನ್ನು ಬೆದರಿಸಿ ಬಲತ್ಕಾರದಿಂದ ಆ ಶಿಶುವನ್ನು ಸೆಳೆದೆತ್ತಿಕೊಂಡು ತಾನು ಜೀವಿಸುವದಕ್ಕೋಸ್ಕರ ಬಂಧುಗಳನ್ನೂ ಪರಿತ್ಯಾಗ ಮಾಡಿ ತನ್ನ ತಂಗಿಗೆ ಆಗತಾನೇ ಹುಟ್ಟಿದ ಆ ಸ್ತ್ರೀಶಿಶುವನ್ನು ಕಾಲುಗಳಿಂದಿಡಿದು ಅರೆಕಲ್ಲಿನಮೇಲೆ ಒಗೆದನು; ಆಗ ಶ್ರೀಕೃಷ್ಣನಿಗೆ ತಂಗಿಯಾದ ಆ ಸ್ತ್ರೀಶಿಶುವು ಕಂಸನ ಕೈಯಿಂದ ಬಿಡಿಸಿಕೊಂಡು ಆಕಾಶದಲ್ಲಿ ಆಯುಧ ಸಮೇತಗಳಾದ ಅಷ್ಟ ಭುಜಗಳುಳ್ಳ ಸಾಕ್ಷಾತ್ ದುರ್ಗಾದೇವಿಯಾಗಿ ಕಾಣಿಸಿಕೊಂಡಳು ; ದಿವ್ಯಗಳಾದ ಮಾಲಿಕೆಗಳಿಂದಲೂ ವಸ್ತ್ರಗಳಿಂದಲೂ ಅನುಲೇಪನಗಳಿಂದಲೂ ಅಲಂಕೃತಳಾಗಿ ಧನುಸ್ಸನ್ನೂ ಶೂಲವನ್ನೂ ಬಾಣಗಳನ್ನೂ ಗುರಾಣಿಯನ್ನೂ ಖಡ್ಗವನ್ನೂ ಚಕ್ರವನ್ನೂ ಶಂಖವನ್ನೂ ಗದೆಯನ್ನೂ ಸಹಾ ಧರಿಸಿಕೊಂಡು ನಾನಾವಿಧವಾದ ಕೈಕಾಣಿಕೆಗಳನ್ನು ಸಮರ್ಪಿಸುತಲಿದ್ದ ಸಿದ್ಧರಿಂದಲೂ ಚಾರಣರಿಂದಲೂ ಗಂಧರ್ವರಿಂದಲೂ ಅಪ್ಸರಸ್ತ್ರೀಯರಿಂದಲೂ ನಾಗರಿಂದಲೂ ಕಿನ್ನರರಿಂದಲೂ ಸಹಾ ಸ್ತುತಿಸಲ್ಪಡುತಿದ್ದ ಆ ದೇವಿಯು ಕಂಸನನ್ನು ಕುರಿತು "ಎಲೇ ಮೂಢನಾದ ಕಂಸನೆ, ನನ್ನನ್ನು ಸಂಹರಿಸಿ ನಿನಗೆ ಉಂಟಾಗುವ ಫಲವೇನು ? ಒಂದು ಸ್ಥಾನದಲ್ಲಿ ನಿನ್ನ ಪೂರ್ವಜನ್ಮ ಶತೃವು ನಿನ್ನನ್ನು ಸಂಹಾರ ಮಾಡುವದಕ್ಕಾಗಿ ಹುಟ್ಟಿಧಾನೆ ; ಹಾಗಿರುವಲ್ಲಿ ಕೃಪಣರಾದ ಅನ್ಯರ ಶಿಶುಗಳನ್ನು ವೃರ್ಥವಾಗಿ ನೀನು ಸಂಹರಿಸಬೇಡ" ಎಂದು ನುಡಿದಳು.

ಎಲೈ ರಾಯನೆ, ಈ ರೀತಿಯಲ್ಲಿ ಜ್ಞಾನಾದಿ ಗುಣಸಂಪನ್ನೆಯಾದ ಆ ಮಾಯಾದೇವಿಯು ಕಂಸನನ್ನು ಕುರಿತು ನುಡಿದು ಭೂಮಿಯಲ್ಲಿ ಕಾಶೀ ಮೊದಲಾದ ಅನೇಕ ಸ್ಥಾನಗಳಲ್ಲಿ ಅನೇಕ ನಾಮಧೇಯಗಳುಳ್ಳವಳಾಗಿ ನೆಲೆಸಿದಳು ! ಅನಂತರದಲ್ಲಿ ಕಂಸನು ಆ ದೇವಿಯಿಂದ ಹೇಳಲ್ಪಟ್ಟ ವಾಕ್ಯವನ್ನು ಕೇಳಿ ಪೂರ್ವದಲ್ಲಿ ನುಡಿಯಲ್ಪಟ್ಟ ಅಶರೀರವಾಕ್ಯವೂ ಅನೃತವಾಯಿತೆಂದು ಅತ್ಯಂತ ಆಶ್ಚರ್ಯವನ್ನೈದಿ ದೇವಕೀದೇವಿಯನ್ನೂ ವಸುದೇವನನ್ನೂ ಬಂಧನದಿಂದ ಬಿಡಿಸಿ ಅವರನ್ನು ಕುರಿತು ವಿನಯಯುಕ್ತನಾಗಿ "ಎಲೌ ತಂಗಿಯಾದ ದೇವಕಿದೇವಿಯೆ, ಎಲೈ ಭಾವನಾದ ವಸುದೇವನೆ, ಪಾಪಿಷ್ಠನಾದ ನಾನು ರಾಕ್ಷಸರು ತಮ್ಮ ಪುತ್ರರನ್ನೇ ಸಂಹರಿಸುವಂತೆ ನಿಮ್ಮ ಮಕ್ಕಳಾದ ಬಹುಮಂದಿಯನ್ನು ಸಂಹರಿಸಿದೆನು ; ಆದ್ದರಿಂದ ದಯಾಶೂನ್ಯನಾಗಿ ಲಜ್ಜಾರಹಿತನಾಗಿ ಪರಪ್ರಾಣಾಪಹಾರಿಯಾಗಿ ದುಷ್ಟನಾಗಿ ಜೀವಂತನಾದಾಗ್ಯೂ ಮೃತಪ್ರಾಯನಾದ ನಾನು ಬ್ರಹ್ಮಹತ್ಯವನ್ನು ಮಾಡಿದವನಂತೆ ಯಾವ ಲೋಕವನ್ನೈದುವೆನೊ ತಿಳಿಯದು ! ಲೋಕದಲ್ಲಿ ಮನುಷ್ಯರು ಮಾತ್ರವೆ ಅನೃತವನ್ನು ಹೇಳುವರೆಂದಿದ್ದೆನು ; ದೈವವೂ ಅನೃತವನ್ನು ಹೇಳುತ್ತದೆಂಬ ಅರ್ಥವು ಈಗ ತಿಳಿಯಲ್ಪಟ್ಟಿತು ; ದೈವವು ಅನೃತವನ್ನು ನುಡಿಯುವದಿಲ್ಲವೆಂಬ ನಂಬಿಕೆಯಿಂದ ಪಾಪಿಷ್ಠನಾದ ನಾನು ತಂಗಿಯ ಶಿಶುಗಳನ್ನು ವೃರ್ಥವಾಗಿ ಸಂಹರಿಸಿದೆನು ! ಎಲೈ ವಸುದೇವನೆ, ಎಲೌ ತಂಗಿಯೆ, ಮಹಾತ್ಮರಾದ ನೀವು ತಮ್ಮ ಪ್ರಾರಬ್ಧಫಲಗಳನ್ನನುಭವಿಸುವ ಆ ಪುತ್ರರನ್ನು ಕುರಿತು ಶೋಕವನ್ನೈ

ದಬೇಡೀ ; ಪ್ರಾಣಿಗಳು ತಮ್ಮತಮ್ಮ ಅದೃಷ್ಟಾಧೀನರಾದ ಕಾರಣ ಸ್ವಲ್ಪಕಾಲವಿರುವರೇ ಹೊರತು ಸರ್ವದಾ ಇರರು ; ಸ್ವಲ್ಪಕಾಲ ಜೀವಿಸುವರಾಗ್ಯೆ ಪರಸ್ಪರ ವಿಯೋಗವನ್ನು ಪಡೆಯುವರಲ್ಲದೆ ಒಂದು ಬಳಿಯಲ್ಲೇ ಇರರು ; ಪ್ರಾಣಿಗಳಿಗೆ ಜನನ ಮರಣಗಳು ನಿಯತಗಳು ; ಅವು ದೇಹಗಳಿಗೆ ಹೊರತು ಆತ್ಮನಿಗಿಲ್ಲ ; ಭೂವಿಕಾರಂಗಳಾದ ಘಟಪಟಾದಿ ವಸ್ತುಗಳು ಉತ್ಪನ್ನಗಳಾಗಿ ನಷ್ಟವಾದರೂ ಅವಕ್ಕೆ ಕಾರಣವಾದ ಭೂಮಿಗೆ ಉತ್ಪತ್ತಿವಿನಾಶಗಳಿಲ್ಲ ; ಅದೇ ರೀತಿಯಲ್ಲಿ ಪಂಚಭೂತ ವಿಕಾರಗಳಾದ ದೇಹಗಳು ಉತ್ಪನ್ನವಾಗಿ ನಷ್ಟವಾಗುವವೇ ಹೊರತು ಆತ್ಮನಿಗೆ ಉತ್ಪತ್ತಿ ವಿನಾಶಗಳಿಲ್ಲ ; ಈ ತತ್ವವನನ್ನರಿಯದಿರುವ ಮೂಢನಿಗೆ ದೇಹದಲ್ಲಿ ತಾನೆಂಬ ಬುದ್ಧಿ ಭೇದಭ್ರಾಂತಿಯುಂಟಾಗುವದು ; ಆ ಭೇದಜ್ಞಾನದಿಂದ ಪುತ್ರಾದಿ ದೇಹಗಳೊಡನೆ ಸಂಯೋಗ ವಿಯೋಗಗಳುಂಟಾಗುವವು ; ಅವುಗಳಿಂದ ಸುಖ ದುಃಖರೂಪವಾದ ಸಂಸಾರವುಂಟಾಗುವದು ; ಎದುವರೆಗೂ ಅಜ್ಞಾನವುಂಟಾಗಿರುವದೋ ಅದುವರೆಗೂ ಸಂಸಾರವು ಪರಿಹಾರವಾಗುವದಿಲ್ಲ ! ಎಲೌ ಶುಭಕರಳಾದ ದೇವಕೀದೇವಿಯೆ, ನನ್ನಿಂದ ಸಂಹರಿಸಲ್ಪಟ್ಟ ನಿನ್ನ ಪುತ್ರರನ್ನು ಕುರಿತು ನೀನು ಶೋಕಪಡಬೇಡ ; ಸರ್ವಪ್ರಾಣಿಗಳೂ ತಮ್ಮಿಂದ ಮಾಡಲ್ಪಟ್ಟ ಕರ್ಮಫಲವನ್ನು ಅವಶ್ಯವಾಗಿ ಅನುಭವಿಸುವವು ; ಒಬ್ಬರಿಂದ ಮತ್ತೊಬ್ಬರಿಗೆ ಕಷ್ಟವಾದರೂ ಸುಖವಾದರೂ ಬರುವದೆಂಬದು ಅಜ್ಞಾನವು ; ದೇಹವೇ ತಾನೆಂಬ ದುರಭಿಮಾನವುಳ್ಳ ಪುರುಷನು ಅನ್ಯರನ್ನು ತಾನು ಸಂಹರಿಸುವದಾಗಿಯೂ ತನ್ನನ್ನು ಅನ್ಯರು ಸಂಹರಿಸುವದಾಗಿಯೂ ತಿಳಿಯುತ ಆ ದೇಹಾಭಿಮಾನದಿಂದ ಒಬ್ಬರಿಂದ ತಾನು ಬಾಧಿಸಲ್ಪಡುತಲೂ ಒಬ್ಬರನ್ನು ತಾನು ಬಾಧಿಸುತಲೂ ಇರುವನು ; ದೇಹಾಭಿಮಾನವಿಲ್ಲದ ಜ್ಞಾನಿಗಳಿಗೆ ಬಾಧಿಸಲ್ಪಡುವದು ಬಾಧಿಸುವದು ಎಂಬ ಕ್ರಿಯೆಗಳಿಲ್ಲ! ಆದಕಾರಣ ಬಂಧುವಾದ ನನ್ನಲ್ಲಿ ವಾತ್ಸಲ್ಯವುಳ್ಳ ಸಾಧುಗಳಾದ ನೀವು ನನ್ನ ದುಷ್ಟಕೃತ್ಯವನ್ನು ಕ್ಷಮಿಸಬೇಕು'' ಎಂದು ನುಡಿದು ಸ್ರವಿಸುತಲಿರುವ ನೇತ್ರಗಳುಳ್ಳವನಾಗಿ ಭಾವನಾದ ವಸುದೇವನ ಮತ್ತು ತಂಗಿಯಾದ ದೇವಕೀದೇವಿಯ ಚರಣಗಳನ್ನು ಹಿಡಿದುಕೊಂಡು ಸಮಾಧಾನಹೇಳಿದನು !

ಎಲೈ ಪರೀಕ್ಷಿದ್ರಾಯನೆ, ಈ ರೀತಿಯಲ್ಲಿ ಕಂಸನು ದೇವಕೀವಸುದೇವರನ್ನು ಸಮಾಧಾನಪಡಿಸಿ ಪ್ರಿಯವಾಕ್ಯಗಳಿಂದ ಸ್ನೇಹವನ್ನು ತೋರಿಸುತ ಕನ್ಯಾರೂಪಳಾದ ದುರ್ಗಾದೇವಿಯ ವಾಕ್ಯದಲ್ಲಿ ವಿಶ್ವಾಸಮಾಡುತ ಅವರ ಸಂಕೋಲೆಗಳನ್ನು ತೆಗೆಸಿ ಬಂಧನದಿಂದ ಬಿಡಿಸಿದನು ! ದೇವಕೀದೇವಿಯು ಪಶ್ಚಾತ್ತಾಪದಿಂದ ಖಿನ್ನನಾದ ಕಂಸನ ಅಪರಾಧವನ್ನು ಕ್ಷಮಿಸಿದಳು ; ಅದೇ ರೀತಿಯಲ್ಲಿ ವಸುದೇವನೂ ರೋಷವನ್ನು ಬಿಟ್ಟು ಮುಗುಳುನಗೆಯುಳ್ಳವನಾಗಿ ಕಂಸನನ್ನು ಕುರಿತು ''ಎಲೈ ಮಹಾರಾಜನಾದ ಕಂಸನೆ, ನೀನು ಹೇಳಿದ ಅರ್ಥವು ಸರಿ ; ಅಜ್ಞಾನಜನ್ಯವಾದ ಅಹಂಕಾರವು ಪ್ರಾಣಿಗಳಿಗೆ ಪರಸ್ಪರವಾಗಿ ತಾನು—ಅನ್ಯರು ಎಂಬ ಭೇದವನ್ನುಂಟುಮಾಡುವದು ; ದೇಹಾಹಂಭಾವದಿಂದ ಭೇದದೃಷ್ಟಿಯುಳ್ಳ ಪುರುಷರು ಶೋಕದಿಂದಲೂ ಸಂತೋಷದಿಂದಲೂ ಭಯದಿಂದಲೂ ದ್ವೇಷದಿಂದಲೂ ಲೋಭದಿಂದಲೂ ಮೋಹದಿಂದಲೂ ಮದದಿಂದಲೂ ಯುಕ್ತರಾಗಿ ಅಹಂಕಾರೋಪಾದಿಯಿಂದ ಪರಸ್ಪರವಾಗಿ ಪ್ರಾಣಿಗಳನ್ನು ಸಂಹರಿಸುವ ಪರಮೇಶ್ವರನನ್ನು ಕಾಣದೆ ತಾವೇ ಸಂಹರಿಸುವದಾಗಿಯೂ ಅನ್ಯರು ತಮ್ಮನ್ನು ಸಂಹರಿಸುವದಾಗಿಯೂ ತಿಳಿಯುವರು'' ಎಂದು ನುಡಿದನು.

ಅನಂತರದಲ್ಲಿ ಕಂಸನು ಪ್ರಸನ್ನರಾದ ದೇವಕೀವಸುದೇವರಿಂದ ವಿಶ್ವಾಸವುಂಟಾಗುವಂತೆ ಪ್ರತ್ಯುತ್ತರ ನುಡಿಯಲ್ಪಟ್ಟವನಾಗಿ ಅವರ ಅನುಜ್ಞೆಗೊಂಡು ತನ್ನ ಗೃಹವನ್ನು ಸೇರಿ ಆ ರಾತ್ರಿಯನ್ನು ಕಳೆದು ಮಾರನೇ ದಿವಸ ತನ್ನ ಮಂತ್ರಿಗಳನ್ನು ಕರೆಸಿ ಯೋಗನಿದ್ರಾದೇವಿಯಿಂದ ಹೇಳಲ್ಪಟ್ಟ ವಚನವನ್ನು ನುಡಿದನು ; ದೇವಶತ್ರುಗಳಾಗಿ ದೇವತೆಗಳ ಮೇಲೆ ದ್ವೇಷವನ್ನು ಮಾಡುತಲಿರುವ ಅಲ್ಪಬುದ್ಧಿಗಳಾದ ಆ ದೈತ್ಯರು ತಮ್ಮ ಸ್ವಾಮಿಯಾದ ಕಂಸನ ವಚನವನ್ನು ಕೇಳಿ ಅವನನ್ನು ಕುರಿತು ''ಎಲೈ ಭೋಜೇಂದ್ರನಾದ ಕಂಸನೆ, ಹಾಗಾದ ಪಕ್ಷದಲ್ಲಿ ಪುರಗಳಲ್ಲಿಯೂ ಗ್ರಾಮಗಳಲ್ಲಿಯೂ ಗೋಕುಲ ಮೊದಲಾದ ಸ್ಥಾನಗಳಲ್ಲಿಯೂ ಜನಿಸಿರುವ ದಶರಾತ್ರಾತಿಕ್ರಮವಾಗದ ಶಿಶುಗಳನ್ನೂ ದಶರಾತ್ರಾತಿಕ್ರಮವಾದ ಶಿಶುಗಳನ್ನೂ ಸಂಹಾರಮಾಡುತ್ತೇವೆ ; ನಿನ್ನ ಧನುಷ್ಟಂಕಾರಗಳಿಂದಲೇ ಭಯವನ್ನೈದಿದ ಮನಸ್ಸುಳ್ಳವರಾಗಿ ರಣಾಂಗಣದಲ್ಲಿ ಭೀತರಾದ ದೇವತೆಗಳು ತಮ್ಮ ಪ್ರಯತ್ನದಿಂದ ನಮ್ಮನ್ನೇನು

ಜಲಾಪರು? ಅವರು ಬಾಣಸಮೂಹಗಳಿಂದ ಎಲ್ಲಾಕಡೆಯಲ್ಲೂ ಪ್ರಹರಿಸುವ ನಿನ್ನಿಂದ ಪೆಟ್ಟುಬಿದ್ದು ಜೀವಿಸಬೇಕೆಂಬ ಇಚ್ಛೆಯಿಂದ ಯುದ್ಧವನ್ನು ಬಿಟ್ಟು ಮೊದಲೆ ಪಲಾಯನವಾದರು; ಕೆಲವು ದೇವತೆಗಳು ಭೀತಿಯಿಂದ ಶಸ್ತ್ರಗಳನ್ನು ಬಿಟ್ಟು ಅಂಜಲೀಬದ್ಧರಾಗಿ ತಮ್ಮ ಪ್ರಾಣಗಳನ್ನು ರಕ್ಷಿಸಿಕೊಂಡರು; ಕೆಲವರು ಕೇಶಗಳನ್ನು ಬಿಚ್ಚಿಕೊಂಡೂ ನಡುಕಟ್ಟುಗಳನ್ನು ಬಿಚ್ಚಿಕೊಂಡೂ ಭೀತರಾಗಿ ತಾವು ಪರಾಜಿತರೆಂದೂ ತಮ್ಮನ್ನು ಕೊಲ್ಲಬಾರದೆಂದೂ ದೈನ್ಯೋಕ್ತಿಗಳನ್ನು ನುಡಿದರು; ಆ ರೀತಿಯಲ್ಲಿ ಶಸ್ತ್ರಾಸ್ತ್ರಪ್ರಯೋಗಗಳನ್ನು ಮರತು ಭಗ್ನಗಳಾದ ರಥಗಳುಳ್ಳವರಾಗಿ ಭಯದಿಂದ ನಮ್ರರಾಗಿ ವಿಮುಖರಾಗಿ ಪಲಾಯನಕ್ಕುದ್ಯುಕ್ತರಾಗಿ ಛೇದಿಸಲ್ಪಟ್ಟ ಧನುಸ್ಸುಗಳುಳ್ಳವರಾದ್ದರಿಂದ ಬಾಣಗಳನ್ನು ಪ್ರಯೋಗಿಸಲು ಸಾಧನಸಂಪತ್ತಿರಹಿತರಾದ ದೇವತೆಗಳನ್ನು ನೀನು ಮಹಾಶೂರನಾದಕಾರಣ ಸಂಹಾರಮಾಡದೆ ಬಿಟ್ಟೆ; ಯುದ್ಧಸ್ಥಾನವಲ್ಲದ ನಿರ್ಭಯ ಪ್ರದೇಶದಲ್ಲಿ ಪ್ರತಾಪ ವಚನಗಳನ್ನು ನುಡಿಯುತಲಿರುವ ದೇವತೆಗಳಿಂದೇನಾದೀತು! ರಹಸ್ಯದಲ್ಲಿ ಅಂತರ್ಯಾಮಿಯಾಗಿರುವ ಹರಿಯಿಂದೇನಾದೀತು! ಇಳಾವೃತಖಂಡದ ವನದಲ್ಲಿ ವಾಸಮಾಡುವ ಪರಮೇಶ್ವರನಿಂದೇನಾದೀತು! ಅಲ್ಪಪರಾಕ್ರಮವುಳ್ಳ ಇಂದ್ರನಿಂದೇನಾದೀತು! ತಪಸ್ಸು ಮಾಡುತ್ತಿರುವ ಬ್ರಹ್ಮನಿಂದೇನಾದೀತು! ದೇವತೆಗಳು ತಮ್ಮ ಪ್ರಯತ್ನಗಳಿಂದ ಲೇಶಕಾರ್ಯವನ್ನೂ ಮಾಡಲು ಸಮರ್ಥರಲ್ಲ; ಆದಾಗ್ಯೂ ನೀತಿಯನ್ನು ಅನುಸರಿಸತಕ್ಕದ್ದು; ದೇವತೆಗಳು ನಮಗೆ ಶತ್ರುಗಳಾದ್ದರಿಂದ ಅವರನ್ನು ಉಪೇಕ್ಷಿಸಬಾರದು; ಆದಕಾರಣ ಅವರ ಮೂಲೋತ್ಪಾಟನವನ್ನು ಮಾಡುವದಕ್ಕೆ ನಿನ್ನ ಆಶ್ರಿತರಾದ ನಮಗೆ ಆಜ್ಞಾಪಿಸು; ಶತ್ರುವು ಶಕ್ತಿಹೀನನಾಗಿ ಶರೀರಮಾತ್ರವೇ ಶೇಷವಾಗುಳ್ಳವನಾದಾಗ್ಯೂ ಅವನನ್ನು ಉಪೇಕ್ಷಿಸುವದು ಯುಕ್ತವಲ್ಲ; ಆದ್ದರಿಂದ ದೇವತೆಗಳಿಗೆ ವ್ಯಸನವುಂಟುಮಾಡುವದಕ್ಕೆ ನಮಗೆ ಆಜ್ಞಾಪಿಸು; ದೃಢವಾದ ಮೂಲವುಳ್ಳವರನ್ನಾದರೂ ಮೂಲೋತ್ಪಾಟನ ಮಾಡುವದಕ್ಕೆ ನಾವು ಸಮರ್ಥರು; ದೇಹದಲ್ಲಿ ಹುಟ್ಟಿದ ರೋಗವು ಮನುಷ್ಯರಿಂದ ಉಪೇಕ್ಷಿಸಲ್ಪಟ್ಟರೆ ಪ್ರಬಲಿಸಿ ಚಿಕಿತ್ಸೆಗೆ ಜಗ್ಗದೆ ಹೋಗುವಂತೆಯೂ ಇಂದ್ರಿಯ ಸಮೂಹವು ಉಪೇಕ್ಷಿಸಲ್ಪಟ್ಟರೆ ವೃದ್ಧಿಯಾಗುವಂತೆಯೂ ಶತ್ರುವು ಪ್ರಬಲನಾಗಿ ಬಲಿಷ್ಠನಾದರೆ ನಿಗ್ರಹಿಸಲಶಕ್ಯನಾಗುವನು! ಅನಾದಿಸಿದ್ಧವಾದ ಧರ್ಮವನ್ನು ಸ್ಥಿರವಾಗುಳ್ಳಂಥಾ ಶ್ರೀವಿಷ್ಣುವು ದೇವತೆಗಳಿಗೆ ಮೂಲಕಾರಣನು; ಎಲ್ಲಿ ಧರ್ಮವಿರುವದೋ ಅಲ್ಲಿ ವಿಷ್ಣುವಿರುವನು; ಧರ್ಮಕ್ಕೆ ವೇದಗಳೂ ಬ್ರಾಹ್ಮಣರೂ ಗೋವುಗಳೂ ತಪಸ್ಸೂ ದಕ್ಷಿಣೆಯೊಡಗೂಡಿದ ಯಜ್ಞಗಳೂ ಮೂಲಗಳು! ಆದ್ದರಿಂದ ಎಲೈ ಅರಸನೆ, ಸರ್ವಪ್ರಕಾರದಲ್ಲಿಯು ವೇದಾಧ್ಯಯನ ಮಾಡುವವರನ್ನೂ ಯಜ್ಞಶೀಲರನ್ನೂ ತಪಸ್ವಿಗಳನ್ನೂ ಬ್ರಾಹ್ಮಣರನ್ನೂ ಕ್ಷೀರಾಜ್ಯಾದಿ ಹವಿದ್ರವ್ಯಗಳನ್ನು ಕರೆಯುವ ಗೋವುಗಳನ್ನೂ ಸಹ್ಮರಿಸುತ್ತೇವೆ! ಬ್ರಾಹ್ಮಣರು ಗೋವುಗಳು ದೇವತೆಗಳು ತಪಸ್ಸು ಸತ್ಯವು ಅಂತರಿಂದ್ರಿಯ ನಿಗ್ರಹವು ಬಾಹ್ಯೇಂದ್ರಿಯ ನಿಗ್ರಹವು ಶ್ರದ್ಧೆಯು ದಯೆಯು ಸಹನೆಯು ಯಜ್ಞಗಳು ಮೊದಲಾದವು ಶ್ರೀಹರಿಯ ಮೂರ್ತಿಗಳು; ಸುರಾಧ್ಯಕ್ಷನಾಗಿ ಅಸುರದ್ವೇಷಿಯಾಗಿ ಸರ್ವರ ಹೃದಯಪ್ರೇರಕನಾದ ವಿಷ್ಣುವು ಚತುರ್ಮುಖ ಪರಮೇಶ್ವರ ಸಹಿತರಾದ ಸಮಸ್ತ ದೇವತೆಗಳಿಗೂ ಮೂಲಕಾರಣನು; ಋಷಿಗಳಿಗೆ ಹಿಂಸೆಯುಂಟುಮಾಡುವದೇ ವಿಷ್ಣುವನ್ನು ಸಂಹರಿಸುವ ಉಪಾಯವು" ಎಂದು ಬೋಧಿಸಿದರು.

ಆ ಮಾತನ್ನು ಕೇಳಿ ದುಷ್ಟವಾದ ಮದವುಳ್ಳ ಕಂಸನು ಕಾಲಪಾಶದಿಂದ ಬದ್ಧರಾಗಿ ಬ್ರಾಹ್ಮಣರ ಹಿಂಸೆಯನ್ನು ಹಿತವಾಗೆಣಿಸಿ ಸಾಧುಜನರನ್ನು ಬಾಧಿಸುವದಕ್ಕುದ್ಯುಕ್ತರಾಗಿ ಕಲಹಪ್ರಿಯರಾಗಿ ಕಾಮರೂಪಧಾರಿಗಳಾದ ದಾನವರನ್ನು ದಿಕ್ಕುದಿಕ್ಕುಗಳಿಗೂ ಕಳುಹಿಸಿದನು; ರಜೋಗುಣ ಸ್ವಭಾವವುಳ್ಳವರಾಗಿ ತಮೋಗುಣದಿಂದ ಮೂಢಚಿತ್ತರಾಗಿ ಸನ್ನಿಹಿತವಾದ ಮೃತ್ಯುವುಳ್ಳವರಾದ ಆ ಅಸುರರು ಸತ್ಪುರುಷರಲ್ಲಿ ದ್ವೇಷವನ್ನಾಚರಿಸಿದರು! ಎಲೈ ಪರೀಕ್ಷಿದ್ರಾಯನೆ, ಮಹಾತ್ಮರ ತಿರಸ್ಕಾರರೂಪವಾದ ದುರ್ವ್ಯಾಪಾರವು ಆಯುಸ್ಸನ್ನೂ ಸಂಪತ್ತನ್ನೂ ಯಶಸ್ಸನ್ನೂ ಧರ್ಮವನ್ನೂ ಮನೋರಥಗಳನ್ನೂ ಶ್ರೇಯಸ್ಸನ್ನೂ ನಾಶಮಾಡುವದು.

## ೫ನೇ ಅಧ್ಯಾಯ.

## ಶ್ರೀಕೃಷ್ಣನ ಜಾತಕಮಹೋತ್ಸವವು.

ಎಲೈ ಪರೀಕ್ಷಿದ್ರಾಯನೆ, ಗೋಕುಲದಲ್ಲಿ ನಂದಗೋಪನು ತನಗೆ ಪುತ್ರನುತ್ಪನ್ನನಾಗಲು ಅತ್ಯಂತ ಹರ್ಷವನ್ನೈದಿ ಔದಾರ್ಯಯುಕ್ತವಾದ ಚಿತ್ತವುಳ್ಳವನಾಗಿ ಸ್ನಾನಂಗೈದು ಪರಿಶುದ್ಧನಾಗಿ ಸರ್ವಾಲಂಕಾರಯುಕ್ತನಾಗಿ ಶಾಸ್ತ್ರಜ್ಞರಾದ ಬ್ರಾಹ್ಮಣರನ್ನು ಕರೆಸಿ ತನ್ನ ಪುತ್ರನಿಗೆ ಸ್ವಸ್ತಿವಾಚನಪೂರ್ವಕವಾಗಿ ಜಾತಕರ್ಮವನ್ನು ವಿಧ್ಯುಕ್ತವಾಗಿ ಮಾಡಿಸಿ ದೇವತೆಗಳಿಗೂ ಪಿತೃಗಳಿಗೂ ಪೂಜೆಯನ್ನು ಮಾಡಿಸಿ ಬ್ರಾಹ್ಮಣೋತ್ತಮರಿಗೆ ದಿವ್ಯಾಲಂಕಾರಭೂಷಿತಗಳಾದ ಎರಡು ಲಕ್ಷ ಗೋವುಗಳನ್ನು ದಾನಮಾಡಿ ರತ್ನಸಮೂಹಯುಕ್ತವಾಗಿ ಸುವರ್ಣಮಯವಾದ ವಸ್ತ್ರಗಳಿಂದಾಚ್ಛಾದಿತಗಳಾದ ಸಪ್ತತಿಲಪರ್ವತಗಳನ್ನು ದಾನಮಾಡಿದನು ! ಎಲೈ ಪರೀಕ್ಷಿದ್ರಾಯನೆ, ದಶದಿನಾತಿಕ್ರಮಣರೂಪವಾದ ಕಾಲದಿಂದ ಪ್ರಸೂತಿಗೃಹಭೂಮಿಯು ಶುದ್ಧಿಯಾಗುವದು ; ಸ್ನಾನದಿಂದ ದೇಹಾದಿಗಳು ಶುದ್ಧವಾಗುವವು ; ಜಲಪ್ರಕ್ಷಾಳನಾದಿಗಳಿಂದ ಅಪವಿತ್ರವಸ್ತುಗಳು ಶುದ್ಧಿಯಾಗುವವು ; ಗರ್ಭಾದಾನಾದಿ ಸಂಸ್ಕಾರಗಳಿಂದ ಜನಿಸುವ ಶಿಶುಗಳು ಶುದ್ಧಿಯಾಗುವವು ; ತಪಸ್ಸಿನಿಂದ ಇಂದ್ರಿಯಾದಿಗಳು ಶುದ್ಧಿಯಾಗುವವು ; ಪೂಜಾದಿಗಳಿಂದ ಬ್ರಾಹ್ಮಣಾದಿಗಳು ಶುದ್ಧವಾಗುವರು ; ದಾನಾದಿಗಳಿಂದ ದ್ರವ್ಯಾದಿಗಳು ಶುದ್ಧವಾಗುವವು ; ಸಂತೋಷದಿಂದ ಮನಶ್ಶುದ್ಧಿಯಾಗುವದು. ಜೀವಾತ್ಮನು ಅಧ್ಯಾತ್ಮ ವಿದ್ಯದಿಂದ ಶುದ್ಧಿಯಾಗುವನು !

ಈ ಪ್ರಕಾರದಲ್ಲಿ ನಂದನು ದಾನಾದಿ ಕ್ರಿಯೆಗಳನ್ನು ಮಾಡುತ್ತಿರಲು ಬ್ರಾಹ್ಮಣರು ಆಶೀರ್ವಾದಪೂರ್ವಕವಾಗಿ ಮಂಗಳ ವಚನಗಳನ್ನು ನುಡಿಯುತ್ತಿದ್ದರು ; ಪೌರಾಣಿಕರು ಪುರಾಣಾರ್ಥಗಳನ್ನು ನಿರೂಪಿಸುತ್ತಿದ್ದರು ; ಮಾಗಧರು ವಂಶಾವಳಿಯನ್ನು ಹೊಗಳುತ್ತಿದ್ದರು ; ವಂದಿಗಳು ಪ್ರಸ್ತಾವಾನುಸಾರಗಳಾದ ಶುಭವಾಕ್ಯಗಳನ್ನು ನುಡಿಯುತಿದ್ದರು ; ಗಾಯಕರು ಗಾನಮಾಡುತಿದ್ದರು ; ಭೇರಿ ದುಂದುಭಿಗಳು ಬಾರಿಬಾರಿಗೂ ಮೊಳಗುತಿದ್ದವು ! ಆ ಸಮಯದಲ್ಲಿ ನಂದವ್ರಜವು ಸುಗಂಧೋದಕಗಳಿಂದ ಪ್ರೋಕ್ಷಣಮಾಡಲ್ಪಟ್ಟ ಗೃಹಗಳ ಬಾಗಿಲುಗಳೂ ಅಂಗಳಗಳೂ ಅಂತಃಗೃಹಗಳೂ ಉಳ್ಳದ್ದಾಗಿ ವಿಚಿತ್ರಗಳಾದ ಧ್ವಜಪತಾಕ ವಸ್ತ್ರ ಪುಷ್ಪಮಾಲೆ ತಳಿರುತೋರಣಗಳಿಂದ ಅಲಂಕರಿಸಲ್ಪಟ್ಟಿತ್ತು ; ಗೋವುಗಳೂ ವೃಷಭಗಳೂ ಕರುಗಳೂ ಅರಿಸಿನ ಎಣ್ಣೆಗಳಿಂದ ಲೇಪನ ಮಾಡಲ್ಪಟ್ಟು ವಿಚಿತ್ರಗಳಾದ ಸುವರ್ಣ ಮಾಲಿಕೆಗಳು ನವಿಲಗರಿಗಳು ವಸ್ತ್ರಗಳು ಸಿಂಧೂರಾದಿ ಧಾತುಗಳು ಮೊದಲಾದವುಗಳಿಂದ ಅಲಂಕರಿಸಲ್ಪಟ್ಟಿದ್ದವು ! ಆ ಭಗವಂತನ ಜಾತಕೋತ್ಸವದಲ್ಲಿ ಗೋಪಾಲಕರೆಲ್ಲರು ಅನರ್ಘ್ಯಗಳಾದ ವಸ್ತ್ರಗಳಿಂದಲೂ ಆಭರಣಗಳಿಂದಲೂ ಕವಚಗಳಿಂದಲೂ ಪಾಗುಗಳಿಂದಲೂ ಅಲಂಕೃತರಾಗಿ ನಾನಾವಿಧಗಳಾದ ಕೈಕಾಣಿಕೆ ವಸ್ತುಗಳನ್ನು ತೆಗೆದುಕೊಂಡು ನಂದಗೋಪನ ಗೃಹಕ್ಕೆ ಬಂದರು ; ಗೋಪಸ್ತ್ರೀಯರೆಲ್ಲರು ಯಶೋದಾದೇವಿಗೆ ಪುತ್ರೋತ್ಸವವಾದ ವೃತ್ತಾಂತವನ್ನು ಕೇಳಿ ಸಂತೋಷಯುಕ್ತರಾಗಿ ತಮ್ಮ ದಿವ್ಯದೇಹಗಳನ್ನು ಉತ್ತಮ ದುಕೂಲ ಅರಿಸಿನ ಕುಂಕುಮ ಚಂದ್ರ ಕಣ್ಣುಕಪ್ಪುಗಳಿಂದ ಅಲಂಕರಿಸಿಕೊಂಡು ನೂತನವಾದ ಕುಂಕುಮಕೇಸರಿಯಿಂದ ದಿವ್ಯಕಾಂತಿಯುಳ್ಳ ಮುಖಪದ್ಮಗಳುಳ್ಳವರಾಗಿ ವಿಶಾಲಗಳಾದ ಕಟಿಪ್ರದೇಶಗಳುಳ್ಳವರಾಗಿ ಕುಲುಕುತಿರುವ ಕುಚಕಲಶಗಳುಳ್ಳವರಾಗಿ ಕಾಣಿಕೆಗಳನ್ನು ತೆಗೆದುಕೊಂಡು ನಂದಗೋಪನ ಗೃಹವನ್ನು ಕುರಿತು ನಡೆದರು ; ದೇದೀಪ್ಯಮಾನವಾಗಿ ನವರತ್ನಮಯವಾದ ಓಲೆಗಳನ್ನು ಕರ್ಣಗಳಲ್ಲಿ ಧರಿಸಿಕೊಂಡು ತೋರಮುತ್ತುಗಳ ಹಾರ ಪದಕಗಳನ್ನು ಕಂಠದಲ್ಲಿ ಧರಿಸಿಕೊಂಡು ದಿವ್ಯ ದುಕೂಲಗಳನ್ನುಟ್ಟುಕೊಂಡು ನಂದಗೋಕುಲದ ಬೀದಿಯಲ್ಲಿ ನಡೆಯುತ ತಮ್ಮ ತುರುಬುಗಳ ದೆಸೆಯಿಂದುದುರುವ ಪುಷ್ಪಸಮೂಹಗಳಿಂದ ಭೂಮಿಯನ್ನಲಂಕರಿಸುತ ಹವಳಗಳ ಹಸ್ತಕಡಗಗಳಿಂದಲೂ ಹಿಂಬಳೆ ಕಂಕಣಗಳಿಂದಲೂ ಅಲಂಕೃತಹಸ್ತರಾಗಿ ಕುಚಮಂಡಲಗಳ ಮಧ್ಯದಲ್ಲಿ ಒಪ್ಪುವ ಹಾರ ಪದಕಗಳಿಂದ ಶೋಭಿಸುವವರಾಗಿ ತೂಗಾಡುತಲಿರುವ ಓಲೆಗಳಿಂದ ಶೋಭಿಸುವ ಮುಖಗಳುಳ್ಳ ಆ ಗೋಪಸ್ತ್ರೀ

ಯರು ನಂದಗೋಪನ ಅರಮನೆಯನ್ನೈದಿ ಜಗದೀಶ್ವರನಾದ ಆ ಬಾಲಕನನ್ನು ನೋಡಿ ಬಹುಕಾಲವೂ ಆತನು ತಮ್ಮನ್ನು ಪರಿಪಾಲನ ಮಾಡುತ ದೀರ್ಘಾಯುಷ್ಮಂತನಾಗಿ ಸುಖವಾಗಿರಲೆಂದು ಆಶೀರ್ವಾದವನ್ನು ಮಾಡಿ ಓಕುಳಿ ಎಣ್ಣೆಗಳನ್ನು ಪರಸ್ಪರ ಚಲ್ಲಾಡುತ ಶ್ರೀಹರಿಯ ಚರಿತ್ರವನ್ನು ಗಾನಮಾಡುತಿದ್ದರು ; ಮತ್ತು ಆ ಮಹೋತ್ಸವ ಕಾಲದಲ್ಲಿ ವಿಚಿತ್ರ ವಾದ್ಯಗಳು ಮೊಳಗುತ್ತಿರಲು ಗೋಪಾಲಕರು ಅತಿ ಹರ್ಷವುಳ್ಳವರಾಗಿ ದಧಿ ಕ್ಷೀರ ಘೃತ ಪಸಂತಗಳನ್ನು ಪರಸ್ಪರ ಎರಚಾಡುತ ಒಬ್ಬರಿಗೊಬ್ಬರು ಲೇಪನಂಗೈಯುತ್ತ ಬೆಣ್ಣೆ ಉಂಡೆಗಳಿಂದ ಪರಸ್ಪರ ಬೀಸಿಯಾಡುತಿದ್ದರು ! ನಂದಗೋಪನು ಉದಾರಬುದ್ಧಿಯುಳ್ಳವನಾಗಿ ಆ ಗೋಪಾಲಕರಿಗೂ ನಾನಾ ವಿದ್ಯಗಳಿಂದ ಜೀವಿಸುವ ಸೂತ ಮಾಗದ ವಂದಿ ಗಾಯಕರಿಗೂ ವಸ್ತ್ರಾಭರಣ ಹಿರಣ್ಯ ಗೋವುಗಳನ್ನು ಅಧಿಕವಾಗಿ ಕೊಟ್ಟನು ; ಮತ್ತು ಅಲ್ಲಿಗೆ ಬಂದ ಜನರೆಲ್ಲರಿಗು ಅವರವರ ಇಚ್ಛಾನುಸಾರವಾಗಿ ಯಥೋಚಿತವಾಗಿ ಸನ್ಮಾನಮಾಡಿದನು !

ಎಲೈ ರಾಯನೆ, ಅದೇ ಕಾಲದಲ್ಲಿ ಮಹಾ ಭಾಗ್ಯವತಿಯಾದ ರೋಹಿಣೀದೇವಿಯು ತನ್ನ ಪುತ್ರನು ಮೊದಲೇ ಜನಿಸಿದ್ದರಿಂದ ನಂದಗೋಪನಿಂದ ಸನ್ಮಾನಿಸಲ್ಪಟ್ಟವಳಾಗಿ ಶ್ರೀವಿಷ್ಣುವಿನ ಪೂಜೆಯನ್ನು ಮಾಡುವದಕ್ಕಾಗಿಯೂ ತನ್ನ ಪುತ್ರನಿಗೆ ಆಯುರಾರೋಗ್ಯಾಭಿವೃದ್ಧಿಗೋಸ್ಕರವೂ ದಿವ್ಯದುಕೂಲಾಭರಣ ಮಾಲಿಕಾಲಂಕಾರಯುಕ್ತಳಾಗಿ ಸಂಚರಿಸುತ ಸಂತೋಷದಿಂದಿದ್ದಳು. ರಾಮಕೃಷ್ಣರು ಅವತರಿಸಿದಾರಭ್ಯ ನಂದಗೋಪನ ಗೋಕುಲವು ಸರ್ವಸಂಪತ್ಸಮೃದ್ಧಿ ಯುಕ್ತವಾಯಿತು ! ಶ್ರೀಹರಿಯು ವಾಸಮಾಡುವದರಿಂದಲೂ ನಂದಗೋಪನ ಸದ್ಗುಣಗಳಿಂದಲೂ ಆ ಪುರವು ಮಹಾಲಕ್ಷ್ಮಿಗೆ ವಿಹಾರಸ್ಥಾನದಂತೆ ಒಪ್ಪುತಿತ್ತು ! ಎಲೈ ಕುರುವಂಶೋತ್ಪನ್ನನಾದ ಪರೀಕ್ಷಿದ್ರಾಯನೆ, ಅನಂತರದಲ್ಲಿ ನಂದಗೋಪನು ಗೋಕುಲರಕ್ಷಣಾರ್ಥವಾಗಿ ಗೋಪಾಲಕರನ್ನು ನಿಲ್ಲಿಸಿ ಕಂಸನಿಗೆ ಪ್ರತಿವರುಷದಲ್ಲಿಯೂ ಕೊಡತಕ್ಕ ಕಪ್ಪವನ್ನು ಕೊಡುವದಕ್ಕಾಗಿ ಮಧುರಾಪಟ್ಟಣಕ್ಕೆ ಹೋದನು ; ಆಗ ವಸುದೇವನು ಬಹುಕಾಲ ಸ್ನೇಹದಿಂದ ಭ್ರಾತೃವಾದ ನಂದಗೋಪನು ಮಧುರಾ ಪಟ್ಟಣಕ್ಕೆ ಹೋಗಿ ಕಂಸನಿಗೆ ಕಪ್ಪವನ್ನೊಪ್ಪಿಸಿದ ವಿವರವನ್ನು ತಿಳಿದು ಆತನಿದ್ದ ಗೃಹಕ್ಕೆ ಹೋಗಿ ಆತನು ತನ್ನನ್ನು ಕಂಡು ಹೋಗಿದ್ದ ಪ್ರಾಣವು ಪುನಹ ಬಂದರೆ ದೇಹವು ಹರ್ಷವನ್ನೈದುವ ರೀತಿಯಲ್ಲಿ ಅತ್ಯಂತ ಪ್ರೀತಿಯಿಂದ ತನ್ನ ಭುಜಗಳಿಂದಪ್ಪಿಕೊಂಡು ಪೂಜಿಸಲು ಸುಖದಿಂದ ಪೀಠದಲ್ಲಿ ಕುಳಿತುಕೊಂಡು ಆದರ ಪೂರ್ವಕವಾಗಿ ಕುಶಲಪ್ರಶ್ನೆಯನ್ನು ಮಾಡುತ ತನ್ನ ಪುತ್ರರಲ್ಲಿ ಆಸಕ್ತವಾದ ಬುದ್ಧಿಯುಳ್ಳವನಾಗಿ ನಂದಗೋಪನನ್ನು ಕುರಿತು “ ಎಲೈ ಭ್ರಾತೃವೇ, ಪುತ್ರರಿಲ್ಲದೆ ವ್ಯಸನಪಡುತ ವೃದ್ಧನಾಗಿ ಪುತ್ರಾಶೆಯನ್ನು ಬಿಟ್ಟಿದ್ದ ನಿನಗೆ ಈಗ ಪುತ್ರನುಂಟಾದದ್ದು ಬಹುಚನ್ನಾಯಿತು ! ಸಂಸಾರವೆಂಬ ಚಕ್ರದಲ್ಲಿ ತಿರುಗುತಲಿದ್ದ ನೀನು ಈಗ ಬಂದದ್ದರಿಂದ ಪುನಹ ಜನಿಸಿದವನಂತೆ ನಿನ್ನನ್ನು ನಾನು ಕಂಡೆನು ; ದುರ್ಲಭವಾದ ನಿನ್ನ ದರ್ಶನವು ನನಗೆ ಲಭಿಸಿತು ; ನನ್ನ ಅದೃಷ್ಟವಶದಿಂದ ನನಗೆ ಕ್ಷೇಮವಾಯಿತು ; ವಿಚಿತ್ರವಾದ ಕರ್ಮಗಳುಳ್ಳ ಸ್ನೇಹಿತಜನರಿಗೆ ಒಂದೇ ಬಳಿಯಲ್ಲಿ ಪ್ರಿಯವಾದ ಸಹವಾಸವು (ನದಿಯ ಪ್ರವಾಹದಿಂದ ಸೆಳೆಕೊಂಡು ಹೋಗಲ್ಪಡುವ ತೃಣಕಾಷ್ಠಾದಿಗಳಿಗೆ ಏಕತ್ರ ಸರ್ವದಾ ವಾಸವು ಸಂಘಟಿಸದ ರೀತಿಯಲ್ಲಿ) ಸಂಘಟಿಸದು ; ಯಾವ ಸ್ಥಳದಲ್ಲಿ ನೀನು ಬಂಧುಸಮೇತನಾಗಿ ವಾಸಂಗೈಯುತ್ತೀಯೊ ಆ ಬೃಹದ್ವನವು ಈಗ ಪಶುಗಳಿಗೆ ಹಿತವಾಗಿ ಅಧಿಕಗಳಾದ ಜಲತೃಣಲತಾದಿಗಳುಳ್ಳದ್ದಾಗಿ ಆರೋಗ್ಯಪ್ರದವಾಗಿದೆಯೋ ? ಎಲೈ ಸ್ನೇಹಿತನಾದ ನಂದಗೋಪನೆ, ನಿನ್ನ ಗೋಕುಲದಲ್ಲಿ ಮಾತೃಸಮೇತನಾಗಿರುವ ನನ್ನ ಪುತ್ರನು ನಿನ್ನನ್ನು ತಂದೆಯಹಾಗೆ ಭಾವಿಸುತ ದಂಪತಿಗಳಾದ ನಿನ್ನಿಂದಲೂ ಯಶೋದಾದೇವಿಯಿಂದಲೂ ಲಾಲಿತನಾಗಿ ಸುಖದಿಂದಿದ್ದಾನೆಯೋ ? ಬಂಧುಸಮೇತನಾದ ಪುರುಷನಿಗೆ ಧರ್ಮಾರ್ಥಕಾಮರೂಪಗಳಾದ ಮೂರು ಪುರುಷಾರ್ಥಗಳು ಶಾಸ್ತ್ರವಿಹಿತಗಳಾಗಿ ಸಂತೋಷಕರಗಳಾಗಿರುವವು ; ಪುತ್ರಾದಿಗಳು ಕ್ಲೇಶಪಡುತಿದ್ದರೆ ಪುರುಷನಿಗೆ ಪುರುಷಾರ್ಥಗಳು ಸಿದ್ಧಿಸಿದ್ದಾಗ್ಯೂ ಸುಖವನ್ನುಂಟುಮಾಡಲಾರವು ” ಅಂದನು.

ಆ ವಾಕ್ಯದ ಅಭಿಪ್ರಾಯವನ್ನು ತಿಳಿದು ನಂದಗೋಪನು ವಸುದೇವನನ್ನು ಸಮಾಧಾನಪಡಿಸುತ “ಎಲೈ ವಸುದೇವನೆ, ನಿನ್ನ ಪತ್ನಿಯಾದ ದೇವಕೀದೇವಿಯಲ್ಲಿ ಉತ್ಪನ್ನರಾದ ಬಹುಮಂದಿ ಪುತ್ರರು ಕಂಸನಿಂದ ಸಂಹೃತರಾ

ದರು ; ಆ ಬಳಿಕ ಜನಿಸಿದ ಹೆಣ್ಣುಶಿಶುವೂ ಆಕಾಶವನ್ನು ಕುರಿತು ಹೊರಟುಹೋಯಿತು ; ಜನರು ಅದೃಷ್ಟಾಧೀನ ರಾದ್ದರಿಂದ ಇದು ಅದೃಷ್ಟ ಕೃತ್ಯವೇ ಹೊರ್ತು ಬೇರೆ ಅಲ್ಲ ; ಅದೃಷ್ಟವೆ ಯಥಾರ್ಥವೆಂದು ತಿಳಿಯುವ ಪುರುಷನು ಶೋಕವನ್ನು ಹೊಂದುವದಿಲ್ಲ ; ಆದಕಾರಣ ನೀನು ದುಃಖವನ್ನು ಹೊಂದಬೇಡ" ಎಂದು ನುಡಿದನು.

ಆ ವಾಕ್ಯದ ಸಾರವನ್ನು ತಿಳದು ವಸುದೇವನು ದುಃಖವನ್ನು ಬಿಟ್ಟು ನಂದಗೋಪನನ್ನು ಕುರಿತು "ಎಲೈ ಭ್ರಾತೃವಾದ ನಂದಗೋಪನೆ, ಪ್ರತಿ ಸಂವತ್ಸರದಲ್ಲಿಯೂ ಅರಸನಿಗೆ ಕೊಡತಕ್ಕ ಕಪ್ಪವು ನಿನ್ನಿಂದ ಕೊಡಲ್ಪಟ್ಟಿತು ; ಆದರಿಂದ ನನಗೂ ನಿನಗೂ ಸಂದರ್ಶನವುಂಟಾಯಿತು ; ಇನ್ನು ನೀನು ಬಹುದಿವಸಗಳು ಇಲ್ಲಿ ವಾಸಮಾಡಬಾರದು ; ಗೋಕುಲದಲ್ಲಿ ಅನೇಕ ಉತ್ಪಾತಗಳುಂಟಾಗುತ್ತಿವೆ" ಎಂದು ನುಡಿದನು.

ಈ ಪ್ರಕಾರದಲ್ಲಿ ನುಡಿದ ವಸುದೇವನ ವಾಕ್ಯವನ್ನು ಕೇಳಿ ನಂದಗೋಪನು ತನ್ನ ಸಂಗಡ ಬಂದ ಗೋಪಾಲಕರೊಡನೆ ವಸುದೇವನ ಅನುಜ್ಞೆಯನ್ನು ಪಡೆದು ವೃಷಭಗಳ ಸಮೂಹದಿಂದ ಗೋಕುಲವನ್ನು ಕುರಿತು ತೆರಳಿದರು.

## ೬ನೇ ಅಧ್ಯಾಯ.

### ಪೂತನೆ ವಧೆ.

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ನಂದಗೋಪನು ಮಥುರಾಪುರದಿಂದ ಗೋಕುಲಕ್ಕೆ ಬರುವ ಮಾರ್ಗದಲ್ಲಿ, ವಸುದೇವನ ವಚನವು ಅಬದ್ಧವಲ್ಲವೆಂದು ಚಿಂತಿಸುತ ಗೋಕುಲದಲ್ಲಿ ಏನು ಉತ್ಪಾತಗಳು ಪ್ರಾಪ್ತಗಳಾದವೊ ಎಂಬ ಶಂಕೆಯುಳ್ಳವನಾಗಿ ಶ್ರೀಹರಿಯನ್ನು ಶರಣುಹೊಂದಿದನು ! ಆ ಸಮಯದಲ್ಲಿ ಕಂಸನಿಂದ ಕಳುಹಿಸಲ್ಪಟ್ಟವಳಾಗಿ ಘೋರರೂಪಳಾಗಿ ಬಾಲಕರನ್ನು ಸಂಹಾರಮಾಡುವ ಪೂತನೆ ಎಂಬ ಒಬ್ಬ ರಾಕ್ಷಸಿಯು ಪುರಗ್ರಾಮಾದಿಗಳಲ್ಲಿದ್ದ ಶಿಶುಗಳನ್ನು ಸಂಹರಿಸುತ ಸಂಚರಿಸುತ್ತಿದ್ದಳು ! ಎಲೈ ಅರಸೇ, ಯಾವ ಬಳಿಯಲ್ಲಿ ಸಾತ್ವೀಕರಿಗೆ ಸ್ವಾಮಿಯಾದ ಶ್ರೀ ಕೃಷ್ಣದೇವನ ಕಥಾಶ್ರವಣಾದಿಗಳಿಲ್ಲವೊ ಮತ್ತು ಯಾವಸ್ಥಳದಲ್ಲಿ ಕರ್ಮಾನುಷ್ಠಾನ ಕಾಲಗಳಲ್ಲಿ ರಕ್ಷೋಘ್ನ ಮಂತ್ರಗಳು ಪಠನಂಗೈಯಲ್ಪಡುವದಿಲ್ಲವೊ ಅಂಥಾ ಸ್ಥಳಗಳಲ್ಲಿ ರಾಕ್ಷಸರು ತಮ್ಮ ಶಕ್ತಿಯನ್ನು ತೋರಿಸುವರು ! ಆಕಾಶದಲ್ಲಿ ಸಂಚಾರವುಳ್ಳವಳಾದ ಪೂತನೆಯು ಆ ಸಮಯಲ್ಲಿ ತನ್ನ ಮಾಯೆಯಿಂದ ದಿವ್ಯ ಸುಂದರಸ್ತ್ರೀಯಾಗಿ ಸ್ವೇಚ್ಛೆಯಿಂದ ಸಂಚರಿಸುತ ನಂದಗೋಕುಲವನ್ನು ಪ್ರವೇಶಿಸಿ ಕೇಶಭಾರದಲ್ಲಿ ಧರಿಸಿದ ಮಲ್ಲಿಗೇ ಸರಗಳುಳ್ಳವಳಾಗಿ ವಿಸ್ತೀರ್ಣವಾದ ನಿತಂಬಪ್ರದೇಶದಿಂದಲೂ ಸ್ಥೂಲಗಳಾದ ಸ್ತನಭಾರ ಶ್ರಮದಿಂದಲೂ ಬಳುಕುವ ಬಡನಡುವುಳ್ಳವಳಾಗಿ ರಮಣೀಯವಾದ ದಿವ್ಯ ದುಕೂಲವನ್ನು ಧರಿಸಿಕೊಂಡು ಚಲಿಸುತಲಿರುವ ಕರ್ಣಾಭರಣಗಳ ಕಾಂತಿಯಿಂದ ಶೋಭಿಸುತಿರುವ ಮುಂಗುರುಳುಗಳಿಂದಲಂಕರಿಸಲ್ಪಟ್ಟ ಮನೋಹರವಾದ ಮುಖವುಳ್ಳವಳಾಗಿ ರಮ್ಯವಾದ ಮುಗುಳುನಗೆಯೊಡನೆ ಕೂಡಿದ ಕಡೆಗಣ್ಣೋಟಗಳಿಂದ ಆ ವ್ರಜದಲ್ಲಿ ವಾಸಮಾಡುತಿದ್ದ ಸರ್ವಜನರ ಮನಸ್ಸನ್ನೂ ಅಪಹರಿಸುತ ಕಮಲವನ್ನು ಕೈಯಲ್ಲಿಡಿದು ದಿವ್ಯಮಂಗಳ ರೂಪವನ್ನು ಧರಿಸಿರುವ ತನ್ನನ್ನು ನೋಡಿ ಗೋಪಸ್ತ್ರೀಯರು ಜಗತ್ಪತಿಯಾದ ಶ್ರೀಹರಿಯನ್ನು ನೋಡುವದಕ್ಕೋಸ್ಕರ ಅರಸಿಕೊಂಡು ಬಂದ ಸಾಕ್ಷಾತ್ ಲಕ್ಷ್ಮೀದೇವಿಯೆಂದೆಣಿಸುತ್ತಿರಲು ಶಿಶುಗಳನ್ನು ಹುಡುಕುತ ನಂದಗೋಪನ ಗೃಹದಲ್ಲಿ ದುಷ್ಟಸಂಹಾರಕನಾಗಿ ಬಾಲಕನಾಗಿ ಭಸ್ಮದಿಂದ ಮುಚ್ಚಲ್ಪಟ್ಟ ಅಗ್ನಿಯಂತೆ ಅನ್ಯರಿಗೆ ಅಗೋಚರನಾಗಿ ಪರಾಕ್ರಮವುಳ್ಳವನಾಗಿ ಹಾಸಿಗೆಯಲ್ಲಿ ಶಯನಂಗೈದಿದ್ದ ಶ್ರೀಹರಿಯನ್ನು ಕಾಣಲು ಚರಾಚರಾತ್ಮಕನಾಗಿ ಸಮಸ್ತ ಪ್ರಾಣಿಸಮೂಹಕ್ಕೂ ಅಂತರಾತ್ಮಕನಾದ ಶ್ರೀಹರಿಯು ಆ ಸ್ತ್ರೀಯು ಬಾಲಕರಿಗೆ ಮಾರಕವಾದ ಗ್ರಹವೆಂದು ತಿಳದು ಅರಿಯದವನಂತೆ ಕಣ್ಣುಗಳನ್ನು ಮುಚ್ಚಿಕೊಂಡನು ; ಅನಂತರದಲ್ಲಿ ಪೂತನೆಯು ನಿದ್ರೆಮಾಡುವ ಸರ್ಪವನ್ನು ಬುದ್ಧಿಶೂನ್ಯನಾದ ಪುರುಷನು

ಹಗ್ಗವೆಂದೆಣಿಸಿ ಎತ್ತಿಕೊಳ್ಳುವ ರೀತಿಯಲ್ಲಿ ದುಷ್ಟರನ್ನು ಶಿಕ್ಷಿಸುವ ಅನಂತಮೂರ್ತಿಯಾದ ಶ್ರೀಕೃಷ್ಣನನ್ನು ಬಾಲಕನೆಂದೆಣಿಸಿ ತನ್ನ ನಡುವಿನಲ್ಲಿ ಎತ್ತಿಕೊಂಡಳು ; ಮೃದುವಾಗಿ ವಿಚಿತ್ರವಾಗಿ ಚರ್ಮಮಯವಾದ ಒರೆಯುಳ್ಳ ಖಡ್ಗದಂತೆ ತೀಕ್ಷ್ಣವಾದ ಚಿತ್ತವುಳ್ಳವಳಾದರೂ ಮೃದುವಾಗಿ ಮನೋಹರವಾದ ಹಾವಭಾವ ವಿಲಾಸವುಳ್ಳವಳಾಗಿ ದಿವ್ಯಸುಂದರಿಯಾಗಿದ್ದ ಆ ಸ್ತ್ರೀಯನ್ನು ಕಂಡು ಅವಳ ದೇಹಕಾಂತಿಯಿಂದ ತಿರಸ್ಕರಿಸಲ್ಪಟ್ಟವರಾಗಿ ಯಶೋದಾದೇವಿ ರೋಹಿಣೀದೇವಿಯರು ಆ ಶಿಶುವಿಗೆ ಅವಳು ಜನನಿಯೋ ತಾವು ಜನನಿಯರೋ ಎಂದರಿಯದೆ ಬೆರಗಾಗಿ ನೋಡುತ ನಿಂತಿದ್ದರು ; ಆ ಬಳಿಕ ಕ್ರೂರವ್ಯಾಪಾರವುಳ್ಳ ಪೂತನೆಯು ಆ ಶಿಶುವಿಗೆ ಜೀರ್ಣಿಸಲಶಕ್ಯವಾಗಿ ಅತ್ಯುಲ್ಬಣವಾದ ವಿಷವೀರ್ಯವುಳ್ಳ ತನ್ನ ಸ್ತನವನ್ನು ಕೊಟ್ಟಳು ; ಬಾಲಕನಾದ ಶ್ರೀಕೃಷ್ಣನು ವಿಷವನ್ನೇ ಪಥ್ಯವಾಗೆಣಿಸಿ ತನ್ನ ಎರಡು ಹಸ್ತಗಳಿಂದಲೂ ಆ ಸ್ತನವನ್ನು ದೃಢವಾಗಿಡಿದು ರೋಷಯುಕ್ತನಾಗಿ ಪೂತನೆಯ ಪ್ರಾಣಗಳ ಸಹಿತವಾಗಿ ಪಾನಮಾಡಿದನು ; ಪೂತನೆಯು ಪೀಡಿಸಲ್ಪಟ್ಟ ಸಕಲ ಜೀವನಾಡಿಗಳ ಮರ್ಮಗಳುಳ್ಳವಳಾಗಿ "ಎಲೈ ಬಾಲಕನೆ, ಮೊಲೆಹಾಲನ್ನು ಪಾನಮಾಡಿದ್ದು ಸಾಕು ಸಾಕು ಬಿಡು ಬಿಡು" ಎಂದು ನುಡಿದು ಕಣ್ಣುಗಳನ್ನು ಬಿಟ್ಟುಕೊಂಡು ಕೈಕಾಲುಗಳನ್ನು ಒದರಿಕೊಂಡು ಶ್ರಮದಿಂದ ಬೆವರಿದ ಅವಯವಗಳುಳ್ಳವಳಾಗಿ ರೋದನಗೈದಳು ; ಭಯಂಕರವಾದ ವೇಗವುಳ್ಳ ಆ ರೋದನ ಶಬ್ದದಿಂದ ಪರ್ವತಗಳೂ ಭೂಮಿಯೂ ಗ್ರಹಗಳ ಸಹಿತವಾದ ಗಗನವೂ ನಡುಗಿದವು ; ರಸಾತಲದಲ್ಲಿಯೂ ದಿಕ್ಕುಗಳಲ್ಲಿಯೂ ಪ್ರತಿಧ್ವನಿಗಳುಂಟಾದವು ; ಜನರೆಲ್ಲರು ಸಿಡಿಲುಬಿತ್ತೆಂಬ ಶಂಕೆಯಿಂದ ಭೂಮಿಯಲ್ಲಿ ಬಿದ್ದರು ! ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ಪೂತನೆಯು ತೆರೆಯಲ್ಪಟ್ಟ ಸ್ತನಗಳುಳ್ಳವಳಾಗಿ ಕೇಶಗಳನ್ನು ಚದರಿಸಿಕೊಂಡು ಪಾದಗಳನ್ನೂ ಭುಜಗಳನ್ನೂ ನೀಡಿಕೊಂಡು ಬಾಯನ್ನು ತೆರಕೊಂಡು ಘೋರವಾದ ತನ್ನ ರಾಕ್ಷಸರೂಪವನ್ನು ಪಡೆದು ವಜ್ರಾಯುಧದಿಂದ ಪ್ರಹರಿಸಲ್ಪಟ್ಟ ವೃತ್ರಾಸುರನಂತೆ ನಿರ್ಜೀವಳಾಗಿ ಬಿದ್ದಳು ; ಆ ರಾಕ್ಷಸಿಯ ದೇಹವು ಬೀಳುವ ಸಮಯದಲ್ಲಿ ಆರು ಹರಿದಾರಿಗಳ ಮಧ್ಯದಲ್ಲಿದ್ದ ವೃಕ್ಷಗಳನ್ನು ಚೂರ್ಣಮಾಡಿ ಮಹತ್ತಾದ ಆಶ್ಚರ್ಯವನ್ನುಂಟುಮಾಡಿತು ; ನೇಗಲುಗಳಂತೆ ಭಯಂಕರವಾದ ಕೋರೆದಾಡೆಗಳಿಂದ ಯುಕ್ತವಾದ ಮುಖವುಳ್ಳದ್ದಾಗಿ ಪರ್ವತದ ಗುಹೆಗಳಂತೆ ಹೊಳ್ಳೆಗಳುಳ್ಳ ನಾಶಿಕವುಳ್ಳದ್ದಾಗಿ ಪರ್ವತಾಗ್ರದ ಗುಂಡುಕಲ್ಲುಗಳಂತೆ ಭಯಂಕರವಾದ ಸ್ತನಗಳುಳ್ಳದ್ದಾಗಿ ಚದರಿದ ಕೆಂಪು ಕೇಶಗಳುಳ್ಳದ್ದಾಗಿ ಅಂಧಕೂಪದಂತೆ ಅತ್ಯಂತ ಆಳವಾದ ನೇತ್ರಗಳುಳ್ಳದ್ದಾಗಿ ಮಳಲು ರಾಸಿಗಳಂತೆ ಭಯಂಕರವಾದ ಜಘನಪ್ರದೇಶವುಳ್ಳದ್ದಾಗಿ ಸೇತುವೆಗಳಂತೆ ವಿಸ್ತಾರವಾದ ಭುಜಗಳೂ ತೊಡೆಗಳೂ ಪಾದಗಳೂ ಉಳ್ಳದ್ದಾಗಿ ನೀರಿಲ್ಲದ ಮಡುವಿನಂತೆ ಹಳ್ಳವಾದ ಉದರವುಳ್ಳದ್ದಾಗಿದ್ದ ಆ ದೇಹವನ್ನು ಕಂಡು ಪೂರ್ವದಲ್ಲೇ ಅವಳ ಶಬ್ದದಿಂದ ಛಿನ್ನಗಳಾದ ಹೃದಯಗಳೂ ಶ್ರೋತ್ರಗಳೂ ಮಸ್ತಕಗಳೂ ಉಳ್ಳವರಾದ ಗೋಪಸ್ತ್ರೀಯರೂ ಗೋಪಾಲಕರೂ ಭಯವನ್ನೈದಿ ಆ ದೇಹದಮೇಲೆ ನಿರ್ಭಯವಾಗಿ ವಿಹರಿಸುತಲಿದ್ದ ಶ್ರೀಕೃಷ್ಣನನ್ನು ಕಂಡು ಸಂಭ್ರಾಂತರಾಗಿ ಶೀಘ್ರದಲ್ಲಿ ಆ ದೇಹದಮೇಲೆ ಹತ್ತಿ ಆ ಬಾಲಕನನ್ನು ತೆಗೆದುಕೊಂಡು ಯಶೋದಾದೇವಿ ರೋಹಿಣೀದೇವಿಯರೊಡಗೂಡಿ ಸಮಸ್ತ ಅವಯವಗಳಲ್ಲಿಯೂ ಗೋವಿನ ಬಾಲಗಳಿಂದ ಮಂತ್ರಿಸಿ ರಕ್ಷೆಯಂಗೈದರು ; ಗೋಮೂತ್ರದಿಂದ ಬಾಲಕನನ್ನು ಸ್ನಾನಮಾಡಿಸಿ ಗೋವಿನ ಕಾಲುಧೂಳಿಗಳಿಂದಲೂ ಗೋಮಯದಿಂದಲೂ ಹನ್ನೆರಡು ಅವಯವಗಳಲ್ಲಿಯೂ ಭಗವಂತನ ಕೇಶವಾದಿ ನಾಮಗಳಿಂದ ರಕ್ಷೆಯಂಗೈದರು ; ಅನಂತರದಲ್ಲಿ ಗೋಪಸ್ತ್ರೀಯರು ಸ್ವಲ್ಪ ಸಾವಧಾನ ಮನಸ್ಸುಳ್ಳವರಾಗಿ ಆಚಮನಗೈದು ತಮ್ಮ ದೇಹದ ಅವಯವಗಳಲ್ಲಿಯೂ ಹಸ್ತಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ಅಜಾದಿ ಏಕಾದಶ ಬೀಜಗಳನ್ನು—ಹಸ್ತಶುದ್ಧಿಯಲ್ಲಿ ಮೂರು, ಬೆರಳುಗಳ ಸಂಧಿಯಲ್ಲಿ ನಾಲ್ಕು, ಪಾದಾದಿಗಳಲ್ಲಿ ನಾಲ್ಕು—ಇಟ್ಟು ನ್ಯಾಸವನ್ನು ಮಾಡಿ ಪರಿಶುದ್ಧರಾಗಿ ಅನಂತರದಲ್ಲಿ ಅದೇರೀತಿಯಲ್ಲಿ ಆ ಬಾಲಕನಿಗೂ ರಕ್ಷೆಯನ್ನಿಡುತ "ಅಜನು ನಿನ್ನ ಪಾದಗಳನ್ನು ರಕ್ಷಿಸಲಿ ! ಸೂಕ್ಷ್ಮರೂಪನಾದ ದೇವನು ನಿನ್ನ ಮೊಳಕಾಲುಗಳನ್ನು ರಕ್ಷಿಸಲಿ ! ಯಜ್ಞನಾಮಕನಾದ ಭಗವಂತನು ನಿನ್ನ ತೊಡೆಗಳನ್ನು ರಕ್ಷಿಸಲಿ ! ಅಚ್ಯು

ತನು ನಿನ್ನ ನಡುವನ್ನು ರಕ್ಷಿಸಲಿ ! ಹಯಗ್ರೀವಮೂರ್ತಿಯು ನಿನ್ನ ಉದರವನ್ನು ರಕ್ಷಿಸಲಿ ! ಕೇಶವನು ನಿನ್ನ ಹೃದಯವನ್ನು ರಕ್ಷಿಸಲಿ ! ಈಶ್ವರನು ನಿನ್ನ ವಕ್ಷಸ್ಥಳವನ್ನು ರಕ್ಷಿಸಲಿ ! ಸೂರ್ಯನು ನಿನ್ನ ಕಂಠವನ್ನು ರಕ್ಷಿಸಲಿ ! ವಿಷ್ಣುವು ನಿನ್ನ ಭುಜಗಳನ್ನು ರಕ್ಷಿಸಲಿ ! ತ್ರಿವಿಕ್ರಮನು ನಿನ್ನ ಮುಖವನ್ನು ರಕ್ಷಿಸಲಿ ! ಪರಮೇಶ್ವರನು ನಿನ್ನ ಶಿರಸ್ಸನ್ನು ರಕ್ಷಿಸಲಿ ! ಚಕ್ರಾಯುಧವನ್ನು ಹಿಡಿದಿರುವ ದೇವನು ನಿನ್ನ ಮುಂಭಾಗದಲ್ಲಿ ನೆಲಸಿರಲಿ ! ಗದೆಯನ್ನು ಧರಿಸಿರುವ ಹರಿಯು ನಿನ್ನ ಹಿಂಭಾಗದಲ್ಲಿರಲಿ ! ಧನುರ್ಧಾರಿಯಾದ ಮಧುಸೂದನನು ಖಡ್ಗಧಾರಿಯಾದ ಅಜನು ಸಹ ನಿನ್ನ ಉಭಯ ಪಾರ್ಶ್ವಗಳಲ್ಲಿಯು ನೆಲಸಿರಲಿ ! ಉಪರಿಭಾಗದಲ್ಲಿ ಉಪೇಂದ್ರನು ವಾಸಂಗೈದಿರಲಿ ! ಕೆಳಭಾಗದಲ್ಲಿ ತಾರ್ಕ್ಷ್ಯನು ನೆಲಸಿರಲಿ ! ಹಲಾಯುಧ ಧಾರಿಯು ಎಲ್ಲಾ ಕಡೆಯಲ್ಲೂ ವಾಸಮಾಡಲಿ ! ” ಎಂದು ಬಾಹ್ಯರಕ್ಷೆಯನ್ನು ಮಾಡಿ ಆ ಬಳಿಕ “ ಹೃಷೀಕೇಶನು ನಿನ್ನ ಚಕ್ಷುರಾದಿ ಇಂದ್ರಿಯಗಳನ್ನು ರಕ್ಷಿಸಲಿ ! ಶ್ರೀನಾರಾಯಣನು ನಿನ್ನ ಪ್ರಾಣಗಳನ್ನು ರಕ್ಷಿಸಲಿ ! ಶ್ವೇತದ್ವೀಪಪತಿಯಾದ ಅನಿರುದ್ಧನು ನಿನ್ನ ಚಿತ್ತವನ್ನು ರಕ್ಷಿಸಲಿ ! ಯೋಗೇಶ್ವರನಾದ ವಾಸುದೇವನು ನಿನ್ನ ಮನಸ್ಸನ್ನು ರಕ್ಷಿಸಲಿ ! ಪೃಶ್ನಿಗರ್ಭನಾದ ಹರಿಯು ನಿನ್ನ ಬುದ್ಧಿಯನ್ನು ರಕ್ಷಿಸಲಿ ! ಭಗವಂತನಾದ ಸಂಕರ್ಷಣ ಮೂರ್ತಿಯು ನಿನ್ನ ಅಹಂಕಾರವನ್ನು ರಕ್ಷಿಸಲಿ ! ಗೋವಿಂದನು ಆಡುತಲಿರುವ ನಿನ್ನನ್ನು ರಕ್ಷಿಸಲಿ ! ಶ್ರೀ ಮಾಧವನು ಪವಳಿಸಿರುವ ನಿನ್ನನ್ನು ರಕ್ಷಿಸಲಿ ! ಶ್ರೀ ವೈಕುಂಠನು ನಡೆಯುತಲಿರುವ ನಿನ್ನನ್ನು ರಕ್ಷಿಸಲಿ ! ಲಕ್ಷ್ಮೀಪತಿಯು ಕುಳಿತಿರುವ ನಿನ್ನನ್ನು ರಕ್ಷಿಸಲಿ ! ಸರ್ವಗ್ರಹಗಳಿಗೂ ಭಯಂಕರನಾಗಿ ಯಜ್ಞಭೋಕ್ತೃವಾದ ಯಜ್ಞೇಶ್ವರನೂ ಭೋಜನಂಗೈಯುವ ನಿನ್ನನ್ನು ರಕ್ಷಿಸಲಿ ! ಮತ್ತು ಶಾಕಿನೀ ಡಾಕಿನೀ ರಾಕ್ಷಸ ಕೂಷ್ಮಾಂಡ ಮೊದಲಾದ ಬಾಲಗ್ರಹಗಳು ಭೂತಪ್ರೇತ ಪಿಶಾಚಗಳು ಯಕ್ಷ ರಾಕ್ಷಸ ವೈನಾಯಕ ಗ್ರಹಗಳು ಕೋಟರೇ ರೇವತಿ ಜೇಷ್ಟೆ ಪೂತನೆ ಮಾತೃಕಾದಿ ಗ್ರಹಗಳು ಉನ್ಮಾದ ಅಪಸ್ಮಾರಕ ಮೊದಲಾದ ದೇಹಪ್ರಾಣೇಂದ್ರಿಯಗಳಿಗೆ ದ್ರೋಹಮಾಡುವ ದುಷ್ಟಗ್ರಹಗಳು ಸ್ವಪ್ನದಲ್ಲಿ ಕಾಣಲ್ಪಡುವ ದುಷ್ಟಗ್ರಹಗಳು ಮಹಾ ಉತ್ಪಾತಗಳು ವೃದ್ಧಗ್ರಹಗಳು ಬಾಲಗ್ರಹಗಳು ಮೊದಲಾಗಿ ಶ್ರೀ ವಿಷ್ಣುವಿನ ನಾಮೋಚ್ಚಾರಣ ಮಾತ್ರದಿಂದ ಭಯಪಡುವ ಸಮಸ್ತ ಗ್ರಹಗಳೂ ನಿನ್ನ ಕ್ಷೇಮಕ್ಕೋಸ್ಕರ ವಿಲಯವನ್ನೈದಲಿ ! ” ಎಂದು ಅಂತರರಕ್ಷೆಯನ್ನು ಮಾಡಿದರು.

ಈ ರೀತಿಯಲ್ಲಿ ಬಾಲಕನಲ್ಲಿ ಪ್ರೇಮದಿಂದ ಬದ್ಧರಾದ ಗೋಪಸ್ತ್ರೀಯರಿಂದ ರಕ್ಷೆಗಳನ್ನು ಮಾಡಲ್ಪಟ್ಟ ಆ ಶಿಶುವಿಗೆ ತಾಯಾದ ಯಶೋದಾದೇವಿಯು ಸ್ತನ್ಯಪಾನಮಾಡಿಸಿ ಮಂಚದಲ್ಲಿ ಮಲಗಿಸಿದಳು ! ಆ ಸಮಯದಲ್ಲಿ ನಂದಗೋಪನು ಮೊದಲಾದ ಗೋಪಾಲಕರು ಮಧುರಾಪುರದಿಂದ ಗೋಕುಲಕ್ಕೆ ಬಂದು ಪೂತನೆಯ ದೇಹವನ್ನು ಕಂಡು ಅತ್ಯಾಶ್ಚರ್ಯಪಟ್ಟು ವಸುದೇವನು ಹೇಳಿದ ಅರ್ಥವು ಸತ್ಯವಾಯಿತೆಂದೂ ಆತನು ತಪಃಪ್ರಭಾವವುಳ್ಳ ಋಷಿಯೋ ಅಥವಾ ಮಹಾ ಜ್ಞಾನಿಯೋ ಎಂದೂ ನುಡಿದುಕೊಳ್ಳುತಿದ್ದರು ! ಅನಂತರದಲ್ಲಿ ವ್ರಜದಲ್ಲಿದ್ದ ಗೋಪಾಲರು ಪೂತನೆಯ ದೇಹದ ಅವಯವಗಳನ್ನು ಕೊಡಲಿಗಳಿಂದ ಬೇರೆ ಬೇರೇ ಕತ್ತರಿಸಿ ದೂರಕ್ಕೆ ತೆಗೆದುಕೊಂಡು ಹೋಗಿ ಕಾಷ್ಠಗಳಲ್ಲಿಟ್ಟು ದಹಿಸಿದರು ! ಎಲೈ ಅರಸೆ, ಶ್ರೀಕೃಷ್ಣನು ಸ್ತನಪಾನ ಮಾಡಿದ್ದರಿಂದ ಆ ಕ್ಷಣದಲ್ಲೇ ನಷ್ಟವಾದ ಪಾಪವುಳ್ಳ ಪೂತನೆಯ ದಹಿಸಲ್ಪಟ್ಟ ದೇಹದ ಧೂಮವು ಅಗರು ಚಂದನ ಧೂಮದಂತೆ ಸುಗಂಧವುಳ್ಳದ್ದಾಯಿತು ; ಬಾಲಕರನ್ನು ಸಂಹರಿಸಿ ಅವರ ರಕ್ತವನ್ನು ಆಹಾರಮಾಡುತ್ತಿದ್ದ ರಾಕ್ಷಸಿಯಾದ ಪೂತನೆಯು ಶ್ರೀಕೃಷ್ಣನಿಗೆ ದ್ರೋಹ ಚಿಂತೆಯಿಂದ ಸ್ತನ್ಯವನ್ನು ಕೊಟ್ಟು ಉತ್ತಮಗತಿಯನ್ನು ಪಡೆದಳು ; ಹೀಗಿರುವಲ್ಲಿ ವಿಶ್ವಾಸಯುಕ್ತವಾಗಿ ಭಕ್ತಿಯಿಂದ ಪರಮಾತ್ಮನಾದ ಶ್ರೀಕೃಷ್ಣದೇವನಿಗೆ ಸ್ತನಪಾನ ಮಾಡಿಸಿದ ಆತನ ತಾಯಾದ ಯಶೋದಾದೇವಿ ಮೊದಲಾದವರ ಸದ್ಗತಿಯನ್ನು ಹೇಳುವದೇನು ! ಭಕ್ತರ ಹೃತ್ಪದ್ಮವಾಸಿಯಾಗಿ ಲೋಕವಂದಿತರಾದ ಬ್ರಹ್ಮಾದಿ ದೇವತೆಗಳಿಂದ ನಮಸ್ಕರಿಸಲ್ಪಡುವ ಪಾದಾಂಬುಜ ಯುಗ್ಮದಿಂದ ಯಾವಳ ಅಂಗವನ್ನು ತುಳಿದು ಭಗವಂತನಾದ ಶ್ರೀಕೃಷ್ಣನು ಸ್ತನ್ಯಪಾನಂಗೈದನೊ ಆ ಪೂತನೆಯು ರಾಕ್ಷಸಿಯಾದರೂ ಆತನ ಜನನಿಗೆ ಯೋಗ್ಯವಾದ ಸದ್ಗತಿಯು

ನ್ನು ಪಡೆದಳು ; ಇನ್ನು ಶ್ರೀಕೃಷ್ಣನಿಂದ ಪಾವನಮಾಡಲ್ಪಟ್ಟ ಸ್ತನಗಳುಳ್ಳ ಗೋವುಗಳು ಮುಕ್ತಿಯನ್ನು ಪಡೆಯುವದಕ್ಕೆ ಹೇಳತಕ್ಕದ್ದೇನು ! ಮುಕ್ತಿ ಮೊದಲಾದ ಸಕಲ ಇಷ್ಟಾರ್ಥಗಳನ್ನು ಕೊಡುವ ದೇವಕೀ ಪುತ್ರನಾದ ಭಗವಂತನು ಪುತ್ರಸ್ನೇಹದಿಂದುಕ್ಕಿ ಸುರಿಯುವ ಗೋಪಿಕಾಸ್ತ್ರೀಯರ ಮತ್ತು ಗೋವುಗಳ ಸ್ತನಕ್ಷೀರವನ್ನು ಪಾನಮಾಡಿದನು ; ನಿರಂತರದಲ್ಲಿಯು ಶ್ರೀಕೃಷ್ಣನಲ್ಲಿ ಪುತ್ರದೃಷ್ಟಿಯುಳ್ಳವರಾಗಿದ್ದ ಆ ಗೋಪಸ್ತ್ರೀಯರಿಗೂ ಗೋವುಗಳಿಗೂ ಅಜ್ಞಾನದಿಂದುಂಟಾಗುವ ಸಂಸಾರವು ಪುನಹ ಪ್ರಾಪ್ತವಾಗಲಾರದು !

ಅನಂತರದಲ್ಲಿ ಗೋಪಾಲರು ಕಾಷ್ಠಗಳಿಂದ ದಹಿಸಲ್ಪಡುತಲಿದ್ದ ಪೂತನೆಯ ದೇಹ ಧೂಮವನ್ನಾಘ್ರಾಣಿಸಿ ಅಷ್ಟು ಸೌರಭ್ಯವೆಲ್ಲೀದೆಂದು ನುಡಿಯುತ ವ್ರಜಕ್ಕೆ ತಿರಿಗಿ ಬಂದು ಆ ವೃತ್ತಾಂತವನ್ನು ತಿಳಿಸಿದರು. ನಂದಗೋಪನು ಪೂತನೆಯ ವೃತ್ತಾಂತವನ್ನೂ ಶಿಶುವಿನ ಕ್ಷೇಮವನ್ನೂ ಆ ರಾಕ್ಷಸಿಯ ವಿಲಯವನ್ನೂ ಕೇಳಿ ಆಶ್ಚರ್ಯಪಟ್ಟು ಗಂಭೀರವಾದ ಬುದ್ಧಿಯುಳ್ಳವನಾಗಿ ತನ್ನ ಪುತ್ರನನ್ನೆತ್ತಿಕೊಂಡು ಸ್ನೇಹದಿಂದ ಶಿರಸ್ಸನ್ನಾಘ್ರಾಣಿಸಿ ಪರಮಸಂತೋಷವನ್ನೈದಿದನು ! ಎಲೈ ಅರಸೆ, ಆಶ್ಚರ್ಯಕರವಾದ ಶ್ರೀಕೃಷ್ಣನ ಬಾಲಚರಿತ್ರರೂಪವಾದ ಈ ಪೂತನಾವುಕ್ತಿಯನ್ನು ವಿಶ್ವಾಸದಿಂದ ಶ್ರವಣಮಾಡುವ ಮನುಷ್ಯನು ಗೋವಿಂದನಲ್ಲಿ ಭಕ್ತಿಯುಳ್ಳವನಾಗುವನು !

---

## ೭ನೇ ಅಧ್ಯಾಯ.

### ಶ್ರೀಕೃಷ್ಣನು ಶಕಟವನ್ನು ಮುರಿದು ತೃಣಾವರ್ತನನ್ನು ವಧಿಸಿ ತನ್ನ ಬಾಯಲ್ಲಿ ಲೋಕಗಳನ್ನು ತೋರಿಸಿದ್ದು.

ಆ ಬಳಿಕ ಪರೀಕ್ಷಿದ್ರಾಯನು ಶುಕಮುನಿಯನ್ನು ಕುರಿತು—ಎಲೈ ಮುನೀಶ್ವರನೆ, ಭಗವಂತನಾಗಿ ಪರಮೇಶ್ವರನಾದ ಶ್ರೀಹರಿಯು ಮತ್ಸ್ಯಾವತಾರ ಮೊದಲಾದ ಅವತಾರಂಗಳಿಂದ ಮಾಡಿದ ಚರಿತ್ರೆಗಳು ಕರ್ಣಗಳಿಗೆ ಸುಖಾವಹಂಗಳಾಗಿ ಮನಸ್ಸಿಗೆ ಪ್ರಿಯಕರಂಗಳಾಗಿವೆ ; ಆ ಚರಿತ್ರೆಗಳನ್ನು ಕೇಳುವ ಪುರುಷನಿಗೆ ಮನಸ್ಸಿನ ಬಳಲಿಕೆಯೂ ಅದಕ್ಕೆ ಕಾರಣವಾದ ಅಭಿಲಾಷೆಯೂ ಶಾಂತವಾಗಿ ಶೀಘ್ರದಲ್ಲಿ ಚಿತ್ತಶುದ್ಧಿಯುಂಟಾಗಿ ಶ್ರೀಹರಿಭಕ್ತಿಯೂ ಹರಿದಾಸರ ಮಿತ್ರತ್ವವೂ ಉಂಟಾಗುವದು ; ಆದ್ದರಿಂದ ನೀನು ನನ್ನಲ್ಲಿ ಅನುಗ್ರಹವನ್ನುಮಾಡಿ ಸಾರಭೂತವಾದ ಶ್ರೀಹರಿಯ ಚರಿತ್ರವನ್ನು ನಿರೂಪಿಸು ; ಮನುಷ್ಯಾವತಾರವನ್ನು ಮಾಡಿ ಮನುಷ್ಯರ ನಡತೆಯನ್ನನುವರ್ತಿಸುವ ಶ್ರೀಕೃಷ್ಣದೇವನ ಆಶ್ಚರ್ಯಕರವಾಗಿ ಅನೇಕವಾದ ಬಾಲಚರಿತ್ರೆಗಳನ್ನು ನಿರೂಪಿಸು—ಎಂದು ಪ್ರಾರ್ಥಿಸಿದನು.

ಶುಕಮುನಿಯು ಆತನನ್ನು ಕುರಿತು—ಎಲೈ ಪರೀಕ್ಷಿದ್ರಾಯನೆ, ಒಂದು ಸಮಯದಲ್ಲಿ ಪತಿವ್ರತೆಯಾದ ಯಶೋದಾದೇವಿಯು ತನ್ನ ಶಿಶು ಮಗ್ಗುಲಾದ್ದರಿಂದ ಮಾಡತಕ್ಕ ಮಹೋತ್ಸವಾಭಿಷೇಕದಲ್ಲಿ ಜನ್ಮನಕ್ಷತ್ರಯೋಗವೂ ಉಂಟಾಗಲು ಆ ಮಹೋತ್ಸವದಲ್ಲಿ ಬಹುಮಂದಿ ಗೋಪಸ್ತ್ರೀಯರು ಮೊದಲಾದವರ ಮಧ್ಯದಲ್ಲಿ ವಾದ್ಯಗಳಿಂದಲೂ ಗಾನಗಳಿಂದಲೂ ಬ್ರಾಹ್ಮಣರ ಮಂತ್ರಘೋಷಗಳಿಂದಲೂ ಸ್ವಸ್ತಿವಚನಗಳಿಂದಲೂ ಮಂಗಳವಾಗಿ ಶೋಭಿಸುವಂತೆ ಸುತನಿಗೆ ಅಭಿಷೇಕವನ್ನು ಮಾಡಿಸಿ ಅನ್ನಾದಿಗಳಿಂದಲೂ ವಸ್ತ್ರಮಾಲ್ಯಾದಿಗಳಿಂದಲೂ ಗೋದಾನಾದಿಗಳಿಂದಲೂ ಪೂಜಿಸಲ್ಪಟ್ಟ ಬ್ರಾಹ್ಮಣರಿಂದ ಆಶೀರ್ವಾದವನ್ನು ಮಾಡಿಸಿ ನಿದ್ರೆಯಿಂದ ಕಣ್ಣುಗಳನ್ನು ಮುಚ್ಚುತಿದ್ದ ಆ ಶಿಶುವನ್ನು ಹಾಸಿಗೆಯಲ್ಲಿ ಮಲಗಿಸಿ ತನ್ನ ಶಿಶುವು ಮಗ್ಗುಲಾದ ಮಹೋತ್ಸವವನ್ನು ಮಾಡುವದರಲ್ಲಿ ಕುತೂಹಲವುಳ್ಳವಳಾಗಿ ಆ ಉತ್ಸವಕ್ಕೆ ಬಂದಿದ್ದ ಗೋಕುಲದ ಸಮಸ್ತ ಜನರನ್ನೂ ಔದಾರ್ಯಯುಕ್ತವಾದ ಮನಸ್ಸಿನಿಂದ ಪೂಜಿಸುತ ಆ ಸಂಭ್ರಮದಲ್ಲಿ ಆ ಶಿಶುವಿನ ರೋದನಧ್ವನಿಯನ್ನು ಕೇಳದಿರಲು ಆ ಬಾಲಕನು ರೋದನಮಾಡುತ ಬಂಡಿಯ ತಳಭಾಗದ ತೊಟ್ಟಿಲಿನಲ್ಲಿ ತನ್ನ ಚರಣಗಳನ್ನು ಊರ್ಧ್ವಮುಖವಾಗಿ ಚಿಮ್ಮಿದನು ; ಆಗ ಕೆಳಗೆ ಮಲಗಿರುವ ಬಾಲಕನ ಸಣ್ಣದಾಗಿ ಚಿಗುರಿನಂತೆ ಮೃದುವಾದ ಪಾದಕ್ಕೆ ತಗಲಿದ ಶಕಟವು ಹೊಡೆಯಲ್ಪಟ್ಟ ನಾನಾರಸಗಳುಳ್ಳ ಗಾಜಿನ

ಪಾತ್ರೆಗಳೂ ಕಂಚಿನ ಪಾತ್ರೆಗಳೂ ಚಕ್ರಗಳೂ ಅಚ್ಚಿನಮರವೂ ಉಳ್ಳದ್ದಾಗಿ ವ್ಯತ್ಯಸ್ತವಾಗಿ ಬಿತ್ತು; ಯಶೋದಾದೇವಿಯೂ ಮತ್ತು ಆ ಉತ್ಸವಕ್ಕೆ ಬಂದಿದ್ದ ವ್ರಜಸ್ತ್ರೀಯರೂ ನಂದಗೋಪನು ಮೊದಲಾದ ಗೋಪಾಲಕರೂ ಅದನ್ನು ಕಂಡು ಆಶ್ಚರ್ಯಪಡುತ ಆ ಶಕಟವು ವ್ಯತ್ಯಸ್ತವಾಗಿ ಹ್ಯಾಗೆ ಬಿತ್ತೆಂದು ಮನೋವ್ಯಾಕುಲವುಳ್ಳವರಾಗಿ ಮೋಹಿತರಾಗಿ ಆರ್ತರಂತೆ ಅದನ್ನು ಸುತ್ತಿಕೊಂಡು ನೋಡುತ್ತಿದ್ದರು; ಆ ಸಮಯದಲ್ಲಿ ಆ ಶಿಶುವಿನ ಸಮೀಪದಲ್ಲಿದ್ದ ಬಾಲಕರು ಆ ಕಾರಣವನ್ನು ತಿಳಿಯದಿದ್ದ ನಂದಗೋಪನು ಮೊದಲಾದ ಗೋಪಾಲಕರನ್ನೂ ಗೋಪಸ್ತ್ರೀಯರನ್ನೂ ಕುರಿತು ರೋದನಮಾಡುತಿದ್ದ ಆ ಶಿಶುವಿನ ಪಾದಪ್ರಹಾರದಿಂದ ಶಕಟವು ವ್ಯತ್ಯಸ್ತವಾಯಿತೆಂದೂ ಆ ಅರ್ಥದಲ್ಲಿ ಸಂಶಯವಿಲ್ಲವೆಂದೂ ನುಡಿದರು; ಆ ಬಾಲಕರ ವಾಕ್ಯವನ್ನು ಕೇಳಿ ಗೋಪಾಲಕರು ಊಹಿಸಲಶಕ್ಯವಾದ ಆ ಶಿಶುವಿನ ಬಲವನ್ನರಿಯದೆ ಆ ಶಿಶುವು ಬಂಡಿಯನ್ನು ಕೆಡಹಿತೆಂಬ ವಾಕ್ಯವು ಸಂಗತವಲ್ಲವೆಂದೂ ಆ ಬಾಲಕರು ತಿಳಿಯದವರೆಂದೂ ಅವರ ವಾಕ್ಯದಲ್ಲಿ ವಿಶ್ವಾಸವನ್ನು ಮಾಡಲಿಲ್ಲ; ಅನಂತರದಲ್ಲಿ ಯಶೋದಾದೇವಿಯು ರೋದನಗೈಯುತಿದ್ದ ತನ್ನ ಶಿಶುವನ್ನೆತ್ತಿಕೊಂಡು ಗ್ರಹಭೀತಿಶಂಕೆಯಿಂದ ಬ್ರಾಹ್ಮಣರಿಂದ ರಕ್ಷೋಘ್ನಸೂಕ್ತಗಳನ್ನು ಪಠಣಮಾಡಿಸಿ ಸ್ವಸ್ಥಚಿತ್ತಳಾಗಿ ಮಗನಿಗೆ ಸ್ತನ್ಯಪಾನವನ್ನು ಮಾಡಿಸಿದಳು; ಆ ಸಮಯದಲ್ಲಿ ಬ್ರಾಹ್ಮಣರು ಬಲಿಷ್ಠರಾದ ಗೋಪಾಲಕರಿಂದ ತರಲ್ಪಟ್ಟ ಆ ಶಕಟವನ್ನು ವಿನಿಯೋಗಿಸಿ ಯಥಾಶಾಸ್ತ್ರವಾಗಿ ದಧ್ಯಕ್ಷತೆ ಕುಶಾದಿಗಳಿಂದ ಶಾಂತಿದೇವತೆಗಳನ್ನು ಪೂಜಿಸಿ ನವಗ್ರಹಹೋಮವನ್ನು ಮಾಡಿದರು; ಪರರ ಗುಣಗಳಲ್ಲಿ ದೋಷಾರೋಪಣಮಾಡುವ ಅಸೂಯೆಯೂ ಪರರ ಸಂಪತ್ತುಗಳನ್ನು ನೋಡಿ ಸಹಿಸದಿರುವಣವೆಂಬ ಈರ್ಷ್ಯೆಯೂ ಅನೃತವಚನಗಳೂ ಡಂಭವೂ ಹಿಂಸೆಯೂ ಅಹಂಕಾರವೂ ರಹಿತರಾಗಿ ಸತ್ಯಶೀಲರಾದ ಬ್ರಾಹ್ಮಣರ ಆಶೀರ್ವಾದವು ವ್ಯರ್ಥವಾಗುವದಲ್ಲವೆಂದು ತಿಳಿದು ನಂದಗೋಪನು ಪವಿತ್ರಕರಗಳಾದ ಮಾವಿನಚಿಗುರು ಮೊದಲಾದ ಔಷಧಿಗಳಿಂದ ಪರಿಶುದ್ಧಮಾಡಲ್ಪಟ್ಟ ಋಗ್ಯಜುಸ್ಸಾಮಮಂತ್ರಗಳಿಂದ ಅಭಿಮಂತ್ರಿತಗಳಾದ ಜಲಗಳಿಂದ ಬ್ರಾಹ್ಮಣೋತ್ತಮರಿಂದ ಅಭಿಷೇಕಮಾಡಿಸಿ ಸಾವಧಾನಮನಸ್ಸುಳ್ಳವನಾಗಿ ಆ ಬ್ರಾಹ್ಮಣರಿಂದ ಸ್ವಸ್ತಿವಾಚನಪೂರ್ವಕವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿಸಿ ಅವರಿಗೆ ದಿವ್ಯಾನ್ನದಾನವನ್ನೂ ಸಮಸ್ತ ಸದ್ಗುಣಗಳಿಂದ ಯುಕ್ತಳಾಗಿ ವಸ್ತ್ರಾಭರಣ ಪುಷ್ಪಮಾಲಿಕೆ ಸುವರ್ಣ ರಜತಾಭರಣಗಳಿಂದ ಅಲಂಕೃತವಾದ ಗೋವುಗಳನ್ನೂ ತನ್ನ ಪುತ್ರನಿಗೆ ಅಭ್ಯುದಯವುಂಟಾಗುವದಕ್ಕೋಸ್ಕರ ಮಾಡಿದನು; ಆ ಬ್ರಾಹ್ಮಣರು ಸಂತುಷ್ಟರಾಗಿ ಆ ಶಿಶುವಿಗೆ ಆಶೀರ್ವಾದವನ್ನು ಮಾಡಿದರು! ಮಂತ್ರಜ್ಞರಾಗಿ ಸತ್ಯದಯಾದಿ ಗುಣಯುಕ್ತರಾದ ಬ್ರಾಹ್ಮಣರಿಂದ ಮಾಡಲ್ಪಡುವ ಆಶೀರ್ವಾದಗಳು ಎಂಥಾ ಕಾಲದಲ್ಲಿಯೂ ವ್ಯರ್ಥವಾಗವು!

ಎಲೈ ಪರೀಕ್ಷಿದ್ರಾಯನೆ, ಮತ್ತೊಂದು ಸಮಯದಲ್ಲಿ ಯಶೋದಾದೇವಿಯು ತೊಡೆಯಮೇಲೆ ಕುಳಿತಿದ್ದ ತನ್ನ ಪುತ್ರನಾದ ಶ್ರೀಕೃಷ್ಣನನ್ನು ಲಾಲಿಸುತ ಪರ್ವತ ಶಿಖರದಂತೆ ಅತ್ಯಂತ ಭಾರವುಳ್ಳವನಾಗಿದ್ದ ಆ ಪುತ್ರನನ್ನು ಹೊರಲಾರದೆ ಪೀಡಿತಳಾಗಿ ಆಶ್ಚರ್ಯಪಡುತ ಕೆಳಗಿಳಿಸಿ ಜಗತ್ತುಗಳನ್ನು ಉದರದಲ್ಲಿ ಧರಿಸಿದ್ದರಿಂದ ಆ ಭಗವಂತನು ಅಷ್ಟು ಭಾರವೆಂದರಿಯದೆ ಪ್ರಾಕೃತಬುದ್ಧಿಯಿಂದ ಅದೊಂದುತ್ಪಾತವೆಂದು ಶಂಕಿಸಿ ಮಹಾಪುರುಷನಾದ ಶ್ರೀವಿಷ್ಣುವನ್ನು ಧ್ಯಾನಮಾಡಿದಳು; ಆಗ ಕಂಸನ ಭೃತ್ಯನಾದ ತೃಣಾವರ್ತನೆಂಬ ದೈತ್ಯನು ಕಂಸನಿಂದ ಕಳುಹಿಸಲ್ಪಟ್ಟು ಸುಂಟರುಗಾಳಿಯ ಸ್ವರೂಪದಿಂದ ಬಂದು ಗೋಕುಲದಲ್ಲಿ ಧೂಳಿಗಳಿಂದ ಸರ್ವಜನರ ನೇತ್ರಗಳನ್ನೂ ಮುಚ್ಚಿಸಿ ಮಹಾ ಶಬ್ದದಿಂದ ದಿಕ್ಕುದಿಕ್ಕುಗಳಲ್ಲಿಯೂ ಧ್ವನಿಗೈಯುತ ಆ ಬಾಲಕನನ್ನಪಹರಿಸಿದನು; ಆಗ ಗೋಕುಲವು ಅಂಧಕಾರದಿಂದ ಆವರಿಸಲ್ಪಟ್ಟದ್ದಾಗಲು ಯಶೋದಾದೇವಿಯು ತನ್ನ ಪುತ್ರನನ್ನು ಮಲಗಿಸಿದ್ದ ಸ್ಥಳದಲ್ಲಿ ಆತನನ್ನು ಕಾಣದೆ ಮೋಹಿತಳಾಗಿ ತನ್ನನ್ನೂ ಪರರನ್ನೂ ಸಹಾ ತಿಳಿಯದೆ ಭ್ರಾಂತಳಾಗಿ ತೃಣಾವರ್ತನಿಂದ ಎರಚಲ್ಪಟ್ಟ ಹರಳು ಕಲ್ಲುಗಳಿಂದ ಉಪದ್ರಪಟ್ಟವಳಾಗಿ ವ್ಯಸನಪಡುತ ಕ್ರೂರವಾಗಿ ಚಕ್ರಾಕಾರವಾದ ಚಂಡಮಾರುತದಿಂದ ವರ್ಷಿಸಲ್ಪಟ್ಟ ಧೂಳಿಗಳಿಂದ ಬಾಲಕನು ಹೋದ ಮಾರ್ಗವನ್ನು ಕಾಣದೆ ಆತನನ್ನೇ ಸ್ಮರಿಸುತ ಅತ್ಯಂತ

ದೈನ್ಯದಿಂದ ರೋದನಗೈಯುತ ಕರುವನ್ನು ಕಾಣದೆ ವ್ಯಸನಪಡುವ ಗೋವಿನಂತೆ ಭೂಮಿಯಲ್ಲಿ ಬಿದ್ದಳು ; ಅನಂತರದಲ್ಲಿ ಆ ಸುಂಟರುಗಾಳಿಯಿಂದ ಹುಟ್ಟಿದ ಧೂಳಿಗಳ ವೃಷ್ಟಿಯು ಶಾಂತವಾಗಲು ಅಲ್ಲಿದ್ದ ಗೋಪಸ್ತ್ರೀಯರು ಯಶೋದಾದೇವಿಯ ರೋದನಧ್ವನಿಯನ್ನು ಕೇಳಿ ಅತ್ಯಂತ ಸಂತಾಪವನ್ನೈದಿ ಬಾಷ್ಪಪೂರ್ಣಗಳಾದ ನೇತ್ರಯುಕ್ತವಾದ ಮುಖವುಳ್ಳವರಾಗಿ ನಂದಗೋಪನ ಪುತ್ರನನ್ನು ಕಾಣದೇ ಅವರೂ ರೋದನಗೈದರು ! ಚಕ್ರವಾಕರೂಪವನ್ನು ಧರಿಸಿದ ತೃಣಾವರ್ತನೆಂಬ ದೈತ್ಯನು ಶ್ರೀಕೃಷ್ಣನನ್ನಪಹರಿಸಿಕೊಂಡು ಆಕಾಶವನ್ನೈದಿ ಆತನ ಭಾರದಿಂದ ಪೀಡಿತನಾದ್ದರಿಂದ ಶಾಂತವಾದ ವೇಗವುಳ್ಳವನಾಗಿ ಮುಂದೆ ತೆಗೆದುಕೊಂಡು ಹೋಗುವದಕ್ಕೆ ಶಕ್ತಿಯಿಲ್ಲದೆ ಕೃಷ್ಣನನ್ನು ಪರ್ವತಪ್ರಾಯನನ್ನಾಗಿ ತಿಳಿದು ಆತನು ತನ್ನ ಕಂಠವನ್ನು ಗ್ರಹಿಸಿದ್ದದ್ದರಿಂದ ಅದ್ಭುತಮಹಿಮನಾದ ಆ ಬಾಲಕನನ್ನು ಕಿತ್ತು ಬಿಸಾಡುವದಕ್ಕೆ ಸಾಮರ್ಥ್ಯವಿಲ್ಲದೆ ಹೊರಕ್ಕೆ ಹೊರಟ ಕಣ್ಣುಗುಡ್ಡುಗಳುಳ್ಳವನಾಗಿ ನಿಶ್ಚೇಷ್ಟನಾಗಿ ನಿಸ್ತೇಜಸ್ಕನಾಗಿ ನಿಷ್ಪ್ರಾಣನಾಗಿ ಆ ಬಾಲಕಸಮೇತನಾಗಿ ಗೋಕುಲದಲ್ಲಿ ಬಿದ್ದನು ; ಆಕಾಶದಿಂದ ಮಹಾಶಿಲೆಯಮೇಲೆ ಬಿದ್ದು ಚೂರ್ಣೀಕೃತಗಳಾದ ಸರ್ವಾಂಗಗಳುಳ್ಳವನಾಗಿ ಭಯಂಕರನಾಗಿ ಪರಮೇಶ್ವರನ ಬಾಣದಿಂದ ಪೆಟ್ಟುಬಿದ್ದ ತ್ರಿಪುರದಂತಿರುವ ಆ ದೈತ್ಯನನ್ನೂ ಆತನಿಂದ ಕೊಂಡುಹೋಗಲ್ಪಟ್ಟು ವಿಮುಕ್ತನಾಗಿ ಆತನ ಕಂಠದಲ್ಲಿ ಜೋಲಾಡುತ ಕ್ಷೇಮಯುಕ್ತನಾಗಿದ್ದ ಕೃಷ್ಣನನ್ನೂ ನೋಡಿ ಗುಂಪುಗೂಡಿ ರೋದನಮಾಡುತಿದ್ದ ಗೋಪಸ್ತ್ರೀಯರು ಆ ಬಾಲಕನನ್ನು ತೆಗೆದುಕೊಂಡು ಹೋಗಿ ಆತನ ತಾಯಾದ ಯಶೋದಾದೇವಿಗೆ ಒಪ್ಪಿಸಿ ಆಶ್ಚರ್ಯಪಟ್ಟವರಾದರೂ ನಂದಗೋಪನು ಮೊದಲಾದ ಗೋಪಾಲರೊಡಗೂಡಿ ಶ್ರೀಕೃಷ್ಣನನ್ನು ಪುನಹ ಪಡೆದದ್ದರಿಂದ ಅತ್ಯಂತ ಸಂತೋಷವನ್ನೈದಿ ಆ ಬಾಲಕನು ದೈತ್ಯನಿಂದ ಮೃತ್ಯುವಶವಾಗಿಯೂ ಪುನಹ ಬಂದು ಸೇರಿದ್ದು ಅತ್ಯಾಶ್ಚರ್ಯವೆಂದು ವಿಸ್ಮಯವನ್ನೈದಿದರು ; ನಂದಗೋಪನು ಹಿಂಸಕನಾದ ತೃಣಾವರ್ತನೆಂಬ ದೈತ್ಯನು ದುಷ್ಟನಾದ್ದರಿಂದ ತನ್ನ ಪಾಪದಿಂದ ತಾನೇ ಮಡಿದನೆಂದೂ ಸರ್ವರಲ್ಲಿಯೂ ಸಮನಾಗಿರುವ ಸಾಧುವಾದ ಪುರುಷನು ಯಂಥಾ ಭಯದಿಂದಲೂ ವಿಮುಕ್ತನಾಗುವನೆಂದೂ ತನ್ನಿಂದ ಪೂರ್ವದಲ್ಲಿ ಯಾವ ತಪಸ್ಸು ಮಾಡಲ್ಪಟ್ಟಿತೊ—ಅಧೋಕ್ಷಜನಪೂಜೆಯು ಮಾಡಲ್ಪಟ್ಟಿತೊ—ವಾಪೀಕೂಪಾದಿ ನಿರ್ಮಾಣವೂ ಪಂಚಯಜ್ಞಹೋತ್ರಾದಿಯೂ ದಾನವೂ ಸತ್ಕರ್ಮಗಳೂ ಮಾಡಲ್ಪಟ್ಟದ್ದವೊ ಆ ಸತ್ಕರ್ಮಗಳ ಪ್ರಭಾವದಿಂದ ಶ್ರೀಕೃಷ್ಣನು ಬದುಕಿ ನಮ್ಮ ಅದೃಷ್ಟವಶದಿಂದ ಕ್ಷೇಮವಾಗಿ ಬಂದು ಸೇರಿ ತನ್ನ ಬಂಧುಗಳನ್ನು ಸಂತೋಷಪಡಿಸಿದನೆಂದೆಣಿಸಿ ಸಂತುಷ್ಟನಾಗಿ ಆ ವ್ರಜದಲ್ಲುಂಟಾದ ಬಹಳವಾದ ಉತ್ಪಾತಗಳನ್ನು ಸ್ಮರಿಸಿ ಆಶ್ಚರ್ಯವನ್ನೈದುತ ವಸುದೇವನ ವಚನವನ್ನು ಬಾರಿಬಾರಿಗೂ ಬಹುಮಾನ ಮಾಡುತ್ತಿದ್ದನು !

ಒಂದು ಸಮಯದಲ್ಲಿ ಯಶೋದಾದೇವಿಯು ತನ್ನ ಬಾಲಕನನ್ನೆತ್ತಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ಸ್ನೇಹಭರಿತಗಳಾಗಿ ಮೋಹದಿಂದುಕ್ಕಿ ಬರುವ ಸ್ತನಕ್ಷೀರವನ್ನು ಪಾನಮಾಡುತ ಮನೋಹರವಾಗಿ ಮುಗುಳುನಗೆಯುಳ್ಳ ಆ ಬಾಲಕನ ಮುದ್ದು ಮುಖವನ್ನು ನೋಡಿ ಲಾಲನಗೈಯುತ ಆಕಳಿಸುವ ಆ ಪುತ್ರನ ಬಾಯಲ್ಲಿ ಜಗತ್ತುಗಳನ್ನು ಕಂಡಳು ; ಆಕಾಶವನ್ನೂ ಭೂಮಿಯನ್ನೂ ಜ್ಯೋತಿಶ್ಚಕ್ರವನ್ನೂ ದಿಕ್ಕುಗಳನ್ನೂ ಸೂರ್ಯಚಂದ್ರಾಗ್ನಿಗಳನ್ನೂ ವಾಯುವನ್ನೂ ಸಮುದ್ರಗಳನ್ನೂ ದ್ವೀಪಗಳನ್ನೂ ಪರ್ವತಗಳನ್ನೂ ನದಿಗಳನ್ನೂ ವನಗಳನ್ನೂ ಸ್ಥಾವರಜಂಗಮ ರೂಪಗಳಾದ ಸರ್ವಪ್ರಾಣಿಗಳನ್ನೂ ಆತನ ಬಾಯಲ್ಲಿ ಕಂಡು ಹುಲ್ಲೇಮರಿಯ ಕಣ್ಣುಗಳಂತೆ ಕಣ್ಣುಗಳುಳ್ಳ ಆ ದೇವಿಯು ಗಡಗಡನೆ ನಡುಗುತ ನೇತ್ರಗಳನ್ನು ಮುಚ್ಚಿಕೊಂಡು ಅತ್ಯಂತ ಆಶ್ಚರ್ಯವನ್ನೈದಿದಳು !

## ೮ನೇ ಅಧ್ಯಾಯ.

## ರಾಮಕೃಷ್ಣರ ನಾಮಕರಣವು.

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ಯದುಕುಲಕ್ಕೆ ಪುರೋಹಿತನಾಗಿ ಮಹಾ ತಪಸ್ವಿಯಾದ ಗರ್ಗಾಚಾರ್ಯನು ಆ ವ್ರಜಕ್ಕೆ ಬರಲು ನಂದಗೋಪನು ಅತ್ಯಂತ ಪ್ರೀತಿಯುಕ್ತನಾಗಿ ಆತನಿಗೆ ಪ್ರತ್ಯುತ್ಥಾನವನ್ನು ಮಾಡಿ ಅಂಜಲಿಬದ್ಧನಾಗಿ ನಮಸ್ಕಾರ ಪೂರ್ವಕವಾಗಿ ದೇವತಾಬುದ್ಧಿಯಿಂದ ಪೂಜೆಯಂ ಮಾಡಿ ಭೋಜನಮಾಡಿ ಪೀಠದಲ್ಲಿ ಕುಳಿತಿದ್ದ ಆ ಆಚಾರ್ಯನನ್ನು ಕುರಿತು ಸತ್ಯಪ್ರಿಯವಚನಗಳಿಂದ ಸಂತೋಷಪಡಿಸುತ "ಎಲೈ ಬ್ರಾಹ್ಮಣೋತ್ತಮನೆ, ಪೂರ್ಣಕಾಮನಾದ ನಿನಗೆ ನಾನು ಏನು ಸತ್ಕಾರವನ್ನು ಮಾಡಲಾಪೆನು ! ಎಲೈ ಜ್ಞಾನಾದಿಗುಣಸಂಪನ್ನನಾದ ಗರ್ಗಮುನಿಯೆ, ನಿನ್ನಂಥಾ ಮಹಾತ್ಮರು ತಮ್ಮ ಇಷ್ಟಾರ್ಥಕ್ಕಾಗಿ ಸಂಚಾರ ಮಾಡುವದಿಲ್ಲ; ಕ್ಷಣಮಾತ್ರವಾದರೂ ಮನೆಯನ್ನು ಬಿಟ್ಟು ಹೊರಗೆ ಸಂಚರಿಸುವದಕ್ಕೆ ಅನುಕೂಲವಿಲ್ಲದೆ ಗೃಹಕೃತ್ಯದಲ್ಲಿ ಶ್ರಮಪಟ್ಟುಕೊಂಡು ಕೃಪಣರಾಗಿರುವ ಗೃಹಸ್ಥರ ಕ್ಷೇಮಕ್ಕೋಸ್ಕರ ಸಂಚಾರಮಾಡುತ್ತೀರಿ ; ಕಾರಣರೂಪವಾದ ಪೂರ್ವಜನ್ಮಕರ್ಮವನ್ನೂ ಕಾರ್ಯರೂಪವಾದ ಈ ಜನ್ಮದಲ್ಲಿ ಅನುಭವಿಸತಕ್ಕ ಫಲವನ್ನೂ ತಿಳಿಸುವಂಥಾ ಇಂದ್ರಿಯಗೋಚರವಲ್ಲದ ಜ್ಞಾನಕ್ಕೆ ಸಾಧನರೂಪವಾದ ಜ್ಯೋತಿಶ್ಶಾಸ್ತ್ರವು ನಿನ್ನಿಂದ ನಿರೂಪಿಸಲ್ಪಟ್ಟಿತು ; ನೀನು ಬ್ರಾಹ್ಮಣನು ; ಜನ್ಮಮಾತ್ರದಿಂದಲೇ ಜನರಿಗೆ ಗುರುವು ; ಮತ್ತು ನೀನು ಬ್ರಹ್ಮಜ್ಞಾನಿಗಳಿಗೆ ಶ್ರೇಷ್ಠನಾದಕಾರಣ ಈ ಬಾಲಕರೀರ್ವರಿಗು ನಾಮಕರಣಾದಿಗಳನ್ನು ಮಾಡು" ಎಂದು ಪ್ರಾರ್ಥಿಸಿದನು.

ಗರ್ಗಾಚಾರ್ಯನು ಆತನನ್ನು ಕುರಿತು "ಎಲೈ ನಂದನೆ, ನಾನು ಯಾದವರಿಗೆ ಆಚಾರ್ಯನೆಂದು ಭೂಮಿಯಲ್ಲಿ ಪ್ರಖ್ಯಾತಿಯನ್ನು ಪಡೆದಿದ್ದೇನೆ ; ನನ್ನಿಂದ ಈ ಬಾಲಕರಿಗೆ ನಾಮಕರಣಾದಿಗಳು ಮಾಡಲ್ಪಟ್ಟರೆ ನಿನ್ನ ಸುತನನ್ನು ಕಂಸನು ದೇವಕೀದೇವಿಯ ಸುತನೆಂದೆಣಿಸುವನು ; ನಾನು ಯದುಕುಲಕ್ಕೆ ಆಚಾರ್ಯನಾದ್ದರಿಂದ ನಾಮಕರಣಮಾಡಿದರೆ ಇವನು ಯದುಕುಮಾರನೆಂದೆಣಿಸದೆ ವಸುದೇವನ ಪುತ್ರನೆಂದೂ ದೇವಕೀದೇವಿಯಲ್ಲೇ ಜನಿಸಿದನೆಂದೂ ತಿಳಿಯುವನು ! ಎಲೈ ನಂದಗೋಪನೆ, ಪಾಪಬುದ್ಧಿಯುಳ್ಳ ಕಂಸನು ನಿನಗೂ ವಸುದೇವನಿಗೂ ಇರುವ ಸ್ನೇಹವನ್ನೂ ದೇವಕೀದೇವಿಯ ಎಂಟನೇ ಗರ್ಭವು ಸ್ತ್ರೀಶಿಶುವಾಗಿ ಹುಟ್ಟತಕ್ಕದ್ದಲ್ಲವೆಂದೂ ನಿರಂತರದಲ್ಲಿಯೂ ಚಿಂತಿಸುತ 'ನನ್ನನ್ನು ಸಂಹಾರಮಾಡುವದರಿಂದ ನಿನಗೇನು ಫಲವು ; ನಿನ್ನನ್ನು ಸಂಹರಿಸುವವನು ಮತ್ತೊಂದು ಸ್ಥಾನದಲ್ಲಿ ಆವಿರ್ಭವಿಸಿದ್ದಾನೆ' ಎಂದು ನುಡಿದ ದೇವಕೀದೇವಿಯ ಸ್ತ್ರೀಶಿಶುವಿನ ವಾಕ್ಯವನ್ನು ಕೇಳಿರುವದರಿಂದ ತನ್ನ ಶತ್ರುವು ಎಲ್ಲೋ ಇರುವದಾಗಿ ತಿಳಿದಿದ್ದಾನೆ ; ಈಗ ನಾನು ನಾಮಕರಣ ಮಾಡಿದರೆ ಆ ಶತ್ರುವು ನಿನ್ನ ಗೃಹದಲ್ಲಿದ್ದಾನೆಂದು ಶಂಕಿಸಿ ಈ ಬಾಲಕನನ್ನು ಕೊಂದರೆ ನಮಗೆ ಮಹತ್ತಾದ ಅನರ್ಥವುಂಟಾಗುವದು" ಎಂದು ಹೇಳಿದನು.

ಆ ವಚನವನ್ನು ಕೇಳಿ ನಂದಗೋಪನು "ಎಲೈ ಗರ್ಗಮುನಿಯೆ, ನಮ್ಮ ಗೋಪಾಲಕರಿಗೂ ಕಾಣದಂತೆ ಗೋವುಗಳನ್ನು ಕಟ್ಟುವ ರಹಸ್ಯಸ್ಥಾನದಲ್ಲಿ ನೀನು ಸ್ವಸ್ತಿವಾಚನಪೂರ್ವಕವಾಗಿ ಬ್ರಾಹ್ಮಣಾದಿ ವರ್ಣತ್ರಯಕ್ಕೆ ಅವಶ್ಯವಾಗಿ ಮಾಡತಕ್ಕ ನಾಮಕರಣಾದಿ ಕರ್ಮಮಾತ್ರವನ್ನು ಮಾಡು" ಅಂದನು.

ಈ ರೀತಿಯಲ್ಲಿ ನಂದಗೋಪನಿಂದ ಪ್ರಾರ್ಥಿಸಲ್ಪಟ್ಟ ಗರ್ಗಾಚಾರ್ಯನು ಗೂಢವಾಗಿ ರಹಸ್ಯಸ್ಥಾನದಲ್ಲಿ ಬಾಲಕರಾದ ರಾಮಕೃಷ್ಣರಿಗೆ ನಾಮಕರಣವೆಂಬ ಕರ್ಮವನ್ನು ಮಾಡುತ "ಎಲೈ ನಂದಗೋಪನೆ, ರೋಹಿಣೀದೇವಿಯ ಪುತ್ರನು ಬಂಧುಗಳನ್ನು ತನ್ನ ಸದ್ಗುಣಗಳಿಂದ ರಮಿಸುವಂತೆ ಮಾಡುವವನಾದ್ದರಿಂದ ರಾಮನೆಂದು ಹೇಳಲ್ಪಡುವನು ; ಅಧಿಕವಾದ ಬಲವುಳ್ಳವನಾದ್ದರಿಂದ ಇವನನ್ನು ಜನರು ಬಲಭದ್ರನೆಂದು ಕರೆಯುವರು ; ಯಾದವರು

ಒಂದು ನಿಮಿತ್ತದಿಂದ ಪರಸ್ಪರವಾಗಿ ವಿರೋಧಪಟ್ಟರೆ ಅವರ ಬುದ್ಧಿಯನ್ನಾಕರ್ಷಣಂಗೈದು ಅವರಿಗೆ ಐಕಮತ್ಯವನ್ನುಂಟುಮಾಡುವನಾದ್ದರಿಂದ ಈ ರೋಹಿಣೀಪುತ್ರನು ಸಂಕರ್ಷಣನೆಂದು ಪ್ರಸಿದ್ಧನಾಗುವನು! ಪ್ರತಿಯುಗದಲ್ಲಿಯೂ ದೇಹಗಳನ್ನು ಗ್ರಹಿಸುವ ಈ ನಿನ್ನ ಕುಮಾರನಿಗೆ ಶುಕ್ಲವೆಂದೂ ರಕ್ತವೆಂದೂ ಪೀತವೆಂದೂ ಮೂರು ವರ್ಣಗಳುಂಟು; ಈಗ ಕೃಷ್ಣವರ್ಣವಾದ ದೇಹವನ್ನು ಗ್ರಹಿಸಿರುವದರಿಂದ ಇವನನ್ನು ಶ್ರೀಕೃಷ್ಣನೆಂದು ಲೋಕದವರು ನುಡಿಯುವರು; ಈತನು ಪೂರ್ವದಲ್ಲಿ ವಸುದೇವನಿಗೆ ಪುತ್ರನಾಗಿ ಜನಿಸಿದ್ದದ್ದರಿಂದ ಇವನನ್ನು ಶ್ರೀವಾಸುದೇವನೆಂದು ಬಲ್ಲವರು ಹೇಳುವರು; ಮತ್ತು ನಿನ್ನ ಮಗನಿಗೆ ಈಶ್ವರನು ಸರ್ವಜ್ಞನು ಗೋಪತಿಯು ಗೋವರ್ಧನೋದ್ಧಾರನು ಮೊದಲಾದ ಗುಣಕರ್ಮಾನುರೂಪಗಳಾದ ನಾಮಧೇಯಗಳು ಅನೇಕಗಳಾಗಿರುವವು; ಅವನ್ನು ನಾನೇ ಅರಿಯೆನು; ಮಿಕ್ಕ ಜನರು ಅರಿಯರೆಂದು ಹೇಳತಕ್ಕದ್ದೇನು! ಗೋಕುಲಕ್ಕೂ ಗೋಪಾಲಕರಿಗೂ ಸಂತೋಷವನ್ನುಂಟುಮಾಡುವ ಈ ಬಾಲಕನು ನಿಮಗೆ ಶ್ರೇಯಸ್ಸನ್ನುಂಟುಮಾಡುವನು; ಈ ಬಾಲಕನಿಂದ ನೀವು ಸಮಸ್ತ ಕಷ್ಟಗಳನ್ನೂ ಆಯಾಸವಿಲ್ಲದೆ ದಾಟುವಿರಿ! ಎಲೈ ಗೋಕುಲಕ್ಕೆ ಅಧಿಪತಿಯಾದ ನಂದಗೋಪನೆ, ಪೂರ್ವದಲ್ಲಿ ದೇಶವು ಅರಾಜಕವಾಗಿದ್ದಾಗ ಸಜ್ಜನರು ದುಷ್ಟರಿಂದ ಪೀಡಿಸಲ್ಪಟ್ಟು ಈ ಬಾಲಕನಿಂದಲೇ ರಕ್ಷಿಸಲ್ಪಟ್ಟು ಅಭಿವೃದ್ಧಿಯನ್ನೈದಿ ಆ ದುಷ್ಟರನ್ನು ಜಯಿಸಿದರು; ಭಾಗ್ಯವಂತನಾದ ಈ ನಿನ್ನ ಬಾಲಕನಲ್ಲಿ ಪ್ರೀತಿಯುಳ್ಳವರನ್ನು (ವಿಷ್ಣುಭಕ್ತರನ್ನು ಅಸುರರು ಬಾಧಿಸಲಾರದಿರುವಂತೆ) ಶತ್ರುಗಳು ತಿರಸ್ಕಾರಮಾಡಲಾರರು! ಎಲೈ ನಂದಗೋಪನೆ, ನಿನ್ನ ಈ ಸುತನು ಸಂಪತ್ತಿನಿಂದಲೂ ಕೀರ್ತಿಯಿಂದಲೂ ಪ್ರಭಾವದಿಂದಲೂ ಸಮಸ್ತ ಸದ್ಗುಣಗಳಿಂದಲೂ ಶ್ರೀನಾರಾಯಣನಿಗೆ ಸಮಾನನಾದ್ದರಿಂದ ನೀನು ಜಾಗರೂಕನಾಗಿ ಈ ಪುತ್ರನನ್ನು ಸಲಹು” ಎಂದು ನುಡಿದು ಕಳುಹಿಸಿಕೊಂಡು ತನ್ನ ಸ್ವಗೃಹವನ್ನೈದಿದನು.

ಅನಂತರದಲ್ಲಿ ನಂದಗೋಪನು ಅತ್ಯಂತ ಸಂತೋಷಯುಕ್ತನಾಗಿ ತನಗೆ ಸಕಲ ಇಷ್ಟಾರ್ಥಗಳೂ ಪರಿಪೂರ್ಣವಾಗಿ ಲಭಿಸಿದಂತೆ ಎಣಿಸಿದ್ದನು! ಎಲೈ ಪರೀಕ್ಷಿದ್ರಾಯನೆ, ಕೆಲವು ಕಾಲವು ಕಳೆದಮೇಲೆ ರಾಮಕೃಷ್ಣರೀರ್ವರೂ ಗೋಕುಲದಲ್ಲಿ ಎರಡು ಮೊಳಕಾಲುಗಳಿಂದಲೂ ಎರಡು ಹಸ್ತಗಳಿಂದಲೂ ಸಂಚಾರಮಾಡುತ ಕ್ರೀಡಿಸುತ್ತಿದ್ದರು; ನಡುವಿನಲ್ಲಿಯೂ ಪಾದಗಳಲ್ಲಿಯೂ ಅಲಂಕರಿಸಲ್ಪಟ್ಟ ಆಭರಣಗಳ ಗೆಜ್ಜೆ ಕಿರಿಘಂಟೆಗಳ ಧ್ವನಿಗಳಿಂದ ನೋಡುವವರಿಗೆ ಚಿತ್ತೋಲ್ಲಾಸವುಂಟಾಗುವಂತೆ ಆ ವ್ರಜದ ಕೆಸರಿನಲ್ಲಿ ಪಾದಯುಗ್ಮಗಳನ್ನು ಬಾರಿಬಾರಿಗೂ ಸೆಳಕೊಂಡು ಅತಿಶಯದಿಂದ ಅಂಬೆಗಾಲನ್ನಿಕ್ಕುತ ಗೆಜ್ಜೆ ಕಿರಿಘಂಟೆಗಳ ನಾದಗಳಿಂದ ಹರ್ಷವುಳ್ಳ ಮನಸ್ಸುಳ್ಳವರಾಗಿ ಎಡಬಲದಲ್ಲಿ ನಡೆಯುವವರನ್ನನುಸರಿಸಿ ಮೂರುನಾಲ್ಕು ಹೆಜ್ಜೆಗಳನ್ನಿಟ್ಟುಕೊಂಡು ಹೋಗುತ ಮುಗ್ಧರಂತೆಯೂ ಭೀತಿಯೈದಿದವರಂತೆಯೂ ತಮ್ಮ ತಾಯಿಗಳ ಸಮೀಪಕ್ಕೆ ಓಡಿಹೋಗುವರು; ಆ ಸಮಯದಲ್ಲಿ ರಾಮಕೃಷ್ಣರ ತಾಯಿಗಳಾದ ರೋಹಿಣೀದೇವಿ ಯಶೋದಾದೇವಿಯರು ಪುತ್ರಪ್ರೇಮದಿಂದ ಪೂರ್ಣವಾಗಿ ಸುರಿಯುವ ಹಾಲುಳ್ಳ ಪಯೋಧರಗಳುಳ್ಳವರಾಗಿ ಕೆಸರಿನಿಂದಲೂ ಗಂಧಾದ್ಯನುಲೇಪನದಿಂದಲೂ ರಮಣೀಯರಾದ ತಮ್ಮ ಬಾಲಕರನ್ನೆತ್ತಿ ತೋಳುಗಳಿಂದ ತಬ್ಬಿಕೊಂಡು ಸ್ತನ್ಯವನ್ನು ಕೊಟ್ಟು ಪಾನಮಾಡುವ ಆ ಪುತ್ರರ ಮುಗುಳುನಗೆಯೂ ಸೂಕ್ಷ್ಮಗಳಾದ ದಂತಗಳೂ ಉಳ್ಳ ಸೌಂದರ್ಯಯುಕ್ತಗಳಾದ ಮುಖಗಳನ್ನು ನೋಡಿ ಹರ್ಷವನ್ನೈದುವರು; ಬಾಲಲೀಲೆಯುಳ್ಳವರಾಗಿ ಗೋಕುಲಮಧ್ಯದಲ್ಲಿ ಹಿಡಿಯಲ್ಪಟ್ಟ ಕರುಗಳಿಂದ ಬಾಲಗಳನ್ನಿಡಿದುಕೊಂಡು ಅಲ್ಲಲ್ಲಿ ಎಳೆಸಿಕೊಳ್ಳಲ್ಪಡುತಿದ್ದ ರಾಮಕೃಷ್ಣರು ವಿಹರಿಸುತಿದ್ದ ಸಮಯದಲ್ಲಿ ಅವರನ್ನು ನೋಡಿ ನಂದವ್ರಜದ ಗೋಪಸ್ತ್ರೀಯರು ತಮ್ಮ ಗೃಹಕೃತ್ಯಗಳನ್ನು ಬಿಟ್ಟು ನಗುತ ಹರ್ಷವನ್ನೈದುತಿದ್ದರು; ರೋಹಿಣೀ ಯಶೋದಾದೇವಿಯರು ಆಟದಲ್ಲಿ ಆಸಕ್ತಿಯುಳ್ಳವರಾಗಿ ಅತಿ ಚಪಲರಾದ ಆ ಪುತ್ರರನ್ನು ಶೃಂಗಗಳುಳ್ಳ ಪಶುಗಳಿಂದಲೂ ಕೋರೆದಾಡೆಗಳುಳ್ಳ ವರಾಹ ಮೊದಲಾದ ಮೃಗಗಳಿಂದಲೂ ದೀಪ ಮೊದಲಾದ ಅಗ್ನಿಗಳಿಂದಲೂ ಸರ್ಪಗಳಿಂದಲೂ ಜಲಪೂರಿತಗಳಾದ ಕೂಪಾದಿಗಳಿಂದಲೂ ಮಯೂರಾದಿ ಪಕ್ಷಿಗಳಿಂದಲೂ ಉಂಟಾಗುವ ಉಪದ್ರವಗಳನ್ನು ತಪ್ಪಿಸಿ ಸಂರಕ್ಷಿಸುವದಕ್ಕೂ ಗೃಹಕೃತ್ಯಗಳನ್ನು

ಮಾಡುವದಕ್ಕೂ ತಮ್ಮಿಂದಾಗದೆ ತೊಂದರೆಪಡುತ ಮನಸ್ಸಿಗೆ ಸ್ವಸ್ಥವಿಲ್ಲದೆ ವ್ಯಾಕುಲಚಿತ್ತರಾಗಿದ್ದರು ! ಎಲೈ ರಾಜರ್ಷಿಯಾದ ಪರೀಕ್ಷಿದ್ರಾಯನೆ, ಸ್ವಲ್ಪ ಕಾಲದಮೇಲೆ ರಾಮಕೃಷ್ಣರೀರ್ವರೂ ನಂದಗೋಕುಲದಲ್ಲಿ ಅಂಬೆಗಾಲಿಡುವದನ್ನು ಬಿಟ್ಟು ಅನಾಯಾಸದಿಂದ ಮೆಲ್ಲಮೆಲ್ಲಗೆ ಹೆಜ್ಜೆಗಳನ್ನಿಟ್ಟು ನಡೆಯುವವರಾದರು ; ಆಗ ಭಗವಂತನಾದ ಶ್ರೀಕೃಷ್ಣನು ಬಲರಾಮನೊಡನೆಯೂ ತನ್ನ ಸಮವಯಸ್ಕರಾದ ಗೋಪಾಲ ಬಾಲಕರೊಡನೆಯೂ ಕೂಡಿಕೊಂಡು ನಂದಗೋಕುಲದಲ್ಲಿರುವ ಗೋಪಸ್ತ್ರೀಯರಿಗೆ ಸಂತೋಷವುಂಟುಮಾಡುತ ವಿಹರಿಸುತಿದ್ದನು ; ಒಂದು ದಿವಸದಲ್ಲಿ ಆ ಗೋಪಾಂಗನೆಯರು ಗುಂಪುಗೂಡಿ ಬಂದು ಯಶೋದಾದೇವಿಯನ್ನು ಕುರಿತು ಶ್ರೀಕೃಷ್ಣನ ಮನೋಹರವಾದ ಕೌಮಾರಚರಿತ್ರವನ್ನು ಹೇಳುತ “ ಎಲೌ ಯಶೋದಾದೇವಿಯೆ, ನಿನ್ನ ಮಗನಾದ ಶ್ರೀಕೃಷ್ಣನು ಗೋವುಗಳು ಕ್ಷೀರವನ್ನು ಕರೆಯದಿರುವ ಸಮಯದಲ್ಲಿ ಕರುಗಳನ್ನು ಬಿಚ್ಚಿಬಿಟ್ಟು ಅವುಗಳನ್ನು ಕಟ್ಟುವದಕ್ಕಾಗಿ ಮನೆಯಲ್ಲಿರುವ ಜನರು ಹೊರಗೆ ಹೋಗಿ ಕೂಗುತಿರುವ ಸಮಯದಲ್ಲಿ ನಸುನಗುತ ನಮ್ಮ ಗೃಹಗಳನ್ನು ಹೊಕ್ಕು ಒಬ್ಬರಿಂದ ಕೊಡಲ್ಪಡದಿದ್ದಾಗ್ಯೂ ಚೋರನಂತೆ ಹಾಲು ಬೆಣ್ಣೆ ಮೊದಲಾದ ಸ್ವಾದುವಸ್ತುಗಳನ್ನು ಭಕ್ಷಿಸುತ್ತಾನೆ ; ಹಾಗೆ ಚೌರ್ಯೋಪಾಯದಿಂದ ಅಪಹರಿಸಲ್ಪಟ್ಟ ದಧೀ ಕ್ಷೀರಗಳನ್ನು ತಾನು ಭಕ್ಷಿಸಿ ಮಿಕ್ಕಿದವನ್ನು ಬಾಲಕರಿಗೂ ಮರ್ಕಟಗಳಿಗೂ ಹಂಚಿಕೊಡುತ್ತಾನೆ ; ಆ ಬಾಲಕರೂ ಮರ್ಕಟಗಳೂ ತೃಪ್ತಿಯನ್ನೈದಿ ಮತ್ತೂ ಮಿಕ್ಕಿರುವ ನವನೀತಾದಿ ಭಾಂಡಗಳನ್ನು ಹೊಡೆಯುತ್ತಾನೆ ; ಹಾಲು ಬೆಣ್ಣೆ ಮೊದಲಾದವು ದೊರೆಯದಿರುವ ಗೃಹವನ್ನು ದಹಿಸುವದಾಗಿ ನುಡಿದು ಕೋಪಯುಕ್ತನಾಗಿ ಆ ಗೃಹಗಳಲ್ಲಿ ಮಂಚಾದಿಗಳ ಮೇಲೆ ಮಲಗಿ ನಿದ್ರೆಮಾಡುವ ಮಕ್ಕಳನ್ನೆಬ್ಬಿಸಿ ನುಲಿದು ರೋದನ ಮಾಡಿ ಹೊರಟು ಹೋಗುತ್ತಾನೆ ; ನಾವು ಗೃಹಕೃತ್ಯಗಳಲ್ಲಿ ಆಸಕ್ತರಾಗಿರುವ ಸಮಯದಲ್ಲಿ ನಮ್ಮ ಗೃಹಗಳನ್ನು ಹೊಕ್ಕು ಕೈಗೆ ಸಿಲುಕದಂತೆ ಉನ್ನತವಾಗಿ ಕಟ್ಟಲ್ಪಟ್ಟು ನೆಲುವಿನಲ್ಲಿರುವ ಭಾಂಡಗಳಿಗೆ ಪೀಠಗಳು ದಾರುಮಯಗಳಾದ ಒರಳುಗಳು ಮೊದಲಾದವನ್ನು ಒಂದರಮೇಲೊಂದಾಗಿ ಜೋಡಿಸಿಟ್ಟು ನಿಲುಕುವಂತೆ ಉಪಾಯಮಾಡಿ ಭಾಂಡದಲ್ಲಿರುವ ಕ್ಷೀರಾದಿಗಳನ್ನು ಗ್ರಹಿಸುತ್ತಾನೆ ; ಪೀಠಗಳೂ ಒರಳುಗಳೂ ದೊರೆಯದಿದ್ದರೆ ಮೇಲಿರುವ ಕ್ಷೀರ ದಧ್ಯಾದಿ ಪದಾರ್ಥದಲ್ಲಿ ಚಿತ್ತವುಳ್ಳವನಾಗಿ ಛಿದ್ರವನ್ನು ರಚಿಸುವ ಪ್ರಕಾರವನ್ನು ಬಲ್ಲವನಾದ್ದರಿಂದ ಆ ಭಾಂಡಗಳಿಗೆ ಛಿದ್ರವನ್ನು ರಚಿಸಿ ಕ್ಷೀರಾದಿಗಳನ್ನು ಗ್ರಹಿಸುತ್ತಾನೆ ; ಅಂಧಕಾರಯುಕ್ತವಾಗಿರುವ ಗೃಹಗಳಲ್ಲಿ ನವರತ್ನಯುಕ್ತಗಳಾದ ಭೂಷಣಗಳುಳ್ಳ ತನ್ನ ದೇಹವನ್ನು ಅಲ್ಲಿರುವ ಪದಾರ್ಥಪ್ರಕಾಶಕವಾದ ದೀಪವನ್ನಾಗಿ ರಚಿಸಿ ಕ್ಷೀರವನ್ನು ಭಕ್ಷಿಸುತ್ತಾನೆ ! ಎಲೌ ಯಶೋದಾದೇವಿಯೆ, ಈರೀತಿಯಲ್ಲಿ ನಿನ್ನ ಪುತ್ರನಾದ ಶ್ರೀಕೃಷ್ಣನು ಚೌರ್ಯವನ್ನು ಮಾಡುವದನ್ನು ಕಂಡು ಆ ಗೃಹದಲ್ಲಿರುವ ಜನರು ‘ ಎಲೊ ಕೃಷ್ಣನೆ— ಎಲೋ ಚೋರನೆ ’ ಎಂದು ಕರೆದರೆ ಅವರನ್ನು ಕುರಿತು ‘ ನೀನೇ ಚೋರನು ; ನಾನು ಈ ಗೃಹಕ್ಕೆ ಸ್ವಾಮಿಯು ” ಎಂದು ಪ್ರೌಢವಚನಗಳನ್ನು ನುಡಿಯುತ್ತಾನೆ ; ರಂಗವಲ್ಲಿ ಮೊದಲಾದವುಗಳಿಂದ ಅಲಂಕರಿಸಲ್ಪಟ್ಟಿರುವ ಗೃಹಗಳಲ್ಲಿ ಮಲಮೂತ್ರ ವಿಸರ್ಜನವನ್ನು ಮಾಡುತ್ತಾನೆ ; ಈ ರೀತಿ ಚೌರ್ಯೋಪಾಯಗಳಿಂದ ಪದಾರ್ಥ ಭಕ್ಷಣಾದಿ ವ್ಯಾಪಾರಗಳನ್ನು ಮಾಡಿದರೂ ಶ್ರೀಕೃಷ್ಣನು ಒಂದನ್ನೂ ಅರಿಯದ ಸಾಧುವಂತೆ ನಿನ್ನೆದಿರಲ್ಲಿ ತೋರುತ್ತಿದ್ದಾನೆ ” ಎಂದು ನುಡಿಯುವರು.

ಈ ಪ್ರಕಾರವಾಗಿ ವಿಜ್ಞಾಪನೆಮಾಡುತ ಭೀತಿಯೊಡಗೂಡಿದ ನೇತ್ರಗಳುಳ್ಳ ಶ್ರೀಕೃಷ್ಣನ ಸೌಂದರ್ಯಯುಕ್ತವಾದ ಮುಖವನ್ನು ನೋಡುತಲಿರುವ ಗೋಪಸ್ತ್ರೀಯರಿಂದ ಪ್ರಕಟಂಗೈಯಲ್ಪಡುವ ಕೃಷ್ಣನ ಬಾಲಚೇಷ್ಟೆಗಳನ್ನು ಕೇಳಿ ಯಶೋದಾದೇವಿಯು ಮುಗುಳುನಗೆಯೊಡಗೂಡಿದ ಮುಖವುಳ್ಳವಳಾಗಿ ಬಾಲಕನು ಭಯಪಡುವನೆಂದು ಅವನನ್ನು ನಿಂದಿಸದಿದ್ದಳು ! ಎಲೈ ಪರೀಕ್ಷಿದ್ರಾಯನೆ, ಒಂದು ಸಮಯದಲ್ಲಿ ಕ್ರೀಡಿಸುತಲಿರುವ ಬಲಭದ್ರನು ಮೊದಲಾದ ಗೋಪಾಲಬಾಲಕರು ಶ್ರೀಕೃಷ್ಣನು ಮಣ್ಣನ್ನು ಮೆದ್ದನೆಂದು ಯಶೋದಾದೇವಿಗೆ ಹೇಳಿದರು ; ಆ ದೇವಿಯು ಪುತ್ರನಿಗೆ ಹಿತವನ್ನಿಚ್ಛೈಸಿ ಆತನ ಹಸ್ತವನ್ನಿಡಿದುಕೊಂಡು ಭಯದಿಂದ ಚಪಲನೋಟಗಳುಳ್ಳ ನೇತ್ರ

ಗಳಿಂದ ಶೋಭಿಸುವ ಶ್ರೀಕೃಷ್ಣನನ್ನು ಬೆದರಿಸುತ "ಎಲೋ ನಡುಗುತಲಿರುವ ದೇಹವುಳ್ಳ ಶ್ರೀಕೃಷ್ಣನೆ, ನೀನು ಏಕಾಂತಸ್ಥಳದಲ್ಲಿ ಏನು ಕಾರಣದಿಂದ ಮಣ್ಣನ್ನು ಮೆದ್ದೆ? ನಿನ್ನೊಡನೆ ಕ್ರೀಡಿಸುವ ಈ ಬಾಲಕರೂ ನಿನ್ನ ಅಣ್ಣನಾದ ಬಲರಾಮನೂ ನೀನು ಮಣ್ಣನ್ನು ಭಕ್ಷಿಸಿದೆ ಎಂದು ನುಡಿಯುತ್ತಾರೆ" ಎಂದು ನುಡಿದಳು.

ಆ ವಾಕ್ಯವನ್ನು ಕೇಳಿ ಶ್ರೀಕೃಷ್ಣನು ಪ್ರತ್ಯುತ್ತರವನ್ನು ಕೊಡುತ "ಎಲೌ ತಾಯೆ, ನಾನು ಮಣ್ಣನ್ನು ಭಕ್ಷಿಸಲಿಲ್ಲ; ಬಾಲಕರೆಲ್ಲರೂ ಅನೃತವನ್ನು ನುಡಿಯುತ್ತಾರೆ; ಇವರ ವಚನಗಳನ್ನು ಯಥಾರ್ಥವೆಂದೆಣಿಸಿದರೆ ಈಗ ನನ್ನ ಬಾಯನ್ನು ನೀನು ಪ್ರತ್ಯಕ್ಷವಾಗಿ ನೋಡು" ಎಂದು ನುಡಿದನು.

ಯಶೋದಾದೇವಿಯು ಆತನನ್ನು ಕುರಿತು "ಎಲೈ ಕೃಷ್ಣನೆ, ನೀನು ಮಣ್ಣನ್ನು ಭಕ್ಷಿಸದಿದ್ದಪಕ್ಷದಲ್ಲಿ ಬಾಯನ್ನು ತೆರೆದು ತೋರಿಸು" ಅಂದಳು.

ಎಲೈ ಪರೀಕ್ಷಿದ್ರಾಯನೆ, ಆ ವಾಕ್ಯವನ್ನು ಕೇಳಿ ಭಗವಂತನಾಗಿ ಲೀಲೆಯಿಂದ ಮನುಜಬಾಲಕನಾಗಿ ಭಂಗವಿಲ್ಲದ ಅಷ್ಟೈಶ್ವರ್ಯಗಳುಳ್ಳ ಶ್ರೀಕೃಷ್ಣನು ತನ್ನ ಬಾಯನ್ನು ತೆರೆದನು; ಆಗ ಯಶೋದಾದೇವಿಯು ಆತನ ಬಾಯಲ್ಲಿ ಚರಾಚರ ಸ್ವರೂಪವಾದ ಪ್ರಪಂಚವು ದಿಕ್ಕುಗಳು ಅಂತರಿಕ್ಷಲೋಕವು ಪರ್ವತದ್ವೀಪ ಸಮುದ್ರಗಳೊಡನೆ ಯುಕ್ತವಾದ ಭೂಗೋಳವು ಪ್ರವಹ ಮೊದಲಾದ ವಾಯುಗಳು ವಿದ್ಯುದಗ್ನಿ ಚಂದ್ರ ನಕ್ಷತ್ರಗಳೊಡನೆ ಯುಕ್ತವಾದ ಸ್ವರ್ಗಲೋಕವು ಜಲವು ಅಗ್ನಿಯು ಬಿಲಗಳು ರಸಾತಲವು ಇಂದ್ರಾದಿ ದೇವತೆಗಳು ಇಂದ್ರಿಯಗಳು ಮನಸ್ಸು ಶಬ್ದಾದಿ ವಿಷಯಗಳು ಸತ್ವರಜಸ್ತಮೋಗುಣಗಳು ಮೊದಲಾದವುಗಳುಳ್ಳ ಪ್ರಪಂಚವನ್ನು ಕಂಡಳು; ಜೀವಸಮೂಹವು ಗುಣಕ್ಷೋಭಕವಾದ ಕಾಲವು ಪರಿಣಾಮಕಾರಣವಾದ ಸ್ವಭಾವವು ಜೀವಗಳ ಜನ್ಮಕ್ಕೆ ಕಾರಣವಾದ ಕರ್ಮವು ಕರ್ಮಸಂಸ್ಕಾರರೂಪವಾದ ಅಂತಃಕರಣವು ಇವುಗಳಿಂದುಂಟಾದ ಚರಾಚರ ಶರೀರಗಳು ಮೊದಲಾದವುಗಳಿಂದ ವಿಚಿತ್ರವಾದ ಪ್ರಪಂಚವನ್ನೂ ಅದರಲ್ಲಿ ನಂದಗೋಕುಲವನ್ನೂ ತನ್ನನ್ನೂ ತನ್ನ ಸುತನ ದೇಹದಲ್ಲಿ ಸ್ವಲ್ಪವಾಗಿ ತೆರೆಯಲ್ಪಟ್ಟ ಬಾಯಮಾರ್ಗವಾಗಿ ಬಂದೇಕಾಲದಲ್ಲಿ ಕಂಡು ಅದು ಸ್ವಪ್ನವೊ—ದೈವಮಾಯೆಯೊ—ತನ್ನ ಬುದ್ಧಿಮೋಹವೊ—ಈ ಬಾಲಕನ ಸ್ವಭಾವಿಕವಾದ ಸಾಮರ್ಥ್ಯವಿಶೇಷವೊ—ಎಂದು ವಿಕಲ್ಪಿಸಿ ಅದು ತನ್ನ ಪುತ್ರನ ಯೋಗಶಕ್ತಿಯೆಂದು ನಿಶ್ಚಯಿಸಿ "ಚಿತ್ತ ಮನ ವಾಕ್ಕುಗಳಿಂದ ಸಾಕಲ್ಯವಾಗಿಯೂ ಯಥಾರ್ಥವಾಗಿಯೂ ಊಹಿಸಿ ತಿಳಿಯಲಶಕ್ಯವಾದ ಈ ಜಗತ್ತು ಯಾವನನ್ನಾಶ್ರಯಿಸಿ—ಯಾವನಿಂದ ನಿರ್ಮಿಸಲ್ಪಟ್ಟು—ಯಾವನ ದೆಶೆಯಿಂದ ಅಭಿವ್ಯಕ್ತವಾಗಿ ತೋರುವದೊ ಅಂಥಾ ಭಗವಂತನ ಭಾವಿಸಲಶಕ್ಯವಾದ ಪಾದಾರವಿಂದಗಳಿಗೆ ನಮಸ್ಕಾರವು! ನಾನು ಯಶೋದಾದೇವಿಯೆಂತಲು ನಂದಗೋಪನು ನನ್ನ ಪತಿಯೆಂತಲೂ ಗೋಕುಲಕ್ಕೆ ಅಧಿಪತಿಯಾದ ನಂದಗೋಪನ ಸಮಸ್ತ ದ್ರವ್ಯಗಳಿಗೂ ನಾನೆ ಸ್ವತಂತ್ರವಾದವಳೆಂತಲೂ ಶ್ರೀಕೃಷ್ಣನು ನನ್ನ ಪುತ್ರನೆಂತಲೂ ಗೋಪಸ್ತ್ರೀಯರೂ ಗೋಪಾಲಕರೂ ಗೋವುಗಳೂ ನನ್ನವೆಂತಲೂ ದುಷ್ಟವಾದ ಬುದ್ಧಿಯು ನನಗೆ ಯಾವನ ಮಾಯೆಯಿಂದುಂಟಾಯಿತೊ ಅಂಥಾ ಶ್ರೀಕೃಷ್ಣನೇ ನನಗೆ ಗತಿ" ಎಂದೆಣಿಸುತ ತತ್ವವನ್ನು ಯಥಾವತ್ತಾಗಿ ತಿಳಿಯುವ ಸಮಯದಲ್ಲಿ ಪರಮೇಶ್ವರನಾಗಿ ಪ್ರಭುವಾದ ಶ್ರೀಕೃಷ್ಣನು ಪುತ್ರಸ್ನೇಹಮಯವಾಗಿ ವಿಷ್ಣುಸಂಬಂಧಿಯಾದ ತನ್ನ ಮಾಯೆಯನ್ನು ಬೀಸಿದನು; ಅದರಿಂದ ಆ ಕ್ಷಣದಲ್ಲಿ ಯಶೋದಾದೇವಿಯು ನಷ್ಟವಾದ ತತ್ವಸ್ಮೃತಿಯುಳ್ಳವಳಾಗಿ ತನ್ನ ಪುತ್ರನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಪೂರ್ವದಂತೆ ಅತ್ಯಂತ ಅಭಿವೃದ್ಧಿಯನ್ನೈದಿದ ಪುತ್ರಸ್ನೇಹದಿಂದ ವ್ಯಾಪ್ತವಾದ ಹೃದಯವುಳ್ಳವಳಾಗಿ ವೇದತ್ರಯದಿಂದ ಇಂದ್ರಾದಿ ರೂಪನೆಂದೂ ಉಪನಿಷತ್ತುಗಳಿಂದ ಪರಬ್ರಹ್ಮನೆಂದೂ ಸಾಂಖ್ಯಶಾಸ್ತ್ರದಿಂದ ಪುರುಷನೆಂದೂ ಯೋಗಶಾಸ್ತ್ರಗಳಿಂದ ಪರಮಾತ್ಮನೆಂದೂ ಪಾಂಚರಾತ್ರಾಗಮಗಳಿಂದ ಭಗವಂತನೆಂದೂ ಹೊಗಳಲ್ಪಟ್ಟ ಮಹಾತ್ಮ್ಯವುಳ್ಳ ಆ ಪರಮೇಶ್ವರನನ್ನು ತನ್ನ ಪುತ್ರನೆಂದೇ ತಿಳಿದಿದ್ದಳು! —ಎಂದು ಶುಕಾಚಾರ್ಯನು ನುಡಿಯುತಿದ್ದನು.

ಆ ವಾಕ್ಯವನ್ನು ಕೇಳಿ ಪರೀಕ್ಷಿದ್ರಾಯನು ಅತ್ಯಾಶ್ಚರ್ಯದಿಂದ—ಎಲೈ ಬ್ರಹ್ಮವೇತ್ತೃ ದಿ ಶುಕಾಚಾರ್ಯನೆ, ನಂದಗೋಪನು ಅಂಥಾ ಮಹಾಭಾಗ್ಯವನ್ನುಂಟುಮಾಡುವ ಯಾವ ಶ್ರೇಯಸ್ಸನ್ನು ಮಾಡಿದನು ? ಯಶೋದಾದೇವಿಯು ತನ್ನ ಸ್ತನ್ಯವನ್ನು ಶ್ರೀಕೃಷ್ಣನು ಪಾನಂಗೈಯುವಷ್ಟು ಮಹಾ ಭಾಗ್ಯವತಿಯಾಗುವದಕ್ಕೆ ಏನು ಪುಣ್ಯವನ್ನು ಮಾಡಿದಳು ? ಸಮಸ್ತ ಪಾಪಗಳನ್ನೂ ಪರಿಹರಿಸುವ ಉತ್ಕೃಷ್ಟವಾದ ಶ್ರೀಕೃಷ್ಣನ ಬಾಲಲೀಲೆಯನ್ನು ಕವಿಗಳು ಗಾನವನ್ನು ಮಾಡುತ್ತಾರೆ; ಭಗವಂತನು ಪ್ರಸನ್ನನಾಗಿ ಅವತಾರವನ್ನು ಮಾಡಿದ ಮಾತಾಪಿತೃಗಳಾದ ದೇವಕೀ ವಸುದೇವರೂ ಆತನ ಬಾಲಲೀಲೆಗಳನ್ನು ನೋಡಿ ಸಂತೋಷಪಡಲಿಲ್ಲ; ಅಂಥಾ ಲೀಲೆಗಳನ್ನು ಯಶೋದಾ ನಂದಗೋಪರು ಅನುಭವಿಸಿದ್ದರಿಂದ ಅವರು ಏನುಪುಣ್ಯವನ್ನು ಮಾಡಿದರು? ಎಂದು ಕೇಳಿದನು.

ಶುಕಮುನಿಯು ಆತನನ್ನು ಕುರಿತು—ಎಲೈ ಅರಸೆ, ಅಷ್ಟವಸುಗಳೊಳಗೆ ಶ್ರೇಷ್ಠನಾಗಿ ಮಹಾ ಯಶಸ್ವಿಯಾದ ದ್ರೋಣನೆಂಬ ವಸುವು ತಾನು ಧರಾದೇವಿ ಎಂಬ ತನ್ನ ಪತ್ನಿಯಸಹಿತವಾಗಿ ಗೋಕುಲದಲ್ಲಿ ಜನಿಸಬೇಕೆಂದು ಆಜ್ಞಾಪಿಸಿದ ಬ್ರಹ್ಮದೇವನ ವಾಕ್ಯವನ್ನನುಸರಿಸಿ ಆ ಅರ್ಥವನ್ನು ಆಚರಿಸುತ ಬ್ರಹ್ಮದೇವನನ್ನು ಕುರಿತು "ಎಲೈ ಬ್ರಹ್ಮದೇವನೆ, ನಿನ್ನ ಆಜ್ಞಾನುಸಾರವಾಗಿ ಭೂಮಿಯಲ್ಲಿ ಜನಿಸುವ ನಮ್ಮಿಬ್ಬರಿಗೂ ಜಗದೀಶ್ವರನಾದ ಶ್ರೀಹರಿಯಲ್ಲಿ ಯಾವ ಭಕ್ತಿಯಿಂದ ಲೋಕದಲ್ಲಿ ಅಜ್ಞನು ದುರ್ಗತಿಯನ್ನು ದಾಟುವನೋ ಅಂಥಾ ಸರ್ವೋತ್ಕೃಷ್ಟವಾದ ಭಕ್ತಿಯುಂಟಾಗಬೇಕು" ಎಂದು ಪ್ರಾರ್ಥಿಸಿ ಆತನು ಹಾಗೇ ಆಗಲೆಂದು ಹೇಳಲು ಗೋಕುಲದಲ್ಲಿ ನಂದಗೋಪನಾಗಿ ಜನಿಸಿ ಪ್ರಖ್ಯಾತಿಯನ್ನು ಪಡೆದನು; ಧರಾದೇವಿಯು ಯಶೋದಾದೇವಿಯಾಗಿ ಜನಿಸಿದಳು; ಆದ್ದರಿಂದ ಗೋಪ ಗೋಪಿಗಳಲ್ಲಿ ಪ್ರಶಸ್ತರಾದ ದಂಪತಿಗಳಾದ ನಂದಗೋಪ ಯಶೋದಾದೇವಿಯರಿಗೆ ಪುತ್ರರೂಪನಾಗಿ ಭಗವಂತನಾದ ಶ್ರೀಕೃಷ್ಣದೇವನಲ್ಲಿ ಭಕ್ತಿಯುಂಟಾಯಿತು; ಬ್ರಹ್ಮದೇವನಿಂದ ಅವರಿಗೆ ಶ್ರೀಹರಿಯಲ್ಲಿ ಭಕ್ತಿಯುಂಟಾಗಲೆಂದು ನುಡಿಯಲ್ಪಟ್ಟ ಅರ್ಥವನ್ನು ಸತ್ಯವಾಗಿ ಮಾಡುವದಕ್ಕೋಸ್ಕರ ವಿಭುವಾದ ಶ್ರೀಕೃಷ್ಣಮೂರ್ತಿಯು ಗೋಕುಲದಲ್ಲಿ ರಾಮನೊಡಗೂಡಿ ವಾಸವನ್ನು ಮಾಡುತ ಅವರಿಗೆ ತನ್ನ ಬಾಲಲೀಲೆಗಳಿಂದ ಪ್ರೀತಿಯನ್ನುಂಟುಮಾಡುತಿದ್ದನು!

## ೯ನೇ ಅಧ್ಯಾಯ.

### ಯಶೋದಾದೇವಿಯು ಕೃಷ್ಣನನ್ನು ಒರಳಿಗೆ ಕಟ್ಟಿದ್ದು.

ಎಲೈ ಪರೀಕ್ಷಿದ್ರಾಯನೆ, ಒಂದು ಸಮಯದಲ್ಲಿ ನಂದಗೋಪನ ಪತ್ನಿಯಾದ ಯಶೋದಾದೇವಿಯು ಮನೆಯ ದಾಸಿಯರೆಲ್ಲರು ಕಾರ್ಯಾಂತರಗಳಲ್ಲಿ ಪ್ರಸಕ್ತರಾಗಿರಲು ತಾನೇ ದಧಿಮಥನವನ್ನು ಮಾಡುತ ಲೋಕದಲ್ಲಿ ಗಾನಂಗೈಯಲ್ಪಡುವ ಶ್ರೀಕೃಷ್ಣನ ಬಾಲಲೀಲೆಗಳನ್ನು ಸ್ಮರಿಸಿ ತಾನೂ ಗಾನಮಾಡುತಿದ್ದಳು; ವಿಸ್ತೀರ್ಣವಾದ ಕಟಿಪ್ರದೇಶದಲ್ಲಿ ಪ್ರಕಾಶಿಸುವ ರತ್ನಖಚಿತವಾದ ಒಡ್ಯಾಣದಿಂದ ಕಟ್ಟಲ್ಪಟ್ಟ ಶುಭ್ರವಾದ ದುಕೂಲವನ್ನು ಧರಿಸಿದವಳಾಗಿ ಪುತ್ರಸ್ನೇಹದಿಂದ ಸ್ರವಿಸುವ ಕ್ಷೀರವುಳ್ಳವಾಗಿ ಕುಲುಕುತಲಿರುವ ಕುಚದ್ವಯವುಳ್ಳವಳಾಗಿ ಕಡೆಗೋಲಿನ ಹಗ್ಗವನ್ನು ಸೆಳೆಯುವದರಿಂದುಂಟಾದ ಶ್ರಮೆಯುಳ್ಳವಳಾಗಿ ಚಲಿಸುತಲಿರುವ ಭುಜಗಳಲ್ಲಿ ಧ್ವನಿಗೈಯ್ಯುವ ಹಸ್ತಾಭರಣಗಳನ್ನೂ ಜೋಲುತಲಿರುವ ಕುಂಡಲಗಳನ್ನೂ ಧರಿಸಿದವಳಾಗಿ ಬೆವರಿದ ಮುಖವುಳ್ಳವಳಾಗಿ ಉದುರುವ ಜಾಜಿಪುಷ್ಪಗಳುಳ್ಳ ಕೇಶಭಾರವುಳ್ಳವಳಾಗಿ ಶೋಭಾಯಮಾನಗಳಾದ ಹುಬ್ಬುಗಳುಳ್ಳ ಯಶೋದಾದೇವಿಯು ಮಥನಮಾಡುವ ಸಮಯದಲ್ಲಿ ಸ್ತನ್ಯಪಾನೇಚ್ಛೆಯುಳ್ಳವನಂತೆ ಶ್ರೀಕೃಷ್ಣನು ಆ ದೇವಿಯ ಸಮೀಪವನ್ನೈದಿ ತಾಯಿಗೆ ಪ್ರೀತಿಯನ್ನುಂಟುಮಾಡುತ ಕಡೆಗೋಲನ್ನು ಕರದಿಂದಿಡಿದು ಮಥನವನ್ನು ತಡೆದನು; ಯಶೋದಾದೇವಿಯು ಮುಗುಳುನಗೆಯೊಡಗೂಡಿ ಆ ಬಾಲಕನ ಮುಖವನ್ನು ನೋಡುತ ಆತನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಸ್ನೇಹ

ದಿಂದ ಸ್ರವಿಸುವ ಕ್ಷೀರವುಳ್ಳ ಸ್ತನವನ್ನು ಕುಡಿಸುತ ಒಲೆಯಮೇಲಿದ್ದ ಭಾಂಡದಲ್ಲಿದ್ದ ಹಾಲು ಅಗ್ನಿಜ್ವಾಲೆ ಅಧಿಕವಾದ್ದರಿಂದ ಉಕ್ಕಿ ಸುರಿಯುತ್ತಿದ್ದದ್ದನ್ನು ನೋಡಿ ಸ್ತನಪಾನದಿಂದ ತೃಪ್ತಿಯನ್ನೈದದಿದ್ದ ಕೃಷ್ಣನನ್ನು ತೊಡೆಯಿಂದ ಕೆಳಕ್ಕಿಳಿಸಿ ಕ್ಷೀರಭಾಂಡದ ಸಮೀಪಕ್ಕೆ ತ್ವರೆಯಿಂದ ಹೋದಳು ; ಆ ವೇಳೆಯಲ್ಲಿ ಶ್ರೀಕೃಷ್ಣನು ಕೋಪವುಳ್ಳವನಂತೆ ನಡುಗುತಲಿರುವ ಕೆಂಪಾದ ಅಧರೋಷ್ಟವನ್ನು ಕಚ್ಚಿಕೊಂಡು ಕಲ್ಪಿತವಾದ ಕಣ್ಣೀರುಳ್ಳವನಾಗಿ ಆ ದಧಿಭಾಂಡವನ್ನು ಗುಂಡುಕಲ್ಲಿನಿಂದ ಹೊಡೆದು ಬೆಣ್ಣೆಯನ್ನು ತೆಗೆದುಕೊಂಡು ಒಳಮನೆಗೆ ಹೋಗಿ ರಹಸ್ಯಸ್ಥಳದಲ್ಲಿ ಭಕ್ಷಿಸುತಿದ್ದನು ; ಯಶೋದಾದೇವಿಯು ಒಲೆಯಮೇಲೆ ಉಕ್ಕುತಿದ್ದ ಕ್ಷೀರದ ಭಾಂಡವನ್ನು ಕೆಳಕ್ಕಿಳಿಸಿ ದಧಿಮಥನ ಸ್ಥಳಕ್ಕೆ ತಿರಿಗಿ ಬಂದು ಹೊಡೆಯಲ್ಪಟ್ಟದ್ದ ಆ ಭಾಂಡವನ್ನು ಕಂಡು ತನ್ನ ಪುತ್ರನ ವ್ಯಾಪಾರವೆಂದು ತಿಳಿದು ಆತನನ್ನು ಅಲ್ಲಿ ಕಾಣದೆ ಅರಸಿ ನೋಡುತ ಮಗುಚಿದ್ದ ಮರದ ಒರಳಿನಮೇಲೆ ಕುಳಿತುಕೊಂಡು ಬೆಣ್ಣೆಯನ್ನು ಮರ್ಕಟಕ್ಕೆ ಯಥೇಚ್ಛವಾಗಿ ಕೊಡುತ ಬೆಣ್ಣೆಯನ್ನು ಕದ್ದ ಭಯದಿಂದ ಚಂಚಲನೋಟವುಳ್ಳವನಾಗಿದ್ದ ತನ್ನ ಪುತ್ರನನ್ನು ಕಂಡು ಹಿಂದುಗಡೆಯಿಂದ ಹಿಡಿಯುವದಕ್ಕೆ ಮೆಲ್ಲಗೆ ನಡೆದಳು ; ಆತನು ಕೈಯಲ್ಲಿ ಕಡಗೋಲನ್ನಿಡಿದು ಹೊಡೆಯುವದಕ್ಕೆ ಬರುತಿದ್ದ ಆ ದೇವಿಯನ್ನು ಕಂಡು ಅತಿ ತ್ವರೆಯಿಂದ ಆ ಒರಳಿನಿಂದಿಳಿದು ಭಯಪಟ್ಟವನಂತೆ ಪಲಾಯನವಾದನು ; ಏಕಾಗ್ರತೆಯಿಂದ ತದಾಕಾರವಾಗಿರುವ ಮಹಾ ಯೋಗಿಗಳ ಮನಸ್ಸಾದರೂ ಯಾವ ದೇವನನ್ನೈದಲಾರದೋ ಅಂಥಾ ಶ್ರೀಕೃಷ್ಣದೇವನನ್ನು ಹಿಡಿಯುವದಕ್ಕೋಸ್ಕರ ಸೂಕ್ಷ್ಮಮಧ್ಯಳಾದ ಯಶೋದಾದೇವಿಯು ತೋರಗಳಾಗಿ ಚಲಿಸುತಿರುವ ನಿತಂಬಗಳ ಭಾರದಿಂದ ಮಂದಗಮನವುಳ್ಳವಳಾಗಿ ಆ ವೇಗದಿಂದ ಬಿಚ್ಚಲ್ಪಟ್ಟ ತುರುಬಿನಿಂದುದುರುವ ಕುಸುಮಗಳುಳ್ಳವಳಾಗಿ ಬರುತ್ತಿರಲು ಶ್ರೀಕೃಷ್ಣನು ಮಾತೃವಿನ ಶ್ರಮೆಯನ್ನು ನೋಡಿ ದಯೆಯಿಂದ ತಾನೇ ಶಿಕ್ಕಿದನು ; ಯಶೋದೆಯು ಅಪರಾಧಮಾಡಿದ್ದರಿಂದ ರೋದನಗೈಯುತ ಎಲ್ಲಾಕಡೆಯಲ್ಲೂ ಹರಡಿಕೊಳ್ಳುತ್ತಿರುವ ಕಾಡಿಗೆಯುಳ್ಳ ಕಣ್ಣುಗಳನ್ನು ಕೈಗಳಿಂದ ಉಜ್ಜಿಕೊಳ್ಳುತ ಮುಖವನ್ನು ಮೇಲಕ್ಕೆತ್ತಿ ನೋಡುತ ಭಯದಿಂದ ಬೆದರುನೋಟಗಳುಳ್ಳ ಆ ಬಾಲಕನನ್ನು ಹಸ್ತಗಳಿಂದಿಡಿದುಕೊಂಡು ಹೆದರಿಸಿ ಗದರಿಸಿ ಆತನು ಭಯಪಟ್ಟನೆಂದೆಣಿಸಿ ಕಡೆಗೋಲನ್ನು ಬೀಸಾಟಿ ಅವನನ್ನು ರಜ್ಜುವಿನಿಂದ ಬಂಧನಮಾಡಲೆಣಿಸಿ ಅಪರಿಚ್ಛಿನ್ನನಾದಕಾರಣ ಒಳಗೆಂದೂ ಹೊರಗೆಂದೂ ಪೂರ್ವವೆಂದೂ ಪಶ್ಚಿಮವೆಂದೂ ವಿಭಾಗವಿಲ್ಲದವನಾಗಿ ಸರ್ವವ್ಯಾಪಕನಾದ್ದರಿಂದ ವ್ಯಾಪ್ಯವಾದ ಜಗತ್ತಿಗೆ ಪೂರ್ವದಲ್ಲಿಯೂ ಪಶ್ಚಿಮದಲ್ಲಿಯೂ ಒಳಗೂ ಹೊರಗೂ ಪರಿಪೂರ್ಣನಾಗಿ ಸ್ವವ್ಯತಿರಿಕ್ತನಾಗಿ ಒಂದೂ ಇಲ್ಲದವನಾದಕಾರಣ ಜಗತ್ಸ್ವರೂಪನಾಗಿ ಯಾವ ರೀತಿಯಿಂದಲೂ ಬಂಧಿಸಲ್ಪಡಲಶಕ್ಯನಾಗಿ ಅಪ್ರಕಟವಾದ ಮಾಯೆಯಿಂದ ಮನುಷ್ಯದೇಹವನ್ನು ಧರಿಸಿದಂಥಾ ಶ್ರೀಕೃಷ್ಣನನ್ನು ಒಂದು ಹಗ್ಗದಿಂದ ಪ್ರಾಕೃತನಾದ ಬಾಲಕನನ್ನು ಕಟ್ಟುವಂತೆ ಮರದ ಒರಳಿಗೆ ಕಟ್ಟುತ ಆ ಹಗ್ಗವು ಎರಡು ಬೆರಳು ಉದ್ದ ಸಾಲದೆ ಹೋದ್ದರಿಂದ ಮತ್ತೊಂದು ಹಗ್ಗವನ್ನು ಜೋಡಿಸಿ ಹಾಗೂ ಎರಡಂಗುಲ ಸಾಲದ್ದರಿಂದ ಮತ್ತೊಂದು ಹಗ್ಗವನ್ನು ಗಂಟುಹಾಕಿ ಹಾಗೂ ಎರಡುಬೆರಳುದ್ದ ಸಾಲದೆ ಹೋದ್ದರಿಂದ ಮತ್ತೊಂದು ಹಗ್ಗವನ್ನು ಕೂಡಿಸುತ ಈ ರೀತಿಯಲ್ಲಿ ತನ್ನ ಮನೆಯಲ್ಲಿರುವ ಹಗ್ಗಗಳೆಲ್ಲವನ್ನೂ ಕೂಡಿಸಿ ಗಂಟುಹಾಕಿದರೂ ಅವು ಶ್ರೀಕೃಷ್ಣನನ್ನು ಕಟ್ಟುವದಕ್ಕೆ ಸಾಲದಿದ್ದದ್ದನ್ನುನೋಡಿ ಆಶ್ಚರ್ಯವನ್ನೈದುತಲಿದ್ದ ಗೋಪಸ್ತ್ರೀಯರ ಮಧ್ಯದಲ್ಲಿ ತಾನೂ ಆಶ್ಚರ್ಯವನ್ನೈದಿದಳು ; ಅನಂತರದಲ್ಲಿ ಶ್ರಮೆಯಿಂದ ಬೆವರಿದ ದೇಹವುಳ್ಳವಳಾಗಿ ತುರುಬಿನ ಗಂಟಳಿದು ಉದುರುವ ಕುಸುಮಮಾಲಿಕೆಗಳುಳ್ಳ ತನ್ನ ತಾಯ ಬಳಲಿಕೆಯನ್ನು ಕಂಡು ಶ್ರೀ ಕೃಷ್ಣನು ದಯೆಯಿಂದ ಬಂಧನಕ್ಕೆ ಒಳಗಾದನು ! ಎಲೈ ಪರೀಕ್ಷಿದ್ರಾಯನೆ, ಈಶ್ವರಸಹಿತವಾದ ಈ ಜಗತ್ತು ಯಾವ ಶ್ರೀಕೃಷ್ಣನ ವಶದಲ್ಲಿರುವದೊ ಅಂಥಾ ಶ್ರೀಕೃಷ್ಣನು ಸ್ವತಂತ್ರನಾದಾಗ್ಯೂ ಈ ಪ್ರಕಾರವಾಗಿ ಭಕ್ತಪರಾಧೀನತ್ವವನ್ನು ತೋರಿಸಿದನು ! ಗೋಪಸ್ತ್ರೀಯರು ಮುಕ್ತಿಪ್ರದಾನನಾದ ಶ್ರೀ ಕೃಷ್ಣನ ದೆಸೆಯಿಂದ ಪಡೆದಂಥಾ ಅನುಗ್ರಹವನ್ನು ಆತನಿಗೆ ಪುತ್ರನಾದ ಬ್ರಹ್ಮನೂ ಪಡೆಯಲಿಲ್ಲ—ಆತ್ಮರೂಪನಾದ ಶ್ರೀರುದ್ರನೂ ಪಡೆಯಲಿಲ್ಲ—ವಕ್ಷಸ್ಥಳದಲ್ಲಿ ವಾಸಮಾಡುವ ಆತನ ಪತ್ನಿಯಾದ ಲಕ್ಷ್ಮಿಯೂ ಪಡೆಯ

ಲಿಲ್ಲ! ಷಡ್ಗುಣೈಶ್ವರ್ಯ ಸಂಪನ್ನನಾಗಿ ಯಶೋದಾ ಪುತ್ರನಾದ ಶ್ರೀಕೃಷ್ಣನು ಭಕ್ತಿಯುಳ್ಳ ಮಹಾತ್ಮರಿಗೆ ಸುಖದಿಂದ ಲಭ್ಯನಾಗುವಂತೆ ದೇಹಾಭಿಮಾನವುಳ್ಳ ತಪಸ್ವಿಗಳು ಮೊದಲಾದವರಿಗಾದರೂ ಸಂಸಾರವನ್ನು ದಾಟಲೋಸುಗ ತಮ್ಮ ಬುದ್ಧಿಯನ್ನೇ ನಾವೆಯನ್ನಾಗುಳ್ಳವರಾಗಿ ದೇಹಾಭಿಮಾನವನ್ನು ಬಿಟ್ಟಿರುವ ಜ್ಞಾನಿಗಳಿಗಾದರೂ ಸುಖದಿಂದ ಲಭ್ಯನಾಗನು! ಆ ಬಳಿಕ ಜಗದೀಶ್ವರನಾದ ಶ್ರೀಕೃಷ್ಣನು ತನ್ನ ತಾಯಾದ ಯಶೋದಾದೇವಿಯು ತನ್ನನ್ನು ಒರಳಿಗೆ ಕಟ್ಟಿ ಗೃಹವ್ಯಾಪಾರಗಳಲ್ಲಿ ಆಸಕ್ತಳಾಗಿರಲು ಪೂರ್ವದಲ್ಲಿ ಯಕ್ಷೇಶ್ವರನಾದ ಕುಬೇರನ ಪುತ್ರರಾಗಿ ಐಶ್ವರ್ಯದಿಂದ ಮತ್ತರಾಗಿ ನಾರದನ ಶಾಪದಿಂದ ಮತ್ತಿಮರಗಳಾಗಿ ಹುಟ್ಟಿದ್ದ ನಳಕೂಬರ ಮಣಿಗ್ರೀವರನ್ನು ಕಂಡನು! ಎಂದು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನು.

---

## ೧೦ ನೇ ಅಧ್ಯಾಯ.

## ನಳಕೂಬರ ಮಣಿಗ್ರೀವರ ಶಾಪವಿಮೋಚನವು.

ಎಲೈ ಋಷಿಗಳಿರಾ, ಆ ಬಳಿಕ ಪರೀಕ್ಷಿದ್ರಾಯನು ಶುಕಮುನಿಯನ್ನು ಕುರಿತು—ಎಲೈ ಶ್ರೀ ಶುಕಮುನಿಯೆ, ನಳಕೂಬರ ಮಣಿಗ್ರೀವರು ಯಾವ ನಿಂದಿತವಾದ ಕರ್ಮದಿಂದ ಭಾಗವತೋತ್ತಮನಾದ ನಾರದಮುನಿಗೆ ಕ್ರೋಧವುಂಟುಮಾಡಿದರು! ಶಾಪಕಾರಣವಾದಂಥಾ ಅವರ ಕರ್ಮವನ್ನು ನಿರೂಪಿಸು—ಎಂದು ಕೇಳಿದನು.

ಆ ವಾಕ್ಯವನ್ನು ಕೇಳಿ ಶುಕಮುನಿಯು—ಎಲೈ ಪರೀಕ್ಷಿದ್ರಾಯನೆ, ಪೂರ್ವದಲ್ಲಿ ಪರಮೇಶ್ವರನ ಮಿತ್ರನಾದ ಕುಬೇರನಿಗೆ ನಳಕೂಬರ ಮಣಿಗ್ರೀವರೆಂಬ ಇಬ್ಬರು ಕುಮಾರರಿದ್ದರು; ಅವರು ಐಶ್ವರ್ಯಮದದಿಂದ ಕೊಬ್ಬಿ ಕೈಲಾಸಪರ್ವತದ ಉಪವನಪ್ರದೇಶದಲ್ಲಿ ಮೇರೆತಪ್ಪಿ ನಡೆಯುತ ವಾರುಣೀ ಎಂಬ ಮದ್ಯಪಾನಮಾಡುತ ಅದರಿಂದ ಅತ್ಯಂತ ವ್ಯಾಕುಲಗಳಾದ ನೇತ್ರಗಳುಳ್ಳವರಾಗಿ ತಮ್ಮ ಸಮೀಪದಲ್ಲಿ ಗಾನಮಾಡುವ ದೇವತಾಸ್ತ್ರೀಯರೊಡಗೂಡಿ ಪುಷ್ಪಭರಿತವಾದ ಆ ಉಪವನದಲ್ಲಿ ವಿಹರಿಸುತ ಒಂದುದಿವಸ ಗಂಗಾನದಿಯನ್ನು ಪ್ರವೇಶಿಸಿ ಪದ್ಮವನಗಳ ಮಧ್ಯದಲ್ಲಿ ಮದಿಸಿರುವ ಎರಡು ಗಜಗಳು ಹೆಣ್ಣಾನೆಗಳೊಡನೆ ಕ್ರೀಡಿಸುವಂತೆ ಯೌವನಯುಕ್ತರಾದ ದೇವತಾಸ್ತ್ರೀಯರೊಡಗೂಡಿ ವಿಹರಿಸುತಿದ್ದರು! ಎಲೈ ಅರಸೆ, ಆ ಸಮಯದಲ್ಲಿ ಜ್ಞಾನಾದಿಗುಣಸಂಪನ್ನನಾಗಿ ದೇವರ್ಷಿಯಾದ ನಾರದನು ಸ್ವೇಚ್ಛೆಯಿಂದ ಆ ಸ್ಥಳಕ್ಕೆ ಹೋದನು; ಆಗ ಗಂಗಾನದಿಯಲ್ಲಿ ವಸ್ತ್ರರಹಿತರಾಗಿ ಕ್ರೀಡಿಸುತಲಿದ್ದ ದೇವತಾಸ್ತ್ರೀಯರು ಆತನನ್ನು ಕಂಡು ಲಜ್ಜಾಯುಕ್ತರಾಗಿ ಆತನು ತಮಗೆ ಶಾಪವನ್ನು ಕೊಡುವನೆಂಬ ಭಯದಿಂದ ಶಂಕಿತರಾಗಿ ಅತಿ ತ್ವರೆಯಿಂದ ತಮ್ಮ ವಸ್ತ್ರಗಳನ್ನುಟ್ಟುಕೊಂಡರು; ಆ ಯಕ್ಷರು ಕಾಮಾತುರರಾದ್ದರಿಂದ ಲಜ್ಜೆಯೂ ಭಯವೂ ಇಲ್ಲದವರಾಗಿ ವಸ್ತ್ರಗಳನ್ನುಟ್ಟುಕೊಳ್ಳದಿದ್ದರು; ನಾರದಮುನಿಯು ಐಶ್ವರ್ಯ ಮದಾಂಧರಾಗಿ ಮದ್ಯಪಾನದಿಂದ ಮತ್ತರಾದ ಆ ಕುಬೇರ ಪುತ್ರರನ್ನು ನೋಡಿ ಅವರಿಗೆ ಮದವನ್ನು ಪಹರಿಸಲೋಸುಗವೂ ಶ್ರೀಕೃಷ್ಣನ ದರ್ಶನವುಂಟಾಗುವದಕೋಸ್ಕರವೂ ಅನುಗ್ರಹಬುದ್ಧಿಯಿಂದ ಚಿಂತಿಸುತ "ಯಾವ ಐಶ್ವರ್ಯಮದಾವಸ್ಥೆಯಲ್ಲಿ ಸ್ತ್ರೀಯರೂ ಜೂಜಾ ಮದ್ಯಪಾನವು ಉಂಟಾಗಿರುವವೋ ಆ ಐಶ್ವರ್ಯಮದಕ್ಕಿಂತಲೂ ಸತ್ಕುಲ ವಿದ್ಯಾದಿಗಳಿಂದುಂಟಾಗುವ ಮದವಾದರೂ ರಜೋಗುಣ ಕಾರ್ಯವಾದ ಹಾಸ್ಯ ಹರ್ಷಾದಿರೂಪವಾದ ಮದವಾದರೂ ಪ್ರಿಯವಿಷಯಗಳನ್ನು ಸೇವಿಸುವ ಪುರುಷನಿಗೆ ಬುದ್ಧಿಭ್ರಂಶವನ್ನು ಮಾಡಲಾರವು; ನಶ್ವರವಾದ ದೇಹವನ್ನು ಜರಾಮೃತ್ಯುರಹಿತವಾದ್ದೆಂದು ತಿಳಿಯುತ ಜಿತಮನಸ್ಕರಲ್ಲದೆ ನಿರ್ದಯರಾದ ಪುರುಷರಿಂದ ಪಶುಪ್ರಾಣಿಗಳನ್ನು ಕೊಲ್ಲಿಸುವಂಥಾ ಐಶ್ವರ್ಯಮದ ಒಂದೇ ಬುದ್ಧಿಭ್ರಂಶಕರವಾದದ್ದು; ನರದೇವನೆಂದೂ ಭೂದೇವನೆಂದೂ ನಾಮಧೇಯವುಳ್ಳವನಾಗಿ ಪ್ರಾಣವಿಯೋಗಾನಂತರದಲ್ಲಿ ತನ್ನ ದೇಹವು ನಾಯಿ ನರಿಗಳಿಂದ ಭಕ್ಷಿಸಲ್ಪಡುವ ಅಮೇಧ್ಯವಾಗಾದರೂ ದಹಿಸಲ್ಪಡುವ ಭಸ್ಮವೆಂದಾದರೂ ಕ್ರಿಮಿಗಳಿಂದಾದರೂ ಹೇಳಲ್ಪಡುವ ದೇಹಪೋಷಣಕ್ಕೋಸ್ಕರ ನರಕ

ಪ್ರಾಪ್ತಿಸಾಧನವಾದ ಪ್ರಾಣದ್ರೋಹಮಾಡುವ ಪುರುಷನು ತನ್ನ ಶ್ರೇಯಸ್ಸನ್ನು ತಿಳಿಯನು ; ಶರೀರಾಭಿಮಾನಿಯಾದ ಪುರುಷನ ದೇಹವು ಅನ್ನವನ್ನಿತ್ತು ಪಾಲಿಸುವ ಸ್ವಾಮಿಯ ಸ್ವತ್ತಾಗುವದೋ—ಗರ್ಭಾದಾನದಿಂದ ಹುಟ್ಟಿಸುವ ತಂದೆಯ ಸ್ವತ್ತಾಗುವದೋ—ನವಮಾಸಗಳು ಗರ್ಭದಲ್ಲಿ ಧರಿಸಿ ಪ್ರಸವಿಸುವ ತಾಯ ಸ್ವತ್ತಾಗುವದೋ—ಅಪುತ್ರವಂತನಾಗಿರುವ ಮಾತಾಮಹನ ಸ್ವತ್ತಾಗುವದೋ—ಕ್ರಯದ್ರವ್ಯವನ್ನಿತ್ತು ಕೊಂಡವನ ಸ್ವತ್ತಾಗುವದೋ—ಅಗ್ನಿಯ ಸ್ವತ್ತಾಗುವದೋ—ನಾಯಿ ಮೊದಲಾದವುಗಳ ಸ್ವತ್ತಾಗುವದೋ ತಿಳಿಯಕೂಡದು ; ಈರೀತಿ ನಿಶ್ಚಯವಿಲ್ಲದಿರುವದರಿಂದ ಸಮಸ್ತರಿಗೂ ಸಾಧಾರಣವಾಗಿ ಮಾಯೆಯಿಂದುದ್ಭವಿಸಿ ಆ ಮಾಯೆಯಲ್ಲೇ ಲಯವನ್ನೈದುವ ಮರ್ತ್ಯದೇಹವನ್ನು ಮೂಢರು ಹೊರತು ವಿದ್ವಾಂಸರಾದ ಪುರುಷರು ಆತ್ಮನೆಂದು ತಿಳಿದು ಪ್ರಾಣಿಗಳನ್ನು ಹಿಂಸೆಪಡಿಸರು ! ದುಷ್ಟನಾಗಿ ಐಶ್ವರ್ಯಮದದಿಂದ ಅಂಧನಾದ ಪುರುಷನಿಗೆ ದಾರಿದ್ರ್ಯವೇ ಪರಮಾಂಜನವಾಗುವದು ; ದರಿದ್ರನಾದ ಪುರುಷನು ಪ್ರಾಣಿಗಳನ್ನು ತನ್ನಂತೆ ನೋಡುವನಾದ್ದರಿಂದ ಅನ್ಯರಿಗೆ ದ್ರೋಹವನ್ನು ಮಾಡನು ; ಮುಳ್ಳುಗಳಿಂದ ಚುಚ್ಚಲ್ಪಟ್ಟ ಪಾದಗಳುಳ್ಳ ಪುರುಷನು ಮುಖದ ಬಳಲಿಕೆ ಮೊದಲಾದ ಗುರುತುಗಳಿಂದ ಸಮಸ್ತ ಜೀವರಿಗೂ ಸುಖದುಃಖಗಳು ಸಮಾನಗಳಾಗಿರುವವೆಂದು ಭಾವಿಸುತ ಅನ್ಯಪ್ರಾಣಿಗಳಿಗೆ ಅಂಥಾ ಉಪದ್ರವವನ್ನುಂಟುಮಾಡನು ; ಕಂಟಕೋಪದ್ರವವನ್ನರಿಯದ ಪುರುಷನು ಪರರ ಸುಖದುಃಖಗಳನ್ನರಿಯನು ! ದರಿದ್ರನಾದ ಪುರುಷನು ಅಹಂಕಾರರಹಿತನಾಗಿ ಸಮಸ್ತ ಮದಗಳಿಂದಲೂ ಬಿಡಲ್ಪಟ್ಟು ಮನುಷ್ಯದೇಹದಲ್ಲಿ ಮಹತ್ತಾದ ಕಷ್ಟವನ್ನೈದಿದರೂ ಆ ಕಷ್ಟವೇ ಅವನಿಗೆ ತಪಸ್ಸೆಂದು ತಿಳಿಯಬೇಕು ; ನಿತ್ಯದಲ್ಲಿಯೂ ಕೃಶವಾದ ದೇಹವುಳ್ಳವನಾಗಿ ಅನ್ನವನ್ನೇ ಅಪೇಕ್ಷಿಸುತಲಿರುವ ದಾರಿದ್ರಪೀಡಿತನಾದ ಪುರುಷನನ್ನು ಚಕ್ಷುರಾದಿ ಇಂದ್ರಿಯಗಳು ಸೊಕ್ಕದೆ ಶುಷ್ಕಗಳಾಗುವವು ; ಆ ಪುರುಷನಿಗೆ ಪರಹಿಂಸಾ ವ್ಯಾಪಾರಗಳು ಶಾಂತವಾಗುವವು ; ಆದ್ದರಿಂದ ಸರ್ವತ್ರ ಸಮದೃಷ್ಟಿಯುಳ್ಳ ಸಾಧುಗಳು ದರಿದ್ರಪುರುಷನೊಡನೆಯೇ ಸಹವಾಸಮಾಡುವರು ; ಆ ಪುರುಷನಿಗೆ ಆ ಸತ್ಸಂಗದಿಂದ ಅನ್ನಾದ್ಯಪೇಕ್ಷೆಗಳು ಶಾಂತವಾಗಿ ಶೀಘ್ರದಲ್ಲಿ ಸಿದ್ಧಿಯುಂಟಾಗುವದು ! ಶ್ರೀಮುಕುಂದನ ಚರಣಾರವಿಂದಗಳಲ್ಲಿ ದೃಢಭಕ್ತಿಯುಳ್ಳ ಸರ್ವತ್ರ ಸಮಚಿತ್ತರಾದ ಸಾಧುಗಳಿಗೆ ಧನಗರ್ವಿತರಾದ ದುಷ್ಟರಿಂದಲೂ ಅವರ ಆಶ್ರಯದಿಂದಲೂ ಆಗತಕ್ಕ ಫಲವಿಲ್ಲ ; ಈ ಯಕ್ಷರೀರ್ವರೂ ಲೋಕಪಾಲಕನಾದ ಕುಬೇರನ ಪುತ್ರರಾಗಿಯೂ ಅಜ್ಞಾನಾವೃತರಾಗಿದ್ದಾರೆ ; ಐಶ್ವರ್ಯದಿಂದ ಅಂಧರಾಗಿಯೂ ವಾರುಣೀ ಮದ್ಯದಿಂದ ಮತ್ತರಾಗಿಯೂ ಅವಶೀಕೃತಾಂತಃಕರಣರಾಗಿ ಸ್ತ್ರೀಕಾಮುಕರಾಗಿರುವ ನಳಕೂಬರ ಮಣಿಗ್ರೀವರಿಗೆ ಅಜ್ಞಾನದಿಂದುಂಟಾದ ಮದವನ್ನು ನಾನು ಪರಿಹರಿಸುತ್ತೇನೆ ; ಈಗ ದುಷ್ಟವಾದ ಮದವುಳ್ಳ ಇವರೀರ್ವರೂ ವಸ್ತ್ರರಹಿತರಾಗಿ ತಮ್ಮನ್ನು ತಾವೇ ಮರತಿದ್ದಾರೆ ; ಆದ್ದರಿಂದ ಪುನಹ ಈ ರೀತಿಯಲ್ಲಿ ಮೈಮರೆಯದಿರುವ ರೀತಿಯಲ್ಲಿ ವೃಕ್ಷಭಾವವನ್ನೈದಲೀ ! ಇವರೀರ್ವರೂ ನನ್ನ ಅನುಗ್ರಹದಿಂದ ತಮ್ಮ ಮದದಿಂದೀಶಾಪವು ಬಂತೆಂಬ ಸ್ಮರಣೆಯೂ ಶ್ರೀವಾಸುದೇವನ ಸ್ಮೃತಿಯೂ ಉಳ್ಳವರಾಗಿ ದೇವಮಾನದಲ್ಲಿ ನೂರು ವರುಷಗಳ ಪರ್ಯಂತರ ವೃಕ್ಷಗಳಾಗಿದ್ದು ಅನಂತರದಲ್ಲಿ ನನ್ನ ಪ್ರಸಾದದಿಂದ ಶ್ರೀವಾಸುದೇವನ ಸಾನ್ನಿಧ್ಯವನ್ನು ಪಡೆದು ಪುನಹ ತಮ್ಮ ಲೋಕವನ್ನೈದಿ ಶ್ರೀವಾಸುದೇವನಲ್ಲಿ ಭಕ್ತಿಯುಳ್ಳವರಾಗಿರಲಿ !'' ಎಂದು ನುಡಿದು ನರನಾರಾಯಣಾಶ್ರಮವನ್ನು ಕುರಿತೈದಿದನು. ಅನಂತರದಲ್ಲಿ ನಳಕೂಬರ ಮಣಿಗ್ರೀವರು ಅವಳೀ ಅರ್ಜುನವೃಕ್ಷಗಳಾಗಿ ಜನಿಸಿದರು !

ಎಲೈ ಪರೀಕ್ಷಿದ್ರಾಯನೆ, ಈ ಪ್ರಕಾರದಲ್ಲಿ ಶಾಪವನ್ನು ಕೊಟ್ಟ ಭಾಗವತಶ್ರೇಷ್ಠನಾದ ನಾರದಮುನಿಯ ವಾಕ್ಯವನ್ನು ಯಥಾರ್ಥಮಾಡಲೋಸುಗ ಒರಳಲ್ಲಿ ಕಟ್ಟಲ್ಪಟ್ಟ ಬಾಲಕನಾದ ಶ್ರೀಕೃಷ್ಣನು ಮೆಲ್ಲಮೆಲ್ಲನೆ ಆ ಒರಳನ್ನು ಸೆಳದುಕೊಂಡು ಆ ಯಮಳಾರ್ಜುನವೃಕ್ಷಗಳಿದ್ದ ಸ್ಥಳವನ್ನು ಕುರಿತೈದುತ ತನ್ನ ಮನಸ್ಸಿನಲ್ಲಿ ದೇವರ್ಷಿಯಾದ ನಾರದನು ತನಗೆ ಅತ್ಯಂತ ಪ್ರಿಯನಾದ್ದರಿಂದಲೂ ಅರ್ಜುನವೃಕ್ಷಗಳಾದ ಯಕ್ಷರೀರ್ವರೂ ಕುಬೇರನ ಪುತ್ರರಾದ್ದರಿಂದಲೂ ಮಹಾತ್ಮನಾದ ನಾರದಮುನಿಯಿಂದ ಅವರ ವಿಷಯವಾಗಿ ನುಡಿಯಲ್ಪಟ್ಟ ಅರ್ಥವನ್ನು ಸಾಧಿಸಬೇಕೆಂದು ಆಲೋಚಿಸಿ ಜೋಡಾಗಿ ಜನಿಸಿದ್ದ ಆ ಅರ್ಜುನವೃಕ್ಷಗಳ ಮಧ್ಯದಲ್ಲಿ ಹೋಗಲು ಆತನು ಪ್ರವೇಶಮಾಡಿದ ಮಾತ್ರದಿಂದಲೇ ನಡುವಿಗೆ ಕಟ್ಟಿದ್ದ ಒರಳು ಆ ವೃಕ್ಷಗಳ ಮಧ್ಯದಲ್ಲಿ ಅಡ್ಡಲಾಗಿ ಶಿಕ್ಕಿಕೊಂಡಿತು ; ಬಾಲಕ

ನಾಗಿ ದಾಮೋದರನಾದ ಶ್ರೀಕೃಷ್ಣನು ಮಹಾಬಲದಿಂದ ಆ ವೃಕ್ಷಗಳ ಮಧ್ಯದಲ್ಲಿ ಸಿಕ್ಕಿದ ಒರಳನ್ನು ಘಟ್ಟಿಯಾಗಿ ಸೆಳೆಯಲು ಆ ವೇಗದಿಂದ ಆ ಅರ್ಜುನವೃಕ್ಷಗಳೆರಡೂ ಸಮೂಲವಾಗಿ ಕೀಳಲ್ಪಟ್ಟ ಬೇರುಗಳುಳ್ಳವಾಗಿ ಅತ್ಯಂತವಾಗಿ ಚಲಿಸುವ ಕೊಂಬುಗಳೂ ಕೊನೆಗಳೂ ಪತ್ರಗಳೂ ಉಳ್ಳವಾಗಿ ಪ್ರಚಂಡಶಬ್ದಮಾಡುತ ಬಿದ್ದವು! ಆಗ ತಮ್ಮ ಪರಮೋತ್ಕೃಷ್ಟವಾದ ದೇಹಕಾಂತಿಯಿಂದ ದಶದಿಕ್ಕುಗಳನ್ನೂ ಪ್ರಕಾಶಮಾಡುತ ವೃಕ್ಷಗಳಲ್ಲಿರುವ ಅಗ್ನಿಯು ಮೂರ್ತಿವತ್ತಾಗಿ ಹೊರಡುವಂತೆ ಆ ಯಕ್ಷರೀರ್ವರೂ ಆ ಅರ್ಜುನವೃಕ್ಷಗಳದೆಸೆಯಿಂದ ಹೊರಟು ಸಮಸ್ತ ಲೋಕಗಳಿಗೂ ಸ್ವಾಮಿಯಾದ ಶ್ರೀಕೃಷ್ಣನನ್ನು ಶಿರಸಾ ನಮಸ್ಕಾರಮಾಡಿ ನಿರ್ಮಲಾಂತಃಕರಣರಾಗಿ ಅಂಜಲೀಬದ್ಧರಾಗಿ "ಎಲೈ ಅಚಿಂತ್ಯಪ್ರಭಾವವುಳ್ಳ ಶ್ರೀಕೃಷ್ಣನೆ, ನೀನು ಬಾಲಕನಲ್ಲ; ಪರಮಪುರುಷನೂ ಜಗತ್ತಿಗೆ ನಿಮಿತ್ತಕಾರಣರೂಪನೂ ಉಪಾದಾನಕಾರಣರೂಪನೂ ನೀನೇ ಸರಿ; ಸ್ಥೂಲಸೂಕ್ಷ್ಮರೂಪವಾದ ಈ ಜಗತ್ತು ಬ್ರಹ್ಮಸ್ವರೂಪನಾದ ನಿನ್ನ ರೂಪವೆಂದು ಪ್ರಾಜ್ಞರು ತಿಳಿಯುವರು; ಸರ್ವಪ್ರಾಣಿಗಳ ದೇಹವು ಪ್ರಾಣವು ಅಹಂಕಾರವು ಇಂದ್ರಿಯಗಳು ಮೊದಲಾದವುಗಳಿಗೆಲ್ಲಕ್ಕೂ ಈಶ್ವರನು ನೀನೊಬ್ಬನೇ ಸರಿ; ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀವಿಷ್ಣುವೂ ಕಾಲವೂ ಪ್ರಧಾನವೂ ಈಶ್ವರನೂ ನೀನೇ ಸರಿ; ಕಾಲವೆಂಬುದು ನಿನ್ನ ಲೀಲೆಯು; ಸತ್ವರಜಸ್ತಮೋಗುಣಮಯವಾಗಿ ಸೂಕ್ಷ್ಮರೂಪವಾದ ಪ್ರಕೃತಿಯೆಂಬ ಶಕ್ತಿಯೂ ಸರ್ವಾಧ್ಯಕ್ಷನೂ ಸಮಸ್ತ ಕ್ಷೇತ್ರಗಳ ವಿಕಾರವನ್ನು ತಿಳಿದಿರುವ ಪುರುಷನೂ ಮಹತ್ಸ್ವರೂಪವಾದ ಕಾರ್ಯವೂ ನೀನೇ ಆದ್ದರಿಂದ ಸರ್ವಸ್ವರೂಪನು ನೀನೇ ಸರಿ; ಪ್ರಕೃತಿಗುಣವಿಕಾರಗಳಾಗಿ ದೃಶ್ಯರೂಪವಾಗಿ ಗ್ರಹಿಸಲ್ಪಡುತಲಿರುವ ವಿಷಯಗಳೊಡನೆ ಕೂಡಿ ದ್ರಷ್ಟೃವಾದ ನೀನು ದೃಶ್ಯಗಳಾದ ಗುಣವಿಕಾರಗಳಾದ ಇಂದ್ರಿಯಾದಿಗಳಿಂದ ಗ್ರಹಿಸಲ್ಪಡುವವನಲ್ಲ; ಜೀವಾದಿಗಳ ಉತ್ಪತ್ತಿಯ ಪೂರ್ವದಲ್ಲೇ ಸ್ವಪ್ರಕಾಶರೂಪದಿಂದ ಸಿದ್ಧನಾಗಿದ್ದ ನಿನ್ನನ್ನು ದೇಹಾದಿಗಳಿಂದ ಆವೃತನಾದ ಯಾವ ಜೀವನೂ ತಿಳಿಯನು! ಎಲೈ ಕೃಷ್ಣಮೂರ್ತಿಯೆ, ಷಡ್ಗುಣೈಶ್ವರ್ಯಸಂಪನ್ನನಾಗಿ ಪ್ರಾಣಾದಿಗಳನ್ನು ಪ್ರಕಾಶಮಾಡುವ ಶ್ರೀವಾಸುದೇವನಾಗಿ ಪುರುಷರೂಪನಾಗಿ ಸೃಷ್ಟ್ಯಾದಿಗಳಿಗೆ ಆದಿಕರ್ತೃವಾಗಿ ಮೇಘಗಳಿಂದ ಮರೆಮಾಡಲ್ಪಟ್ಟ ಸೂರ್ಯನಂತೆ ಮಹಿಮೆಯುಳ್ಳವನಾಗಿ ಪರಮಾತ್ಮಸ್ವರೂಪನಾದ ನಿನಗೆ ನಮಸ್ಕಾರವು! ಶರೀರಗಳಲ್ಲಿ ಅಶರೀರಿಯಾಗಿ ನಿನ್ನ ಅವತಾರಗಳಲ್ಲಿ ಸಮಾನಗಳೂ ಅಧಿಕಗಳೂ ಇಲ್ಲದ ದೇಹಗಳನ್ನು ಧರಿಸಿ ಅಸಂಭಾವಿತಗಳಾದ ಪ್ರಭಾವಗಳಿಂದ ಸ್ಫುಟವಾಗಿ ತಿಳಿಯಲ್ಪಡುತ ಸರ್ವಾಭೀಷ್ಟಗಳನ್ನಿತ್ತು ಪಾಲನಮಾಡುತ್ತೀ; ನೀನು ಸಮಸ್ತ ಲೋಕಗಳ ಕ್ಷೇಮಕ್ಕೋಸ್ಕರ ಈಗ ಅವತರಿಸಿದ ಪರಮಮಂಗಳವಿಗ್ರಹನಾದ ನಿನಗೆ ನಮಸ್ಕಾರವು! ವಸುದೇವನ ಪುತ್ರನಾಗಿ ಪರಮಶಾಂತನಾಗಿ ಯಾದವರಿಗೆ ಪತಿಯಾದ ನಿನಗೆ ನಮಸ್ಕಾರ! ಎಲೈ ಪರಿಪೂರ್ಣನಾದ ಶ್ರೀಕೃಷ್ಣನೆ, ನಿನ್ನ ಸೇವಕನಾದ ಕುಬೇರನಿಗೆ ಕಿಂಕರರಾದ ನಮಗೆ ಅನುಜ್ಞೆಯನ್ನಿತ್ತು ಕಳುಹಿಸು! ಷಡ್ಗುಣೈಶ್ವರ್ಯಸಂಪನ್ನನಾದ ನಿನ್ನ ದರ್ಶನವು ನಮಗೆ ನಾರದಮುನಿಯ ಅನುಗ್ರಹದಿಂದುಂಟಾಯಿತು! ಆದ್ದರಿಂದ ನಮ್ಮ ಲೋಕವನ್ನೈದುವ ನಮಗೆ ಪೂರ್ವದಂತೆ ದುಷ್ಟಸ್ವಭಾವವುಂಟಾಗದೆ ನಮ್ಮ ವಾಕ್ಕು ನಿನ್ನ ಚರಿತ್ರಗಳನ್ನು ಗಾನಮಾಡುತಿರಲಿ! ನಮ್ಮ ಶ್ರೋತ್ರಗಳು ನಿನ್ನ ಕಥಾಶ್ರವಣವನ್ನು ಗೈಯುವದರಲ್ಲಿರಲಿ! ನಮ್ಮ ಹಸ್ತಗಳು ನಿನ್ನ ಪೂಜೆಯನ್ನು ಗೈಯುವದರಲ್ಲಿರಲಿ! ನಮ್ಮ ಮನಸ್ಸು ನಿನ್ನ ಪಾದಾಂಬುಜಗಳಧ್ಯಾನದಲ್ಲಿರಲಿ! ನಮ್ಮ ಶಿರಸ್ಸು ನಿನಗೆ ಆವಾಸಭೂತವಾದ ಜಗತ್ತನ್ನು ನಮಸ್ಕರಿಸುವದರಲ್ಲಿರಲಿ! ನಮ್ಮ ದೃಷ್ಟಿಗಳು ನಿನ್ನ ದಿವ್ಯಮೂರ್ತಿದರ್ಶನದಲ್ಲಿಯೂ ನಿನ್ನ ಭಕ್ತರ ದರ್ಶನದಲ್ಲಿಯೂ ಇರಲಿ!" ಎಂದು ಸ್ತೋತ್ರಮಾಡಿದರು.

ಎಲೈ ಪರೀಕ್ಷಿದ್ರಾಯನೆ, ಈ ರೀತಿಯಲ್ಲಿ ನಳಕೂಬರ ಮಣಿಗ್ರೀವರಿಂದ ಸ್ತೋತ್ರಮಾಡಲ್ಪಟ್ಟ ಭಗವಂತನಾಗಿ ಗೋಕುಲಕ್ಕೆ ಈಶ್ವರನಾಗಿ ಒರಳಿನಲ್ಲಿ ಹಗ್ಗದಿಂದ ಕಟ್ಟಲ್ಪಟ್ಟ ಶ್ರೀಕೃಷ್ಣನು ಮುಗುಳುನಗೆಯುಳ್ಳವನಾಗಿ ಆ ಯಕ್ಷರನ್ನು ಕುರಿತು "ಎಲೈ ಯಕ್ಷರುಗಳಿರಾ, ಐಶ್ವರ್ಯಮದದಿಂದ ಅಂಧರಾದ ನಿಮಗೆ ಕರುಣಾಶಾಲಿಯಾದ ನಾರದಮುನಿಯಿಂದ ಐಶ್ವರ್ಯಭ್ರಂಶವು ಅನುಗ್ರಹವಾಗಿ ಮಾಡಲ್ಪಟ್ಟಿತೆಂಬ ಅರ್ಥವು ನನಗೆ ಮೊದಲೆ ತಿಳಿದಿತ್ತು; ಸ್ವಧ

ರ್ಮಾನುವರ್ತಿಗಳಾಗಿ ಆತ್ಮಸ್ವರೂಪಜ್ಞರಾಗಿ ಅತ್ಯಂತವಾಗಿ ನನ್ನಲ್ಲಿ ಸಮರ್ಪಿಸಲ್ಪಟ್ಟ ಚಿತ್ತವುಳ್ಳ ನನ್ನ ಭಕ್ತರ ದರ್ಶನಮಾತ್ರದಿಂದ ಪುರುಷನಿಗೆ ಸಂಸಾರಬಂಧನವು ಸೂರ್ಯದರ್ಶನದಿಂದ ನೇತ್ರಗಳಿಗೆ ಅಂಧಕಾರವು ಪರಿಹರಿಸಲ್ಪಡುವಂತೆ ಪರಿಹರಿಸಲ್ಪಡುವದು ! ಎಲೈ ನಳಕೂಬರ ಮಣಿಗ್ರೀವರೆ, ನೀವು ನನ್ನಲ್ಲಿ ಪರಮಭಕ್ತಿಯುಳ್ಳವರಾಗಿ ನಿಮ್ಮ ಸ್ಥಾನಕ್ಕೆ ಹೋಗಿರಿ ! ಸಂಸಾರ ನಿವರ್ತಕವಾದ ಪರಮ ಭಕ್ತಿಯು ನಿಮಗೆ ಉಂಟಾಗುವದು '' ಎಂದು ನುಡಿದನು.

ಎಲೈ ಪರೀಕ್ಷಿದ್ರಾಯನೆ, ಈ ರೀತಿಯಲ್ಲಿ ಭಗವಂತನಿಂದ ಆಜ್ಞಾಪಿಸಲ್ಪಟ್ಟ ನಳಕೂಬರ ಮಣಿಗ್ರೀವರು ಒರಳಿನಲ್ಲಿ ಕಟ್ಟಲ್ಪಟ್ಟ ಶ್ರೀಕೃಷ್ಣನಿಗೆ ಬಾರಿಬಾರಿಗೂ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ಆತನ ಆಜ್ಞೆಯನ್ನು ಪರಿಗ್ರಹಿಸಿ ಉತ್ತರ ದಿಕ್ಕನ್ನು ಕುರಿತು ತೆರಳಿದರು !

## ೧೧ನೇ ಅಧ್ಯಾಯ.

### ವತ್ಸಾಸುರ ಬಕಾಸುರರ ವಧೆ.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ನಂದಗೋಪನು ಮೊದಲಾದ ಗೋಪಾಲಕರು ಬೀಳುತಲಿದ್ದ ಆ ಮತ್ತೀಮರಗಳ ಶಬ್ದವನ್ನು ಕೇಳಿ ಸಿಡಿಲೆರಗಿತೆಂಬ ಭಯದಿಂದ ಶ್ರೀಕೃಷ್ಣದೇವನಿದ್ದ ಸ್ಥಳಕ್ಕೆ ತ್ವರೆಯಿಂದೈದಿ ಅಲ್ಲಿ ಬಿದ್ದಿದ್ದ ಅವಳೀ ಮತ್ತೀಮರಗಳನ್ನು ಕಂಡು ಆ ವೃಕ್ಷಗಳ ಪತನಕ್ಕೆ ಕಾರಣವು ಪ್ರತ್ಯಕ್ಷವಾಗಿ ಮುಂದುಗಡೆಯಲ್ಲಿ ಕಾಣಲ್ಪಡುತಿದ್ದರೂ ಮತ್ತೂ ನಡುವಿನಲ್ಲಿ ಹಗ್ಗದಿಂದ ಕಟ್ಟಲ್ಪಟ್ಟ ಒರಳನ್ನು ಸೆಳೆಯುತಲಿದ್ದ ಬಾಲಕನಾದ ಶ್ರೀಕೃಷ್ಣನನ್ನು ಕಂಡೂ ಆತನು ಆ ವೃಕ್ಷಪತನಕ್ಕೆ ಕಾರಣವೆಂಬ ಅರ್ಥವನ್ನರಿಯದೆ ಆ ವೃಕ್ಷಭಂಗವು ರಾಕ್ಷಸಾದಿಗಳ ವ್ಯಾಪಾರವೆಂದೂ ಏನುಕಾರಣದಿಂದುಂಟಾಯಿತೋಯೆಂದೂ ಅದು ಬಹಳ ಆಶ್ಚರ್ಯವೆಂದೂ ಭ್ರಾಂತಿಯನ್ನೈದಿ ಅದು ಮಹತ್ತಾದ ಉತ್ಪಾತವೆಂದು ಭಯವನ್ನೈದಿದರು ; ಆಗ ಶ್ರೀಕೃಷ್ಣನ ಸಮೀಪದಲ್ಲಿ ಕ್ರೀಡಿಸುತಿದ್ದ ಗೋಪಬಾಲಕರು ಅವರನ್ನು ಕುರಿತು '' ಎಲೈ ನಂದಾದಿಗಳಿರಾ, ಇಲ್ಲಿ ಅಡ್ಡಲಾಗಿ ಈ ಒರಳನ್ನು ಸೆಳೆಯುತ ವೃಕ್ಷಗಳ ಮಧ್ಯವನ್ನೈದಿರುವ ಶ್ರೀಕೃಷ್ಣನಿಂದಲೆ ಈ ಅವಳೀ ಮರಗಳು ಕೆಡಹಲ್ಪಟ್ಟವು ; ಇಷ್ಟುಮಾತ್ರವೇ ಅಲ್ಲ ; ಈ ವೃಕ್ಷಗಳ ದೆಸೆಯಿಂದ ಹೊರಕ್ಕೆ ಹೊರಟ ದಿವ್ಯಪುರುಷರೀರ್ವರನ್ನು ನಾವು ಕಂಡೆವು '' ಎಂದು ಹೇಳಿದರು.

ಆ ವಚನವನ್ನು ಕೇಳಿ ನಂದಾದಿಗಳಲ್ಲಿ ಕೆಲವರು ಬಾಲಕನಾದ ಕೃಷ್ಣನಿಂದ ಆ ವೃಕ್ಷಗಳ ಭಂಗವು ಘಟಿಸಲಾರದೆಂಬ ಊಹೆಯಿಂದ ಆ ಬಾಲಕರ ವಚನದಲ್ಲಿ ವಿಶ್ವಾಸವನ್ನಿಡಲಿಲ್ಲ ; ಕೆಲವರು ಅವರವಚನದಲ್ಲಿ ಸಂದೇಹಯುಕ್ತವಾದ ಮನಸ್ಸುಳ್ಳವರಾಗಿದ್ದರು ! ಅನಂತರದಲ್ಲಿ ನಂದಗೋಪನು ನಡುವಿನಲ್ಲಿ ಕಟ್ಟಲ್ಪಟ್ಟ ಹಗ್ಗದಿಂದ ಒರಳನ್ನು ಸೆಳೆಯುತಲಿದ್ದ ತನ್ನ ಪುತ್ರನಾದ ಶ್ರೀಕೃಷ್ಣನನ್ನು ಕಂಡು ನಗುತ ಅವನನ್ನು ರಜ್ಜುಬಂಧನದ ದೆಸೆಯಿಂದ ಬಿಡಿಸಿದನು !

ಎಲೈ ಪರೀಕ್ಷಿದ್ರಾಯನೆ, ಈ ಪ್ರಕಾರದಲ್ಲಿ ತನ್ನ ಲೀಲೆಗಳನ್ನು ತೋರಿಸುತ ಭಗವಂತನಾದ ಶ್ರೀಕೃಷ್ಣನು ಒಂದು ಸಮಯದಲ್ಲಿ ಗೋಪಸ್ತ್ರೀಯರ ಹಸ್ತತಾಳಗಳಿಂದ ಪ್ರೇರಿಸಲ್ಪಟ್ಟವನಾಗಿ ಬಾಲಕನಂತೆ ನರ್ತನವನ್ನು ಗೈವನು ; ಒಂದು ಸಮಯದಲ್ಲಿ ದಾರುನಿರ್ಮಿತವಾದ ಸೂತ್ರಪ್ರತಿಮೆಯಂತೆ ಆ ಗೋಪಸ್ತ್ರೀಯರ ವಶವಾಗಿ ಗಾನವನ್ನು ಮಾಡುವನು ; ಒಂದು ಸಮಯದಲ್ಲಿ ಗೋಪಸ್ತ್ರೀಯರಿಂದ ಆಜ್ಞಾಪಿಸಲ್ಪಟ್ಟವನಾಗಿ ಪೀಠಪಾತ್ರೆ, ಪಾದುಕೆಗಳನ್ನು ತರುವದಕ್ಕೆ ಸಾಮರ್ಥ್ಯವಿಲ್ಲದವನಂತೆ ಪ್ರಯತ್ನದಿಂದ ಹೊತ್ತು ತರುವನು ; ಮತ್ತೊಂದು ಸಮಯದಲ್ಲಿ ತನ್ನವರಾದ ಗೋಪಸ್ತ್ರೀಯರಿಗೆ ಪ್ರೀತಿಯನ್ನುಂಟುಮಾಡುತ ತೋಳುಗಳನ್ನಾಡಿಸುವನು ! ಈ ಪ್ರಕಾರವಾಗಿ

ಭಗವಂತನಾದ ಶ್ರೀಕೃಷ್ಣನು ತನ್ನ ಮಹಿಮೆಯನ್ನು ಬಲ್ಲವರಿಗೆ ತನ್ನ ಭಕ್ತಪರಾಧೀನತ್ವವನ್ನು ತೋರಿಸುತ ನಾನಾಪ್ರಕಾರಗಳಾದ ಬಾಲಕ್ರೀಡೆಗಳಿಂದ ಆ ಗೋಕುಲಕ್ಕೆ ಅತ್ಯಂತ ಸಂತೋಷವನ್ನುಂಟುಮಾಡುತಿದ್ದನು! ಸರ್ವಪ್ರಾಣಿಗಳನ್ನೂ ಸೃಜಿಸುವ ಭಗವಂತನಾದ ಶ್ರೀಕೃಷ್ಣನು ಈ ರೀತಿಯಲ್ಲಿ ಗೋಪಸ್ತ್ರೀಯರ ಸಮೀಪದಲ್ಲಿ ಬಾಲಕ್ರೀಡೆಗಳನ್ನಾಚರಿಸುತ ಒಂದು ಸಮಯದಲ್ಲಿ ಹಣ್ಣುಗಳನ್ನು ಬೀದಿಗಳಲ್ಲಿ ಕೂಗಿ ಮಾರುವವಳು ಬರಲು ಅತಿತ್ವರೆಯಿಂದ ತನ್ನ ಬೊಗಸೆಯಿಂದ ಧಾನ್ಯವನ್ನು ತೆಗೆದುಕೊಂಡು ಹೋಗಿ ತಾನು ಸರ್ವಪ್ರದನಾದಾಗ್ಯೂ "ಎಲೇ ಹಣ್ಣುಮಾರುವವಳೇ, ಇಲ್ಲಿ ಬಾ; ನನ್ನಿಂದ ಬಹಳವಾಗಿ ತರಲ್ಪಟ್ಟ ಈ ಧಾನ್ಯಗಳನ್ನು ನಿನ್ನ ಸೊಲಿಗೆಯಿಂದ ಅಳೆದುಕೊಂಡು ಆ ಸೊಲಿಗೆಯಿಂದಲೇ ನನಗೆ ಫಲಗಳನ್ನಳೆದು ಕೊಡು" ಎಂದು ನುಡಿದನು.

ಫಲಗಳನ್ನು ಮಾರುವವಳು ಬಾಲಕನಾಗಿ ಮಹಾತ್ಮನಾದ ಶ್ರೀಕೃಷ್ಣನ ವಾಕ್ಯವನ್ನು ಕೇಳಿ ಅಲ್ಲಿ ನಿಂತು ಮರೀ ಆನೆಯಂತೆ ನಡೆದುಬರುತಿದ್ದ ಅರವಿಂದಲೋಚನನಾಗಿ ಮನೋಹರನಾದ ಶ್ರೀಕೃಷ್ಣನನ್ನು ಬಾರಿಬಾರಿಗೂ ತನ್ನ ವಿಸ್ತಾರವಾದ ನಯನಗಳಿಂದ ನೋಡುತ ಸುರಿಯಲ್ಪಟ್ಟ ಧಾನ್ಯವುಳ್ಳ ಶ್ರೀಕೃಷ್ಣನ ಬೊಗಸೆಯಲ್ಲಿ ಹಣ್ಣುಗಳನ್ನು ತುಂಬಿದಳು! ಎಲೈ ರಾಯನೆ, ಆಕೆಯು ಮಾರ್ಗದಲ್ಲೇ ಧಾನ್ಯಗಳು ಸುರಿದುಹೋದ ಶ್ರೀಕೃಷ್ಣನ ಬೊಗಸೆಯನ್ನು ನೋಡಿಯೂ ಅದರ ತುಂಬ ಹಣ್ಣುಗಳನ್ನು ಕೊಟ್ಟದ್ದರಿಂದ ಆ ಕ್ಷಣದಲ್ಲೇ ಅವಳ ಫಲಬಾಂಡವು ಅನರ್ಘ್ಯಗಳಾದ ರತ್ನಗಳಿಂದ ಪೂರಿತವಾಯಿತು! ಆ ಬಳಿಕ ಸರ್ವಫಲಪ್ರದಾನನಾಗಿ ಪ್ರಭುವಾದ ಶ್ರೀಕೃಷ್ಣನು ತನ್ನ ಸಮಾನವಾದ ವಯಸ್ಸುಳ್ಳ ಬಾಲಕರೊಡನೆ ಆ ಗೋಕುಲದ ಬೀದಿಯಲ್ಲಿ ವಿಹರಿಸುತ ಆ ಹಣ್ಣುಗಳನ್ನು ಗೋಪಸ್ತ್ರೀಯರಿಗೆ ಕೊಟ್ಟನು!

ಒಂದು ಸಮಯದಲ್ಲಿ ರಾಮಕೃಷ್ಣರು ಅನೇಕ ಬಾಲಕರೊಡನೆ ನದೀತೀರದಲ್ಲಿ ಅತ್ಯಂತವಾಗಿ ಕ್ರೀಡಿಸುತಿದ್ದದ್ದನ್ನು ನೋಡಿ ರೋಹಿಣೀದೇವಿಯು ಮನೆಗೆ ಕರೆದಳು; ರಾಮಕೃಷ್ಣರು ಆ ದೇವಿಯಿಂದ ಕರೆಯಲ್ಪಟ್ಟವರಾದಾಗ್ಯೂ ಅತ್ಯಂತ ಕ್ರೀಡಾವ್ಯಾಸಂಗದಿಂದ ಬರದಿದ್ದರು; ಆಗ ಪುತ್ರರಲ್ಲಿ ವಾತ್ಸಲ್ಯವುಳ್ಳ ರೋಹಿಣೀದೇವಿಯು ಅವರನ್ನು ಕರೆಯುವದಕ್ಕೋಸ್ಕರ ಯಶೋದಾದೇವಿಯನ್ನು ಕಳುಹಿಸಿದಳು; ಆ ದೇವಿಯು ಬಾಲಕರೊಡನೆಯೂ ಅಣ್ಣನಾದ ಬಲಭದ್ರನೊಡನೆಯೂ ಕೂಡಿ ಅತ್ಯಂತವಾಗಿ ಆಡುತಲಿದ್ದ ಶ್ರೀಕೃಷ್ಣನನ್ನು ನೋಡಿ ಪುತ್ರಸ್ನೇಹದಿಂದ ಸ್ರವಿಸುತಲಿದ್ದ ಕ್ಷೀರವುಳ್ಳ ಸ್ತನಗಳುಳ್ಳವಳಾಗಿ ಆತನನ್ನು ಕುರಿತು "ಕಮಲಲೋಚನನಾಗಿ ಬಾಲಕನಾದ ಎಲೈ ಅಪ್ಪಾ ಕೃಷ್ಣನೆ, ಬೇಗ ಬಂದು ಸ್ತನಪಾನವನ್ನು ಮಾಡು; ನೀನು ಕ್ಷುತ್ತಿನಿಂದ ಬಳಲಿದ್ದೀ; ಅದುಕಾರಣ ಆಟಗಳನ್ನು ಬಿಟ್ಟು ಬಂದು ಭೋಜನಮಾಡು!——ನಮ್ಮ ಗೋಕುಲಕ್ಕೆ ಸಂತೋಷಕರನಾಗಿ ನನ್ನ ಪುತ್ರನಾದ ಎಲೈ ಅಪ್ಪಾ ರಾಮನೆ, ಪ್ರಾತಃಕಾಲದಲ್ಲಿ ಭೋಜನಮಾಡಿದ ನೀನು ಕ್ರೀಡೆಗಳಲ್ಲಿ ಆಸಕ್ತನಾಗಿ ಈಗ ಬಳಲುತಲಿದ್ದೀ; ಆದ್ದರಿಂದ ಶೀಘ್ರವಾಗಿ ನಿನ್ನ ತಮ್ಮನಾದ ಕೃಷ್ಣನೊಡಗೂಡಿ ಮನೆಗೆ ಬಾ! ಎಲೈ ಯದುಕುಲಶ್ರೇಷ್ಠನಾದ ರಾಮನೆ, ಗೋಕುಲಕ್ಕೆ ಅಧಿಪತಿಯಾದ ನಂದಗೋಪನು ಭೋಜನಮಾಡುವದಕ್ಕಾಗಿ ನಿಮಗೋಸ್ಕರ ಕಾದುಕೊಂಡಿದ್ದಾನೆ; ಆದ್ದರಿಂದ ನೀವು ಬಂದು ಭೋಜನಮಾಡಿ ನಮಗೆ ಸಂತೋಷವನ್ನುಂಟುಮಾಡೀ!——ಎಲೈ ಗೋಪಬಾಲಕರುಗಳಿರಾ, ನೀವು ನಿಮ್ಮ ಗೃಹಗಳಿಗೆ ಹೋಗೀ!——ಎಲೈ ಬಾಲಕನಾದ ಶ್ರೀಕೃಷ್ಣನೆ, ನೀನು ಧೂಳಿಗಳಿಂದ ಮಲಿನವಾದ ದೇಹವುಳ್ಳವನಾಗಿದ್ದೀ; ಅದಕಾರಣ ಮಜ್ಜನವನ್ನು ಮಾಡು; ಈ ದಿವಸದಲ್ಲಿ ನಿನ್ನ ಜನ್ಮನಕ್ಷತ್ರವು ಕೂಡಿರುವದರಿಂದ ನೀನು ಪರಿಶುದ್ಧನಾಗಿ ಬ್ರಾಹ್ಮಣರಿಗೆ ಗೋವುಗಳನ್ನು ದಾನಮಾಡು; ತಮ್ಮ ತಾಯಿಗಳಿಂದ ಸ್ನಾನಮಾಡಿಸಲ್ಪಟ್ಟೂ ಅಲಂಕರಿಸಲ್ಪಟ್ಟೂ ಭೋಜನವನ್ನು ಮಾಡಿರುವ ನಿನ್ನ ಸ್ನೇಹಿತರಾದ ಗೋಪಬಾಲಕರನ್ನು ನೋಡು; ನೀನೂ ಅದೇ ರೀತಿಯಲ್ಲಿ ಸ್ನಾನವನ್ನು ಮಾಡಿ ಚನ್ನಾಗಿ ಅಲಂಕರಿಸಲ್ಪಟ್ಟು ಭೋಜನವನ್ನು ಮಾಡಿ ಸುಖದಿಂದ ವಿಹರಿಸುತ್ತಿರು" ಎಂದು ನುಡಿದಳು.

ಎಲೈ ಪರೀಕ್ಷಿದ್ರಾಯನೆ, ಈ ರೀತಿಯಲ್ಲಿ ಯಶೋದಾದೇವಿಯು ಸ್ನೇಹಪಾಶದಿಂದ ಬದ್ಧವಾದ ಬುದ್ಧಿಯುಳ್ಳವಳಾಗಿ ಸಮಸ್ತ ಜಗತ್ತಿಗೂ ಸ್ವಾಮಿಯಾದ ಶ್ರೀಕೃಷ್ಣನನ್ನೂ ಬಲರಾಮನನ್ನೂ ಹಸ್ತಗಳಲ್ಲಿಡಿದು ತನ್ನ ಗೃಹವನ್ನೈದಿಸಿ ಸ್ನಾನಾದಿ ಶುಭಕರ್ಮಗಳನ್ನಾಚರಿಸಿದಳು!

ಎಲೈ ಪರೀಕ್ಷಿದ್ರಾಯನೆ, ಕೆಲವು ಕಾಲದ ಬಳಿಕ ಗೋಪಾಲಕರಲ್ಲಿ ವೃದ್ಧರಾದ ನಂದಾದಿಗಳು ತಾವು ವಾಸಮಾಡುತಿದ್ದ ಬೃಹದ್ವನದಲ್ಲಿ ಅನೇಕ ಮಹೋತ್ಪಾತಗಳನ್ನನುಭವಿಸಿದ್ದರಿಂದ ಒಂದು ಕಡೆಯಲ್ಲಿ ಕೂಡಿ ಗೋಕುಲಕ್ಕೆ ಹಿತವಾದ ಕಾರ್ಯವನ್ನು ಆಲೋಚಿಸಿದರು; ಆಗ ಬುದ್ಧಿಯಲ್ಲಿಯೂ ವಯಸ್ಸಿನಲ್ಲಿಯೂ ಅಧಿಕನಾಗಿ ದೇಶಕಾಲಾರ್ಥ ಸ್ವರೂಪಜ್ಞನಾಗಿ ಶ್ರೀರಾಮಕೃಷ್ಣರಿಗೆ ಹಿತಕರನಾದ ಉಪನಂದನೆಂಬ ಗೋಪಾಲಕನು ಅವರನ್ನು ಕುರಿತು "ಎಲೈ ನಂದಾದಿಗಳಿರಾ, ಈ ಬೃಹದ್ವನದಲ್ಲಿ ಪ್ರಜೆಗಳಿಗೆ ವಿಲಯಕಾರಣಗಳಾದ ಮಹೋತ್ಪಾತಗಳು ಸಂಭವಿಸುತ್ತಿರುವದರಿಂದ ಗೋಕುಲಕ್ಕೆ ಹಿತವನ್ನಪೇಕ್ಷಿಸುವ ನಾವು ಈ ಸ್ಥಳದಿಂದ ಹೊರಟುಹೋಗತಕ್ಕದ್ದು; ಬಾಲಕನಾದ ಕೃಷ್ಣನು ಶ್ರೀಹರಿಯ ಅನುಗ್ರಹದಿಂದ ಬಾಲಘಾತಕಳಾದ ರಾಕ್ಷಸಿಯಿಂದ ಅತಿ ಪ್ರಯಾಸದಿಂದ ಬಿಡಿಸಲ್ಪಟ್ಟನು; ಹರಿಯ ಅನುಗ್ರಹದಿಂದಲೇ ಶಕಟವೂ ಆತನಮೇಲೆ ಬೀಳಲಿಲ್ಲ; ಚಕ್ರವಾಕರೂಪನಾದ ತೃಣಾವರ್ತನೆಂಬ ದೈತ್ಯನಿಂದ ಪಕ್ಷಿಗಳಿಗೆ ವಿಹಾರಸ್ಥಾನವಾದ ಗಗನವನ್ನೈದಿಸಲ್ಪಟ್ಟ ಬಾಲಕನಾದ ಕೃಷ್ಣನು ಅಲ್ಲಿಂದ ಹಾಸುಕಲ್ಲಿನಲ್ಲಿ ಬಿದ್ದರೂ ಆ ದೇವತಾಶ್ರೇಷ್ಠನಿಂದಲೇ ರಕ್ಷಿಸಲ್ಪಟ್ಟನು; ಆ ಬಾಲಕನು ಅವಳಿ ಮತ್ತೀಮರಗಳ ಮಧ್ಯವನ್ನೈದಿ ಅವು ಮುರಿದುಬಿದ್ದರೂ ವಿಲಯವನ್ನೈದದಿದ್ದದ್ದು ಶ್ರೀಹರಿಯ ಸಂರಕ್ಷಣವೇ ಸರಿ! ಈ ಮಹೋತ್ಪಾತಜನ್ಯವಾದ ಅನರ್ಥವಿಶೇಷದಿಂದ ಈ ಗೋಕುಲವು ಪೀಡಿಸಲ್ಪಡದಿರುವವರಿಗೂ ನಾವು ಈ ಬಾಲಕರನ್ನು ಕರೆದುಕೊಂಡು ಪರಿವಾರಜನರೊಡಗೂಡಿ ಈ ಬೃಹದ್ವನದ ದೆಸೆಯಿಂದ ಮತ್ತೊಂದು ಸ್ಥಾನವನ್ನು ಕುರಿತು ಹೋಗಬೇಕು; ಗೋವುಗಳಿಗೆ ಹಿತಕರವಾಗಿ ಮತ್ತು ನೂತನಗಳಾದ ವನಗಳುಳ್ಳದ್ದಾಗಿ ಗೋಪಾಲಕರಿಗೂ ಗೋವುಗಳಿಗೂ ಗೋಪಸ್ತ್ರೀಯರಿಗೂ ವಾಸಮಾಡಲು ಯೋಗ್ಯವಾಗಿ ಪುಣ್ಯಕರವಾದ ನದೀಜಲವೂ ತೃಣಲತೆಗಳು ಮೊದಲಾದವೂ ಉಳ್ಳ ಬೃಂದಾವನವೆಂಬ ನಾಮಧೇಯವುಳ್ಳ ಒಂದು ವನವಿದೆ; ನಾವು ಆ ವನಕ್ಕೆ ಈಗಲೇ ಹೋಗೋಣ; ಬಂಡಿಗಳಿಗೆ ವೃಷಭಗಳನ್ನು ಕಟ್ಟಿ; ಈ ಕೆಲಸದಲ್ಲಿ ಕಾಲವಿಳಂಬವನ್ನು ಮಾಡಬೇಡಿ; ಮತ್ತು ನಿಮಗೆ ಸಮ್ಮತವಾದರೆ ನಮ್ಮ ಗೋಧನಗಳು ಮುಂದಾಗಿ ಅಲ್ಲಿಗೆ ಹೋಗಲಿ!" ಎಂದು ನುಡಿದನು.

ಎಲೈ ಅರಸೆ, ಈ ರೀತಿಯಲ್ಲಿ ಉಪನಂದನು ನುಡಿದ ವಾಕ್ಯವನ್ನು ಕೇಳಿ ನಂದನು ಮೊದಲಾದ ಗೋಪಾಲಕರೆಲ್ಲರೂ ಅದು ಯುಕ್ತವೇ ಸರಿಯೆಂದು ನುಡಿಯುತ ಏಕಪ್ರಕಾರವಾದ ಬುದ್ಧಿಯುಳ್ಳವರಾಗಿ ತಮ್ಮ ತಮ್ಮ ಶಕಟಸಮೂಹಗಳನ್ನು ಸಜ್ಜುಮಾಡಿ ಅವುಗಳಲ್ಲಿ ತಮ್ಮ ಗೃಹೋಪಕರಣಗಳನ್ನು ತುಂಬಿಕೊಂಡು ಅಲ್ಲಿಂದ ತೆರಳಿದರು; ಕೆಲವು ಬಂಡಿಗಳಮೇಲೆ ವೃದ್ಧರನ್ನೂ ಬಾಲಕರನ್ನೂ ಸ್ತ್ರೀಯರನ್ನೂ ಕುಳ್ಳಿರಿಸಿಕೊಂಡು ಪ್ರಯತ್ನದಿಂದ ಧನುಸ್ಸುಗಳನ್ನಿಡಿದುಕೊಂಡು ಹೊರಟರು; ಕೆಲವು ಗೋಪಾಲಕರು ತ್ವರೆಯಾಗಿ ಗೋಧನಗಳನ್ನು ಮುಂಭಾಗದಲ್ಲಿ ನಡಿಸಿಕೊಂಡು ಕೊಂಬುಗಳನ್ನೂದಿಕೊಂಡು ಮಹತ್ತಾದ ವಾದ್ಯಗಳ ಧ್ವನಿಯೊಡನೆ ಪುರೋಹಿತಸಮೇತರಾಗಿ ತೆರಳಿದರು; ಆ ಸಮಯದಲ್ಲಿ ನೂತನವಾಗಿ ಧರಿಸಲ್ಪಟ್ಟ ಕುಂಕುಮದಿಂದ ಹೊಳೆಯುತಲಿರುವ ಮುಖವುಳ್ಳವರಾಗಿ ದಿವ್ಯದುಕೂಲಗಳನ್ನುಟ್ಟವರಾಗಿ ಹಾರಪದಕಗಳಿಂದ ಶೋಭಿಸುವ ಕಂಠಗಳುಳ್ಳ ಗೋಪಸ್ತ್ರೀಯರು ರಥಾರೂಢರಾಗಿ ಅತಿ ಪ್ರೀತಿಯಿಂದ ಶ್ರೀಕೃಷ್ಣನ ಚರಿತ್ರವನ್ನು ಗಾನಮಾಡುತಿದ್ದರು; ಯಶೋದಾ ರೋಹಿಣೀದೇವಿಯರು ಒಂದೇ ರಥದಲ್ಲಿ ಕುಳಿತು ಆ ಗೋಪಸ್ತ್ರೀಯರಿಂದ ಗಾನಗೈಯಲ್ಪಡುತಿದ್ದ ರಾಮಕೃಷ್ಣರ ಕಥಾಶ್ರವಣದಲ್ಲಿ ಕುತೂಹಲಯುಕ್ತರಾಗಿ ಆ ಪುತ್ರರೊಡನೆ ಪ್ರಯಾಣಮಾಡಿದರು! ಈ ಪ್ರಕಾರದಲ್ಲಿ ಗೋಪಾಲಕರು ಸರ್ವಕಾಲದಲ್ಲಿಯೂ ಸುಖಕರವಾದ ಬೃಂದಾವನವೆಂಬ ಸ್ಥಾನವನ್ನು ಪ್ರವೇಶಮಾಡಿ ಅಲ್ಲಿ ಶಕಟಗಳಿಂದ ಅರ್ಧಚಂದ್ರಾಕೃತಿಯಾಗಿ ಗೋಸಮೂಹಕ್ಕೆ ವಾಸಸ್ಥಾನವನ್ನು ರಚಿಸಿದರು; ಆಗ ಬೃಂದಾವನವನ್ನೂ ಗೋವರ್ಧನ

ಗಿರಿಯನ್ನೂ ಯಮುನಾನದಿಯ ಮರಳು ದಿಣ್ಣೆಗಳನ್ನೂ ನೋಡಿದ ಶ್ರೀರಾಮಕೃಷ್ಣರಿಗೆ ಅಧಿಕವಾದ ಪ್ರೀತಿಯುಂಟಾಯಿತು !

ಎಲೈ ರಾಯನೆ, ಆ ಬಳಿಕ ಗೋಪಾಲರಿಗೂ ಗೋಪಸ್ತ್ರೀಯರಿಗೂ ತಮ್ಮ ಬಾಲಕ್ರೀಡೆಗಳಿಂದಲೂ ಮನೋಹರವಾದ ಮುದ್ದುಮಾತುಗಳಿಂದಲೂ ಪ್ರೀತಿಯನ್ನುಂಟುಮಾಡುತಿದ್ದ ರಾಮಕೃಷ್ಣರು ಸಂಭಾಷಣೆಗೆ ಯೋಗ್ಯವಾದ ವಯಸ್ಸನ್ನೈದಿ ಕರುಗಳನ್ನು ಪಾಲಿಸುವವರಾದರು ; ಅವರಿಬ್ಬರೂ ಗೋಪಾಲಬಾಲಕರೊಡಗೂಡಿ ನಾನಾವಿಧಗಳಾದ ಕ್ರೀಡಾಸಾಮಗ್ರಿಗಳುಳ್ಳವರಾಗಿ ಬೃಂದಾವನದ ಸಮೀಪವಲ್ಲಿ ಕರುಗಳನ್ನು ಮೇಯಿಸುತಿದ್ದರು ; ಒಂದು ವೇಳೆಯಲ್ಲಿ ವೇಣುಗಾನವನ್ನು ಗೈಯುತಲೂ ಒಂದು ಸಮಯದಲ್ಲಿ ಕವಣೆಗಳಿಂದ ಧಾತ್ರಿ ಬಿಲ್ವಾದಿ ಫಲಗಳನ್ನೆಸೆಯುತಲೂ ಮತ್ತೊಂದುಕಾಲದಲ್ಲಿ ಕಿರಿಗೆಜ್ಜೆಗಳಿಂದ ಯುಕ್ತಗಳಾದ ಪಾದಗಳಿಂದ ಕುಣಿಯುತಲೂ ಇದ್ದರು ; ಉತ್ಕೃಷ್ಟವಾದ ಚರಿತ್ರವುಳ್ಳ ರಾಮಕೃಷ್ಣರು ಕೃಷ್ಣಕಂಬಳಾದಿಗಳಿಂದ ತಮ್ಮ ಅಂಗಗಳನ್ನು ಮುಚ್ಚಿಕೊಂಡು ಗೋವೃಷಭವೇಷಗಳನ್ನು ಧರಿಸಿ ಅವುಗಳಂತೆ ನಡೆಯುತಲೂ ಧ್ವನಿಗೈಯ್ಯುತಲೂ ಪರಸ್ಪರವಾಗಿ ಯುದ್ಧಮಾಡುತಲೂ ವ್ಯಾಘ್ರ ಸಿಂಹಾದಿಗಳ ದೆಶೆಯಿಂದ ಭೀತಿಯನ್ನೈದಿದವರಂತೆ ಚಕೋರ ಕ್ರೌಂಚ ಚಕ್ರವಾಕ ಭಾರದ್ವಾಜ ಮಯೂರಗಳನ್ನನುಸರಿಸಿ ಅವುಗಳಂತೆ ಧ್ವನಿಮಾಡುತ ಪ್ರಾಣಿಗಳನ್ನು ಆ ಧ್ವನಿಗಳಿಂದ ಅಣಕಿಸುತ ಲೋಕಸಾಧಾರಣವಾದ ಬಾಲಕರಂತೆ ಸಂಚರಿಸುತಿದ್ದರು ! ಈ ರೀತಿ ಕ್ರೀಡಿಸುತ ತಮ್ಮ ಸ್ನೇಹಿತರಾದ ಗೋಪಾಲಬಾಲಕರೊಡಗೂಡಿ ಯಮುನಾತೀರದಲ್ಲಿ ಕರುಗಳನ್ನು ಮೇಯಿಸುತಲಿರುವಾಗ ಒಂದು ಸಮಯದಲ್ಲಿ ರಾಮಕೃಷ್ಣರನ್ನು ಕೊಲ್ಲಬೇಕೆಂದು ವತ್ಸನೆಂಬ ದೈತ್ಯನು ಕರುವಿನ ರೂಪವನ್ನು ಧರಿಸಿ ಅವರ ಕರುವಿನ ಗುಂಪಿನೊಳಹೊಕ್ಕಿದ್ದನು ; ಅದನ್ನು ಕಂಡು ಶ್ರೀಕೃಷ್ಣನು ಬಲರಾಮನಿಗೆ ತೋರಿಸುತ ಏನೂ ಅರಿಯದವನಂತೆ ಮೆಲ್ಲಗೆ ಅವನ ಸಮೀಪವನ್ನೈದಿ ಬಾಲದೊಡನೆ ಅವನ ಹಿಂಗಾಲುಗಳನ್ನಿಡಿದೆತ್ತಿ ವೇಗದಿಂದ ತಿರುಗಿಸಿ ಅಷ್ಟುಮಾತ್ರದಿಂದಲೆ ಪ್ರಾಣಗಳನ್ನು ಬಿಟ್ಟ ಆ ದೈತ್ಯನನ್ನು ಒಂದು ಬ್ಯಾಲದಮರದಮೇಲೆ ಬೀಸಿ ಹೊಡೆದನು ; ಅದರಿಂದ ಆ ದೈತ್ಯನ ಮಹತ್ತಾದ ದೇಹವು ಬ್ಯಾಲದ ಹಣ್ಣುಗಳನ್ನು ಬೀಳಿಸುತ ಅವುಗಳೊಡನೆ ತಾನೂ ಭೂಮಿಯಲ್ಲಿ ಬಿತ್ತು ! ಆಗ ಗೋಪಾಲಕರು ಆ ವತ್ಸಾಸುರನನ್ನು ನೋಡಿ ಚೆನ್ನಾಯಿತೆಂದು ಶ್ರೀಕೃಷ್ಣನನ್ನು ಶ್ಲಾಘಿಸಿದರು ; ಆಕಾಶದಲ್ಲಿ ವತ್ಸಾಸುರನ ಸಂಹಾರದಿಂದ ಸಂತೋಷಯುಕ್ತರಾದ ದೇವತೆಗಳು ಶ್ರೀಕೃಷ್ಣನಮೇಲೆ ಪುಷ್ಪಗಳನ್ನು ವರ್ಷಿಸಿದರು !

ಎಲೈ ರಾಯನೆ, ಈ ಪ್ರಕಾರವಾಗಿ ಸಮಸ್ತ ಲೋಕಗಳಿಗೂ ಮುಖ್ಯಪಾಲಕರಾದ ರಾಮಕೃಷ್ಣರು ಕರುಗಳ ಪಾಲಕರಾಗಿ ಒಂದು ದಿವಸ ಪ್ರಾತಃಕಾಲದಲ್ಲಿ ಭೋಜನಕ್ಕಾಗಿ ಅನ್ನದ ಬುತ್ತಿಯನ್ನು ತೆಗೆದುಕೊಂಡು ಅಲ್ಲಲ್ಲಿ ಕರುಗಳನ್ನು ಮೇಯಿಸುತಿದ್ದರು ; ಮಿಕ್ಕ ಗೋಪಾಲಬಾಲಕರೂ ತಮ್ಮ ವತ್ಸಸಮೂಹಗಳನ್ನು ಪಾಲಿಸುತ ನದಿಯ ಸಮೀಪವನ್ನೈದಿ ಕರುಗಳಿಗೆ ಜಲಪಾನಮಾಡಿಸಿ ತಾವೂ ಪಾನಮಾಡಿ ಅಲ್ಲಿ ಇಂದ್ರನ ವಜ್ರಾಯುಧದಿಂದ ಭೇದಿಸಲ್ಪಟ್ಟ ಪರ್ವತಶಿಖರದಂತೆ ಅತ್ಯುನ್ನತವಾಗಿ ಕುಳಿತಿದ್ದ ಒಂದು ಮಹತ್ತಾದ ಪ್ರಾಣಿಯನ್ನು ಕಂಡು ಭಯವನ್ನೈದಿದರು ; ಬಕನೆಂಬ ನಾಮಧೇಯವುಳ್ಳವನಾಗಿ ಬಲಶಾಲಿಯಾದ ಆ ಅಸುರನು ತೀಕ್ಷ್ಣಗಳಾದ ಕೊಕ್ಕುಗಳುಳ್ಳವನಾಗಿ ಬಕಪಕ್ಷಿಯ ರೂಪವನ್ನು ಧರಿಸಿ ತ್ವರೆಯಾಗಿ ಬಂದು ಕೃಷ್ಣನನ್ನು ನುಂಗಿದನು ; ಅದನ್ನು ನೋಡಿ ಬಲರಾಮನು ಹೊರ್ತು ಮಿಕ್ಕ ಬಾಲಕರು ಪ್ರಾಣವನ್ನು ಬಿಟ್ಟಿರುವ ಚಕ್ಷುರಾದಿ ಇಂದ್ರಿಯಗಳಂತೆ ಅಚೇತನಪ್ರಾಯರಾದರು ! ಅನಂತರದಲ್ಲಿ ಬಕಾಸುರನು ತನ್ನ ದವಡೆಗಳನ್ನು ಅಗ್ನಿಯಂತೆ ದಹಿಸುತಲಿದ್ದ ಗೋಪಾಲಪುತ್ರನಾಗಿ ಬ್ರಹ್ಮದೇವನಿಗೆ ತಂದೆಯಾದ ಶ್ರೀಕೃಷ್ಣನನ್ನು ಕಕ್ಕಿ ಆತನು ಲೇಶವಾದರೂ ಘಾಯವಿಲ್ಲದಿದ್ದುದನ್ನು ಕಂಡು ಅತಿ ಕೋಪದಿಂದ ತನ್ನ ಕೊಕ್ಕಿನಿಂದ ಕೊಲ್ಲಲೋಸುಗ ಅವನನ್ನಟ್ಟಿಕೊಂಡು ಹೋದನು ; ಸತ್ಪುರುಷರಿಗೆ ಮುಕ್ತಿರೂಪನಾಗಿ ದೇವತೆಗಳಿಗೆ ಸಂತೋಷವನ್ನುಂಟುಮಾಡುವ ಶ್ರೀಕೃಷ್ಣನು ಗೋಪಾಲಬಾಲಕರೆಲ್ಲರೂ ನೋಡುತ್ತಿರಲು ತನ್ನನ್ನಟ್ಟಿಕೊಂಡು ಬರುತಿದ್ದ ಕಂಸನ ಮಿತ್ರನಾದ ಬಕಾಸುರನ ಎರಡು ಕೊಕ್ಕುಗಳನ್ನೂ ತನ್ನ ಎರಡು ಹಸ್ತಗಳಿಂದಿಡಿ

ದು ಲೀಲಾಮಾತ್ರದಿಂದ ಹೊಡಕೇಹುಲ್ಲನ್ನು ಸೀಳುವಂತೆ ಆ ಅಸುರನನ್ನು ಸೀಳಿದನು ! ಆ ಸಮಯದಲ್ಲಿ ಬಕಾಸುರ ಮರ್ದನನಾದ ಶ್ರೀಕೃಷ್ಣನಮೇಲೆ ಸ್ವರ್ಗಲೋಕವಾಸಿಗಳಾದ ಇಂದ್ರಾದಿ ದೇವತೆಗಳು ನಂದನವನದಲ್ಲುದ್ಭವಿಸಿದ ಮಲ್ಲಿಕಾ ಪಾರಿಜಾತಾದಿ ಪುಷ್ಪಗಳನ್ನು ವರ್ಷಿಸುತ ಪಟಹ ಶಂಖ ಮೊದಲಾದ ವಾದ್ಯಧ್ವನಿಗಳನ್ನು ಗೈಯುತ ಆತನನ್ನು ಸ್ತೋತ್ರಮಾಡಿದರು ! ಅವೆಲ್ಲವನ್ನು ನೋಡಿ ಆಶ್ಚರ್ಯವನ್ನೈದಿದ ಬಲರಾಮನು ಮೊದಲಾದ ಗೋಪಬಾಲಕರು ಇಂದ್ರಿಯಗಳು ಹೋದ ಪ್ರಾಣವು ಪುನಹ ಸ್ವಸ್ಥಾನಕ್ಕೆ ಬಂದು ಸೇರಿದಂತೆ ಬಕಾಸುರನ ಬಾಯದೆಸೆಯಿಂದ ವಿಮುಕ್ತನಾಗಿ ಬಂದ ಶ್ರೀಕೃಷ್ಣನನ್ನು ಪಡೆದು ಆತನನ್ನಾಲಿಂಗಿಸಿಕೊಂಡು ಪರಮಾನಂದಭರಿತರಾಗಿ ತಮ್ಮತಮ್ಮ ಕರುಗಳನ್ನು ಕೂಡಿಸಿಕೊಂಡು ಬೃಂದಾವನಕ್ಕೆ ತಿರಿಗಿಬಂದು ಅಲ್ಲಿದ್ದ ಸಮಸ್ತರಿಗೂ ಆ ವೃತ್ತಾಂತವನ್ನು ತಿಳುಹಿಸಿದರು! ನಂದಗೋಪನು ಮೊದಲಾದ ಗೋಪಾಲಕರೂ ಗೋಪಸ್ತ್ರೀಯರೂ ಆ ವೃತ್ತಾಂತವನ್ನು ಕೇಳಿ ಆಶ್ಚರ್ಯವನ್ನೈದಿ ಶ್ರೀಕೃಷ್ಣನನ್ನು ಅತಿಪ್ರೀತಿಯಿಂದ ಆದರಿಸುತ ಆತನು ಲೋಕಾಂತರವನ್ನೈದಿ ಪುನಹ ಬಂದಹಾಗೆಣಿಸಿ ಅತಿಕುತೂಹಲದಿಂದ ಅಮೃತಪಾನವನ್ನು ಮಾಡುವಂತೆ ಶೋಭಿಸುವ ನೇತ್ರಗಳುಳ್ಳವರಾಗಿ ಆತನನ್ನು ನೋಡುತಿದ್ದರು! ನಂದಾದಿಗಳು " ಕಟಕಟಾ ! ಈ ಬಾಲಕನಿಗೆ ಅನೇಕ ಮೃತ್ಯುಭಯಗಳುಂಟಾದವು ; ಆದಾಗ್ಯು ಪೂರ್ವದಲ್ಲಿ ಅಸುರರಿಂದ ಪ್ರಾಣಿಗಳಿಗೆ ಭಯವುಂಟಾದ ಕಾರಣ ಈಗ ಅವರಿಗೇ ಅನಿಷ್ಟವುಂಟಾಯಿತು ; ಭಯಂಕರವಾದ ದರ್ಶನವುಳ್ಳ ಅಸುರರಾದಾಗ್ಯೂ ಶ್ರೀಕೃಷ್ಣನನ್ನು ತಿರಸ್ಕಾರ ಮಾಡಲಾರದೆ ಆತನನ್ನು ಕೊಲ್ಲಲೋಸುಗ ಬಂದು ಅಗ್ನಿಯಲ್ಲಿ ಬಿದ್ದು ದಹಿಸಿಹೋಗುವ ಪತಂಗವೆಂಬ ಕೀಟಕದಂತೆ ತಾವೇ ವಿಲಯವನ್ನೈದಿದರು ; ಬ್ರಹ್ಮವೇತ್ತರಾದ ಮಹಾತ್ಮರ ವಚನಗಳು ಯಾವ ಕಾಲದಲ್ಲೂ ಅಸತ್ಯವಾಗಲಾರವು ; ಜ್ಞಾನಾದಿಗುಣಸಂಪನ್ನನಾದ ಗರ್ಗಾಚಾರ್ಯನ ವಚನವು ಯಥಾರ್ಥವಾಯಿತು ! " ಎಂದು ಒಬ್ಬರಿಗೊಬ್ಬರು ರಾಮಕೃಷ್ಣರ ಕಥೆಗಳನ್ನು ಸಂತೋಷದಿಂದ ನುಡಿಯುತ ಸಂಸಾರದುಃಖವನ್ನು ಹೊಂದದೆ ರಮಿಸುತ್ತಿದ್ದರು ! ಮತ್ತು ರಾಮಕೃಷ್ಣರು ಕೌಮಾರಕ್ರೀಡೆಯುಳ್ಳವರಾಗಿ ಬಾಲಕರ ಕಣ್ಣುಗಳನ್ನು ಮುಚ್ಚಿ ಆಡುವದರಿಂದಲೂ ಮಳೆಬಂದಾಗ ಹರಿಯುವ ನೀರಿಗೆ ಸೇತುವೆಯನ್ನು ಕಟ್ಟಿ ಆಡುವದರಿಂದಲೂ ಒಂದು ವೃಕ್ಷದಿಂದ ಮತ್ತೊಂದು ವೃಕ್ಷಕ್ಕೆ ಮರ್ಕಟಗಳಂತೆ ನೆಗೆಯುವ ಆಟಗಳಿಂದಲೂ ದಿವಸಗಳನ್ನು ಕಳೆಯುತಿದ್ದರು !

---

## ೧೨ನೇ ಅಧ್ಯಾಯ.

### ಅಘಾಸುರನ ವಧೆ.

ಒಂದು ಸಮಯದಲ್ಲಿ ಶ್ರೀಕೃಷ್ಣನು ವನದಲ್ಲಿ ಪ್ರಥಮಭೋಜನವನ್ನು ಮಾಡಲೋಸುಗ ಪ್ರಾತಃಕಾಲದಲ್ಲೆದ್ದು ಸ್ನೇಹಿತರಾದ ಗೋಪಾಲಕರನ್ನು ಮನೋಹರವಾದ ಕೊಂಬಿನ ಧ್ವನಿಯಿಂದೆಚ್ಚರಗೊಳಿಸಿ ಕರುಗಳನ್ನು ಮುಂದುಮಾಡಿಕೊಂಡು ಹೊರಟನು ; ಆಗ ಸ್ನೇಹಯುಕ್ತರಾಗಿ ಸಹಸ್ರ ಸಂಖೆಯುಳ್ಳವರಾದ ಗೋಪಾಲ ಬಾಲಕರು ರಮಣೀಯವಾದ ಕಲ್ಲಿಗಳೂ ಬೆತ್ತಗಳೂ ಕೊಂಬುಗಳೂ ಕೊಳಲುಗಳೂ ಉಳ್ಳವರಾಗಿ ಕೃಷ್ಣನೊಡನೆ ಕೂಡಿ ಅನೇಕ ಸಹಸ್ರಗಳಾದ ತಮ್ಮ ಕರುಗಳನ್ನು ನಡೆಯಿಸಿಕೊಂಡು ಸಂತೋಷದಿಂದ ತೆರಳಿದರು ; ಅನಂತರದಲ್ಲಿ ಅವರೆಲ್ಲರು ತಮ್ಮ ಕರುಗಳನ್ನು ಗುಂಪುಕೂಡಿಸಿ ಮೇಯಿಸುತ ಅಲ್ಲಿ ಬಾಲಕ್ರೀಡೆಗಳಿಂದ ವಿಹರಿಸುತ ಮೊದಲೇ ತಮ್ಮ ತಾಯಿಗಳಿಂದ ಗಾಜಿನ ಮಣಿಗಳಿಂದಲೂ ಗುಲಗಿಂಜೆಗಳಿಂದಲೂ ಸುವರ್ಣಮಣಿ ಸಮೂಹಗಳಿಂದಲೂ ಅಲಂಕರಿಸಲ್ಪಟ್ಟವರಾದಾಗ್ಯೂ ಆ ವನದಲ್ಲಿದ್ದ ಫಲಗಳಿಂದಲೂ ಚಿಗುರುಗಳ ಗೊಂಚಲುಗಳಿಂದಲೂ ಕುಸುಮಗಳಿಂದಲೂ ನವಿಲುಗರಿಗಳಿಂದಲೂ ಗೈರಿಕಾದಿ ಧಾತುಗಳಿಂದಲೂ ತಮ್ಮ ದೇಹಗಳನ್ನಲಂಕರಿಸಿಕೊಂಡು ಕಲ್ಲಿ ಕೊಂಬು ಕೊಳಲು ಮೊದಲಾದವನ್ನು ಪರಸ್ಪರ ಚೌರ್ಯದಿಂದಪಹರಿಸುತ ಅನ್ಯರಿಂದ ಕಾಣಲ್ಪಟ್ಟರೆ ಅವನ್ನು ದೂರವಾಗಿ

ಬೀಸಾಕುತ ಹತ್ತಿರಿರುವ ಬಾಲಕರನ್ನು ಕುರಿತು ನಗುತ ದೂರದಲ್ಲಿ ಹಾಕಿದವನ್ನು ತಾವೇ ತಂದುಕೊಡುತ ಶ್ರೀಕೃಷ್ಣನು ವನಗಳ ಕಾಂತಿಯನ್ನು ನೋಡಲೋಸುಗ ದೂರವಾಗಿ ಹೋದರೆ "ನಾನು ಮೊದಲು—ನಾನು ಮೊದಲು" ಎಂದು ಕೂಗಿ ಓಡಿ ಆತನನ್ನು ಮುಟ್ಟಿ ಸಂತೋಷದಿಂದ ವಿಹರಿಸುವರು ; ಕೆಲವರು ವೇಣುನಾದವನ್ನು ಮಾಡುವರು ; ಕೆಲವರು ತುಂಬಿಗಳಂತೆ ಗಾನವನ್ನು ಮಾಡುವರು ; ಕೆಲವರು ಕೋಕಿಲಪಕ್ಷಿಗಳಂತೆ ಕೂಗುವರು ; ಕೆಲವರು ಅಂತರಿಕ್ಷದಲ್ಲಿ ಚರಿಸುವ ಪಕ್ಷಿಗಳ ಛಾಯೆಗಳೊಡನೇ ಓಡುವರು ; ಕೆಲವರು ಹಂಸಪಕ್ಷಿಗಳನ್ನು ನೋಡಿ ಅವುಗಳಂತೇ ನಡೆಯುವರು ; ಕೆಲವರು ಅಲ್ಲಲ್ಲಿ ಕುಳಿತಿರುವ ಬಕಪಕ್ಷಿಗಳಂತೆ ತಾವೂ ಕುಳಿತಿರುವರು ; ಕೆಲವರು ನವಿಲುಗಳ ನರ್ತನವನ್ನು ನೋಡಿ ತಾವೂ ನರ್ತನವನ್ನು ಮಾಡುವರು ; ಕೆಲವರು ವೃಕ್ಷಗಳ ಕೊಂಬುಗಳಲ್ಲಿ ಕುಳಿತಿರುವ ಕಪಿಗಳ ಬಾಲಗಳನ್ನಿಡಿದು ಸೆಳೆಯುವರು ; ಕೆಲವರು ವೃಕ್ಷಗಳನ್ನೇರುವ ಕಪಿಗಳನ್ನು ನೋಡಿ ತಾವು ಶೀಘ್ರದಿಂದ ಹತ್ತುತ ಆ ಕಪಿಗಳು ಕೋಪದಿಂದ ಮುಖವನ್ನು ವಿಕಾರಮಾಡಿಕೊಂಡು ನೋಡಿದರೆ ತಾವೂ ಅದೇ ರೀತಿಯಲ್ಲಿ ಹುಬ್ಬುಗಳನ್ನು ಗಂಟಿಕ್ಕಿಕೊಂಡು ಹಲ್ಲುಗಳನ್ನು ಕಿರಿದು ವಿನೋದಿಸುವರು ; ಕೆಲವರು ಕಪಿಗಳಂತೆ ಒಂದು ವೃಕ್ಷದ ಕೊಂಬಿನಿಂದ ಮತ್ತೊಂದು ವೃಕ್ಷದ ಕೊಂಬಿಗೆ ಹಾರುವರು ; ಕಲವರು ನದಿಗಳ ನೀರಿನಲ್ಲಿ ಮುಳುಗಿ ಕಪ್ಪೆಗಳಂತೆ ಕುಪ್ಪುವರು ; ಕೆಲವರು ಜಲಾದಿಗಳಲ್ಲಿ ತಮ್ಮ ಪ್ರತಿಬಿಂಬಗಳನ್ನು ನೋಡಿ ಹಾಸ್ಯಮಾಡುವರು ; ಕೆಲವರು ಪ್ರತಿಧ್ವನಿಗೈಯುವ ಪರ್ವತ ಶಿಲಾದಿಗಳನ್ನು ನೋಡಿ ಶಪಿಸುತ ತಾವೂ ಅವುಗಳಿಂದ ಶಪಿಸಲ್ಪಡುವದನ್ನು ಕೇಳಿ ಸಂತೋಷಪಡುವರು ! ಎಲೈ ಪರೀಕ್ಷಿದ್ರಾಯನೆ, ಜ್ಞಾನಿಗಳಿಗೆ ಸ್ವಪ್ರಕಾಶ ಪರಮಾನಂದರೂಪನಾಗಿಯೂ ಭಕ್ತರಿಗೆ ಆತ್ಮಪ್ರದನಾಗಿಯೂ ನಾಥನಾಗಿಯೂ ಮಾಯೆಯಿಂದ ಮೋಹಿತರಾದ ಜನರಿಗೆ ಮನುಷ್ಯಬಾಲಕನಂತೆ ತೋರುತಿದ್ದ ಶ್ರೀಕೃಷ್ಣದೇವನೊಡನೆ ಕೂಡಿ ಮಿತ್ರಭಾವದಿಂದ ಆ ವನದಲ್ಲಿ ವಿಹರಿಸುತಿದ್ದ ಅತಿ ಪುಣ್ಯಶಾಲಿಗಳಾದ ಆ ಗೋಪಾಲಕರು ಆ ವನದಲ್ಲಿ ವಿಹರಿಸುತಿದ್ದ ಭಾಗ್ಯವು ಎಂಥಾದ್ದೋ ಗೋಚರವಲ್ಲ ! ಯಾವ ಭಗವಂತನ ಪಾದಾರವಿಂದದ ಪರಾಗವು ಬಹುಜನ್ಮಗಳಿಂದ ಅತ್ಯಂತ ಕಷ್ಟದಿಂದ ನಿಗ್ರಹಿಸಿ ಸ್ಥಿರಪಡಿಸಲ್ಪಟ್ಟ ಮನಸ್ಸುಳ್ಳ ಮಹಾಯೋಗಿಗಳಿಗೂ ಲಭ್ಯವಾಗಲಾರದೊ ಅಂಥಾ ಅರವಿಂದಪಾದನಾದ ಶ್ರೀಕೃಷ್ಣನೇ ಗೋಕುಲವಾಸಿಗಳಾದ ಸ್ತ್ರೀಪುರುಷಬಾಲಕರ ನೇತ್ರಗಳಿಗೆ ಗೋಚರನಾಗಿ ಸಾಕ್ಷಾತ್ತಾಗಿ ನಿಂತಿದ್ದದ್ದರಿಂದ ಅವರ ಸುಕೃತವನ್ನು ಏನೆಂದು ವರ್ಣಿಸುವದು !

ಈ ರೀತಿಯಲ್ಲಿ ಗೋಪಾಲಬಾಲಕರು ಕ್ರೀಡಿಸುತ್ತಿರಲು ಒಂದು ಸಮಯದಲ್ಲಿ ಅಮೃತಪಾನವನ್ನು ಮಾಡಿ ಜರಾಮರಣರಹಿತರಾದ ದೇವತೆಗಳೂ ಯಾವ ಅಸುರನಿಂದ ಮೃತ್ಯುಭೀತರಾಗಿ ವಿಲಯವನ್ನೈದಿ ನಿರಂತರದಲ್ಲಿಯೂ ಆತನ ಮೃತಿಯನ್ನು ನಿರೀಕ್ಷಿಸುತ್ತಿದ್ದರೋ ಅಂಥಾ ದುಷ್ಟನಾಗಿ ಪೂತನೆಗೂ ಬಕಾಸುರನಿಗೂ ತಮ್ಮನಾದ ಅಘನೆಂಬ ಅಸುರನು ಆ ವನಕ್ಕೆ ಬಂದು ಆ ಬಾಲಕರ ಸುಖವಿಹಾರವನ್ನು ನೋಡಿ ಸಹಿಸಲಾರದೆ ಶ್ರೀಕೃಷ್ಣನನ್ನು ಸಂಹರಿಸಲೋಸುಗ ತನ್ನ ಮನಸ್ಸಿನಲ್ಲಿ ತಾನು ಕಂಸನಿಂದ ಕಳುಹಿಸಲ್ಪಟ್ಟದ್ದನ್ನೂ ಬಾಲಕನಾಗಿದ್ದ ಕೃಷ್ಣನು ತನ್ನ ಒಡಹುಟ್ಟಿದವರನ್ನು ಸಂಹರಿಸಿದ್ದನ್ನೂ ಸ್ಮರಿಸಿ ಆ ಸ್ಥಾನದಲ್ಲಿ ಕರುಗಳೊಡನೆಯೂ ಗೋಪಾಲ ಬಾಲಕರೊಡನೆಯೂ ಶ್ರೀಕೃಷ್ಣನನ್ನು ಸಂಹರಿಸಬೇಕೆಂದೂ ಆ ಬಾಲಕರು ತನ್ನಿಂದ ತನ್ನ ಒಡಹುಟ್ಟಿದ ಪೂತನಾ ಬಕಾಸುರರೀರ್ವರಿಗೂ ತಿಲೋದಕಗಳಾಗಿ ಕಲ್ಪಿಸಲ್ಪಡುವ ಕ್ಷಣದಲ್ಲೇ (ಲೋಕದಲ್ಲಿರುವರು ಪುತ್ರರನ್ನೇ ಪ್ರಾಣಗಳಾಗುಳ್ಳವರಾದಕಾರಣ ಪ್ರಾಣವು ಹೋದರೆ ಅವರ ದೇಹಗಳು ಉಳಿಯುವದೆಂಬಂತೆ) ಗೋಕುಲದಲ್ಲಿ ಯಾರೂ ಉಳಿಯರೆಂದು ನಿಶ್ಚಯಿಸಿ ಒಂದು ಯೋಜನಪ್ರಮಾಣವುಳ್ಳದ್ದಾಗಿ ಮ.ಹಾ ಪರ್ವತದಂತೆ ಅತ್ಯಂತ ದೊಡ್ಡ ಶರೀರವುಳ್ಳದ್ದಾಗಿ ತೆರೆಯಲ್ಪಟ್ಟ ಗುಹೆಗೆ ಸಮಾನವಾದ ಬಾಯುಳ್ಳದ್ದಾಗಿ ಆಶ್ಚರ್ಯಕರವಾದ ಅಜಗರ ಶರೀರವನ್ನು ಧರಿಸಿ ಕೃಷ್ಣನು ಮೊದಲಾದ ಗೋಪಾಲಬಾಲಕರನ್ನು ನುಂಗುವದಕ್ಕೋಸ್ಕರ ಅವರು ಸಂಚರಿಸುವ ಮಾರ್ಗದಲ್ಲಿ ಮಲಗಿದ್ದನು ; ಅಜಗರ ರೂಪಿಯಾದ ಅಘಾಸುರನು ಭೂಮಿಯಲ್ಲಿ ಅಧರೋಷ್ಟವನ್ನೂ ಮೇಘಮಂಡಲದಲ್ಲಿ ಉತ್ತರೋಷ್ಟವನ್ನೂ ಉಳ್ಳವನಾಗಿ

ಗಿರಿಯ ದರಿಗಳಂತೆ ಕಟಬಾಯಿಗಳುಳ್ಳವನಾಗಿ ಪರ್ವತದ ಶಿಖರಗಳಂತೆ ಕೋರೆದಾಡೆಗಳುಳ್ಳವನಾಗಿ ಗಾಢಾಂಧಕಾರದಂತೆ ಒಳಬಾಯುಳ್ಳವನಾಗಿ ವಿಸ್ತೃತವಾದ ಮಾರ್ಗದಂತೆ ನಾಲಿಗೆಯುಳ್ಳವನಾಗಿ ತೀಕ್ಷ್ಣವಾದ ವಾಯುವಿನಂತೆ ಶ್ವಾಸವುಳ್ಳವನಾಗಿ ಕಾಡುಗಿಚ್ಚುಗಳಂತೆ ಹೊಳೆಯುವ ಕಣ್ಣುಗಳುಳ್ಳವನಾಗಿ ಆ ಮಾರ್ಗದಲ್ಲಿ ಮಲಗಿರಲು ಗೋಪಾಲಬಾಲಕರು ಅದನ್ನು ಕಂಡು ಅದು ಅಜಗರಮುಖವಾದಾಗ್ಯೂ ಬೃಂದಾವನದ ಸಂಪತ್ತೆಂದು ಭ್ರಾಂತಿಯಿಂದ ವಿಪರೀತವಾಗೆಣಿಸುತ ಅದನ್ನು ಆಟದಿಂದ ತೆರೆಯಲ್ಪಟ್ಟ ಅಜಗರಮುಖ ಪ್ರದೇಶವೆಂದು ಊಹಿಸುತ ಒಬ್ಬರಿಗೊಬ್ಬರು “ಎಲೈ ಮಿತ್ರರುಗಳಿರ, ನಮ್ಮ ಮುಂದುಗಡೆಯಲ್ಲಿರುವ ಪ್ರದೇಶವು ಪ್ರಾಣಿಯಂತೆ ತೋರುತ್ತಿದೇ ನೋಡೀ ; ಅದು ನಮ್ಮೆಲ್ಲರನ್ನು ಗ್ರಸಂಗೈಯಲೋಸುಗ ತೆರೆಯಲ್ಪಟ್ಟ ಬಾಯುಳ್ಳ ಹಾವಿನ ಮುಖದಂತೆ ಆಚರಿಸುತ್ತಿದೆ ; ಇದು ಸತ್ಯವೋ ಭ್ರಾಂತಿಯೋ ಹೇಳಿ ; ಸೂರ್ಯಕಿರಣಗಳಿಂದ ಕೆಂಪಾಗಿರುವ ಮೇಘವನ್ನು ನೋಡಿದರೆ ಯಥಾರ್ಥವಾಗಿ ಅಜಗರದ ಉತ್ತರೋಷ್ಠದಂತಿದೆ ; ಮತ್ತು ಆ ಮೇಘದ ಪ್ರತಿಬಿಂಬದಂತೆ ಕೆಂಪಾಗಿರುವ ಸ್ಥಳವನ್ನು ನೋಡಿದರೆ ಅದರ ಅಧರೋಷ್ಠದಂತೆ ತೋರುತ್ತದೆ ; ಈ ಎಡಬಲಗಳಲ್ಲಿರುವ ಪರ್ವತಗಳು ಅಜಗರದ ಕಟಬಾಯೊಡನೆ ಸ್ಪರ್ಧೆಗೈಯುವಂತಿವೆ ; ಉನ್ನತಗಳಾದ ಪರ್ವತ ಶಿಖರಗಳ ಪಙ್ತಿಗಳು ಅಜಗರದ ಕೋರೆದಾಡೆಗಳೊಡನೆ ಸಂವಾದವನ್ನು ಮಾಡುವಂತಿವೆ ; ದೀರ್ಘವಾದ ಈ ವನಮಾರ್ಗವು ಅಜಗರದ ನಾಲಿಗೆಯಂತೆ ತೋರುತ್ತಿದೆ ; ಪರ್ವತದ ಶಿಖರಗಳ ಮಧ್ಯದಲ್ಲಿರುವ ಗಾಢಾಂಧಕಾರವು ಅದರ ಒಳಬಾಯಿಯಂತೆ ತೋರುತ್ತಿದೆ ! ಎಲೈ ಮಿತ್ರರುಗಳಿರಾ, ಕಾಡುಗಿಚ್ಚಿನಂತೆ ತೀಕ್ಷ್ಣವಾಗಿ ಬೀಸುವ ವಾಯುವು ಅಜಗರದ ಶ್ವಾಸವಾಯುವಿನಂತೆ ತೋರುತ್ತಿದೆ ; ಕಾಡುಕಿಚ್ಚಿನಿಂದ ದಹಿಸಲ್ಪಟ್ಟ ಪ್ರಾಣಿಗಳ ದುರ್ಗಂಧವು ಅಜಗರದ ಬಾಯಲ್ಲಿ ಸೇರಿರುವ ಮಾಂಸದ ಗಂಧದಂತೆ ತೋರುತ್ತಿದೆ ! ಎಲೈ ಮಿತ್ರರೇ, ಭಯಂಕರವಾದ ಈ ಅಜಗರವು ಈ ವನವನ್ನು ಪ್ರವೇಶಿಸಿರುವ ನಮ್ಮೆಲ್ಲರನ್ನು ಗ್ರಸಂಗೈವದು ; ಹಾಗಾದ ಪಕ್ಷದಲ್ಲಿ ಆ ಕ್ಷಣವಲ್ಲೇ ಕೃಷ್ಣನಿಂದ ಬಕಾಸುರನು ಬಿದ್ದಂತೆ ವಿಲಯವನ್ನೈದುವದು” ಎಂದು ನುಡಿಯುತ ಬಕವೈರಿಯಾದ ಶ್ರೀಕೃಷ್ಣನ ಮನೋಹರವಾದ ಮುಖವನ್ನು ನೋಡಿ ಹಸ್ತತಾಳಗಳನ್ನುಗೈಯುತ ಘಟ್ಟಿಯಾಗಿ ನಗುತ ಮುಂದಕ್ಕೆ ನಡೆದರು ; ಸರ್ವಪ್ರಾಣಿಗಳ ಹೃದಯಗಳಲ್ಲಿಯೂ ವಾಸಮಾಡುವ ಭಗವಂತನಾದ ಶ್ರೀಕೃಷ್ಣನು ಈರೀತಿ ಪರಸ್ಪರವಾಗಿ ಯಥಾರ್ಥವನ್ನರಿಯದ ಆ ಗೋಪಾಲಬಾಲಕರು ನುಡಿದ ವಚನಗಳನ್ನು ಕೇಳಿ ತನ್ನ ಮನಸ್ಸಿನಲ್ಲಿ ಅಘಾಸುರನು ಆ ಶರೀರವನ್ನು ಧರಿಸಿ ಗೋಪಾಲಬಾಲಕರಿಗೆ ಅಜಗರ ಸಾದೃಶ್ಯನಾಗಿದ್ದನೆಂದು ನಿಶ್ಚಯಿಸಿ ಗೋಪಾಲಬಾಲಕರನ್ನು ಮುಂದೇ ನಡೆಯದಂತೆ ಅಡ್ಡಗೈಯಲು ಸಂಕಲ್ಪಿಸಿದನು ; ಆಗ ಆ ಗೋಪಾಲಬಾಲಕರು ಕರುಗಳೊಡನೆ ಅಘಾಸುರನ ಉದರದ ಮಧ್ಯದಲ್ಲಿ ಪ್ರವೇಶಮಾತ್ರವನ್ನು ಗೈದರೇ ಹೊರ್ತು ಮುಂದೇ ಹೋಗಲಿಲ್ಲ ; ಅದರಿಂದ ತನ್ನ ಒಡಹುಟ್ಟಿದವರಾದ ಪೂತನಾ ಬಕಾಸುರರ ವಿಲಯವನ್ನು ಸ್ಮರಿಸಿ ಬಕವೈರಿಯಾದ ಶ್ರೀಕೃಷ್ಣನ ಪ್ರವೇಶವನ್ನೇ ನಿರೀಕ್ಷಿಸುತಿದ್ದ ಅಘಾಸುರನಿಂದ ಆ ಗೋಪಾಲಬಾಲಕರೂ ಕರುಗಳೂ ಗ್ರಸಂಗೈಯಲ್ಪಡಲಿಲ್ಲ ; ಆ ಸಮಯದಲ್ಲಿ ಸಮಸ್ತರಿಗು ಅಭಯಪ್ರದನಾದ ಶ್ರೀಕೃಷ್ಣದೇವನು ತನ್ನನ್ನು ಹೊರ್ತು ಮತ್ತೊಬ್ಬ ಪಾಲಕನಿಲ್ಲದವರಾಗಿ ತನ್ನಿಂದ ತಡೆಯಲ್ಪಟ್ಟವರಾಗಿ ದೀನರಾಗಿ ಅಘಾಸುರನ ಜಠರಾಗ್ನಿಗೆ ಗ್ರಸಭೂತರಾದ ಆ ಗೋಪಾಲಕರನ್ನು ನೋಡಿ ದಯೆಯಿಂದ ನೆನೆಸಲ್ಪಟ್ಟ ಹೃದಯವುಳ್ಳವನಾಗಿಯೂ ಆಶ್ಚರ್ಯವನ್ನೈದಿಯೂ ಆಗ ತನ್ನಿಂದ ಮಾಡತಕ್ಕದ್ದೇನೆಂದೂ ದುಷ್ಟನಾದ ಅಘಾಸುರನು ಜೀವಿಸಬಾರದೆಂದೂ ಸಾಧುಗಳಾದ ಗೋಪಬಾಲಕರು ವಿಲಯವನ್ನೈದಬಾರದೆಂದೂ ಯೋಚಿಸಿ ಸರ್ವಜ್ಞನಾದ್ದರಿಂದ ಈ ಉಭಯ ಕಾರ್ಯಸಿದ್ಧಿಯಾಗತಕ್ಕ ಉಪಾಯವನ್ನು ತಿಳಿದು ಆ ಅಜಗರದ ಮುಖವನ್ನು ಪ್ರವೇಶಿಸಿದನು ! ಆ ಸಮಯದಲ್ಲಿ ಅಘಾಸುರನ ದೆಸೆಯಿಂದುಂಟಾದ ಭಯದಿಂದ ಮೇಘಗಳಲ್ಲಿ ಮರೆಯಾಗಿದ್ದ ದೇವತೆಗಳು ಶ್ರೀಕೃಷ್ಣನು ವಿಲಯವನ್ನೈದುವನೆಂಬ ಶಂಕೆಯಿಂದ ಆತನನ್ನು ಹಿಂದಕ್ಕೆ ಕರೆದರು ; ಕಂಸನು ಮೊದಲಾದ ಅಘಾಸುರನ ಬಂಧುಗಳು ಸಂತೋಷದಿಂದ ನಗುತಿದ್ದರು ! ಆಗ ಚ್ಯುತಿರಹಿತನಾಗಿ ಭಗವಂತನಾದ ಶ್ರೀಕೃಷ್ಣನು ದೇವತೆಗಳ ವಚನವನ್ನು ಕೇಳಿಯೂ ಕಂಸಾದಿ

ಗಳ ಸಂತೋಷವನ್ನು ನೋಡಿಯೂ ಅಘಾಸುರನು ಆ ಗೋಪಾಲಬಾಲಕರನ್ನೂ ಕರುಗಳನ್ನೂ ಜೀರ್ಣಗೈಯ ಲೆಣಿಸಿದ ಸಮಯದಲ್ಲಿ ಆತನ ಕಂಠದಲ್ಲಿ ಅತಿ ತ್ವರೆಯಿಂದ ಬೆಳೆದನು ; ಆಗ ಮಹತ್ತಾದ ದೇಹವುಳ್ಳವನಾಗಿ ಅಡ್ಡಗೈ ಯಲ್ಪಟ್ಟ ಮುಖಾದಿಗಳಿಗೆ ಮಾರ್ಗಭೂತವಾದ ಕಂಠವುಳ್ಳವನಾಗಿ ಹೊರಕ್ಕೆ ಹೊರಟ ನೇತ್ರಗಳುಳ್ಳವನಾಗಿ ಹೊರ ಳುತಿದ್ದ ಅಘಾಸುರನ ದೇಹಮಧ್ಯದಲ್ಲಿ ನಿರೋಧನ ಮಾಡಲ್ಪಟ್ಟ ವಾಯುವು ಪರಿಪೂರ್ಣವಾಗಿ ಒಳಗೆ ಹಿಡಿಯಲಾ ರದೆ ಆತನ ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಹೊರಕ್ಕೆ ಹೊರಟಿತು ; ಆ ಮಾರ್ಗದಿಂದಲೇ ಅವನ ಸಮಸ್ತ ಪ್ರಾಣಗಳೂ ಹೊರಕ್ಕೆ ಹೊರಟ ಬಳಿಕ ಭಗವಂತನಾದ ಶ್ರೀಕೃಷ್ಣನು ಮೃತಿಯನ್ನೈದಿದ್ದ ಗೋಪಾಲಬಾಲ ಕರನ್ನೂ ಕರುಗಳನ್ನೂ ಅಮೃತವನ್ನು ವರ್ಷಿಸುವ ತನ್ನ ದೃಷ್ಟಿಯಿಂದಲೇ ಬದುಕಿಸಿ ಅವರೊಡಗೂಡಿ ಅಘಾಸು ರನ ಮುಖದ್ವಾರದೆಶೆಯಿಂದ ಹೊರಕ್ಕೆ ಹೊರಟುಬಂದನು ! ಆ ಸಮಯದಲ್ಲಿ ಮಹತ್ತಾದ ಆ ಅಜಗರ ದೇಹದದೆಶೆಯಿಂದ ಶುದ್ಧಸತ್ವಮಯವಾಗಿ ಮಹತ್ತಾದ ಆಶ್ಚರ್ಯಕರವಾದ ಜ್ಯೋತಿಸ್ಸು ಎದ್ದು ಆಕಾಶದಲ್ಲಿದ್ದುಕೊಂಡು ತನ್ನ ಕಾಂತಿ ಯಿಂದ ದಶದಿಕ್ಕುಗಳನ್ನೂ ಪ್ರಕಾಶಮಾಡುತ ಶ್ರೀಕೃಷ್ಣನ ಆಗಮನವನ್ನು ನಿರೀಕ್ಷಿಸಿಕೊಂಡಿದ್ದು ಆತನು ಆ ಶ ರೀರದಿಂದ ಹೊರಗೆಬಂದ ಮಾತ್ರದಿಂದಲೇ ದೇವತೆಗಳು ನೋಡಿಕೊಂಡಿರಲು ಆತನ ಶರೀರವನ್ನು ಪ್ರವೇಶಿಸಿತು ! ಆ ಬಳಿಕ ದೇವತೆಗಳು ಅತಿ ಸಂತೋಷಯುಕ್ತರಾಗಿ ತಮಗೆ ಇಷ್ಟವಾದ ಕಾರ್ಯವನ್ನು ಗೈದ ಶ್ರೀಕೃಷ್ಣನನ್ನು ಪುಷ್ಪಗಳಿಂದ ಪೂಜಿಸಿದರು ; ಅಪ್ಸರಸ್ತ್ರೀಯರು ನರ್ತನಮಾಡಿದರು ; ಗಂಧರ್ವಾದಿಗಳು ಗಾನಂಗೈದರು ; ಮೇಘ ಗಳು ದಿವ್ಯವಾದ್ಯವನ್ನು ಗೈದವು ; ಋಷಿಗಳು ಸ್ತೋತ್ರವನ್ನು ಮಾಡಿದರು ; ಸಿದ್ಧಚಾರಣ ವಿದ್ಯಾಧರಾದಿ ದೇವ ಗಣಗಳು ಜಯಶಬ್ದಗಳನ್ನು ಮಾಡಿದರು ; ಬ್ರಹ್ಮದೇವನು ಸತ್ಯಲೋಕದ ಸಮೀಪವನ್ನು ವ್ಯಾಪಿಸಿದ್ದ ಅತ್ಯಾಶ್ಚ ರ್ಯಕರವಾದ ಆ ಸ್ತೋತ್ರ ವಾದ್ಯ ಗಾನ ಜಯಶಬ್ದಗಳು ಮೊದಲಾದ ಅನೇಕೋತ್ಸವ ಮಂಗಳಧ್ವನಿಗಳನ್ನು ಕೇಳಿ ಶೀಘ್ರವಾಗಿ ಬಂದು ಶ್ರೀಕೃಷ್ಣನ ಮಹಿಮೆಯನ್ನು ನೋಡಿ ಆಶ್ಚರ್ಯವನ್ನೈದಿದನು !

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ಬೃಂದಾವನದಲ್ಲಿ ಆಶ್ಚರ್ಯಕರವಾದ ಆ ಅಜಗರದ ಚರ್ಮವು ಬಹುಕಾ ಲವು ಆ ಗೋಕುಲವಾಸಿಗಳಾದ ಜನರಿಗೆ ವಿಹರಿಸತಕ್ಕ ಮಹಾಬಿಲವಾಗಿತ್ತು ; ಆ ಗೋಪಾಲಬಾಲಕರು ಕೌಮಾರ್ಯವಾ ದ ಐದನೇ ವರುಷದಲ್ಲಿ ಶ್ರೀಕೃಷ್ಣನು ಅಘಾಸುರನನ್ನು ಸಂಹರಿಸಿ ತಮ್ಮನ್ನು ಮೃತ್ಯುವಿನ ದೆಶೆಯಿಂದ ರಕ್ಷಿಸಿದ ವ್ಯಾಪಾರವನ್ನೂ ಸಂಸಾರರೂಪವಾದ ಮೃತ್ಯುವಿನ ದೆಶೆಯಿಂದ ಅಜಗರರೂಪಿಯಾದ ಅಘಾಸುರನನ್ನು ರಕ್ಷಿಸಿ ಆತ ನಿಗೆ ಮೋಕ್ಷವನ್ನಿತ್ತದ್ದನ್ನೂ ಅಘಾಸುರನ ದೇಹದಿಂದ ಹೊರಟ ಜ್ಯೋತಿಸ್ಸು ಕೃಷ್ಣನಲ್ಲಿ ಪ್ರವೇಶಮಾಡಿದ್ದನ್ನೂ ಪೌಗಂಡವಯಸ್ಸೆಂಬ ಆರನೇ ವರುಷದ ಮೊದಲು ಹತ್ತನೇ ವರುಷದವರಿಗೂ ಆಶ್ಚರ್ಯಯುಕ್ತರಾಗಿ ಆಗಲೇ ಆ ವ್ಯಾಪಾರವು ನಡೆದಹಾಗೆ ಗೋಕುಲದಲ್ಲಿ ಹೇಳುತಿದ್ದರು ! ಎಲೈ ಅರಸೆ, ಪಾಪಿಷ್ಠನಾದ ಅಘಾಸುರನೂ ಆ ಭಗ ವಂತನ ಸ್ಪರ್ಶಮಾತ್ರದಿಂದಲೇ ಪಾತಕಗಳಿಲ್ಲದವನಾಗಿ ದುರ್ಲಭವಾದ ಶ್ರೀಹರಿಯ ಸಾರೂಪ್ಯಮುಕ್ತಿಯನ್ನು ಪಡೆದನು ! ಮಾಯೆಯಿಂದ ಮನುಷ್ಯಬಾಲಕನಂತೆ ನಟಿಸುತ ಬ್ರಹ್ಮಾದಿ ದೇವತೆಗಳಿಗೂ ನಿಯಾಮಕನಾಗಿ ಆದಿ ಸೃಷ್ಟಿಕರ್ತನಾದ ಶ್ರೀವಾಸುದೇವನಲ್ಲಿ ಇಂಥಾ ಕಾರ್ಯವು ಆಶ್ಚರ್ಯಕರವಲ್ಲ ; ಒಂದುಬಾರಿ ಹೃದಯದಲ್ಲಿ ಭಾವ ಮಾತ್ರದಿಂದ ಕಲ್ಪಿತವಾಗಿ ನಿಲ್ಲಿಸಲ್ಪಟ್ಟ ಯಾವ ಶ್ರೀಹರಿಯ ಮೂರ್ತಿಯು ಪ್ರಹ್ಲಾದನು ಮೊದಲಾದ ಮಹಾಯೋ ಗಿಗಳಿಗೆ ಮೋಕ್ಷಸಾಂಬ್ರಾಜ್ಯವನ್ನು ಕೊಟ್ಟಂಥಾದ್ದಾಯಿತೊ ಅಂಥಾ ನಿತ್ಯವಾದ ಆತ್ಮಾನುಭವದಿಂದ ನಿರಾಕರಿಸಲ್ಪಟ್ಟ ಮಾಯೆಯುಳ್ಳ ಪರಮಪುರುಷನಾದ ಶ್ರೀವಾಸುದೇವನೇ ಪ್ರತ್ಯಕ್ಷವಾಗಿ ಅಘಾಸುರನ ಶರೀರ ಮಧ್ಯವನ್ನು ಪ್ರವೇಶಿಸಿ ದ್ದರಿಂದ ಅವನಿಗೆ ಮುಕ್ತಿಯುಂಟಾಯಿತೆಂಬದು ಆಶ್ಚರ್ಯವೆ !—ಎಂದು ಶುಕಮುನಿಯು ನುಡಿದನು.

ಎಲೈ ಶೌನಕಾದಿ ಋಷಿಗಳಿರಾ ಕೇಳೀ : ಅನಂತರದಲ್ಲಿ ಪರೀಕ್ಷಿದ್ರಾಯನು ಈ ರೀತಿ ಶುಕಮುನಿಯಿಂದ ತನ್ನ ನ್ನು ರಕ್ಷಿಸಿದ ಕೃಷ್ಣಮೂರ್ತಿಯ ವಿಚಿತ್ರವಾದ ದಿವ್ಯ ಚರಿತ್ರವನ್ನು ಕೇಳಿ ಆ ಚರಿತ್ರಶ್ರವಣ ವಶಮಾಡಲ್ಪಟ್ಟ ಮನಸ್ಸುಳ್ಳವನಾಗಿ ಮತ್ತು ಪುಣ್ಯಕರವಾದ ಶ್ರೀಕೃಷ್ಣನ ಚರಿತ್ರೆಯನ್ನು ಕೇಳಲಿಚ್ಛೈಸಿ ಶುಕಮುನಿಯನ್ನು ಕು

ರಿತು—ಎಲೈ ಗುರುವಾದ ಶುಕಮುನಿಯೆ, ಗೋಪಾಲಬಾಲಕರು ಕೌಮಾರ ವಯಸ್ಸಿನಲ್ಲಿ ಕೃಷ್ಣನಿಂದ ಮಾಡಲ್ಪಟ್ಟ ಅಘಾಸುರನ ಸಂಹಾರಾದಿ ವ್ಯಾಪಾರಗಳನ್ನು ಪೌಗಂಡ ವಯಸ್ಸಿನಲ್ಲಿ ಹ್ಯಾಗೆ ತಿಳಿದು ಹೇಳುತಿದ್ದರು? ಆ ವೃತ್ತಾಂತವನ್ನು ನನಗೆ ನಿರೂಪಿಸು; ಅದರ ಶ್ರವಣದಲ್ಲಿ ನನಗೆ ಕುತೂಹಲವು ವಿಶೇಷವಾಗಿದೆ; ಒಂದು ಕಾಲದಲ್ಲಿ ನಡೆದ ವ್ಯಾಪಾರವನ್ನು ಮತ್ತೊಂದು ಕಾಲದಲ್ಲಿ ತಿಳಿದರೆಂಬ ಅರ್ಥವು ಭಗವಂತನ ಮಾಯೆಯೇ ಹೊರತು ಮತ್ತೊಂದಲ್ಲ! ಎಲೈ ಶುಕಮುನಿಯೆ, ನಿನ್ನ ದೆಸೆಯಿಂದ ಬಾರಿಬಾರಿಗೂ ಪುಣ್ಯಕರವಾದ ಶ್ರೀಕೃಷ್ಣ ಕಥಾಮೃತವನ್ನು ಪಾನಂಗೈಯುತಲಿರುವ ಕಾರಣ ನಾವು ಲೋಕದಲ್ಲಿ ಕ್ಷತ್ರಿಯರಾದಾಗ್ಯೂ ಅತ್ಯಂತ ಧನ್ಯರು!—ಎಂದನು.

ಎಲೈ ಶೌನಕಮುನಿಯೆ, ಆ ಸಮಯದಲ್ಲಿ ಪರೀಕ್ಷಿದ್ರಾಯನಿಂದ ಪ್ರಶ್ನೆಗೈಯಲ್ಪಟ್ಟ ಶ್ರೀಶುಕಮುನಿಯು ತನ್ನಿಂದ ಧ್ಯಾನಿಸಲ್ಪಟ್ಟ ಶ್ರೀಕೃಷ್ಣಮೂರ್ತಿಯಿಂದ ಅಪಹರಿಸಲ್ಪಟ್ಟ ಸಕಲೇಂದ್ರಿಯ ವ್ಯಾಪಾರವುಳ್ಳವನಾಗಿ ಕ್ಷಣಮಾತ್ರವು ಸಮಾಧಿಯಲ್ಲಿದ್ದು ಮೆಲ್ಲಮೆಲ್ಲಗೆ ಅತಿ ಪ್ರಯಾಸದಿಂದ ಪಡೆಯಲಟ್ಟ ಬಹಿರ್ದೃಷ್ಟಿಯುಳ್ಳವನಾಗಿ ಪರೀಕ್ಷಿದ್ರಾಯನನ್ನು ಕುರಿತು ಪ್ರತ್ಯುತ್ತರವನ್ನಿತ್ತನು!

## ೧೩ ನೇ ಅಧ್ಯಾಯ.

ಕೃಷ್ಣನು ಬ್ರಹ್ಮನಿಂದಪಹರಿಸಲ್ಪಟ್ಟ ಗೋಪಬಾಲಕರಾಗಿಯೂ ಕರುಗಳಾಗಿಯೂ ಇದ್ದದ್ದು.

ಎಲೈ ಭಾಗ್ಯವಂತನಾಗಿ ಭಾಗವತೋತ್ತಮನಾದ ಪರೀಕ್ಷಿದ್ರಾಯನೆ, ನೀನು ಸರ್ವೇಶ್ವರನಾದ ಶ್ರೀಕೃಷ್ಣಮೂರ್ತಿಯ ದಿವ್ಯಕಥೆಯನ್ನು ಶ್ರವಣಂಗೈಯುತಲಿರುವವನಾದಾಗ್ಯೂ ಅದನ್ನು ಬಾರಿಬಾರಿಗೂ ನೂತನವಾಗಿ ಮಾಡುತಿದ್ದೀಯಾದಕಾರಣ ನಿನ್ನಿಂದ ಮಾಡಲ್ಪಟ್ಟ ಪ್ರಶ್ನೆಯು ಬಹು ಚನ್ನಾಯಿತು! ಸ್ತ್ರೀಯರಲ್ಲಿ ಅತ್ಯಂತಾಸಕ್ತರಾದ ಪುರುಷರಿಗೆ ಸ್ತ್ರೀಯರ ವಿಷಯವಾದ ವೃತ್ತಾಂತವು ನೂತನವಾಗಿ ತೋರುವರೀತಿಯಲ್ಲಿ ಶ್ರೀವಾಸುದೇವನ ಕಥೆಯು ಸತ್ಪುರುಷರಿಗೆ ಪ್ರತಿ ಕ್ಷಣದಲ್ಲಿಯೂ ನೂತನವಾಗಿ ತೋರುವದು! ಎಲೈ ಅರಸೆ, ಲೋಕದಲ್ಲಿ ಗುರುಗಳು ರಹಸ್ಯವಾದ ಅರ್ಥವನ್ನು ತಮ್ಮಲ್ಲಿ ಅತ್ಯಂತ ಭಕ್ತಿಯುಳ್ಳ ಶಿಷ್ಯರಿಗೆ ನಿರೂಪಿಸುವರಾದ್ದರಿಂದ ನಾನು ಕೆಲವು ರಹಸ್ಯಾರ್ಥಗಳನ್ನು ನಿನಗೆ ಹೇಳುತ್ತೇನೆ ಕೇಳು! ಭಗವಂತನಾದ ಕೃಷ್ಣನು ಮೃತ್ಯುರೂಪನಾದ ಅಘಾಸುರನ ಮುಖದ ದೆಸೆಯಿಂದ ಕರುಗಳನ್ನೂ ಗೋಪಬಾಲಕರನ್ನೂ ರಕ್ಷಿಸಿ ಅವರನ್ನು ಒಂದು ಸರಸ್ಸಿನ ಮರಳುದಿಣ್ಣೆಗೆ ಕರೆದುಕೊಂಡು ಹೋಗಿ "ಎಲೈ ಸ್ನೇಹಿತರಾದ ಗೋಪಬಾಲಕರಿರಾ, ನಮ್ಮ ಕ್ರೀಡಾಸಂಪತ್ತಿಗೆ ಅನುಕೂಲವಾಗಿ ಮೃದುವಾಗಿ ಶುಭ್ರವಾಗಿ ವಿಕಸಿತಗಳಾದ ಕಮಲಕಲ್ಹಾರ ಮೊದಲಾದವುಗಳುಳ್ಳ ಮಡುವುಳ್ಳದ್ದಾಗಿ ದಿವ್ಯಪರಿಮಳದಿಂದ ಸೆಳೆಯಲ್ಪಟ್ಟ ಭ್ರಮರಗಳಿಂದಲೂ ಪಕ್ಷಿಗಳಿಂದಲೂ ಈ ಮಡುವಿನಲ್ಲಿರುವ ಜಲಜಂತುಗಳ ಪ್ರತಿಧ್ವನಿಗಳಿಂದಲೂ ಮೆರೆಯುವ ವೃಕ್ಷಗಳಿಂದ ವ್ಯಾಪ್ತವಾಗಿರುವ ಈ ಮರಳುದಿಣ್ಣೆಯು ಅತಿ ರಮಣೀಯವಾಗಿದೆ; ನಮಗೆ ಭೋಜನಕಾಲವು ಅತಿಕ್ರಮಿಸಿತು; ನೀವೆಲ್ಲರು ಕ್ಷುದ್ಬಾಧೆಯಿಂದ ಬಳಲಿದ್ದೀರಾದ್ದರಿಂದ ನಾವೆಲ್ಲರು ಭೋಜನಮಾಡೋಣ; ಈ ಕರುಗಳು ಜಲಪಾನಮಾಡಿ ನಮ್ಮ ಸಮೀಪದಲ್ಲಿ ತೃಣಗಳನ್ನು ಮೇಯುತ್ತಿರಲಿ!" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಗೋಪಬಾಲಕರು ಹಾಗೇ ಆಗಲೆಂದು ಕರುಗಳಿಗೆ ಜಲಪಾನಮಾಡಿಸಿ ಮೇಯಲೋಸುಗ ತೃಣಗಳಿಂದ ಹಸರಾಗಿರುವ ಭೂಮಿಯಲ್ಲಿ ಆ ಕರುಗಳನ್ನು ತಡೆದು ನಿಲ್ಲಿಸಿ ತಮ್ಮ ತಮ್ಮ ಬುತ್ತಿಗಳ ಕಲ್ಲಿಗಳನ್ನು ಬಿಚ್ಚಿ ಭಗವಂತನಾದ ಶ್ರೀಕೃಷ್ಣನೊಡನೆ ಸಂತೋಷದಿಂದ ಭೋಜನಂಗೈದರು! ಎಲೈ ಪರೀಕ್ಷಿದ್ರಾಯನೆ, ವನದಲ್ಲಿ ಶ್ರೀಕೃಷ್ಣನ ಸುತ್ತಲು ಮಂಡಲಾಕಾರವಾಗಿ ಅನೇಕಗಳಾದ ಪಙ್ಕ್ತಿಗಳಾಗಿ ಎಡೆಬಿಡದೆ ಕುಳಿತು ಶ್ರೀಕೃಷ್ಣನಿಗೆ ಅಭಿಮುಖರಾಗಿ ವಿಕಾಸಯುಕ್ತಗಳಾದ ನೇತ್ರಗಳುಳ್ಳ ಆ ಗೋಪಾಲಬಾಲಕರು

ಆ ಭೋಜನಕಾಲದಲ್ಲಿ ಕಮಲಕರ್ಣಿಕೆಯ ಸುತ್ತಲು ಪಙ್ತಿಪಙ್ತಿಗಳಾಗಿರುವ ಕಮಲಗಳಂತೆ ಪ್ರಕಾಶಿಸಿದರು! ಆಗ ಗೋಪಾಲಬಾಲಕರು ಪುಷ್ಪಗಳಿಂದಲೂ ಪತ್ರಗಳಿಂದಲೂ ತಳಿರುಗಳಿಂದಲೂ ಅಂಕುರಗಳಿಂದಲೂ ತೃಣಗಳಿಂದಲೂ ಕಲ್ಲಿಗಳಿಂದಲೂ ವೃಕ್ಷತ್ವಕ್ಕುಗಳಿಂದಲೂ ಪಾಷಾಣಾದಿಗಳಿಂದಲೂ ಅವರವರ ಇಚ್ಛಾನುಸಾರವಾಗಿ ಕಲ್ಪಿಸಲ್ಪಟ್ಟ ಭೋಜನಪಾತ್ರೆಗಳುಳ್ಳವರಾಗಿ ಅನ್ನವನ್ನು ಭುಜಿಸುತ ಪರಸ್ಪರ ಅವರವರ ಭೋಜ್ಯದ್ರವ್ಯಗಳ ರುಚಿವಿಶೇಷವನ್ನು ಹೇಳುತ ನಗುತ ಒಬ್ಬರನ್ನೊಬ್ಬರು ನಗುವಂತೆ ಮಾಡುತಿದ್ದರು; ಆ ಸಮಯದಲ್ಲಿ ಯಜ್ಞಭೋಕ್ತೃವಾದ ಶ್ರೀಕೃಷ್ಣದೇವನು ಉಟ್ಟಿದ್ದ ವಸ್ತ್ರಕ್ಕೂ ಉದರಕ್ಕೂ ಮಧ್ಯದಲ್ಲಿ ಕೊಳಲನ್ನು ಶಿಕ್ಕಿಕೊಂಡು ಶೃಂಗವನ್ನೂ ವೇತ್ರದಂಡವನ್ನೂ ಎಡಕಂಕುಳಲ್ಲಿಟ್ಟುಕೊಂಡು ವಾಮಹಸ್ತದಲ್ಲಿ ರಮಣೀಯವಾದ ದಧ್ಯನ್ನ ಕಬಳವನ್ನಿರಿಸಿಕೊಂಡು ಆ ಅನ್ನಕ್ಕೆ ಯೋಗ್ಯವಾದ ಬೆಲವತ್ತಾಮಲಕಾದಿ ಉಪ್ಪಿನಕಾಯಿಗಳನ್ನು ಬೆರಳಸಂದುಗಳಲ್ಲಿಟ್ಟುಕೊಂಡು ಕಮಲಕರ್ಣಿಕೆಯಂತೆ ಎಲ್ಲರಿಗೂ ಅಭಿಮುಖವಾಗಿ ಮಧ್ಯದಲ್ಲಿ ಕುಳಿತು ತನ್ನ ಸುತ್ತಲು ಕುಳಿತಿದ್ದ ಸ್ನೇಹಿತರಾದ ಗೋಪಾಲಬಾಲಕರನ್ನು ತನ್ನ ಪರಿಹಾಸವಾಕ್ಯಗಳಿಂದ ನಗಿಸುತ ಸ್ವರ್ಗದಲ್ಲಿರುವ ಸಮಸ್ತ ದೇವತೆಗಳೂ ಆಶ್ಚರ್ಯದಿಂದ ನೋಡುತ್ತಿರಲು ಬಾಲಕರಂತೆ ಕ್ರೀಡಿಸುತ ಭೋಜನಂಗೈದನು! ಎಲೈ ಪರೀಕ್ಷಿದ್ರಾಯನೆ, ಈ ರೀತಿಯಲ್ಲಿ ಶ್ರೀಕೃಷ್ಣನಲ್ಲೇ ಆಸಕ್ತವಾದ ಚಿತ್ತಗಳುಳ್ಳ ಆ ಗೋಪಾಲ ಬಾಲಕರು ಭೋಜನಂಗೈಯುತ್ತಿರಲು ಸಮೀಪದಲ್ಲಿ ಮೇಯುತಿದ್ದ ಕರುಗಳು ತೃಷ್ಣಗಳಲ್ಲಿ ಆಸಕ್ತಿಯುಳ್ಳವಾಗಿ ದೂರವಾಗಿದ್ದ ಆ ವನಮಧ್ಯವನ್ನು ಪ್ರವೇಶಮಾಡಿದವು; ಆಗ ಆ ಕರುಗಳನ್ನು ಕಾಣದೆ ಭಯಗ್ರಸ್ತರಾಗಿ ತನ್ನ ಸ್ನೇಹಿತರಾದ ಗೋಪಾಲಬಾಲಕರನ್ನು ಕುರಿತು ಶ್ರೀಕೃಷ್ಣನು "ಎಲೈ ಮಿತ್ರರೆ, ನೀವು ದುಷ್ಟವ್ಯಾಘ್ರಾದಿಗಳ ದೆಸೆಯಿಂದ ಭಯವನ್ನು ಬಿಟ್ಟು ಭೋಜನಮಾಡೀ; ಆ ಕರುಗಳನ್ನು ನಾನು ಕರೆತರುತ್ತೇನೆ" ಎಂದು ನುಡಿದು ತನ್ನ ವಾಮಹಸ್ತದಲ್ಲಿದ್ದ ದಧ್ಯನ್ನ ಕಬಳದೊಡನೆ ಪರ್ವತಗಳಲ್ಲಿಯೂ ಗುಹೆಗಳಲ್ಲಿಯೂ ಲತಾಗೃಹಗಳಲ್ಲಿಯೂ ಮತ್ತು ಪ್ರವೇಶಿಸಲಶಕ್ಯವಾದ ವನಪ್ರದೇಶಗಳಲ್ಲಿಯೂ ಆ ಕರುಗಳನ್ನು ಹುಡುಕುತಿದ್ದನು! ಎಲೈ ಪರೀಕ್ಷಿದ್ರಾಯನೆ, ಆ ಸಮಯದಲ್ಲಿ ಸತ್ಯಲೋಕದಿಂದ ಬಂದು ಕೃಷ್ಣನು ಅಘಾಸುರನಿಗೆ ಮೋಕ್ಷವನ್ನು ಕಲ್ಪಿಸಿದ್ದನ್ನು ನೋಡಿ ಅತ್ಯಂತ ವಿಸ್ಮಯವನ್ನೈದಿ ಆಕಾಶದಲ್ಲೇ ನಿಂತಿದ್ದ ಬ್ರಹ್ಮದೇವನು ಮಾಯೆಯಿಂದ ಮನುಷ್ಯಬಾಲಕನಾಗಿ ಪರಮೇಶ್ವರನಾದ ಶ್ರೀಕೃಷ್ಣನ ಮನೋಹರವಾದ ಮಹಿಮೆಯನ್ನು ಮತ್ತೂ ನೋಡಲಿಚ್ಛೆಯುಳ್ಳವನಾಗಿ ಆ ಕರುಗಳನ್ನಪಹರಿಸಿ ಅವನ್ನು ಹುಡುಕಲೋಸುಗ ಶ್ರೀಕೃಷ್ಣನು ಹೊರಟ ಬಳಿಕ ಅಲ್ಲಿದ್ದ ಗೋಪಾಲಬಾಲಕರನ್ನು ಸಹಾ ತನ್ನ ಮಾಯೆಯಿಂದ ಮತ್ತೊಂದು ಪ್ರದೇಶವನ್ನೈದಿಸಿ ಅಂತರ್ಧಾನಂಗೈದನು! ಶ್ರೀಕೃಷ್ಣನು ಪರ್ವತವೊದಲಾದ ಪ್ರದೇಶಗಳಲ್ಲಿ ಹುಡಿಕಿ ಕರುಗಳನ್ನು ಕಾಣದೆ ತಿರುಗಿ ಬಂದು ಆ ಮರಳುದಿಣ್ಣೆಯಲ್ಲಿ ಭೋಜನಮಾಡುತಿದ್ದ ವತ್ಸಪಾಲಕರನ್ನೂ ಕಾಣದೆ ಆ ಗೋಪಬಾಲಕರನ್ನೂ ಕರುಗಳನ್ನೂ ಎಲ್ಲಾಪ್ರದೇಶಗಳಲ್ಲಿಯೂ ಹುಡಿಕಿ ಎಲ್ಲೂ ಕಾಣದೆ ಅದು ಬ್ರಹ್ಮದೇವನಿಂದ ಮಾಡಲ್ಪಟ್ಟ ಮಾಯೆ ಎಂದು ತಿಳಿದು ತಾನು ಜಗತ್ತಿನ ಸೃಷ್ಟಿಕರ್ತನಾಗಿ ಜಗದೀಶ್ವರನಾದ್ದರಿಂದ ಆ ಕರುಗಳ ತಾಯಿಗಳಾದ ಗೋವುಗಳಿಗೂ ಆ ಬಾಲಕರ ತಾಯಿಗಳಿಗೂ ಬ್ರಹ್ಮದೇವನಿಗೂ ಸಂತೋಷವುಂಟಾಗುವಂತೆ ಶೀಘ್ರದಲ್ಲಿ ತಾನೇ ಆ ಕರುಗಳ ರೂಪಗಳನ್ನೂ ಗೋಪಬಾಲಕರ ರೂಪಗಳನ್ನೂ ತಾಳಿ ಅವುಗಳ ಮತ್ತು ಆ ಬಾಲಕರ ಪ್ರತ್ಯೇಕಗಳ ಪ್ರಮಾಣವನ್ನತಿಕ್ರಮಿಸದೆಯೂ ಆ ಗೋಪಬಾಲಕರ ವೇತ್ರದಂಡ ಕೊಂಬು ಕೊಳಲು ಭೋಜನಪಾತ್ರೆ ಕಲ್ಲಿಗಳ ಪ್ರಮಾಣಗಳನ್ನೂ ಆಕೃತಿಯನ್ನೂ ಅತಿಕ್ರಮಿಸದೆ ಅವರ ಭೂಷಣವಸ್ತ್ರ ಸ್ವಭಾವಗುಣ ನಾಮಧೇಯ ಆಕಾರ ವಯಸ್ಸು ಆಟ ಮೊದಲಾದವನ್ನೂ ಅತಿಕ್ರಮಿಸದೆ ಸರ್ವವೂ ವಿಷ್ಣುಮಯವೆಂದು ಪ್ರಸಿದ್ಧವಾದ ಪುರಾಣವಚನದ ಅರ್ಥವು ಪ್ರತ್ಯಕ್ಷವಾಗಿ ಕಾಣುವಂತೆ ತನ್ನ ಸ್ವರೂಪಗಳಾದ ಆ ಕರುಗಳನ್ನೂ ಗೋಪಬಾಲಕರನ್ನೂ ಗುಂಪುಕೂಡಿಸಿಕೊಂಡು ಕ್ರೀಡಿಸುತ ಗೋಕುಲವನ್ನು ಪ್ರವೇಶಿಸಿ ಕರುಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಕರೆದುಕೊಂಡು ಹೋಗಿ ಅವುಗಳ ಬಂಧನಸ್ಥಾನಗಳಲ್ಲಿ ಬಿಟ್ಟು ಆಯಾ ಗೋಪಾಲಬಾಲಕ ರೂಪದಿಂದ ಅವರವರ

ಗೃಹಗಳನ್ನು ಪ್ರವೇಶಿಸಿದನು! ಈ ಪ್ರಕಾರವಾಗಿ ಆ ಗೋಪಾಲಬಾಲಕರಂತೆ ಅವರವರ ಮನೆಗಳಿಗೆ ಹೋಗಲು ಆ ಗೋಪಬಾಲಕರ ತಾಯಿಗಳು ತಮ್ಮ ಪುತ್ರರಂತೆ ನಾದಂಗೈಯುವ ಆತನ ಕೊಳಲು ಧ್ವನಿಗಳನ್ನು ಕೇಳಿ ತ್ವರೆಯಿಂದೆದ್ದು ಆತನನ್ನು ಭುಜಗಳಿಂದೆತ್ತಿಕೊಂಡು ಆಲಿಂಗನಂಗೈದು ಪರಬ್ರಹ್ಮಸ್ವರೂಪನಾದ ಆತನನ್ನು ತಮ್ಮ ತಮ್ಮ ಪುತ್ರರೆಂದು ವಾತ್ಸಲ್ಯದಿಂದ ತುಂಬಿ ಸುರಿಯುತ ಅಮೃತದಂತೆ ಸ್ವಾದುವಾಗಿ ಮದ್ಯದಂತೆ ಮದಕರವಾದ ಮೊಲೆಹಾಲನ್ನು ಆತನಿಗೆ ಪಾನಮಾಡಿಸಿದರು ! ಎಲೈ ಅರಸೆ, ಅನಂತರದಲ್ಲಿ ಸರ್ವಸ್ವರೂಪನಾದ ಶ್ರೀಕೃಷ್ಣನು ಆಯಾ ಕಾಲಗಳಲ್ಲಿ ಮಾಡತಕ್ಕ ವ್ಯಾಪಾರಗಳನ್ನು ನಿಯಮದಿಂದ ನಡೆಯಿಸುತ ತನ್ನ ಗೃಹವನ್ನೈದಿ ಮನೋಹರಗಳಾದ ತನ್ನ ಚರಿತ್ರೆಗಳಿಂದ ತಾಯಿಗಳನ್ನು ಅತ್ಯಂತ ಸಂತೋಷಪಡಿಸಿ ಅವರಿಂದ ಮೈಸೇವೆ ಮಜ್ಜನ ಅಂಗಾನುಲೇಪನ ಅಲಂಕಾರ ರಕ್ಷೆ ತಿಲಕ ಭೋಜನ ಮೊದಲಾದ ಉಪಚಾರಗಳಿಂದ ಲಾಲಿಸಲ್ಪಟ್ಟನು ; ಗೋವುಗಳು ಸಾಯಂಕಾಲವಾಗಲು ಶೀಘ್ರದಿಂದ ತಮ್ಮ ತಮ್ಮ ಬಂಧನಸ್ಥಾನಗಳನ್ನೈದಿ ತಮ್ಮ ಹೂಂಕಾರಶಬ್ದಗಳನ್ನು ಕೇಳಿ ಬಂದು ಕೂಡುವ ತಮ್ಮ ಎಳೇ ಕರುಗಳನ್ನು ಬಾರಿಬಾರಿಗು ನೆಕ್ಕುತ ಆ ಕರುಗಳಲ್ಲಿರುವ ವಾತ್ಸಲ್ಯದಿಂದ ಸುರಿಯುವ ಕೆಚ್ಚಲುಗಳಲ್ಲಿರುವ ಕ್ಷೀರವನ್ನು ಅವಕ್ಕೆ ಪಾನಂಗೈಯಿಸಿದವು! ಆ ಗೋವುಗಳಿಗೂ ಗೋಪಸ್ತ್ರೀಯರಿಗೂ ಗೋಪಬಾಲಕರೂಪದಿಂದಲೂ ಕರುಗಳರೂಪದಿಂದಲೂ ಇದ್ದ ಕೃಷ್ಣನಲ್ಲಿ ಲಾಲನಾದಿ ಸಮಸ್ತ ವ್ಯಾಪಾರಗಳೂ ಪೂರ್ವದಲ್ಲಿದ್ದ ರೀತಿಯಲ್ಲೇ ಇದ್ದವು ; ಆದರೆ ವಾತ್ಸಲ್ಯಮಾತ್ರವು ಮೊದಲಿಗಿಂತಲು ಅಧಿಕವಾಯಿತು ; ಅದೇ ರೀತಿಯಲ್ಲಿ ಗೋವುಗಳಲ್ಲಿಯೂ ಗೋಪಸ್ತ್ರೀಯರಲ್ಲಿಯೂ ಕೃಷ್ಣನಿಗೆ ಬಾಲಭಾವವು ಪೂರ್ವದಲ್ಲಿದ್ದ ರೀತಿಯಲ್ಲೇ ಇತ್ತು ; ಆದರೆ ತನಗೊಬ್ಬಳು ತಾಯಿ ತಾನೊಬ್ಬಳ ಪುತ್ರನು ಎಂಬ ಮೋಹಮಾತ್ರವಿಲ್ಲ; ಇವೇ ಆಗ ವಿಶೇಷಗಳು ! ಆ ಗೋಕುಲದಲ್ಲಿದ್ದ ಗೋಪರಿಗೂ ಗೋಪಿಯರಿಗೂ ಗೋವುಗಳಿಗೂ ಮೊದಲು ಯಾವರೀತಿ ಯಶೋದಾಪುತ್ರನಾದ ಶ್ರೀಕೃಷ್ಣನಲ್ಲಿ ಪುತ್ರನಲ್ಲಿರುವದಕ್ಕಿಂತಲು ಅಧಿಕವಾದ ಸ್ನೇಹವಿತ್ತೊ ಅದೇರೀತಿಯಲ್ಲಿ ಆಗ ತಮ್ಮ ಬಾಲಕರಲ್ಲಿ ಸ್ನೇಹವು ಬಂದು ಸಂವತ್ಸರ ಪರ್ಯಂತ ಪ್ರತಿದಿವಸದಲ್ಲಿಯು ವೃದ್ಧಿಯಾಗುತಿತ್ತು ! ಈ ರೀತಿಯಲ್ಲಿ ಕೃಷ್ಣನು ಕರುಗಳನ್ನು ಪಾಲಿಸುತ ಕರುಗಳ ವ್ಯಾಜದಿಂದಲೂ ಅವನ್ನು ಪಾಲಿಸುವ ಗೋಪಬಾಲಕರ ವ್ಯಾಜದಿಂದಲೂ ತನ್ನನ್ನು ತಾನೆ ಪಾಲಿಸುತ ಬಂದು ವರುಷವು ಆ ವನದಲ್ಲಿಯೂ ಗೋಕುಲದಲ್ಲಿಯೂ ಕ್ರೀಡಿಸುತಿದ್ದನು ; ಈರೀತಿ ಬಂದು ಸಂವತ್ಸರವು (ಐದಾರು ರಾತ್ರೆಗಳು ಕಡಿಮೆಯಾಗಿ) ಪೂರ್ತಿಯಾಗಲು ಬಂದು ದಿವಸ ಸೃಷ್ಟಿಕರ್ತೃವಾದ ಶ್ರೀಕೃಷ್ಣನು ಬಲರಾಮನ ಸಹಿತವಾಗಿ ಕರುಗಳನ್ನು ಮೇಯಿಸುತ ವನವನ್ನು ಪ್ರವೇಶಿಸಿದನು ; ಆಗ ಗೋವರ್ಧನ ಪರ್ವತದ ಶಿಖರದಲ್ಲಿ ತೃಣಗಳನ್ನು ಮೇಯುತಿದ್ದ ಗೋವುಗಳು ದೂರದಿಂದಲೇ ಆ ಕರುಗಳನ್ನು ಕಂಡು ವಾತ್ಸಲ್ಯದಿಂದ ಮೈಮರತು ತಮ್ಮನ್ನು ಪಾಲಿಸುತಿದ್ದ ಗೋಪಾಲಕರಿಂದ ಪ್ರವೇಶಿಸಲಶಕ್ಯವಾದ ಮಾರ್ಗವಾಗಿ ಎರಡು ಪಾದಗಳಿಂದ ಓಡುವ ಮನುಷ್ಯರಂತೆ ತೋರುತ ಹಿರಳಿನಲ್ಲಿ ಬೊಗ್ಗಿಸಲ್ಪಟ್ಟ ಕಂಠವುಳ್ಳವಾಗಿ ಮೇಲಕ್ಕೆತ್ತಲ್ಪಟ್ಟ ಮುಖಗಳೂ ಬಾಲಗಳೂ ವುಳ್ಳವಾಗಿ ಎಲ್ಲಾ ಕಡೆಯಲ್ಲೂ ಸೋರುತಿರುವ ಮೊಲೆಹಾಲುಳ್ಳವಾಗಿ ಹೂಂಕರಿಸುತ ಅತ್ಯಂತ ವೇಗದಿಂದ ಗೋಕುಲದ ಸಮೀಪವನ್ನೈದಿ ತಾವು ಈಚೆಗೆ ನೂತನವಾಗಿ ಅನೇಕ ಕರುಗಳನ್ನು ಹೆತ್ತಂಥಾವಾದಾಗ್ಯೂ ಆ ಕರುಗಳ ಅಂಗಗಳನ್ನು ಕಬಳಿಸುವಂತೆ ಮೋಹದಿಂದ ನೆಕ್ಕುತ ಅವಕ್ಕೆ ತಮ್ಮ ಕೆಚ್ಚಲುಗಳಲ್ಲಿ ವೃದ್ಧಿಯನ್ನೈದಿದ್ದ ಕ್ಷೀರವನ್ನು ಪಾನಂಗೈಯಿಸಿದವು ; ಅನಂತರದಲ್ಲಿ ಗೋಪಾಲಕರು ಆ ಗೋವುಗಳನ್ನು ತಡೆಯುವದಕ್ಕೋಸ್ಕರ ಮಾಡಿದ ತಮ್ಮ ಪ್ರಯಾಸವು ವ್ಯರ್ಥವಾದ್ದರಿಂದ ಲಜ್ಜೆಯಿಂದಲೂ ಅತ್ಯಂತ ಕೋಪದಿಂದಲೂ ಕಷ್ಟವಾದ ಆ ಮಾರ್ಗಶ್ರಮದಿಂದಲೂ ಬಂದು ಗೋಕುಲದ ಸಮೀಪದಲ್ಲಿ ತಮ್ಮ ಗೋವುಗಳೊಡನೆಯೂ ಕರುಗಳೊಡನೆಯೂ ಕೂಡಿದ್ದ ತಮ್ಮ ಸುತರನ್ನು ಕಂಡು ಅದರಿಂದ ಆವಿರ್ಭವಿಸಿದ ಪ್ರೇಮರಸದಲ್ಲಿ ಮುಳುಗಿದ ಅಂತಃಕರಣಗಳುಳ್ಳವರಾಗಿ ಲಜ್ಜೆಯಿಂದಲೂ ಕೋಪದಿಂದಲೂ ಅತ್ಯಂತ ಮಾರ್ಗಶ್ರಮದಿಂದಲೂ ಪೀಡಿತರಾಗಿ ಗೋವುಗಳ ಎದುರಿಗೆ ಕರುಗಳನ್ನು ತಂದ ಆ ಬಾಲಕರನ್ನು ಪ್ರಹರಿಸುವದಕ್ಕೆ ಬಂದವರಾದಾಗ್ಯೂ ಕೋಪವನ್ನು ಬಿಟ್ಟು ಅತಿ ಪ್ರೀತಿಯುಕ್ತರಾಗಿ ಅವರನ್ನೆತ್ತಿ

ತೋಳುಗಳಿಂದ ತಬ್ಬಿಕೊಂಡು ಶಿರಸ್ಸಾಘ್ರಾಣಂಗೈದು ಪರಮಸಂತೋಷವನ್ನೈದಿ ಪರಮಾನಂದಭರಿತರಾಗಿ ಆ ಪುತ್ರರನ್ನು ಬಿಟ್ಟು ಹೋಗಲಾರದೆ ಅವರನ್ನು ಸ್ಮರಿಸುವದರಿಂದ ಉಕ್ಕಿ ಹೊರಟುಬರುತಿದ್ದ ಕಣ್ಣೀರುಳ್ಳವರಾಗಿ ಅತಿ ಕಷ್ಟದಿಂದ ಮೆಲ್ಲಮೆಲ್ಲಗೆ ಅಲ್ಲಿಂದ ಗೋವುಗಳನ್ನೊರಡಿಸಿಕೊಂಡು ಹೋದರು !

ಬಂದು ಸಮಯದಲ್ಲಿ ಬಲರಾಮನು ಗೋಪಬಾಲಕರ ಮತ್ತು ಕರುಗಳ ತಾಯಿಗಳು ಅವರ ಹಿಂದೆ ಶಿಶುಗಳನ್ನೂ ಕರುಗಳನ್ನೂ ಪಡೆದಿದ್ದರೂ ಸ್ತನ್ಯಪಾನವನ್ನು ಬಿಟ್ಟದ್ದ ಆ ಪುತ್ರರಲ್ಲಿಯೂ ಕರುಗಳಲ್ಲಿಯೂ ಆ ಗೋಕುಲವಾಸಿಗಳಾದ ಗೋಪಾಲರಿಗೂ ಗೋಪಾಂಗನೆಯರಿಗೂ ಗೋವುಗಳಿಗೂ ಪ್ರತಿಕ್ಷಣದಲ್ಲಿಯು ಅತಿಶಯವಾಗಿರುವ ಪ್ರೇಮಸಮೃದ್ಧಿಯನ್ನು ಕಂಡು ಅದರ ನಿಮಿತ್ತವನ್ನರಿಯದೆ ತನ್ನ ಮನಸ್ಸಿನಲ್ಲಿ "ನನ್ನೊಡಗೂಡಿರುವ ಈ ಗೋಕುಲದ ಜನರಿಗೆ ಪೂರ್ವದಲ್ಲಿ ಯಾವರೀತಿಯಿಂದ ಸರ್ವಾತ್ಮಕನಾದ ಶ್ರೀವಾಸುದೇವನಲ್ಲಿ ಅತ್ಯಂತ ಪ್ರೀತಿಯುಂಟಾಗಿತ್ತೊ ಅದೇರೀತಿಯಲ್ಲಿ ಈಗ ಅವರಿಗೂ ನನಗೂ ಈ ಬಾಲಕರಲ್ಲಿಯೂ ಅಪೂರ್ವವಾದ ಪ್ರೀತಿಯು ವೃದ್ಧಿಯನ್ನೈದುತ್ತಿದೆ ; ಇದು ಅತ್ಯಂತ ಆಶ್ಚರ್ಯಕರವಾಗಿದೆ ; ಇದು ದೇವತೆಗಳ ಮಾಯೆಯೊ—ಅಸುರರ ಮಾಯೆಯೊ—ಮನುಷ್ಯರ ಮಾಯೆಯೊ—ಯಾವ ಕಾರಣದಿಂದ ಆಕಸ್ಮಿಕವಾಗಿ ಪ್ರಯೋಗಿಸಲ್ಪಟ್ಟಿತೋ ತಿಳಿಯಲಿಲ್ಲ ! ಇದು ನನಗೂ ಮೋಹವನ್ನುಂಟುಮಾಡುತಲಿದೆಯಾದಕಾರಣ ಬಹುತರವಾಗಿ ನನಗೂ ಸ್ವಾಮಿಯಾದ ಶ್ರೀಕೃಷ್ಣನ ಮಾಯೆಯಾಗಿರಬಹುದು" ಎಂದು ಭಾವಿಸಿ ತನ್ನ ಮಿತ್ರರಾದ ಗೋಪಾಲಬಾಲಕರನ್ನೂ ಕರುಗಳನ್ನೂ ತನ್ನ ಜ್ಞಾನದೃಷ್ಟಿಯಿಂದ ಶ್ರೀಕೃಷ್ಣನೆಂದು ತಿಳಿದು ಆತನನ್ನು ಕುರಿತು "ಎಲೈ ಜಗದೀಶ್ವರನೆ, ಪೂರ್ವದಲ್ಲಿ ನಾನು ಈ ಕರುಗಳನ್ನು ಋಷಿಗಳ ಅಂಶಗಳೆಂದೂ ಇವನ್ನು ಪಾಲಿಸುವ ಗೋಪಾಲಬಾಲಕರೆಲ್ಲರು ದೇವತೆಗಳ ಅಂಶಭೂತರೆಂದೂ ತಿಳಿದಿದ್ದೆನು ; ಈಗ ಹಾಗೆ ತೋರುವದಿಲ್ಲ ; ಭೇದಕ್ಕೆ ಆಶ್ರಯಗಳಾದ ಈ ಸ್ಥಾನಗಳಲ್ಲಿಯೂ ನೀನೇ ತೋರುತಲಿವೆಯಾದಕಾರಣ ಸಮಸ್ತವನ್ನು ಪ್ರತ್ಯೇಕವಾಗಿ ಯೋಚಿಸಿ ಈರೀತಿ ಯುಂಟಾದ ಕಾರಣವನ್ನು ಹೇಳು" ಎಂದು ಕೇಳಿ ಶ್ರೀಕೃಷ್ಣನಿಂದ ಸಂಕ್ಷೇಪವಾಗಿ ಹೇಳಲ್ಪಟ್ಟ ವೃತ್ತಾಂತವನ್ನು ಕೇಳಿ ಸಮಸ್ತವನ್ನೂ ತಿಳಿದನು !

ಈರೀತಿಯಲ್ಲಿ ಬಂದು ಸಂವತ್ಸರವು ಪೂರ್ತಿಯಾಗಲು ಬ್ರಹ್ಮದೇವನು ಗೋಕುಲದ ಸಮೀಪಕ್ಕೆ ಬಂದು ತನ್ನ ಮಾನದಿಂದ ತೃಟಿಮಾತ್ರಕಾಲವಾಗಿ ಮನುಷ್ಯಮಾನದಿಂದ ಬಂದು ಸಂವತ್ಸರ ಕಾಲಪರಿಯಂತರವು ಪೂರ್ವದಂತೆಯೇ ಸರ್ವಸ್ವರೂಪನಾಗಿ ಕ್ರೀಡಿಸುತಲಿರುವ ಶ್ರೀಹರಿಯನ್ನು ಕಂಡು ತನ್ನ ಮನಸ್ಸಿನಲ್ಲಿ ಗೋಕುಲದಲ್ಲಿದ್ದ ಎಲ್ಲಾ ಬಾಲಕರೂ ಕರುಗಳೂ ತನ್ನ ಮಾಯೆಯೆಂಬ ಶಯನದಲ್ಲಿ ಮಲಗಿರಲು ಯಥಾಪ್ರಕಾರದಲ್ಲಿ ಬಂದು ಸಂವತ್ಸರವು ಶ್ರೀಕೃಷ್ಣನೊಡನೆ ಆ ಪ್ರದೇಶದಲ್ಲಿ ಕ್ರೀಡಿಸುತಿದ್ದ ಅಷ್ಟುಮಂದಿ ಬಾಲಕರೂ ಕರುಗಳೂ ಎಲ್ಲಿಂದ ಬಂದವೆಂದು ಚಿಂತಿಸುತ ಬಹುಕಾಲ ಧ್ಯಾನಿಸಿನೋಡಿಯೂ ಆ ಗೋಪಾಲಬಾಲಕರಲ್ಲಿಯೂ ಕರುಗಳಲ್ಲಿಯೂ ಯಥಾರ್ಥವಾಗಿರುವದನ್ನೂ ಅನೃತವಾಗಿರುವದನ್ನೂ ತಿಳಿಯದೆ ಮೋಹಿತನಾಗಿ ಪ್ರಪಂಚವನ್ನು ಮೋಹಯುಕ್ತವಾಗಿ ಮಾಡುತಲಿರುವ ಶ್ರೀಹರಿಗೆ ತನ್ನ ಮಾಯೆಯಿಂದ ಮೋಹವನ್ನುಂಟುಮಾಡುವದಕ್ಕೆಣಿಸಿದ್ದರಿಂದ ತಾನೆ ಮೋಹವನ್ನೈದಿದನು ! ಅಂಧಕಾರದಿಂದ ಅತ್ಯಂತವಾಗಿ ವ್ಯಾಪ್ತವಾದ ರಾತ್ರಿಯಲ್ಲಿ ಹಿಮದ ಕಿರಣಗಳಿಂದುಂಟಾದ ಅಂಧಕಾರವು ಪ್ರತ್ಯೇಕವಾಗಿ ತಾನು ಮತ್ತೊಂದಕ್ಕೆ ಆವರಣಂಗೈಯ್ಯಲಾರದೆ ಆ ರಾತ್ರಿಯಲ್ಲೇ ಲೀನವಾಗುವಹಾಗೂ ಹಗಲಿನಲ್ಲಿ ಮಿಂಚುಹುಳಗಳ ತೇಜಸ್ಸು ಪ್ರಕಾಶವಿಲ್ಲದೆ ಅಡಗುವಹಾಗೂ ಮಹಾಮಾಯೆಗೆ ಆಶ್ರಯನಾಗಿ ಮಹಾಪುರುಷನಾದ ಶ್ರೀಹರಿಯಲ್ಲಿ ಮತ್ತೊಬ್ಬ ಪುರುಷನಿಂದ ಪ್ರಯೋಗಿಸಲ್ಪಡುವ ಮಾಯೆಯು ಸ್ವಲ್ಪವಾದರು ತನ್ನ ವ್ಯಾಪಾರವನ್ನು ಮಾಡಲಾರದೆ ಆ ಮಾಯೆಯನ್ನು ಪ್ರಯೋಗಿಸಿದವನ ಸಾಮರ್ಥ್ಯವನ್ನು ನಾಶಂಗೈಯುವದು !

ಎಲೈ ಪರೀಕ್ಷಿದ್ರಾಜನೆ, ಆ ಸಮಯದಲ್ಲಿ ಅಲ್ಲಿದ್ದ ಆ ಗೋಪಾಲಬಾಲಕರೆಲ್ಲರು ಕರುಗಳ ವೇತ್ರದಂಡಗಳು ಕೊಂಬುಗಳು ಮೊದಲಾದವುಗಳ ಸಹಿತವಾಗಿ ಬ್ರಹ್ಮದೇವನು ನೋಡುತ್ತಿರಲು ನೀಲಮೇಘಶ್ಯಾಮರಾಗಿ ಪೀ

ತಾಂಬರಧರರಾಗಿ ಚತುರ್ಭುಜಯುಕ್ತರಾಗಿ ಶಂಖ ಚಕ್ರ ಗದಾ ಪದ್ಮಯುಕ್ತ ಹಸ್ತಗಳುಳ್ಳವರಾಗಿ ಕಿರೀಟ ಮಕರಕುಂಡಲ ವನಮಾಲಿಕೆಗಳುಳ್ಳವರಾಗಿ ಶ್ರೀವತ್ಸವೆಂಬ ಮಾಣಿಕ್ಯ ಕಾಂತಿಯಿಂದ ಯುಕ್ತಗಳಾದ ತೋಳುಬಳೆಗಳುಳ್ಳವರಾಗಿ ರತ್ನಮಯಗಳಾಗಿ ಶಂಖದಂತೆ ಮೂರು ರೇಖೆಗಳುಳ್ಳ ಕಂಕಣಹಸ್ತರಾಗಿ ಕಾಲುಕಡಗಗಳಿಂದಲೂ ಕಾಲಂದಿಗೆಗಳಿಂದಲೂ ಉಡಿದಾರಗಳಿಂದಲೂ ಉಂಗುರಗಳಿಂದಲೂ ಶೋಭಿತರಾಗಿ ಪಾದಾದಿ ಶಿರಸ್ಸುಪರ್ಯಂತ ಸಕಲಾವಯವಗಳಲ್ಲಿಯೂ ಬಹುಜನ್ಮಗಳಿಂದ ಸಂಪಾದಿಸಲ್ಪಟ್ಟ ಪುಣ್ಯದಂತೆ ಸಂಪೂರ್ಣವಾಗಿ ಸಮರ್ಪಿಸಲ್ಪಟ್ಟ ಕೋಮಲಗಳಾದ ತುಲಸೀ ವನಮಾಲಿಕೆಗಳಿಂದ ಪ್ರಕಾಶಮಾನರಾಗಿ ಬೆಳದಿಂಗಳಂತೆ ಅತ್ಯಂತ ಬಿಳುಪಾದ ಮುಗುಳುನಗೆಯೊಡನೆಯೂ ರಕ್ತವರ್ಣಯುಕ್ತವಾದ ಕಡೆಗಣ್ಣೋಟವೂ ಉಳ್ಳವರಾಗಿ ಭಕ್ತರ ಮನೋರಥಗಳನ್ನು ಸತ್ವಗುಣದಿಂದ ಪಾಲಿಸುವವರಂತೆಯೂ ರಜೋಗುಣದಿಂದ ಸೃಷ್ಟಿಸುವವರಂತೆಯೂ ಪ್ರಕಾಶಿಸುವವರಾಗಿಯೂ ಬ್ರಹ್ಮಾದಿ ಸ್ತಂಬಪರ್ಯಂತಗಳಾದ ಶರೀರಯುಕ್ತಗಳಾಗಿ ಸ್ಥಾವರಜಂಗಮಾತ್ಮಕಗಳಾದ ಪ್ರಾಣಿಗಳಿಂದಲೂ ನೃತ್ತಗೀತಗಳು ಮೊದಲಾದ ಅನೇಕ ಪೂಜೆಗಳಿಂದಲೂ ಪ್ರತ್ಯೇಕ ಪ್ರತ್ಯೇಕವಾಗಿ ಉಪಾಸನಮಾಡಲ್ಪಟ್ಟವರಾಗಿಯೂ ಅಣಿಮಾದ್ಯಷ್ಟಸಿದ್ಧಿಗಳಿಂದಲೂ ಮಾಯಾವಿದ್ಯೆಗಳೆಂಬ ಶಕ್ತಿಗಳಿಂದಲೂ ಜಗತ್ಕಾರಣಗಳಾದ ಮಹದಾದಿ ಇಪ್ಪತ್ತುನಾಲ್ಕು ತತ್ವಗಳಿಂದಲೂ ಪರಿವೃತರಾಗಿ ಆ ತತ್ವಗಳಿಗೆ ಸಹಕಾರಮಾಡುವ ಕಾಲದಿಂದಲೂ ಪರಿಣಾಮಕಾರಣವಾದ ಸ್ವಭಾವದಿಂದಲೂ ಜೀವಾದೃಷ್ಟಿಗಳಿಗುದ್ಬೋಧಕವಾದ ಸಂಸ್ಕಾರದಿಂದಲೂ ಕಾಮಕರ್ಮಗಳಿಂದಲೂ ಗುಣಗಳಿಂದಲೂ ಮೂರ್ತಿವತ್ತುಗಳಾಗಿ ಭಗವಂತನ ಮಹಿಮೆಯಿಂದ ತಿರಸ್ಕರಿಸಲ್ಪಟ್ಟ ಸ್ವಾತಂತ್ರ್ಯವುಳ್ಳ ಸಮಸ್ತರಿಂದಲೂ ಅಣಿಮಾದಿಗಳಿಂದಲೂ ಸೇವಿಸಲ್ಪಟ್ಟವರಾಗಿ ಸತ್ಯಸ್ವರೂಪರಾಗಿ ಜ್ಞಾನಸ್ವರೂಪರಾಗಿ ಆನಂದಸ್ವರೂಪರಾಗಿ ಅಪರಿಚ್ಛಿನ್ನರಾಗಿ ಜಾತಿಭೇದರಹಿತರಾಗಿ ನಿರಂತರದಲ್ಲಿಯೂ ಏಕರೂಪರಾಗಿ ಬ್ರಹ್ಮಜ್ಞಾನವೆ ನೇತ್ರವಾಗುಳ್ಳ ಜ್ಞಾನಿಗಳಿಗೂ ಜ್ಞಾನದೃಷ್ಟಿಯಿಂದ ನಿಶ್ಚಯಿಸಿಸ್ಪರ್ಶಮಾಡಲು ಶಕ್ಯವಲ್ಲದ ಅಮಿತವಾದ ಮಹತ್ವವುಳ್ಳವರಾಗಿ ಕಾಣಲ್ಪಟ್ಟರು ! ಎಲೈ ಅರಸೆ, ಬ್ರಹ್ಮದೇವನು ಚರಾಚರಾತ್ಮಕವಾದ ಆ ಗೋಪಾಲ ಬಾಲಕಾದಿಗಳನ್ನು ಸಮಸ್ತ ಪ್ರಪಂಚವೂ ಯಾವನ ತೇಜಸ್ಸಿನಿಂದ ಪ್ರಕಾಶಿಸುವದೊ ಅಂಥಾ ಪರಬ್ರಹ್ಮಸ್ವರೂಪರೆಂದು ತಿಳಿದು ಅತ್ಯಾಶ್ಚರ್ಯದಿಂದ ತನ್ನ ದೃಷ್ಟಿಯನ್ನು ಹಿಂದಿರುಗಿಸಿ ಸರ್ವಪ್ರಜೆಗಳಿಗೂ ಅಧೀಶ್ವರಿಯಾದ ದೇವತೆಯ ಸಮೀಪದಲ್ಲಿ ನಾಲ್ಕುಮುಖಗಳುಳ್ಳ ಸುವರ್ಣಪ್ರತಿಮೆಯು ನಿಂತಿರುವಂತೆ ಪರಬ್ರಹ್ಮರೂಪರಾದ ಆ ಗೋಪಬಾಲಕಾದಿಗಳ ತೇಜಸ್ಸಿನಿಂದ ನಿರ್ವ್ಯಾಪಾರಗಳಾಗಿರುವ ಸಮಸ್ತೇಂದ್ರಿಯಗಳುಳ್ಳವನಾಗಿ ನಿಶ್ಚಲನಾಗಿದ್ದನು ! ಎಲೈ ಅರಸೆ, ಈ ಪ್ರಕಾರದಲ್ಲಿ ಸರಸ್ವತೀದೇವಿಗೆ ಪತಿಯಾದ ಬ್ರಹ್ಮದೇವನು ತನ್ನ ಯುಕ್ತಿಯಿಂದಲೂ ಊಹಿಸಲಶಕ್ಯವಾಗಿ ಅಸಾಧಾರಣವಾಗಿ ಸ್ವಪ್ರಕಾಶ ಸುಖಸ್ವರೂಪವಾಗಿ ಪ್ರಕೃತಿಪರವಾಗಿ ತತ್ವನಿರಾಕರಣ ಶೃತಿಗಳಿಂದ ನಿಶ್ಚಯಿಸಲ್ಪಟ್ಟ ಜ್ಞಾನವುಳ್ಳ ಪರಬ್ರಹ್ಮಸ್ವರೂಪವಾದ ಅವರ ಮಹಿಮೆಯನ್ನು ಕಂಡು ಅತ್ಯಾಶ್ಚರ್ಯದಿಂ ಮೋಹವನ್ನೈದಿ ತನ್ನ ಮಹಿಮೆಯನ್ನು ನೋಡಲು ಸಮರ್ಥನಲ್ಲದಿದ್ದದ್ದನ್ನು ತಿಳಿದು ಶ್ರೀಕೃಷ್ಣನು ಯಾವ ತನ್ನ ಮಾಯೆಯಿಂದ ಅವನಿಗೆ ಆಶ್ಚರ್ಯವುಂಟಾಯಿತೊ ಅಂಥಾ ಮಾಯಾರೂಪವಾದ ತೆರೆಯನ್ನು ತೆಗೆದನು ! ಆ ಕ್ಷಣದಲ್ಲೇ ನಿರ್ವ್ಯಾಪಾರನಾಗಿದ್ದ ಬ್ರಹ್ಮದೇವನು ಕೃಷ್ಣಾನುಗ್ರಹದಿಂದ ಬಿಡಿಸಲ್ಪಟ್ಟ ಇಂದ್ರಿಯವ್ಯಾಪಾರವುಳ್ಳವನಾಗಿ ಮೃತನಾದ ಪುರುಷನು ಪ್ರಾಣಗಳೊಡಗೂಡಿ ಮೇಲಕ್ಕೇಳುವ ರೀತಿಯಲ್ಲಿ ಎಚ್ಚರಗೊಂಡು ಅತಿಪ್ರಯಾಸದಿಂದೆದ್ದು ಮೆಲ್ಲನೆ ಕಣ್ಣುಗಳನ್ನು ತೆರೆದು ತನ್ನೊಡಗೂಡಿದ್ದ ಈ ಜಗತ್ತನ್ನು ಕಂಡು ಸರ್ವತ್ರ ದಿಕ್ಕುಗಳನ್ನೂ ನೋಡುತ ಸರ್ವಜನರಿಗೂ ಜೀವನಾಧಾರಗಳಾದ ಸಮಸ್ತ ವೃಕ್ಷಗಳಿಂದ ನಿಬಿಡವಾಗಿ ಅತ್ಯಂತ ಪ್ರೀತಿಕರವಾಗಿ ಎದಿರಾಗಿದ್ದ ಬೃಂದಾವನವನ್ನು ಕಂಡನು ! ನರರೂ ಸಿಂಹಾದಿ ಮೃಗಗಳೂ ಪ್ರತಿಕ್ರಿಯೆಗಳಿಲ್ಲದೆ ಅತ್ಯಂತ ಮಿತ್ರತ್ವದಿಂದ ಅನ್ಯೋನ್ಯವಾಗಿ ಕೂಡಿದ್ದದ್ದಾಗಿ ಶ್ರೀಕೃಷ್ಣಮೂರ್ತಿಯು ವಾಸಮಾಡುವದರಿಂದ ಪರಿಹರಿಸಲ್ಪಟ್ಟ ಕ್ರೋಧಾದಿಗಳುಳ್ಳ ಪ್ರಾಣಿಗಳುಳ್ಳ ಬೃಂದಾವನವನ್ನು ಕಂಡು ಆ ವನದಲ್ಲಿ ಅದ್ವಿತೀಯನಾಗಿ ಕರುಗಳನ್ನೂ ಗೋಪಾಲಬಾಲಕರನ್ನೂ ಹುಡುಕುವವನಾಗಿ ಗೋಪಾಲಕರ ವಂಶದಲ್ಲಿ ಶಿಶುತ್ವವನ್ನು ಪಡೆದು ನಾಟ್ಯಮಾಡುತಲೂ ಪರ

ಬ್ರಹ್ಮರೂಪನಾಗಿಯೂ ಹಸ್ತದಲ್ಲಿ ಅನ್ನದ ಕಬಳದೊಡನೆ ಯುಕ್ತನಾದವನಾಗಿಯೂ ಇದ್ದ ಶ್ರೀಕೃಷ್ಣನನ್ನು ತಾನು ಕರುಗಳನ್ನು ಅಪಹರಿಸುವದಕ್ಕಿಂತಲು ಮೊದಲೇ ಹ್ಯಾಗಿದ್ದನೋ ಹಾಗೆ ಕಂಡು ತನ್ನ ವಾಹನವಾದ ಹಂಸಪಕ್ಷಿಯಿಂದ ಅತಿ ವೇಗದಿಂದಿಳಿದು ಭೂಮಿಯಲ್ಲಿ ತನ್ನ ದೇಹವನ್ನು ಸುವರ್ಣದಂಡದಂತೆ ಕೆಡಹಿ ತನ್ನ ನಾಲ್ಕು ಕಿರೀಟಗಳ ಕೊನೆಗಳಿಂದ ಆ ದೇವನ ಚರಣಾರವಿಂದಯುಗಳವನ್ನು ಸ್ಪರ್ಶನಗೈದು ನಮಸ್ಕರಿಸಿ ಆನಂದಬಾಷ್ಪರೂಪಗಳಾದ ಜಲಗಳಿಂದ ಅವುಗಳನ್ನು ಅಭಿಷೇಕಗೈದು ಬಾರಿಬಾರಿಗೂ ಎದ್ದೆದ್ದು ನಮಸ್ಕಾರಗೈಯುತ ಪೂರ್ವದಲ್ಲಿ ತನ್ನಿಂದ ಕಾಣಲ್ಪಟ್ಟ ಶ್ರೀಕೃಷ್ಣದೇವನ ಮಹಿಮೆಯನ್ನು ಬಾರಿಬಾರಿಗೂ ಸ್ಮರಿಸುತ ಬಹುಕಾಲವಿದ್ದು ಮೆಲ್ಲಗೆದ್ದು ತನ್ನ ನಯನಗಳನ್ನು ಹಸ್ತಗಳಿಂದೊರಸುತ ಶ್ರೀಮುಕುಂದನ ಮುಖವನ್ನು ತನ್ನ ಮುಖವನ್ನೆತ್ತಿ ಚನ್ನಾಗಿ ನೋಡಿ ನಮ್ರವಾದ ಕಂಠವುಳ್ಳವನಾಗಿ ಅಂಜಲೀಬದ್ಧನಾಗಿ ವಿನಯಯುಕ್ತನಾಗಿ ಸಾವಧಾನವಾದ ಮನಸ್ಸುಳ್ಳವನಾಗಿ ತಾನು ಮಾಡಿದ ಅಪರಾಧವನ್ನು ಸ್ಮರಿಸಿ ಗಡಗಡನೆ ನಡಗುತ ತನ್ನಲ್ಲಿ ಆತನು ದಯೆಗೈದನೆಂಬ ಸಂತೋಷದಿಂದುಂಟಾದ ಗದ್ಗದವಾಕ್ಯದಿಂ ಸ್ತೋತ್ರಗೈದನು !

---

## ೧೪ ನೇ ಅಧ್ಯಾಯ.

### ಬ್ರಹ್ಮನು ಗೋಪಬಾಲಕರನ್ನೂ ಕರುಗಳನ್ನೂ ಕೃಷ್ಣನಿಗೆ ಒಪ್ಪಿಸಿದ್ದು.

ಅನಂತರದಲ್ಲಿ ಬ್ರಹ್ಮದೇವನು ಶ್ರೀಕೃಷ್ಣನ ಆಶ್ಚರ್ಯಕರವಾದ ಆ ವ್ಯಾಪಾರವನ್ನು ನೋಡಿ ಅತ್ಯಂತ ಮೋಹಿತನಾಗಿ ಆ ಗೋಪಾಲಬಾಲಕರೂ ಕರುಗಳೂ ಪೂರ್ವದಲ್ಲಿದ್ದವರಲ್ಲವೆಂದೂ ನೂತನವಾಗಿ ಬಂದವರೆಂದೂ ನಿಶ್ಚಯಿಸಿ ಶ್ರೀಕೃಷ್ಣನನ್ನು ಸ್ತುತಿಸುತ "ಎಲೈ ಸ್ವಾಮಿಯೇ, ಸ್ತುತಿಸಲು ಯೋಗ್ಯವಾದ ಶ್ರೀಕೃಷ್ಣಮೂರ್ತಿಯಾಗಿ ಮೇಘದಂತೆ ಶ್ಯಾಮಲವರ್ಣವಾದ ದೇಹವುಳ್ಳವನಾಗಿ ಮಿಂಚಿನಂತೆ ಹೊಳೆಯುವ ಪೀತಾಂಬರವುಳ್ಳವನಾಗಿ ಗುಲಗಂಜಿಗಳಿಂದಲೂ ಕರ್ಣಭೂಷಣಗಳಿಂದಲೂ ಮಯೂರಪಿಂಛಗಳಿಂದಲೂ ಶೋಭಿಸುವ ಮುಖವುಳ್ಳವನಾಗಿ ವನದಲ್ಲುದ್ಭವಿಸಿದ ಪುಷ್ಪಮಾಲಿಕೆಗಳುಳ್ಳವನಾಗಿ ಕರದಲ್ಲಿ ದಧ್ಯನ್ನ ಕಬಳವು ಕಂಕುಳಲ್ಲಿ ಶೃಂಗ ವೇತ್ರದಂಡಗಳು ಉಡಿಯಲ್ಲಿ ಕೊಳಲು ಮೊದಲಾದ ಅನೇಕ ಚಿಹ್ನೆಗಳಿಂದ ಶೋಭಿಸುವವನಾಗಿ ಕೋಮಲಗಳಾದ ಪಾದಗಳುಳ್ಳ ನಂದಗೋಪ ಪುತ್ರನಾದ ನಿನಗೆ ನಮಸ್ಕಾರಗೈವೆನು ! ಎಲೈ ದೇವೋತ್ತಮನಾದ ಶ್ರೀಕೃಷ್ಣನೆ, ನನ್ನಲ್ಲಿ ಅನುಗ್ರಹವುಳ್ಳವನಾಗಿ ಭಕ್ತರ ಅಪೇಕ್ಷೆಯಿಂದ ಆವಿರ್ಭವಿಸುತ ಸುಲಭವಾಗಿ ಪ್ರಕಾಶಿಸಲ್ಪಟ್ಟಂಥಾದ್ದಾದಾಗ್ಯೂ ಚಿಂತಿಸಲಶಕ್ಯವಾಗಿ ಶುದ್ಧಸತ್ವಾತ್ಮಿಕವಾಗಿ ಜ್ಞಾನಕ್ಕೆ ವಿಷಯವಲ್ಲದಿರುವ ನಿನ್ನ ಅವತಾರ ಮಹಿಮೆಯನ್ನು ತಿಳಿಯಲು ನಾನೇ ಸಮರ್ಥನಲ್ಲದಿರುವಲ್ಲಿ ಅವತಾರರಹಿತನಾಗಿ ಗುಣಾತೀತನಾಗಿ ನಿಜಾನಂದಾನುಭವಮಾತ್ರಸ್ವರೂಪನಾದ ಸಾಕ್ಷಾತ್ ನಿನ್ನ ಮಹಿಮೆಯನ್ನು ನಿರೋಧಗೈಯಲ್ಪಟ್ಟ ಮನಸ್ಸಿನಿಂದ ಮತ್ಯಾವ ಪುರುಷನು ತಿಳಿಯಲು ಸಮರ್ಥನಾದಾನು ! ಎಲೈ ಶ್ರೀಕೃಷ್ಣದೇವನೆ, ಜ್ಞಾನವಿಷಯದಲ್ಲಿ ಸ್ವಲ್ಪವಾದರು ಪ್ರಯಾಸಪಡುವವನ್ನು ಬಿಟ್ಟು ಸ್ವಸ್ಥಾನದಲ್ಲಿದ್ದುಕೊಂಡು ಸತ್ಪುರುಷರಿಂದ ನಿತ್ಯದಲ್ಲೂ ಪ್ರಕಟಗೈಯಲ್ಪಟ್ಟ ಸತ್ವಪವ ಶ್ರೋತ್ರಮಾರ್ಗವನ್ನೈದಿರುವ ನಿನ್ನ ದಿವ್ಯ ಕಥೆಯನ್ನು ದೇಹದಿಂದಲೂ ವಾಕ್ಯದಿಂದಲೂ ಮನಸ್ಸಿನಿಂದಲೂ ಸತ್ಕಾರಗೈಯುತ ಮತ್ತೊಂದು ಕರ್ಮವನ್ನಾಚರಿಸದೆ ಜೀವಿಸುವವರಿಂದ ನೀನು ಮೂರು ಲೋಕದಲ್ಲಿಯೂ ಬಹುತರವಾಗಿ ಮಿಕ್ಕಾದ ಜನರಿಂದ ಜಯಿಸಲಶಕ್ಯನಾಗಿದ್ದಾಗ್ಯೂ ಜಯಿಸಲ್ಪಡುವೆ ! ಎಲೈ ವಿಭುವಾದ ಶ್ರೀಕೃಷ್ಣನೆ, ಭೋಗಮೋಕ್ಷರೂಪವಾದ ಶ್ರೇಯಸ್ಸನ್ನು ಪ್ರವಹಿಸುವ ನಿನ್ನ ಭಕ್ತಿಯನ್ನು ಬಿಟ್ಟು ಕೇವಲ ಆತ್ಮಜ್ಞಾನಸಿದ್ಧಿಗೋಸ್ಕರ ಅತ್ಯಂತ ಪ್ರಯತ್ನವಂಗೈವವರಿಗೆ ಆಕ್ಲೇಶವೇ ಫಲವಾಗಿರುವದೆ ಹೊರ್ತು ಮತ್ತೊಂದು ಫಲವಿಲ್ಲ ; ಅಲ್ಪಪ್ರಮಾಣವುಳ್ಳ ಧಾನ್ಯವನ್ನು ಬಿಟ್ಟು ಒಳಗೆ ಕಾಳಿಲ್ಲದೆ ಸ್ಥೂಲಧಾನ್ಯದಂತೆ ತೋರುವ ಜಳ್ಳುಗಳನ್ನು ಕುಟ್ಟುವವರಿಗೆ ಸ್ವಲ್ಪವಾದರೂ ಫಲವುಂಟಾಗಲಾರದ ರೀತಿಯಲ್ಲಿ

ನಿನ್ನ ಭಕ್ತಿಯನ್ನು ತುಚ್ಛೀಕರಿಸಿ ಕೇವಲ ಜ್ಞಾನಕ್ಕೋಸ್ಕರ ಪ್ರಯತ್ನಂಗೈವವರಿಗೆ ಆ ಪ್ರಯಾಸವಲ್ಲದೆ ಮತ್ತೊಂದು ಫಲವುಂಟಾಗಲಾರದು! ಎಲೈ ಪರಿಪೂರ್ಣನಾದ ಸ್ವಾಮಿಯೆ, ಮಹಾಯೋಗಿಗಳೂ ಅಷ್ಟಾಂಗಯುಕ್ತಗಳಾದ ಯೋಗದಿಂದಲೂ ಜ್ಞಾನವನ್ನು ಪಡೆಯದೆ ಅನಂತರದಲ್ಲಿ ನಿನ್ನಲ್ಲೇ ಸಮರ್ಪಿಸಲ್ಪಟ್ಟ ಸಮಸ್ತ ಲೌಕಿಕ ವ್ಯಾಪಾರವುಳ್ಳವರಾಗಿ ತಮ್ಮ ಸತ್ಕರ್ಮಗಳಿಂದ ಮಾಡಲ್ಪಟ್ಟ ಸತ್ಕಥೆಯಿಂದ ನಿನ್ನ ಸಾನ್ನಿಧ್ಯವನ್ನೈದಿ ನಿನ್ನ ಭಕ್ತಿಯಿಂದ ಆತ್ಮ ಸ್ವರೂಪವನ್ನು ತಿಳಿದು ಸುಖದಿಂದ ಸರ್ವೋತ್ಕೃಷ್ಟವಾದ ನಿನ್ನ ಗತಿಯನ್ನು ಪಡೆಯುವರು! ಎಲೈ ಅಪರಿಚ್ಛಿನ್ನನಾದ ಶ್ರೀಕೃಷ್ಣಮೂರ್ತಿಯೆ, ನಿನ್ನ ಮಹಿಮೆಯು ಇಂದ್ರಿಯಗಳನ್ನು ನಿಗ್ರಹಿಸಿರುವ ಮಹಾತ್ಮರಿಂದಲೂ ವಿಶೇಷಾಕಾರರಹಿತವಾಗಿ ನಿರ್ವಿಷಯವಾಗಿ ಆತ್ಮಕಾರಕವಿಷಯರೂಪದಿಂದ ತಿಳಿಯಲು ಸಾಧ್ಯವಾಗಲಾರದು! ಎಲೈ ಹರಿಯೆ! ಅತಿ ನಿಪುಣರಾದ ಪುರುಷರಿಂದ ಬಹುಜನ್ಮರೂಪವಾದ ಭೂಮಿಯ ಪ್ರಮಾಣವೂ ಅಂತರಿಕ್ಷದಲ್ಲಿರುವ ಹಿಮದ ತುಂತುರುಗಳೂ ನಕ್ಷತ್ರಾದಿ ಕಿರಣಗಳ ಪರಮಾಣುಗಳೂ ಎಣಿಸಲ್ಪಡುವವು! ಹಾಗಾದಾಗ್ಯೂ ಸತ್ವರಜಸ್ತಮೋಗುಣಂಗಳಿಗೆ ನಿಯಾಮಕನಾಗಿ ಈ ಜಗತ್ತನ್ನು ಪಾಲನಂಗೈಯಲೋಸುಗ ಬಹುಪ್ರಕಾರವಾಗಿ ಬಹು ಗುಣಗಳ ಆವಿರ್ಭಾವದಿಂದ ಅವತರಿಸಿರುವ ನಿನ್ನ ಅನೇಕಪ್ರಕಾರಗಳಾದ ಕಲ್ಯಾಣಗುಣಗಳನ್ನೆಣಿಸಲು ಯಾರೂ ಸಮರ್ಥರಲ್ಲ! ಆದಕಾರಣ ಎಲೈ ಸ್ವಾಮಿಯೆ, ನಿನ್ನ ದಯೆಯು ಯಾವಾಗ ಉಂಟಾಗುವದೆಂದು ಅದನ್ನು ಬಹು ಮಾನಂಗೈಯುತ ತನ್ನಿಂದಾರ್ಜಿಸಲ್ಪಟ್ಟ ಕರ್ಮಫಲದಲ್ಲಿ ಆಸಕ್ತನಲ್ಲದೇ ಮನೋವಾಕ್ಕಾಯಕರ್ಮಗಳೆಂಬ ಮೂರು ಕರಣಗಳಿಂದಲೂ ನಿನಗೆ ನಮಸ್ಕಾರಂಗೈಯುತ ತಪಸ್ಸು ಮೊದಲಾದವಿಂದ ಕ್ಲೇಶವನ್ನೈದದೆ ಜೀವಿಸುವಂಥಾ ಭಕ್ತನು ಮುಕ್ತಿಯನ್ನು ಪಡೆಯಲು ಯೋಗ್ಯನಾಗುವನು! ಎಲೈ ಜಗದೀಶ್ವರನೆ, ಆದಿಪುರುಷನಾಗಿ ಅಪರಿಚ್ಛಿನ್ನನಾಗಿ ಪರಮಾತ್ಮನಾಗಿ ಮಾಯಾಶಕ್ತಿಗಳುಳ್ಳ ಮಹಾತ್ಮರಿಗೂ ಮೋಹಕನಾದ ನಿನ್ನಲ್ಲಿ ನಾನು ಮಾಯೆಯನ್ನು ಪ್ರಸರಣಂಗೈದು ನಿನ್ನ ಐಶ್ವರ್ಯವನ್ನು ನೋಡಲಿಚ್ಛೈಸಿ ನನ್ನ ದುಷ್ಟವ್ಯಾಪಾರದಿಂದ ಅಗ್ನಿಯ ದೆಸೆಯಿಂದುದ್ಭವಿಸಿದ ಜ್ವಾಲೆಯು ಅಗ್ನಿಯಲ್ಲಿ ಸ್ವಲ್ಪವಾದರು ತನ್ನ ವ್ಯಾಪಾರವನ್ನು ಮಾಡಲಾರದ ರೀತಿಯಲ್ಲಿ ನಿನ್ನಲ್ಲಿ ಈಪ್ರಕಾರವಾಗಿ ದುರ್ಜನವ್ಯಾಪಾರವನ್ನು ಮಾಡಲು ಎಷ್ಟುಮಾತ್ರದವನು! ನನ್ನಿಂದಾಗತಕ್ಕದ್ದೇನಿದೆ! ಎಲೈ ಅಚ್ಯುತನೆ, ರಜೋಗುಣದ ದೆಶೆಯಿಂದುತ್ಪನ್ನನಾದಕಾರಣ ಅಜ್ಞನಾಗಿ ನಾನೆ ಜಗತ್ತನ್ನು ಸೃಷ್ಟಿಸುವೆನೆಂಬ ಗಾಢಾಂಧಕಾರ ರೂಪವಾದ ಮದದಿಂದ ಅಂಧಪ್ರಾಯಗಳಾದ ನೇತ್ರಗಳುಳ್ಳವನಾದಕಾರಣ ಸರ್ವೇಶ್ವರರೂಪನಾದ ನಿನ್ನನ್ನು ಹೊರ್ತು ಪ್ರತ್ಯೇಕವಾಗಿ ನಾನೇ ಈಶ್ವರನೆಂಬ ಅಹಂಕಾರವುಳ್ಳವನಾದ ನನ್ನ ಅಪರಾಧವನ್ನು ಕ್ಷಮಿಸು; ನೀನು ಪ್ರಭುವಾಗಿಯೂ ಸರ್ವರಿಗೂ ಸ್ವಾಮಿಯಾದಾಗ್ಯೂ ನಾನು ನಿನ್ನ ಭೃತ್ಯನಾದ್ದರಿಂದ ನನ್ನನ್ನು ಕ್ಷಮಿಸು; ನೀನು ಬ್ರಹ್ಮಾಂಡರೂಪವಾದ ದೇಹವುಳ್ಳವನಾದ್ದರಿಂದ ಈಶ್ವರನು! ಎಲೈ ಸ್ವಾಮಿಯೆ, ಪ್ರಕೃತಿ ಮಹದಹಂಕಾರ ಆಕಾಶ ವಾಯು ಅಗ್ನಿ ಜಲ ಪೃಥ್ವಿಗಳೆಂಬ ಸಪ್ತಾವರಣಗಳಿಂದ ಸುತ್ತಲ್ಪಟ್ಟಿರುವ ಬ್ರಹ್ಮಾಂಡವೆಂಬ ಘಟದಲ್ಲಿ ಸ್ವಲ್ಪಪ್ರಮಾಣದಿಂದ ಏಳುಗೇಣುದ್ದವಾದ ದೇಹವುಳ್ಳ ನಾನು ಅಪರಿಮಿತಗಳಾದ ಬ್ರಹ್ಮಾಂಡಗಳೆಂಬ ಪರಮಾಣುಗಳ ಪರಿಭ್ರಮಣಾರ್ಥವಾಗಿ ರಚಿಸಲ್ಪಟ್ಟ ಗವಾಕ್ಷಗಳಂತಿರುವ ರೋಮಕೂಪಗಳುಳ್ಳ ನಿನ್ನ ಮಹಿಮೆಯನ್ನು ತಿಳಿಯಲಾರೆನು! ಆದಕಾರಣ ಅತಿ ತುಚ್ಛನಾದ ನಾನು ನಿನ್ನಿಂದ ದಯೆಗೈಯಲು ಯೋಗ್ಯನು! ಎಲೈ ಶ್ರೀಕೃಷ್ಣದೇವನೆ, ಲೋಕದಲ್ಲಿ ಆಸ್ತಿಕನಾಸ್ತಿಕರೆಂಬ ಭಾವಾಭಾವಬೋಧಕಗಳಾದ ಶಬ್ದಗಳಿಂದಲಾದರು ಹೇಳಲ್ಪಡುವ ಸಮಸ್ತ ನಿನ್ನ ಉದರ ಪ್ರದೇಶಕಿಂತಲು ಹೊರಗೆ ಕಿಂಚಿನ್ಮಾತ್ರವಾದರು ಇಲ್ಲವಾದಕಾರಣ ಗರ್ಭದಲ್ಲಿರುವ ಶಿಶುವಿನ ಪಾದಪ್ರಹಾರಗಳು ಮಾತೃವಿಗೆ ಅಪರಾಧಗಳಾಗುವದಿಲ್ಲವೊ ಅದೇರೀತಿ ಪ್ರಪಂಚವು ನಿನ್ನ ಉದರವನ್ನೈದಿರುವದರಿಂದ ನಾನೂ ನಿನ್ನ ಉದರವಂಗೈದಿರುವೆನಾದ್ದರಿಂದ ಮಾತೃವಿನಂತೆ ನೀನು ನನ್ನ ಅಪರಾಧವನ್ನು ಕ್ಷಮಿಸು; ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರುಲೋಕಗಳ ಪ್ರಳಯಕಾಲದಲ್ಲಿ ಪರಸ್ಪರವಾಗಿ ಕೂಡಿರುವ ಸಮಸ್ತ ಸಮುದ್ರಗಳ ಮಹಾಜಲದಲ್ಲಿ ಶ್ರೀನಾರಾಯಣನ ಉದರದಲ್ಲಿರುವ ನಾಭೀಪದ್ಮದ ದೆಶೆಯಿಂದ ನಾನು ಉದ್ಭವಿಸಿದೆನೆಂಬ ಲೋಕವಾರ್ತೆಯು ಅಬದ್ಧವಾಗಲಾರದು! ಆದ್ದರಿಂದ—ಎಲೈ ಪರಮೇಶ್ವರನೆ, ನಿನ್ನ ದೆಶೆಯಿಂದ ನಾನು ಜನಿಸಿದೆನು! ಎಲೈ ಹರಿಯೆ, ನಾರಕ

ಬ್ದಕ್ಕೆ ಅರ್ಥವಾದ ಜೀವಸಮೂಹಕ್ಕೆ ಆಶ್ರಯನೂ ಸಮಸ್ತ ಪ್ರಾಣಿಗಳಿಗೂ ಆತ್ಮನೂ ಆದ್ದರಿಂದ ನೀನೇ ನಾರಾಯಣನು ; ನಾರಶಬ್ದಾರ್ಥವಾದ ಜೀವಸಮೂಹಕ್ಕೆ ನಿನ್ನ ದೆಸೆಯಿಂದಲೆ ಪ್ರವೃತ್ತಿಯುಂಟಾಗುತಲಿರುವದರಿಂದ ನೀನೇ ನಾರಾಯಣನು ! ಎಲೈ ಸ್ವಾಮಿಯೆ, ನೀರಿನಿಂದುದ್ಭವಿಸಿದಕಾರಣ ನಾರಶಬ್ದಾರ್ಥಗಳಾದ ಜಲಗಳೇ ಪೂರ್ವದಲ್ಲಿ ಆಶ್ರಯವಾಗುಳ್ಳವನಾದಕಾರಣ ಶ್ರೀನಾರಾಯಣನೆಂದು ಪ್ರಸಿದ್ಧನಾದ ಪುರುಷನು ನಿನ್ನ ಮೂರ್ತಿಯಲ್ಲವೆ ! ಎಲೈ ಈಶ್ವರನೆ, ನಾರಾಯಣನಾದ ನೀನು ಜಲವನ್ನಾಶ್ರಯಿಸಿರುವದೂ ಮಾಯೆಯಿಂದಲೆ ಹೊರತು ಸತ್ಯವಲ್ಲ! ಎಲೈ ಅಚಿಂತ್ಯೈಶ್ವರ್ಯಸಂಪನ್ನನಾದ ಶ್ರೀಕೃಷ್ಣದೇವನೆ, ಜಗತ್ತಿಗೆ ಆಶ್ರಯಭೂತವಾದ ನಿನ್ನ ದೇಹವು ಜಲದಲ್ಲೆ ಇರುವದೆಂಬ ಅರ್ಥವು ಸತ್ಯವಾದ್ದಾದರೆ ಪ್ರಳಯೋದಕದಲ್ಲಿರುವ ನಿನ್ನ ನಾಭೀಕಮಲದಲ್ಲಿ ವಾಸಂಗೈಯುತ್ತಿದ್ದ ನಾನು ಒಂದು ಸಮಯದಲ್ಲಿ ಕಮಲನಾಳದಿಂದ ಜಲದೊಳಗೆ ಪ್ರವೇಶಂಗೈದು ನೂರು ಸಂವತ್ಸರಗಳವರಿಗೂ ಅರಸಿದರೂ ಜಲದಲ್ಲಿ ಏನುಕಾರಣ ನನ್ನಿಂದ ನಿನ್ನ ದೇಹವು ಕಾಣಲ್ಪಡಲಿಲ್ಲ ! ನನ್ನ ಹೃದಯದಲ್ಲೂ ನಿನ್ನ ದೇಹವು ಕಾಣಲ್ಪಡಲಿಲ್ಲ! ಜಲದ ದೆಸೆಯಿಂದ ಹೊರಗೆ ಬಂದು ಪುನಹ ಸ್ವಸ್ಥಾನದಲ್ಲಿ ನೂರು ಸಂವತ್ಸರಗಳು ತಪಸ್ಸು ಮಾಡುತಿದ್ದರೂ ನನ್ನ ಹೃದಯದಲ್ಲಿ ನಿನ್ನ ದೇಹವು ಕಾಣಲ್ಪಡಲಿಲ್ಲವಾದಕಾರಣ ಅದು ನಿನ್ನ ಮಾಯೆಯೆ ಸರಿ ; ಆದ್ದರಿಂದ ನಿನ್ನ ಆ ನಾರಾಯಣಮೂರ್ತಿಗೆ ದೇಹವಿಶೇಷಪರಿಚ್ಛೇದವು ಸತ್ಯವಾಗಲಾರದು ! ಎಲೈ ಮಾಯಾಪರಿಹಾರಕನಾದ ಶ್ರೀಕೃಷ್ಣನೆ, ನಿನ್ನ ಈ ಅವತಾರದಲ್ಲಿ ಸಮಸ್ತವಾದ ಪ್ರಪಂಚವೂ ಹೊರಗೆ ಪ್ರಕಟವಾಗಿರುವದಾದಾಗ್ಯೂ ನಿನ್ನ ಉದರಮಧ್ಯದಲ್ಲಿ ಆ ಪ್ರಪಂಚವನ್ನು ನಿನ್ನ ತಾಯಾದ ಯಶೋದಾದೇವಿಗೆ ತೋರಿಸಿದ್ದರಿಂದ ನಿನ್ನಿಂದಲೆ ಈ ಪ್ರಪಂಚವು ಮಾಯಾಮಯವೆಂದು ಪ್ರಕಟವಾಯಿತು ; ನಿನ್ನ ಉದರದಲ್ಲಿ ನಿನ್ನೊಡಗೂಡಿದ ಸಮಸ್ತ ಪ್ರಪಂಚವೂ ತೋರುವ ರೀತಿಯಲ್ಲಿ ಹೊರಗೂ ತೋರುತಲಿರುವದರಿಂದ ಇದು ನಿನ್ನ ಮಾಯೆಯಿಂದಲ್ಲದೆ ಘಟಿಸಲಾರದು. ಈ ಪ್ರಪಂಚವು ನಿನ್ನಲ್ಲಿ ಪ್ರತಿಬಿಂಬರೂಪವಾದ್ದಾದರೆ ಆಗ ಹೊರಗಿರುವ ಪ್ರಪಂಚಕ್ಕಿಂತಲು ವ್ಯತ್ಯಸ್ತವಾಗಿ ಕಾಣಲ್ಪಡುವದು ; ಹಾಗೆ ತೋರುವದಲ್ಲ ; ನೀನು ದರ್ಪಣಸ್ಥಾನೀಯನಾದರೆ ನಿನ್ನಲ್ಲಿ ಪ್ರಪಂಚವಿದೆಯೆಂಬ ಜ್ಞಾನವಿಲ್ಲದೆ ಹೋಗುವದು ; ಆದಕಾರಣ ಸರ್ವಪ್ರಕಾರದಲ್ಲು ಈ ಪ್ರಪಂಚವು ಅಸತ್ಯವೇ ಸರಿ ! ಎಲೈ ಕೃಷ್ಣನೆ, ಸತ್ಯಸ್ವರೂಪನಾದ ನಿನ್ನ ಹೊರ್ತು ಈ ಪ್ರಪಂಚವು ಮಾಯಾಕಲ್ಪಿತವೆಂದು ಈಗ ನಿನ್ನಿಂದಲೇ ಪ್ರಕಟಿಸಲ್ಪಟ್ಟಿತು ; ಮೊದಲು ಒಬ್ಬನಾಗಿದ್ದು ಅನಂತರದಲ್ಲಿ ನೀನು ಅನೇಕ ಗೋಪಾಲಬಾಲಕರಾಗಿಯೂ ಕರುಗಳಾಗಿಯೂ ಕೊಳಲುಗಳಾಗಿಯೂ ವೇತ್ರದಂಡಗಳಾಗಿಯೂ ಇದ್ದೆ ; ಅನಂತರದಲ್ಲಿ ಆ ಗೋಪಾಲಬಾಲಕರು ಕರುಗಳು ಕೊಳಲುಗಳು ಮೊದಲಾದ ಸಮಸ್ತವಸ್ತುಗಳಾಗಿದ್ದ ನೀನು ಚತುರ್ಭುಜರಾಗಿ ಪೀತಾಂಬರಧಾರಿಗಳಾಗಿ ಸರ್ವಾಲಂಕಾರಯುಕ್ತರಾಗಿ ಚತುರ್ವಿಂಶತಿತತ್ವಾದಿಗಳೊಡಗೂಡಿ ನನ್ನಿಂದ ಸೇವಿಸಲ್ಪಟ್ಟ ಸಮಸ್ತ ರೂಪನಾದೆ ; ಆಮೇಲೆ ನೀನು ಸಮಸ್ತ ಬ್ರಹ್ಮಾಂಡವಾಗಿ ಕಾಣಲ್ಪಟ್ಟೆ ; ಈಗ ನೀನು ಅಪರಿಚ್ಛಿನ್ನವಾಗಿ ಅದ್ವಿತೀಯವಾದ ಬ್ರಹ್ಮರೂಪದಿಂದ ನಿಂತೆ! ಎಲೈ ಹರಿಯೆ, ಮತ್ತು ಪ್ರಪಂಚದ ಸೃಷ್ಟಿಯಲ್ಲಿ ರಜೋಗುಣದಿಂದ ಬ್ರಹ್ಮನಾದ ನನ್ನಂತೆಯೂ ಅದಂ ರಕ್ಷಿಸುವದರಲ್ಲಿ ಸತ್ವಗುಣದಿಂದ ವಿಷ್ಣುರೂಪನಾದ ನಿನ್ನಂತೆಯೂ ಅದನ್ನು ಸಂಹರಿಸುವದರಲ್ಲಿ ತಮೋಗುಣದಿಂದ ರುದ್ರನಂತೆಯೂ ಶುದ್ಧಚೈತನ್ಯಸ್ವರೂಪನಾದ ನೀನೇ ಸ್ವಾತಂತ್ರದಿಂದ ಮಾಯೆಯನ್ನು ವಿಸ್ತರಿಸಿ ನಿನ್ನ ಸ್ವರೂಪವನ್ನರಿಯದ ಮೂಢರಿಗೆ ಅನಾತ್ಮರೂಪವಾದ ಪ್ರಕೃತಿಯಲ್ಲಿರುವವನಂತೆ ತೋರುತಿದ್ದೀ ! ಎಲೈ ಸ್ವಾಮಿಯೆ, ಜನ್ಮರಹಿತನಾದ ನಿನಗೆ ದೇವತೆಗಳಲ್ಲುಂಟಾದ ವಾಮನಾದಿ ಜನ್ಮಗಳೂ ಋಷಿಗಳಲ್ಲುಂಟಾದ ನಾರದಾದಿ ಜನ್ಮಗಳೂ ಮನುಷ್ಯರಲ್ಲುಂಟಾದ ರಾಮಕೃಷ್ಣಾದಿ ಜನ್ಮಗಳೂ ತಿರ್ಯಗ್ಜಂತುಗಳಲ್ಲುಂಟಾದ ನರಸಿಂಹಾದಿ ಜನ್ಮಗಳೂ ಜಲಜಂತುಗಳಲ್ಲುಂಟಾದ ಮತ್ಸ್ಯಕೂರ್ಮಾದಿ ಜನ್ಮಗಳೂ ಅತಿ ಮತ್ತರಾದ ದುರ್ಜನರನ್ನು ನಿಗ್ರಹಿಸಲೋಸುಗವೂ ಸಜ್ಜನರನ್ನು ರಕ್ಷಿಸಲೋಸುಗವೂ ಉಂಟಾದವು ! ಅದ್ವಿತೀಯನಾದ ನಿನ್ನಲ್ಲಿ ಈ ನಾನಾವಿಧ ರೂಪಗಳು ಒಂದೊಂದು ಕಾರ್ಯನಿಮಿತ್ತವಾಗಿ ಸ್ವಾಧೀನವಾದ ಮಾಯೆಯಿಂದ ಕಲ್ಪಿಸಲ್ಪಡುವವೇ ಹೊರ್ತು ಮತ್ತೊಂದಲ್ಲ ! ಅಪರಿಚ್ಛಿನ್ನನಾಗಿ ಷಡ್ಗುಣೈಶ್ವರ್ಯ ಸಂಪ

ನ್ನನಾಗಿ ಪ್ರಕೃತಿಪುರುಷರಿಗೆ ನಿಯಾಮಕನಾಗಿ ಯೋಗೇಶ್ವರನಾದ ಎಲೈ ಶ್ರೀಕೃಷ್ಣದೇವನೆ, ನೀನು ಸ್ವಕೀಯವಾದ ಯೋಗಮಾಯೆಯನ್ನು ವಿಸ್ತಾರಂಗೈದು ಕ್ರೀಡಿಸುವೆಯಾದ್ದರಿಂದ ನಿನ್ನ ಲೀಲೆಗಳನ್ನು ಮೂರು ಲೋಕಗಳಲ್ಲಿ ಎಲ್ಲಿರುವದೆಂದೂ ಯಾವರೀತಿ ಇರುವದೆಂದೂ ಎಷ್ಟೆಂದೂ ಯಾವ ಸಮಯದಲ್ಲೆಂದೂ ಯಾವನೂ ತಿಳಿಯನು ! ನಿನ್ನ ಯೋಗಮಾಯಾವೈಭವವು ಚಿಂತಿಸಲಶಕ್ಯವಾದ್ದರಿಂದ ಅದನ್ನು ಯಾರಿಗೂ ತಿಳಿಯಲಾಗದು ! ಎಲೈ ಸ್ವಾಮಿಯೆ, ನಿತ್ಯಜ್ಞಾನಾನಂದಾತ್ಮಕನಾದ ಶರೀರವುಳ್ಳವನಾಗಿ ಅಪರಿಚ್ಛಿನ್ನನಾದ ನಿನ್ನಲ್ಲಿ ಮಾಯೆಯಿಂದ ಉತ್ಪತ್ತಿ ಲಯಗಳನ್ನೈದುತಲಿರುವದಾಗಿ ನಿತ್ಯಜ್ಞಾನಾನಂದಾತ್ಮಕವಾದ ಅಧಿಷ್ಠಾನದ ಬಲದಿಂದ ನಿತ್ಯವಾಗಿಯೂ ಸುಖಸ್ವರೂಪದಂತೆಯೂ ಚೇತನಸ್ವರೂಪದಂತೆಯೂ ತೋರುವ ಈ ಜಗತ್ತು ದೃಶ್ಯವಾದ್ದಾಗಿ ಸ್ವಪ್ನಸಮಾನವಾಗಿ ಸ್ವತಃ ತೋರುವಿಕೆಯಿಲ್ಲದಂಥಾದ್ದಾಗಿರುವದಾದ್ದರಿಂದ ಅಸತ್ಯವೇ ಸರಿ ! ಎಲೈ ಶ್ರೀಕೃಷ್ಣನೆ, ಲೋಕದಲ್ಲಿ ದೃಶ್ಯವಾದವೆಲ್ಲವು ಅಸತ್ಯವಾಗಿರುವವು ; ಆತ್ಮನಾದ ನೀನೊಬ್ಬನು ದೃಗ್ರೂಪನಾಗಿ ದೃಶ್ಯನಲ್ಲದೆ ಸತ್ಯಸ್ವರೂಪನಾಗಿದ್ದೀ ; ವಿಕಾರಯುಕ್ತವಾದವೆಲ್ಲವೂ ಅಸತ್ಯವು ; ನಿನ್ನಲ್ಲಿ ಜನ್ಮಾದಿ ಷಡ್ವಿಕಾರಗಳಿಲ್ಲ ; ನೀನು ಪುರುಷನಾಗಿ ಪ್ರಪಂಚರೂಪವಾದ ಕಾರ್ಯಕ್ಕಿಂತಲು ಪೂರ್ವದಲ್ಲಿಯೂ ಇದ್ದವನಾದಕಾರಣ ನಿನ್ನಲ್ಲಿ ಜನ್ಮವೆಂಬ ವಿಕಾರವಿಲ್ಲ ; ನೀನು ನಿತ್ಯನಾದ್ದರಿಂದ ಉತ್ಪತ್ತ್ಯಾನಂತರದಲ್ಲಿ ಅಸ್ತಿತ್ವವಿಕಾರವು ನಿನ್ನಲ್ಲಿಲ್ಲ ; ನೀನು ಅನಂತನೂ ಅದ್ವಯನೂ ಆದ್ದರಿಂದ ದೇಶಪರಿಚ್ಛೇದ ಕಾಲಪರಿಚ್ಛೇದ ವಸ್ತುಪರಿಚ್ಛೇದಗಳಿಲ್ಲದೆ ಪೂರ್ಣನಾಗಿರುವೆಯಾದಕಾರಣ ನಿನ್ನಲ್ಲಿ ವೃದ್ಧಿವಿಕಾರವಿಲ್ಲ ; ನಿರಂತರದಲ್ಲಿಯು ಸುಖಸ್ವರೂಪನಾದ್ದರಿಂದ ಪರಿಣಾಮವೆಂಬ ವಿಕಾರವು ನಿನ್ನಲ್ಲಿಲ್ಲ ; ಅಕ್ಷರಸ್ವರೂಪನಾದ್ದರಿಂದ ನಿನ್ನಲ್ಲಿ ಅಪಕ್ಷಯವೆಂಬ ವಿಕಾರವಿಲ್ಲ ; ಮುಕ್ತಸ್ವರೂಪನಾದ್ದರಿಂದ ನಿನ್ನಲ್ಲಿ ನಾಶವೆಂಬ ವಿಕಾರವಿಲ್ಲ ; ಉತ್ಪತ್ತಿ ಪ್ರಾಪ್ತಿ ವಿಕೃತಿ ಸಂಸ್ಕಾರಗಳೆಂಬ ಈ ನಾಲ್ಕು ಕ್ರಿಯೆಗಳಿಗೆ ನೀನು ವಿಷಯರೂಪನಲ್ಲ ; ನೀನು ಆದಿಕಾರಣನಾದ್ದರಿಂದ ನಿನಗೆ ಉತ್ಪತ್ತಿಯಿಲ್ಲ ; ನೀನು ಆತ್ಮನಾದಕಾರಣ ಕ್ರಿಯೆಯಿಂದಲಾದರೂ ಪ್ರಕಾಶವಾದಕಾರಣ ಜ್ಞಾನದಿಂದಲಾದರೂ ಪ್ರಾಪ್ಯನಲ್ಲ ; ನೀನು ಸ್ವತಏವ ಉಪಾಧಿಯ ದೆಸೆಯಿಂದ ಮುಕ್ತನಾದಕಾರಣ ಕುಟ್ಟಿಕೊಟ್ಟು ತೆಗೆಯುವದರಿಂದ ಧಾನ್ಯಗಳಿಗೆಂತು ವಿಕೃತಿಯುಂಟಾಗುವದೋ ಆ ರೀತಿ ಉಪಾಧಿಯನ್ನು ಪರಿಹರಿಸುವದರಿಂದ ನಿನಗೆ ವಿಕೃತಿಯುಂಟಾಗಲಾರದು ; ನೀನು ವಿಕಾರ್ಯನಲ್ಲ ; ನೀನು ಪೂರ್ಣನಾದಕಾರಣ ಅತಿಶಯವನ್ನುಂಟುಮಾಡುವದರಿಂದಲೂ ನಿರ್ಮಲನಾದಕಾರಣ ಕಲ್ಮಷವನ್ನು ಪರಿಹರಿಸುವದರಿಂದಲೂ ಸಂಸ್ಕಾರ್ಯನಲ್ಲ ; ನೀನು ಮುಕ್ತಸ್ವರೂಪನು ; ನಿನಗೆ ಜನ್ಮ ಅಸ್ತಿತ್ವ ವೃದ್ಧಿ ಪರಿಣಾಮ ಅಪಕ್ಷಯ ನಾಶಗಳೆಂಬ ಷಡ್ಭಾವ ವಿಕಾರಗಳಿಲ್ಲದ್ದರಿಂದ ನೀನೊಬ್ಬನೆ ಸತ್ಯಸ್ವರೂಪನು ; ಆದ್ದರಿಂದ ಸಮಸ್ತ ಜೀವಾತ್ಮರಿಗೂ ಮುಖ್ಯಾತ್ಮಸ್ವರೂಪನಾಗಿರುವ ನಿನ್ನನ್ನು ಪ್ರತ್ಯಗಾತ್ಮರೂಪದಿಂದ ಗುರುವೆಂದು ಸೂರ್ಯನ ದೆಶೆಯಿಂದ ಪಡೆಯಲ್ಪಟ್ಟ ಉಪನಿಷದರ್ಥಜ್ಞಾನವೆಂಬ ಚಕ್ಷುಸ್ಸಿನಿಂದ ನೋಡುವ ಮಹಾತ್ಮರು ಸಂಸಾರವೆಂಬ ಅನೃತಸಮುದ್ರವನ್ನು ದಾಟುವರು ; ಆ ಸಂಸಾರಕ್ಕೆ ಸರ್ಪವು ರಜ್ಜುವಿನಲ್ಲಿ ಅಜ್ಞಾನದಿಂದನುಸರಿಸಿ ಆ ಬಳಿಕ ಆ ರಜ್ಜುವಿನ ಜ್ಞಾನದಿಂದ ಅಲ್ಲೇ ಅಳಿವರೀತಿಯಲ್ಲಿ ಅಜ್ಞಾನದಿಂದುಂಟಾದ ದೇಹಾಭಿಮಾನದಿಂದ ದೇಹವನ್ನು ಆತ್ಮನೆಂದು ತಿಳಿಯುವ ಮೂಢರಿಗೆ ಅಜ್ಞಾನದಿಂದ ದೇಹೇಂದ್ರಿಯಾದಿ ಸಮಸ್ತ ಪ್ರಪಂಚವೂ ಉಂಟಾಗಿ ಕಡೆಯಲ್ಲಿ ದೇಹವು ಆತ್ಮನಲ್ಲವೆಂದೂ ಜ್ಞಾನಾನಂದಸ್ವರೂಪನಾಗಿರುವವನೇ ಆತ್ಮನೆಂದೂ ದೃಢಾಪರೋಕ್ಷಜ್ಞಾನವುಂಟಾಗಿ ಅಜ್ಞಾನವೂ ಅದರಿಂದುಂಟಾದ ಪ್ರಪಂಚವೂ ಅಧಿಷ್ಠಾನರೂಪನಾದ ಆತ್ಮನಲ್ಲೇ ಲಯವನ್ನೈದುವವು ; ಮತ್ತು ಸಂಸಾರದಿಂದಲೇ ಬಂಧವೂ ಅದರ ದೆಶೆಯಿಂದಲೇ ಮೋಕ್ಷವೂ ಎಂದು ಅಜ್ಞಾನಕಲ್ಪಿತಗಳಾಗಿ ಪ್ರಸಿದ್ಧಗಳಾಗಿರುವ ಎರಡೂ ಸಹ ಕಾಲತ್ರಯಬಾಧ್ಯನಾಗಿ ಸ್ವಪ್ರಕಾಶನಾಗಿರುವ ಆ ಆತ್ಮನಿಗಿಂತಲೂ ಅನ್ಯವಾದವಲ್ಲ ; ಸೂರ್ಯನಲ್ಲಿ ದಿವಾರಾತ್ರಿಗಳೆರಡೂ ಅಜ್ಞಾನಕಲ್ಪಿತಗಳಾಗಿರುವವೇ ಹೊರತು ಆತನಿಗಿಂತಲು ಪ್ರತ್ಯೇಕವಾಗಿದ ರೀತಿಯಲ್ಲಿ ಅಖಂಡಾನುಭವರೂಪನಾಗಿ ಶುದ್ಧಬುದ್ಧ ಮುಕ್ತಸ್ವರೂಪನಾದ ಆತ್ಮನಲ್ಲಿ ವಿಚಾರಂಗೈಯಲು ಅಜ್ಞಾನವೂ ಇಲ್ಲ — ಅದರಿಂದುಂಟಾದ ಬಂಧವೂ ಇಲ್ಲ ; ಆದಕಾರಣ ಪ್ರತ್ಯೇಕವಾದ ಜ್ಞಾನವೂ ಇಲ್ಲ ; ಅದರಿಂದುಂಟಾಗುವ ಮೋಕ್ಷವೂ ಇಲ್ಲ ; ಮತ್ತು ಆತ್ಮನಲ್ಲಿ ದೇಹಾದಿಗಳನ್ನಧ್ಯಾಸಂಗೈದು ಅದೇರೀತಿ ದೇಹಾದಿಗ

ಳಲ್ಲಿ ಆತ್ಮನನ್ನು ಅಧ್ಯಾಸಗೈದು ಮೂಢಜನರಿಂದ ಗೃಹದಲ್ಲಿ ನಷ್ಟವಾದ ವಸ್ತುವು ಅರಣ್ಯದಲ್ಲಿ ಹುಡುಕಲ್ಪಡುವಂತೆ ಈ ದೇಹೇಂದ್ರಿಯಾದಿಗಳಲ್ಲಿ ಗೂಢನಾಗಿರುವ ಆತ್ಮನನ್ನು ಹೊರಗೆ ಹುಡುಕಲ್ಪಡುವನು! ಕಟಕಟಾ—ಅವರ ಮೂಢತ್ವವು ಅತ್ಯಂತ ಆಶ್ಚರ್ಯಕರವು! ಎಲೈ ಪೂರ್ಣನಾದ ಶ್ರೀಕೃಷ್ಣದೇವನೆ, ಮೋಕ್ಷಾಪೇಕ್ಷೆಯುಳ್ಳ ಸತ್ಪುರುಷರು ಚಿಜ್ಜಡಾತ್ಮಕವಾದ ಶರೀರ ಮಧ್ಯದಲ್ಲಿ ಅತತ್ವರೂಪವಾದ ಜಡವನ್ನು ಆತ್ಮನಲ್ಲವೆಂದು ತಿರಸ್ಕಾರಗೈಯುತ ಸದೂಪನಾದ ನಿನ್ನಲ್ಲೇ ಹುಡುಕುತ್ತಿಧಾರೆ; ಅಂಥಾ ನಿನ್ನನ್ನು ತಿಳಿಯುವದೇ ಸಾಕು! ಸಮೀಪದಲ್ಲಿರುವ ಹಗ್ಗದಲ್ಲಿ ಅಜ್ಞಾನದಿಂ ತೋರುವ ಸರ್ಪವನ್ನು ನಿರಾಕರಿಸುವದೇ ಹೊರ್ತು ಸತ್ಯವಾಗಿರುವ ಆ ಹಗ್ಗವನ್ನು ಸತ್ಪುರುಷರು ಕೂಡ ಅರಿಯರು! ಎಲೈ ಹರಿಯೆ, ಜ್ಞಾನವು ಹಸ್ತದಿಂದ ಗ್ರಹಿಸಲು ಯೋಗ್ಯವಾದಾತೆ ಹೇಳಲ್ಪಟ್ಟಿತು; ಆದಾಗ್ಯು ನಿನ್ನ ಚರಣಾರವಿಂದ ಮಧ್ಯದಲ್ಲಿ ಏಕದೇಶ ಯಾವ ಪ್ರಸಾದ ಲೇಶವುಂಟೋ ಅದರಿಂದನುಗ್ರಹಿಸಲ್ಪಟ್ಟ ಪುರುಷನು ಭಗವಂತನಾದ ನಿನ್ನ ಮಹಿಮೆಯ ತತ್ವವನ್ನು ತಿಳಿಯುವನು; ಮಿಕ್ಕವರು ಬಹುಕಾಲವಾದರೂ ಆ ತತ್ವಾಂಶವನ್ನು ನಿರಾಕರಿಸುವದರಿಂದ ಅದನ್ನು ತಿಳಿಯಲಾರರು! ಎಲೈ ಸ್ವಾಮಿಯೆ, ಸೃಷ್ಟಿಗಧಿಕಾರಿಯಾದ ಬ್ರಹ್ಮಜನ್ಮದಲ್ಲಾದರೂ ತಿರ್ಯಗ್ಜಂತುಗಳ ಜನ್ಮದಲ್ಲಾದರೂ ಯಾವ ಭಾಗ್ಯದಿಂದ ನಿನ್ನ ಭಕ್ತರ ಮಧ್ಯದಲ್ಲಿ ಒಬ್ಬನಾಗಿ ನಿನ್ನ ಪಾದಪಲ್ಲವವನ್ನು ಸೇವಿಸುವೆನೋ ಅಂಥಾ ಮಹಾಭಾಗ್ಯವು ನನಗುಂಟಾಗಲಿ! ದೇವಾದಿಗಳ ಜನ್ಮಕ್ಕಿಂತಲು ನಿನ್ನ ಭಕ್ತಿಯುಳ್ಳವರ ಜನ್ಮವೇ ಶ್ರೇಷ್ಠವು! ಎಲೈ ಸರ್ವವ್ಯಾಪಕನಾದ ಶ್ರೀಕೃಷ್ಣನೆ, ನಿನಗೆ ತೃಪ್ತಿಯನ್ನುಂಟುಮಾಡುವದಕ್ಕೆ ಸಮಸ್ತವಾದ ಯಜ್ಞಗಳೂ ಸಮರ್ಥಗಳಲ್ಲ; ಅಂಥಾ ನೀನು ಕರುಗಳ ರೂಪದಿಂದಲೂ ಪುತ್ರರ ರೂಪದಿಂದಲೂ ಪ್ರತಿಕ್ಷಣದಲ್ಲಿಯೂ ತೃಪ್ತಿಪಡುತಲಿರುವನಾಗಿ ಗೋವುಗಳ ಮತ್ತು ಗೋಪಾಂಗನೆಯರ ಅಮೃತರೂಪವಾದ ಸ್ತನಗಳ ಕ್ಷೀರವನ್ನು ಸಂತೋಷದಿಂದ ಪಾನಗೈಯುತಿರುವದರಿಂದ ಈ ವ್ರಜದಲ್ಲಿರುವ ಗೋವುಗಳೂ ಗೋಪಾಂಗನೆಯರೂ ಅತ್ಯಂತ ಧನ್ಯರು! ಎಲೈ ಶ್ರೀಕೃಷ್ಣನೆ, ಪರಿಪೂರ್ಣನಾಗಿ ಪರಮಾನಂದರೂಪನಾಗಿ ಆದಿಕಾರಣನಾಗಿ ಪರಬ್ರಹ್ಮಸ್ವರೂಪನಾದ ನೀನು ಪರಮಮಿತ್ರನಾಗಿರುವದರಿಂದ ಗೋಕುಲದಲ್ಲಿರುವ ಜನರ ಭಾಗ್ಯವೇ ಭಾಗ್ಯವು! ಕಟಕಟಾ—ಅವರ ಭಾಗ್ಯಕ್ಕೆ ಸಮಾನವಿಲ್ಲ! ಎಲೈ ಶ್ರೀಕೃಷ್ಣನೆ, ಶ್ರೋತ್ರಾದಿ ದಶೇಂದ್ರಿಯಗಳು ಮನೋಬುದ್ಧಿ ಅಹಂಕಾರಗಳು ಎಂಬ ಹದಿಮೂರಕ್ಕೂ ಕ್ರಮವಾಗಿ ಒಂದೊಂದಕ್ಕೆ ಅಭಿಮಾನಿಗಳಾದ ದಿಕ್ಕುಗಳು ವಾಯುವು ಸೂರ್ಯನು ವರುಣನು ಅಶ್ವಿನೀದೇವತೆಗಳು ಅಗ್ನಿಯು ಇಂದ್ರನು ಉಪೇಂದ್ರನು ಮೃತ್ಯುವು ಪ್ರಜಾಪತಿಯು ಚಂದ್ರನು ನಾನು ರುದ್ರನು—ಈ ಹದಿಮೂರುಮಂದಿಯೂ ಯಾವಕಾರಣ ಈ ಗೋಕುಲವಾಸಿಗಳಾದ ಜನರ ಇಂದ್ರಿಯಗಳೆಂಬ ಪಾತ್ರೆಗಳಿಂದ ಹದಿನಾಲ್ಕನೇಯವನಾಗಿ ಚಿತ್ತಕ್ಕೆ ಅಭಿಮಾನಿಯಾಗಿ ವಾಸುದೇವನಾದ ನಿನ್ನ ಪಾದಪದ್ಮಗಳಲ್ಲಿರುವ ಮನೋಹರವಾದ ಮಕರಂದವೆಂಬ ಅಮೃತವನ್ನು ಬಾರಿಬಾರಿಗೂ ಪಾನಗೈಯುವಷ್ಟು ಮಹಾ ಭಾಗ್ಯವಂತರಾಗದಕಾರಣ ಈ ಗೋಕುಲವಾಸಿಗಳಾದ ಜನರ ಭಾಗ್ಯದ ಮಹಿಮೆಯನ್ನು ಹೇಳಲು ಯಾರೂ ಸಮರ್ಥರಲ್ಲ! ಎಲೈ ಶ್ರೀಹರಿಯೆ, ನಿನ್ನ ಪಾದಪದ್ಮಗಳ ರಜಸ್ಸು ವೇದಗಳಿಂದ ಅರಸಲ್ಪಡುವದೇ ಹೊರ್ತು ಪ್ರತ್ಯಕ್ಷವಾಗಿ ಕಾಣಲ್ಪಡದು; ಅಂಥಾ ಭಗವಂತನಾದ ನೀನು ಗೋಕುಲವಾಸಿಗಳಾದವರಿಗೆ ಸಮಸ್ತ ಜೀವನರೂಪನಾಗಿರುವದರಿಂದ ಈ ಲೋಕದಲ್ಲಿ—ಈ ಬೃಂದಾವನದಲ್ಲಿ—ಈ ಗೋಕುಲದಲ್ಲಿ ಗೋಕುಲವಾಸಿಗಳಲ್ಲಿ ನಿನ್ನ ಪಾದಧೂಳಿಗಳಿಂದ ಅಭಿಷೇಕವನ್ನುಂಟುಮಾಡುವ ಜನ್ಮವು ಮಹಾ ಭಾಗ್ಯವುಳ್ಳದ್ದಾದಕಾರಣ ಅಂಥಾ ಜನ್ಮವು ನನಗುಂಟಾಗಲಿ! ಎಲೈ ಕೃಷ್ಣನೆ, ತಮ್ಮ ಗೃಹಗಳು ದ್ರವ್ಯಗಳು ಪುತ್ರರು ಪ್ರಿಯರು ಆಪ್ತರು ದೇಹಗಳು ಬಂಧುಗಳು ಪ್ರಾಣಗಳು ಮೊದಲಾದವನ್ನು ನಿನಗೋಸ್ಕರವಾಗಿಯೇ ಉಂಟಾಗಿರುವ ಈ ನಂದಗೋಕುಲದ ಗೋಪಾಲ ಗೋಪಸ್ತ್ರೀಯರಿಗೆ ನಿನ್ನಲ್ಲಿರುವ ಭಕ್ತಿಯಿಂದ ನೀನು ಅವರ ಋಣಗ್ರಸ್ತನಂತಿದ್ದೀ; ಅವರಿಗೆ ಸರ್ವಫಲಾತ್ಮಕನಾದ ನಿನಗಿಂತಲು ಅನ್ಯವಾದ ಯಾವ ಫಲವನ್ನು ನೀನು ದಯೆಮಾಡುವೆಯೆಂದು ನನ್ನ ಚಿತ್ತವು ಸರ್ವತ್ರ ಸಂಚರಿಸಿ ವಿಚಾರಿಸುತ ಇವರಿಗೆ ಅನುರೂಪವಾದ ಮತ್ತೊಂದು ಫಲವನ್ನರಿಯದೆ ಮೋಹವನ್ನೈದುತಲಿದೆ! ಭಕ್ತರ ವೇಷವನ್ನು ಧರಿಸಿ ನಟನಗೈದ ಮಾತ್ರದಿಂದಲೇ ಪಾಪಿಷ್ಟಳಾದ ಪೂತನೆಯು ತನ್ನ ಸಹೋದರರಾದ ಅಘಾಸುರ ಬಕಾಸುರರೊ

ಡನೆ ನಿನ್ನನ್ನು ಹೊಂದಿದಳು; ಯಾರ ಗೃಹ ಮೊದಲಾದ ಸಮಸ್ತ ಪದಾರ್ಥಗಳೂ ನಿನಗೆ ಅರ್ಪಿಸಲ್ಪಟ್ಟಿರುವವೋ ಅಂಥಾ ಭಕ್ತಿಯುಕ್ತರಾದ ಗೋಕುಲವಾಸಿಗಳಿಗೆ ಮುಕ್ತರೂಪನಾದ ನಿನ್ನನ್ನೇ ನೀನು ಕೊಟ್ಟಾಗ್ಯೂ ಸಾಕಾಗಲಾರದು; ಆದಕಾರಣ ನೀನು ಇವರ ಭಕ್ತಿಯಿಂದ ಇವರಿಗೆ ಋಣಗ್ರಸ್ತನೆ ಸರಿ! ಎಲೈ ಕೃಷ್ಣದೇವನೆ, ಲೋಕದಲ್ಲಿ ಜನರು ಎಷ್ಟುಪರ್ಯಂತವು ನಿನ್ನ ಭಕ್ತರಾಗದಿರುವರೋ ಅಷ್ಟುಪರ್ಯಂತವು ಅವರಿಗೆ ಕಾಮಕ್ರೋಧಾದಿಗಳುಂಟಾಗಿ ಚೋರರಾಗಿರುವರು; ಅವರ ಗೃಹಗಳು ಬಂಧನಾಗಾರವಾಗಿರುವವು; ಮೋಹವು ಅಷ್ಟುಪರ್ಯಂತವು ಅವರ ಕಾಲುಗಳಿಗೆ ಸಂಕಲೆರೂಪವಾಗಿರುವದು; ನಿನ್ನ ಭಕ್ತರಾಗಿರುವ ಜನರಿಗೆ ಬಂದ ವೇಳೆ ಕಾಮಕ್ರೋಧಾದಿಗಳುಂಟಾದಾಗ್ಯೂ ಅವು ನಿನ್ನಲ್ಲೇ ನಿಷ್ಠೆಯುಳ್ಳವಾಗಿ ಅವರ ಸಂಸಾರಬಂಧವನ್ನು ಪರಿಹರಿಸುವದು; ಆದಕಾರಣ ಯತಿಗಳಲ್ಲಿ ಉತ್ತಮವಾದ ವಿಶೇಷವಿಲ್ಲ; ಯತಿಗಳಿಗಿಂತಲು ನಿನ್ನ ಭಕ್ತರಲ್ಲಿ ನಿನ್ನ ಭಜನವೆಂಬ ವಿಶೇಷವು ಅಧಿಕವಾಗಿರುವದು! ಎಲೈ ಸರ್ವವ್ಯಾಪಕನಾದ ಶ್ರೀಕೃಷ್ಣಮೂರ್ತಿಯೆ, ಲೋಕದಲ್ಲಿ ಶರಣಾಗತರಾದ ಜನಸಮೂಹಕ್ಕೆ ಆನಂದಪರಂಪರೆಯನ್ನು ವಿಸ್ತಾರಂಗೈಯಲೋಸುಗ ನೀನು ನಿಷ್ಪ್ರಪಂಚನಾದಾಗ್ಯೂ ಪ್ರಪಂಚವನ್ನನುಸರಿಸಿ ನಟನಂಗೈಯುತಲಿದ್ದೀ! ಆದ್ದರಿಂದ ಇಂಥಾ ಕಪಟವಾದ ಪುತ್ರತ್ವಾದಿ ನಟನದಿಂದ ಗೋಕುಲವಾಸಿಗಳ ಭಕ್ತಿಗೆ ನೀನು ಋಣಮುಕ್ತನಾಗಲಾರೆ! ಎಲೈ ಪ್ರಭುವಾದ ಶ್ರೀಕೃಷ್ಣನೆ, ನಿನ್ನ ಮಹಿಮೆಯನ್ನು ತಿಳಿಯುವದಾಗಿ ನುಡಿಯುವವರು ತಿಳಿಯಲಿ! ಬಹಳ ವಚನಗಳನ್ನು ಹೇಳುವದರಿಂದೇನು ಫಲವು! ನನ್ನ ಮನೋವಾಕ್ಕಾಯಗಳಿಗೆ ನಿನ್ನ ಮಹಿಮೆಯು ಗೋಚರವಲ್ಲ! ಎಲೈ ಶ್ರೀಕೃಷ್ಣಮೂರ್ತಿಯೆ, ನೀನು ಸರ್ವಸಾಕ್ಷಿಯಾದ್ದರಿಂದ ನಿನ್ನ ಮಹಿಮೆಯನ್ನೂ ನಿನ್ನ ಜ್ಞಾನಬಲಾದಿಗಳನ್ನೂ ತಿಳಿದಿದ್ದೀ! ನಾನು ನೀನು ಸಮಸ್ತ ಲೋಕಗಳಿಗೂ ನಾಥನೆಂಬದಷ್ಟುಮಾತ್ರವನ್ನೇ ಬಲ್ಲೆನು; ನನ್ನದೆಂಬ ಮಮತೆಗೆ ವಿಷಯವಾಗಿರುವ ಈ ಜಗತ್ತೂ ನನ್ನ ಶರೀರವೂ ನನ್ನಿಂದ ನಿನಗೆ ಅರ್ಪಿಸಲ್ಪಟ್ಟವು; ನನಗೆ ಅನುಜ್ಞೆಯನ್ನು ಕೊಡು; ಯಾದವರ ವಂಶವೆಂಬ ಪದ್ಮಕ್ಕೆ ಪ್ರೀತಿಯನ್ನುಂಟುಮಾಡುವದರಿಂದ ಸೂರ್ಯನಿಗೆ ಸಮಾನನಾಗಿಯೂ ಭೂಮಿಯು ದೇವತೆಗಳು ಬ್ರಾಹ್ಮಣರು ಗೋವುಗಳು ಎಂಬ ಸಮುದ್ರಕ್ಕೆ ಅಭಿವೃದ್ಧಿಯನ್ನುಂಟುಮಾಡುವದರಿಂದ ಪೂರ್ಣಚಂದ್ರನಿಗೆ ಸಮಾನನಾಗಿಯೂ ಭೂಮಿಯಲ್ಲಿರುವ ರಾಕ್ಷಸರಾದ ಕಂಸಾದಿಗಳಿಗೆ ಉದ್ಭವಿಸಿದಾಗಲೇ ಭಯವನ್ನುಂಟುಮಾಡಿದ್ದರಿಂದ ತನ್ನ ಉದಯದಿಂದ ನಿಶಾಚರರಿಗೆ ಭಯವನ್ನುಂಟುಮಾಡುವಂಥಾ ಸೂರ್ಯನಿಗೆ ಸಮಾನನಾಗಿಯೂ ಸೂರ್ಯನು ಮೊದಲಾದ ಸಮಸ್ತ ದೇವತೆಗಳಿಗೂ ಪೂಜ್ಯನಾಗಿಯೂ ಇರುವ ಭಗವಂತನಾದ ಶ್ರೀಕೃಷ್ಣನೆ, ಕಲ್ಪಪರಿಯಂತವು ನಿನಗೆ ನಮಸ್ಕಾರವು" ಎಂದು ನಮಸ್ಕಾರಂಗೈದನು!

ಎಲೈ ಪರೀಕ್ಷಿದ್ರಾಯನೆ, ಜಗತ್ತಿಗೆ ಸೃಷ್ಟಿಕರ್ತನಾದ ಬ್ರಹ್ಮದೇವನು ಪರಿಪೂರ್ಣಸ್ವರೂಪನಾಗಿ ಅತ್ಯಂತ ಇಷ್ಟನಾದ ಶ್ರೀಕೃಷ್ಣದೇವನನ್ನು ಈರೀತಿ ಸ್ತೋತ್ರಂಗೈದು ಮೂರುಬಾರಿ ಪ್ರದಕ್ಷಿಣಮಾಡಿ ಆತನ ಪಾದಗಳಿಗೆ ನಮಸ್ಕರಿಸಿ ತನ್ನ ಸ್ಥಾನವಾದ ಸತ್ಯಲೋಕವನ್ನೈದಿದನು; ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಬ್ರಹ್ಮದೇವನಿಂದ ಕೊಡಲ್ಪಟ್ಟ ಪೂರ್ವದಲ್ಲಿದ್ದ ಕರುಗಳನ್ನು ಕರೆದುಕೊಂಡು ಬಂದು ವರುಷಕ್ಕೆ ಹಿಂದೆ ತಾವು ಊಟಮಾಡುತಿದ್ದ ಆ ಮರಳುದಿಣ್ಣೆಗೆ ಬಂದು ಅಲ್ಲಿ ನಿಜವಾದ ಗೋಪಬಾಲಕರನ್ನು ಕಂಡನು! ಎಲೈ ಪರೀಕ್ಷಿದ್ರಾಯನೆ, ಯಾವ ಗೋಪಾಲಬಾಲಕರಿಗೆ ತಮ್ಮ ಪ್ರಾಣೇಶನಾದ ಶ್ರೀಕೃಷ್ಣನಿಲ್ಲದಿದ್ದರೆ ಹೊರ್ತು ಬಂದು ಕ್ಷಣವು ಸಂವತ್ಸರಕ್ಕಿಂತಲು ಅಧಿಕವಾಗಿರುವದೊ ಅಂಥಾ ಬಾಲಕರು ಶ್ರೀಕೃಷ್ಣನ ಮಾಯೆಯಿಂದ ಮೋಹಿತರಾಗಿ ಬಂದು ಸಂವತ್ಸರವು ಕಳೆದರೂ ಅರ್ಧಕ್ಷಣ ಕಳೆದಹಾಗೆ ತಿಳಿದರು! ಮಾಯೆಯಿಂದ ಮೋಹಿತವಾದ ಜಗತ್ತು ಬಾರಿಬಾರಿಗೂ ಮರೆಯಲ್ಪಟ್ಟ ಆತ್ಮಸ್ವರೂಪವುಳ್ಳದ್ದಾಗಿರುವ ರೀತಿಯಲ್ಲಿ ಮಾಯೆಯಿಂ ಮೋಹಿತವಾದ ಚಿತ್ತವುಳ್ಳವರು ಯಾವದನ್ನಾದರು ಮರೆಯುವರು! ಆದ್ದರಿಂದ ಆತನ ಸ್ನೇಹಿತರಾದ ಆ ಗೋಪಾಲಬಾಲಕರು ಶ್ರೀಕೃಷ್ಣನನ್ನು ಕುರಿತು "ಎಲೈ ಮಿತ್ರನೇ, ಅತಿ ಶೀಘ್ರದಿಂದ ನೀನು ಕರುಗಳನ್ನು ಕರೆದುಕೊಂಡು ಬಂದೆ; ನಿನ್ನನ್ನು ಬಿಟ್ಟು ಬಂದು ಕಬಳವಾದರೂ ನಮ್ಮಿಂದ ಭೋಜನಂಗೈಯಲ್ಪಡಲಿಲ್ಲ; ಇಲ್ಲಿಬಂದು ಚಿಂತಾರಹಿತನಾಗಿ ಭೋಜನಮಾಡು" ಎಂದು ನುಡಿದರು.

ಶ್ರೀಕೃಷ್ಣನು ಮುಗುಳುನಗೆಯುಳ್ಳವನಾಗಿ ಆ ಬಾಲಕರೊಡಗೂಡಿ ಭೋಜನಂಗೈದು ಅವರಿಗೆ ಆ ಅಜಗರದ ಚರ್ಮವನ್ನು ತೋರಿಸಿ ನವಿಲುಗರಿಗಳಿಂದಲೂ ಪುಷ್ಪಗಳಿಂದಲೂ ವನದಲ್ಲಿರುವ ಗೈರಿಕಾದಿ ಧಾತುಗಳಿಂದಲೂ ವಿಚಿತ್ರವಾಗಿ ಅಲಂಕರಿಸಲ್ಪಟ್ಟ ದೇಹವುಳ್ಳವನಾಗಿ ಉತ್ಕೃಷ್ಟವಾದ ಕೊಳಲು ಕೊಂಬುಗಳ ಧ್ವನಿಗಳಿಂದುಂಟಾದ ಉತ್ಸವದೊಡಗೂಡಿದವನಾಗಿ ಅತ್ಯಂತ ಲಾಲನೆಗಳಿಂದ ಕರುಗಳನ್ನು ಕರೆಯುತ ಸಂಗಡಬರುತಿದ್ದ ಗೋಪಬಾಲಕರಿಂದ ಗಾನಮಾಡಲ್ಪಡುತ್ತಿರಲು ಪಾವನವಾದ ಕೀರ್ತಿಯುಳ್ಳವನಾಗಿ ಗೋಪಸ್ತ್ರೀಯರ ನೇತ್ರಗಳಿಗೆ ಉತ್ಸವರೂಪವಾದ ದರ್ಶನವುಳ್ಳವನಾಗಿ ಗೋಕುಲವನ್ನೈದಿದನು ; ಆಗ ಆ ಗೋಪಾಲಬಾಲಕರು ಗೋಕುಲದಲ್ಲಿದ್ದ ಗೋಪಾಲಕರನ್ನೂ ಗೋಪಸ್ತ್ರೀಯರನ್ನೂ ಕುರಿತು ಯಶೋದೆಗೆ ಆನಂದಕರವಾಗಿ ಪುತ್ರನಾದ ಶ್ರೀಕೃಷ್ಣನಿಂದ ವನದಲ್ಲಿ ಮಹಾಸರ್ಪವು ಆಗಲೇ ಸಂಹರಿಸಲ್ಪಟ್ಟಿತೆಂದೂ ತಾವು ಆತನಿಂದ ಮೃತ್ಯುರೂಪವಾದ ಆ ಮಹಾಸರ್ಪದದೆಸೆಯಿಂದ ರಕ್ಷಿಸಲ್ಪಟ್ಟರೆಂದೂ ಒಂದು ಸಂವತ್ಸರದ ಹಿಂದೆ ನಡೆವ ವೃತ್ತಾಂತವನ್ನು ಆಗಲೇ ನಡೆದಂತೆ ಹೇಳಿದರು—ಎಂದು ಶುಕಮುನಿಯು ನುಡಿದನು.

ಆ ವೃತ್ತಾಂತವನ್ನು ಕೇಳಿ ಪರೀಕ್ಷಿದ್ರಾಯನು—ಎಲೈ ಶುಕಮುನಿಯೆ, ಗೋಕುಲವಾಸಿಗಳಿಗೆ ತಮ್ಮ ಪುತ್ರರಲ್ಲಿಯೂ ಉಂಟಾಗದಂಥಾ ಪ್ರೇಮಾತಿಶಯವು ಅನ್ಯರಾದ ಯಶೋದಾದೇವಿ ನಂದಗೋಪರಿಗೆ ಪುತ್ರನಾದ ಶ್ರೀಕೃಷ್ಣನಲ್ಲಿ ಹ್ಯಾಗೆ ಉಂಟಾಯಿತು ? ಅದನ್ನು ನನಗೆ ನಿರೂಪಿಸು—ಎಂದು ಕೇಳಿದನು.

ಶುಕಮುನಿಯು ಆತನನ್ನು ಕುರಿತು—ಎಲೈ ಅರಸೆ, ಲೋಕದಲ್ಲಿ ಸಮಸ್ತ ಪ್ರಾಣಿಗಳಿಗೂ ಆತ್ಮನೇ ಅತ್ಯಂತ ಇಷ್ಟನಾಗಿರುವನು ; ಅನ್ಯವಾದ ಪುತ್ರಧನಾದಿಗಳು ಆತ್ಮನಲ್ಲಿ ಸಹಜವಾಗಿರುವ ಪ್ರೀತಿಯಿಂದಲೆ ಇಷ್ಟವಾಗುವವೇ ಹೊರ್ತು ಸ್ವತಃ ಇಷ್ಟವಾಗಲಾರವು ! ಎಲೈ ಅರಸೆ, ಪ್ರಾಣಿಗಳಿಗೆ ಅಹಂಕಾರಕ್ಕೆ ವಿಷಯವಾದ ತಮ್ಮ ದೇಹದಲ್ಲಿ ಸ್ನೇಹವಿರುವರೀತಿ ಪುತ್ರ ಧನ ಗೃಹಾದಿಗಳಲ್ಲಿ ಮಮತೆಗೆ ವಿಷಯವಾದ ಸ್ನೇಹವಿರುವದಿಲ್ಲ ! ಎಲೈ ರಾಜಶ್ರೇಷ್ಠನೆ, ದೇಹವೇ ಆತ್ಮನೆಂದು ವಾದಂಗೈಯುವ ಮೂಢರಿಗೆ ದೇಹವೇ ಅತಿ ಪ್ರಿಯವಾಗಿರುವ ರೀತಿಯಲ್ಲಿ ದೇಹವನ್ನನುಸರಿಸಿಕೊಂಡಿರುವ ಪುತ್ರಾದಿಗಳು ಅತಿ ಪ್ರಿಯರಲ್ಲ ; ದೇಹವು ಮಮತೆಗೆ ವಿಷಯವಾಗಿದ್ದಾಗ್ಯೂ ಮೃತಿಯು ಸನ್ನಿಹಿತವಾದರೆ ಜೀವಿಸಬೇಕೆಂದು ಜೀವನದಲ್ಲಿ ದೃಢವಾದ ಆಶೆಯುಳ್ಳದ್ದಾಗಿರುವಕಾರಣ ಅದು ಆತ್ಮನಂತೆ ಅತಿ ಪ್ರಿಯವಾದ್ದಲ್ಲ! ಎಲೈ ಅರಸೆ, ಸಮಸ್ತ ಪ್ರಾಣಿಗಳಿಗೂ ಆತ್ಮನೇ ಪ್ರಿಯನಾಗಿರುವನು ; ಆತನಿಗೋಸ್ಕರವೇ ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವೂ ಇಷ್ಟವಾಗಿರುವದೇಹೊರ್ತು ಸ್ವತಃ ಇಷ್ಟವಾದ್ದಲ್ಲ ! ಎಲೈ ಅರಸೇ, ಶ್ರೀಕೃಷ್ಣನನ್ನು ಸಮಸ್ತ ಜೀವರಿಗೂ ಮುಖ್ಯನಾದ ಆತ್ಮನನ್ನಾಗಿ ತಿಳೀ ; ಅಂಥಾ ಶ್ರೀಕೃಷ್ಣನು ಲೋಕಹಿತಾರ್ಥವಾಗಿ ತನ್ನ ಮಾಯೆಯಿಂದ ಗೋಕುಲದಲ್ಲಿ ಅವತರಿಸಿ ಮನುಷ್ಯನಂತೆ ತೋರುತಿದ್ದನು ; ಆತನು ಕೇವಲ ದೇಹಿಗಳಿಗೆಮಾತ್ರವೇ ಆತ್ಮನಲ್ಲ; ಜಡಗಳಿಗೂ ಆತ್ಮನು ; ಪರಮಾರ್ಥದೃಷ್ಟಿಯಿಂದ ಶ್ರೀಕೃಷ್ಣನನ್ನು ಜಗತ್ಕಾರಣನೆಂದು ತಿಳಿಯುವ ಜ್ಞಾನಿಗಳಿಗೆ ಚರಾಚರರೂಪವಾದ ಸರ್ವಪ್ರಪಂಚವೂ ಭಗವಂತನ ಸ್ವರೂಪವೆಂದು ತೋರುವದು ; ಭಗವಂತನಿಗಿಂತಲು ಅನ್ಯವಾದ ವಸ್ತುವು ಸ್ವಲ್ಪವಾದರೂ ಇಲ್ಲ ; ಸಮಸ್ತ ಭೂತಗಳಿಗೂ ಮೂಲಕಾರಣವಾದ ವಸ್ತುವೇ ಪರಮಾರ್ಥವೆಂದು ನಿರೂಪಿಸಲ್ಪಡುವದು ; ಅಂಥಾ ಮೂಲಕಾರಣವಾದ ವಸ್ತುವಿಗೂ ಭಗವಂತನಾದ ಶ್ರೀಕೃಷ್ಣನು ಮೂಲಕಾರಣನಾದಕಾರಣ ಆತನಿಗಿಂತಲು ಅನ್ಯವಾದ ವಸ್ತುವು ತೋರಲ್ಪಟ್ಟರೂ ಆತನ ಸ್ವರೂಪವೇ ಸರಿ ! ಎಲೈ ಅರಸೆ, ಆದಕಾರಣ ಮಹಾತ್ಮರಿಗೆ ಆಶ್ರಯವಾದ ಪುಣ್ಯಕರವಾದ ಕೀರ್ತಿಯುಳ್ಳ ಶ್ರೀಕೃಷ್ಣನ ಪಾದಪಲ್ಲವವೆಂಬ ನಾವೆಯನ್ನು ಆಶ್ರಯಿಸಿಕೊಂಡಿರುವ ಭಕ್ತರಿಗೆ ಸಂಸಾರವೆಂಬ ಸಮುದ್ರವು ಕರುವಿನ ಹೆಜ್ಜೆಯಂತೆ ಸುಖದಿಂದ ದಾಟಲು ಸಾಧ್ಯವಾಗುವದು : ಮತ್ತು ಅವರಿಗೆ ಉತ್ತಮವಾದ ವೈಕುಂಠವು ಸ್ಥಾನವಾಗುವದು ; ವಿಪತ್ತಿಗಳು ಯಾವಸಮಯದಲ್ಲೂ ಉಂಟಾಗಲಾರವು ! ಎಲೈ ಅರಸೆ, ಯಾವ ಕೌಮಾರ ವಯಸ್ಸಿನಲ್ಲಿ ಶ್ರೀಕೃಷ್ಣನಿಂದ ಮಾಡಲ್ಪಟ್ಟ ಅಘಾಸುರ ಸಂಹಾರಾದಿ ವ್ಯಾಪಾರವು ಪೌಗಂಡವಯಸ್ಸಿನಲ್ಲಿ ಗೋಪಾಲಬಾಲಕರಿಂದ

ಗೋಕುಲದಲ್ಲಿ ಹೇಳಲ್ಪಡುವದಕ್ಕೆ ನಿಮಿತ್ತವಾದ ಸಮಸ್ತಾರ್ಥವೂ ನಿನಗೆ ನನ್ನಿಂದ ನಿರೂಪಿಸಲ್ಪಟ್ಟಿತು ; ಮುರವೈರಿಯಾದ ಶ್ರೀಕೃಷ್ಣನು ಆರೀತಿ ಮಿತ್ರರೊಡಗೂಡಿ ವಿಹಾರಂಗೈದ ಕ್ರಮವನ್ನೂ ಅಘಾಸುರನ ಸಂಹಾರವನ್ನೂ ವನಭೋಜನವನ್ನೂ ಜಡಪ್ರಪಂಚಕ್ಕಿಂತಲು ಅನ್ಯವಾದ ಶುದ್ಧಸತ್ವಾತ್ಮಕನಾಗಿ ಗೋಪಬಾಲಕರರೂಪವನ್ನು ಧರಿಸಿದ ಕ್ರಮವನ್ನೂ ಮಹತ್ತಾದ ಬ್ರಹ್ಮಸ್ತುತಿಯನ್ನೂ ಪಠನಮಾಡುವ ಪುರುಷರು ಸಮಸ್ತ ಪುರುಷಾರ್ಥಗಳನ್ನೂ ಪಡೆಯುವರು ! ಎಲೈ ಅರಸೆ, ಈ ಪ್ರಕಾರದಲ್ಲಿ ಗೋಕುಲದಲ್ಲಿ ಶ್ರೀಕೃಷ್ಣನು ಮೊದಲಾದ ಗೋಪಾಲಕರು ಕಣ್ಣುಗಳನ್ನು ಮುಚ್ಚಿ ಆಡುವದರಿಂದಲೂ ಹರಿಯುವ ನೀರಿಗೆ ಕಟ್ಟೆಯನ್ನು ಕಟ್ಟಿ ಸೇತುಬಂಧನವೆಂದು ಕ್ರೀಡಿಸುವದರಿಂದಲೂ ಮರ್ಕಟಗಳಂತೆ ಒಂದು ವೃಕ್ಷದಿಂದ ಮತ್ತೊಂದು ವೃಕ್ಷಕ್ಕೆ ಹಾರುವದರಿಂದಲೂ ತಮ್ಮ ಕೌಮಾರ ವಯಸ್ಸನ್ನು ಕಳೆದರು !

## ೧೫ನೇ ಅಧ್ಯಾಯ.

### ಧೇನುಕಾಸುರನ ವಧೆ.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ಪೌಗಂಡವೆಂಬ ವಯಸ್ಸನ್ನೈದಿದ ಬಲರಾಮ ಕೃಷ್ಣರೂ ಗೋವುಗಳನ್ನು ಪಾಲನಂಗೈಯುವದರಲ್ಲಿ ಯೋಗ್ಯವಾದ ವಯಸ್ಸೂ ಬಲವೂ ಉಳ್ಳವರಾಗಿ ನಂದಗೋಕುಲದಲ್ಲಿದ್ದು ಗೋವುಗಳನ್ನು ತಮ್ಮ ಸ್ನೇಹಿತರಾದ ಗೋಪಾಲಬಾಲಕರೊಡಗೂಡಿ ಅಲ್ಲಲ್ಲಿ ಮೇಯಿಸುತ ಬೃಂದಾವನವನ್ನು ತಮ್ಮ ಪಾದಪದ್ಮವಿನ್ಯಾಸದಿಂದ ಅತ್ಯಂತ ಪುಣ್ಯಕ್ಷೇತ್ರಕರವಾಗಿ ಮಾಡುತಿದ್ದರು ! ಒಂದು ದಿನದಲ್ಲಿ ಬಲಭದ್ರನೊಡಗೂಡಿದ್ದ ಶ್ರೀಕೃಷ್ಣದೇವನು ವೇಣುಗಾನವನ್ನು ಗೈಯ್ಯುತ ತನ್ನ ಕೀರ್ತಿಯನ್ನು ಸ್ತೋತ್ರಮಾಡುತಿದ್ದ ಗೋಪಾಲಬಾಲಕರಿಂದ ಪರಿವೃತನಾಗಿ ವಿಹರಿಸಲಿಚ್ಛೆಯುಳ್ಳವನಾಗಿ ಗೋವುಗಳನ್ನು ಮುಂದುಮಾಡಿಕೊಂಡು ಅವುಗಳಿಗೆ ಅತ್ಯಂತ ಹಿತಕರವಾಗಿ ಸಮಸ್ತ ಪುಷ್ಪಜಾತಿಗಳಿಗೂ ಉತ್ಪತ್ತಿಸ್ಥಾನವಾಗಿದ್ದ ಆ ವನವನ್ನು ಪ್ರವೇಶಮಾಡಿ ಮನೋಹರಗಳಾದ ತುಂಬಿಗಳಿಂದಲೂ ಮೃಗಗಳಿಂದಲೂ ಪಕ್ಷಿಗಳಿಂದಲೂ ವ್ಯಾಪ್ತವಾಗಿ ಮಹಾತ್ಮರ ಮನಸ್ಸಿನಂತೆ ಅತಿ ನಿರ್ಮಲವಾದ ಜಲವುಳ್ಳ ಸರೋವರವುಳ್ಳದ್ದಾಗಿ ಅತಿ ಶೀತಳವಾದ್ದಾಗಿ ಕಮಲಗಂಧದೊಡಗೂಡಿದ ಪರಿಮಳಯುಕ್ತವಾದ್ದಾಗಿ ಮಂದಗತಿಯುಕ್ತವಾದ ವಾಯುವಿನಿಂದ ಸೇವಿಸಲ್ಪಟ್ಟ ಆ ವನವನ್ನು ನೋಡುತ ಆಯಾ ಪ್ರದೇಶಗಳಲ್ಲಿ ಫಲಪುಷ್ಪಗಳ ಅಧಿಕವಾದ ಭಾರದಿಂದ ಬೊಗ್ಗಿ ಕೆಂಪಾದ ತಳಿರುಗಳ ಕಾಂತಿಯೊಡಗೂಡಿ ತನ್ನ ಪಾದಗಳನ್ನು ಸ್ಪರ್ಶಿಸುತಲಿದ್ದ ಶಾಖೆಗಳುಳ್ಳ ವೃಕ್ಷಗಳನ್ನು ನೋಡಿ ಸಂತೋಷದಿಂದ ನಗುತ ಅಣ್ಣನಾದ ಬಲರಾಮನನ್ನು ತನ್ನಹಾಗೆ ಭಾವಿಸಿ ಆತನನ್ನು ಕುರಿತು "ಎಲೈ ದೇವತಾಶ್ರೇಷ್ಠನಾದ ಅಣ್ಣನೇ, ಈ ಬೃಂದಾವನದಲ್ಲಿರುವ ವೃಕ್ಷಗಳು ಯಾವ ಪಾಪದಿಂದ ತಮಗೆ ವೃಕ್ಷಜನ್ಮವುಂಟಾಯಿತೊ ಅಂಥಾ ಪಾಪವನ್ನು ಪರಿಹರಿಸಿಕೊಳ್ಳಲೋಸುಗ ಪುಷ್ಪಫಲಗಳೆಂಬ ಪೂಜಾದ್ರವ್ಯಗಳನ್ನು ಧರಿಸಿಕೊಂಡು ದೇವತೆಗಳಿಂದ ಪೂಜಿಸಲ್ಪಟ್ಟ ನಿನ್ನ ಪಾದಾರವಿಂದವನ್ನು ತಮ್ಮ ಶಿರೋಭಾಗಗಳಿಂದ ನಮಸ್ಕಾರಂಗೈಯ್ಯುತ್ತಿವೆ ! ಎಲೈ ದೋಷರಹಿತನಾಗಿ ಆದಿಪುರುಷನಾದ ಶ್ರೀಬಲದೇವನೆ, ಈ ತುಂಬಿಗಳು ಸಮಸ್ತ ಲೋಕಗಳನ್ನೂ ಪಾವನಂಗೈಯುತಲಿರುವ ನಿನ್ನ ಯಶಸ್ಸನ್ನು ಗಾನಂಗೈಯುತ ಅಡಿಗಡಿಗೂ ನಿನ್ನನ್ನು ಸೇವಿಸುತಲಿವೆಯಾದ್ದರಿಂದ ಇವು ತುಂಬಿಗಳಲ್ಲ ; ಬಹುತರ ಭಾಗವತರಲ್ಲಿ ಮುಖ್ಯರಾದ ಮುನಿಗಳು ಬೃಂದಾವನದಲ್ಲಿ ಮನುಷ್ಯವೇಷದಿಂದ ಗೂಢನಾಗಿದ್ದರೂ ತಮಗೆ ಇಷ್ಟದೇವತೆಯಾದ ನಿನ್ನನ್ನು ಭ್ರಮರವೇಷದಿಂದ ತಾವೂ ಗೂಢವಾಗಿ ಭಜಿಸುತ್ತಿಧಾರೆ ! ಎಲೈ ಸ್ತೋತ್ರಂಗೈಯಲು ಯೋಗ್ಯನಾದ ಶ್ರೀಬಲರಾಮನೆ, ನವಿಲುಗಳು ಈ ವನವನ್ನೈದಿರುವ ನಿನ್ನನ್ನು ನೋಡಿ ಸಂತೋಷದಿಂದ ನರ್ತನಂಗೈಯುತಲಿವೆ ; ಹೆಣ್ಣುಹುಲ್ಲೆಗಳು ಗೋಪಸ್ತ್ರೀಯರಂತೆ ತಮ್ಮ ಸವಿನೋಟದಿಂದ ನಿನಗೆ ಪ್ರೀತಿಯನ್ನುಂಟುಮಾಡುತಲಿವೆ ; ಕೋಗಿಲೆ ಸಮೂಹಗಳು ತಮ್ಮ ಮಧುರವಚನಗಳಿಂದ ನಮಗೆ ಸಂತೋಷವನ್ನುಂಟುಮಾಡುತಲಿವೆ ; ಆದ್ದರಿಂದ ಈ ವನವಾಸಿಗಳಾದ

ನವಿಲು ಮೊದಲಾದ ಪ್ರಾಣಿಗಳು ಅತ್ಯಂತ ಪುಣ್ಯಶಾಲಿಗಳು! ಸ್ವಗೃಹದಲ್ಲಿರುವದನ್ನು ತಮ್ಮ ಗೃಹಕ್ಕೆ ಬರುವ ಮಹಾತ್ಮರಿಗೆ ಸಮರ್ಪಿಸುವದು ಸತ್ಪುರುಷರ ಸ್ವಭಾವವು; ಈ ವನಭೂಮಿಯು ತೃಣಗಳೂ ಓಷಧಿಗಳೂ ನಿನ್ನ ಪಾದಾರವಿಂದವನ್ನು ಸ್ಪರ್ಶಿಸುತಲಿವೆಯಾದಕಾರಣ ಅತ್ಯಂತ ಪುಣ್ಯಶಾಲಿಗಳು; ವೃಕ್ಷಲತೆಗಳು ನಿನ್ನ ನಖಗಳಿಂದ ಸ್ಪರ್ಶನಂಗೈಯಲ್ಪಡುವ ಕಾರಣ ಅತ್ಯಂತ ಪುಣ್ಯಶಾಲಿಗಳು; ಈ ನದಿಗಳೂ ಪರ್ವತಗಳೂ ಪಕ್ಷಿಗಳೂ ಮೃಗಗಳೂ ದಯಾರಸಯುಕ್ತಗಳಾದ ನಿನ್ನ ನೇತ್ರಗಳಿಂದ ನೋಡಲ್ಪಡುವ ಕಾರಣ ಅತ್ಯಂತ ಪುಣ್ಯಶಾಲಿಗಳು; ಲಕ್ಷ್ಮೀದೇವಿಯು ಅತ್ಯಂತವಾಗಿ ಅಭಿಲಾಷೆಪಡುವಂಥಾ ನಿನ್ನ ವಕ್ಷಸ್ಥಳದಿಂದ ಆಲಿಂಗನಂಗೈಯಲ್ಪಡುವರಾದಕಾರಣ ಗೋಪಸ್ತ್ರೀಯರು ಅತ್ಯಂತ ಪುಣ್ಯಶಾಲಿಗಳು!" ಅಂದನು.

ಎಲೈ ಪರೀಕ್ಷಿದ್ರಾಯನೆ, ಶ್ರೀಕೃಷ್ಣನು ಈ ರೀತಿಯಲ್ಲಿ ತನ್ನ ಅಣ್ಣನಾದ ಬಲರಾಮನನ್ನು ಕುರಿತು ಹೇಳಿ ಗೋವರ್ಧನ ಪರ್ವತದ ಸಮೀಪದಲ್ಲಿರುವ ನದೀತೀರಗಳಲ್ಲಿ ಗೋವುಗಳನ್ನು ಮೇಯಿಸುತ ಅನುಚರರಾದ ಗೋಪಾಲಕರೊಡಗೂಡಿ ಕಾಂತಿಯುಕ್ತವಾದ ಬೃಂದಾವನದಲ್ಲಿ ಅತಿ ಸಂತುಷ್ಟವಾದ ಮನಸ್ಸುಳ್ಳವನಾಗಿ ರಮಿಸುತಿದ್ದನು; ಒಂದು ಕಡೆಯಲ್ಲಿ ಅತ್ಯಂತ ಮದಯುಕ್ತಗಳಾದ ತುಂಬಿಗಳು ಗಾನಂಗೈಯುತ್ತಿರಲು ಅನುಚರರಾದ ಗೋಪಬಾಲಕರಿಂದ ಗಾನಂಗೈಯಲ್ಪಡುತಲಿರುವ ಚರಿತ್ರವುಳ್ಳವನಾಗಿ ಬಲರಾಮನೊಡಗೂಡಿ ತಾನೂ ಗಾನಂಗೈವನು; ಮತ್ತೊಂದು ಕಡೆಯಲ್ಲಿ ಕಲಹಂಸಗಳ ಧ್ವನಿಯನ್ನು ಕೇಳಿ ತಾನೂ ಹಾಗೆ ಧ್ವನಿಗೈವನು; ಒಂದು ಕಡೆಯಲ್ಲಿ ನರ್ತನಂಗೈಯುತಲಿರುವ ನವಿಲುಗಳನ್ನು ಕಂಡು ತನ್ನ ಮಿತ್ರರನ್ನು ನಗಿಸುತ ಅವುಗಳಿಗಭಿಮುಖವಾಗಿ ನರ್ತನಂಗೈಯುವನು; ಒಂದು ಕಡೆಯಲ್ಲಿ ಮೇಘದಂತೆ ಗಂಭೀರವಾದ ಗೋವುಗಳಿಗೂ ಗೋಪಾಲಕರಿಗೂ ಮನೋಹರವಾದ ತನ್ನ ವಾಕ್ಕಿನಿಂದ ದೂರವಾಗಿರುವ ಗೋವುಗಳನ್ನು ಅವುಗಳ ನಾಮಧೇಯಗಳಿಂದ ಪ್ರೀತಿಯಿಂದ ತನ್ನ ಸಮೀಪಕ್ಕೆ ಕರೆಯುವನು; ಒಂದು ಕಡೆಯಲ್ಲಿ ಚಕೋರ ಕ್ರೌಂಚ ಹಂಸ ಭಾರದ್ವಾಜ ಮಯೂರಗಳು ಮೊದಲಾದ ಪಕ್ಷಿಗಳು ಧ್ವನಿಗೈಯುತಿದ್ದರೆ ತಾನೂ ಅವುಗಳನ್ನನುಸರಿಸಿ ಧ್ವನಿಗೈಯುವನು; ಒಂದು ಸಮಯದಲ್ಲಿ ವನದಲ್ಲಿರುವ ಮೃಗಗಳ ಮಧ್ಯದಲ್ಲಿ ತಾನೂ ವ್ಯಾಘ್ರ, ಸಿಂಹಗಳಿಂದ ಭೀತಿಹೊಂದಿದವನಂತೆ ಅಡಗಿಕೊಂಡಿರುವನು; ಮತ್ತೊಂದುವೇಳೆಯಲ್ಲಿ ಕ್ರೀಡೆಗಳಿಂದ ಬಳಲಿದವನಾಗಿ ಒಬ್ಬ ಗೋಪಾಲಕನ ತೊಡೆಯನ್ನು ತಲೆದಿಂಬಾಗಿ ಮಾಡಿಕೊಂಡು ಮಲಗಿರುವ ಅಣ್ಣನಾದ ಬಲರಾಮನ ಪಾದಗಳನ್ನೊತ್ತುವದು ಮೊದಲಾದ ಸೇವೆಗಳಿಂದ ಶ್ರಮರಹಿತನಾಗಿ ಮಾಡುವನು! ರಾಮಕೃಷ್ಣರು ಪರಸ್ಪರ ಒಂದು ಕಡೆಯಲ್ಲಿ ನರ್ತನಂಗೈಯುವರು; ಒಂದು ಕಡೆಯಲ್ಲಿ ಅಭಿನಯಂಗೈಯುವರು; ಮತ್ತೊಂದು ಕಡೆಯಲ್ಲಿ ಯುದ್ಧವನ್ನು ಮಾಡುತಲಿರುವ ಗೋಪಬಾಲಕರನ್ನು ನೋಡಿ ಅವರ ಹಸ್ತಗಳನ್ನಿಡಿದು ಬಹು ಚನ್ನಾಯಿತೆಂದು ಶ್ಲಾಘಿಸುವರು! ಒಂದು ಸಮಯದಲ್ಲಿ ಶ್ರೀಕೃಷ್ಣನು ಕ್ರೀಡೆಯಿಂದ ಸ್ನೇಹಿತರೊಡನೆ ಬಾಹುಯುದ್ಧಂಗೈಯುವದರಿಂದುಂಟಾದ ಶ್ರಮಪೀಡಿತನಾಗಿ ಒಂದು ವೃಕ್ಷಮೂಲವನ್ನಾಶ್ರಯಿಸಿಕೊಂಡು ಚಿಗುರುಗಳಿಂದ ಕಲ್ಪಿಸಲ್ಪಟ್ಟ ಹಾಸಿಗೆಯಲ್ಲಿ ಒಬ್ಬ ಗೋಪಾಲಬಾಲಕನ ತೊಡೆಯನ್ನು ತಲೆದಿಂಬಾಗಿ ಮಾಡಿಕೊಂಡು ಮಲಗಿರುವನು; ಆ ಸಮಯದಲ್ಲಿ ಗೋಪಾಲಕರಲ್ಲಿ ಕೆಲವರು ಮಹಾತ್ಮನಾದ ಶ್ರೀಕೃಷ್ಣನ ಪಾದಗಳನ್ನೊತ್ತುತ್ತಿರುವರು; ಕೆಲವರು ಚಿಗುರು ಮೊದಲಾದವುಗಳಿಂದ ನಿರ್ಮಿಸಲ್ಪಟ್ಟ ಬೀಸಣಿಗೆಗಳಿಂದ ಬೀಸುತ್ತಿರುವರು; ಮತ್ತು ಕೆಲವರು ಸ್ನೇಹದಿಂದ ಶೀತಳವಾದ ಹೃದಯವುಳ್ಳವರಾಗಿ ಮಹಾತ್ಮನಾದ ಶ್ರೀಕೃಷ್ಣನಿಗೆ ಅನುರೂಪವಾಗಿ ಮನೋಹರವಾದ ಚರಿತ್ರೆಗಳನ್ನು ಮೆಲ್ಲನೆ ಗಾನಂಗೈಯುತ್ತಿರುವರು! ಎಲೈ ಅರಸೆ, ಶ್ರೀಲಕ್ಷ್ಮೀದೇವಿಯಿಂದ ಲಾಲಿಸಲ್ಪಟ್ಟ ಚಿಗುರಿನಂತೆ ಅತಿ ಕೋಮಲವಾದ ಪಾದಪದ್ಮಗಳುಳ್ಳ ಶ್ರೀಕೃಷ್ಣನು ಈ ರೀತಿಯಲ್ಲಿ ತನ್ನ ಮಾಯೆಯಿಂದ ಗೋಪನಂಗೈಯಲ್ಪಟ್ಟ ನಿಜಸ್ವಭಾವವುಳ್ಳವನಾದಾಗ್ಯೂ ಆಗಾಗ ಅದ್ಭುತಗಳಾದ ಈಶ್ವರವ್ಯಾಪಾರಗಳನ್ನು ತೋರಿಸುತ ಗೋಪಾಲಬಾಲಕರೊಡಗೂಡಿ ತಾನೂ ಪ್ರಾಕೃತಬಾಲಕನಂತೆ ವಿಹರಿಸುತಿದ್ದನು! ಒಂದು ದಿವಸ ರಾಮಕೃಷ್ಣರ ಸ್ನೇಹಿತರಾದ ಶ್ರೀದಾಮನು ಸುಬಲನು ಬಾಲಕೃಷ್ಣನು ಎಂಬವರು ಮೊದಲಾದ ಗೋಪಾಲಬಾಲಕರು ಅತಿಸ್ನೇಹ

ದಿಂದ ಅವರನ್ನು ಕುರಿತು “ಎಲೈ ಮಹಾ ಭುಜಬಲಶಾಲಿಯಾದ ರಾಮನೆ, ಎಲೈ ದುಷ್ಟರನ್ನು ನಿಗ್ರಹಿಸುವ ಶ್ರೀಕೃಷ್ಣದೇವನೆ, ಇಲ್ಲಿಗೆ ಸಮೀಪಪ್ರದೇಶದಲ್ಲಿ ತಾಳವೃಕ್ಷಗಳ ಪಙ್ಕ್ತಿಗಳಿಂದ ವ್ಯಾಪ್ತವಾಗಿರುವ ಮಹತ್ತಾದ ಒಂದು ವನವಿದೆ; ಆ ವನದಲ್ಲಿ ಪಕ್ವವಾಗಿ ಬೀಳುತಲಿರುವ ಮತ್ತು ಕೆಳಕ್ಕೆ ಬಿದ್ದಿರುವ ಅಪರಿಮಿತಗಳಾದ ಫಲಗಳಿವೆ; ಆ ಫಲಗಳು ದುರಾತ್ಮನಾದ ಧೇನುಕನೆಂಬ ಒಬ್ಬ ಅಸುರನಿಂದ ಅನ್ಯರಿಗೆ ದೊರೆಯದಂತೆ ನಿರೋಧನಂಗೈಯಲ್ಪಟ್ಟವೆ! ಎಲೈ ಬಲರಾಮನೆ, ಎಲೈ ಶ್ರೀಕೃಷ್ಣನೆ, ಅತ್ಯಂತ ಪರಾಕ್ರಮವುಳ್ಳ ಆ ಧೇನುಕಾಸುರನು ಗಾರ್ದಭರೂಪವನ್ನು ಧರಿಸಿಕೊಂಡು ತನಗೆ ಸಮಾನಬಲವುಳ್ಳವರಾಗಿ ಅನೇಕರಾದ ತನ್ನ ಬಂಧುಗಳಿಂದ ಪರಿವೃತನಾಗಿಧಾನೆ; ಮನುಷ್ಯರನ್ನು ಭಕ್ಷಿಸುವ ದುಷ್ಟನಾದ ಆ ಅಸುರನ ದೆಸೆಯಿಂದ ಭಯಪಟ್ಟಿರುವ ಮನುಷ್ಯರಿಂದಲೂ ಪಶುಗಳಿಂದಲೂ ಪಕ್ಷಿಸಮೂಹಗಳಿಂದಲೂ ತ್ಯಜಿಸಲ್ಪಟ್ಟಿರುವ ಆ ತಾಳವನವು ಈಗ ಒಬ್ಬರಿಂದಲೂ ಪ್ರವೇಶಂಗೈಯಲ್ಪಡುವದಿಲ್ಲ; ಆ ವನದಲ್ಲಿ ಎಂದಿಗೂ ಭಕ್ಷಿಸಲ್ಪಡದಿರುವ ಮತ್ತು ಪರಿಮಳಯುಕ್ತಗಳಾದ ತಾಳಫಲಗಳಿವೆ! ಎಲೈ ರಾಮಕೃಷ್ಣರೆ ನೋಡಿ, ಆ ವನದದೆಸೆಯಿಂದ ಅತಿ ಮನೋಹರವಾದ ಈ ಪರಿಮಳವು ಸರ್ವತ್ರ ವ್ಯಾಪ್ತವಾಗಿ ನಮ್ಮಿಂದ ಗ್ರಹಿಸಲ್ಪಡುತಲಿದೆ; ಆ ಪರಿಮಳದಿಂದ ಅತ್ಯಂತ ಆಸಕ್ತವಾಗಿ ಮಾಡಲ್ಪಟ್ಟ ಮನಸ್ಸುಳ್ಳ ನಮಗೆ ಆ ಫಲಗಳಲ್ಲಿ ಮಹತ್ತಾದ ಅಪೇಕ್ಷೆಯುಂಟಾಗಿದೆ; ಆದಕಾರಣ ಆ ಫಲಗಳನ್ನು ನಮಗೆ ಕೊಡುವವರಾಗಿ; ಈ ಅರ್ಥವು ನಿಮ್ಮ ಚಿತ್ತಕ್ಕೆ ಸಮ್ಮತವಾದರೆ ಈಗಲೇ ಹೊರಡೋಣ” ಅಂದರು.

ಎಲೈ ಅರಸೆ ಕೇಳು: ಅನಂತರದಲ್ಲಿ ಸಮರ್ಥರಾದ ರಾಮಕೃಷ್ಣರು ಈರೀತಿ ನುಡಿದ ಮಿತ್ರರಾದ ಗೋಪಾಲಬಾಲಕರ ವಚನವನ್ನು ಕೇಳಿ ನಗುತ ಅವರಿಗೆ ಪ್ರಿಯವನ್ನುಂಟುಮಾಡುವ ಇಚ್ಛೆಯಿಂದ ಅವರಿಂದ ಪರಿವೃತರಾಗಿ ಮಹತ್ತಾದ ಆ ತಾಳವನವನ್ನೈದಿದರು; ಅನಂತರದಲ್ಲಿ ಬಲರಾಮನು ಆ ವನವನ್ನು ಪ್ರವೇಶಿಸಿ ಮಹಾಗಜದಂತೆ ತನ್ನ ಭುಜಬಲದಿಂದ ತಾಳವೃಕ್ಷಗಳನ್ನು ಕಂಪಿಸುವಂತೆ ಮಾಡುತ ಫಲಗಳನ್ನು ಕೆಡಹಿದನು; ಆಗ ಗಾರ್ದಭರೂಪವನ್ನು ಧರಿಸಿದ್ದ ಧೇನುಕಾಸುರನು ಕೆಳಕ್ಕೆ ಬಿದ್ದ ತಾಳಫಲಗಳ ಶಬ್ದವನ್ನು ಕೇಳಿ ರೋಷದೊಡನೆ ವೃಕ್ಷಗಳೊಡನೆ ಕೂಡಿರುವ ಆ ಭೂಪ್ರದೇಶವನ್ನು ಅತ್ಯಂತ ಕಂಪಿಸುವಂತೆ ಮಾಡುತ ಗಾರ್ದಭಧ್ವನಿಯಂಗೈಯುತ ಎರಡು ಹಿಂಗಾಲುಗಳಿಂದಲೂ ವೇಗದಿಂದ ಬಲಭದ್ರನ ವಕ್ಷಸ್ಥಳದಲ್ಲಿ ಒದ್ದು ಸುತ್ತಲು ಓಡಾಡುತ ಅತ್ಯಂತ ಕೋಪಯುಕ್ತನಾಗಿ ಪುನಹ ಆತನ ಸಮೀಪಕ್ಕೆ ಬಂದು ಅಭಿಮುಖನಾಗಿ ನಿಂತು ಆತನನ್ನು ಮತ್ತೂ ಒದ್ದನು; ಬಲರಾಮನು ಒಂದು ಹಸ್ತದಿಂದ ಅವನ ಎರಡು ಹಿಂಗಾಲುಗಳನ್ನೂ ಹಿಡಿದು ತಿರುಗಿಸಿ ಅದರಿಂದ ತ್ಯಜಿಸಲ್ಪಟ್ಟ ಜೀವವುಳ್ಳ ಧೇನುಕನನ್ನು ಒಂದು ತಾಳವೃಕ್ಷದ ಅಗ್ರದಲ್ಲೆತ್ತಿ ಬಿಸಾಟನು; ಮಹತ್ತಾದ ಅಗ್ರಭಾಗವುಳ್ಳ ಆ ತಾಳವೃಕ್ಷವು ಆ ಧೇನುಕಾಸುರನ ಶರೀರ ಪೆಟ್ಟಿನಿಂದ ಬೀಳುತ ತನ್ನ ಪಾರ್ಶ್ವದಲ್ಲಿದ್ದ ಮತ್ತೊಂದು ತಾಳವೃಕ್ಷವನ್ನು ಅತ್ಯಂತ ಕಂಪಿಸುವಂತೆ ಮಾಡುತ ಮುರಿದುಬಿತ್ತು; ಆ ವೃಕ್ಷವೂ ಭಗ್ನವಾಗಿ ಬೀಳುತ ಮತ್ತೊಂದು ವೃಕ್ಷವನ್ನು ಕೆಡಹಿತು; ಈ ರೀತಿ ಬಲರಾಮನಿಂದ ಲೀಲಾಮಾತ್ರದಿಂದ ಎಸೆಯಲ್ಪಟ್ಟ ಆ ಧೇನುಕನ ದೇಹದಿಂದ ಹೊಡೆಯಲ್ಪಟ್ಟ ಒಂದು ತಾಳವೃಕ್ಷದಿಂದ ಮಿಕ್ಕ ತಾಳವೃಕ್ಷಗಳೂ ಒಂದಕೊಂದು ತಾಕಿ ಪ್ರಚಂಡವಾಯುವಿನಿಂದ ಬೀಳುವಂತೆ ಕಂಪಿಸುತ ಮುರಿದುಬಿದ್ದವು! ಎಲೈ ಅರಸೆ, ತಂತುಗಳಲ್ಲಿ ವಸ್ತ್ರವು ಉದ್ದವಾಗಿಯೂ ಅಡ್ಡವಾಗಿಯೂ ತಗಲಿಕೊಂಡಿರುವ ರೀತಿಯಲ್ಲಿ ಸಮಸ್ತ ಜಗತ್ತೂ ಸರ್ವತ್ರ ಅನುವರ್ತಿಸಿಕೊಂಡಿರುವಂಥಾ ಭಗವಂತನಾಗಿ ಜಗದೀಶ್ವರನಾಗಿ ಅನಂತನಾದ ಶ್ರೀಬಲರಾಮನಲ್ಲಿ ಇಂಥಾ ಮಹಾ ಸಾಮರ್ಥ್ಯವಿರುವದು ಆಶ್ಚರ್ಯವಲ್ಲ! ಅನಂತರದಲ್ಲಿ ಆ ಧೇನುಕಾಸುರನಿಗೆ ಬಂಧುಗಳಾದ ಗರ್ದಭಗಳೆಲ್ಲವು ನಷ್ಟನಾದ ಧೇನುಕನನ್ನು ಕಂಡು ಅತ್ಯಂತ ಕೋಪಯುಕ್ತವಾಗಿ ಬಲರಾಮನನ್ನೂ ಶ್ರೀಕೃಷ್ಣನನ್ನೂ ಅಟ್ಟಿಕೊಂಡು ಬಂದವು; ಅವರು ಹಾಗೆ ತಮ್ಮನ್ನಟ್ಟಿಕೊಂಡುಬರುತಿದ್ದ ಗರ್ದಭರೂಪವನ್ನು ಧರಿಸಿದ್ದ ಅಸುರರ ಹಿಂಗಾಲುಗಳನ್ನಿಡಿದೆತ್ತಿ ತಾಳವೃಕ್ಷಗಳಮೇಲೆ ಬೀಸಿ ಎಸೆದರು; ಆಗ ಆ ತಾಳಫಲಸಮೂಹದಿಂದಲೂ ಪ್ರಾಣರಹಿತರಾದ ಅಸುರರ ದೇಹಗಳಿಂದಲೂ ಆ ವೃಕ್ಷಗಳ ಭಗ್ನವಾದ ಅಗ್ರಗಳಿಂದಲೂ ವ್ಯಾಪ್ತವಾದ ಆ ಪ್ರದೇ

ಕವು ನಾನಾವರ್ಣಗಳಾದ ಮೇಘಗಳಿಂದ ವ್ಯಾಪ್ತವಾದ ಆಕಾಶದಂತೆ ಪ್ರಕಾಶಿಸಿತು ! ಅಂತರಿಕ್ಷದಲ್ಲಿದ್ದ ದೇವತಾದಿಗಳು ರಾಮಕೃಷ್ಣರ ಸಾಮರ್ಥ್ಯವನ್ನು ನೋಡಿ ದಿವ್ಯಪುಷ್ಪಗಳನ್ನು ವರ್ಷಿಸುತ ಭೇರಿ ಮೊದಲಾದ ವಾದ್ಯಗಳನ್ನು ಧ್ವನಿಗೈಸಿದರು ! ಈ ಪ್ರಕಾರವಾಗಿ ಧೇನುಕನು ಮಡಿದಮೇಲೆ ಜನಗಳು ಭಯರಹಿತರಾಗಿ ಆ ವನದಲ್ಲಿ ಸಂಚರಿಸುತ ತಾಳಫಲಗಳನ್ನು ಭಕ್ಷಿಸುತಿದ್ದರು ; ಗೋವುಗಳು ಭಯವನ್ನು ಬಿಟ್ಟು ಅಲ್ಲಿದ್ದ ತೃಣಗಳನ್ನು ಮೇಯುತಿದ್ದವು !

ಅನಂತರದಲ್ಲಿ ಕಮಲದಳಗಳಂತಿರುವ ನೇತ್ರಗಳುಳ್ಳವನಾಗಿ ಮಹಾತ್ಮರಿಂದ ಶ್ರವಣಗೈಯಲ್ಪಡುತಲಿರುವ ಚರಿತ್ರವುಳ್ಳ ಶ್ರೀಕೃಷ್ಣನು ಬಲರಾಮನೊಡಗೂಡಿ ಅನುಚರರಾದ ಗೋಪಬಾಲಕರಿಂದ ಸ್ತೋತ್ರಗೈಯಲ್ಪಡುತ ಗೋಕುಲವನ್ನು ಪ್ರವೇಶಿಸಿದನು ; ಆ ಸಮಯದಲ್ಲಿ ಗೋಪಸ್ತ್ರೀಯರು ಬಲರಾಮ ಕೃಷ್ಣರನ್ನು ನೋಡುವದರಲ್ಲಿ ಅತ್ಯಂತ ಕುತೂಹಲಯುಕ್ತಗಳಾದ ನೇತ್ರಗಳುಳ್ಳವರಾಗಿ ಗೋಧೂಳಿಗಳಿಂದ ವ್ಯಾಪ್ತವಾದ ಕೇಶಗಳಲ್ಲಿ ಕಟ್ಟಲ್ಪಟ್ಟ ನವಿಲುಗರಿಗಳೂ ವನಪುಷ್ಪಗಳ ಮಾಲಿಕೆಗಳೂ ಉಳ್ಳವರಾಗಿ ಮನೋಹರವಾದ ನೋಟವೂ ರಮಣೀಯವಾದ ಮುಗುಳುನಗೆಯೂ ಉಳ್ಳವರಾಗಿ ವೇಣುಗಾನವನ್ನು ಮಾಡುತಲೂ ತಮ್ಮ ಅನುಚರರಾದ ಗೋಪಬಾಲಕರಿಂದ ಗಾನಂಗೈಯಲ್ಪಡುತಲೂ ಬರುತಿದ್ದ ಕೀರ್ತಿಯುಳ್ಳ ರಾಮಕೃಷ್ಣರನ್ನು ಎದಿರುಗೊಂಡು ಶ್ರೀಕೃಷ್ಣನ ಮುಖವೆಂಬ ಪದ್ಮದಲ್ಲಿರುವ ಸೌಂದರ್ಯವೆಂಬ ಮಕರಂದವನ್ನು ತಮ್ಮ ನೇತ್ರಗಳೆಂಬ ತುಂಬಿಗಳಿಂದ ಪಾನಂಗೈಯುತ ಹಗಲಿನಲ್ಲಿ ಆತನನ್ನು ಕಾಣದಿದ್ದುದರಿಂದುಂಟಾದ ವಿರಹತಾಪವನ್ನು ತ್ಯಾಗಂಗೈದರು ! ಶ್ರೀಕೃಷ್ಣನು ಲಜ್ಜೆಯೊಡಗೂಡಿರುವ ಮುಗುಳುನಗೆಯಿಂದ ಅವರಿಗೆ ಪ್ರೀತಿಯುಂಟಾಗುವಂತೆ ಕಡೆಗಣ್ಣ ನೋಟದಿಂದ ಆ ಗೋಪಸ್ತ್ರೀಯರಿಂದ ಮಾಡಲ್ಪಟ್ಟ ಪೂಜೆಯನ್ನು ಸ್ವೀಕರಿಸಿ ಗೋಕುಲವನ್ನು ಪ್ರವೇಶಮಾಡಿದನು ; ಆಗ ಪುತ್ರವಾತ್ಸಲ್ಯವುಳ್ಳ ಯಶೋದಾದೇವಿಯೂ ರೋಹಿಣೀದೇವಿಯೂ ರಾಮಕೃಷ್ಣರಿಗೆ ಅವರ ಇಷ್ಟಾರ್ಥಗಳನ್ನಿತ್ತು ಲಾಲಿಸಿದರು ; ಆ ಬಳಿಕ ರಾಮಕೃಷ್ಣರೀರ್ವರು ಮೈಸೇವೆ ಮಜ್ಜನಾದಿಗಳಿಂದ ಮಾರ್ಗಶ್ರಮೆಯನ್ನು ಪರಿಹರಿಸಿಕೊಂಡು ದಿವ್ಯದುಕೂಲಗಳನ್ನು ಧರಿಸಿಕೊಂಡು ದಿವ್ಯಗಂಧಗಳಿಂದಲೂ ದಿವ್ಯ ಪುಷ್ಪಮಾಲಿಕೆಗಳಿಂದಲೂ ಅಲಂಕರಿಸಲ್ಪಟ್ಟು ತಮ್ಮ ತಾಯಿಗಳಿಂದ ಬಡಿಸಲ್ಪಟ್ಟ ಸ್ವಾದುವಾದ ಮೃಷ್ಟಾನ್ನವನ್ನು ಭೋಜನಂಗೈದು ಲಾಲಿಸಲ್ಪಟ್ಟವರಾಗಿ ಸರ್ವೋತ್ತಮವಾದ ಹಾಸಿಗೆಯಲ್ಲಿ ಪವಳಿಸಿ ಸುಖದಿಂದ ನಿದ್ರೆಗೈದರು !

ಎಲೈ ಪರೀಕ್ಷಿದ್ರಾಯನೆ, ಈರೀತಿ ಬೃಂದಾವನದಲ್ಲಿ ಸಂಚರಿಸುತಿದ್ದ ಭಗವಂತನಾದ ಶ್ರೀಕೃಷ್ಣನು ಒಂದು ದಿವಸ ಬಲರಾಮನನ್ನು ಬಿಟ್ಟು ಮಿಕ್ಕ ಗೋಪಬಾಲಕರಿಂದ ಪರಿವೃತನಾಗಿ ಯಮುನಾತೀರದಲ್ಲಿನ ಒಂದು ಮಡುವಿಗೆ ಹೋದನು ; ಆಗ ಆ ಬಾಲಕರೂ ಗೋವುಗಳೂ ಅತ್ಯಂತ ಉಷ್ಣವಾದ ಬಿಸಲಿನಿಂದ ಪೀಡಿಸಲ್ಪಟ್ಟು ವಿಷದಿಂದ ದೂಷಿತವಾದ ಆ ಮಡುವಿನ ಜಲವನ್ನು ಪಾನಮಾಡಿ ದೈವವಶದಿಂದ ನಷ್ಟವಾದ ಬುದ್ಧಿಯುಳ್ಳವರಾದರು ; ಶ್ರೀಕೃಷ್ಣನು ಆ ವಿಷೋದಕವನ್ನು ಪಾನಂಗೈದು ಪಂಚತ್ವವನ್ನೈದಿ ಪ್ರಾಣರಹಿತರಾಗಿ ಬಿದ್ದಿದ್ದ ತನ್ನನ್ನೇ ಸ್ವಾಮಿಯಾಗುಳ್ಳ ಆ ಗೋವುಗಳನ್ನೂ ಗೋಪಾಲಕರನ್ನೂ ನೋಡಿ ಅಮೃತವನ್ನು ವರ್ಷಿಸುವ ತನ್ನ ದಿವ್ಯವಾದ ದೃಷ್ಟಿಯಿಂದ ಬದುಕಿಸಿದನು ; ಆ ಗೋಪಾಲಕರು ಆಕ್ಷಣದಲ್ಲೇ ಸ್ಮೃತಿಯನ್ನು ಪಡೆದು ಗೋವುಗಳೊಡಗೂಡಿ ಎದ್ದು ಅನ್ಯೋನ್ಯವಾಗಿ ನೋಡುತ ಅತ್ಯಂತ ಆಶ್ಚರ್ಯಯುಕ್ತರಾಗಿ ತಾವು ವಿಷೋದಕವನ್ನು ಪಾನಂಗೈದು ಮೃತರಾಗಿ ಪುನಹ ಜೀವಿಸಿದ್ದು ಶ್ರೀಕೃಷ್ಣನ ಅನುಗ್ರಹವೆಂದು ತಿಳಿದರು !

---

## ೧೬ ನೇ ಅಧ್ಯಾಯ.

### ಕಾಳೀಯನ ಗರ್ವಭಂಗವು.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ಸರ್ವವ್ಯಾಪಕನಾದ ಶ್ರೀಕೃಷ್ಣದೇವನು ಕಾಳೀಯನೆಂಬ ಕೃಷ್ಣಸರ್ಪದಿಂದ ದೂಷಿತವಾದ ಆ ಯಮುನಾನದಿಯ ಜಲವನ್ನು ನೋಡಿ ಅದನ್ನು ಪರಿಶುದ್ಧ ಮಾಡಲೋಸುಗ ಆ ನದಿಯ ದೆಸೆಯಿಂದ ಆ ಸರ್ಪವನ್ನು ಹೊರಡಿಸಿದನು !

ಈ ಪ್ರಕಾರವಾಗಿ ನುಡಿದ ಶುಕಮುನಿಯ ವಚನವನ್ನು ಕೇಳಿ ಪರೀಕ್ಷಿದ್ರಾಯನು—ಎಲೈ ಮುನಿಯೆ, ಭಗವಂತನಾದ ಶ್ರೀಕೃಷ್ಣನು ಯಮುನಾನದಿಯ ಅಗಾಧವಾದ ಆ ಮಡುವಿನ ಜಲದಲ್ಲಿ ಅನೇಕ ಯುಗಗಳಿಂದ ವಾಸಂಗೈಯುತಲಿದ್ದ ಆ ಕಾಳೀಯವೆಂಬ ಸರ್ಪವನ್ನು ಯಾವ ಪ್ರಕಾರದಿಂದ ನಿಗ್ರಹಿಸಿದನು ? ಸರ್ಪವು ಜಲಚರವಲ್ಲದಿದ್ದಾಗ್ಯೂ ಯಾವಪ್ರಕಾರದಿಂದ ಆ ಮಡುವಿನಲ್ಲಿ ವಾಸಂಗೈದುದು ? ಈ ಅರ್ಥವು ನಿನ್ನಿಂದ ನಿರೂಪಿಸಲ್ಪಡಲಿ ! ಎಲೈ ಮುನಿಯೆ, ಸರ್ವವ್ಯಾಪಕನಾಗಿ ತನ್ನ ಇಚ್ಛೆಯಂತೆ ಇರುವ ಭಗವಂತನಾದ ಶ್ರೀಕೃಷ್ಣನ ಗೋಪಾಲರೂಪದಿಂದುಂಟಾದ ಮಹಾಚರಿತ್ರೆಯೆಂಬ ಅಮೃತವನ್ನು ಎಷ್ಟು ಪಾನಂಗೈದರೂ ದಣಿವಿಲ್ಲವಾದಕಾರಣ ಆ ವೃತ್ತಾಂತವನ್ನು ನನಗೆ ನಿರೂಪಿಸು—ಎಂದು ಕೇಳಿದನು.

ಶುಕಮುನಿಯು ಆತನನ್ನು ಕುರಿತು—ಎಲೈ ಪರೀಕ್ಷಿದ್ರಾಯನೆ, ಯಮುನಾನದಿಯಲ್ಲಿ ಕಾಳೀಯವೆಂಬ ಸರ್ಪಕ್ಕೆ ಆವಾಸಸ್ಥಾನವಾದ ಒಂದು ಮಡುವಿತ್ತು ; ಅದು ಆ ಸರ್ಪದ ವಿಷಾಗ್ನಿಯಿಂದ ಅತ್ಯಂತ ತಪಿಸಲ್ಪಟ್ಟ ಜಲವುಳ್ಳದ್ದಾದಕಾರಣ ಅಂತರಿಕ್ಷದಲ್ಲಿ ಸಂಚರಿಸುವ ಪಕ್ಷಿಗಳೂ ಅದರಬಳಿ ಬೆಂದು ಬೀಳುತಿದ್ದವು ; ಆ ಮಡುವಿನ ತಡಿಯಲ್ಲಿ ಸ್ಥಾವರಜಂಗಮಾತ್ಮಕಗಳಾದ ಪ್ರಾಣಿಗಳು ಜಲಬಿಂದುಗಳೊಡನೆ ಯುಕ್ತಗಳಾದ ವಿಷದ ತರಂಗಗಳನ್ನು ಸ್ಪೃಶಿಸಿ ಬೀಸುವ ವಾಯುವು ಸೋಕಿದಮಾತ್ರದಿಂದಲೇ ಪ್ರಾಣರಹಿತಗಳಾಗುವವು. ದುಷ್ಟನಿಗ್ರಹಾರ್ಥವಾಗಿ ಅವತರಿಸಿದ ಶ್ರೀಕೃಷ್ಣನು ಪ್ರಚಂಡ ವೇಗವುಳ್ಳ ವಿಷವನ್ನು ಪರಾಕ್ರಮವಾಗುಳ್ಳ ಆ ಸರ್ಪವನ್ನೂ ದೂಷಿತವಾದ ಆ ಮಡುವನ್ನೂ ನೋಡಿ ಆ ತೀರದಲ್ಲಿದ್ದ ಒಂದು ಕದಂಬವೃಕ್ಷವನ್ನೇರಿ ಕಾಂಚೀದಾಮವನ್ನು ದೃಢವಾಗಿ ಕಟ್ಟಿಕೊಂಡು ಭುಜವನ್ನು ತಟ್ಟಿಕೊಂಡು ಅತ್ಯುನ್ನತವಾದ ಆ ವೃಕ್ಷಾಗ್ರದಿಂದ ಆ ವಿಷದ ಮಡುವಿನಲ್ಲಿ ಧುಮಿಕಿದನು ; ಆಗ ಆ ಮಡುವು ಪುರುಷೋತ್ತಮನಾದ ಶ್ರೀಕೃಷ್ಣಮೂರ್ತಿಯ ಪತನವೇಗದಿಂದ ಕ್ಷೋಭೆಯನ್ನೈದಿರುವ ಸರ್ಪಂಗಳ ವಿಷಗಳಿಂದ ಮೇಲಕ್ಕೆ ಹಾರಿಸಲ್ಪಟ್ಟ ಜಲರಾಶಿಯುಳ್ಳದ್ದಾಗಿ ಮತ್ತು ವಿಷಗಳಿಂದ ವ್ಯಾಪ್ತವಾದ್ದಾಗಿ ಭಯಂಕರಗಳಾದ ತೆರೆಗಳುಳ್ಳದ್ದಾಯಿತು ! ಎಲೈ ರಾಯನೆ, ಆ ವಿಷದ ಮಡುವನ್ನು ಕ್ಷೋಭೆಯನ್ನೈದಿಸಿದ್ದು ಅಪರಿಮಿತವಾದ ಬಲವುಳ್ಳ ಶ್ರೀಕೃಷ್ಣನಿಗೆ ಎಷ್ಟುಮಾತ್ರ ಕಾರ್ಯವು ! ಅನಂತರದಲ್ಲಿ ಕಾಳೀಯವೆಂಬ ಆ ಸರ್ಪವು ಮಡುವಿನಲ್ಲಿ ವಿಹರಿಸುವ ಮದ್ದಾನೆಯಂತೆ ಸಾಮರ್ಥ್ಯವುಳ್ಳ ಶ್ರೀಕೃಷ್ಣದೇವನ ಭುಜದಂಡಗಳಿಂದ ಹೊಡೆಯಲ್ಪಟ್ಟ ಜಲಧ ಮಹತ್ತಾದ ಶಬ್ದವನ್ನು ಕೇಳಿ ತನ್ನ ಆವಾಸಸ್ಥಾನಕ್ಕೆ ಉಂಟಾದ ತಿರಸ್ಕಾರವನ್ನು ನೋಡಿ ಸಹಿಸಲಾರದೆ ಕೃಷ್ಣನನ್ನಟ್ಟಿಕೊಂಡುಬಂದು ನೋಡಲು ಯೋಗ್ಯನಾಗಿ ಅತಿ ಕೋಮಲನಾಗಿ ಮೇಘದಂತೆ ಪ್ರಕಾಶಿಸುವವನಾಗಿ ಶ್ರೀವತ್ಸವೆಂಬ ಮಚ್ಚೆಯೊಡನೆ ಶೋಭಿಸುವವನಾಗಿ ಪೀತಾಂಬರವುಳ್ಳವನಾಗಿ ಮಂದಹಾಸದೊಡಗೂಡಿದ ಅತಿ ಸುಂದರವಾದ ಮುಖಪದ್ಮವುಳ್ಳವನಾಗಿ ಆ ಮಡುವಿನಲ್ಲಿ ಭಯವಿಡದೆ ಕ್ರೀಡಿಸುತಿದ್ದ ಕಮಲಮಧ್ಯದಂತೆ ಅತ್ಯಂತ ಕೋಮಲಗಳಾದ ಪಾದಗಳುಳ್ಳ ಶ್ರೀಕೃಷ್ಣದೇವನನ್ನು ಮರ್ಮಸ್ಥಾನಗಳಲ್ಲಿ ಕಚ್ಚಿ ತನ್ನ ಶರೀರದಿಂದ ಸುತ್ತಿಕೊಂಡಿತು ; ಆಗ ಶ್ರೀಕೃಷ್ಣನನ್ನು ಪ್ರಿಯಮಿತ್ರನಾಗುಳ್ಳ ಆ ಗೋಪಾಲಬಾಲಕರು ಆ ಮಹಾಸರ್ಪದ ಶರೀರದಿಂದ ಸುತ್ತಲ್ಪಟ್ಟು ಚೇಷ್ಟಾರಹಿತನಾಗಿದ್ದ ಶ್ರೀಕೃಷ್ಣದೇವನನ್ನು ನೋಡಿ ವ್ಯಸನದಿಂದ ಅತ್ಯಂತ ಪೀಡಿತರಾಗಿ ಶ್ರೀಕೃಷ್ಣನಲ್ಲೇ ಸಮರ್ಪಿಸಲ್ಪಟ್ಟ ದೇಹಗಳೂ ಬಂಧುಗಳೂ ದ್ರವ್ಯಗಳೂ ಮನೆಗಳೂ ಉಳ್ಳವರಾದ್ದರಿಂದ ಅತ್ಯಂತ ಶೋಕದಿಂದಲೂ, ಭಯದಿಂದಲೂ ಮೂಢಬುದ್ಧಿಯುಳ್ಳವರಾಗಿ ಮೂರ್ಛೆಬಿದ್ದರು ; ಅದೇರೀತಿ ಗೋವುಗಳೂ ವೃಷಭಗಳೂ ಕರುಗಳೂ ಅತ್ಯಂತ ದುಃಖದಿಂದ ಕೂಗುತ ಕೃಷ್ಣನಲ್ಲೇ ನಿಲ್ಲಿಸಲ್ಪಟ್ಟ ದೃಷ್ಟಿಯುಳ್ಳವಾಗಿ ಅತ್ಯಂತ ಭಯಪಡುತ ರೋದನಂಗೈಯುವಂತೆ ನಿಂತಿದ್ದವು !

ಎಲೈ ಅರಸೆ, ಆ ಸಮಯದಲ್ಲಿ ಭೂಮಿಯಲ್ಲಿ ಭೂಕಂಪಾದಿಗಳು ಅಂತರಿಕ್ಷದಲ್ಲಿ ಉಲ್ಕಾಪಾತಾದಿಗಳು ಪುರುಷರಲ್ಲಿ ವಾಮನೇತ್ರಚಲನಾದಿಗಳು ಮೊದಲಾದ ತ್ರಿವಿಧಗಳಾದ ಅಪಶಕುನಗಳೂ ಆ ಕ್ಷಣದಲ್ಲೇ ಪ್ರಾಪ್ತವಾಗುವ ಭಯವನ್ನು ಸೂಚಿಸುವ ಮಹತ್ತಾದ ಉತ್ಪಾತಗಳೂ ಗೋಕುಲದಲ್ಲಿ ಉಂಟಾದವು; ನಂದಗೋಪಾದಿಗಳು ಆ ಮ

ಹೋತ್ಪಾತಗಳನ್ನು ಕಂಡು ಭಯದಿಂದ ಕಂಪಿಸುತ ಬಲರಾಮನನ್ನು ಬಿಟ್ಟು ಕೃಷ್ಣನು ಗೋವುಗಳನ್ನು ಮೇಯಿಸುವದಕ್ಕೆ ವನವನ್ನೈದಿದನೆಂದು ಕೇಳಿ ಆತನ ಪ್ರಭಾವವನ್ನರಿಯದೆ ಆ ಮಹತ್ತಾದ ದುರ್ನಿಮಿತ್ತಗಳಿಂದ ಆತನಿಗೆ ಅಮೋಹವುಂಟಾಗುವದೆಂದೆಣಿಸಿ ಕೃಷ್ಣನೇ ಪ್ರಾಣವಾಗುಳ್ಳವರಾದ್ದರಿಂದಲೂ ಕೃಷ್ಣನಲ್ಲಿ ಮನಸ್ಸುಂಟಾದವರಾದ್ದರಿಂದಲೂ ವ್ಯಸನ ಶೋಕ ಭಯಗಳಿಂದ ಅತ್ಯಂತ ಪೀಡಿತರಾಗಿ ಸ್ತ್ರೀಬಾಲವೃದ್ಧರು ಮೊದಲುಗೊಂಡು ಎಲ್ಲರೂ ಅತ್ಯಂತ ವಾತ್ಸಲ್ಯದಿಂದ ಶ್ರೀಕೃಷ್ಣನನ್ನು ನೋಡಲಿಚ್ಛೆಯುಳ್ಳವರಾಗಿ ಅತಿ ದೀನರಾಗಿ ಗೋಕುಲದ ದೆಸೆಯಿಂದ ಹೊರಟರು ; ಆಗ ಭಗವಂತನಾದ ಬಲರಾಮನು ತನ್ನ ತಮ್ಮನಾದ ಶ್ರೀಕೃಷ್ಣನ ಪ್ರಭಾವವನ್ನು ಬಲ್ಲವನಾದ್ದರಿಂದ ಆ ರೀತಿ ಭಯಪಡುತಲಿರುವ ನಂದಾದಿಗಳನ್ನು ನೋಡಿ ನಗುತ ಸ್ವಲ್ಪವಾದರು ಮಾತನಾಡದಿದ್ದನು ; ಅನಂತರದಲ್ಲಿ ನಂದಗೋಪನು ಮೊದಲಾದ ಗೋಪಾಲಕರೆಲ್ಲರು ಭಗವಂತನನ್ನು ಜ್ಞಾಪಿಸುವ ಅಡಿಗಳಿಂದ ಸೂಚಿಸಲ್ಪಟ್ಟ ಮಾರ್ಗದಿಂದ ಅತ್ಯಂತ ಇಷ್ಟನಾದ ಶ್ರೀಕೃಷ್ಣನನ್ನುಡುಕುತ ಯಮುನಾತೀರವನ್ನೈದಿ ಅಲ್ಲಲ್ಲಿ ಗೋವುಗಳ ಮಾರ್ಗಮಧ್ಯದಲ್ಲಿ ಮಿಕ್ಕ ಗೋಪಾಲಕರ ಅಡಿಗಳ ಮಧ್ಯದಲ್ಲಿ ಶ್ರೀಕೃಷ್ಣನ ಪದ್ಮಯವ ಅಂಕುಶ ವಜ್ರಧ್ವಜರೇಖೆಗಳೊಡಗೂಡಿರುವ ಅಡಿಗಳನ್ನು ನೋಡುತ ತ್ವರೆಯಿಂದ ಬಂದು ಆ ಮಡುವಿನಲ್ಲಿ ಮಹಾಸರ್ಪದ ಶರೀರದಿಂದ ಸುತ್ತಲ್ಪಟ್ಟು ನಿಶ್ಚೇಷ್ಟನಾಗಿದ್ದ ಶ್ರೀಕೃಷ್ಣನನ್ನೂ ಆ ಮಡುವಿನ ತಡಿಯಲ್ಲಿ ಮೂಢವಾದ ಬುದ್ಧಿಯುಳ್ಳ ಗೋಪಾಲಕರನ್ನೂ ಸುತ್ತಲು ದೈನ್ಯದಿಂದ ಕೂಗುತಿದ್ದ ಗೋವುಗಳನ್ನೂ ನೋಡಿ ಆರ್ತರಾಗಿ ಅತ್ಯಂತ ಮೋಹವನ್ನೈದಿದರು ; ಗೋಪಸ್ತ್ರೀಯರು ಅನಂತನಾಗಿ ಭಗವಂತನಾದ ಶ್ರೀಕೃಷ್ಣಮೂರ್ತಿಯಲ್ಲಿ ಸ್ನೇಹಯುಕ್ತವಾದ ಮನಸ್ಸುಳ್ಳವರಾದ್ದರಿಂದ ಆತನ ಮುಗುಳುನಗೆಯನ್ನೂ ಸವಿನೋಟವನ್ನೂ ಮಧುರವಚನಗಳನ್ನೂ ಸ್ಮರಿಸುತ ಆತನು ಆ ಮಹಾಸರ್ಪದಿಂದ ಗ್ರಹಿಸಲ್ಪಟ್ಟದ್ದರಿಂದ ಅತ್ಯಂತ ದುಃಖದಿಂದ ತಪ್ತರಾಗಿ ತಮಗೆ ಪ್ರಿಯನಾದ ಆ ಮೂರ್ತಿಯಿಂದ ರಹಿತವಾದ ಲೋಕತ್ರಯವನ್ನು ಶೂನ್ಯವಾಗಿ ಕಾಣುತ ತನ್ನ ಪುತ್ರನನ್ನು ಕುರಿತು ಸಂತಾಪವನ್ನೈದಿದ್ದ ಯಶೋದಾದೇವಿಯ ಸಮೀಪದಲ್ಲಿದ್ದುಕೊಂಡು ತಾವು ಅವಳೊಡನೆ ಸಮಾನವಾದ ವ್ಯಸನವುಳ್ಳವರಾಗಿ ಕಣ್ಣೀರು ಸುರಿಯುತಿರಲು ಗೋಕುಲಕ್ಕೆ ಪ್ರಿಯನಾದ ಶ್ರೀಕೃಷ್ಣದೇವನ ದಿವ್ಯಚರಿತ್ರಗಳನ್ನು ವರ್ಣಿಸುತ ಆತನ ಮುಖಾರವಿಂದವನ್ನು ನೋಡುತ ಮೃತಪ್ರಾಯರಾಗಿದ್ದರು ! ಭಗವಂತನಾದ ಶ್ರೀಬಲರಾಮನು ಶ್ರೀಕೃಷ್ಣನ ಮಹಿಮೆಯನ್ನು ಬಲ್ಲವನಾದ್ದರಿಂದ ಆತನನ್ನೇ ಪ್ರಾಣವಾಗುಳ್ಳವರಾಗಿ ದುಃಖದಿಂದ ಆ ಮಡುವನ್ನು ಪ್ರವೇಶಮಾಡುತಿದ್ದ ನಂದಾದಿಗಳನ್ನು ತಡೆದನು ; ಆಗ ಶ್ರೀಕೃಷ್ಣನು ತನ್ನನಿಮಿತ್ತವಾಗಿ ಸ್ತ್ರೀಬಾಲವೃದ್ಧರು ಮೊದಲಾಗಿ ಅತ್ಯಂತ ದುಃಖವನ್ನೈದಿರುವ ಗೋಕುಲದ ಜನರನ್ನು ನೋಡಿ ಅವರಿಗೆ ತನ್ನನ್ನೊರತು ಮತ್ತೊಂದು ಗತಿಯಿಲ್ಲವೆಂದೆಣಿಸಿ ಒಂದು ಮುಹೂರ್ತಮಾತ್ರವು ಮನುಷ್ಯಭಾವವನ್ನು ನಟಿಸುತ ಸರ್ಪಬಂಧದಲ್ಲಿ ತಗಲಿಕೊಂಡಿದ್ದು ಅನಂತರದಲ್ಲಿ ಸರ್ಪಬಂಧವನ್ನು ಬಿಡಿಸಿಕೊಂಡೆದ್ದನು ; ಆಗ ವೃದ್ಧಿಹೊಂದುತಲಿದ್ದ ಶ್ರೀಕೃಷ್ಣನ ದೇಹದಿಂದ ಪೀಡಿಸಲ್ಪಟ್ಟ ಕಾಳೀಯಸರ್ಪವು ಮಂಡಲಾಕೃತಿಯಾಗಿದ್ದ ತನ್ನ ದೇಹವನ್ನು ಬಿಚ್ಚಿಕೊಂಡು ಅತ್ಯಂತ ಕೋಪಯುಕ್ತವಾಗಿ ಹೆಡೆಗಳನ್ನೆತ್ತಿಕೊಂಡು ನಿಟ್ಟುಸುರು ಬಿಡುತ ನಾಸಿಕಾರಂಧ್ರಗಳಲ್ಲಿ ವಿಷಯುಕ್ತವಾಗಿ ಭರ್ಜನ ಕಪಾಲದಂತೆ ಅತ್ಯಂತ ತಪ್ತವಾಗಿ ನಿಶ್ಚಲವಾಗಿರುವ ನೇತ್ರಗಳುಳ್ಳದ್ದಾಗಿ ಮುಖಗಳಲ್ಲಿ ಜ್ವಾಲೆಯುಳ್ಳದ್ದಾಗಿ ಕೃಷ್ಣನನ್ನು ನೋಡುತಿತ್ತು ; ಶ್ರೀಕೃಷ್ಣನು ಪ್ರತಿಮುಖದಲ್ಲಿಯೂ ಎರಡೆರಡು ಕೊನೆಗಳುಳ್ಳ ನಾಲಿಗೆಯಿಂದ ಎರಡು ಕಟಬಾಯಿಗಳನ್ನು ಸವರಿಕೊಳ್ಳುತ ಅತಿಭಯಂಕರವಾದ ವಿಷಾಗ್ನಿಯೊಡಗೂಡಿದ ದೃಷ್ಟಿಯುಳ್ಳ ಆ ಸರ್ಪನನ್ನು ಹಿಡಿಯಲೋಸುಗ ಗರುಡನಂತೆ ಕ್ರೀಡಿಸುತ ಸುತ್ತಲೂ ತಿರುಗುತಿದ್ದನು ; ಆ ಸರ್ಪವೂ ಪುನಹ ಶ್ರೀಕೃಷ್ಣನನ್ನು ಹಿಡಿಯಲೋಸುಗ ಸಮಯವನ್ನಿರೀಕ್ಷಿಸುತ ತಿರುಗುತಿತ್ತು ; ಅನಂತರದಲ್ಲಿ ಆದಿಪುರುಷನಾದ ಶ್ರೀಕೃಷ್ಣನು ಈ ರೀತಿ ಸುತ್ತಲು ತಿರುಗುವದರಿಂದ ನಷ್ಟವಾದ ಬಲವುಳ್ಳದ್ದಾಗಿ ಉನ್ನತವಾದ ಹೆಡೆಗಳುಳ್ಳ ಆ ಸರ್ಪವನ್ನು ಬೊಗ್ಗಿಸಿ ವಿಸ್ತೃತವಾದ ಅದರ ಶಿರಸ್ಸನ್ನೇರಿ ಸಮಸ್ತ ವಿದ್ಯೆಗಳಿಗೂ ಆದಿಗುರುವಾದ್ದರಿಂದ ಅದರ ಹೆಡೆಗಳಲ್ಲಿ ದಿವ್ಯರತ್ನಗಳ ಸಮೂಹದ ಸಂಪರ್ಕದಿಂದ ಅತ್ಯಂತ ಕೆಂಪುವರ್ಣಗಳಾದ ಪಾದಪದ್ಮಗಳುಳ್ಳವನಾಗಿ ನರ್ತನಂಗೈದನು ! ಎಲೈ ರಾಯನೆ, ಈ ಪ್ರಕಾರವಾಗಿ ಶ್ರೀಕೃಷ್ಣನು

ಆ ಸರ್ಪನ ಶಿರಸ್ಸಿನಮೇಲೆ ನರ್ತನಂಗೈಯುವುದ್ಯುಕ್ತನಾದವನನ್ನು ನೋಡಿ ಆತನ ಭಕ್ತರಾದ ದೇವ ಗಂಧರ್ವ ಸಿದ್ಧ ಚಾರಣಾಪ್ಸರಸ್ಸುಗಳು ಬಂದು ಅತ್ಯಂತ ಪ್ರೀತಿಯಿಂದ ಮೃದಂಗ ಪಣವ ಆನಕಗಳು ಮೊದಲಾದ ವಾದ್ಯಗಳಿಂದಲೂ ಗೀತದಿಂದಲೂ ಪುಷ್ಪಾಂಜಲಿಗಳಿಂದಲೂ ಸ್ತುತಿಗಳಿಂದಲೂ ಆತನನ್ನು ಸೇವಿಸುತ್ತಿದ್ದರು !

ಆ ಬಳಿಕ ಮಹತ್ತಾದ ನೂರು ಶಿರಸ್ಸುಗಳುಳ್ಳ ಕಾಳೀಯವು ಕ್ಷೀಣವಾದ ಆಯುಸ್ಸುಳ್ಳದ್ದಾಗಿ ಅಲ್ಲಲ್ಲಿ ಸುತ್ತುತಲಿರಲು ಅದರ ನೂರು ಶಿರಸ್ಸುಗಳಲ್ಲಿ ಬೊಗ್ಗದೇ ಸ್ತಂಭನಂತಿರುವ ಶಿರಸ್ಸುಗಳನ್ನು ದುಷ್ಟರನ್ನು ಶಿಕ್ಷಿಸುವ ಶ್ರೀಕೃಷ್ಣಮೂರ್ತಿಯು ನರ್ತನವೆಂಬ ವ್ಯಾಜದಿಂದ ತನ್ನ ಪಾದಘಾತಗಳಿಂದ ಮರ್ದಿಸಿದನು ; ಆಗ ಆ ಮಹಾಸರ್ಪವು ಕೃಷ್ಣನ ಪಾದಘಾತಗಳನ್ನು ಸಹಿಸಲಾರದೆ ಬಾಯಿಂದಲೂ ನಾಸಿಕಾರಂಧ್ರಗಳಿಂದಲೂ ಅಧಿಕವಾದ ರಕ್ತವನುಗುಳುತ ಅತ್ಯಂತಾಯಾಸದಿಂದ ಮೂರ್ಛೆಯನ್ನು ಹೊಂದಿ ಮತ್ತು ನೇತ್ರಗಳಿಂದ ವಿಷವನ್ನು ಕಕ್ಕುತ್ತ ರೋಷದಿಂದ ಘಟ್ಟಿಯಾಗಿ ನಿಟ್ಟುಸುರನ್ನು ಬಿಡುತಿರಲು ಶ್ರೀಕೃಷ್ಣಮೂರ್ತಿಯು ನರ್ತನಂಗೈಯುತ ತನ್ನ ಪಾದಘಾತದಿಂದ ಅದರ ಶಿರಸ್ಸುಗಳನ್ನೆಲ್ಲಾ ಬೊಗ್ಗುವಹಾಗೆ ಮರ್ದಿಸುತ ಸಂತುಷ್ಟರಾದ ಗಂಧರ್ವಾದಿಗಳು ದಿವ್ಯಪುಷ್ಪಗಳಿಂದ ಪೂಜಿಸುತ್ತಿರಲು ಶೇಷಾಸನನಲ್ಲಿರುವ ಶ್ರೀ ಆದಿನಾರಾಯಣನಂತೆ ಮೆರೆಯುತ್ತಿದ್ದನು ! ಎಲೈ ಅರಸೆ, ಈ ಪ್ರಕಾರವಾದ ಶ್ರೀಕೃಷ್ಣನ ವಿಚಿತ್ರವಾದ ನರ್ತನದಿಂದ ಮುರಿಯಲ್ಪಟ್ಟು ಛತ್ರಗಳಂತಿರುವ ಹೆಡೆಗಳುಳ್ಳದ್ದಾಗಿ ಮುಖಗಳಿಂದ ಅಧಿಕವಾದ ರಕ್ತವನ್ನುಗುಳುತ ಅತ್ಯಂತ ಭಗ್ನವಾದ ದೇಹವುಳ್ಳ ಕಾಳೀಯವು ಶ್ರೀಕೃಷ್ಣನು ಚರಾಚರಾತ್ಮಕವಾದ ಪ್ರಪಂಚಕ್ಕೆ ಗುರುವಾಗಿ ಪುರಾಣಪುರುಷನಾದ ನಾರಾಯಣನೆಂದು ತಿಳಿದು ಮನಸ್ಸಿನಿಂದ ಶರಣುಹೊಂದಿತು ! ಈ ಪ್ರಕಾರದಲ್ಲಿ ತನ್ನ ಉದರಮಧ್ಯದಲ್ಲಿ ಸಮಸ್ತ ಜಗತ್ತನ್ನು ಧರಿಸುವ ಶ್ರೀಕೃಷ್ಣಮೂರ್ತಿಯ ಅತ್ಯಂತ ಭಾರದಿಂದ ನೆಗ್ಗಿ ಆತನ ಹಿಮ್ಮಡಿಗಳ ಪ್ರಹಾರದಿಂದ ಅತ್ಯಂತವಾಗಿ ಮುರಿಯಲ್ಪಟ್ಟು ಛತ್ರದಂತಿದ್ದ ಹೆಡೆಗಳುಳ್ಳ ಆ ಸರ್ಪವನ್ನು ಕಂಡು ಅದರ ಪತ್ನಿಗಳಾದ ಸರ್ಪಗಳು ಅತ್ಯಂತ ಆರ್ತರಾಗಿ ಸಡಲುವ ವಸ್ತ್ರಭೂಷಣ ತುರುಬುಗಳುಳ್ಳವರಾಗಿ ಆದಿಪುರುಷನಾದ ಶ್ರೀಕೃಷ್ಣನ ಸಮೀಪವನ್ನೈದಿ ಅತ್ಯಂತ ದೀನವಾದ ಮನಸ್ಸುಳ್ಳವರಾಗಿ ಅತ್ಯಂತ ಪಾಪಿಯಾದರೂ ತಮ್ಮ ಪತಿಯನ್ನು ಬಿಡಿಸಬೇಕೆಂಬ ಬಯಕೆಯಿಂದ ತಮ್ಮ ಬಾಲಕರನ್ನು ಮುಂದುಮಾಡಿಕೊಂಡು ಅಭಯಪ್ರದನಾದ ಶ್ರೀಕೃಷ್ಣನನ್ನು ಶರಣುಹೊಂದಿ ಆ ಸ್ವಾಮಿಯ ಮುಂಭಾಗದಲ್ಲಿ ತಮ್ಮ ದೇಹವನ್ನು ಕೆಡೆದು ಸಮಸ್ತ ಪ್ರಾಣಿಗಳಿಗೂ ಪತಿಯಾದ ಆ ದೇವನಿಗೆ ಅಂಜಲಿಬದ್ಧರಾಗಿ ನಮಸ್ಕರಿಸಿ ಕೋಪಯುಕ್ತನಾದ ಆ ಭಗವಂತನ ಅನುಗ್ರಹವು ತಮ್ಮ ಪತಿಯಲ್ಲುಂಟಾಗಲೋಸುಗ ಸ್ತೋತ್ರಮಾಡುತ "ಎಲೈ ಶ್ರೀಕೃಷ್ಣದೇವನೆ, ಶತ್ರುವಿನಲ್ಲಿಯೂ ಭಕ್ತರಲ್ಲಿಯೂ ಸಮಾನವಾದ ದೃಷ್ಟಿಯುಳ್ಳ ನಿನ್ನ ಅವತಾರವು ದುಷ್ಟನಿಗ್ರಹಂಗೈಯಲೋಸುಗ ಉಂಟಾಗಿರುವದು ; ಈ ಲೋಕದಲ್ಲಿ ನೀನು ಧರ್ಮಸ್ವರೂಪವನ್ನು ವಿಚಾರಿಸಿ ದುಷ್ಟರಿಗೆ ಶಿಕ್ಷೆಯಂಗೈವೆಯಾದಕಾರಣ ಅಪರಾಧಮಾಡಿದ ನಮ್ಮ ಪತಿಯಾದ ಈ ಪ್ರಾಣಿಗೆ ಪ್ರಾಪ್ತವಾದ ಸರ್ಪತ್ವಕ್ಕೆ ಮೂಲಕಾರಣವಾದ ಪಾಪವನ್ನು ಪರಿಹರಿಸುವ ನಿನ್ನಿಂದ ಮಾಡಲ್ಪಟ್ಟ ಶಿಕ್ಷೆಯು ಕ್ರೋಧರೂಪವಾಗಿ ಕಾಣಲ್ಪಟ್ಟರೂ ನಿನ್ನ ಅನುಗ್ರಹರೂಪವಾದ್ದರಿಂದ ಅದು ನಮಗೆ ಸಮ್ಮತವು ; ನಿನ್ನಿಂದ ಮಾಡಲ್ಪಡುವ ಶಿಕ್ಷೆಯು ನಿಶ್ಚಯವಾಗಿ ದುಷ್ಟರ ಪಾಪವನ್ನು ಪರಿಹರಿಸುವಂಥಾದ್ದು ! ಎಲೈ ಸ್ವಾಮಿಯೆ, ಸರ್ವಪ್ರಾಣಿಗಳನ್ನೂ ಜೀವಿಸುವಂತೆ ಮಾಡುವ ನೀನು ಯಾವ ತಪೋಧರ್ಮಗಳ ದೆಸೆಯಿಂದ ಸಂತೋಷಪಡುತಲಿರುವೆಯೊ ಅಂಥಾ ಅಭಿಮಾನವನ್ನು ಬಿಟ್ಟು ಅನ್ಯರಿಗೆ ಬಹುಮಾನವಂಗೈಯುವ ಯಾವ ತಪಸ್ಸೂ ಸರ್ವಜನರಲ್ಲಿಯೂ ದಯೆಯುಳ್ಳ ಯಾವಧರ್ಮವೂ ನಮ್ಮ ಪತಿಯಾದ ಈ ಕಾಳೀಯಸರ್ಪದಿಂದ ಪೂರ್ವಜನ್ಮದಲ್ಲಿ ಮಾಡಲ್ಪಟ್ಟವೋ ಅರಿಯೆವು ! ಎಲೈ ಶ್ರೀಕೃಷ್ಣನೆ, ಬ್ರಹ್ಮಾದಿ ದೇವತೆಗಳೂ ತಪಸ್ಸು ಮೊದಲಾದವುಗಳಿಂದ ಲಕ್ಷ್ಮೀದೇವಿಯ ಪ್ರಸಾದವನ್ನು ಪ್ರಾರ್ಥಿಸುವರು ; ಅಂಥಾ ಸರ್ವೋತ್ತಮಳಾದ ಲಕ್ಷ್ಮೀದೇವಿಯೂ ನಿನ್ನ ಪಾದಾರವಿಂದಗಳನ್ನು ಸ್ಪರ್ಶಿಸಲು ಯೋಗ್ಯವಾದ ಅಧಿಕಾರ ಸಂಪತ್ತುಂಟಾಗಬೇಕೆಂದು ಕಾಮಗಳನ್ನು ಬಿಟ್ಟು ಬಹುಕಾಲ ವ್ರತನಿಯಮಯುಕ್ತಳಾಗಿ ಮಹತ್ತಾದ ತಪಸ್ಸಂಗೈದಳು ; ನಮ್ಮ ಪತಿಯಾದ ಈ

ಸನಕ್ಕೆ ಅಂಥಾ ನಿನ್ನ ಪಾದಾರವಿಂದಗಳಲ್ಲಿರುವ ರಜಸ್ಸನ್ನು ಸ್ಪರ್ಶಿಸಲು ಯೋಗ್ಯವಾದ ಭಾಗ್ಯವುಂಟಾದದ್ದು ಯಾವ ತಪಸ್ಸು ಮೊದಲಾದವುಗಳ ಪ್ರಭಾವವೋ ಅರಿಯೆವು! ಎಲೈ ಹರಿಯೆ, ಯಾವ ನಿನ್ನ ಪಾದಾರವಿಂದ ರಜಸ್ಸನ್ನು ಪಡೆಯುವ ಮಹಾತ್ಮರು ಇಂದ್ರಪದವಿ ಸಾರ್ವಭೌಮತ್ವವು ಬ್ರಹ್ಮಪದವಿ ಪಾತಾಳಾದಿ ಲೋಕಾಧಿಪತ್ಯವು ಅಣಿಮಾದ್ಯಷ್ಟ ಸಿದ್ಧಿಗಳು ಪರಮಪುರುಷಾರ್ಥರೂಪವಾದ ಮುಕ್ತಿಯು ಮೊದಲಾದವನ್ನಾದರು ತುಚ್ಛವಾಗೆಣಿಸುವರೊ ಅಂಥಾ ನಿನ್ನ ಪಾದಪದ್ಮರಜಸ್ಸನ್ನು ಸ್ಪರ್ಶನಂಗೈದ ಪದವಿಯು ನಮ್ಮ ಪತಿಗೆ ಯಾರಿಂದುಂಟಾಯಿತೋ ಅರಿಯೆವು! ಎಲೈ ಲೋಕನಾಥನೆ, ಸಂಸಾರ ಚಕ್ರದಲ್ಲಿ ತಗಲಿ ಸುತ್ತುತ್ತಿರುವ ಪುರುಷನು ನಿನ್ನ ಪಾದಾರವಿಂದ ರಜಸ್ಸನ್ನು ಸೇವಿಸಲು ಯೋಗ್ಯವಾದ್ದೆಂದು ನಿನ್ನನ್ನು ಪ್ರಾರ್ಥಿಸುತ ಅದನ್ನು ಪ್ರತ್ಯಕ್ಷನಾಗಿ ಪಡೆಯುವನು ; ಶ್ರೀಲಕ್ಷ್ಮೀದೇವಿ ಮೊದಲಾದ ದೇವತೆಗಳಿಂದಲೂ ಹೊಂದಲಶಕ್ಯವಾದ ಅಂಥಾ ನಿನ್ನ ಪಾದವನ್ನೇ ತಮೋಗುಣದಿಂದುತ್ಪನ್ನನಾಗಿ ಕ್ರೋಧಾಧೀನನಾಗಿ ಸರ್ಪಗಳಿಗೆ ಅಧಿಪತಿಯಾದ ನಮ್ಮ ಪತಿಯು ಪ್ರಯಾಸವಿಲ್ಲದೆ ಪಡೆದನು ; ಚಿಂತಿಸಲಶಕ್ಯವಾದ ಸಾಮರ್ಥ್ಯವುಳ್ಳವನಾಗಿ ಶರೀರದಲ್ಲಿ ಅಂತರ್ಯಾಮಿರೂಪದಿಂದಿರುವವನಾದಾಗ್ಯೂ ಅಪರಿಚ್ಛಿನ್ನನಾಗಿ ಆಕಾಶಾದಿ ಪಂಚಮಹಾಭೂತಗಳಿಗೆ ಆಶ್ರಯನಾಗಿ ಪ್ರಪಂಚದ ಸೃಷ್ಟಿಗಿಂತಲು ಪೂರ್ವದಲ್ಲಿ ಸದ್ರೂಪದಿಂದ ಕಾರಣನಾಗಿಯೂ ಕಾರಣಾತೀತನಾಗಿಯೂ ಇರುವ ನಿನಗೆ ನಮಸ್ಕಾರವು! ಜ್ಞಾನವಿಜ್ಞಾನಗಳಿಗೆ ನಿಧಿರೂಪನಾಗಿ ಗುಣರಹಿತನಾಗಿ ನಿರ್ವಿಕಾರನಾಗಿ ಬ್ರಹ್ಮರೂಪನಾಗಿ ಪ್ರಕೃತಿ ಪ್ರವರ್ತಕನಾಗಿ ಅವ್ಯಾಕೃತಗಳಾದ ಅನಂತಶಕ್ತಿಗಳೊಡನೆ ಯುಕ್ತನಾಗಿ ಕಾಲಸ್ವರೂಪನಾಗಿ ಕಾಲಶಕ್ತಿಗೆ ಆಶ್ರಯನಾಗಿ ಕಾಲಕ್ಕೆ ಅವಯವಗಳಾದ ಸೃಷ್ಟಿಸ್ಥಿತಿ ಸಂಹಾರಗಳಿಗೆ ಸಾಕ್ಷಿರೂಪನಾಗಿ ಪ್ರಪಂಚರೂಪನಾಗಿ ಪ್ರಪಂಚಕ್ಕೆ ದ್ರಷ್ಟೃವಾಗಿಯೂ ಕರ್ತೃವಾಗಿಯೂ ಸರ್ವಸಾಧನರೂಪನಾಗಿಯೂ ಇರುವ ನಿನಗೆ ನಮಸ್ಕಾರವು! ಪಂಚಭೂತಗಳು ಪಂಚತನ್ಮಾತ್ರೆಗಳು ದಶೇಂದ್ರಿಯಗಳು ಪಂಚಪ್ರಾಣಗಳು ಮನಸ್ಸು ಬುದ್ಧಿಯು ಚಿತ್ತವು ಮೊದಲಾದ ಸಮಸ್ತ ರೂಪನಾದಕಾರಣ ಸರ್ವಕಾರಣರೂಪನಾಗಿ ತ್ರಿಗುಣಾತ್ಮಕವಾದ ಅಹಂಕಾರದಿಂದ ಆಚ್ಛಾದನಂಗೈಯಲ್ಪಟ್ಟ ಸ್ವಾಂಶಭೂತರಾದ ಜೀವಾತ್ಮರಿಗೆ ಆಯಾ ಅನುಭವವನ್ನುಂಟುಮಾಡುವ ನಿನಗೆ ನಮಸ್ಕಾರವು! ಅಹಂಕಾರಪರಿಚ್ಛೇದರಹಿತನಾಗಿ ದೃಶ್ಯನಲ್ಲದಿರುವದ್ದರಿಂದ ಸೂಕ್ಷ್ಮರೂಪನಾಗಿ ಉಪಾಧಿಗಳಿಂದ ಕಲ್ಪಿತಗಳಾದ ವಿಕಾರಗಳಿಲ್ಲದ್ದರಿಂದ ನಿರ್ಲೇಪನಾದ ಸರ್ವಜ್ಞನಾಗಿ ಉಂಟು ಇಲ್ಲ ಸರ್ವಜ್ಞನು ಕಿಂಚಿಜ್ಞನು ಬದ್ಧನು ಮುಕ್ತನು ಏಕನು ಅನೇಕನು ಎಂದು ನಾನಾವಿಧಗಳಾದ ವಾದಗಳಿಂದ ನಾನಾಪ್ರಕಾರವಾಗಿ ತೋರುತ್ತಿರುವ ನಿನಗೆ ನಮಸ್ಕಾರವು! ಚಕ್ಷುರಾದಿ ಪ್ರಮಾಣಗಳಿಗೆ ಚಕ್ಷುರಾದಿರೂಪನಾಗಿ ಆ ಚಕ್ಷುರಾದಿ ಇಂದ್ರಿಯಗಳನ್ನಪೇಕ್ಷಿಸದೆ ತಾನೇ ಸಮಸ್ತವನ್ನೂ ತಿಳಿಯುವ ವೇದರೂಪವಾದ ನಿಶ್ವಾಸವುಳ್ಳವನಾಗಿ ಪ್ರವೃತ್ತನಾಗಿಯೂ ನಿವೃತ್ತನಾಗಿಯೂ ವೇದಸ್ವರೂಪನಾಗಿಯೂ ಇರುವ ನಿನಗೆ ನಮಸ್ಕಾರವು! ಸಂಕರ್ಷಣನು ವಾಸುದೇವನು ಪ್ರದ್ಯುಮ್ನನು ಅನಿರುದ್ಧನು ಎಂದು ಚತುರ್ವ್ಯೂಹಮೂರ್ತಿಸ್ವರೂಪನಾಗಿ ತನ್ನ ಭಕ್ತರಿಗೆ ಸಾಲೋಕ್ಯಾದಿ ಮುಕ್ತಿಗಳನ್ನಿತ್ತು ಪಾಲಿಸುವ ಶ್ರೀಕೃಷ್ಣನಾದ ನಿನಗೆ ನಮಸ್ಕಾರವು! ಚಿತ್ತಾದಿಗಳನ್ನು ಪ್ರಕಾಶಂಗೈಯುತ ಆ ಚಿತ್ತಾದಿಗಳಿಂದಲೇ ಉಪಾಸಕರಿಗೆ ವಿಚಿತ್ರಗಳಾದ ಫಲಗಳನ್ನು ಕಲ್ಪಿಸುವದಕ್ಕೋಸ್ಕರ ಆತ್ಮಸ್ವರೂಪವನ್ನಾಚ್ಛಾದನಂಗೈದು ನಾನಾರೂಪದಿಂದ ಪ್ರಕಾಶಿಸುತ ಆ ಚಿತ್ತಾದಿ ವೃತ್ತಿಗಳಿಂದ ಅತಿ ಪ್ರಯಾಸದಿಂದ ಕಾಣಲು ಯೋಗ್ಯನಾಗಿ ಚಿತ್ತಾದಿಗಳಿಗೆ ಸಾಕ್ಷಿರೂಪನಾಗಿ ಅಗೋಚರನಾಗಿರುವ ನಿನಗೆ ನಮಸ್ಕಾರವು! ಎಲೈ ಸಕಲೇಂದ್ರಿಯ ಪ್ರವರ್ತಕನಾದ ಹರಿಯೆ, ಊಹಿಸಲಶಕ್ಯವಾದ ಮಹಿಮೆಯುಳ್ಳವನಾಗಿ ಆಕಾಶಾದಿ ಸಮಸ್ತ ಕಾರ್ಯಗಳ ಉತ್ಪತ್ತಿ ಪ್ರಕಾಶಗಳಿಗೆ ಕಾರಣತ್ವದಿಂದ ತಿಳಿಯಲು ಯೋಗ್ಯನಾಗಿ ಆತ್ಮಾರಾಮನಾಗಿ ಮೌನಶೀಲನಾಗಿರುವ ನಿನಗೆ ನಮಸ್ಕಾರವು! ಕಾರ್ಯಾಕಾರಣಗಳ ಗತಿಯನ್ನು ತಿಳಿದವನಾದಕಾರಣ ಒಂದರಲ್ಲಿಯೂ ಆಸಕ್ತನಾಗಿಲ್ಲದವನಾಗಿ ಸರ್ವಪ್ರಪಂಚಕ್ಕೂ ಅಧಿಷ್ಠಾತೃವಾಗಿ ಪ್ರಪಂಚನಿಷೇಧಕ್ಕೆ ಅವಧಿಭೂತನಾಗಿ ಪ್ರಪಂಚಕಾರ್ಯಗಳಿಗೆ ಅಧಿಷ್ಠಾನಸ್ವರೂಪನಾಗಿ ಪ್ರಪಂಚದ ಅಧ್ಯಾಸಾಪವಾದಗಳಿಗೆ ಸಾಕ್ಷಿರೂಪನಾಗಿ ಅವಿದ್ಯೆಯಿಂದ ಪ್ರಪಂಚದ ಅಧ್ಯಾಸಕ್ಕೂ ವಿದ್ಯೆಯಿಂದ ಅಪವಾದಕ್ಕೂ ಕಾರಣಭೂತನಾಗಿ ಸರ್ವಜ್ಞತ್ವ ಸರ್ವಾಧಿಷ್ಠಾತೃತ್ವ ಆತ್ಮಾರಾಮತ್ವ ಮೊದಲಾದ ಗುಣಗಳಿಂದ ಸರ್ವೋತ್ಕೃಷ್ಟ

ವಾಗಿ ಐಶ್ವರ್ಯವುಳ್ಳವನಾದ ನಿನಗೆ ನಮಸ್ಕಾರವು! ಎಲೈ ವಿಭುವಾದ ಶ್ರೀಕೃಷ್ಣನೆ, ವ್ಯಾಪಾರರಹಿತನಾದ ನೀನು ಅನಾದಿಕಾಲಶಕ್ತಿಯನ್ನು ಧರಿಸಿ ಸತ್ವರಜಸ್ತಮೋಗುಣಗಳಿಂದ ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಮಾಡುತಿದ್ದೀ! ಅಮೋಘವಾದ ವಿಹಾರವುಳ್ಳ ನೀನೇ ಸಂಸ್ಕಾರರೂಪದಿಂದಿರುವ ಶಾಂತಕ್ರೂರತ್ವಾದಿ ಆಯಾ ಸ್ವಭಾವಗಳನ್ನು ನಿನ್ನ ದೃಷ್ಟಿಮಾತ್ರದಿಂದಲೆ ಪ್ರತಿಬೋಧನಂಗೈಯುತ ಕ್ರೀಡಿಸುವೆ; ಆದ್ದರಿಂದ ಮೂರುಲೋಕಗಳಲ್ಲಿರುವ ಶಾಂತರಾದ ಪ್ರಾಣಿಗಳೂ ಅಶಾಂತರಾದ ಪ್ರಾಣಿಗಳೂ ಮೂಢಜನ್ಮದಲ್ಲಿ ಜನಿಸಿರುವ ಸರ್ಪಾದಿ ಸಮಸ್ತಜಂತುಗಳೂ ನಿನ್ನ ಕ್ರೀಡಾಸಾಮಗ್ರಿಗಳಾದಾಗ್ಯೂ ಸತ್ಪುರುಷರ ಧರ್ಮಗಳನ್ನು ಪರಿಪಾಲಿಸಲು ಪ್ರವರ್ತಿಸುವವನಾದಕಾರಣ ಅವರನ್ನು ರಕ್ಷಿಸಲೋಸುಗ ಅವತರಿಸಿರುವ ನಿನಗೆ ಈಗ ಶಾಂತರಾದ ಪ್ರಾಣಿಗಳೇ ಪ್ರಿಯರಾಗಿರುವರು! ಎಲೈ ಪರಮಶಾಂತಸ್ವಭಾವನಾದ ಶ್ರೀಹರಿಯೆ, ನಮಗೆ ಪತಿಯಾಗಿ ನಿನಗೆ ಪುತ್ರಪ್ರಾಯನಾಗಿ ನಿನ್ನ ಸ್ವರೂಪವನ್ನರಿಯದಿರುವ ಈ ಕಾಳೀಯನಿಂದ ಮಾಡಲ್ಪಟ್ಟ ಅಪರಾಧವು ಈ ಬಾರಿ ನಿನ್ನಿಂದ ಕ್ಷಮಿಸತಕ್ಕದ್ದು! ಎಲೈ ಭಗವಂತನೆ, ಈ ಕಾಳೀಯನು ನಿನ್ನ ಪಾದಘಾತಗಳಿಂದ ಪ್ರಾಣಗಳನ್ನು ಬಿಡುವನು; ಆದಕಾರಣ ಶೀಘ್ರವಾಗಿ ಈತನಲ್ಲಿ ಅನುಗ್ರಹಮಾಡು; ಸಾಧುಗಳಿಂದ ದಯೆಗೈಯಲು ಯೋಗ್ಯರಾಗಿ ಸ್ತ್ರೀಯರಾದ ನಮಗೆ ಪತಿಯೇ ಪ್ರಾಣಸ್ವರೂಪವಾದ್ದರಿಂದ ನಮಗೆ ಪತಿಯನ್ನು ಕೊಡು; ವಿಶ್ವಾಸದಿಂದನುವರ್ತಿಸಿ ನಡೆದರೆ ಸಮಸ್ತ ಭಯವಿಮುಕ್ತವಾಗುವಂಥಾ ನಿನ್ನ ಆಜ್ಞೆಯಿಂದ ನಿನ್ನ ದಾಸಿಯರಾದ ನಮಗೆ ಮಾಡತಕ್ಕ ಕಾರ್ಯವನ್ನು ನಿರೂಪಿಸು" ಎಂದು ಪ್ರಾರ್ಥಿಸಿದರು.

ಎಲೈ ಪರೀಕ್ಷಿದ್ರಾಯನೆ, ಭಗವಂತನಾದ ಶ್ರೀಕೃಷ್ಣನು ಈರೀತಿ ನಾಗಪತ್ನಿಯರಿಂದ ಅತ್ಯಂತವಾಗಿ ಸ್ತುತಿಸಲ್ಪಟ್ಟು ಪಾದಘಾತಗಳಿಂದ ಭಗ್ನಗಳಾದ ಶಿರಸ್ಸುಗಳುಳ್ಳವನಾಗಿ ಮೂರ್ಛಿತನಾಗಿದ್ದ ಕಾಳೀಯನನ್ನು ಬಿಟ್ಟನು; ಆ ನಾಗೇಂದ್ರನು ಮೆಲ್ಲಮೆಲ್ಲಗೆ ತಿರಿಗಿಬಂದ ಇಂದ್ರಿಯಗಳೂ ಪ್ರಾಣಗಳೂ ಉಳ್ಳವನಾಗಿ ಅತ್ಯಂತ ಕಷ್ಟದಿಂದ ನಿಟ್ಟುಸುರುಬಿಡುತ ದೀನನಾಗಿ ಅಂಜಲೀಬದ್ಧನಾಗಿ ಶ್ರೀಕೃಷ್ಣನನ್ನು ಕುರಿತು "ಎಲೈ ಸ್ವಾಮಿಯೆ, ಪ್ರಾಣಿಗಳಿಗೆ ಯಾವ ಸ್ವಭಾವದಿಂದ ಅಸತ್ಯಗಳಾದ ದೇಹಾದಿಗಳಲ್ಲಿ ತಾನೆಂಬ ಆಗ್ರಹವು ತ್ಯಾಗಂಗೈಯಲಶಕ್ಯವಾಗಿರುವದೋ ಅಂಥಾ ಸ್ವಭಾವವನ್ನು ಉತ್ಪತ್ತಿಯಲ್ಲೇ ದುಷ್ಟರಾಗಿ ತಮೋಗುಣಪ್ರಧಾನರಾಗಿ ದೀರ್ಘಕೋಪಯುಕ್ತರಾಗಿರುವ ನಾವು ಹ್ಯಾಗೆ ತ್ಯಜಿಸಲು ಸಮರ್ಥರಾದೇವು! ಎಲೈ ಸೃಷ್ಟಿಕರ್ತನಾದ ಶ್ರೀಹರಿಯೆ, ಭಗವಂತನಾದ ನಿನ್ನಿಂದ ಸತ್ವರಜಸ್ತಮೋಗುಣಗಳಿಂದ ನಾನಾಪ್ರಕಾರವಾಗಿ ಸೃಜಿಸಲ್ಪಡುವ ಈ ಜಗತ್ತು ನಾನಾವಿಧಗಳಾದ ಸ್ವಭಾವ ಪರಾಕ್ರಮ ಬಲ ಕ್ಷೇತ್ರ ಬೀಜ ಅಂತಃಕರಣ ಆಕೃತಿಗಳುಳ್ಳಂಥಾದ್ದಾಗಿರುವದು! ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣದೇವನೆ, ಪ್ರಪಂಚದಲ್ಲಿ ಉತ್ಪತ್ತಿಯಿಂದಲೆ ಅಧಿಕವಾದ ಕೋಪಸ್ವಭಾವದಿಂದ ಮೋಹಯುಕ್ತರಾಗಿ ಸರ್ಪಗಳಾದ ನಾವು ತ್ಯಜಿಸಲಶಕ್ಯವಾದ ನಿನ್ನ ಮಾಯೆಯನ್ನು ಹ್ಯಾಗೆ ತ್ಯಜಿಸಲು ಯೋಗ್ಯರಾದೇವು! ಎಲೈ ಸ್ವಾಮಿಯೆ, ನಿನ್ನ ಮಾಯೆಯನ್ನು ತ್ಯಾಗಂಗೈವವರಲ್ಲಿ ಸರ್ವಜ್ಞನಾಗಿ ಜಗದೀಶ್ವರನಾದ ನೀನೇ ಕಾರಣನಾಗಿರುವೆಯಾದ್ದರಿಂದ ನಿನ್ನ ಮಾಯೆಯಲ್ಲಿ ಶಿಕ್ಕಿದ ನನ್ನಲ್ಲಿ ಅನುಗ್ರಹವನ್ನಾದರೂ ಲೋಕಬಾಧಕನೆಂದು ನಿಗ್ರಹವನ್ನಾದರೂ ಯಾವದು ಯುಕ್ತವೋ ಅದನ್ನು ಮಾಡು!" ಎಂದು ಪ್ರಾರ್ಥಿಸಿದನು.

ಎಲೈ ಪರೀಕ್ಷಿದ್ರಾಯನೆ, ಈರೀತಿಯಲ್ಲಿ ಕಾಳೀಯನಿಂದ ವಿಜ್ಞಾಪನಂಗೈಯಲ್ಪಟ್ಟದ್ದನ್ನು ಕೇಳಿ ಕಾರ್ಯಾರ್ಥವಾಗಿ ಮನುಷ್ಯರೂಪವನ್ನು ಧರಿಸಿದ್ದ ಭಗವಂತನಾದ ಶ್ರೀಕೃಷ್ಣನು ಆತನನ್ನು ಕುರಿತು "ಎಲೈ ಕಾಳೀಯನೆ, ಈ ಯಮುನಾನದಿಯ ಜಲವು ಗೋವುಗಳಿಂದಲೂ ಮನುಷ್ಯರಿಂದಲೂ ಪಾನಂಗೈಯತಕ್ಕದಾದ್ದರಿಂದ ನೀನು ಈ ನದಿಯಲ್ಲಿರಲು ಯೋಗ್ಯನಲ್ಲ; ಆದಕಾರಣ ನೀನು ನಿನ್ನ ಜ್ಞಾತಿ ಪತ್ನಿಪುತ್ರರೊಡಗೂಡಿ ಶೀಘ್ರದಲ್ಲಿ ಸಮುದ್ರವನ್ನು ಕುರಿತು ಪೋಗು!—— ಎಲೈ ಕಾಳೀಯನೆ, ನಿನಗೆ ಈಗ ನನ್ನಿಂದ ಮಾಡಲ್ಪಟ್ಟ ಈ ಆಜ್ಞಾವಚನವನ್ನು ಪ್ರಾತಃಸಾಯಂಕಾಲಗಳಲ್ಲಿ ಕೀರ್ತನಂಗೈಯುತ ಸ್ಮರಿಸುವ ಪುರುಷನಿಗೆ ನಿಮ್ಮ ಭಯವುಂಟಾಗದಿರಲೀ! ನನ್ನಿಂದ ವಿಹರಿಸಲ್ಪಟ್ಟ ಈ ಯಮುನಾಮಡುವಿನಲ್ಲಿ ಸ್ನಾನಂಗೈದು ಜಲಾಂಜಲಿಗಳಿಂದ ದೇವಋಷಿಪಿತೃಗಳಿಗೆ ತರ್ಪಣವನ್ನು ಮಾಡಿ

ಉಪವಾಸವಿದ್ದು ನನ್ನನ್ನು ಸ್ಮರಿಸುತ ಪೂಜಿಸುವ ಪುರುಷನು ಸಮಸ್ತ ಪಾಪಂಗಳಿಂದಲೂ ವಿಮುಕ್ತನಾಗುವನು! ಎಲೈ ಕಾಳೀಯನೆ, ನೀನು ಯಾರದೆಸೆಯಿಂದ ಭಯಪಟ್ಟು ರಮಣಕದ್ವೀಪವನ್ನು ಬಿಟ್ಟು ಈ ಮಡುವನ್ನಾಶ್ರಯಿಸಿ ದೆಯೊ ಅಂಥಾ ಗರುಡನು ನನ್ನ ಪಾದಗಳಿಂದ ಲಾಂಛಿತಗಳಾದ ಶಿರಸ್ಸುಗಳುಳ್ಳ ನಿನ್ನನ್ನು ಭಕ್ಷಿಸನು!" ಎಂದನು.

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ಆಶ್ಚರ್ಯಕರವಾದ ವ್ಯಾಪಾರವುಳ್ಳ ಭಗವಂತನಾದ ಶ್ರೀಕೃಷ್ಣನಿಂದ ಬಿಡಲ್ಪಟ್ಟ ಕಾಳೀಯನೂ ಆತನ ಪತ್ನಿಗಳೂ ಆದರಣೆಯೊಡಗೂಡಿ ದಿವ್ಯವಾದ ವಸ್ತ್ರಗಳು ರತ್ನಮಾಲ್ಯಗಳು ಸರ್ವೋತ್ತಮವಾದ ಭೂಷಣಗಳು ದಿವ್ಯಗಂಧಾನುಲೇಪನಗಳು ಮಹತ್ತಾದ ಕುಮುದಪುಷ್ಪಗಳಿಂದ ರಚಿಸಲ್ಪಟ್ಟ ಮಾಲ್ಯಗಳು ಮೊದಲಾದವುಗಳಿಂದ ಜಗನ್ನಾಥನಾದ ಶ್ರೀಕೃಷ್ಣನನ್ನು ಪೂಜಿಸಿ ಆತನ ಪ್ರಸಾದವನ್ನು ಪಡೆದು ಅತ್ಯಂತ ಸಂತೋಷಯುಕ್ತರಾಗಿ ಆತನ ಅನುಜ್ಞೆಯನ್ನು ಪಡೆದು ಆತನಿಗೆ ಪ್ರದಕ್ಷಿಣ ನಮಸ್ಕಾರಗಳಂಗೈದು ಪುತ್ರಪೌತ್ರರೊಡಗೂಡಿ ಸಮುದ್ರಮಧ್ಯದಲ್ಲಿರುವ ರಮಣಕದ್ವೀಪವನ್ನೈದಿದರು! ಎಲೈ ಅರಸೆ, ಆ ಬಳಿಕ ಯಮುನಾನದಿಯ ಆ ಮಡುವು ಲೀಲೆಯಿಂದ ಮನುಷ್ಯರೂಪವನ್ನು ಧರಿಸಿದ್ದ ಭಗವಂತನಾದ ಶ್ರೀಕೃಷ್ಣನ ಅನುಗ್ರಹದದೆಸೆಯಿಂದ ವಿಷರಹಿತವಾಗಿ ಅಮೃತಕ್ಕೆ ಸಮಾನವಾದ ಜಲವುಳ್ಳದ್ದಾಯಿತು!

---

## ೧೭ ನೇ ಅಧ್ಯಾಯ.

### ಶ್ರೀಕೃಷ್ಣನು ತನ್ನ ಬಂಧುಗಳನ್ನು ವನಾಗ್ನಿಯದೆಸೆಯಿಂದ ರಕ್ಷಿಸಿದ್ದು.

ಅನಂತರದಲ್ಲಿ ಪರೀಕ್ಷಿದ್ರಾಯನು ಶುಕಮುನಿಯನ್ನು ಕುರಿತು--ಎಲೈ ಶುಕಮುನಿಯೆ, ಕಾಳೀಯವೆಂಬ ಆ ಮಹಾಸರ್ಪವು ಮೊದಲು ಏನುಕಾರಣ ಸರ್ಪಗಳಿಗೆ ಆವಾಸಸ್ಥಾನವಾದ ರಮಣಕದ್ವೀಪವನ್ನು ಬಿಟ್ಟು ಯಮುನಾನದಿಗೆ ಬಂತು? ಆ ಒಂದು ಸರ್ಪದಿಂದ ಗರುಡನಿಗೆ ಅಹಿತವಾದ ವ್ಯಾಪಾರವೇನುಮಾಡಲ್ಪಟ್ಟಿತು? ಆ ವೃತ್ತಾಂತಗಳನ್ನು ನನಗೆ ನಿರೂಪಿಸು—ಎಂದು ಕೇಳಿದನು.

ಶುಕಮುನಿಯು ಆತನನ್ನು ಕುರಿತು—ಎಲೈ ಪರೀಕ್ಷಿದ್ರಾಯನೆ, ಈ ಲೋಕದಲ್ಲಿ ಸರ್ಪೋಪಾಸಕರಾದ ಜನರಿಂದ ಸರ್ಪೋಪದ್ರವಪರಿಹಾರಾರ್ಥವಾಗಿ ಪ್ರತಿಮಾಸದಲ್ಲಿಯೂ ಸರ್ಪಗಳಿಗೆ ಭಕ್ಷ್ಯಗಳಿಂದ ವೃಕ್ಷಮೂಲದಲ್ಲಿ ಕೊಡತಕ್ಕ ಬಲಿಯು ಪೂರ್ವದಲ್ಲಿ ನಿಯಮಿಸಲ್ಪಟ್ಟಿತ್ತು; ಆ ಸರ್ಪಗಳು ಹಾಗೆ ತಮಗೆ ಕೊಡಲ್ಪಟ್ಟ ಬಲಿದ್ರವ್ಯದಲ್ಲಿ ಒಂದು ಭಾಗವನ್ನು ಗರುಡನಿಂದ ತಮಗೆ ಭಯವಿಲ್ಲದಂತೆ ತಮ್ಮ ಕ್ಷೇಮಕ್ಕೋಸ್ಕರ ಆ ಮಹಾತ್ಮನಿಗೆ ಕೊಡುತಿದ್ದವು; ಆದರೆ ಕದ್ರುದೇವಿಗೆ ಪುತ್ರನಾದ ಕಾಳೀಯನು ವಿಷದಿಂದಲೂ ಪರಾಕ್ರಮದಿಂದಲೂ ಉಂಟಾದ ಮದವುಳ್ಳವನಾಗಿ ಗರುಡನನ್ನು ಗಣನೆಗೈಯದೆ ತನ್ನ ಭಾಗಕ್ಕೆ ಬಂದ ಬಲಿದ್ರವ್ಯವನ್ನು ತಾನೇ ಭಕ್ಷಿಸಿದನು; ಭಗವಂತನಿಗೆ ಪ್ರಿಯನಾದ ಆ ಪಕ್ಷೀಂದ್ರನು ಕಾಳೀಯನ ವ್ಯಾಪಾರವನ್ನು ಕಂಡು ಕ್ರೋಧಯುಕ್ತನಾಗಿ ಅವನನ್ನು ಸಂಹರಿಸಬೇಕೆಂದು ಮಹಾ ವೇಗದಿಂದ ಅಟ್ಟಿಕೊಂಡು ಬಂದನು; ಆಗ ವಿಷದಂತಗಳನ್ನು ಆಯುಧಗಳಾಗುಳ್ಳವನಾಗಿ ಮೇಲಕ್ಕೆತ್ತಲ್ಪಟ್ಟ ಅನೇಕ ಹೆಡೆಗಳುಳ್ಳವನಾಗಿ ಭಯಂಕರವಾದ ನಾಲಿಗೆಗಳುಳ್ಳವನಾಗಿ ಕ್ರೂರದೃಷ್ಟಿಯುಳ್ಳ ನೇತ್ರಗಳುಳ್ಳ ಕಾಳೀಯನು ಹಾರಿ ಬರುತಿದ್ದ ಗರುಡನನ್ನು ಕಂಡು ಆತನೊಡನೆ ಯುದ್ಧಂಗೈಯಲೋಸುಗ ವೇಗದಿಂದಿದಿರಾಗಿ ಹೋಗಿ ತನ್ನ ದಂತಗಳಿಂದ ಗರುಡನನ್ನು ಕಚ್ಚಿದನು; ಮಹಾವಿಷ್ಣುವಿಗೆ ವಾಹನವಾಗಿ ಪ್ರಚಂಡವೇಗವುಳ್ಳವನಾಗಿ ಭಯಂಕರನಾದ ಪರಾಕ್ರಮವುಳ್ಳ ಗರುಡನು ಅತ್ಯಂತ ಕೋಪಯುಕ್ತನಾಗಿ ಕಾಳೀಯನನ್ನು ತಿರಸ್ಕರಿಸಿ ಸುವರ್ಣದಂತೆ ಹೊಳೆಯುತಿರುವ ತನ್ನ ವಾಮಪಕ್ಷದಿಂದ ಪ್ರಹರಿಸಿದನು; ಕಾಳೀಯನು ಅದರಿಂದ ಅತ್ಯಂತ ಖಿನ್ನನಾಗಿ ಗರುಡನು ಪ್ರವೇಶಿಸಲಶಕ್ಯವಾಗಿ ಅಗಾಧವಾದ ಆ ಯಮುನಾನದಿಯ ಮಡುವನ್ನು ಪ್ರವೇಶಿಸಿದನು!

ಎಲೈ ಅರಸೆ, ಒಂದು ಸಮಯದಲ್ಲಿ ಗರುಡನು ಆ ಯಮುನಾನದಿಯ ಮಡುವಿನಲ್ಲಿ ತನಗೆ ಭಕ್ಷಿಸಲು ಯೋಗ್ಯವಾಗಿಯೂ ಇಷ್ಟವಾಗಿಯೂ ಇದ್ದ ಒಂದು ಮತ್ಸ್ಯವನ್ನು ಕಂಡು ಸಾಭರಿ ಮುನಿಯಿಂದ ತಡೆಯಲ್ಪಟ್ಟರೂ ಅತ್ಯಂತ ಕ್ಷುತ್ತಿನಿಂದ ಬಳಲಿದ್ದಕಾರಣ ಬಲಾತ್ಕಾರದಿಂದ ಆ ಮತ್ಸ್ಯವನ್ನು ಹಿಡಿದು ಭಕ್ಷಿಸಿದನು ; ಸಮಸ್ತ ಮತ್ಸ್ಯಗಳಿಗೂ ಅಧಿಪತಿಯಾದ ಆ ಮಹಾಮತ್ಸ್ಯವು ಗರುಡನಿಂದ ಅಪಹರಿಸಲ್ಪಡಲು ಅತ್ಯಂತ ದುಃಖಯುಕ್ತವಾಗಿ ದೀನವಾಗಿದ್ದ ಮಿಕ್ಕ ಮತ್ಸ್ಯಗಳನ್ನು ನೋಡಿ ಆ ನದಿಯಲ್ಲಿ ವಾಸಂಗೈಯುತ್ತಿದ್ದ ಸಾಭರಿ ಮಹಾಋಷಿಯು ದಯೆಯಿಂದ ಆ ಮತ್ಸ್ಯಗಳಿಗೆ ಕ್ಷೇಮವನ್ನುಂಟುಮಾಡಲೆಣಿಸಿ " ಗರುಡನು ಇತಃಪರದಲ್ಲಿ ಈ ಯಮುನಾನದಿಯ ಮಡುವಿನಲ್ಲಿ ಪ್ರವೇಶಿಸಿ ಮತ್ಸ್ಯಗಳನ್ನು ಭಕ್ಷಿಸಿದರೆ ಆ ಕ್ಷಣದಲ್ಲೇ ಪ್ರಾಣರಹಿತನಾಗುವನು ! ಈ ಅರ್ಥವು ಸತ್ಯವು ! " ಎಂದು ಶಪಿಸಿದನು. ಎಲೈ ಅರಸೆ, ಈರೀತಿ ಗರುಡನಿಗೆ ಸಾಭರಿಮುನಿಯಿಂದ ಕೊಡಲ್ಪಟ್ಟ ಶಾಪವನ್ನು ಕಾಳೀಯನೊಬ್ಬನೆ ತಿಳಿದಿದ್ದನು ; ಆ ಶಾಪವನ್ನು ಮತ್ತೊಂದು ಸರ್ಪವರಿತಿರಲಿಲ್ಲ ; ಆ ಕಾರಣ ಕಾಳೀಯನು ಗರುಡನದೆಶೆಯಿಂದ ಭಯಪಟ್ಟು ಆ ಮಡುವಿನಲ್ಲಿ ಅದುವರಿಗೂ ವಾಸಂಗೈದು ಕೃಷ್ಣನಿಂದ ರಮಣಕದ್ವೀಪವನ್ನೈದಿಸಲ್ಪಟ್ಟನು ! ಅನಂತರದಲ್ಲಿ ಕಾಳೀಯನನ್ನು ಕೃತಾರ್ಥನಾಗಿಮಾಡಿ ಆ ಯಮುನಾನದಿಯ ಮಡುವಿನದೆಶೆಯಿಂದ ಬರುತ ದಿವ್ಯಮಾಲ್ಯ ಗಂಧ ದುಕೂಲಗಳುಳ್ಳವನಾಗಿ ಅನರ್ಘ್ಯವಾದ ರತ್ನಸಮೂಹಗಳಿಂದಲೂ ಸುವರ್ಣಾಭರಣಗಳಿಂದಲೂ ಅಲಂಕೃತನಾಗಿದ್ದ ಶ್ರೀಕೃಷ್ಣದೇವನನ್ನು ತಿರಿಗೂ ಪಡೆದು ಯಶೋದಾದೇವಿಯೂ ರೋಹಿಣೀದೇವಿಯೂ ನಂದಗೋಪನೂ ಮಿಕ್ಕ ಗೋಪಸ್ತ್ರೀಯರೂ ಗೋಪಾಲಕರೂ ಪುನಹ ಪ್ರಾಣಗಳನ್ನು ಪಡೆದಿರುವ ಇಂದ್ರಿಯಗಳಂತೆವ್ದು ಆನಂದದಿಂದ ಪೂರ್ಣವಾದ ಮನಸ್ಸುಳ್ಳವರಾಗಿ ಪ್ರೀತಿಯಿಂದ ಆತನನ್ನಾಲಿಂಗಿಸಿಕೊಂಡರು ; ಚೇಷ್ಟೆಗಳೊಡಗೂಡಿ ಪಡೆಯಲ್ಪಟ್ಟ ಮನೋರಥವುಳ್ಳವರಾದರು ; ಬಲರಾಮನು ಶ್ರೀಕೃಷ್ಣನನ್ನಾಲಿಂಗನಂಗೈದು ಆತನ ಪ್ರಭಾವವನ್ನು ತಿಳಿದವನಾದ್ದರಿಂದ ನಕ್ಕನು ; ಆ ಯಮುನಾತೀರದಲ್ಲಿದ್ದ ವೃಕ್ಷಗಳು ಕಾಳೀಯನ ವಿಷಜ್ವಾಲೆಯಿಂದ ಒಣಗಿದ್ದವಾದಾಗ್ಯೂ ಆ ಕ್ಷಣದಲ್ಲೆ ಕೃಷ್ಣನ ಪ್ರಭಾವದಿಂದ ವೃದ್ಧಿಯನ್ನೈದಿದವು ; ಗೋವುಗಳೂ ವೃಷಭಗಳೂ ಕರುಗಳೂ ಆತನನ್ನು ಪಡೆದು ಪರಮಾನಂದವನ್ನೈದಿದವು ! ಅನಂತರದಲ್ಲಿ ಗುರುಗಳಾದ ಬ್ರಾಹ್ಮಣರು ತಮ್ಮ ಪತ್ನೀಪುತ್ರರೊಡಗೂಡಿ ನಂದಗೋಪನ ಸಮೀಪವನ್ನೈದಿ ಆತನನ್ನು ಕುರಿತು " ಎಲೈ ನಂದಗೋಪನೆ, ಕಾಳೀಯನೆಂಬ ಮಹಾಸರ್ಪದಿಂದ ಪೀಡಿತನಾದ ನಿನ್ನ ಪುತ್ರನು ಅದೃಷ್ಟವಶದಿಂದ ಬಿಡಲ್ಪಟ್ಟನು ; ಆದ್ದರಿಂದ ಬ್ರಾಹ್ಮಣರಿಗೆ ಕೊಡತಕ್ಕ ದ್ರವ್ಯವನ್ನು ಉತ್ಸಾಹದಿಂದಿತ್ತು ಸಂತೋಷಪಡಿಸು " ಎಂದು ನುಡಿದರು.

ನಂದಗೋಪನು ಅವರ ವಚನವನ್ನು ಕೇಳಿ ಸಂತುಷ್ಟವಾದ ಮನಸ್ಸುಳ್ಳವನಾಗಿ ಗೋವುಗಳನ್ನೂ ಸುವರ್ಣಗಳನ್ನೂ ಬ್ರಾಹ್ಮಣರಿಗೆ ಕೊಟ್ಟನು ; ಪತಿವ್ರತೆಯಾಗಿ ಮಹಾ ಭಾಗ್ಯವತಿಯಾದ ಯಶೋದಾದೇವಿಯು ನಷ್ಟಪ್ರಾಯನಾದ ಪುತ್ರನನ್ನು ಪುನಹ ಪಡೆದು ಆತನನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಆಲಿಂಗನಂಗೈದು ಅಮಿತಾನಂದಬಾಷ್ಪಗಳನ್ನು ಬಿಟ್ಟಳು !

ಎಲೈ ಅರಸೆ, ಆ ಬಳಿಕ ಆ ಗೋವುಗಳೂ ಗೋಪಾಲಕರೂ ಆ ರಾತ್ರಿಯಲ್ಲಿ ಆ ಯಮುನಾತೀರದಲ್ಲಿ ಕ್ಷುತ್ತಿನಿಂದಲೂ ಬಾಯಾರಿಕೆಯಿಂದಲೂ ಶ್ರಮೆಯಿಂದಲೂ ಪೀಡಿತರಾಗಿ ಆ ರಾತ್ರಿಯಲ್ಲಿದ್ದರು ; ಆ ಅರ್ಧರಾತ್ರಿಯಲ್ಲಿ ವನದಲ್ಲಿ ಅತ್ಯಂತ ವೇಗಯುಕ್ತವಾದ ವಾಯುವಿನಿಂದುದ್ಭವಿಸಿದ ಕಾಡುಗಿಚ್ಚು ಯಮುನಾತೀರದಲ್ಲಿ ನಿದ್ರೆಗೈಯುತ್ತಿದ್ದ ಗೋಕುಲವಾಸಿಗಳಾದ ಆ ಜನರ ಸುತ್ತಲೂ ವ್ಯಾಪಿಸಿಕೊಂಡು ದಹಿಸುವದಕ್ಕುದ್ಯುಕ್ತವಾಯಿತು ; ಅವರು ತ್ವರೆಯಿಂದೆದ್ದು ಮಾಯೆಯಿಂದ ಮನುಷ್ಯರೂಪವನ್ನು ತಾಳಿದವನಾಗಿ ಈಶ್ವರನಾದ ಶ್ರೀಕೃಷ್ಣನನ್ನು ಶರಣುಹೊಂದಿ " ಎಲೈ ಮಹಾಭುಜಬಲವುಳ್ಳ ಕೃಷ್ಣನೆ—ಕೃಷ್ಣನೆ ! ಎಲೈ ಅಮಿತಪರಾಕ್ರಮವುಳ್ಳ ರಾಮನೆ ! ಅತಿಭಯಂಕರವಾದ ಈ ವನಾಗ್ನಿಯು ನಿಮ್ಮವರಾದ ನಮ್ಮನ್ನು ಗ್ರಾಸಂಗೈಯುತಲಿದೆ ! ಎಲೈ ಪ್ರಭುವಾದ ಶ್ರೀಕೃ

ಷ್ಣನೆ, ದಾಟಲಶಕ್ಯವಾಗಿ ಮೃತ್ಯುರೂಪವಾದ ಈ ವನಾಗ್ನಿಯ ದೆಸೆಯಿಂದ ನಿನ್ನ ಮಿತ್ರರಾದ ನಮ್ಮನ್ನು ಸಲಹು ; ಯಾರಿಂದಲೂ ಭಯವಿಲ್ಲದಿರುವ ನಿನ್ನ ಪಾದಾರವಿಂದವನ್ನು ಬಿಡುವದಕ್ಕೆ ನಾವು ಸಮರ್ಥರಲ್ಲ!'' ಎಂದು ಮೊರೆಯಿಟ್ಟರು.

ಈರೀತಿ ತನ್ನನ್ನು ಶರಣುಹೊಂದಿದ ತನ್ನ ಸ್ವಜನರ ದೈನ್ಯವನ್ನು ನೋಡಿ ಜಗದೀಶ್ವರನಾಗಿ ಅಪರಿಚ್ಛಿನ್ನನಾಗಿ ಅನಂತಶಕ್ತಿಗಳನ್ನು ಧರಿಸಿದ ಶ್ರೀಕೃಷ್ಣಮೂರ್ತಿಯು ಅವರನ್ನು ರಕ್ಷಿಸಲೋಸುಗ ಅತ್ಯಂತ ತೀಕ್ಷ್ಣವಾದ ಆ ವನಾಗ್ನಿಯನ್ನು ಪಾನಂಗೈದನು!

## ೧೮ ನೇ ಅಧ್ಯಾಯ.

## ಪ್ರಲಂಬಾಸುರನ ವಧೆ.

ಎಲೈ ಪರೀಕ್ಷಿದ್ರಾಜನೆ, ಆ ಮಾರನೇ ದಿವಸ ಶ್ರೀಕೃಷ್ಣನು ಸಂತುಷ್ಟಚಿತ್ತರಾದ ಬಂಧುಗಳಿಂದ ಪರಿವೃತನಾಗಿ ಅವರಿಂದ ಶ್ಲಾಘಿಸಲ್ಪಡುತ ಗೋಸಮೂಹಗಳಿಂದಲಂಕರಿಸಲ್ಪಟ್ಟ ಗೋಕುಲವನ್ನು ಪ್ರವೇಶಿಸಿದನು! ಆ ಬಳಿಕ ಈ ರೀತಿಯಲ್ಲಿ ರಾಮಕೃಷ್ಣರು ಗೋವುಗಳನ್ನು ಪಾಲಿಸುತ ಮಾಯೆಯಿಂದ ನಂದಗೋಕುಲದಲ್ಲಿ ಕ್ರೀಡಿಸುತ್ತಿರಲು ಪ್ರಾಣಿಗಳಿಗೆ ಮನೋಹರವಲ್ಲದ ಗ್ರೀಷ್ಮಋತುವು ಆವಿರ್ಭವಿಸಿದರೂ ಭಗವಂತನಾದ ಶ್ರೀಕೃಷ್ಣನು ಬಲರಾಮನೊಡಗೂಡಿದ್ದ ಬೃಂದಾವನದಲ್ಲಿ ವಸಂತಋತುವಿನಂತೆ ಒಪ್ಪುತಿತ್ತು! ಗ್ರೀಷ್ಮಋತುವಿನಲ್ಲಿಯೂ ಜಲಪ್ರವಾಹಗಳ ಅತಿ ಘೋಷದಿಂದ ಆಚ್ಛಾದನಂಗೈಯಲ್ಪಟ್ಟ ಧ್ವನಿಯುಳ್ಳದ್ದಾಗಿ ಚಿಮ್ಮಂಡೆಗಳೆಂಬ ಸೂಕ್ಷ್ಮಕೀಟಸಮೂಹಗಳುಳ್ಳದ್ದಾಗಿ ಜಲಪ್ರವಾಹಗಳ ತುಂತುರುಗಳಿಂದ ರಸವತ್ತಾಗಿರುವ ವೃಕ್ಷಸಮೂಹಗಳಿಂದಲಂಕರಿಸಲ್ಪಟ್ಟ ಬೃಂದಾವನದ ಗುಣಗಳಿಂದ ಆ ಗ್ರೀಷ್ಮಋತುವು ಅತ್ಯಂತ ಹಸರಾದ ತೃಣಗಳಿಂದ ವ್ಯಾಪ್ತವಾಗಿ ಕಲ್ಹಾರ ಕಮಲ ಕುಮುದಗಳೆಂಬ ಪುಷ್ಪಪರಾಗಗಳುಳ್ಳ ಮಹಾನದಿ ಸರೋವರ ಗಿರಿಸಂಧಿಗಳ ತೆರೆಗಳ ವಾಯುವಿನಿಂದ ಆ ವನದಲ್ಲಿ ವಾಸಂಗೈಯುವ ಪ್ರಾಣಿಗಳಿಗೆ ಗ್ರೀಷ್ಮಋತುವಿನಂತೆ ಅಗ್ನಿ ಸೂರ್ಯರಿಂದ ತಾಪವುಂಟಾಗಲಿಲ್ಲ ; ಗ್ರೀಷ್ಮಋತುವಿನಲ್ಲಿ ವಿಷದಂತೆ ಅತಿ ತೀಕ್ಷ್ಣಗಳಾದ ಸೂರ್ಯಕಿರಣಗಳು ಅಗಾಧವಾದ ಜಲವುಳ್ಳ ನದಿಗಳ ತಡಿಗಳನ್ನು ವ್ಯಾಪಿಸಿಕೊಂಡು ಬರುವ ತೆರೆಗಳಿಂದ ಮರಳುದಿಣ್ಣೆಗಳೊಡಗೂಡಿ ದ್ರವಿಸುತ್ತಿರುವ ಕೆಸರುಳ್ಳ ಭೂಮಿಯ ಸಾರವನ್ನೂ ಅತ್ಯಂತ ಹಸರಾದ ತೃಣಗಳ ಕಾಂತಿಯನ್ನೂ ಯಾವಪ್ರದೇಶದಲ್ಲಿ ಅಪಹರಿಸಲಾರವೊ ಅನೇಕ ಪುಷ್ಪಯುಕ್ತವಾಗಿ ಧ್ವನಿಗೈಯುತಿರುವ ವಿಚಿತ್ರಗಳಾದ ಮೃಗಪಕ್ಷಿಗಳುಳ್ಳದ್ದಾಗಿ ಗಾನಂಗೈಯುತ್ತಿರುವ ಮಯೂರ ತುಂಬಿ ಕೋಕಿಲ ಹಂಸಪಕ್ಷಿಗಳುಳ್ಳದ್ದಾಗಿ ಶೋಭಾಯಮಾನವಾದ ಅಂಥಾ ಬೃಂದಾವನವನ್ನು ಭಗವಂತನಾದ ಶ್ರೀಕೃಷ್ಣಮೂರ್ತಿಯು ಬಲರಾಮನೊಡಗೂಡಿ ವೇಣುಗಾನಂಗೈಯುತಲೂ ಕ್ರೀಡಿಸುತಲೂ ಗೋಪಾಲಕರಿಂದಲೂ ಗೋಧನಗಳಿಂದಲೂ ಪರಿವೃತನಾಗಿ ಪ್ರವೇಶಿಸಿದನು! ಅನಂತರದಲ್ಲಿ ರಾಮಕೃಷ್ಣರು ಮೊದಲಾದ ಗೋಪಾಲಕರು ಬೃಂದಾವನದಲ್ಲಿ ತಳಿರುಗಳಿಂದಲೂ ಮಯೂರಪಿಂಛಗಳಿಂದಲೂ ಹುವ್ವಿನ ಗೊಂಚಲುಗಳಿಂದಲೂ ಮಾಡಲ್ಪಟ್ಟ ಮಾಲೆಗಳುಳ್ಳವರಾಗಿಯೂ, ಗೈರಿಕಾದಿ ಧಾತುಗಳಿಂದ ಕಲ್ಪಿತಗಳಾದ ಭೂಷಣಗಳುಳ್ಳವರಾಗಿಯೂ ಒಂದು ಸಮಯದಲ್ಲಿ ನರ್ತನವನ್ನೂ ಒಂದು ಸಮಯದಲ್ಲಿ ಯುದ್ಧವನ್ನೂ ಮತ್ತೊಂದು ಸಮಯದಲ್ಲಿ ಗಾನವನ್ನೂ ಮಾಡುತಿದ್ದರು ; ಕೃಷ್ಣನು ನರ್ತನಂಗೈಯುತಿದ್ದರೆ ಕೆಲವು ಗೋಪಾಲಬಾಲಕರು ಗಾನಂಗೈವರು ; ಕೆಲವರು ವೇಣುನಾದವನ್ನೂ ಕರತಾಳವನ್ನೂ ಶೃಂಗನಾದವನ್ನೂ ಮಾಡುವರು ; ಮತ್ತು ಕೆಲವರು ಆತನನ್ನು ಶ್ಲಾಘಿಸುತ್ತಿರುವರು! ಮತ್ತು ಗೋಪಾಲಜಾತಿಯಿಂದ ಮರೆಮಾಡಲ್ಪಟ್ಟಿರುವ ದೇವತೆಗಳು ನಟರಂತೆ ನರ್ತನಂಗೈಯುತಿರುವ ರಾಮಕೃಷ್ಣರನ್ನು ಸ್ತುತಿಸುತ್ತಿರುವರು! ಈ ಪ್ರಕಾರದಲ್ಲಿ ಮುಂಜುಟ್ಟುಗಳನ್ನು ಧರಿಸಿದ್ದ ರಾಮಕೃಷ್ಣರು ಸುತ್ತಲೂ ತಿರುಗುವದರಿಂದಲೂ ಹಾರುವದರಿಂದ

ಲೂ ಪರಸ್ಪರ ತಳ್ಳಾಡುವದರಿಂದಲೂ ಹಸ್ತತಾಳಗಳಿಂದಲೂ ಒಬ್ಬರನ್ನೊಬ್ಬರು ಕೆಳೆಯುವದರಿಂದಲೂ ಬಾಹುಯುದ್ಧದಿಂದಲೂ ವಿಹರಿಸುತ ಮಿಕ್ಕ ಗೋಪಾಲಬಾಲಕರು ನರ್ತನಂಗೈಯುತಿದ್ದರೆ ತಾವು ಗಾನಮಾಡುತ ಅವರನ್ನ ಕುರಿತು ಬಹು ಚನ್ನಾಯಿತೆಂದು ಶ್ಲಾಘಿಸುತ ಒಂದೊಂದು ವೇಳೆಯಲ್ಲಿ ಬಿಲ್ವಫಲಗಳನ್ನೂ ಕುಂಭವೃಕ್ಷದ ಫಲಗಳನ್ನೂ ಕಾಯಿಗಳನ್ನೂ ಮುಷ್ಟಿಗಳಲ್ಲಿಡಿದು ಬೀಸುವದು ಮೊದಲಾದವುಗಳಿಂದಲೂ ಕೈಗೆ ಶಿಕ್ಕದಂತೆ ವಸ್ತ್ರಗಳಿಂದ ಕಣ್ಣುಗಳನ್ನು ಕಟ್ಟಿ ಓಡಿಸುವದರಿಂದಲೂ ಮೃಗಗಳಂತೆಯೂ ಪಕ್ಷಿಗಳಂತೆಯೂ ಚೇಷ್ಟೆಗೈವದರಿಂದಲೂ ಒಂದೊಂದು ಸಮಯದಲ್ಲಿ ಕಪ್ಪೆಗಳಂತೆ ಕುಪ್ಪುವದರಿಂದಲೂ ನಾನಾವಿಧಗಳಾದ ಪರಿಹಾಸಗಳಿಂದಲೂ ಉಯ್ಯಾಲೆಗಳಲ್ಲಿ ಕುಳಿತು ತೂಗಾಡುವದರಿಂದಲೂ ಧೊರೆಗಳಂತೆಯೂ ಮಂತ್ರಿ ಸೇವಕರಂತೆಯೂ ಕಲ್ಪಿಸಿಕೊಂಡೂ ಕ್ರೀಡಿಸುತಿದ್ದರು! ಈ ರೀತಿ ರಾಮಕೃಷ್ಣರು ಬೃಂದಾವನದ ನದಿಗಳಲ್ಲಿಯೂ ಪರ್ವತ ಗುಹೆಗಳಲ್ಲಿಯೂ ಲತಾಗೃಹಗಳಲ್ಲಿಯೂ ಅರಣ್ಯಗಳಲ್ಲಿಯೂ ಸರಸ್ಸುಗಳಲ್ಲಿಯೂ ಲೋಕಪ್ರಸಿದ್ಧಗಳಾದ ಕ್ರೀಡೆಗಳಿಂದ ವಿಹರಿಸಿದರು! ಒಂದುದಿವಸ ರಾಮಕೃಷ್ಣರೀರ್ವರೂ ಗೋಪಾಲಕರೊಡಗೂಡಿ ಗೋವುಗಳನ್ನು ಮೇಯಿಸುತಿರುವ ಸಮಯದಲ್ಲಿ ಪ್ರಲಂಬನೆಂಬ ಒಬ್ಬ ಅಸುರನು ರಾಮಕೃಷ್ಣರನ್ನು ಜಯಿಸಬೇಕೆಂದು ಗೋಪಾಲಕರೂಪವನ್ನು ಧರಿಸಿ ಅಲ್ಲಿಗೆ ಬಂದನು; ಸರ್ವಜ್ಞನಾದ ಶ್ರೀಕೃಷ್ಣನು ಅವನನ್ನು ಪ್ರಲಂಬಾಸುರನೆಂದು ತಿಳದೂ ಅವನ ವಧೆಯನ್ನು ಯೋಚಿಸುತ ಅವನೊಡನೆ ಮಿತ್ರತ್ವವನ್ನು ಅಂಗೀಕರಿಸಿದನು; ಆ ಸಮಯದಲ್ಲಿ ಸಮಸ್ತ ಕ್ರೀಡೆಗಳನ್ನೂ ತಿಳದಿದ್ದ ಶ್ರೀಕೃಷ್ಣಮೂರ್ತಿಯು ಗೋಪಾಲಕರನ್ನು ಸಮೀಪಕ್ಕೆ ಕರೆದು "ಎಲೈ ಗೋಪಾಲಕರಿರಾ, ನಾವು ನಮ್ಮ ನಮ್ಮ ವಯೋಬಲಾನುಸಾರವಾಗಿ ಇಬ್ಬರಿಬ್ಬರು ಜೊತೆಯಾಗಿ ಎರಡು ಗುಂಪಾಗಿ ಕ್ರೀಡಿಸೋಣ" ಎಂದು ನುಡಿದನು!

ಅದನ್ನು ಕೇಳಿ ಆ ಗೋಪಾಲಕರು ರಾಮಕೃಷ್ಣರನ್ನು ತಮಗೆ ನಾಯಕರಾಗಿ ಕಲ್ಪಿಸಿಕೊಂಡು ಕೆಲವರು ರಾಮನ ಪಕ್ಷವನ್ನೂ ಕೆಲವರು ಶ್ರೀಕೃಷ್ಣಮೂರ್ತಿಯ ಪಕ್ಷವನ್ನೂ ಆಶ್ರಯಿಸಿ ಜಯಿಸಿದವರು ಸೋತವರಮೇಲೆ ಆರೋಹಣಂಗೈಯುವ ಮತ್ತು ಪರಾಜಿತರಾದವರು ಜಯಿಸಿದವರನ್ನು ವಹಿಸುವಂಥಾ ವಾಹ್ಯವಾಹಕ ಲಕ್ಷಣವುಳ್ಳ ನಾನಾವಿಧ ಕ್ರೀಡೆಗಳಿಂದ ಒಬ್ಬರನ್ನೊಬ್ಬರು ವಹಿಸುತಲೂ ಒಬ್ಬರಿಂದೊಬ್ಬರು ವಹಿಸಲ್ಪಡುತಲೂ ಗೋವುಗಳನ್ನು ಮೇಯಿಸುತ ಭಾಂಡೀರಕವೆಂಬ ನಾಮಧೇಯವುಳ್ಳ ಒಂದು ವಟವೃಕ್ಷದ ಸಮೀಪವನ್ನೈದಿದರು; ಬಲರಾಮನ ಪಕ್ಷವನ್ನಾಶ್ರಯಿಸಿದ್ದ ಶ್ರೀದಾಮ ವೃಷಭರು ಮೊದಲಾದ ಗೋಪಾಲಕರು ಆಟದಲ್ಲಿ ಪ್ರತಿಪಕ್ಷದವರನ್ನು ಜಯಿಸಿದ ಸಮಯದಲ್ಲಿ ಸೋತವರಾದ ಶ್ರೀಕೃಷ್ಣನು ಮೊದಲಾದವರು ಶ್ರೀದಾಮನು ಮೊದಲಾದವರನ್ನು ವಹಿಸಿದರು; ಆಗ ಭಗವಂತನಾದ ಶ್ರೀಕೃಷ್ಣನು ಪರಾಜಿತನಾಗಿ ಜಯಸ್ಥನಾದ ಶ್ರೀದಾಮನನ್ನು ವಹಿಸಿದನು; ಭದ್ರಸೇನನು ವೃಷಭಗಳನ್ನು ವಹಿಸಿದನು; ಗೋಪಾಲರೂಪವನ್ನು ಧರಿಸಿದ್ದ ದಾನವಶ್ರೇಷ್ಠನಾದ ಪ್ರಲಂಬಾಸುರನು ಶ್ರೀಕೃಷ್ಣನನ್ನು ಜಯಿಸಲಶಕ್ಯವೆಂದು ಆತನ ದೃಷ್ಟಿಸಾನ್ನಿಧ್ಯವನ್ನು ತಪ್ಪಿಸಲೋಸುಗ ಬಲರಾಮನನ್ನು ವಹಿಸಿ ಶೀಘ್ರವಾಗಿ ನಡೆದು ಜಯಿಸಿದವರನ್ನು ಹೆಗಲಿನಿಂದಿಳುಹಿಸಬೇಕೆಂದು ಗೊತ್ತಾದ ಸ್ಥಳವನ್ನತಿಕ್ರಮಿಸಿ ದೂರವಾಗಿ ಓಡಿ ಹಿಮವತ್ಪರ್ವತದಂತೆ ಅತ್ಯಂತ ಗುರುತ್ವವುಳ್ಳ ತನ್ನ ಅಸುರದೇಹವನ್ನು ತಾಳ ಸುವರ್ಣಾಭರಣಗಳಿಂದ ಯುಕ್ತನಾಗಿ ಮಿಂಚುಗಳ ಪ್ರಕಾಶದಿಂದ ಹೊಳೆಯುತ ಮತ್ತು ಉಪರಿಭಾಗದಲ್ಲಿ ಚಂದ್ರನನ್ನು ಧರಿಸಿ ಮೇಘದಂತೆ ಪ್ರಕಾಶಿಸಿದನು! ಆ ಸಮಯದಲ್ಲಿ ಬಲರಾಮನು ಅತಿವೇಗದಿಂದ ಆಕಾಶದಲ್ಲಿ ಸಂಚಾರಂಗೈಯುತ ಜ್ವಾಲಯುಕ್ತಗಳಾದ ನೇತ್ರಗಳುಳ್ಳದ್ದಾಗಿ ಹುಬ್ಬುಗಳ ಕೊನೆಗಳನ್ನು ಮುಟ್ಟಿರುವ ಭಯಂಕರವಾದ ಕೋರೆದಾಡೆಗಳುಳ್ಳದ್ದಾಗಿ ಅಗ್ನಿಯಂತೆ ಜ್ವಲಿಸುತಿರುವ ಕೇಶಸಮೂಹಗಳುಳ್ಳದ್ದಾಗಿ ಸುವರ್ಣಮಯವಾದ ಕಟಕ ಕಿರೀಟ ಕುಂಡಲಗಳು ಮೊದಲಾದ ಆಭರಣಗಳ ಕಾಂತಿಯಿಂದ ಆಶ್ಚರ್ಯಕರವಾಗಿದ್ದ ಅಸುರದೇಹವನ್ನು ನೋಡಿ ಭಯವನ್ನೈದಿ ಒಂದು ಕ್ಷಣಮಾತ್ರದಲ್ಲೇ ತಿರಿಗಿಬಂದ ಸ್ಮೃತಿಯನ್ನು ಪಡೆದು ನಿರ್ಭಯನಾಗಿ ಗೋಪಾಲಕರ ಸಮೂಹದಿಂದ ತನ್ನನ್ನಪಹರಿಸಿಕೊಂಡು ಹೋಗುತಿದ್ದ ಶತ್ರುವಾದ ಪ್ರಲಂಬಾಸುರನ ಶಿರಸ್ಸಿನಲ್ಲಿ ದೃಢವಾಗಿ ವಜ್ರಾಯುಧದಂತೆ ವೇಗಯುಕ್ತವಾದ ತನ್ನ ಮುಷ್ಟಿ

ಯಿಂದ ಪ್ರಹರಿಸಿದನು; ಪ್ರಲಂಬಾಸುರನು ಆ ಕ್ಷಣವಲ್ಲೇ ಭಗ್ನವಾದ ಶಿರಸ್ಸುಳ್ಳವನಾಗಿ ಮುಖದಿಂದ ರಕ್ತವನ್ನು ಕಕ್ಕುತ ನಷ್ಟವಾದ ಸ್ಮೃತಿಯುಳ್ಳವನಾಗಿ ಮಹತ್ತಾದ ಶಬ್ದವಂಗೈಯುತ ಪ್ರಾಣಗಳನ್ನು ಬಿಟ್ಟು ಇಂದ್ರನ ವಜ್ರಾಯುಧದಿಂದ ಪ್ರಹರಿಸಲ್ಪಟ್ಟ ಪರ್ವತದಂತೆ ಕೆಳಕ್ಕೆ ಬಿದ್ದನು; ದುಷ್ಟನಾದಾಗ್ಯೂ ಆತನು ಗೋಪಾಲಕರೂಪನಾಗಿದ್ದ ಕಾರಣ ಮಹಾ ಬಲಶಾಲಿಯಾದ ಬಲರಾಮನಿಂದ ಸಂಹರಿಸಲ್ಪಟ್ಟ ಪ್ರಲಂಬಾಸುರನನ್ನು ನೋಡಿ ಗೋಪಾಲಕರೆಲ್ಲರೂ ಅತ್ಯಂತ ಆಶ್ಚರ್ಯಯುಕ್ತರಾಗಿ ಶ್ಲಾಘಿಸಲು ಯೋಗ್ಯನಾದ ಬಲರಾಮನು ಮೃತಿಯನ್ನೈದಿ ಪುನಹ ಜೀವಿಸಿದನೆಂದೆಣಿಸುತ ಆಶೀರ್ವಚನಗಳನ್ನು ನುಡಿಯುತ ಆಲಿಂಗನಂಗೈದು ಪ್ರೇಮದಿಂದ ಪರವಶವಾದ ಮನಸ್ಸುಳ್ಳವರಾಗಿ ಸ್ತೋತ್ರಂಗೈದರು! ಅತ್ಯಂತ ಪಾಪಿಷ್ಟನಾದ ಪ್ರಲಂಬಾಸುರನು ಈರೀತಿ ಬಲರಾಮನಿಂದ ಸಂಹರಿಸಲ್ಪಡಲು ದೇವತೆಗಳೆಲ್ಲರು ಅತ್ಯಂತ ಸಂತೋಷಯುಕ್ತರಾಗಿ ಬಲರಾಮನಮೇಲೆ ದಿವ್ಯಪುಷ್ಪಗಳನ್ನು ವರ್ಷಿಸಿ ಬಹು ಚನ್ನಾಯಿತು—ಬಹುಚನ್ನಾಯಿತೆಂದು ಶ್ಲಾಘಿಸಿದರು!

## ೧೯ ನೇ ಅಧ್ಯಾಯ.

## ಶ್ರೀ ಕೃ ಷ್ಣ ನು ವ ನಾ ಗ್ನಿ ಯ ನ್ನು ಪಾ ನ ಮಾ ಡಿ ದ್ದು.

ಎಲೈ ಪರೀಕ್ಷಿದ್ರಾಯನೆ, ಬೃಂದಾವನದಲ್ಲಿ ಗೋಪಾಲಕರು ಈರೀತಿ ಕ್ರೀಡಾಸಕ್ತರಾಗಿರಲು ಅವರ ಗೋವುಗಳು ದೂರವಾಗಿ ಸಂಚರಿಸುತ ಮನಸ್ಸುಬಂದಂತೆ ಮೇಯುತ ತೃಣಗಳಲ್ಲಿ ಆಸಕ್ತಿಯಿಂದ ಪ್ರವೇಶಿಸಲಶಕ್ಯವಾದ ಮಹತ್ತಾದ ಅರಣ್ಯವನ್ನು ಪ್ರವೇಶಿಸಿದವು; ಆಡುಗಳೂ ಗೋವುಗಳೂ ಯಮ್ಮೆಗಳೂ ಬಂದು ವನದಿಂದ ಮತ್ತೊಂದು ವನವನ್ನು ಪ್ರವೇಶಿಸುತ ಗ್ರೀಷ್ಮತಾಪದಿಂದ ಬಾಯಾರಿಕೆಯುಳ್ಳವಾಗಿ ಅತ್ಯಂತ ಉನ್ನತವಾಗಿ ಬೆಳದು ನಿಬಿಡಗಳಾದ ತೃಣಗಳುಳ್ಳ ಬಂದು ಅರಣ್ಯವನ್ನು ಪ್ರವೇಶಿಸಿದವು! ಅನಂತರದಲ್ಲಿ ರಾಮಕೃಷ್ಣರು ಮೊದಲಾದ ಗೋಪಾಲಕರೂ ಅವುಗಳನ್ನು ಕಾಣದೆ ಪಶ್ಚಾತ್ತಾಪವನ್ನೈದಿ ಹುಡುಕುತ ಅವು ಹೋದ ಮಾರ್ಗವನ್ನರಿಯದೆ ನಷ್ಟವಾದ ಜೀವನೋಪಾಯವುಳ್ಳವರಾಗಿ ಖಿನ್ನರಾಗಿ ಗೋವುಗಳ ಗೊರಸುಗಳಿಂದಲೂ ದಂತಗಳಿಂದಲೂ ಕತ್ತರಿಸಲ್ಪಟ್ಟ ತೃಣಗಳಿಂದಲೂ ಅವುಗಳ ಹೆಜ್ಜೆಗಳಿಂದ ಅಂಕಿತಗಳಾದ ಭೂಪ್ರದೇಶಗಳಿಂದಲೂ ಮಾರ್ಗವನ್ನು ತಿಳಿದು ಮುಂಜಾರಣ್ಯದಲ್ಲಿ ಮಾರ್ಗವನ್ನು ತಪ್ಪಿ ಕೂಗುತಿದ್ದ ತಮ್ಮ ಗೋಸಮೂಹವನ್ನು ಪಡೆಯಲಾರದೆ ಬಾಯಾರಿಕೆಯಿಂದ ಅತ್ಯಂತ ಬಳಲಿ ಅಲ್ಲಿಂದ ಹಿಂದಕ್ಕೆ ತಿರುಗಿದರು; ಆಗ ಭಗವಂತನಾದ ಶ್ರೀಕೃಷ್ಣಮೂರ್ತಿಯು ಮೇಘನಾದದಂತೆ ಅತಿ ಗಂಭೀರವಾದ ಸ್ವರದಿಂದ ಆ ಗೋವುಗಳನ್ನು ಕರೆಯಲು ಅವು ತಮ್ಮ ನಾಮಧೇಯಗಳ ಧ್ವನಿಯನ್ನು ಕೇಳಿ ಸಂತೋಷಪಟ್ಟು ಪ್ರತಿಧ್ವನಿಯಂಗೈಯುತ ಬಂದವು; ಆ ಸಮಯಲ್ಲಿ ಆ ಗೋಪಾಲಕರ ವಿಲಯಕ್ಕೆ ಕಾರಣವಾಗಿ ವಾಯುವಿನಿಂದ ಪ್ರೇರಿಸಲ್ಪಟ್ಟದ್ದಾಗಿ ಅತ್ಯಂತವಾಗಿ ವ್ಯಾಪಿಸಿರುವ ಜ್ವಾಲೆಗಳಿಂದ ಸ್ಥಾವರಜಂಗಮಪ್ರಾಣಿಗಳನ್ನು ದಹಿಸುತ್ತಿರುವ ಮಹತ್ತಾದ ವನಾಗ್ನಿಯು ಆಕಸ್ಮಿಕವಾಗಿ ಆವಿರ್ಭವಿಸಿತು; ಗೋವುಗಳೊಡಗೂಡಿದ್ದ ಆ ಗೋಪಾಲಕರು ತಮ್ಮ ಸುತ್ತಲು ವ್ಯಾಪಿಸಿಕೊಂಡು ಬರುತಿದ್ದ ಆ ಅಗ್ನಿಯನ್ನು ಕಂಡು ಅತ್ಯಂತ ಭೀತರಾಗಿ ಮೃತ್ಯುಭಯದಿಂದ ಪೀಡಿತರಾದ ಜನರು ಶ್ರೀನಾರಾಯಣನನ್ನು ಶರಣುಹೊಂದುವ ರೀತಿಯಲ್ಲಿ ಬಲರಾಮನೊಡಗೂಡಿದ ಶ್ರೀಕೃಷ್ಣನನ್ನು ಶರಣುಹೊಂದಿ ಆತನನ್ನು ಕುರಿತು "ಮಹಾ ತೇಜಸ್ವಿಯಾದ ಶ್ರೀಕೃಷ್ಣನೆ, ನಿಶ್ಚಯವಾಗಿ ನಿನ್ನ ಬಂಧುಗಳು ನಾಶವನ್ನೈದಲು ಯೋಗ್ಯರಲ್ಲ; ನಾವು ನೀನೇ ಸ್ವಾಮಿಯಾಗುಳ್ಳವರು; ನಿನ್ನನ್ನೇ ಪರಮಗತಿಯಾಗುಳ್ಳವರು!" ಎಂದು ಪ್ರಾರ್ಥಿಸಿದರು.

ಎಲೈ ಅರಸೆ, ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಈರೀತಿ ಬಂಧುಗಳಾದ ಗೋಪಾಲಕರ ದೈನ್ಯವಚನಗಳನ್ನು ಕೇಳಿ "ಎಲೈ ಗೋಪಾಲಕರೆ, ಭಯಪಡಬೇಡೀ; ನಿಮ್ಮ ನೇತ್ರಗಳನ್ನು ಮುಚ್ಚಿಕೊಳ್ಳೀ" ಎಂದು

ಹೇಳಿ ಅವರು ಹಾಗೇ ನೇತ್ರಗಳನ್ನು ಮುಚ್ಚಿಕೊಳ್ಳಲು ಅತಿ ಭಯಂಕರವಾದ ಆ ವನಾಗ್ನಿಯನ್ನು ತನ್ನ ಮುಖದಿಂದ ಪಾನಂಗೈದು ಆ ಕ್ಷಣದಲ್ಲೇ ಗೋಪಾಲಕರನ್ನೂ ಗೋಗಳನ್ನೂ ಭಾಂಡೀರವೆಂಬ ವೃಕ್ಷದ ಸಮೀಪವನ್ನೈದಿಸಿ ಪ್ರವೇಶಿಸಲಶಕ್ಯವಾದ ಆ ವನಪ್ರದೇಶದಲ್ಲಿ ಬಾಯಾರಿಕೆಯಿಂದಲೂ ಶ್ರಮಾದಿಗಳಿಂದಲೂ ಹುಟ್ಟಿದ ದುಃಖದ ದೆಸೆಯಿಂದ ಅವರನ್ನು ಬಿಡಿಸಿದನು! ಅನಂತರದಲ್ಲಿ ಒಂದು ಕ್ಷಣಮಾತ್ರದಲ್ಲಿ ಪುನಹ ಭಾಂಡೀರವೆಂಬ ವಟವೃಕ್ಷದ ಸಮೀಪವನ್ನೈದಿದ ಆ ಗೋಪಾಲಕರು ನೇತ್ರಗಳನ್ನು ತೆರೆದು ಕಷ್ಟದದೆಸೆಯಿಂದ ಬಿಡಿಸಲ್ಪಟ್ಟ ತಮ್ಮನ್ನೂ ಆ ಗೋವುಗಳನ್ನೂ ನೋಡುತ ಆಶ್ಚರ್ಯಯುಕ್ತರಾಗಿ ಶ್ರೀಕೃಷ್ಣನು ತನ್ನ ಯೋಗಸಾಮರ್ಥ್ಯದಿಂದ ತಮ್ಮನ್ನು ವನಾಗ್ನಿಯ ದೆಸೆಯಿಂದ ರಕ್ಷಿಸಿದ್ದರಿಂದ ಆತನು ಸಾಕ್ಷಾತ್ ಭಗವಂತನೆಂದು ತಿಳಿದರು! ಆ ಬಳಿಕ ಬಲರಾಮನೊಡಗೂಡಿ ಶ್ರೀಕೃಷ್ಣನು ಸಾಯಂಕಾಲದಲ್ಲಿ ಗೋವುಗಳನ್ನು ಹಿಂದಕ್ಕೆ ತಿರುಗಿಸಿಕೊಂಡು ವೇಣುಗಾನಂಗೈಯುತ ಗೋಪಾಲಕರಿಂದ ಸ್ತುತಿಸಲ್ಪಡುತ ಗೋಕುಲವನ್ನೈದಿದನು! ಆಗ ಶ್ರೀಕೃಷ್ಣನನ್ನು ಬಿಟ್ಟಿರುವ ಒಂದು ಕ್ಷಣವನ್ನು ನೂರುಯುಗಗಳಂತೆ ಕಳೆಯುವ ಗೋಪಸ್ತ್ರೀಯರಿಗೆ ಶ್ರೀಕೃಷ್ಣನ ದರ್ಶನವುಂಟಾಗಿ ಪರಮಾನಂದವುಂಟಾಯಿತು!

## ೨೦ನೇ ಅಧ್ಯಾಯ.

### ವರ್ಷಾಕಾಲ ವರ್ಣನೆ—ವಸಂತಕಾಲ ವರ್ಣನೆ.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ಶ್ರೀಕೃಷ್ಣನು ವನಾಗ್ನಿಯದೆಸೆಯಿಂದ ತಮ್ಮನ್ನು ಬಿಡಿಸಿ ರಕ್ಷಿಸಿದನೆಂದೂ ಬಲರಾಮನು ಪ್ರಲಂಬಾಸುರನನ್ನು ಸಂಹರಿಸಿದನೆಂದೂ ರಾಮಕೃಷ್ಣರ ಆಶ್ಚರ್ಯಕರವಾದ ಆ ಉಭಯ ವ್ಯಾಪಾರಗಳನ್ನು ಗೋಪಾಲಕರು ಗೋಪಸ್ತ್ರೀಯರಿಗೆ ಹೇಳಿದರು; ಆ ಗೋಕುಲದಲ್ಲಿದ್ದ ವೃದ್ಧಗೋಪಾಲಕರೂ ಗೋಪಸ್ತ್ರೀಯರೂ ಆ ವ್ಯಾಪಾರಗಳನ್ನು ಕೇಳಿ ಆಶ್ಚರ್ಯಯುಕ್ತರಾಗಿ ರಾಮಕೃಷ್ಣರನ್ನು ದೇವೋತ್ತಮರೆಂದು ತಿಳಿದರು! ಈ ಪ್ರಕಾರದಲ್ಲಿ ರಾಮಕೃಷ್ಣರು ಕ್ರೀಡಿಸುತ್ತಿರಲು ಗ್ರೀಷ್ಮಕಾಲವು ಕಳೆದು ಸಮಸ್ತ ಪ್ರಾಣಿಗಳನ್ನೂ ತನ್ನ ಉತ್ಪತ್ತಿಯಿಂದ ವೃದ್ಧಿಯನ್ನೈದಿಸುವಂಥಾದ್ದಾಗಿ ಹೊಳೆಯುವ ಸೂರ್ಯಚಂದ್ರರ ಪರಿವೇಷಗಳಿಂದ ಕ್ಷೋಭವನ್ನೈದುವ ಅಂತರಿಕ್ಷಪ್ರದೇಶವುಳ್ಳ ವರ್ಷಋತುವು ಆವಿರ್ಭವಿಸಿತು; ಆಗ ಪ್ರಕಾಶಮಾನವಿಲ್ಲದ ನಕ್ಷತ್ರಗಳುಳ್ಳ ಆಕಾಶವು ಮಿಂಚುಗಳೊಡನೆಯೂ ಗುಡುಗುಗಳೊಡನೆಯೂ ನಿಬಿಡವಾದ ನೀಲಮೇಘಗಳಿಂದ ಆಚ್ಛಾದನಂಗೈಯಲ್ಪಟ್ಟದ್ದಾಗಿ ಸತ್ವರಜಸ್ತಮೋಗುಣಗಳಿಂದ ಮರೆಮಾಡಲ್ಪಟ್ಟ ಜೀವಾತ್ಮನಂತೆ ಪ್ರಕಾಶಿಸಿತು! ಸೂರ್ಯನು ಎಂಟು ತಿಂಗಳು ತನ್ನ ಕಿರಣಗಳಿಂದ ಪಾನಂಗೈಯಲ್ಪಟ್ಟ ಭೂಸಮ್ಮಂಧವಾಗಿ ಜಲರೂಪವಾದ ಧನವನ್ನು ಆ ಕಾಲದಲ್ಲಿ ಪುನಹ ತನ್ನ ಕಿರಣಗಳಿಂದಲೇ ಭೂಮಿಗೆ ಕೊಡಲು ಪ್ರಾರಂಭಿಸಿ ದಯಾಶೀಲರಾದ ಪುರುಷರು ಸಂತಾಪಯುಕ್ತನಾದ ಪ್ರಾಣಿಯನ್ನು ನೋಡಿ ದಯೆಯಿಂದ ಅವನ ಶ್ರಮೆಯನ್ನು ಪರಿಹರಿಸಲೋಸುಗ ತಮ್ಮ ಜೀವನರೂಪವಾದ ವಸ್ತುವನ್ನಾದರೂ ತ್ಯಾಗಂಗೈವರೀತಿಯಲ್ಲಿ ಅತಿ ತಾಪಯುಕ್ತವಾದ ಪ್ರಪಂಚವನ್ನು ಮಿಂಚುಗಳೆಂಬ ನೇತ್ರಗಳಿಂದ ನೋಡಿ ಮಹಾಮೇಘಗಳನ್ನು ವಾಯುವಿನಿಂದ ಕಂಪಿಸುವಂತೆ ಮಾಡುತ ಅದರ ತಾಪಪರಿಹಾರಕವಾದ ಜಲವನ್ನು ಕೊಟ್ಟನು; ಇಷ್ಟಾರ್ಥಕ್ಕೋಸ್ಕರ ತಪಸ್ಸನ್ನು ಮಾಡುವ ಪುರುಷನ ಶರೀರವು ಅವುಗಳನ್ನು ಪಡೆದು ಪುಷ್ಟಿಯನ್ನೈದುವ ರೀತಿಯಲ್ಲಿ ಗ್ರೀಷ್ಮಋತುವಿನಿಂದ ಕೃಶವಾದ ಭೂಮಿಯು ಮೇಘಗಳಿಂದ ನೆನೆಯಿಸಲ್ಪಟ್ಟದ್ದಾಗಿ ಪುಷ್ಟಿಯನ್ನೈದಿತು; ಕಲಿಯುಗದಲ್ಲಿ ಪಾಪದಿಂದ ವೇದೋಕ್ತಕರ್ಮರಹಿತರಾದ ಪಾಷಂಡರು ಪ್ರಕಾಶಿಸುವರೇ ಹೊರ್ತು ವೇದಗಳು ಪ್ರಕಾಶಿಸದ ರೀತಿಯಲ್ಲಿ ಪ್ರದೋಷಕಾಲಗಳಲ್ಲಿ ಅಂಧಕಾರದಿಂದ ಮಿಂಚಿನ ಹುಳುಗಳೇ ಪ್ರಕಾಶಿಸುವವೇ ಹೊರ್ತು ಚಂದ್ರಾದಿ ಗ್ರಹಗಳು ಪ್ರಕಾಶಿಸವು; ಶಿಷ್ಯರು ನಿತ್ಯಕರ್ಮವಾದಮೇಲೆ ಆಚಾರ್ಯನ ಮುಖದದೆಸೆಯಿಂದ ವೇದವನ್ನು ಶ್ರವಣಂಗೈದು ಆಮೇಲೆ ಅದನ್ನು ಘಟ್ಟ್ಯಾಗುಚ್ಚರಿಸುವ ರೀತಿಯಲ್ಲಿ ಸುಮ್ಮನೇ ಮಲಗಿದ್ದ ಕಪ್ಪೆ

ಗಳು ವರ್ಷಾಕಾಲದಲ್ಲಿ ಮೇಘಧ್ವನಿಯನ್ನು ಕೇಳಿ ತಾವೂ ಘಟ್ಟ್ಯಾಗಿ ಧ್ವನಿಗೈವವು; ಇಂದ್ರಿಯಗಳಿಗೆ ಅಧೀನನಾದ ಪುರುಷನ ದೇಹಧನಾದಿ ಸಂಪತ್ತುಗಳು ದುರ್ಮಾರ್ಗದಲ್ಲಿ ಪ್ರವರ್ತಿಸಿ ಕ್ಷಯವನ್ನೈದುವ ರೀತಿಯಲ್ಲಿ ವರ್ಷಾಕಾಲದಲ್ಲಿ ಕ್ಷುದ್ರನದಿಗಳು ವೃದ್ಧಿಯನ್ನೈದಿ ತಿಟ್ಟುಗಳಲ್ಲಿ ಪ್ರವಹಿಸಿ ಆಗಲೇ ಕ್ಷಯವನ್ನೈದುವವು; ಮುಂದುಗಡೆಯಲ್ಲಿ ನೀಲವರ್ಣಗಳಾದ ಬಾಲತೃಣಗಳಿಂದ ಕಪ್ಪಾಗಿ ಮತ್ತೊಂದುಕಡೆಯಲ್ಲಿ ಇಂದ್ರಗೋಪಗಳೆಂಬ ಕ್ರಿಮಿವಿಶೇಷಗಳಿಂದ ಕೆಂಪಾಗಿ ಅಲ್ಲಲ್ಲಿ ಛತ್ರಾಕೃತಿಯಾಗಿರುವ ಅಣಬೆಗಳಿಂದ ಮಾಡಲ್ಪಟ್ಟ ಛಾಯೆಯುಳ್ಳ ಭೂಮಿಯು ಅರಸುಗಳ ಸೇನಾಸಂಪತ್ತಿನಂತೆ ಪ್ರಕಾಶಿಸುತ್ತಿತ್ತು; ವಿಚ್ಛೇದವಿಲ್ಲದೆ ವೃಷ್ಟಿಯುಂಟಾದರೆ ಹೊಲ ಗದ್ದೆ ಮೊದಲಾದ ಕ್ಷೇತ್ರಗಳಲ್ಲಿ ಪ್ರಕಾಶಿಸುವ ಪೈರುಗಳು ತಮ್ಮ ವೃದ್ಧಿಯಿಂದ ಕೃಷಿಜೀವಿಗಳಾದ ಪ್ರಜೆಗಳಿಗೆ ಅತ್ಯಂತ ಸಂತೋಷವನ್ನುಂಟುಮಾಡುತ ವೃಷ್ಟಿಗೆ ವಿಚ್ಛೇದವುಂಟಾದರೆ ಬಣಗುತ ಸರ್ವವೂ ದೈವಾಧೀನವೆಂಬ ಅರ್ಥವನ್ನರಿಯದ ಧನವಂತರಿಗೆ ಪಶ್ಚಾತ್ತಾಪವನ್ನುಂಟುಮಾಡುವವು; ಶ್ರೀಹರಿಪೂಜೆಯಲ್ಲಿ ಪ್ರವರ್ತಿಸಿರುವ ಪುರುಷರು ಆ ಪೂಜೆಯೇ ಪರಮಾರ್ಥರೂಪವೂ ಪರಮ ಸುಖರೂಪವೂ ಆದ್ದರಿಂದ ಆ ಕ್ಷಣದಲ್ಲೆ ಮನೋಹರರಾಗುವಹಾಗೆ ಜಲದಲ್ಲಿಯೂ ಭೂಮಿಯಲ್ಲಿಯೂ ವಾಸಂಗೈಯುವ ಪ್ರಾಣಿಗಳು ನೂತನವಾದ ಜಲವನ್ನು ಸೇವಿಸುವದರಿಂದ ಮನೋಹರವಾದ ರೂಪವುಳ್ಳವಾದವು! ಯೋಗಸಿದ್ಧಿಯನ್ನು ಪಡೆಯದ ಪುರುಷನ ಕಾಮವಾಸನಾಯುಕ್ತವಾದ ಚಿತ್ತವು ವಿಷಯಗಳೊಡಗೂಡಿ ಕ್ಷೋಭವನ್ನೈದುವ ರೀತಿ ವಾಯುವಿನಿಂದ ತೆರೆಗಳೊಡಗೂಡಿದ ಸಮುದ್ರವು ನದಿಗಳೊಡಗೂಡಿ ಶೋಭೆಯನ್ನೈದಿತು; ಶ್ರೀಹರಿಯಲ್ಲೇ ಆಸಕ್ತವಾದ ಮನಸ್ಸುಳ್ಳ ಮಹಾತ್ಮರು ವ್ಯಸನಗಳಿಂದ ಪೀಡಿಸಲ್ಪಟ್ಟರೂ ವ್ಯಥೆಪಡದರೀತಿ ವರ್ಷಾಕಾಲದಲ್ಲಿ ಪರ್ವತಗಳು ವರ್ಷಧಾರೆಗಳಿಂದ ಬಡಿಯಲ್ಪಟ್ಟರೂ ಚಲಿಸದಿದ್ದವು; ಬ್ರಾಹ್ಮಣರಿಂದ ಆವೃತ್ತಿಮಾಡದಿರುವ ವೇದಗಳು ಕಾಲಾಂತರದಲ್ಲಿ ಮರೆಯಲ್ಪಟ್ಟು ಸಂದೇಹಕ್ಕೆ ವಿಷಯಗಳಾಗುವಂತೆ ವರ್ಷಾಕಾಲದಲ್ಲಿ ವಿಶೇಷವಾಗಿ ಸಂಚರಿಸಲ್ಪಡದಿರುವ ಮಾರ್ಗಗಳು ತೃಣಗಳಿಂದ ಮುಚ್ಚಲ್ಪಟ್ಟು ಮಾರ್ಗವೊ ಅಲ್ಲವೊ ಎಂಬ ಸಂಶಯಕ್ಕೆ ವಿಷಯಗಳಾದವು; ವ್ಯಭಿಚಾರಿಣೀಯರಾದ ಸ್ತ್ರೀಯರು ಚಂಚಲಸ್ನೇಹವುಳ್ಳವರಾದ್ದರಿಂದ ಗುಣವಂತರಾದ ಪುರುಷರಲ್ಲಿ ಸ್ಥಿರಭಾವವನ್ನೈದದಂತೆ ಪ್ರಪಂಚಕ್ಕೆ ಬಂಧುರೂಪವಾದ ಮೇಘಗಳಲ್ಲಿ ಮಿಂಚುಗಳು ಚಪಲಗಳಾದ್ದರಿಂದ ಸ್ಥಿರಭಾವವನ್ನೈದವು; ತ್ರಿಗುಣಾತ್ಮಕವಾದ ಪ್ರಪಂಚದಲ್ಲಿ ಗುಣರಹಿತನಾದ ಆತ್ಮನು ಪ್ರಕಾಶಿಸುವರೀತಿ ಮೇಘಗರ್ಜನೆಯೆಂಬ ಗುಣಯುಕ್ತವಾದ ಅಂತರಿಕ್ಷದಲ್ಲಿ ಇಂದ್ರಧನುಸ್ಸು ಸುಗುಣಶಬ್ದಾರ್ಥವಾದ ಹೆದೆಯಿಲ್ಲದಿದ್ದಾಗ್ಯೂ ಪ್ರಕಾಶಿಸಿತು; ಆತ್ಮನು ತನ್ನ ಚೈತನ್ಯದಿಂದ ಪ್ರಕಾಶಂಗೈಯಲ್ಪಟ್ಟ ಅಹಂಕಾರದಿಂದ ಮರೆಮಾಡಲ್ಪಟ್ಟು ಪ್ರಕಾಶಿಸದಂತೆ ವರ್ಷಾಕಾಲದ ಚಂದ್ರನು ತನ್ನ ಬೆಳದಿಂಗಳಿಂದ ಪ್ರಕಾಶಂಗೈಯಲ್ಪಟ್ಟ ಮೇಘಗಳಿಂದ ಮರೆಮಾಡಲ್ಪಟ್ಟು ಪ್ರಕಾಶಿಸಿದನು; ಗೃಹಗಳಲ್ಲಿ ಸಂಸಾರಪ್ರಯುಕ್ತಗಳಾದ ದುಃಖಾದಿಗಳಿಂದ ತಪ್ತರಾದಕಾರಣ ಬ್ಯಾಸರಿಕೆಯುಳ್ಳ ಪುರುಷರು ತಮ್ಮ ಗೃಹವನ್ನು ಕುರಿತು ಭಗವದ್ಭಕ್ತರು ಬಂದಲ್ಲಿ ಅವರ ದರ್ಶನದಿಂದ ಅತ್ಯಂತ ಸಂತೋಷಪಡುವರೀತಿ ನವಿಲುಗಳು ಮೇಘಗಳ ಆಗಮನದಿಂದ ಉತ್ಸವವುಳ್ಳವಾಗಿ ಅತ್ಯಂತ ಸಂತೋಷಪಟ್ಟವು; ತಪಸ್ಸಿನಿಂದ ಬಳಲಿದ ಪುರುಷರು ಇಷ್ಟಾರ್ಥಗಳನ್ನು ಪಡೆದು ವೃದ್ಧಿಯೈದುವಂತೆ ಮೊದಲು ಗ್ರೀಷ್ಮದಿಂದ ಕ್ಷೀಣವಾಗಿದ್ದ ವೃಕ್ಷಗಳು ವರ್ಷಾಕಾಲದಲ್ಲಿ ಪಾತಿಗಳಿಂದ ಜಲಪಾನಂಗೈದು ಅನೇಕಬಗೆಯಾಗಿ ವೃದ್ಧಿಯೈದಿದವು; ರಾಗಾದಿಯುಕ್ತವಾದ ಅಂತಃಕರಣವುಳ್ಳ ಪ್ರಾಕೃತಜನರು ಭಯಂಕರವಾದ ವ್ಯಾಪಾರಗಳುಳ್ಳವರಾದರೂ ತಮ್ಮ ಗೃಹಗಳಲ್ಲಿ ಸ್ವಸ್ಥವಾಗಿ ವಾಸಂಗೈಯುವರೀತಿ ಚಕ್ರವಾಕಪಕ್ಷಿಗಳು ಕೆಸರು ಮುಳ್ಳುಗಳು ಮೊದಲಾದವುಗಳಿಂದ ಪ್ರವೇಶಿಸಲಶಕ್ಯವಾದ ತಡಿಗಳುಳ್ಳಂಥಾವಾದರೂ ಸರಸ್ಸುಗಳಲ್ಲದೆ ಅತ್ಯಂತವಾಗಿ ವಾಸಂಗೈದವು; ಕಲಿಯುಗವು ವೃದ್ಧಿಹೊಂದುತ್ತಿರಲು ಪಾಷಾಂಡಿಗಳಾದ ಜನರ ದುಷ್ಟವಾದಗಳಿಂದ ವೇದೋಕ್ತಗಳಾದ ಕರ್ಮಮಾರ್ಗಗಳು ಶಿಥಿಲಗಳಾಗಿ ಮಾಡಲ್ಪಡುವ ರೀತಿಯಲ್ಲಿ ಇಂದ್ರನು ವರ್ಷಿಸುತ್ತಿರಲು ಜಲವಾಹಗಳಿಂದ ತಟಾಕಾದಿಗಳ ಕಟ್ಟೆಗಳು ಶಿಥಿಲಗಳಾಗಿ ಮಾಡಲ್ಪಟ್ಟವು; ಅರಸರು ಉಚಿತವಾದ ಕಾಲದಲ್ಲಿ ಪುರೋಹಿತರಿಂದ ಪ್ರೇರಿಸಲ್ಪಟ್ಟವರಾಗಿ ಪ್ರಾಣಿಗಳಿಗೆ ಇಷ್ಟಾರ್ಥಗಳನ್ನು ಕೊಡುವರೀತಿ ಮೇಘಗಳು ವರ್ಷಾಕಾಲದಲ್ಲಿ ವಾಯುವಿಂದ ಪ್ರೇರಿಸಲ್ಪಟ್ಟು ಸಮಸ್ತ ಪ್ರಾಣಿಗಳಿಗೂ ಜಲ

ವನ್ನಿತ್ತವು ! ಎಲೈ ಅರಸೆ, ಈರೀತಿಯಲ್ಲಿದ್ದ ಆ ವರ್ಷಾಕಾಲದಲ್ಲಿ ಬಲರಾಮನೊಡಗೂಡಿದ ಶ್ರೀಕೃಷ್ಣನು ಗೋವುಗಳಿಂದಲೂ ಗೋಪಾಲಕರಿಂದಲೂ ಪರಿವೃತನಾಗಿ ಕ್ರೀಡಿಸಲೋಸುಗ ಫಲಯುಕ್ತಗಳಾದ ಖರ್ಜೂರವೃಕ್ಷಗಳೂ ಜಂಬುವೃಕ್ಷಗಳೂ ಉಳ್ಳ ಬೃಂದಾವನವನ್ನು ಪ್ರವೇಶಿಸಿದನು ; ಆಗ ಕೆಚ್ಚಲುಗಳ ಅಧಿಕವಾದ ಭಾರದಿಂದ ಮೆಲ್ಲಗೆ ನಡೆಯುತ್ತಿದ್ದ ಗೋವುಗಳು ಶ್ರೀಕೃಷ್ಣಮೂರ್ತಿಯಿಂದ ತಮ್ಮತಮ್ಮ ನಾಮಧೇಯಗಳಿಂದ ಕರೆಯಲ್ಪಟ್ಟು ಪ್ರೀತಿಯಿಂದ ಮೊಲೇಹಾಲನ್ನು ಸೋರಿಸುತ ಶೀಘ್ರವಾಗಿ ಆತನ ಹಿಂದುಗಡೆಯಲ್ಲಿ ನಡೆದವು ; ಶ್ರೀಕೃಷ್ಣನು ಆ ವನದಲ್ಲಿ ಅತಿ ಸಂತೋಷಯುಕ್ತರಾಗಿದ್ದ ಕಿರಾತಸ್ತ್ರೀಯರನ್ನೂ ವನಪಜ್ತಿಗಳನ್ನೂ ಮಕರಂದವನ್ನು ಸ್ರವಿಸುತಲಿರುವ ಬೃಂಗಸಮೂಹಗಳನ್ನೂ ಪೂರ್ವದೆಶೆಯಿಂದಿಳಿಯುವ ಜಲಪ್ರವಾಹಗಳನ್ನೂ ಸಮೀಪದಲ್ಲಿರುವ ಗುಹೆಗಳನ್ನೂ ನೋಡುತ ಪ್ರವಾಹಗಳ ಶಬ್ದಗಳನ್ನು ಕೇಳುತ ಆ ಮಹಾವನದಲ್ಲಿ ಮೇಘವು ವರ್ಷಿಸುತ್ತಿರುವ ಸಮಯದಲ್ಲಿ ವೃಕ್ಷದ ಪೊಟರೆಯಲ್ಲಾದರು ಗುಹೆಯಲ್ಲಾದರೂ ಇದ್ದುಕೊಂಡು ಕಂದಮೂಲ ಫಲಾದಿಗಳನ್ನು ಭಕ್ಷಿಸುತ ಕ್ರೀಡಿಸುತಿದ್ದನು ; ಒಂದೊಂದು ಸಮಯದಲ್ಲಿ ಬಲರಾಮನೊಡನೆಯೂ ಸಹ ಭೋಜನಕ್ಕೆ ಯೋಗ್ಯರಾದ ಗೋಪಾಲಕರೊಡನೆಯೂ ಕೂಡಿ ಜಲದ ಸಮೀಪಪ್ರದೇಶದಲ್ಲಿರುವ ಬಂಡೆಗಳಲ್ಲಿ ಕುಳಿತು ತಮ್ಮಿಂದ ತರಲ್ಪಟ್ಟ ದಧ್ಯಾನ್ನವನ್ನು ಭೋಜನಮಾಡುತ ತೃಣಗಳಿಂದ ನಿಬಿಡವಾದ ಭೂಮಿಯಲ್ಲಿ ಕುಳಿತು ಕಣ್ಣುಗಳನ್ನು ಮುಚ್ಚಿಕೊಂಡು ಮೆಲಕು ಮಾಡುತ ಸುಪ್ತಗಳಾದ ವೃಷಭಗಳನ್ನೂ ಕರುಗಳನ್ನೂ ತಮ್ಮ ಕೆಚ್ಚಲುಗಳ ಭಾರದಿಂದ ಶ್ರಮಾಯುಕ್ತಗಳಾದ ಗೋವುಗಳನ್ನೂ ಸರ್ವಭೂತಗಳಿಗೂ ಸಂತೋಷವನ್ನುಂಟುಮಾಡುತ ತನ್ನ ಶಕ್ತಿಯಿಂದ ವೃದ್ಧಿಯನ್ನೈದುತಿದ್ದ ಆ ವರ್ಷಋತುವಿನ ಸಂಪತ್ತನ್ನು ನೋಡಿ ಶ್ಲಾಘಿಸುತ್ತಿರುವನು !

ಎಲೈ ಅರಸೆ ಕೇಳು : ಈ ಪ್ರಕಾರವಾಗಿ ಗೋಕುಲದಲ್ಲಿ ರಾಮಕೃಷ್ಣರು ಕ್ರೀಡಾಸಕ್ತರಾಗಿ ವಾಸಮಾಡುತ್ತಿರಲು ವರ್ಷಾಕಾಲವು ಅತಿಕ್ರಮಿಸಿ ನಷ್ಟಗಳಾದ ಮೇಘಗಳುಳ್ಳದ್ದಾಗಿ ನಿರ್ಮಲವಾದ ಉದಕವುಳ್ಳದ್ದಾಗಿ ಸಾವ್ಯವಾದ ವಾಯುವುಳ್ಳ ಶರತ್ಕಾಲವು ಆವಿರ್ಭವಿಸಿತು ; ಯೋಗಭ್ರಷ್ಟರಾದ ಪುರುಷರ ಮನಸ್ಸು ಪುನಹ ಯೋಗಾಭ್ಯಾಸಮಾಡುವದರಿಂದ ನಿರ್ಮಲವಾಗುವ ರೀತಿಯಲ್ಲಿ ವರ್ಷಾಕಾಲದಲ್ಲಿ ಕಲ್ಮಷಯುಕ್ತಗಳಾದ ಜಲವು ಕಮಲಗಳ ಉತ್ಪತ್ತಿಗೆ ಸಾಧಕವಾದ ಶರತ್ಕಾಲದಲ್ಲಿ ನಿರ್ಮಲಭಾವವನ್ನೈದಿದವು ; ಬ್ರಹ್ಮಚರ್ಯಾದಿ ನಾಲ್ಕಾಶ್ರಮಗಳಲ್ಲಿ ಆಸಕ್ತರಾದ ಜನರಿಗೆ ಶ್ರೀಕೃಷ್ಣನಲ್ಲುಂಟಾಗುವ ಭಕ್ತಿಯು ಅವರ ಕ್ಲೇಶವನ್ನು ಪರಿಹರಿಸುವಂತೆ ಶರತ್ಕಾಲವು ಅಂತರಿಕ್ಷದಲ್ಲಿ ಮೇಘರೂಪವಾದ ಕಲ್ಮಷವನ್ನೂ ಪ್ರಾಣಿಗಳಲ್ಲಿ ಪರಸ್ಪರ ಸಂಗರೂಪವಾದ ಕಲ್ಮಷವನ್ನೂ ಭೂಮಿಯಲ್ಲಿ ಕೆಸರೆಂಬ ಕಲ್ಮಷವನ್ನೂ ಜಲದಲ್ಲಿ ಕದಡೆಂಬ ದೋಷವನ್ನೂ ಪರಿಹರಿಸಿತು ! ಭಗವದ್ಭಕ್ತಿಯಿಂದ ಪೂರ್ಣನಾದ ಶಿಷ್ಯನಿಗೆ ಗುರುವಿನಿಂದ ಆಗತಕ್ಕ ಕಾರ್ಯವಿಲ್ಲವಾದ್ದರಿಂದಲೂ ಕೃತಾರ್ಥನಾದ ಶಿಷ್ಯನಿಗೆ ಗುರುವಿನಿಂದ ಆಜ್ಞಾಪಿಸತಕ್ಕದ್ದಿಲ್ಲವಾದ್ದರಿಂದಲೂ ಶ್ರೀಕೃಷ್ಣನಲ್ಲುಂಟಾಗುವ ಭಕ್ತಿಯು ಬ್ರಹ್ಮಚಾರಿಗೆ ಗುರುವಿಗೋಸ್ಕರ ಜಲಾಹರಣಾದಿ ವ್ಯಾಪಾರಗಳಿಂದುಂಟಾದ ಶ್ರಮೆಯನ್ನು ಪರಿಹರಿಸುವ ರೀತಿಯಲ್ಲಿ ಶರತ್ಕಾಲವು ಅಂತರಿಕ್ಷದಲ್ಲಿರುವ ಮೇಘವೆಂಬ ಕಲ್ಮಷವನ್ನು ಪರಿಹರಿಸುವದು ; ಗೃಹಸ್ಥನಿಗೆ ಶ್ರೀಕೃಷ್ಣನಲ್ಲುಂಟಾದ ಭಕ್ತಿಯು ಏಕಾಂತಸ್ಥಾನವಾಸದಲ್ಲಿ ಅಭಿರುಚಿಯನ್ನುಟ್ಟುಸುವದರಿಂದ ಆ ಗೃಹಸ್ಥನ ಪುತ್ರಾದಿ ಸಂಗವನ್ನು ಪರಿಹರಿಸುವ ರೀತಿಯಲ್ಲಿ ಶರತ್ಕಾಲವು ವರ್ಷಾಕಾಲದಲ್ಲಿ ವೃಷ್ಟಿಭಯದಿಂದ ಅಲ್ಲಲ್ಲಿ ಗುಂಪುಗೂಡಿರುವ ಪ್ರಾಣಿಗಳ ಪರಸ್ಪರ ಸಂಗವನ್ನು ಪರಿಹರಿಸುವದು ; ವಾನಪ್ರಸ್ಥನಿಗುಂಟಾದ ಶ್ರೀಕೃಷ್ಣಭಕ್ತಿಯು ಶರೀರದಲ್ಲಿ ಕಲ್ಮಷಾದಿಧಾರಣದಿಂದುಂಟಾದ ಕ್ಲೇಶವನ್ನು ಪರಿಹರಿಸುವರೀತಿ ಶರತ್ಕಾಲವು ಭೂಮಿಯಲ್ಲಿರುವ ಕೆಸರನ್ನು ಪರಿಹರಿಸುವದು ; ಎತಿಗಳಿಗುಂಟಾದ ಶ್ರೀಕೃಷ್ಣನ ಭಕ್ತಿಯು ಅವರ ಕಾಮಾದಿ ವಾಸನರೂಪವಾದ ಕಲ್ಮಷವನ್ನು ಪರಿಹರಿಸುವಂತೆ ಶರತ್ಕಾಲವು ಜಲದಲ್ಲಿರುವ ಕಲ್ಮಷವನ್ನು ಪರಿಹರಿಸುವದು ; ಉಪಶಾಂತರಾದ ಮುನಿಗಳು ಈಷಣಾತ್ರಯವನ್ನು ತ್ಯಾಗಗೈದು ಪಾಪರಹಿತರಾಗಿ ಸಂಚರಿಸುವ ರೀತಿಯಲ್ಲಿ ಶರತ್ಕಾಲದಲ್ಲಿ ಮೇಘಗಳು ತಮ್ಮಲ್ಲಿರುವ ಸಮಸ್ತ ಜಲವನ್ನೂ ಭೂಮಿಗೆ ತ್ಯಾಗಗೈದು ಅತಿ ಶುಭ್ರವಾದ ಕಾಂತಿ

ಯುಳ್ಳಂಥಾವಾಗಿ ಸಂಚರಿಸುವವು ; ಜ್ಞಾನಿಗಳು ಪ್ರಾಣಿಗಳಿಗೆ ಜ್ಞಾನವೆಂಬ ಅಮೃತವನ್ನು ಒಂದು ಸಮಯದಲ್ಲಿ ದಯೆಯಿಂದ ಕೊಡುತಲೂ ಒಂದುವೇಳೆ ಕೊಡದೆಯೂ ಇರುವಹಾಗೆ ಶರತ್ಕಾಲದಲ್ಲಿ ಪರ್ವತಗಳು ಸ್ವಚ್ಛವಾದ ಉದಕವನ್ನು ಒಂದು ಕಡೆಯಲ್ಲಿ ಕೆಳಗೆ ಬಿಡುತಲೂ ಒಂದು ಕಡೆಯಲ್ಲಿ ಬಿಡದೆಯೂ ಇದ್ದವು ; ಮೂಢರಾದ ಜನರು ಪತ್ನಿ ಪುತ್ರಾದಿಗಳೊಡಗೂಡಿ ತಮ್ಮ ಆಯುಸ್ಸು ಪ್ರತಿಕ್ಷಣದಲ್ಲಿಯೂ ಕ್ಷೀಣವಾಗುತಿರುವಂಥಾದ್ದೆಂದು ತಿಳಿಯದ ರೀತಿಯಲ್ಲಿ ಸ್ವಲ್ಪ ಜಲದಲ್ಲಿ ಸಂಚರಿಸುವ ಮತ್ಸ್ಯಾದಿಗಳು ಜಲವನ್ನು ಪ್ರತಿಕ್ಷಣದಲ್ಲೂ ಕ್ಷೀಣವಾಗುತ್ತಿರುವದೆಂದು ತಿಳಿಯುವದಿಲ್ಲ ; ದರಿದ್ರನಾಗಿ ದೀನನಾಗಿ ಕುಟುಂಬಯುಕ್ತನಾಗಿರುವ ಪುರುಷನು ಜಿತೇಂದ್ರಿಯನಾಗದೆ ತಾಪವನ್ನೈದುವಂತೆ ಸ್ವಲ್ಪವಾದ ಉದಕದಲ್ಲಿ ಸಂಚರಿಸುತಿರುವ ಮತ್ಸ್ಯಾದಿ ಪ್ರಾಣಿಗಳು ಶರತ್ಕಾಲಸೂರ್ಯನಿಂದ ತಾಪವನ್ನೈದಿದವು ; ಜ್ಞಾನಿಗಳು ಜಡಗಳಾದ ಶರೀರಾದಿಗಳಲ್ಲಿ ತಮ್ಮದೆಂಬ ಮಮತೆಯನ್ನೂ ತಾನೆಂಬ ಅಹಂಕಾರವನ್ನೂ ಕ್ರಮೇಣ ಬಿಡುವರೀತಿ ಶರತ್ಕಾಲದಲ್ಲಿ ಭೂಪ್ರದೇಶಗಳು ವರ್ಷಾಕಾಲದಲ್ಲುಂಟಾಗಿದ್ದ ಕೆಸರು ಮೊದಲಾದವನ್ನು ಮೆಲ್ಲಮೆಲ್ಲಗೆ ಬಿಡುವದರಿಂದ ಔಷಧಿಗಳು ಅಪಕ್ವಭಾವವನ್ನು ಬಿಡುವವು ; ಮುನಿಗಳು ಆತ್ಮನಲ್ಲಿ ತ್ಯಾಗಂಗೈಯಲ್ಪಟ್ಟ ಕ್ರಿಯೆಗಳುಳ್ಳವರಾದ್ದರಿಂದ ವೇದಘೋಷವನ್ನು ಬಿಟ್ಟು ಆತ್ಮನಲ್ಲೇ ವಿಶ್ರಾಂತರಾಗಿರುವಂತೆ ಶರತ್ಕಾಲದಲ್ಲಿ ಸಮುದ್ರವು ನಿಶ್ಚಲವಾದ ಉದಕವುಳ್ಳದ್ದಾದಕಾರಣ ತರಂಗಘೋಷವಿಲ್ಲದಿರುವದು ; ಯೋಗಿಗಳು ಪ್ರತ್ಯಾಹಾರವಿಧಾನದಿಂದ ನಿರೋಧನಂಗೈಯಲ್ಪಟ್ಟ ಇಂದ್ರಿಯಗಳಿಂದ ಅತ್ಯಂತವಾಗಿ ಚಲಿಸುವ ಜ್ಞಾನವನ್ನು ತಡೆಯುವರೀತಿ ಶರತ್ಕಾಲದಲ್ಲಿ ಕೃಷೀಜೀವಿಗಳಾದ ಪ್ರಾಣಿಗಳು ಮುಂದೆ ವೃಷ್ಟಿಯಿಲ್ಲವೆಂದು ತಿಳಿದು ತಮ್ಮ ಗದ್ದೆಗಳಲ್ಲಿ ದೃಢವಾದ ಕಟ್ಟೆಗಳಿಂದ ಜಲವನ್ನು ನಿಲಿಸುವರು ; ಆತ್ಮಜ್ಞಾನಿಗಳು ದೇಹಾಭಿಮಾನಜನ್ಯವಾದ ತಾಪವನ್ನು ಪರಿಹರಿಸುವಂತೆಯೂ ಶ್ರೀಕೃಷ್ಣನು ಗೋಪಾಂಗನೆಯರ ತಾಪವನ್ನು ಪರಿಹರಿಸುವಂತೆಯೂ ಚಂದ್ರನು ಪ್ರಾಣಿಗಳಿಗೆ ಶರತ್ಕಾಲಸೂರ್ಯನ ಕಿರಣಗಳಿಂದುಂಟಾದ ತಾಪವನ್ನು ಪರಿಹರಿಸುವನು ; ಸತ್ವಗುಣಯುಕ್ತವಾದ ಪೂರ್ವೋತ್ತರ ಮೀಮಾಂಸ ಶಾಸ್ತ್ರಗಳಿಂದ ನಿರ್ಣಯಿಸಲ್ಪಟ್ಟ ವೇದಾರ್ಥಗಳನ್ನು ತಿಳಿಯುತಲಿರುವ ಚಿತ್ತವು ಪ್ರಕಾಶಿಸುವ ರೀತಿಯಲ್ಲಿ ಮೇಘರಹಿತವಾಗಿ ಶರತ್ಕಾಲದಿಂದ ಪ್ರಕಾಶಮಾನವಾದ ನಕ್ಷತ್ರಗಳುಳ್ಳ ಅಂತರಿಕ್ಷವು ಪ್ರಕಾಶಿಸಿತು ; ಯಾದವಶ್ರೇಷ್ಠನಾದ ಶ್ರೀಕೃಷ್ಣಮೂರ್ತಿಯು ಯಾದವರ ಸಮೂಹಗಳಿಂದ ಭೂಲೋಕದಲ್ಲಿ ಪ್ರಕಾಶಿಸುವರೀತಿ ಶರತ್ಕಾಲದಲ್ಲಿ ಪೂರ್ಣಚಂದ್ರನು ನಕ್ಷತ್ರ, ಸಮೂಹಗಳಿಂದ ಪರಿವೃತನಾಗಿ ಪ್ರಕಾಶಿಸುವನು ; ಶರತ್ಕಾಲದಲ್ಲಿ ಜನರು ಹೆಚ್ಚು ಕಡಮೆಯಿಲ್ಲದೆ ಸಮವಾಗಿಯೂ ಸ್ವಲ್ಪ ಸೀತವಾಗಿಯೂ ಸ್ವಲ್ಪ ಪೊಷ್ಣವಾಗಿಯು ಪುಷ್ಪಭರಿತಗಳಾದ ವನಗಳದೆಶೆಯಿಂದ ಬರುವ ವಾಯುವನ್ನು ಸೇವಿಸಿ ತಾಪವನ್ನು ಬಿಡುವರು ! ಎಲೈ ಅರಸೇ, ಹಾಗಿದ್ದರೂ ಆ ಶರತ್ಕಾಲದಲ್ಲಿ ಗೋಪಸ್ತ್ರೀಯರು ಕೃಷ್ಣನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವರಾದ್ದರಿಂದ ಅಂಥಾ ವಾಯುವನ್ನು ಶೇವಿಸಿದರೂ ಅದು ಅವರಿಗೆ ದುಸ್ಸಹವಾದ್ದರಿಂದ ತಾಪವನ್ನು ಬಿಡಲಿಲ್ಲ ! ಈಶ್ವರಪೂಜೆಯೇ ಫಲವಾಗುಳ್ಳ ಸತ್ಕರ್ಮಗಳು ಒಂದು ಫಲವನ್ನುದ್ದೇಶಂಗೈದು ಮಾಡಲ್ಪಡದಿದ್ದಾಗ್ಯೂ ಸಮಸ್ತ ಫಲಗಳಿಂದಲೂ ಅನುಸರಿಸಲ್ಪಡುತ ಸಮಸ್ತ ಭೋಗಗಳನ್ನೂ ತಮ್ಮಲ್ಲಿ ಧರಿಸುವ ರೀತಿಯಲ್ಲಿ ಗೋವುಗಳೂ ಮೃಗಗಳೂ ಪಕ್ಷಿಗಳೂ ಸ್ತ್ರೀಯರೂ ಶರತ್ಕಾಲದಲ್ಲಿ ತಮಗೆ ಅಪೇಕ್ಷೆಯಿಲ್ಲದಿದ್ದಾಗ್ಯೂ ತಮ್ಮ ಪತಿಗಳಿಂದ ಬಲಾತ್ಕಾರದಿಂದ ಅನುಸರಿಸಲ್ಪಟ್ಟವರಾಗಿ ಗರ್ಭವನ್ನು ಧರಿಸುತಿದ್ದರು ; ಧರ್ಮಿಷ್ಠನಾದ ಅರಸನಿಂದ ಚೋರರು ಹೊರ್ತು ಸಮಸ್ತ ಜನರೂ ನಿರ್ಭಯವಾಗಿ ಸಂತೋಷಪಡುವ ರೀತಿಯಲ್ಲಿ ಶರತ್ಕಾಲಸೂರ್ಯನಿಂದ ನೈದಲೆಪುಷ್ಪಗಳುಹೊರ್ತು ಸಮಸ್ತ ಪದ್ಮಗಳೂ ವಿಕಾಸಯುಕ್ತಗಳಾಗಿರುವವು ! ಎಲೈ ಅರಸೇ, ಶರತ್ಕಾಲದಲ್ಲಿ ಪರಿಪಕ್ವಗಳಾದ ಸಸ್ಯಗಳಿಂದ ಪರಿಪೂರ್ಣವಾದ ಭೂಮಿಯು ಪುರಗಳಲ್ಲಿಯೂ ಗ್ರಾಮಗಳಲ್ಲಿಯೂ ನವಾನ್ನಪ್ರಾಶನಾರ್ಥವಾಗಿ ದ್ವಿಜರಿಂದ ಮಾಡಲ್ಪಟ್ಟ ಅಗ್ರಹಣ ಮೊದಲಾದ ವೈದೀಕ ಮಹೋತ್ಸವಗಳಿಂದಲೂ ಇಂದ್ರಿಯಪ್ರೀತಿಗೋಸ್ಕರ ಮಾಡಲ್ಪಟ್ಟ ಲೌಕೀಕ ಮಹೋತ್ಸವಗಳಿಂದಲೂ ಭಗವದಂಶರೂಪವಾದ ಶ್ರೀರಾಮಕೃಷ್ಣರ ದರ್ಶನಾದಿ ಮಹೋತ್ಸವಗಳಿಂದಲೂ ಅತ್ಯಂತವಾಗಿ ಪ್ರಕಾಶಿಸಿತು ! ಮಂತ್ರಯೋಗಾದಿ ಸಿದ್ಧಿಯನ್ನು ಪಡೆದ

ಮಹಾತ್ಮರು ಭೂಲೋಕದಲ್ಲಿ ತಮ್ಮ ಆಯುಷ್ಯಕಾಲವು ಮುಗಿದರೆ ಯೋಗಾದ್ಯನುಷ್ಠಾನಗಳಿಂದ ತಾವು ಪಡೆಯತಕ್ಕ ದೇವಾದಿದೇಹಗಳನ್ನೈದುವ ರೀತಿಯಲ್ಲಿ ವರ್ತಕರೂ ಎತಿಗಳೂ ಭೂಪತಿಗಳೂ ಸ್ನಾತಕವ್ರತವನ್ನಾಚರಿಸುವವರೂ ದೃಷ್ಟಾದೃಷ್ಟಗಳಾದ ಫಲಗಳಿಗೋಸ್ಕರ ವರ್ಷಾಕಾಲದಿಂದ ತಡೆಯಲ್ಪಟ್ಟವರಾಗಿ ತಮ್ಮತಮ್ಮ ಸ್ಥಾನಗಳಲ್ಲಿ ವಾಸಮಾಡುತಿದ್ದು ಶರತ್ಕಾಲದಲ್ಲಿ ಹೊರಗೆ ಹೊರಟು ಕ್ರಮವಾಗಿ ವ್ಯಾಪಾರ ಸ್ವೇಚ್ಛಾಸಂಚಾರ ದಿಗ್ವಿಜಯ ವಿದ್ಯಾಭ್ಯಾಸಾದಿಗಳನ್ನೂ ಮಾಡುತಿದ್ದರು !

---

## ೨೧ನೇ ಅಧ್ಯಾಯ.

## ಶ್ರೀಕೃಷ್ಣನ ವೇಣುಗಾನವರ್ಣನೆ.

ಎಲೈ ಅರಸೆ, ಆ ಬಳಿಕ ಶ್ರೀಕೃಷ್ಣನು ಗೋವುಗಳೊಡನೆಯೂ ಗೋಪಾಲಕರೊಡನೆಯೂ ಕೂಡಿ ಪುಷ್ಪಿತಗಳಾದ ವನಪಙ್ತಿಗಳಲ್ಲಿ ಮದಿಸಿದ ತುಂಬಿಗಳ ಸಮೂಹಗಳ ಘೋಷಯುಕ್ತವಾಗಿ ಸರಸ್ಸುಗಳೂ ನದಿಗಳೂ ಪರ್ವತಗಳೂ ಉಳ್ಳಂಥಾ ಬೃಂದಾವನವನ್ನು ಕುರಿತು ತೆರಳಿ ಬಲರಾಮನೊಡಗೂಡಿ ಗೋವುಗಳನ್ನು ಮೇಯಿಸುತ ವೇಣುಗಾನಂಗೈದನು; ಆ ಸಮಯದಲ್ಲಿ ಗೋಕುಲದಲ್ಲಿದ್ದ ಗೋಪಸ್ತ್ರೀಯರು ಕಾಮವಿಕಾರವನ್ನುಂಟುಮಾಡುವ ಶ್ರೀಕೃಷ್ಣನ ವೇಣುಗಾನವನ್ನು ಕೇಳಿ ಪರೋಕ್ಷವಾಗಿ ಅತನ ವ್ಯಾಪಾರವನ್ನು ಸ್ಮರಿಸುತ ಕಾಮವೇಗದಿಂದ ವ್ಯಾಕುಲವಾದ ಮನಸ್ಸುಳ್ಳವರಾಗಿ ಆ ವೇಣುಗಾನವನ್ನು ವರ್ಣಿಸಲು ಸಮರ್ಥರಾಗಲಿಲ್ಲ; ಶ್ರೀಕೃಷ್ಣನು ನಟಶ್ರೇಷ್ಠನ ಶರೀರದಂತೆ ಮನೋಹರವಾದ ಶರೀರವುಳ್ಳವನಾಗಿ ಮಯೂರಪಿಂಛರೂಪವಾದ ಶಿರೋಭೂಷಣವನ್ನೂ ಶ್ರೋತ್ರಗಳಲ್ಲಿ ಕರ್ಣಿಕಾರ ಪುಷ್ಪಗಳನ್ನೂ ಸುವರ್ಣದಂತೆ ಹೊಂಬಣ್ಣವಾದ ದುಕೂಲವನ್ನೂ ಕಂಠದಲ್ಲಿ ವೈಜಯಂತಿಯನ್ನೂ ವನಮಾಲೆಯನ್ನೂ ಧರಿಸಿ ಆ ಕೊಳಲರಂಧ್ರಗಳನ್ನು ತನ್ನ ಅಧರಾಮೃತದಿಂದ ಪೂರಿಸುತಲೂ ಗಾನಂಗೈಯುತಲೂ ಗೋಪಾಲಕಸಮೂಹಗಳಿಂದ ಶ್ಲಾಘಿಸಲ್ಪಡುತ ಮನೋಹರವಾದ ಬೃಂದಾವನವನ್ನು ಪ್ರವೇಶಿಸಿದನು! ಎಲೈ ಅರಸೆ, ಆಗ ಗೋಕುಲದಲ್ಲಿದ್ದ ಸ್ತ್ರೀಯರು ಸರ್ವಪ್ರಾಣಿಗಳ ಮನಸ್ಸನ್ನಪಹರಿಸುವ ಶ್ರೀಕೃಷ್ಣನ ವೇಣುಗಾನವನ್ನು ಕೇಳಿ ಅದನ್ನು ವರ್ಣಿಸುತ ಅಡಿಗಡಿಗೂ ಪರಮಾನಂದರೂಪನಾದ ಶ್ರೀಕೃಷ್ಣನನ್ನು ಮನಸ್ಸಿನಿಂದ ಆಲಿಂಗನಂಗೈಯುತ ಒಬ್ಬರನ್ನೊಬ್ಬರು ಕರೆದು "ಎಲೇ ಸಖಿಗಳಿರಾ, ತಮ್ಮ ಸ್ನೇಹಿತರಾದ ಗೋಪಾಲಬಾಲಕರೊಡಗೂಡಿ ಗೋವುಗಳನ್ನು ಬೃಂದಾವನಪ್ರವೇಶಮಾಡಿಸುತ ಕೊಳಲಗಾನಂಗೈಯುವ ನಂದಗೋಪನ ಪುತ್ರರಾದ ರಾಮಕೃಷ್ಣರ ಮನೋಹರವಾದ ಕಟಾಕ್ಷವೀಕ್ಷಣವುಳ್ಳ ಮುಖವು ಆದರಣದಿಂದ ಯಾರಿಂದ ನೋಡಲ್ಪಡುವವೊ ಅವರಿಂದಲೇ ಕಣ್ಣುಗಳುಳ್ಳವರಿಗೆ ಪಡೆಯಲು ಯೋಗ್ಯವಾದ ಪ್ರಿಯದರ್ಶನರೂಪವಾದ ಫಲವು ಪಡೆಯಲ್ಪಡುವದು; ನಾವು ಈ ಅರ್ಥವನ್ನು ಬಲ್ಲೆವೇ ಹೊರ್ತು ಮತ್ತೊಂದನ್ನರಿಯೆವು; ಮಾವಿನ ಚಿಗುರುಗಳಿಂದಲೂ ನವಿಲುಗರಿಗಳಿಂದಲೂ ಪುಷ್ಪಗುಚ್ಛಗಳಿಂದಲೂ ನೈದಲೆಗಳಿಂದಲೂ ಪದ್ಮಗಳಿಂದಲೂ ವಿಚಿತ್ರವಾಗಿ ರಚಿಸಲ್ಪಟ್ಟ ಮಾಲಿಕೆಗಳ ಮಧ್ಯದಲ್ಲಿ ತೋರುವ ನೀಲಾಂಬರ ಪೀತಾಂಬರಗಳಿಂದ ವಿಚಿತ್ರವಾದ ವೇಷವುಳ್ಳ ರಾಮಕೃಷ್ಣರು ತಮ್ಮ ಮಧ್ಯದಲ್ಲಿ ಗಾನಂಗೈಯುತಿರಲು ನಟಶ್ರೇಷ್ಠರು ರಂಗಸ್ಥಾನದಲ್ಲಿ ಪ್ರಕಾಶಿಸುವಂತೆ ಪ್ರಕಾಶಿಸುವ ಆ ಗೋಪಾಲಕರ ಭಾಗ್ಯವು ಎಂಥಾದ್ದೋ ತಿಳಿಯದು! ಎಲೇ ಸಖಿಯರುಗಳಿರ, ಈ ಕೊಳಲು ಗೋಪಸ್ತ್ರೀಯರಿಂದ ಅನುಭವಿಸಲು ಯೋಗ್ಯವಾಗಿರುವ ಶ್ರೀಕೃಷ್ಣನ ಅಧರಾಮೃತವನ್ನು ಮನಸ್ಸುಬಂದಂತೆ ರಸಮಾತ್ರವು ಮಿಗುವಂತೆ ಅನುಭವಿಸುತ್ತಿದೆ; ಇದು ಯಾವ ನದೀಜಲದಿಂದ ಪೋಷಿಸಲ್ಪಟ್ಟಿತೋ ಮಾತೃಸಮಾನವಾದ ಆ ನದಿಯು ವಿಕಾಸಯುಕ್ತಗಳಾದ ಕಮಲವನಗಳೆಂಬ ವ್ಯಾಜದಿಂದ ರೋಮಾಂಚವುಳ್ಳಂಥಾದ್ದಾಗಿ ಕಾಣಲ್ಪಡುತಲಿದೆ; ಈ ಕೊಳಲು ಯಾವ ವೃಕ್ಷಗಳ ವಂಶದಲ್ಲಿ ಜನಿಸಿತೋ ಆ ಬಿದುರುಮೆಳೆಗಳು ಕುಲವೃದ್ಧರು ತಮ್ಮ ವಂಶದಲ್ಲಿ ಹುಟ್ಟಿರುವ ಭಗವತ್ಸೇವಕನಾದ ಪುತ್ರ,

ನನ್ನು ನೋಡಿ ರೋಮಾಂಚಯುಕ್ತರಾಗಿ ಆನಂದಬಾಷ್ಪವನ್ನು ಬಿಡುವ ರೀತಿಯಲ್ಲಿ ಜೇನುತುಪ್ಪದ ಧಾರೆಯೆಂಬ ನೆವದಿಂದ ಆನಂದಬಾಷ್ಪವನ್ನು ಬಿಡುತಿವೆ; ಆದಕಾರಣ ಈ ಕೊಳಲು ಯಾವ ಪುಣ್ಯವನ್ನಾಚರಿಸಿತೋ ಅರಿಯೆವು! ಈ ಬೃಂದಾವನವು ದೇವಕೀಪುತ್ರನಾದ ಶ್ರೀಕೃಷ್ಣನ ಪಾದಾರವಿಂದ ವಿನ್ಯಾಸಗಳಿಂದ ಪಡೆಯಲ್ಪಟ್ಟ ಕಾಂತಿಸಮೃದ್ಧಿಯುಳ್ಳದ್ದಾಗಿ ಕೃಷ್ಣನ ವೇಣುಗಾನವನ್ನು ಕೇಳುತ ಕೃಷ್ಣನನ್ನು ಮೇಲ್ಗಗೆ ಘರ್ಜಿಸುತಿರುವ ನೀಲಮೇಘವೆಂದೆಣಿಸಿ ಮದಯುಕ್ತಗಳಾದ ನವಿಲುಗಳ ನರ್ತನವನ್ನು ನೋಡುತ ಪರ್ವತಜರಿಗಳಲ್ಲಿ ಗುಂಪುಗುಂಪಾಗಿ ಆಶ್ಚರ್ಯದಿಂದ ಚೇಷ್ಟಾರಹಿತವಾಗಿರುವ ಅನೇಕ ಪ್ರಾಣಿಗಳುಳ್ಳದ್ದಾಗಿ ಶೋಭಿಸುತ ಸರ್ವೋತ್ಕೃಷ್ಟವಾಗಿ ಈ ಭೂಲೋಕಕ್ಕೆ ಸ್ವರ್ಗಕ್ಕಿಂತಲು ಅತಿಶಯವಾದ ಕೀರ್ತಿಯನ್ನುಂಟುಮಾಡುತ್ತಿದೆ! ಎಲೇ ಸಖಿಯೆ, ಹೆಣ್ಣುಹುಲ್ಲೆಗಳು ಈ ವೇಣುಗಾನವನ್ನು ಕೇಳಿ ವಿಚಿತ್ರವಾದ ಅಲಂಕಾರವನ್ನು ಧರಿಸಿರುವ ಶ್ರೀಕೃಷ್ಣಮೂರ್ತಿಯನ್ನು ಅನುರಾಗಯುಕ್ತವಾದ ನೋಟಗಳಿಂದ ನೋಡುತ ತಮ್ಮ ಪತಿಗಳಾದ ಗಂಡುಹುಲ್ಲೆಗಳೊಡಗೂಡಿ ಪೂಜೆಯನ್ನು ಮಾಡುತಿವೆ; ಆ ಹೆಣ್ಣುಹುಲ್ಲೆಗಳು ತಿರ್ಯಗ್ಜಂತುಗಳಾದಾಗ್ಯೂ ಕೃತಾರ್ಥವಾದುವಾವು! ಕ್ಷುದ್ರರಾದ ನಮ್ಮ ಪತಿಗಳು ತಮ್ಮ ಎದುರಲ್ಲಿ ನಮ್ಮಿಂದ ಶ್ರೀಕೃಷ್ಣನಿಗೆ ಮಾಡಲ್ಪಡುವ ಪೂಜೆಯನ್ನು ಸಹಿಸದ್ದರಿಂದ ನಾವು ಕೃತಾರ್ಥರಲ್ಲ! ಎಲೇ ಗೋಪಿಯರಿರಾ, ಒಂದು ಆಶ್ಚರ್ಯವನ್ನು ಕೇಳೀ: ಸ್ತ್ರೀಯರಿಗೆ ಮಹತ್ತಾದ ಉತ್ಸವವನ್ನುಂಟುಮಾಡುವ ಸೌಂದರ್ಯವೂ ಸ್ವಭಾವವೂ ಉಳ್ಳ ಶ್ರೀಕೃಷ್ಣನನ್ನು ನೋಡಿಯೂ ಆತನಿಂದ ಧ್ವನಿಗೈಸಲ್ಪಟ್ಟ ಕೊಳಲಿನ ವಿಚಿತ್ರವಾದ ಗಾನವನ್ನು ಕೇಳಿಯೂ ಆಕಾಶದಲ್ಲಿ ವಿಮಾನಗಳಿಂದ ಸಂಚರಿಸುವ ದೇವತಾಸ್ತ್ರೀಯರು ತಮ್ಮ ಪತಿಗಳಾದ ದೇವತೆಗಳ ತೊಡೆಗಳಲ್ಲಿ ಕುಳಿತಿದ್ದರೂ ಮನ್ಮಥನಿಂದ ಅಪಹರಿಸಲ್ಪಟ್ಟ ಧೈರ್ಯವುಳ್ಳವರಾಗಿ ತುರುಬುಗಳಿಂದ ಜಾರಿ ಬೀಳುತಿರುವ ಪುಷ್ಪಮಾಲಿಕೆಗಳುಳ್ಳವರಾಗಿ ಸಡಲಿದ ಉಡಿಗಂಟುಳ್ಳವರಾಗಿ ಮೋಹವನ್ನೈದಿದ್ದಾರೆ! ಗೋವುಗಳು ಶ್ರೀಕೃಷ್ಣನ ಮುಖಾರವಿಂದದ ದೆಸೆಯಿಂದ ಹೊರಡುವ ವೇಣುಗಾನವೆಂಬ ಅಮೃತವು ಇತ್ತತ್ತ ಸ್ರವಿಸುವದೆಂಬ ಶಂಕೆಯಿಂದ ಮೇಲಕ್ಕೆತ್ತಲ್ಪಟ್ಟ ಶ್ರೋತ್ರಗಳೆಂಬ ದೊನ್ನೆಗಳಿಂದ ಪಾನಂಗೈಯುತ ಶ್ರೀಕೃಷ್ಣನನ್ನು ನೇತ್ರಮಾರ್ಗದಿಂದ ತಮ್ಮ ಮನಸ್ಸಿನಲ್ಲಿ ಸ್ಪೃಶಿಸುತ ನೇತ್ರಗಳಲ್ಲಿ ಆನಂದಬಾಷ್ಪಗಳನ್ನು ಬಿಡುತ ತಮ್ಮ ತಮ್ಮ ವ್ಯಾಪಾರಗಳನ್ನು ಮರತು ನಿಂತಿವೆ; ಅದೇರೀತಿ ಕರುಗಳು ಸ್ತನ್ಯಪಾನದಲ್ಲಿ ಪ್ರವರ್ತಿಸಿದ್ದರೂ ವೇಣುಗಾನವನ್ನು ಕೇಳುತ ಆ ಗಾನವೆಂಬ ಅಮೃತವನ್ನು ಮೇಲಕ್ಕೆತ್ತಲ್ಪಟ್ಟ ಶ್ರೋತ್ರಗಳೆಂಬ ದೊನ್ನೆಗಳಿಂದ ಪಾನಂಗೈಯುತ ತಮ್ಮ ತಾಯಿಗಳ ಸ್ತನಗಳದೆಸೆಯಿಂದ ತಮ್ಮ ಬಾಯಿಗಳಲ್ಲಿ ಸ್ರವಿಸುವ ಕ್ಷೀರಗ್ರಾಸಗಳುಳ್ಳಂಥಾವಾಗಿ ಶ್ರೀಕೃಷ್ಣನನ್ನು ನೇತ್ರಗಳೆಂಬ ಮಾರ್ಗದಿಂದ ಮನಸ್ಸಿನಲ್ಲಿ ಸ್ಪೃಶಿಸುತ ಆನಂದಬಾಷ್ಪಗಳನ್ನು ಬಿಡುತ ತಮ್ಮ ತಮ್ಮ ವ್ಯಾಪಾರಗಳನ್ನು ಮರತು ನಿಂತಿವೆ! ಎಲೇ ತಾಯೆ, ಈ ಬೃಂದಾವನದಲ್ಲಿ ಪುಷ್ಪಫಲಾದಿಗಳಿಂದ ಮರೆಯಿಲ್ಲದೆ ತಮಗೆ ಶ್ರೀಕೃಷ್ಣದೇವನ ದರ್ಶನವುಂಟಾಗುವಂತೆ ಮನೋಹರಗಳಾದ ಚಿಗುರುಗಳುಳ್ಳ ವೃಕ್ಷಶಾಖೆಗಳಲ್ಲಿದ್ದುಕೊಂಡು ಆತನಿಂದ ಪ್ರಕಟಂಗೈಯಲ್ಪಡುವ ಮಧುರವಾದ ವೇಣುಗಾನವನ್ನು ಕೇಳುತ ಒಂದಾನೊಂದು ಸುಖವಿಶೇಷದಿಂದ ತೆರೆಯಲ್ಪಟ್ಟ ನೇತ್ರಗಳುಳ್ಳವಾಗಿ ಇತರ ವ್ಯಾಪಾರಗಳಿಲ್ಲದೆ ಶ್ರವಣಂಗೈಯುತಿರುವ ಪಕ್ಷಿಗಳು ಮೊದಲು ಮಹಾಮುನಿಗಳಾಗಿದ್ದಿರಬೇಕು; ಲೋಕದಲ್ಲಿ ಮಹಾಮುನಿಗಳು ತಮಗೆ ಶ್ರೀಕೃಷ್ಣನ ದರ್ಶನವುಂಟಾಗುವ ರೀತಿಯಲ್ಲಿ ವೇದೋಕ್ತಕರ್ಮಗಳ ಫಲಗಳನ್ನು ತ್ಯಜಿಸಿ ವೇದವೆಂಬ ವೃಕ್ಷದ ಶಾಖೆಗಳನ್ನೇರಿ ಚಿಗುರುಗಳಂತೆ ಮನೋಹರವಾದ ನಿಷ್ಕಾಮಕರ್ಮಗಳನ್ನಾಚರಿಸುತ ಸುಖಯುಕ್ತರಾಗಿ ಶ್ರೀಕೃಷ್ಣನ ಚರಿತ್ರವನ್ನೇ ಶ್ರವಣಂಗೈಯುವರಾದಕಾರಣ ಆ ಋಷಿಗಳೇ ಈ ಪಕ್ಷಿಗಳಾಗಿರಬೇಕು! ಎಲೇ ಸಖಿಯೆ, ಚೇತನಪ್ರಾಣಿಗಳ ವೃತ್ತಾಂತವಂತಿರಲಿ: ಅಚೇತನಗಳಾದ ನದಿಗಳೂ ಈ ಮುಕುಂದನ ವೇಣುಗಾನವನ್ನನುಸರಿಸಿ ತಮ್ಮ ಪ್ರವಾಹಗಳಲ್ಲಿರುವ ಸುಳಿಗಳಿಂದ ಸೂಚಿಸಲ್ಪಟ್ಟ ಮನ್ಮಥಪೃಥೆಯಿಂದ ಭಗ್ನವಾದ ವೇಗವುಳ್ಳವಾಗಿ ಆಲಿಂಗನದಿಂದ ಮರೆಮಾಡಲ್ಪಡುವಂತೆ ತೆರೆಗಳೆಂಬ ತಮ್ಮ ಭುಜಗಳಿಂದ ಕಮಲಾದಿಗಳೆಂಬ ಪೂಜಾದ್ರವ್ಯಗಳನ್ನು ತೆಗೆದುಕೊಂಡು ಶ್ರೀಕೃಷ್ಣನ ಪಾದಪದ್ಮಯುಗಳವನ್ನು ಧರಿಸುತ್ತಿವೆ; ಬಲರಾಮನೊಡನೆಯೂ ಗೋಪಾಲಬಾಲಕರೊಡನೆಯೂ ಯುಕ್ತನಾಗಿ ವೇಣುಗಾನವಂಗೈಯುತ ಗೋಕುಲದ

ಗೋವುಗಳನ್ನು ಬಿಸಲಿನಲ್ಲಿ ಸಂಚಾರಮಾಡಿಕೊಂಡು ಮೇಯಿಸುವ ಶ್ರೀಕೃಷ್ಣಮೂರ್ತಿಯನ್ನು ನೋಡಿ ನೀಲ ಮೇಘವರ್ಣ ಸಾಮ್ಯದಿಂದಲೂ ತಾಪಪರಿಹಾರಕತ್ವದಿಂದಲೂ ತನಗೆ ಸಖನಾದ ಶ್ರೀಕೃಷ್ಣದೇವನ ಉಪರಿಭಾಗದಲ್ಲಿಯೂ ಉದ್ಭವಿಸಿ ಅಖಿಲವೃದ್ಧಿಯನ್ನೈದಿ ಪುಷ್ಪಗಳಿಗೆ ಸಮಾನವಾಗಿ ಶೀತಳವಾದ ಉದಕಬಿಂದುಗಳನ್ನು ಸ್ವಲ್ಪವಾಗಿ ವರ್ಷಿಸುತ ಮೇಘವು ಛತ್ರರೂಪವಾಗಿ ತನ್ನ ಶರೀರದಿಂದ ಆ ದೇವನಿಗೆ ನೆರಳನ್ನುಂಟುಮಾಡುತ್ತಿದೆ! ಎಲೇ ಸಖಿಯರುಗಳಾ, ಮೊದಲು ಶ್ರೀಕೃಷ್ಣನಿಗೆ ಅತ್ಯಂತ ಪ್ರೀತಿಪಾತ್ರರಾದ ಸ್ತ್ರೀಯರ ಕುಚಗಳಲ್ಲಿ ಲೇಪನಂಗೈಯಲ್ಪಟ್ಟ ರತಿಕ್ರೀಡಾಸಮಯದಲ್ಲಿ ಆತನ ಪಾದಾಂಬುಜಗಳ ಅರುಣತ್ವದಿಂದ ಮಿಶ್ರವಾಗಿ ಅತ್ಯಂತ ಕಾಂತಿಯುಕ್ತವಾಗಿ ಬೃಂದಾವನಾದಿ ಸ್ಥಳಗಳಲ್ಲಿ ಆ ದೇವನ ಸಂಚಾರದಿಂದ ತೃಣಗಳಲ್ಲಿ ಲಗ್ನವಾಗಿ ಪ್ರಕಾಶಿಸುವ ಕುಂಕುಮವನ್ನು ನೋಡಿ ಕಾಮೋದ್ರೇಕವುಳ್ಳ ಕಿರಾತಸ್ತ್ರೀಯರು ಅದನ್ನು ತೆಗೆದುಕೊಂಡು ತಮ್ಮ ಮುಖಗಳಲ್ಲಿಯೂ ವಿರಹತಾಪದಿಂದ ತಪ್ತವಾದ ಕುಚಗಳಲ್ಲಿಯೂ ಲೇಪನಂಗೈಯ್ದು ಕಾಮವ್ಯಥೆಯನ್ನು ಪರಿಹರಿಸಿಕೊಂಡು ಧನ್ಯರಾಗುತಿಹರೆ; ನಾವು ವ್ಯರ್ಥವಾದ ಜನ್ಮವುಳ್ಳವರಾದೆವು! ಎಲೇ ಸಖಿಯರುಗಳಿರಾ, ಗೋವರ್ಧನಪರ್ವತವು ಶ್ರೀಹರಿಭಕ್ತರೊಳಗೆ ಅತ್ಯಂತ ಶ್ರೇಷ್ಠವಾದದ್ದು; ರಾಮಕೃಷ್ಣರ ಪಾದಾಂಬುಜ ಸ್ಪರ್ಶದಿಂದ ಹರ್ಷವುಳ್ಳದ್ದಾಗಿ ತೃಣಾದ್ಯಾವಿರ್ಭಾವದಿಂದ ರೋಮಾಂಚವುಳ್ಳದ್ದಾಗಿ ಗೋಸಮೂಹಯುಕ್ತರಾದ ರಾಮಕೃಷ್ಣರಿಗೆ ಉದಕಗಳಿಂದಲೂ ವಿಶ್ರಮಾರ್ಥಗಳಾದ ಗುಹೆಗಳಿಂದಲೂ ಆಹಾರೋಪಯುಕ್ತಗಳಾದ ಕಂದಮೂಲಗಳಿಂದಲೂ ಯಥಾಯೋಗ್ಯವಾಗಿ ಬಹುಮಾನಂಗೈಯುತಲಿರೆಯಾದಕಾರಣ ಆ ಪರ್ವತವು ಕೃತಾರ್ಥವಾಯಿತು! ಎಲೈ ಸಖಿಗಳಾದ ಗೋಪಸ್ತ್ರೀಯರುಗಳಿರಾ, ಗೋಪಬಾಲಕರೊಡನೆ ಗೋವುಗಳನ್ನು ವನಗಳಲ್ಲಿ ಮೇಯಿಸುತ ದುಷ್ಟ ಗೋವೃಷಭಗಳನ್ನು ನಿಗ್ರಹಿಸಲೋಸುಗ ಹಗ್ಗಗಳ ಸಿಂಬೆಗಳನ್ನು ಶಿರಸ್ಸಿನಲ್ಲಿಯೂ ಹೆಗಲಿನಲ್ಲಿಯೂ ಧರಿಸಿಕೊಂಡು ಅವರ ಮಧ್ಯದಲ್ಲಿ ಸೊಬಗಿನಿಂದ ಸಂಚರಿಸುತಿರುವ ರಾಮಕೃಷ್ಣರ ಮಧುರಪದಯುಕ್ತವಾದ ಮಹಾ ವೇಣುನಾದಶ್ರವಣದಿಂದ ಪ್ರಾಣಿಗಳಿಗೆ ಸ್ತಬ್ಧತೆಯೂ ಸ್ಥಾವರಾದಿಗಳಾದ ವೃಕ್ಷಗಳಿಗೆ ಪುಷ್ಪಾದ್ಯುದ್ಗಮವಾದ ರೋಮಾಂಚವೂ ಉಂಟಾಗಿದೆ!" ಎಂದು ವರ್ಣಿಸುತ ಶ್ರೀಕೃಷ್ಣಾತ್ಮಕವನ್ನೈದುತಿದ್ದರು!

---

## ೨೨ನೇ ಅಧ್ಯಾಯ.

### ಶ್ರೀಕೃಷ್ಣನು ಗೋಪಕನ್ಯೆಯರ ವಸ್ತ್ರಗಳನ್ನಪಹರಿಸಿದ್ದು.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ನಂದಗೋಕುಲದಲ್ಲಿರುವ ಗೋಪಕನ್ಯೆಯರು ಹೇಮಂತಋತು ಪ್ರಾಪ್ತವಾಗಲು ಮಾರ್ಗಶಿರಮಾಸದಲ್ಲಿ ನಿಯಮದಿಂದ ಹವಿಸ್ಸನ್ನು ಭುಂಜಿಸುತ ಕಾತ್ಯಾಯನೀ ಪೂಜೆಯೆಂಬ ವ್ರತವನ್ನಾಚರಿಸಿ ಪ್ರತಿದಿವಸದಲ್ಲಿಯೂ ಸೂರ್ಯನು ಉದಯಿಸುವಾಗ ಯಮುನಾನದಿಯ ಜಲದಲ್ಲಿ ಸ್ನಾನಮಾಡಿ ಸಮೀಪದಲ್ಲಿ ಮರಳಿನಿಂದ ಗೌರೀಪ್ರತಿಮೆಯನ್ನು ಕಲ್ಪಿಸಿ ಗೌರಿಯನ್ನು ಆವಾಹನಂಗೈದು ಗಂಧಪರಿಮಳ ಪುಷ್ಪಮಾಲಿಕೆಗಳಿಂದಲೂ ಧೂಪದೀಪಗಳಿಂದಲೂ ನಾನಾವಿಧಗಳಾದ ತಾಂಬೂಲ ತಂಡುಲಾಕ್ಷತೆಗಳಿಂದಲೂ ಬಲಿಗಳಿಂದಲೂ ಪೂಜಿಸುತ ಆ ದೇವಿಯನ್ನು ಕುರಿತು "ಎಲೌ ಮಹಾಮಾಯಾರೂಪಳಾಗಿ ಮಹಾ ಯೋಗಿಯಾಗಿ ಜಗದೀಶ್ವರಿಯಾದ ಕಾತ್ಯಾಯನೀದೇವಿಯೆ, ನಂದಗೋಪನ ಪುತ್ರನಾದ ಶ್ರೀಕೃಷ್ಣನನ್ನು ನಮಗೆ ಪತಿಯಾಗಿಮಾಡು; ನಿನಗೆ ನಮಸ್ಕಾರವು!" ಎಂಬ ಮಂತ್ರಾರ್ಥವನ್ನು ಒಬ್ಬೊಬ್ಬರೂ ಜಪಿಸುತ ಒಂದು ತಿಂಗಳು ಶ್ರೀಕೃಷ್ಣನಲ್ಲಿ ಆಸಕ್ತವಾದ ಮನಸ್ಸುಳ್ಳವರಾಗಿದ್ದರು; ಈ ರೀತಿ ನಂದನ ಪುತ್ರನಾದ ಶ್ರೀಕೃಷ್ಣನು ತಮಗೆ ಪತಿಯಾಗಬೇಕೆಂಬ ಮನೋರಥದ ಸಿದ್ಧಿಗೋಸ್ಕರ ಗೌರೀಪೂಜೆಯುಳ್ಳುದ್ಯುಕ್ತರಾದ ಆ ಗೋಪಕನ್ಯೆಯರು ಪ್ರತಿದಿವಸದಲ್ಲಿಯು ಉಷಃಕಾಲದಲ್ಲೆದ್ದು ತಮ್ಮ ನಾಮಧೇಯಗಳಿಂದ ಪರಸ್ಪರವಾಗಿ ಗ್ರಹಿಸಲ್ಪಟ್ಟ ಹಸ್ತಗಳುಳ್ಳವರಾಗಿ ಯಮುನಾನದಿಯಲ್ಲಿ ಸ್ನಾನಂಗೈಯ

ಲೋಸುಗ ನಡೆಯುತ ಕೃಷ್ಣನನ್ನು ಕುರಿತು ಗಾನಂಗೈಯುತ ಬಂದು ಸಮಯದಲ್ಲಿ ಯಮುನಾನದಿಯನ್ನೈದಿ ಅದರ ತಡಿಯಲ್ಲಿ ತಮ್ಮ ವಸ್ತ್ರಗಳನ್ನಿಟ್ಟು ಆ ನದಿಯ ಮಧ್ಯದಲ್ಲಿ ಶ್ರೀಕೃಷ್ಣನನ್ನು ಕುರಿತು ಸಂತೋಷದಿಂದ ಗಾನಂಗೈಯುತ ಕ್ರೀಡಿಸುತ್ತಿರಲು ಭಗವಂತನಾಗಿ ಯೋಗೀಶ್ವರರಿಗೂ ಈಶ್ವರನಾದ ಶ್ರೀಕೃಷ್ಣನು ಆ ಗೋಪಕನ್ಯೆಯರ ಅಭಿಪ್ರಾಯವನ್ನು ತಿಳದು ಅವರಿಗೆ ವ್ರತಫಲವನ್ನು ಕೊಡಲೋಸುಗ ಮಿತ್ರರಾದ ಗೋಪಾಲಕರಿಂದ ಪರಿವೃತನಾಗಿ ಯಮುನಾತೀರಕ್ಕೆ ಬಂದು ಆ ಕನ್ಯೆಯರ ವಸ್ತ್ರಗಳನ್ನಪಹರಿಸಿ ನಗುತ ತ್ವರೆಯಿಂದ ನದೀತೀರದಲ್ಲಿದ್ದ ಒಂದು ಕದಂಬವೃಕ್ಷವನ್ನೇರಿ ಪರಿಹಾಸವಚನಗಳಿಂದ "ಎಲೇ ಗೋಪಕನ್ಯೆಯರಿರಾ, ನೀವು ವ್ರತಾಚರಣೆಯಿಂದ ಶ್ರಮೆಯನ್ನೈದಿದಿರಾದಕಾರಣ ನಿಮಗೆ ನಾನು ಸತ್ಯವಾದ ವಚನವನ್ನು ನುಡಿಯುವೆನೇಹೊರ್ತು ಪರಿಹಾಸವಚನವನ್ನು ನುಡಿಯೆನು ; ನೀವು ವೃಕ್ಷದಮೇಲೆ ಬಂದು ನಿಮ್ಮ ಇಚ್ಛೆಯಿದ್ದಂತೆ ನಿಮ್ಮ ವಸ್ತ್ರಗಳನ್ನು ತೆಗೆದುಕೊಳ್ಳೀ ! ಎಲೇ ಗೋಪಕನ್ಯೆಯರಿರಾ, ನನ್ನಿಂದ ಅನೃತವಚನವು ನುಡಿಯಲ್ಪಡಲಿಲ್ಲ ; ಅದನ್ನು ಈ ಗೋಪಾಲಬಾಲಕರು ಬಲ್ಲರು ; ಆದಕಾರಣ ನೀವು ಒಬ್ಬೊಬ್ಬರಾಗಿಯಾದರೂ ಒಟ್ಟಾಗಿಯಾದರು ಇಲ್ಲಿಗೆ ಬಂದು ನಿಮ್ಮ ವಸ್ತ್ರಗಳನ್ನು ತೆಗೆದುಕೊಳ್ಳೀ" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಪ್ರೇಮರಸದಿಂದ ಮಗ್ನರಾದ ಆ ಗೋಪಕನ್ಯೆಯರು ಲಜ್ಜೆಪಡುತ ನಗುತ ಜಲಮಧ್ಯದ ದೆಶೆಯಿಂದ ಹೊರಕ್ಕೆ ಬರದೆ ಒಬ್ಬರನ್ನೊಬ್ಬರು ನೋಡಿ ನಗುತ ಮೋಹಚಿತ್ತರಾಗಿ ಸ್ವಲ್ಪಹೊತ್ತು ಆ ಉದಕದಲ್ಲಿ ಕಂಠಪರ್ಯಂತವು ಮುಳಗಿದ್ದ ಶೈತ್ಯದಿಂದ ನಡಗುತ ಶ್ರೀಕೃಷ್ಣಮೂರ್ತಿಯನ್ನು ಕುರಿತು "ಎಲೈ ಶ್ರೀಕೃಷ್ಣನೆ, ನಾವು ನಿನ್ನನ್ನು ನಂದಗೋಪನ ಪುತ್ರನೆಂದೂ ನಮಗೆ ಅತ್ಯಂತ ಪ್ರಿಯನೆಂದೂ ಗೋಕುಲದಲ್ಲಿ ಶ್ಲಾಘ್ಯನೆಂದೂ ಶ್ರೀಕೃಷ್ಣದೇವನೆಂದೂ ಎಣಿಸಿಧೇವೆ ; ನೀನು ಅನ್ಯಾಯವನ್ನು ಮಾಡಬೇಡ ; ನಾವು ಶೀತದಿಂದ ನಡುಗುತಿಧೇವೆ ; ನಮ್ಮ ವಸ್ತ್ರಗಳನ್ನು ನಮಗೆ ಕೊಡು ! ಎಲೈ ಸರ್ವಜ್ಞನಾಗಿ ಶ್ಯಾಮವರ್ಣದಿಂದ ಸುಂದರರೂಪನಾದ "ಶ್ರೀಕೃಷ್ಣನೆ, ನಾವೆಲ್ಲರೂ ನಿನ್ನ ದಾಸಿಯರು ; ನಿನ್ನಿಂದ ಆಜ್ಞಾಪಿಸಲ್ಪಟ್ಟ ಅರ್ಥವನ್ನೇ ಆಚರಿಸುವವರು : ನಮ್ಮ ವಸ್ತ್ರಗಳನ್ನು ನಮಗೆ ದಯೆಮಾಡು ; ಮಾಡದೆಹೋದ ಪಕ್ಷದಲ್ಲಿ ಧೊರೆಯಾದ ಕಂಸನಿಗಾದರೂ ನಂದಗೋಪನಿಗಾದರೂ ಹೇಳುವೆವು" ಎಂದು ನುಡಿದರು.

ಶ್ರೀಕೃಷ್ಣನು ಅವರನ್ನು ಕುರಿತು "ಎಲೇ ಮನೋಹರವಾಗಿ ಮುಗುಳುನಗೆಯುಳ್ಳ ಗೋಪಸ್ತ್ರೀಯರುಗಳಿರಾ, ನೀವು ನನ್ನ ದಾಸಿಯರಾಗಿ ನನ್ನಿಂದ ಹೇಳಲ್ಪಟ್ಟ ಅರ್ಥವನ್ನಾಚರಿಸುವವರಾದರೆ ಇಲ್ಲಿಗೆ ಬಂದು ನಿಮ್ಮ ವಸ್ತ್ರಗಳನ್ನು ತಕ್ಕೊಳ್ಳೀ" ಎಂದು ನುಡಿದನು.

ಆ ಗೋಪಸ್ತ್ರೀಯರು ಶೈತ್ಯದಿಂದ ನಡುಗುತ ಯಮುನಾನದಿಯ ದೆಶೆಯಿಂದೆದ್ದು ಲಜ್ಜೆಯಿಂದ ತಮ್ಮ ರಹಸ್ಯಸ್ಥಾನವನ್ನು ಹಸ್ತಗಳಿಂದಾಚ್ಛಾದನಂಗೈದು ತೀರವನ್ನುಹತ್ತಿ ಬಂದರು ; ಆ ಸ್ತ್ರೀಯರ ಪರಿಶುದ್ಧವಾದ ಮನೋಭಾವವನ್ನು ನೋಡಿ ಪ್ರಸನ್ನನಾಗಿ ಭಗವಂತನಾದ ಕೃಷ್ಣನು ಅವರ ವಸ್ತ್ರಗಳನ್ನು ಕದಂಬಶಾಖಾಗ್ರದಲ್ಲಿರಿಸಿ ರಜೋದರ್ಶನವುಂಟಾಗಿ ಪ್ರೌಢರಾದ ಆ ಸ್ತ್ರೀಯರನ್ನು ಕುರಿತು ಪ್ರೀತಿಯುಕ್ತನಾಗಿ ಮುಗುಳುನಗೆಯೊಡಗೂಡಿ "ಎಲೇ ಗೋಪಸ್ತ್ರೀಯರುಗಳಿರ, ನೀವು ವ್ರತವನ್ನಾಚರಿಸುವವರಾಗಿಯೂ ವಸ್ತ್ರರಹಿತರಾಗಿ ಯಮುನಾನದೀಜಲದಲ್ಲಿ ಸ್ನಾನಾರ್ಥವಾಗಿ ಪ್ರವೇಶವನ್ನು ಮಾಡಿದ್ದು ಗೌರೀದೇವಿಗೆ ಅಪರಾಧವಾಯಿತೇಹೊರ್ತು ಪ್ರೀತಿಕರವಾಗಲಿಲ್ಲ ; ರಜೋದರ್ಶನವಾಗಿ ಪ್ರೌಢರಾದ ಸ್ತ್ರೀಯರು ವಸ್ತ್ರರಹಿತರಾಗಿ ಜಲಪ್ರವೇಶವನ್ನು ಮಾಡುವದು ನಿಷಿದ್ಧವು ; ಆದಕಾರಣ ನಿಮ್ಮ ವ್ರತಭಂಗದಿಂದುಂಟಾದ ಪಾಪಪರಿಹಾರಾರ್ಥವಾಗಿ ನೀವೆಲ್ಲರು ಶಿರಸ್ಸಿನಲ್ಲಿ ಅಂಜಲಿಬಂಧವನ್ನು ಮಾಡಿಕೊಂಡು ನನ್ನನ್ನು ಕುರಿತು ನಮಸ್ಕರಿಸಿ ನಿಮ್ಮ ವಸ್ತ್ರಗಳನ್ನು ಕೇಳಿಕೊಳ್ಳೀ" ಅಂದನು.

ಮಹಾತ್ಮನಾದ ಶ್ರೀಕೃಷ್ಣಮೂರ್ತಿಯ ಧರ್ಮಯುಕ್ತವಾದ ಆ ವಚನವನ್ನು ಕೇಳಿ ಆ ಗೋಪಸ್ತ್ರೀಯರು ಬಂದು ಹಸ್ತದಿಂದ ಗುಹ್ಯಸ್ಥಾನವನ್ನು ಮರೆಮಾಡಿಕೊಂಡು ಒಂದು ಹಸ್ತದಿಂದ ನಮಸ್ಕಾರಂಗೈದರು ; ಭಗ

ವಂತನಾದ ಕೃಷ್ಣನು ಮತ್ತು ಅವರನ್ನು ಕುರಿತು “ಎಲೇ ಸ್ತ್ರೀಯರುಗಳಿರಾ, ಸರ್ವದೇಹಮಯನಾದ ಭಗವಂತನನ್ನು ಏಕಹಸ್ತದಿಂದ ಪ್ರಣಾಮಂಗೈವ ಪುರುಷನಿಗೆ ಹಸ್ತಛೇದವೇ ಶಿಕ್ಷೆಯೆಂದು ಧರ್ಮಶಾಸ್ತ್ರಜ್ಞರಾದ ಮಹಾತ್ಮರು ಹೇಳುವರು; ಆದಕಾರಣ ಪುರುಷನು ತನ್ನ ಹಸ್ತದ್ವಯದಿಂದಲೂ ಸ್ವಾಮಿಯನ್ನು ಕುರಿತು ನಮಸ್ಕರಿಸಬೇಕು; ಅದೇ ರೀತಿಯಲ್ಲಿ ನೀವೂ ಎರಡು ಹಸ್ತಗಳಿಂದ ನನಗೆ ನಮಸ್ಕಾರವನ್ನು ಮಾಡಿ ವಸ್ತ್ರಗಳನ್ನು ಪರಿಗ್ರಹಿಸೀ!” ಅಂದನು.

ಈ ರೀತಿಯಲ್ಲಿ ಕೃಷ್ಣಮೂರ್ತಿಯಿಂದ ಆಜ್ಞಾಪಿಸಲ್ಪಟ್ಟ ಆ ಸ್ತ್ರೀಯರು ತಮ್ಮಿಂದಾಚರಿಸಲ್ಪಟ್ಟ ವಸ್ತ್ರರಹಿತ ಜಲಾವಗಾಹನವನ್ನು ವ್ರತಭಂಗಕರವಾಗಿ ನಂಬಿ ಆ ವ್ರತಪೂರ್ತ್ಯರ್ಥವಾಗಿ ಸರ್ವಪಾಪಪರಿಹಾರಕನಾಗಿ ಸಮಸ್ತವ್ರತಫಲಪ್ರದನಾಗಿ ಸಾಕ್ಷಾತ್ ಭಗವಂತನಾದ ಶ್ರೀಕೃಷ್ಣನನ್ನು ಎರಡು ಹಸ್ತಗಳಿಂದಲೂ ನಮಸ್ಕಾರಂಗೈದರು! ಭಗವಂತನಾಗಿ ದಯಾಶೀಲನಾದ ಶ್ರೀಕೃಷ್ಣನು ಹಾಗೆ ನಮಸ್ಕಾರಂಗೈಯುತ ನಮ್ರರಾಗಿದ್ದ ಆ ಗೋಪಕನ್ಯೆಯರನ್ನು ನೋಡಿ ಸಂತೋಷಯುಕ್ತನಾಗಿ ಅವರ ವಸ್ತ್ರಗಳನ್ನಿತ್ತನು; ಆ ಗೋಪಕನ್ಯೆಯರು ಶ್ರೀಕೃಷ್ಣಮೂರ್ತಿಯಿಂದ ಈರೀತಿ ಅತ್ಯಂತ ವಂಚಿಸಲ್ಪಟ್ಟು ಲಜ್ಜಾತ್ಯಾಗಂಗೈಸಲ್ಪಟ್ಟು ಪರಿಹಾಸಮಾಡಲ್ಪಟ್ಟು ಬೊಂಬೆಗಳಂತೆ ಕುಣಿಯಿಸಲ್ಪಟ್ಟು ವಸ್ತ್ರರಹಿತರಾಗಿ ಮಾಡಲ್ಪಟ್ಟವರಾದಾಗ್ಯೂ ತಮ್ಮ ಪ್ರಿಯನಾದ ಶ್ರೀಕೃಷ್ಣನ ಸಂಗವುಂಟಾದ್ದರಿಂದ ಅತ್ಯಂತ ಸಂತೋಷಯುಕ್ತರಾಗಿ ಆತನಲ್ಲಿ ದೋಷದೃಷ್ಟಿಯಿಂದ ಅಸೂಯೆಪಡದೆ ತಮ್ಮ ವಸ್ತ್ರಗಳನ್ನುಟ್ಟು ಆತನಲ್ಲಿ ವಶೀಕೃತರಾಗಿ ಲಜ್ಜೆಯಿಂದ ವಿಕಾಸಯುಕ್ತವಾದ ಸವಿನೋಟವುಳ್ಳವರಾಗಿ ಆತನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವರಾಗಿ ಆತನನ್ನು ಬಿಟ್ಟು ಹೋಗಲಾರದೆ ಅಲ್ಲೇ ನಿಂತಿದ್ದರು; ಭಕ್ತವತ್ಸಲನಾದ ಶ್ರೀಕೃಷ್ಣನು ತನ್ನ ಪಾದಸೇವೆಯನ್ನು ಪಡೆಯಬೇಕೆಂಬ ಇಚ್ಛೆಯಿಂದ ವ್ರತವನ್ನಾಚರಿಸುತ್ತಿದ್ದ ಆ ಗೋಪಾಂಗನೆಯರ ಅಭಿಪ್ರಾಯವನ್ನು ತಿಳಿದು ಅವರನ್ನು ಕುರಿತು “ಎಲೇ ಗೋಪಾಂಗನೆಯರಾ, ನನ್ನನ್ನು ಪೂಜಿಸಬೇಕೆಂಬ ನಿಮ್ಮ ಮನೋರಥವು ಲಜ್ಜಿತರಾದ ನಿಮ್ಮಿಂದ ಹೇಳಲ್ಪಡದಿದ್ದಾಗ್ಯೂ ನನ್ನಿಂದ ತಿಳಿಯಲ್ಪಟ್ಟು ಸಮ್ಮತಿಸಲ್ಪಟ್ಟಿತು; ನಿಮ್ಮ ಮನೋರಥವು ಸಾಧ್ಯವಾಗುವದು; ಹುರಿಯಲ್ಪಟ್ಟ ಧಾನ್ಯಗಳೂ ಕುದಿಸಲ್ಪಟ್ಟ ಧಾನ್ಯಗಳೂ ಅಂಕುರೋತ್ಪತ್ತಿಗೆ ಯೋಗ್ಯವಾಗದರೀತಿ ನನ್ನಲ್ಲಿ ನಿಲ್ಲಿಸಲ್ಪಟ್ಟ ಬುದ್ಧಿಯುಳ್ಳ ಜನರ ಕಾಮವು ಮತ್ತೊಬ್ಬರ ಕಾಮಭೋಗಕ್ಕೆ ಸಮರ್ಥವಾಗಲಾರವು! ಎಲೇ ಗೋಪಾಂಗನೆಯರಾ, ಯಾವ ಮನೋರಥವನ್ನುದ್ದೇಶಂಗೈದು ನೀವು ಗೌರೀವ್ರತವನ್ನಾಚರಿಸಿದಿರೊ ಆ ಮನೋರಥಸಿದ್ಧಿಯು ನಿಮಗುಂಟಾಗುವದು; ಈ ರಾತ್ರಿ ಮೊದಲುಗೊಂಡು ಮುಂದೆ ಬರುವ ರಾತ್ರಿಗಳಲ್ಲಿ ನನ್ನೊಡನೆ ನೀವು ರಮಿಸುತ್ತಿರುವಿರಿ; ನೀವು ಈಗ ಗೋಕುಲಕ್ಕೆ ಹೋಗೀ” ಎಂದು ನುಡಿದನು.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ಆ ಗೋಪಾಂಗನೆಯರು ತಮ್ಮ ಮನೋರಥವನ್ನು ಪಡೆದು ಶ್ರೀಕೃಷ್ಣನಿಂದ ಆಜ್ಞಾಪಿಸಲ್ಪಟ್ಟು ಆತನ ಪಾದಾರವಿಂದವನ್ನು ಬಿಟ್ಟು ಹೋಗಲಾರದೆ ಅತಿ ಪ್ರಯಾಸದಿಂದ ಗೋಕುಲಕ್ಕೆ ಹೋದರು! ಅನಂತರದಲ್ಲಿ ಭಗವಂತನಾಗಿ ದೇವಕೀಪುತ್ರನಾದ ಶ್ರೀಕೃಷ್ಣದೇವನು ಅಣ್ಣನಾದ ಬಲಭದ್ರದೇವನೊಡನೆಯೂ ಗೋಪಾಲಬಾಲಕರೊಡನೆಯೂ ಯುಕ್ತನಾಗಿ ಗೋವುಗಳನ್ನು ನಡೆಯಿಸುತ ಬೃಂದಾವನದಿಂದ ದೂರವಾದ ಒಂದು ಪ್ರದೇಶವನ್ನು ಕುರಿತೈದಿದನು; ಆ ಪ್ರದೇಶದಲ್ಲಿ ಅತ್ಯುಷ್ಣವಾಗಿ ಸಹಿಸಲಶಕ್ಯವಾದ ಸೂರ್ಯಕಿರಣಗಳಿಂದುಂಟಾದ ಬಿಸಲಿನಲ್ಲಿ ತಮ್ಮ ಛಾಯೆಗಳಿಂದ ಛತ್ರಗಳೋಪಾದಿಯಲ್ಲಿರುವ ವೃಕ್ಷಗಳನ್ನು ನೋಡಿ ಶ್ರೀಕೃಷ್ಣದೇವನು ಗೋಪಾಲಕರನ್ನು ಕುರಿತು “ಎಲೈ ಸ್ತೋಕಕೃಷ್ಣನೆ, ಎಲೈ ಅಂಶುವೆ, ಎಲೈ ಶ್ರೀಧಾಮನೆ, ಎಲೈ ಸುಬಲನೆ, ಎಲೈ ಅರ್ಜುನನೆ, ಎಲೈ ವಿಶಾಲನೆ, ಎಲೈ ಋಷಭನೆ, ಎಲೈ ತೇಜಸ್ವಿಯಾದ ದೇವಪ್ರಸ್ಥನೆ, ಎಲೈ ವರೂಥಪನೆ, ವಾಯುವನ್ನೂ ವರ್ಷವನ್ನೂ ಬಿಸಲನ್ನೂ ಹಿಮವನ್ನೂ ಸಹಿಸುವಂಥಾವಾಗಿ ನಮಗೆ ಆ ವಾಯುವರ್ಷಾತಪಹಿಮಗಳ ಉಪದ್ರವಗಳನ್ನು ಪರಿಹರಿಸುವಂಥಾವಾಗಿ ಪರೋಪದ್ರವಪರಿಹಾರವೇ ಮುಖ್ಯಪ್ರಯೋಜನವಾಗುಳ್ಳ ಮಹಾ ಪುಣ್ಯಶಾಲಿಗಳಾದ ಈ ವೃಕ್ಷಗಳನ್ನು ನೋಡೀ; ಅರ್ಥಿಗಳಾದವರು ದಯಾಶೀಲನಾದ ಸುಜನನ ಸಮೀಪದ

ಲ್ಲಿ ಯಾಚಕರಾಗೈದರೆ ಆತನು ಅವರ ಇಷ್ಟಾರ್ಥವನ್ನು ಕೊಡುವ ರೀತಿಯಲ್ಲಿ ಸರ್ವಪ್ರಾಣಿಗಳೂ ತಮ್ಮ ಛಾಯಾದಿಗಳಿಂದ ಉಪಕಾರಂಗೈಯುವ ಈ ವೃಕ್ಷಗಳ ಜನ್ಮವು ಸರ್ವೋತ್ಕೃಷ್ಟವು ! ಈ ವೃಕ್ಷಗಳು ಪತ್ರ ಪುಷ್ಪ ಫಲ ನೆರಳು ನಾರು ಬೇರು ಕಾಷ್ಠ ವೇಣು ಕ್ಷೀರ ಗಂಧ ಭಸ್ಮ ಕೆಚ್ಚು ಅಂಕುರ ಚಿಗುರುಗಳಿಂದ ಯಥೋಚಿತವಾಗಿ ಸಮಸ್ತ ಪ್ರಾಣಿಗಳ ಇಷ್ಟಾರ್ಥ ಪೂರಣವಂಗೈವವು; ಆದಕಾರಣ ಲೋಕದಲ್ಲಿ ತಮ್ಮ ಪ್ರಾಣ ಅರ್ಥ ಬುದ್ಧಿ ವಿವೇಕ ಮೃದುವಚನಾದಿಗಳಿಂದ ಪರರಿಗೆ ಸರ್ವಕಾಲದಲ್ಲಿಯೂ ಉಪಕಾರಮಾಡುವವರ ಜನ್ಮವು ಸಾಫಲ್ಯವಾಗುವದು !'' ಎಂದು ನುಡಿದನು.

ಎಲೈ ಅರಸೆ, ಈರೀತಿಯಲ್ಲಿ ಹೇಳುತ ಸಂತೋಷಯುಕ್ತನಾಗಿ ಶ್ರೀಕೃಷ್ಣದೇವನು ಚಿಗುರುಗಳಿಂದಲೂ ಗೊಂಚಲುಗಳಿಂದಲೂ ಫಲಗಳಿಂದಲೂ ಪುಷ್ಪಗಳಿಂದಲೂ ಶ್ರೇಷ್ಠವಾದ ಪರ್ಣಗಳಿಂದಲೂ ಪೂರ್ಣವಾಗಿ ಭಾರದಿಂದ ಬೊಗ್ಗಿರುವ ಶಾಖೆಗಳುಳ್ಳ ವೃಕ್ಷಗಳ ಮಧ್ಯದಲ್ಲಿ ಅವುಗಳ ಛಾಯೆಯನ್ನನುಸರಿಸಿಕೊಂಡು ಯಮುನಾನದಿಗೆ ಹೋದನು ; ಆ ಬಳಿಕ ನದಿಯಲ್ಲಿ ಶೀತಳವಾಗಿ ಪರಿಶುದ್ಧವಾದ ಉದಕವನ್ನು ಗೋವುಗಳಿಗೆ ಪಾನಂಗೈಸಿ ಗೋಪಾಲಕರೂ ಉದಕಪಾನವನ್ನು ಮಾಡಿ ಒಂದು ಉಪವನದಲ್ಲಿ ಪಶುಗಳನ್ನು ಯಥೇಚ್ಛವಾಗಿ ಮೇಯಿಸುತಿದ್ದು ಕ್ಷುತ್ತಿನಿಂದ ಬಳಲ್ದು ರಾಮಕೃಷ್ಣರ ಸನ್ನಿಧಾನವನ್ನೈದಿದರು !

---

## ೨೩ನೇ ಅಧ್ಯಾಯ.

### ಶ್ರೀಕೃಷ್ಣನು ಬ್ರಾಹ್ಮಣಪತ್ನಿಯರಿಗನುಗ್ರಹಿಸಿದ್ದು.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ಆ ಗೋಪಾಲಕರು ಶ್ರೀರಾಮಕೃಷ್ಣರನ್ನು ಕುರಿತು “ಎಲೈ ಮಹಾಭುಜಬಲವುಳ್ಳ ರಾಮನೆ, ಎಲೈ ದುಷ್ಟರನ್ನು ನಿಗ್ರಹಂಗೈವ ಶ್ರೀಕೃಷ್ಣಮೂರ್ತಿಯೆ, ಮಹತ್ತಾದ ಹಸಿವು ನಮ್ಮನ್ನು ಬಾಧಿಸುತ್ತಿದೆ ; ಅದಕ್ಕೆ ನೀವು ಉಪಶಾಂತಿ ಮಾಡಬೇಕು” ಎಂದು ನುಡಿದರು.

ಭಗವಂತನಾಗಿ ಜಗದೀಶ್ವರನಾದ ಶ್ರೀಕೃಷ್ಣನು ಅದನ್ನು ಕೇಳಿ ಆ ಸಮಯದಲ್ಲಿ ತನ್ನ ಭಕ್ತರಾದ ಬ್ರಾಹ್ಮಣಪತ್ನಿಯರಿಗೆ ಅನುಗ್ರಹಂಗೈಯುವದಕ್ಕಾಗಿ ಅವರನ್ನು ಕುರಿತು “ಎಲೈ ಗೋಪಾಲಬಾಲಕರುಗಳಿರಾ, ಅಗೋ ಅಲ್ಲಿ ವೇದಾಧ್ಯಯನಸಂಪನ್ನರಾದ ಅನೇಕ ಬ್ರಾಹ್ಮಣರು ಸ್ವರ್ಗವನ್ನು ಪಡೆಯಬೇಕೆಂದು ಆಂಗೀರಸನಾಮಕವಾದ ಒಂದು ಮಹಾಯಜ್ಞವನ್ನು ಮಾಡುತಿದ್ದಾರೆ ; ನೀವು ಅವರ ಯಜ್ಞಶಾಲೆಯನ್ನೈದಿ ಭಗವಂತನಾಗಿ ನಮ್ಮ ಅಣ್ಣನಾದ ಬಲರಾಮನ ನಾಮಧೇಯವನ್ನೂ ನನ್ನ ನಾಮಧೇಯವನ್ನೂ ಹೇಳಿ ಅನ್ನವನ್ನು ಯಾಚಿಸೀ” ಎಂದು ಆಜ್ಞಾಪಿಸಿದನು.

ಆ ಗೋಪಾಲಕರು ಆ ಯಜ್ಞಶಾಲೆಯನ್ನೈದಿ ಅಂಜಲೀಬಂಧಯುಕ್ತರಾಗಿ ಭೂಮಿಯಲ್ಲಿ ದಂಡದಂತೆ ಪ್ರಣಾಮಂಗೈದು ಕೃಷ್ಣನ ಆಜ್ಞಾಪ್ರಕಾರವಾಗಿ ಆ ಬ್ರಾಹ್ಮಣರನ್ನು ಕುರಿತು “ಎಲೈ ಬ್ರಾಹ್ಮಣರುಗಳಿರಾ, ನಮ್ಮ ವಾಕ್ಯವನ್ನು ಕೇಳೀ ; ನಿಮಗೆ ಶ್ರೇಯಸ್ಸುಂಟಾಗಲಿ : ನಾವು ಶ್ರೀಕೃಷ್ಣನ ಆಜ್ಞೆಯಿಂದಲೂ ಬಲರಾಮನ ಆಜ್ಞೆಯಿಂದಲೂ ಪ್ರೇರಿಸಲ್ಪಟ್ಟು ಈ ಯಜ್ಞಶಾಲೆಗೆ ಬಂದೆವು ! ಧರ್ಮಜ್ಞರೊಳಗೆ ಶ್ರೇಷ್ಠರಾದ ಎಲೈ ಬ್ರಾಹ್ಮಣೋತ್ತಮರುಗಳಿರಾ, ಶ್ರೀರಾಮಕೃಷ್ಣರು ಇಲ್ಲಿಗೆ ಸಮೀಪವಾದ ವನದಲ್ಲಿ ಗೋವುಗಳನ್ನು ಮೇಯಿಸುತ ಕ್ಷುತ್ತಿನಿಂದ ಬಳಲಿ ಅನ್ನವನ್ನಪೇಕ್ಷಿಸುತಿದ್ದಾರೆ ; ಆದ್ದರಿಂದ ಅರ್ಥಿಗಳಾದವರಲ್ಲಿ ನಿಮಗೆ ವಿಶ್ವಾಸವಿದ್ದರೆ ಅನ್ನವನ್ನು ಕೊಟ್ಟು ಅವರನ್ನು ಸಂತೋಷಪಡಿಸೀ ! ಎಲೈ ಬ್ರಾಹ್ಮಣೋತ್ತಮರಿರಾ, ಯಜ್ಞದೀಕ್ಷೆಯು ಮೊದಲುಗೊಂಡು ಅಗ್ನಿಷ್ಟೋಮೀಯ ಪಶ್ವಾಲಂಭನಕ್ಕೆ ಪೂರ್ವದಲ್ಲಿಯೂ ಸೌತ್ರಾಮಣಿಯೆಂಬ ಯಾಗದಲ್ಲಿಯೂ ಅನ್ನವು ನಿಷಿದ್ಧವೇಹೊರ್ತು ಮಿಕ್ಕ ಯಜ್ಞಗಳಲ್ಲಿ ಅನ್ನವನ್ನು ಭುಂಜಿಸುವ ಪುರುಷನು ದೋಷಯುಕ್ತನಾಗುವದಿಲ್ಲ'' ಎಂದು ನುಡಿದರು !

ಆಗ ತುಚ್ಛಗಳಾದ ಸ್ವರ್ಗಾದಿ ಫಲಗಳಲ್ಲಿಮಾತ್ರವೇ ಅಪೇಕ್ಷೆಯುಳ್ಳವರಾಗಿ ಬಹು ಕ್ಲೇಶಸಾಧ್ಯಗಳಾದ ಕರ್ಮಗಳನ್ನಾಚರಿಸುತ ತಾವು ಅಜ್ಞರಾದಾಗ್ಯೂ ಸರ್ವಜ್ಞರೆಂದು ತಿಳುಕೊಂಡಿದ್ದ ಆ ಬ್ರಾಹ್ಮಣರು ಆ ಗೋಪಾಲಕರಿಂದ ಹೇಳಲ್ಪಟ್ಟ ಶ್ರೀಕೃಷ್ಣನ ಯಾಚನೆಯನ್ನು ಅಂಗೀಕರಿಸಲಿಲ್ಲ! ಎಲೈ ಅರಸೆ, ದೇಶವು ಕಾಲವು ಪ್ರತ್ಯೇಕವಾದ ಚರುಪುರೋಡಾಶಾದಿ ದ್ರವ್ಯವು ಮಂತ್ರವು ಪ್ರಯೋಗವು ಋತ್ವಿಕ್ಕುಗಳು ಗಾರ್ಹಪತ್ಯ ದಕ್ಷಿಣಾಗ್ನಿ ಆಹವನೀಯಗಳೆಂಬ ತ್ರಿಯಾಗ್ನಿಗಳು ಇಂದ್ರಾದಿದೇವತೆಗಳು ದೀಕ್ಷಿತನಾದ ಯಜಮಾನನು ಯಜ್ಞವು ಧರ್ಮವು ಮೊದಲಾದವುಗಳು ಯಾವನ ಸ್ವರೂಪವೊ ಅಂಥಾ ಸಾಕ್ಷಾತ್ ಪರಬ್ರಹ್ಮಸ್ವರೂಪನಾದ ಶ್ರೀಕೃಷ್ಣದೇವನನ್ನು ಮನುಷ್ಯನೆಂಬ ದೃಷ್ಟಿಯಿಂದ ದೇಹಾಭಿಮಾನಿಗಳಾಗಿ ಪ್ರಜ್ಞಾಹೀನರಾಗಿ ಮೂಢರಾದ ಆ ಬ್ರಾಹ್ಮಣರು ತಿಳದರೇ ಹೊರ್ತು ಪರಬ್ರಹ್ಮನೆಂದು ತಿಳಿಯದೆ ಆ ಗೋಪಾಲಕರ ಅನ್ನಯಾಚನೆಯನ್ನು ಕೇಳಿ ಅನ್ನವನ್ನು ಕೊಡುವದಾಗಾದರೂ ಇಲ್ಲವೆಂದಾದರೂ ಹೇಳದೆ ಉಪೇಕ್ಷೆಯಿಂದಿರಲು ಆ ಗೋಪಾಲಕರು ಅನ್ನದ ಆಶೆಯನ್ನು ಬಿಟ್ಟು ರಾಮಕೃಷ್ಣರ ಸನ್ನಿಧಾನವನ್ನೈದಿ ಆ ವೃತ್ತಾಂತವನ್ನು ವಿಜ್ಞಾಪನಂಗೈದರು! ಭಗವಂತನಾದ ಶ್ರೀಕೃಷ್ಣನು ಅವರ ವಾಕ್ಯವನ್ನು ಕೇಳಿ ನಗುತ ಕಾರ್ಯಾರ್ಥಿಗಳಾದವರು ಪರಿತಾಪಪಟ್ಟರೆ ತೀರುವದೇ ಎಂದೂ ಯಾಚನೆಯಂಗೈವ ಪುರುಷನು ಅವಮಾನವನ್ನೈದದಿರುವನೇ ಎಂದೂ ಊಹಿಸಿ ಸರ್ವವನ್ನು ಸಹಿಸಿಕೊಂಡು ಕಾರ್ಯವನ್ನು ಸಾಧಿಸಬೇಕೇ ಹೊರ್ತು ಪರಾಙ್ಮುಖರಾಗಿ ಬರಬಾರದೆಂಬ ಲೋಕವ್ಯಾಪಾರವನ್ನು ಸ್ಮರಿಸಿ ಆ ಗೋಪಾಲಕರನ್ನು ಕುರಿತು "ಎಲೈ ಗೋಪಾಲಕರಾ, ನೀವು ತಿರಿಗಿ ಆ ಯಜ್ಞಶಾಲೆಯನ್ನೈದಿ ಆ ಬ್ರಾಹ್ಮಣರ ಪತ್ನೀಯರನ್ನು ಕುರಿತು 'ಬಲರಾಮನೊಡಗೂಡಿ ಬಂದಿರುವ ಶ್ರೀಕೃಷ್ಣದೇವನು ಅನ್ನವನ್ನು ಯಾಚಿಸುತ್ತಾನೆ' ಎಂದು ತಿಳಿಸೀ; ಅವರು ನನ್ನಲ್ಲೇ ಆಸಕ್ತವಾದ ಚಿತ್ತವುಳ್ಳವರಾದ್ದರಿಂದ ನನ್ನಲ್ಲಿರುವ ಪ್ರೇಮದಿಂದ ನಿಮಗೆ ಯಥೇಚ್ಛವಾಗಿ ಅನ್ನವನ್ನು ಕೊಡುತ್ತಾರೆ" ಎಂದು ನುಡಿದನು.

ಎಲೈ ಅರಸೆ, ಆ ಬಳಿಕ ಗೋಪಾಲಕರು ಮತ್ತೂ ಆ ಯಜ್ಞಶಾಲೆಗೆ ಹೋಗಿ ಪತ್ನಿಶಾಲೆಯಲ್ಲಿ ಅಲಂಕೃತರಾಗಿ ಕುಳಿತಿದ್ದ ಆ ಬ್ರಾಹ್ಮಣರ ಪತ್ನಿಯರನ್ನ ಕಂಡು ನಮಸ್ಕಾರಂಗೈದು ವಿನಯಯುಕ್ತರಾಗಿ ಅವರನ್ನು ಕುರಿತು "ಬ್ರಾಹ್ಮಣ ಪತ್ನಿಯರಾದ ನಿಮಗೆ ನಮಸ್ಕಾರವು! ಇಲ್ಲಿಗೆ ಸಮೀಪದಲ್ಲಿ ಸಂಚಾರಂಗೈವ ಶ್ರೀಕೃಷ್ಣದೇವನಿಂದ ನಾವು ಕಳುಹಿಸಲ್ಪಟ್ಟು ಬಂದೆವು; ಬಲಭದ್ರಸಮೇತನಾಗಿ ಗೋಪಾಲಬಾಲಕರೊಡಗೂಡಿ ಗೋವುಗಳನ್ನು ಮೇಯಿಸುತ ಶ್ರೀಕೃಷ್ಣಮೂರ್ತಿಯು ಗೋಕುಲಕ್ಕೆ ದೂರವಾದ ಈ ಪ್ರದೇಶಕ್ಕೆ ಬಂದಿಧಾನೆ; ಭೋಜನಾಪೇಕ್ಷೆಯುಳ್ಳ ಗೋಪಾಲಕರೊಡಗೂಡಿರುವ ಶ್ರೀಕೃಷ್ಣದೇವನಿಗೋಸ್ಕರ ಅನ್ನವು ನಿಮ್ಮಿಂದ ಕೊಡಲ್ಪಡಲಿ" ಎಂದು ವಿಜ್ಞಾಪಿಸಿದರು.

ಆ ಗೋಪಾಲಕರ ವಾಕ್ಯವನ್ನು ಕೇಳಿ ಆ ಬ್ರಾಹ್ಮಣಪತ್ನಿಯರು ಮೊದಲೇ ಶ್ರೀಕೃಷ್ಣನ ಕಥಾಶ್ರವಣದಿಂದ ಮೋಹಚಿತ್ತರಾಗಿ ಶ್ರೀಕೃಷ್ಣನನ್ನು ಯಾವಾಗ ನೋಡುವದೆಂದು ಅತ್ಯಂತ ಕುತೂಹಲವುಳ್ಳವರಾಗಿದ್ದದ್ದರಿಂದ ಆಗ ಶ್ರೀಕೃಷ್ಣಮೂರ್ತಿಯು ಬಂದನೆಂಬ ವೃತ್ತಾಂತವನ್ನು ಕೇಳಿ ಆತನ ದರ್ಶನಾರ್ಥವಾಗಿ ಅತಿ ತ್ವರೆಯಿಂದ ಲೇಹ್ಯ ಚೋಷ್ಯಖಾದ್ಯ ಭಕ್ಷ್ಯಗಳೆಂಬ ಚತುರ್ವಿಧಗಳಾದ ಪದಾರ್ಥಗಳನ್ನೂ ಸಂಸ್ಕಾರದಿಂದುಂಟಾದ ರಸ ಸಾರಳ್ಯವಿಶೇಷದಿಂದ ಅತ್ಯಂತ ರುಚಿಕರಗಳಾದ ದಿವ್ಯಾನ್ನಗಳನ್ನೂ ಪಾತ್ರೆಗಳಲ್ಲಿಟ್ಟುಕೊಂಡು ಸಮುದ್ರವನ್ನು ಕುರಿತು ತಡೆಯಿಲ್ಲದೈದುವ ನದಿಗಳಂತೆ ತಮ್ಮ ಪತಿಗಳಿಂದಲೂ ಬಂಧುಗಳಿಂದಲೂ ಪಿತೃಗಳಿಂದಲೂ ಭ್ರಾತೃಗಳಿಂದಲೂ ಪುತ್ರರಿಂದಲೂ ತಡೆಯಲ್ಪಟ್ಟರೂ ನಿಲ್ಲದೇ ಹೊರಟು ಅಶೋಕವೃಕ್ಷದ ನೂತನಗಳಾದ ಚಿಗುರುಗಳಿಂದ ಶೋಭಾಯಮಾನವಾಗಿರುವ ಯಮುನಾನದಿಯ ಉಪವನದಲ್ಲಿ ಗೋಪಾಲಕರೊಡಗೂಡಿ ಬಲರಾಮನ ಸಮೇತನಾಗಿ ಗೋವುಗಳನ್ನು ಸಂಚಾರಮಾಡಿಸುತ ನೀಲಮೇಘಶ್ಯಾಮನಾಗಿ ಪೀತಾಂಬರಧಾರಿಯಾಗಿ ವನದಲ್ಲಿರುವ ಕುಸುಮಗಳಿಂದ ನಿರ್ಮಿಸಲ್ಪಟ್ಟ ತುರಾಯಿಗಳಿಂದಲಂಕೃತನಾಗಿ ಸಿಂಧೂರಾದಿ ಧಾತುಗಳಿಂದಲೂ ಚಿಗುರುಗಳಿಂದಲೂ ಭೂಷಿತನಾಗಿ ನಟೇಶ್ವರನಂತೆ ಮ

ನೋಹರವಾದ ವೇಷವನ್ನು ಧರಿಸಿ ತನ್ನ ಅತ್ಯಂತ ಮಿತ್ರನಾದ ಒಬ್ಬ ಗೋಪಾಲಕನ ಭುಜದಲ್ಲಿ ಒಂದು ಕೈಯನ್ನಿಟ್ಟುಕೊಂಡು ಮತ್ತೊಂದು ಹಸ್ತದಿಂದ ಪದ್ಮವನ್ನು ತಿರಿಗಿಸುತ ಕರ್ಣಗಳಲ್ಲಿ ಕುಮುದಪುಷ್ಪಗಳನ್ನು ಧರಿಸಿ ಕಪೋಲಗಳಲ್ಲಿ ಶೋಭಿಸುವ ಮುಂಗುರುಳುಗಳಿಂದ ಪ್ರಕಾಶಿಸುವ ಮುಖಾರವಿಂದದಲ್ಲಿ ಹೊಳೆಯುವ ಮುಗುಳುನಗೆಯುಳ್ಳ ಆ ಮೂರ್ತಿಯನ್ನು ಕಂಡು ಬಹಳವಾಗಿ ಶ್ರವಣಂಗೈಯಲ್ಪಟ್ಟ ಪ್ರಿಯನಾದ ಆ ಕೃಷ್ಣಮೂರ್ತಿಯ ದಿವ್ಯಚರಿತ್ರಗಳ ಉತ್ಕರ್ಷಗಳೆಂಬ ಕರ್ಣಾಭರಣಗಳಿಂದ ಅಲಂಕೃತರಾಗಿ ಆತನಲ್ಲಿ ಲಗ್ನವಾದ ಮನಸ್ಸುಳ್ಳವರಾಗಿ ಕೃಷ್ಣನನ್ನು ತಮ್ಮ ನೇತ್ರರಂಧ್ರಗಳಿಂದ ತಮ್ಮ ಹೃದಯಗಳೊಳಗೆ ಪ್ರವೇಶಂಗೈಸಿ ಬಹುಕಾಲಪರ್ಯಂತವು ಆಲಿಂಗನಂಗೈದು ಅಹಂಕಾರಾದಿ ವೃತ್ತಿಗಳು ಸುಷುಪ್ತಿಸಾಕ್ಷಿಯಾದ ಪ್ರಾಜ್ಞನನ್ನು ಆಲಿಂಗನಂಗೈದು ಆ ಪ್ರಾಜ್ಞನಲ್ಲಿ ಲಯವನ್ನೈದುವರೀತಿಯಲ್ಲಿ ಶ್ರೀಕೃಷ್ಣಮೂರ್ತಿಯಲ್ಲಿ ಲಯವನ್ನೈದಿ ಸಂಸಾರತಾಪವನ್ನು ತ್ಯಾಗಂಗೈದರು! ಆ ಸಮಯದಲ್ಲಿ ಆರೀತಿ ತ್ಯಜಿಸಲ್ಪಟ್ಟ ಸಮಸ್ತಾಶೆಯುಳ್ಳವರಾಗಿ ತನ್ನ ದರ್ಶನಾರ್ಥವಾಗಿ ಬಂದ ಆ ಸ್ತ್ರೀಯರ ಅಂತಃಕರಣವೃತ್ತಿಯನ್ನು ಸರ್ವಬುದ್ಧಿಸಾಕ್ಷಿಯಾದ ಶ್ರೀಕೃಷ್ಣದೇವನು ತಿಳಿದು ಮುಗುಳುನಗೆಯೊಡಗೂಡಿದ ಮುಖವುಳ್ಳವನಾಗಿ "ಎಲೇ ಮಹಾ ಭಾಗ್ಯವತಿಯರಾದ ವಿಪ್ರಪತ್ನಿಯರುಗಳಿರಾ, ನಿಮಗೆ ಸುಖಾಗಮನವುಂಟಾಯಿತೆ! ನೀವಿಲ್ಲಿಗೆ ಬರುವದಕ್ಕೆ ಅನೇಕ ವಿಘ್ನಗಳುಂಟಾದಾಗ್ಯೂ ಅವುಗಳನ್ನು ನಿರಾಕರಿಸಿ ನನ್ನ ದರ್ಶನಾರ್ಥವಾಗಿ ಬಂದಿರಿ; ಇದು ಬಹು ಚನ್ನಾಯಿತು; ಇಲ್ಲಿ ಕುಳಿತುಕೊಳ್ಳೀ; ನಿಮಗೆ ನಾವು ಯಾವ ಉಪಕಾರವನ್ನು ಮಾಡಬೇಕು; ನಿಪುಣರಾದ ವಿವೇಕಿಗಳು ತಮ್ಮ ಇಷ್ಟವನ್ನೇ ಆಲೋಚನೆ ಮಾಡುವರಾದಕಾರಣ ಅತ್ಯಂತ ಪ್ರಿಯನಾಗಿ ಆತ್ಮನಾದ ನನ್ನಲ್ಲಿ ಫಲಾಪೇಕ್ಷಾರಹಿತವಾಗಿ ಲೌಕೀಕನಿಮಿತ್ತವನ್ನಪೇಕ್ಷಿಸದೆ ಉತ್ಪನ್ನವಾದ ಅವಿಚ್ಛಿನ್ನಭಕ್ತಿಯನ್ನು ಮಾಡುವರು; ಪ್ರಾಣಗಳು ಇಂದ್ರಿಯಗಳು ಮನೋಬುದ್ಧಿ ಅಹಂಕಾರಗಳು ದೇಹವು ಪತ್ನೀ ಪುತ್ರ ದ್ರವ್ಯಾದಿಗಳು ಮೊದಲಾದ ಸಮಸ್ತವೂ ಪರಮಾತ್ಮನಾದ ನನ್ನಿಂದ ಅಧಿಷ್ಟಿತವಾದಕಾರಣ ಪ್ರೀತಿವಿಷಯವಾಗುವದರಿಂದ ಆತ್ಮನಾದ ನನ್ನನ್ನು ಹೊರ್ತು ಮತ್ತಾವನೂ ಪ್ರೀತಿವಿಷಯನಾಗನು! ಎಲೇ ಬ್ರಾಹ್ಮಣಪತ್ನಿಯರುಗಳಿರಾ, ನೀವು ಕೃತಾರ್ಥರಾದಿರೀ; ಇನ್ನು ನಿಮ್ಮ ಯಜ್ಞಶಾಲೆಯನ್ನು ಕುರಿತು ಪೋಗೀ; ನಿಮ್ಮ ಪತಿಗಳಾದ ಬ್ರಾಹ್ಮಣರು ತಮ್ಮ ಯಜ್ಞಗಳನ್ನು ಪೂರ್ತಿಗೈಯುತಿದ್ದಾರೆ; ಯಜ್ಞಕರ್ಮ ಸಾಂಗವಾಗುವಬಗ್ಯೆ ಯಜ್ಞಶಾಲೆಯನ್ನು ಕುರಿತು ಹೋಗೀ" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಆ ಬ್ರಾಹ್ಮಣಸ್ತ್ರೀಯರು ಆತನನ್ನು ಕುರಿತು "ಎಲೈ ವಿಭುವಾದ ಶ್ರೀಕೃಷ್ಣದೇವನೆ, ನೀನು ಈ ರೀತಿ ನಮ್ಮನ್ನು ಯಜ್ಞಶಾಲೆಗೆ ಹೋಗಬೇಕೆಂದು ಕಠೋರವಾಕ್ಯವನ್ನು ನುಡಿಯಬಹುದೇ! ನಿನ್ನ ಭಕ್ತರು ದುರ್ಗತಿಯನ್ನೈದುವದಿಲ್ಲವೆಂದೂ ನಿನ್ನನ್ನು ಸೇರಿದವರು ಪುನಹ ಸಂಸಾರದುಃಖವನ್ನನುಭವಿಸುವದಿಲ್ಲವೆಂದೂ ನುಡಿದ ನಿನ್ನ ಪ್ರತಿಜ್ಞಾವಾಕ್ಯಗಳನ್ನು ಅಸತ್ಯವಾಗಿ ಮಾಡಬೇಡ; ನಾವು ಪತಿಪುತ್ರಾದಿ ಸಮಸ್ತಬಂಧುಗಳನ್ನತಿಕ್ರಮಿಸಿ ಬಂದಿದ್ದೇವೆ; ನಿನ್ನ ಪಾದಪದ್ಮಗಳಿಂದ ಅನಾದರದಿಂದ ಕೊಡಲ್ಪಟ್ಟ ತುಳಸೀಮಾಲೆಯನ್ನು ನಾವು ಬಹುಮಾನದಿಂದ ಶಿರಸ್ಸುಗಳಲ್ಲಿ ಧರಿಸಿ ನಿನ್ನ ಸೇವಕರಾಗಲೋಸುಗ ನಿನ್ನ ಪಾದಮೂಲಕ್ಕೆ ಬಂದೆವು! ಎಲೈ ಕಾಮಕ್ರೋಧಾದಿ ಅರಿಷಡ್ವರ್ಗವನ್ನು ಪರಿಹರಿಸುವ ಶ್ರೀಕೃಷ್ಣದೇವನೆ, ನಾವು ಇಲ್ಲಿಗೆ ಬಂದು ತಿರಿಗಿ ಹೋದರೆ ನಮ್ಮ ಪತಿಗಳು ಮಾತಾಪಿತೃಗಳು ಪುತ್ರಭ್ರಾತೃಗಳು ಬಂಧುಗಳು ಸಖಿಯರು ಮೊದಲಾದವರು ನಮ್ಮನ್ನು ಹ್ಯಾಗೆ ಪರಿಗ್ರಹಿಸುವರು! ಆದ್ದರಿಂದ ನಿನ್ನ ಚರಣಾರವಿಂದಗಳ ಮುಂಭಾಗದಲ್ಲೇ ನಮಸ್ಕಾರಂಗೈಯುತ ಬಿದ್ದಿರುವ ದೇಹಗಳುಳ್ಳ ನಮಗೆ ನಿನ್ನ ಚರಣಾರವಿಂದವೇಹೊರ್ತು ಇತರವಾದ ಸ್ವರ್ಗಾದಿ ಗತಿಯು ಅವಶ್ಯಕವಿಲ್ಲ; ನಿನ್ನ ದಾಸ್ಯವನ್ನೇ ನಮಗೆ ಆಜ್ಞಾಪಿಸು" ಎಂದು ವಿಜ್ಞಾಪಿಸಿದರು.

ಶ್ರೀಕೃಷ್ಣನು "ಎಲೇ ಬ್ರಾಹ್ಮಣಪತ್ನಿಯರುಗಳಿರಾ, ಅಂತಃಕರಣಸಾಕ್ಷಿಯಾದ ನನ್ನಿಂದ ಪ್ರೇರಿತರಾದ ನಿಮ್ಮ ಪತಿಗಳು ಪಿತೃ ಭ್ರಾತೃ ಮಾತೃ ಪುತ್ರಾದಿ ಸರ್ವ ಬಂಧುಗಳೂ ನಿಮ್ಮಲ್ಲಿ ದೋಷದೃಷ್ಟಿಯನ್ನು ಮಾಡಿ

ಅಸೂಯೆಪಡರು ; ದೇವತೆಗಳೂ ನಿಮ್ಮ ಶೀಲವನ್ನು ನೋಡಿ ಸಮ್ಮತಿಸಡುವರು ! ಎಲೇ ಬ್ರಾಹ್ಮಣಸ್ತ್ರೀಯರುಗಳಿರಾ, ಲೋಕದಲ್ಲಿ ಮನುಷ್ಯರಿಗೆ ನನ್ನ ಸಾನ್ನಿಧ್ಯವೂ ನನ್ನ ಶರೀರಸಂಬಂಧವೂ ನನಗೆ ಪ್ರೀತಿವೃದ್ಧಿ ಮಾಡುವದಿಲ್ಲ ; ಮನಸ್ಸಿನಲ್ಲಿ ಲಗ್ನವನ್ನು ಮಾಡುವದೇ ನನ್ನ ಪ್ರೀತಿಗೆ ಕಾರಣವು ; ಆದಕಾರಣ ನೀವು ನನ್ನಲ್ಲಿ ಮನಸ್ಸನ್ನು ದೃಢವಾಗಿ ನಿಲ್ಲಿಸಿ ಉತ್ತಮಗತಿಯನ್ನು ಪಡೆಯುವಿರಿ '' ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಆ ಬ್ರಾಹ್ಮಣಪತ್ನಿಯರು ಯಜ್ಞಶಾಲೆಯನ್ನು ಕುರಿತೈದಿದರು ; ಆ ಬ್ರಾಹ್ಮಣರು ತಮ್ಮ ಸ್ತ್ರೀಯರಲ್ಲಿ ದೋಷದೃಷ್ಟಿಯನ್ನು ಬಿಟ್ಟು ಅಸೂಯಾರಹಿತರಾಗಿ ಅವರೊಡನೆ ಯಜ್ಞಪೂರ್ತಿಯನ್ನು ಮಾಡಿದರು ; ಒಬ್ಬ ವಿಪ್ರಪತ್ನಿಯು ತನ್ನ ಪತಿಯಿಂದ ಗರ್ಜಿಸಲ್ಪಟ್ಟು ಕರ್ಮಾನುಬಂಧಜನ್ಯವಾದ ಆ ಪತಿಗೆ ಉಪಭೋಗ್ಯವಾದ ತನ್ನ ದೇಹವನ್ನು ಆ ಸ್ಥಳದಲ್ಲೇ ತ್ಯಾಗಂಗೈದು ಚೈತನ್ಯಮಾತ್ರದಿಂದ ಭಗವಂತನಲ್ಲಿ ಐಕ್ಯವನ್ನು ಪಡೆದು ಮುಕ್ತಳಾದಳು ! ಅನಂತರದಲ್ಲಿ ಪರಿಪೂರ್ಣನಾದ ಶ್ರೀಕೃಷ್ಣದೇವನು ಭಕ್ಷ್ಯ ಭೋಜ್ಯ ಚೋಷ್ಯ ಲೇಹ್ಯಗಳೆಂಬ ನಾಲ್ಕುಪ್ರಕಾರವಾದ ಆ ದಿವ್ಯಾನ್ನವನ್ನು ಗೋಪಾಲಕರನ್ನೂ ಬಲಭದ್ರನನ್ನೂ ಭೋಜನಂಗೈಸಿ ತಾನೂ ಭೋಜನಂಗೈದು ಮಾಯೆಯಿಂದ ಲೀಲಾಮಾನುಷವಿಗ್ರಹನಾಗಿ ಮನುಷ್ಯನಟನವನ್ನನುಕರಿಸುತ ದಿವ್ಯಸೌಂದರ್ಯದಿಂದಲೂ ಮೃದುವಚನಗಳಿಂದಲೂ ಚರಿತ್ರೆಗಳಿಂದಲೂ ಗೋವುಗಳನ್ನೂ ಗೋಪಾಲಕರನ್ನೂ ಗೋಪಸ್ತ್ರೀಯರನ್ನೂ ರಮಿಸುವಂತೆ ಮಾಡುತ ಅವರೊಡನೆ ತಾನೂ ರಮಿಸುತ್ತಿದ್ದನು !

ಅನಂತರದಲ್ಲಿ ಆ ಬ್ರಾಹ್ಮಣರು ಮನುಷ್ಯರಂತೆ ನಟನಂಗೈಯುತಿದ್ದ ಜಗದೀಶ್ವರರಾದ ರಾಮಕೃಷ್ಣರ ಅನ್ನಯಾಚನೆಯನ್ನು ಆದರಣಂಗೈಯದೆ ಉಪೇಕ್ಷೆಮಾಡಿದ್ದಕ್ಕಾಗಿ ಪಶ್ಚಾತಾಪಪಟ್ಟು ತಮ್ಮ ಅಪರಾಧವನ್ನು ಸ್ಮರಿಸಿ ಸಂತಾಪಪಡುತ ಭಗವಂತನಾದ ಶ್ರೀಕೃಷ್ಣದೇವನಲ್ಲಿ ತಮ್ಮ ಪತ್ನಿಯರಿಗಿದ್ದ ಲೋಕಾತೀತವಾದ ಭಕ್ತಿಯನ್ನು ನೋಡಿ ಅಂಥಾ ಭಕ್ತಿರಹಿತರಾದ ತಮ್ಮನ್ನು ನಿಂದಿಸುತ ಅತ್ಯಂತ ಪಶ್ಚಾತಾಪವನ್ನೈದಿ ಒಬ್ಬರನ್ನು ಕುರಿತೊಬ್ಬರು '' ನಾವು ಯಾವಕಾರಣ ಶ್ರೀಕೃಷ್ಣದೇವನಲ್ಲಿ ಭಕ್ತಿರಹಿತರಾಗಿ ವಿಮುಖರಾಗಿದ್ದೆವು ! ಶೌಕ್ಲ ಸಾವಿತ್ರ ದೈಕ್ಷವೆಂಬ ಮೂರುಪ್ರಕಾರವಾದ ಜನ್ಮವು ಬ್ರಹ್ಮಚರ್ಯವ್ರತವು ಶಾಸ್ತ್ರಜ್ಞತೆಯು ಕುಲವು ಕರ್ಮಾಚರಣ ಸಾಮರ್ಥ್ಯವು ಮೊದಲಾದ ಸಮಸ್ತವೂ ನಮಗೆ ವ್ಯರ್ಥವಾಯಿತು ! ಭಗವಂತನ ಮಾಯೆಯು ಮಹಾ ಯೋಗಿಗಳಿಗೂ ಮೋಹಕರವೆಂಬದು ನಿಶ್ಚಯವು ; ನಾವು ಬ್ರಾಹ್ಮಣೋತ್ತಮರಾಗಿ ಸರ್ವವರ್ಣಗಳಿಗೂ ಗುರುಗಳಾದಾಗ್ಯೂ ಸ್ವಾರ್ಥಸಾಧನದಲ್ಲಿ ಮೋಹಪಡುವವರಾಗಿದ್ದೇವೆ ; ಗೃಹಕ್ಷೇತ್ರಾದಿಗಳೆಂಬ ನಾಮಧೇಯಗಳುಳ್ಳ ಮೃತ್ಯುಪಾಶಗಳನ್ನು ಛೇದಿಸುವಂಥಾ ದೃಢವಾದ ಭಕ್ತಿಭಾವವು ನಮ್ಮ ಸ್ತ್ರೀಯರಿಗುಂಟಾಗಿ ಅವರು ಕೃತಾರ್ಥರಾದರು ; ಈ ಆಶ್ಚರ್ಯವನ್ನು ನೋಡಿರೀ ! ಸ್ತ್ರೀಯರಿಗೆ ಉಪನಯನವು ಗುರುಕುಲವಾಸವು ತಪಸ್ಸು ಆತ್ಮವಿಚಾರವು ಬಾಹ್ಯಾಭ್ಯಂತರ ಶುಚಿತ್ವವು ಸಂಧ್ಯೋಪಾಸನಾದಿ ಶುಭಕರ್ಮಗಳು ಮೊದಲಾದವಿಲ್ಲ ; ಆದಾಗ್ಯೂ ಸರ್ವೋತ್ತಮವಾದ ಕೀರ್ತಿಯುಳ್ಳ ಯೋಗೀಶ್ವರನಾದ ಶ್ರೀಕೃಷ್ಣದೇವನಲ್ಲಿ ದೃಢವಾದ ಭಕ್ತಿಯು ಸ್ವಭಾವಸಿದ್ಧವಾಗಿದ್ದದ್ದರಿಂದ ನಮ್ಮ ಸ್ತ್ರೀಯರು ಕೃತಾರ್ಥರಾದರು ; ಉಪನಯನಾದಿ ಸಮಸ್ತ ಶುಭಕರ್ಮಗಳುಳ್ಳವರಾದಾಗ್ಯೂ ನಾವು ಅಂಥಾ ಭಕ್ತಿರಹಿತರಾದಕಾರಣ ಕೃತಾರ್ಥರಾಗಲಿಲ್ಲ ; ಸತ್ಪುರುಷರಿಗೆ ಮುಕ್ತಿಪ್ರದನಾದ ಶ್ರೀಮುಕುಂದನು ಮೂಢರಾಗಿ ಗೃಹಾದಿಗಳಲ್ಲಿ ಆಸಕ್ತರಾಗಿ ಭ್ರಾಂತರಾಗಿರುವ ನಮಗೆ ಗೋಪಾಲಕರ ವಾಕ್ಯಗಳಿಂದ ತನ್ನ ಸ್ಮರಣೆಯುಂಟಾಗುವಂತೆ ಮಾಡಿದನು ; ಹಾಗಾದಾಗ್ಯೂ ನಾವು ತಿಳಿಯದೆ ಹೋದೆವು ; ಹಾಗಲ್ಲದಿದ್ದರೆ ಪೂರ್ಣಕಾಮನಾಗಿ ಕೈವಲ್ಯಾದಿ ಸಮಸ್ತ ಪುರುಷಾರ್ಥಗಳಿಗೂ ನಿಯಾಮಕನಾದ ಶ್ರೀಕೃಷ್ಣದೇವನಿಗೆ ನಮ್ಮಿಂದಾಗತಕ್ಕದ್ದೇನು ! ನಮಗೆ ತನ್ನ ಸ್ಮರಣೆಯನ್ನುಟ್ಟಿಸುವದಕ್ಕಾಗಿ ಗೋಪಬಾಲಕರ ಮುಖಾಂತ್ರ ಅನ್ನಯಾಚನೆಯನ್ನು ಮಾಡಿದನು ; ಅದು ಕೇವಲ ನಟನಮಾತ್ರವೇ ಸರಿ ; ತನ್ನನ್ನು ಭಜನೆಗೈವ ಬ್ರಹ್ಮಾದಿ ದೇವತೆಗಳನ್ನೂ ತನ್ನ ಚಾಂಚಲ್ಯಾದಿ ದೋಷಗಳನ್ನೂ ಬಿಟ್ಟು ಮಹಾಲಕ್ಷ್ಮೀದೇವಿಯು ಬಾರಿಬಾರಿಗೂ ಯಾವ ಭಗವಂತನ ಪಾದಾಂಬುಜ ಸ್ಪರ್ಶಾಭಿಲಾಷೆಯಿಂದ ಸೇವಿಸುತ್ತಿರುವಳೋ ಅಂಥಾ ಕೃಷ್ಣ

ದೇವನ ಯಾಚನೆಯು ಸಕಲಜನ ಮೋಹಕವು; ದೇಶವು ಕಾಲವು ಪ್ರತ್ಯೇಕವಾದ ಚರುಪುರೋಡಾಶಾದಿ ದ್ರವ್ಯವು ವೇದವು ಮಂತ್ರವು ಪ್ರಯೋಗವು ಋತ್ವಿಕ್ಕುಗಳು ತ್ರಿಯಗ್ನಿಗಳು ದೇವತೆಗಳು ಯಜಮಾನನು ಯಜ್ಞವು ಅಪೂರ್ವರೂಪವಾದ ಧರ್ಮವು ಇತ್ಯಾದಿಗಳು ಯಾರ ಸ್ವರೂಪಗಳೋ ಅಂಥಾ ಭಗವಂತನಾಗಿ ಯೋಗೀಶ್ವರರಿಗೂ ಈಶ್ವರನಾದ ಸಾಕ್ಷಾತ್ ವಿಷ್ಣುವು ಶ್ರೀಕೃಷ್ಣರೂಪನಾಗಿ ಯಾದವರಲ್ಲಿ ಅವತರಿಸಿದ್ದನ್ನು ಸರ್ವತ್ರ ಶ್ರವಣಂಗೈದಿರುವವರಾದರೂ ಮೂಢರಾದ ನಾವು ತಿಳಿಯದೇ ಹೋದೆವು! ಆದಾಗ್ಯೂ ತಮ್ಮ ಭಕ್ತಿಯಿಂದ ಕೃತಾರ್ಥರಾದ ಸ್ತ್ರೀಯರು ನಮಗೆ ಪತ್ನಿಗಳಾದ್ದರಿಂದ ನಾವೂ ಕೃತಾರ್ಥರೇ ಸರಿ! ಯಾವನ ಮಾಯೆಯಿಂದ ಮೋಹಿತರಾದ ನಾವು ಕರ್ಮಮಾರ್ಗದಲ್ಲಿ ಶ್ರಮಪಟ್ಟು ತಿರುಗುತ್ತೇವೋ ಅಂಥಾ ಭಗವಂತನಾಗಿ ಕುಂಠಿತವಲ್ಲದ ಮಹಾ ಪ್ರಜ್ಞೆಯುಳ್ಳ ಶ್ರೀಕೃಷ್ಣರೂಪನಾಗಿರುವವನಿಗೆ ನಮಸ್ಕಾರಂಗೈವೆವು! ಆದಕಾರಣ ಆದಿಪುರುಷನಾದ ಆ ದೇವನು ತನ್ನ ಮಾಯೆಯಿಂದ ಮೋಹಿತರಾಗಿ ತನ್ನ ಪ್ರಭಾವವನ್ನರಿಯದಿರುವ ಮೂಢರಾದ ನಮ್ಮ ಅಪರಾಧವನ್ನು ಕ್ಷಮಿಸಲಿ!" ಎಂದು ನುಡಿಯುತ ರಾಮಕೃಷ್ಣರ ದರ್ಶನಂಗೈಯಬೇಕೆಂಬ ಇಚ್ಛೆಯುಳ್ಳವರಾದಾಗ್ಯೂ ಕಂಸನ ಭಯದಿಂದ ಕೃಷ್ಣದರ್ಶನಾರ್ಥವಾಗಿ ಹೋಗದಿದ್ದರು!

## ೨೪ನೇ ಅಧ್ಯಾಯ.

### ಶ್ರೀಕೃಷ್ಣನು ಗೋವರ್ಧನಗಿರಿಗೆ ಪೂಜೆಮಾಡಿಸಿದ್ದು.

ಎಲೈ ಪರೀಕ್ಷಿದ್ರಾಯನೆ, ಈ ಪ್ರಕಾರದಲ್ಲಿ ಯಜ್ಞಂಗೈಯುತಿದ್ದ ಆ ಬ್ರಾಹ್ಮಣರು ಕಂಸನ ಭೀತಿಯಿಂದ ತಮ್ಮ ಆಶ್ರಮದಲ್ಲೇ ಶ್ರೀಕೃಷ್ಣನನ್ನು ಭಜಿಸಿ ಕೊಂಡಾಡಿದರು; ಆ ಬಳಿಕ ಭಗವಂತನಾದ ಶ್ರೀಕೃಷ್ಣದೇವನು ಬಲದೇವನೊಡಗೂಡಿ ನಂದಗೋಕುಲದಲ್ಲಿ ವಾಸಂಗೈಯುತ ಇಂದ್ರನನ್ನು ಕುರಿತು ಯಾಗಂಗೈಯಲೋಸುಗ ಪ್ರಯತ್ನಂಗೈವ ಗೋಪಾಲಕರನ್ನು ಕಂಡು ಸರ್ವಾತ್ಮಕನಾಗಿ ಸರ್ವಸಾಕ್ಷಿಯಾದ್ದರಿಂದ ಇಂದ್ರನ ಪ್ರೀತ್ಯರ್ಥವಾಗಿ ಯಾಗಂಗೈವದನ್ನು ಬಲ್ಲವನಾದಾಗ್ಯೂ ಅರಿಯದವನಂತೆ ನಂದಗೋಪನು ಮೊದಲಾದ ಗೋಪಾಲಕರನ್ನು ಕುರಿತು ವಿನಯದಿಂದ ಶಿರಸ್ಸನ್ನು ಬೊಗ್ಗಿಸಿಕೊಂಡು "ಎಲೈ ತಂದೆಯಾದ ನಂದಗೋಪನೆ, ನಿಮ್ಮನ್ನು ಹೊಂದಿರುವ ಈ ಕಾರ್ಯವ್ಯಾವದು? ಇದು ಯಾಗಸನ್ನಾಹವಾದರೆ ಅದಕ್ಕೆ ಫಲವೇನು? ಇದಕ್ಕೆ ದೇವತೆಯಾವದು? ಯಾವ ಅಧಿಕಾರಿಯಿಂದ—ಯಾವ ಸಾಧನದಿಂದ ಈ ಯಾಗವು ಸಾಧಿಸಲ್ಪಡುವದು? ಸಮಸ್ತವನ್ನೂ ನನಗೆ ಹೇಳು: ಅವನ್ನು ಕೇಳುವದಕ್ಕೆ ನನಗೆ ಮಹತ್ತಾದ ಇಚ್ಛೆಯಿದೆ; ಲೋಕದಲ್ಲಿ ಸರ್ವತ್ರ ಆತ್ಮದೃಷ್ಟಿಯುಳ್ಳ ಮಹಾತ್ಮರಿಗೆ ಒಬ್ಬರು ಸ್ವಕೀಯರು ಮತ್ತೊಬ್ಬರು ಪರಕೀಯರೆಂತಲೂ ಒಬ್ಬರು ಮಿತ್ರರು ಮತ್ತೊಬ್ಬರು ಉದಾಸೀನರೆಂತಲೂ ಒಬ್ಬರು ಮಿತ್ರರು ಮತ್ತೊಬ್ಬರು ಶತ್ರುಗಳೆಂತಲೂ ಭೇದಬುದ್ಧಿಯಿಲ್ಲ; ಅಂಥಾವರಿಗೆ ಗೋಪ್ಯವಾದ ವ್ಯಾಪಾರವಿಲ್ಲವಾದ್ದರಿಂದ ಶ್ರವಣಂಗೈಯಲಿಚ್ಛೆಯುಳ್ಳ ನನಗೆ ಈ ಸಮಸ್ತವನ್ನೂ ನಿರೂಪಿಸು; ಭೇದಬುದ್ಧಿಯಿಲ್ಲದಿದ್ದಾಗ್ಯೂ ಉದಾಸೀನನಾದ ಪುರುಷನು ಶತ್ರುವಿನಂತೆ ತ್ಯಜಿಸಲು ಯೋಗ್ಯನು; ಸಾತ್ವಿಕಹೃದಯವುಳ್ಳವನು ತನಗೆ ಸಮಾನನಾದ್ದರಿಂದ ಮಿತ್ರರೊಳಗೆ ಶೇರಿದವನೆಂದು ಹೇಳಲ್ಪಡುವನು; ಆತನು ತ್ಯಾಗಂಗೈಯಲು ಯೋಗ್ಯನಲ್ಲ; ಆದ್ದರಿಂದ ನನಗೆ ತಿಳುಹಿಸು! ಕರ್ಮಸ್ವರೂಪವನ್ನು ತಿಳಿದು ಅನುಷ್ಠಾನಂಗೈವ ಮೂಢನಿಗೆ ಕರ್ಮಫಲವು ಸಿದ್ಧಿಸದಾದಕಾರಣ ಲೋಕದಲ್ಲಿ ಜನರು ಕರ್ಮಸ್ವರೂಪವನ್ನು ತಿಳಿದೂ ತಿಳಿಯದೆಯೂ ಅನುಷ್ಠಾನಂಗೈಯುತಿಹಾರೆ; ಆದಕಾರಣ ಈ ಯಾಗರೂಪವಾದ ಕರ್ಮಯೋಗವು ನಿಮಗೆ ಶಾಸ್ತ್ರದಿಂದ ಪ್ರಾಪ್ತವಾಯಿತೋ—ಅಲ್ಲದೆ ಲೋಕಾಚಾರದಿಂದ ಪ್ರಾಪ್ತವಾಯಿತೋ ಎಂದು ಪ್ರಶ್ನೆಗೈವ ನನಗೆ ನಿಮಿತ್ತಸಹಿತವಾಗಿ ನಿರೂಪಿಸು" ಎಂದು ಕೇಳಿದನು.

ಆ ಪ್ರಶ್ನವಾಕ್ಯವನ್ನು ಕೇಳಿ ನಂದಗೋಪನು ಆತನನ್ನು ಕುರಿತು "ಎಲೈ ಕೃಷ್ಣದೇವನೆ, ಜ್ಞಾನಾದಿಗುಣಸಂಪನ್ನನಾದ ಇಂದ್ರನು ವೃಷ್ಟಿಪ್ರದನಾದ್ದರಿಂದ ಪರ್ಜನ್ಯನೆಂದು ಹೇಳಲ್ಪಡುವನು; ಆತನಿಗೆ ಮೇಘಗಳು ಪ್ರಿಯ

ತಮಗಳಾದ ಮೂರ್ತಿಗಳಾಗಿರುವವು ; ಮೇಘಗಳು ಸಮಸ್ತ ಪ್ರಾಣಿಗಳಿಗೂ ಜೀವನರೂಪವಾದ ಜಲವನ್ನು ವರ್ಷಿಸುವವು ! ಎಲೈ ಬಾಲಕನಾದ ಶ್ರೀಕೃಷ್ಣನೆ, ನಾವೂ ಮಿಕ್ಕಜನರೂ ಜಲವನ್ನು ವರ್ಷಿಸುವ ಮೇಘಗಳಿಗೆ ಪ್ರಭುವಾದ ಇಂದ್ರನನ್ನು ಕುರಿತು ವೃಷ್ಟಿಜಲದಿಂದುಂಟಾದ ದ್ರವ್ಯಗಳಿಂದ ಸಾಧಿಸಲ್ಪಡುವ ಯಾಗಗಳನ್ನಾಚರಿಸುವೆವು ; ಪ್ರಾಣಿಗಳಿಗೆ ಕೃಷ್ಯಾದಿಗಳಿಂದ ಜೀವನವುಂಟಾಗುವದು ; ಪ್ರಯತ್ನಮಾತ್ರವುಳ್ಳ ಪುರುಷರಿಗೆ ವೃಷ್ಟಿಪ್ರದನಾದ ಇಂದ್ರನೇ ಫಲಸಾಧಕನು ; ಆದ್ದರಿಂದ ಜನರು ಧರ್ಮಾರ್ಥಕಾಮಗಳೆಂಬ ತ್ರಿವಿಧಪುರುಷಾರ್ಥ ಸಿದ್ಧಿಗೋಸ್ಕರ ಇಂದ್ರನನ್ನು ಕುರಿತು ಯಾಗಂಗೈದು ಆ ಯಾಗದಲ್ಲಿ ಮಿಕ್ಕ ದ್ರವ್ಯದಿಂದ ತಮ್ಮ ಜೀವನವನ್ನು ಕಲ್ಪಿಸಿಕೊಳ್ಳುವರು ; ಪಾರಂಪರ್ಯವಾಗಿ ಬಂದಿರುವ ಈ ಧರ್ಮವನ್ನು ಕಾಮದಿಂದಲಾದರು ಲೋಭದಿಂದಲಾದರು ಭಯದಿಂದಲಾದರು ದ್ವೇಷದಿಂದಲಾದರು ತ್ಯಾಗಂಗೈವ ಪುರುಷನು ಶ್ರೇಯಸ್ಸನ್ನು ಪಡೆಯನು " ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಶ್ರೀಕೃಷ್ಣದೇವನು ಇಂದ್ರನ ಗರ್ವಪರಿಹಾರಾರ್ಥವಾಗಿ ಅವನಿಗೆ ಕೋಪವನ್ನುಂಟುಮಾಡಬೇಕೆಂದೆಣಿಸಿ ತನ್ನ ತಂದೆಯಾದ ನಂದಗೋಪನನ್ನು ಕುರಿತು " ಎಲೈ ತಂದೆಯಾದ ನಂದಗೋಪನೆ, ಲೋಕದಲ್ಲಿ ಪ್ರಾಣಿಗಳು ಕರ್ಮದಿಂದಲೇ ಜನಿಸುವರು ; ಕರ್ಮದಿಂದಲೇ ಲಯವನ್ನೈದುವರು ; ಸುಖದುಃಖಗಳನ್ನೂ ಭಯಕ್ಷೇಮಗಳನ್ನೂ ಸಹಾ ಕರ್ಮದಿಂದಲೇ ಪಡೆಯುವರು ; ಆದರೆ ಜಡವಾದ ಕೇವಲ ಕರ್ಮ ಫಲಸಿದ್ಧಿ ಹ್ಯಾಗೆ ಉಂಟಾಗುವದು ! ಈಶ್ವರನು ಕರ್ಮಫಲಪ್ರದನಾದಾಗ್ಯೂ ಯಾರು ಕರ್ಮಗಳನ್ನಾಚರಿಸುತ್ತಾರೊ ಅವರಿಗೆ ಕರ್ಮಫಲಗಳನ್ನು ಕೊಡುವನು ; ಕರ್ಮಗಳನ್ನಾಚರಿಸದ ಪುರುಷರಿಗೆ ಫಲಪ್ರದನಾಗುವದಿಲ್ಲ ; ಆದಕಾರಣ ತಮ್ಮ ಕರ್ಮಾನುವರ್ತಿಗಳಾದ ಪ್ರಾಣಿಗಳಿಗೆ ಸ್ವಕರ್ಮವಶದಿಂದ ಪ್ರಾಪ್ತವಾದ ಶುಭಾಶುಭಫಲಗಳನ್ನು ತಪ್ಪಿಸಲು ಸಮರ್ಥನಲ್ಲದ ಇಂದ್ರನಿಂದಾಗತಕ್ಕದ್ದೇನು ! ಲೋಕದಲ್ಲಿ ಸರ್ವಪ್ರಾಣಿಗಳೂ ಪೂರ್ವಕರ್ಮಾಧೀನರಾಗಿರುವರು ; ಆದ್ದರಿಂದ ಕರ್ಮವಾಸನೆಯೊಡನನುವರ್ತಿಸಿ ತದನುಸಾರವಾಗಿ ಕರ್ಮವನ್ನೇ ಆಚರಿಸುವ ದೇವಾಸುರ ಮನುಷ್ಯಸಮೇತವಾದ ಸಮಸ್ತ ಜಗತ್ತೂ ಪೂರ್ವಕರ್ಮಾನುಸಾರಿಯಾಗಿಯೇ ಇರುವದು ; ಪ್ರಾಣಿಗಳು ಕರ್ಮದಿಂದಲೇ ಉತ್ಕೃಷ್ಟ ನಿಕೃಷ್ಟಗಳಾದ ಅನೇಕವಿಧ ದೇಹಗಳನ್ನೈದಿಯೂ ಬಿಡುತಲೂ ಇರುವರು ; ಆದ್ದರಿಂದ ಪ್ರಾಣಿಗಳಿಗೆ ಶತ್ರುಮಿತ್ರರೂ ಉದಾಸೀನನೂ ಗುರುವೂ ಈಶ್ವರನೂ ಕರ್ಮವೇ ಸರಿ ; ಆದಕಾರಣ ಸ್ವಭಾವಸಿದ್ಧವಾದ ತನ್ನ ಕರ್ಮವಾಸನೆಯನ್ನಾಶ್ರಯಿಸಿರುವ ಪುರುಷನು ಸ್ವಭಾವಸಿದ್ಧವಾದ ತನ್ನ ಕರ್ಮವನ್ನೇ ಬಹುಮಾನಂಗೈಯತಕ್ಕದ್ದು ; ಪುರುಷನು ಅನಾಯಾಸವಾಗಿ ಯಾವದರಿಂದ ಜೀವಿಸುವನೊ ಆ ವಸ್ತುವೇ ಅವನಿಗೆ ದೇವತೆಯು ; ಅಂಥಾ ಜೀವನಕ್ಕೆ ಸಾಧನವಾದ ದೇವತೆಯನ್ನು ಬಿಟ್ಟು ಅನ್ಯದೇವತೆಯನ್ನು ಭಜಿಸುವ ಪುರುಷನು ಜಾರಸ್ತ್ರೀಯು ಜಾರಪುರುಷನಿಂದ ಕ್ಷೇಮವನ್ನು ಪಡೆಯದರೀತಿಯಲ್ಲಿ ಆ ಅನ್ಯದೇವತೆಯಿಂದ ಕ್ಷೇಮವನ್ನು ಪಡೆಯನು ; ಬ್ರಾಹ್ಮಣನು ವೇದಾಧ್ಯಯನದಿಂದ ಜೀವಿಸಬೇಕು ; ಕ್ಷತ್ರಿಯನು ಭೂಪಾಲನದಿಂದ ಜೀವಿಸಬೇಕು ; ವೈಶ್ಯನು ಕ್ರಯವಿಕ್ರಯವ್ಯಾಜದಿಂದ ಜೀವಿಸಬೇಕು ; ಶೂದ್ರನು ಬ್ರಾಹ್ಮಣಾದಿ ವರ್ಣತ್ರಯದ ಶುಶ್ರೂಷೆಯಿಂದ ಜೀವಿಸಬೇಕು ! ಕೃಷಿ ಕ್ರಯವಿಕ್ರಯ ವ್ಯಾಪಾರವು ಗೋವುಗಳನ್ನು ರಕ್ಷಿಸುವದು ಧನವನ್ನು ಬಡ್ಡಿಗಿತ್ತು ಅದರ ವೃದ್ಧಿಯಿಂದ ಜೀವಿಸುವದು ಎಂಬ ನಾಲ್ಕು ಪ್ರಕಾರವಾದ ವೈಶ್ಯವೃತ್ತಿಗಳಲ್ಲಿ ನಾವು ನಿರಂತರದಲ್ಲೂ ಗೋವುಗಳಿಂದ ಜೀವಿಸುವವರು ; ಸತ್ವರಜಸ್ತಮೋಗುಣಗಳೆಂದು ಉತ್ಪತ್ತಿಸ್ಥಿತಿಲಯಗಳಿಗೆ ಕಾರಣಗಳಾದ ಮೂರು ಗುಣಗಳಿರುವವು ; ಅವುಗಳಲ್ಲಿ ರಜೋಗುಣದಿಂದ ನಾನಾಪ್ರಕಾರವಾದ ಜಗತ್ತೆಲ್ಲವು ಸ್ತ್ರೀಪುರುಷಸಂಯೋಗದಿಂದ ಉದ್ಭವಿಸುವವು ; ಅದೇರೀತಿಯಲ್ಲಿ ಮೇಘಗಳು ರಜೋಗುಣದಿಂದಲೆ ಪ್ರೇರಿಸಲ್ಪಟ್ಟಂಥಾವಾಗಿ ಸಮುದ್ರ ಪರ್ವತ ಶಿಲಾದಿಗಳ ಎಲ್ಲಾ ಕಡೆಯಲ್ಲೂ ಜಲವನ್ನು ವರ್ಷಿಸುವವು ; ಪ್ರಜೆಗಳು ಆ ಮೇಘಗಳಿಂದಲೇ ಜೀವಿಸುವರು ; ಹೀಗಿರುವಲ್ಲಿ ಇಂದ್ರನು ಏನುಮಾಡುತ್ತಾನೆ ? ಎಲೈ ತಂದೆಯಾದ ನಂದಗೋಪನೆ, ನಮಗೆ ಪಟ್ಟಣಗಳೂ ದೇಶಗಳೂ ಗ್ರಾಮಗಳೂ ಗೃಹಗಳೂ ಇಲ್ಲವಾದ್ದರಿಂದ ನಾವು ವನವೇ ಆವಾಸಸ್ಥಾನವಾಗುಳ್ಳವರು ; ನಿರಂತರದಲ್ಲೂ ಪರ್ವತದಲ್ಲೇ ವಾಸಂಗೈವವರು ; ಆದಕಾ

ರಣ ನಮ್ಮ ಯೋಗಕ್ಷೇಮಕ್ಕೆ ಪರ್ವತ ಮೊದಲಾದವು ಕಾರಣವೇ ಹೊರತು ಇಂದ್ರನು ಕಾರಣನಲ್ಲ; ಆದಕಾರಣ ಇಂದ್ರನನ್ನು ಕುರಿತು ಯಾಗಂಗೈಯಲೋಸುಗ ಯಾವ ಪದಾರ್ಥಸಾಮಗ್ರಿಗಳು ಕಲ್ಪಿಸಲ್ಪಟ್ಟಿರುವವೊ ಅವುಗಳಿಂದ ಬ್ರಾಹ್ಮಣರನ್ನೂ ಗೋವುಗಳನ್ನೂ ಗೋವರ್ಧನಪರ್ವತವನ್ನೂ ಉದ್ದೇಶಂಗೈದು ಯಾಗವು ಆರಂಭಿಸಲ್ಪಡಲಿ; ಪರಮಾನ್ನವು ಮೊದಲಾಗಿ ಸೂಪವೇ ಅಂತವಾಗುಳ್ಳ ನಾನಾಪ್ರಕಾರಗಳಾದ ಭೋಜ್ಯಪದಾರ್ಥಗಳು ಪಾಕಂಗೈಯಲ್ಪಡಲಿ; ಗೋಧಿವೇ ಮೊದಲಾದವುಗಳಿಂದ ಅನೇಕಪ್ರಕಾರವಾಗಿ ರಚಿಸಲ್ಪಡುವ ಅಪೂಪಗಳೂ ಚಕ್ಕುಲಿಗಳೂ ಪಾಕಂಗೈಯಲ್ಪಡಲಿ; ಕ್ಷೀರಾದಿ ಸಮಸ್ತವಸ್ತುಗಳೂ ಸಂಪಾದಿಸಲ್ಪಡಲಿ; ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರಿಂದ ಅಗ್ನಿಗಳಲ್ಲಿ ವಿಧ್ಯುಕ್ತವಾಗಿ ಹೋಮಂಗೈಯಲ್ಪಡಲಿ; ಆ ಬ್ರಾಹ್ಮಣರಿಗೆ ಬಹುಪ್ರಕಾರವಾದ ಅನ್ನವೂ ಗೋವುಗಳೂ ದಕ್ಷಿಣಾದ್ರವ್ಯಗಳೂ ನಿಮ್ಮಿಂದ ಕೊಡಲ್ಪಡಲಿ; ಶುನಕ ಚಂಡಾಲ ಪತಿತರಿಗೂ ಅವರವರ ಯೋಗ್ಯತಾನುಸಾರವಾಗಿ ಅನ್ನಾದಿಗಳನ್ನಿತ್ತು ಗೋವುಗಳಿಗೆ ನೂತನವಾದ ತೃಣಸಮೂಹವನ್ನಿತ್ತು ಗೋವರ್ಧನಪರ್ವತಕ್ಕೆ ಪೂಜೆಯು ಮಾಡಿಸು; ಸರ್ವರೂ ಭೋಜನಂಗೈದು ದಿವ್ಯವಸ್ತ್ರಗಳನ್ನು ಧರಿಸಿ ದಿವ್ಯಗಂಧಾನುಲೇಪನಂಗೈದು ಗೋವುಗಳನ್ನೂ ಬ್ರಾಹ್ಮಣರನ್ನೂ ಅಗ್ನಿಗಳನ್ನೂ ಗೋವರ್ಧನಪರ್ವತವನ್ನೂ ಪ್ರದಕ್ಷಿಣಂಗೈಯ್ದು ಪ್ರಾರ್ಥನಂಗೈಯಲಿ ! ಎಲೈ ತಂದೆಯಾದ ನಂದಗೋಪನೆ, ಇಂಥಾ ಯಾಗವು ಗೋವುಗಳಿಗೂ ಬ್ರಾಹ್ಮಣರಿಗೂ ಗೋವರ್ಧನಪರ್ವತಕ್ಕೂ ನನಗೂ ಸಹಾ ಅಭಿಮತವಾದಕಾರಣ ನಿಮಗೂ ಸಮ್ಮತವಾದರೆ ಈಗಲೇ ನಿಮ್ಮಿಂದ ಮಾಡಲ್ಪಡಲಿ" ಎಂದು ನುಡಿದನು.

ಎಲೈ ಪರೀಕ್ಷಿದ್ರಾಯನೆ, ಈ ಪ್ರಕಾರದಲ್ಲಿ ಕಾಲಾತ್ಮಕನಾಗಿ ಭಗವಂತನಾದ ಶ್ರೀಕೃಷ್ಣದೇವನಿಂದ ಇಂದ್ರನ ಗರ್ವಪರಿಹಾರಾರ್ಥವಾಗಿ ನುಡಿಯಲ್ಪಟ್ಟ ಅರ್ಥವನ್ನು ನಂದಗೋಪನು ಮೊದಲಾದ ಗೋಪಾಲಕರು ಕೇಳಿ ಬಹು ಚನ್ನಾಯಿತೆಂದು ಅಂಗೀಕರಿಸಿ ಮಧುಸೂದನನಾದ ಶ್ರೀಕೃಷ್ಣದೇವನಿಂದ ನುಡಿಯಲ್ಪಟ್ಟ ಪ್ರಕಾರದಲ್ಲಿ ಗೋವರ್ಧನ ಯಾಗವನ್ನು ಮಾಡಿದರು; ಪ್ರಥಮದಲ್ಲಿ ಶ್ರೋತ್ರಿಯರಾದ ಬ್ರಾಹ್ಮಣರನ್ನು ಕರಿಸಿ ಅವರಿಂದ ಪುಣ್ಯಾಹವಾಚನವನ್ನು ಮಾಡಿಸಿದರು; ಅನಂತರದಲ್ಲಿ ಆದರಪೂರ್ವಕವಾಗಿ ಯಾಗಾರ್ಥವಾಗಿ ಸಂಪಾದಿಸಲ್ಪಟ್ಟ ಪದಾರ್ಥಗಳನ್ನು ಬ್ರಾಹ್ಮಣರು ಮೊದಲಾದ ಅತಿಥಿಗಳಿಗುಪಯೋಗವನ್ನು ಮಾಡಿಸಿ ಗೋವರ್ಧನಪರ್ವತವನ್ನು ಪೂಜಿಸಿದರು; ಆಮೇಲೆ ಗೋವುಗಳಿಗೆ ತೃಣಗಳನ್ನು ಸಮರ್ಪಿಸಿ ಅವನ್ನು ಮುಂದುಮಾಡಿಕೊಂಡು ಅಲಂಕೃತವಾಗಿ ವೃಷಭಯುಕ್ತವಾದ ಶಕಟಗಳನ್ನೇರಿಕೊಂಡು ಗೋವರ್ಧನಪರ್ವತಕ್ಕೆ ಪ್ರದಕ್ಷಿಣವನ್ನು ಮಾಡಿದರು; ಗೋಪಸ್ತ್ರೀಯರು ಶ್ರೀಕೃಷ್ಣನ ಚರಿತ್ರಗಳನ್ನು ಗಾನಂಗೈಯುತ ಬ್ರಾಹ್ಮಣರ ಆಶೀರ್ವಾದಗಳನ್ನು ಶಿರಸ್ಸಾವಹಿಸಿ ಆ ಪರ್ವತಕ್ಕೆ ಪ್ರದಕ್ಷಿಣಮಾಡಿದರು; ಶ್ರೀಕೃಷ್ಣನು ಗೋಪಗೋಪೀಜನರಿಗೆ ವಿಶ್ವಾಸ ಉಂಟುಮಾಡುವದಕ್ಕಾಗಿ ಮಹತ್ತಾದ ರೂಪವನ್ನು ಧರಿಸಿ ತಾನೇ ಗೋವರ್ಧನಪರ್ವತದಂತೆ ಆ ಗೋಪಾಲಕರಿಂದ ಕೊಡಲ್ಪಟ್ಟ ಬಲಿಯನ್ನು ಭಕ್ಷಿಸಿದನು; ಮತ್ತು ಆ ಗೋಪಾಲಕರೊಡಗೂಡಿ ಅವರನ್ನು ಕುರಿತು "ಎಲೈ ಗೋಪಾಲಕರೆ ನೋಡಿರೀ, ಪರ್ವತಶ್ರೇಷ್ಠವು ಶರೀರಯುಕ್ತವಾಗಿ ನಮ್ಮಲ್ಲಿ ಅನುಗ್ರಹವನ್ನು ಮಾಡಿತು; ಕಾಮರೂಪವುಳ್ಳ ಈ ಪರ್ವತವು ಅಜ್ಞರಾಗಿ ವನವಾಸಿಗಳಾದ ನಮ್ಮಂಥಾ ಮೂಢರನ್ನನುಗ್ರಹಿಸಿತು; ಆದಕಾರಣ ಪರ್ವತಶ್ರೇಷ್ಠವಾದ ಈ ಗೋವರ್ಧನಕ್ಕೆ ನಮ್ಮ ಗೋವುಗಳ ಕ್ಷೇಮಾರ್ಥವಾಗಿ ನಮಸ್ಕರಿಸೋಣ" ಎಂದು ನುಡಿದು ಆ ಗೋಪಾಲಕರಿಂದ ಯುಕ್ತನಾಗಿ ನಮಸ್ಕರಿಸಿದನು.

ಎಲೈ ಅರಸೆ, ಈ ರೀತಿಯಲ್ಲಿ ಕೃಷ್ಣನಿಂದ ಪ್ರೇರಿತರಾದ ನಂದಾದಿಗಳು ಪರ್ವತಪೂಜೆಯನ್ನೂ ಗೋಪೂಜೆಯನ್ನೂ ಬ್ರಾಹ್ಮಣಪೂಜೆಯನ್ನು ಮಾಡಿ ಕೃಷ್ಣನ ಸಮೇತರಾಗಿ ನಂದವ್ರಜಕ್ಕೆ ತಿರಿಗಿ ಬಂದರು.

## ೨೫ನೇ ಅಧ್ಯಾಯ.

### ಶ್ರೀಕೃಷ್ಣನು ಗೋವರ್ಧನಗಿರಿಯನ್ನೆತ್ತಿದ್ದು.

ಎಲೈ ಅರಸೆ, ಅನಂತರದಲ್ಲಿ ದೇವೇಂದ್ರನು ತನ್ನನ್ನು ಪೂಜಿಸದೆ ಗೋವರ್ಧನಪರ್ವತವನ್ನು ಪೂಜಿಸಿದರೆಂಬ ಕೋಪವುಳ್ಳವನಾಗಿ ಶ್ರೀಕೃಷ್ಣನ ಅಧೀನರಾದ ನಂದಾದಿ ಗೋಪಾಲಕರಮೇಲೆ ದ್ವೇಷವನ್ನು ಮಾಡಿ ಪ್ರಳಯಕಾಲದಲ್ಲಿ ವರ್ಷಿಸಿ ಲೋಕಗಳನ್ನು ನಾಶಮಾಡುವ ಸಂವರ್ತಕನಾಮಕವಾದ ಮೇಘಸಮೂಹವನ್ನು ಕರೆಯಿಸಿ ತಾನೇ ಅಧೀಶ್ವರನೆಂಬ ಗರ್ವದಿಂದ ಅವನ್ನು ಕುರಿತು "ಅರಣ್ಯವಾಸಿಗಳಾದ ಗೋಪಾಲಕರ ಐಶ್ವರ್ಯಮದವನ್ನು ನೋಡಿರಿ; ಅವರು ಮನುಷ್ಯನಾದ ಕೃಷ್ಣನನ್ನಾಶ್ರಯಿಸಿ ದೇವತಾಪಮಾನವನ್ನು ಮಾಡಿದ್ದೇನಾಶ್ಚರ್ಯವು! ದೃಢವಿಲ್ಲದ ಕರ್ಮರೂಪಗಳಾಗಿ ನಾಮಮಾತ್ರದಿಂದ ನಾವೆಗಳೆನಿಸಿಕೊಳ್ಳುವ ಯಾಗಗಳನ್ನವಲಂಬಿಸಿ ಆತ್ಮವಿಚಾರರೂಪವಾದ ಆನ್ವೀಕ್ಷಿಕೀ ವಿದ್ಯೆಯನ್ನು ಬಿಟ್ಟು ಸಂಸಾರಸಮುದ್ರವನ್ನು ದಾಟಲಿಚ್ಛೈಸುವವರಂತೆ ಬಹು ಮಾತುಗಳನ್ನು ಕಲಿತು ಮೂರ್ಖನಾಗಿ ಸ್ತಬ್ಧನಾಗಿ ತಾನೇ ಪ್ರಾಜ್ಞನೆಂದು ತಿಳಿದುಕೊಂಡಿರುವ ಮನುಷ್ಯನಾದ ಕೃಷ್ಣನನ್ನಾಶ್ರಯಿಸಿಕೊಂಡು ಆ ಗೋಪರು ನನಗೆ ಅಪಮಾನವನ್ನು ಮಾಡಿದರು! ಎಲೇ ಮೇಘಗಳೇ, ಧನಮದದಿಂದ ಗರ್ವಿತರಾಗಿ ಕೃಷ್ಣನಿಂದುತ್ಸಾಹಪಡಿಸಲ್ಪಟ್ಟಿರುವ ಈ ಗೋಪಾಲಕರ ಐಶ್ವರ್ಯಮದಜನ್ಯವಾದ ಗರ್ವವನ್ನು ಪರಿಹರಿಸಿ ಗೋವುಗಳನ್ನೂ ಕ್ಷಯಿಸಿಬಿಡಿರಿ; ನಾನು ಐರಾವತವನ್ನೇರಿಕೊಂಡು ದೇವಗಣಪರಿವೃತನಾಗಿ ವ್ರಜವನ್ನು ಸಂಹರಿಸಲೋಸುಗ ನಿಮ್ಮ ಹಿಂದೆ ಬರುತ್ತೇನೆ" ಎಂದು ನುಡಿದನು.

ಆ ಮೇಘಗಳು ಬಂಧನದಿಂದ ಬಿಡಿಸಲ್ಪಟ್ಟವಾಗಿ ನಂದವ್ರಜಕ್ಕೆ ಬಂದು ವೃಷ್ಟಿಧಾರೆಗಳಿಂದ ವ್ರಜವನ್ನು ಪೀಡಿಸುತ ಮಿಂಚುಗಳಿಂದ ಹೊಳೆಯುತ ಸಿಡಿಲುಗಳಿಂದ ಗರ್ಜನೆಯನ್ನು ಮಾಡುತ ಪ್ರಚಂಡವಾಯುವಿನಿಂದ ತಳ್ಳಲ್ಪಟ್ಟವಾಗಿ ಸ್ಥೂಲಗಳಾದ ಆನೆಕಲ್ಲುಗಳನ್ನು ವರ್ಷಿಸಿದವು; ಆದರಿಂದ ಜಲಪ್ರವಾಹಪೂರ್ಣವಾದ ಭೂಮಿಯು ಹಳ್ಳ ತಿಟ್ಟುಗಳು ಸಮವಾಗಿ ಜಲಮಯವಾಯಿತು; ಆ ಮಹಾ ವರ್ಷಧಾರಾಪ್ರಹಾರಗಳಿಂದ ಪೀಡಿತಗಳಾದ ಗೋವುಗಳು ನಡುಗುತ ಶ್ರಮಪಟ್ಟವು; ಗೋಪಾಲಕರು ಗೋಪಿಯರು ಮೊದಲಾದವರು ಮಹಾವೃಷ್ಟಿಬಾಧೆಯಿಂದ ನಿರ್ವಹಿಸಲಾರದೆ ಶ್ರೀಕೃಷ್ಣನನ್ನು ಮರೆಹೊಕ್ಕರು; ಗೋವುಗಳು ಶಿರಸ್ಸುಗಳನ್ನು ಬೊಗ್ಗಿಸಿ ಶರೀರದಿಂದ ಮುಚ್ಚಿಕೊಂಡು ವರ್ಷಧಾರೆಗಳಿಂದ ಪೀಡಿತಗಳಾಗಿ ನಡುಗುತ ಆ ಭಗವಂತನ ಪಾದಮೂಲಕ್ಕೆ ಬಂದವು; ಆಗ ಗೋಪಗೋಪಿಯರು ಶ್ರೀಕೃಷ್ಣನನ್ನು ಕುರಿತು "ಎಲೈ ಮಹಾಭುಜವುಳ್ಳ ಶ್ರೀಕೃಷ್ಣನೆ, ನಿನ್ನನ್ನೇ ನಾಥನೆಂದು ನಂಬಿಕೊಂಡಿರುವ ಗೋಕುಲವನ್ನು ರಕ್ಷಿಸು! ಎಲೈ ಭಕ್ತವತ್ಸಲನಾಗಿ ಪ್ರಭುವಾದ ಶ್ರೀಕೃಷ್ಣನೆ, ಕೋಪಿಷ್ಠನಾದ ಇಂದ್ರನಿಂದ ಪೀಡಿತರಾಗಿರುವ ನಮ್ಮನ್ನು ರಕ್ಷಿಸು" ಎಂದು ಮೊರೆಯಿಟ್ಟರು.

ಶ್ರೀಕೃಷ್ಣನು ಪ್ರಚಂಡವಾಯುವಿನಿಂದ ಯುಕ್ತವಾದ ಶಿಲಾವರ್ಷಗಳಿಂದ ಪೀಡಿತವಾಗಿ ಚೈತನ್ಯರಹಿತವಾದ ಗೋಕುಲವನ್ನು ನೋಡಿ ಅದು ಕೋಪಿಷ್ಠನಾದ ಇಂದ್ರನ ವ್ಯಾಪಾರವೆಂದು ತಿಳಿದು ತನ್ನ ಮನಸ್ಸಿನಲ್ಲಿ "ನನ್ನಿಂದ ಆತನ ಪೂಜೆಯು ಅಡ್ಡಿಮಾಡಲ್ಪಟ್ಟದ್ದರಿಂದ ಕೋಪವುಳ್ಳವನಾಗಿ ಇಂದ್ರನು ಶಿಲಾಮಯವಾಗಿ ಅಧಿಕವಾಗಿ ಮಹಾವಾಯುವುಳ್ಳ ಅಕಾಲವರ್ಷವನ್ನು ವ್ರಜನಾಶಾರ್ಥವಾಗಿ ಉಂಟುಮಾಡಿದ್ದಾನೆ; ಆಗಲಿ—ನಾನು ಇದಕ್ಕೆ ಪ್ರತಿವಿಧಾನವನ್ನು ನನ್ನ ಸಾಮರ್ಥ್ಯದಿಂದ ಸಾಧಿಸುತ್ತೇನೆ; ಮೂಢಭಾವದಿಂದ ತಾವೇ ಲೋಕನಾಥರೆಂದು ತಿಳಿದಿರುವ ದೇವತೆಗಳಿಗೆ ಐಶ್ವರ್ಯಮದದಿಂದುಂಟಾದ ಗರ್ವವನ್ನು ಪರಿಹರಿಸುತ್ತೇನೆ; ಸತ್ವಸ್ವಭಾವರಾಗಿ ನನ್ನಲ್ಲಿ ಭಕ್ತಿಯುಕ್ತರಾದ ದೇವತೆಗಳಿಗೆ ತಾವೇ ಪ್ರಭುಗಳೆಂಬ ಗರ್ವವಿಲ್ಲ; ದುರಹಂಕೃತರಾದವರಿಗೆ ಮಾನಭಂಗವೇ ಅನುಗ್ರಹವು; ಆದಕಾರಣ ನನಗೆ ಆವಾಸಸ್ಥಾನವಾಗಿ ನನ್ನನ್ನೇ ನಂಬಿಕೊಂಡಿರುವದಾಗಿ ನನ್ನಿಂದ ಅಭಿಮಾನಿತವಾಗಿರುವ ಈ ವ್ರಜವನ್ನು ನನ್ನ ಸಾಮರ್ಥ್ಯದಿಂದ ರಕ್ಷಿಸುತ್ತೇನೆ; ಇದೇ ನನಗೆ ವ್ರತವು" ಎಂದು ನುಡಿದು ಏಕಹಸ್ತದಿಂದ ಗೋವರ್ಧ

ಸುಪರ್ವತವನ್ನು ಬಾಲಕನು ನಾಯಿಕೊಡೆಯನ್ನೆತ್ತುವಂತೆ ಲೀಲೆಯಿಂದೆತ್ತಿ ಹಿಡಿದುಕೊಂಡು ಗೋಪರನ್ನು ಕುರಿತು "ಎಲೌ ತಾಯೆ, ಎಲೈ ತಂದೆಯೆ, ಎಲೈ ಗೋಪಾಲಕರಿರಾ, ನಿಮ್ಮ ಪಶುಗಳನ್ನು ಕರೆದುಕೊಂಡು ಸುಖವಾಗಿ ಈ ಗೋವರ್ಧನಪರ್ವತದ ಹಳ್ಳವನ್ನು ಪ್ರವೇಶಂಗೈದು ಸ್ವಸ್ಥವಾಗಿರೀ; ನನ್ನ ಹಸ್ತದಿಂದ ತಪ್ಪಿಸಿಕೊಂಡು ಈ ಪರ್ವತವು ನಿಮ್ಮಮೇಲೆ ಬೀಳುವದೆಂಬ ಭಯವು ಬೇಡ; ಮಹಾವಾತಭಯವೂ ವರ್ಷಭಯವೂ ನಿಮಗಿಲ್ಲದಂತೆ ನಾನು ನಿಮಗೆ ಕ್ಷೇಮವನ್ನುಂಟುಮಾಡುತ್ತೇನೆ" ಅಂದನು.

ಆ ಭಗವದ್ವಾಕ್ಯವನ್ನು ಕೇಳಿ ಗೋಪರು ಸ್ಥಳಗಳನ್ನು ನೋಡಿಕೊಂಡು ಆ ಹಳ್ಳವನ್ನು ದ್ರವ್ಯ ಪುತ್ರ ಪರಿವಾರ ಸಹಿತವಾಗಿ ಪ್ರವೇಶಿಸಿ ಕ್ಷುತ್ತಿನ ಭಯವನ್ನೂ ಬಾಯಾರಿಕೆ ಉಪದ್ರವವನ್ನೂ ಸುಖಾಪೇಕ್ಷೆಯನ್ನೂ ಬಿಟ್ಟು ನೋಡುತ್ತಿದ್ದರು; ಆ ಬಳಿಕ ಶ್ರೀಕೃಷ್ಣನು ಏಳುದಿವಸ ಪರ್ಯಂತವು ಹೆಜ್ಜೆಯನ್ನಾಚೆಗೆ ತೆಗೆಯದೆ ನಿಂತುಕೊಂಡು ಆ ಪರ್ವತವನ್ನು ಧರಿಸಿರಲು ದೇವೇಂದ್ರನು ಶ್ರೀಕೃಷ್ಣನ ಸಾಮರ್ಥ್ಯಾತಿಶಯವನ್ನು ನೋಡಿ ಆಶ್ಚರ್ಯಯುಕ್ತನಾಗಿ ವ್ಯರ್ಥಸಂಕಲ್ಪನಾಗಿ ಸ್ತಂಭಿತನಾಗಿ ಮೇಘಗಳನ್ನು ವರ್ಷಿಸದಂತೆ ನಿವಾರಣಂಗೈದನು; ಆಗ ಮೇಘರಹಿತವಾಗಿ ಸೂರ್ಯಪ್ರಕಾಶವುಳ್ಳದ್ದಾಗಿ ನಿರ್ಮಲವಾದ ಆಕಾಶವನ್ನು ನೋಡಿ ಶ್ರೀಕೃಷ್ಣನು ಮಹಾವಾತಯುಕ್ತವಾದ ವೃಷ್ಟಿಯಿಂದ ಪೀಡಿತರಾಗಿ ಸ್ವಸ್ಥಚಿತ್ತರಾಗಿದ್ದ ಆ ಗೋಪರನ್ನು ಕುರಿತು "ಎಲೈ ಗೋಪರುಗಳಿರಾ, ಇನ್ನು ನಿರ್ಭಯರಾಗಿ ಹೊರಟುಬನ್ನಿರೀ; ಸಪರಿವಾರರಾಗಿ ಸ್ತ್ರೀಯರ ಸಹಿತರಾಗಿ ಬಾಲಕರನ್ನು ಕರೆದುಕೊಂಡು ನಿಮ್ಮ ಸ್ಥಾನಗಳಿಗೆ ಹೋಗಿರೀ; ಮಹಾವಾತವೂ ವರ್ಷವೂ ಶಾಂತವಾದವು; ಹಳ್ಳಗಳು ಕೊಳ್ಳಿ ನದಿಗಳು ಮೊದಲಾದವು ಸ್ವಲ್ಪೋದಕವುಳ್ಳವುಗಳಾದವು" ಅಂದನು.

ಆ ವಾಕ್ಯವನ್ನು ಕೇಳಿ ಗೋಪಾಲಕರು ತಮ್ಮ ಪದಾರ್ಥಗಳನ್ನೂ ಗೋವುಗಳನ್ನೂ ಭಂಡಿಗಳನ್ನೂ ಸಾಗಿಸಿಕೊಂಡು ಸ್ತ್ರೀಬಾಲವೃದ್ಧ ಸಮೇತರಾಗಿ ಹೊರಟುಬಂದರು; ಭಗವಂತನು ಸರ್ವಪ್ರಾಣಿಗಳೂ ನೋಡುತ್ತಿರಲು ಆ ಪರ್ವತವನ್ನು ಸ್ವಸ್ಥಾನದಲ್ಲಿ ಯಥಾಪ್ರಕಾರವಾಗಿ ಲೀಲೆಯಿಂದಿರಿಸಿದನು; ಅನಂತರದಲ್ಲಿ ವ್ರಜವಾಸಿಗಳಾದ ಜನರು ಪ್ರೇಮಪೂರ್ಣರಾಗಿ ಆಲಿಂಗನಾದಿಗಳಿಂದ ಆ ಭಗವಂತನನ್ನು ಯಥಾಯೋಗ್ಯವಾಗಿ ಸ್ತುತಿಸಿದರು; ಗೋಪೀಯರು ಸ್ನೇಹಪೂರ್ವಕವಾಗಿ ದಧ್ಯಕ್ಷತೋದಕಗಳಿಂದ ಆತನನ್ನು ಪೂಜಿಸಿ ಆಶೀರ್ವಾದವನ್ನು ಮಾಡಿದರು; ಯಶೋದಾದೇವಿಯೂ ರೋಹಿಣೀದೇವಿಯೂ ನಂದನೂ ಬಲರಾಮನೂ ಶ್ರೀಕೃಷ್ಣನನ್ನಾಲಿಂಗನಂಗೈದು ಸ್ನೇಹಪರವಶರಾಗಿ ಆಶೀರ್ವಾದಗಳನ್ನು ಮಾಡಿದರು; ಸ್ವರ್ಗದಲ್ಲಿ ದೇವಸಮೂಹಗಳೂ ಸಾಧ್ಯರೂ ಸಿದ್ಧರೂ ಗಂಧರ್ವರೂ ಚಾರಣರೂ ಸ್ತುತಿಯನ್ನು ಮಾಡಿ ಪುಷ್ಪವೃಷ್ಟಿಯನ್ನು ಕರೆದರು; ದೇವಪ್ರೇರಿತಗಳಾದ ಶಂಖಗಳೂ ಭೇರಿಗಳೂ ಧ್ವನಿಗೈದವು; ತುಂಬುರು ಮೊದಲಾದ ಗಂಧರ್ವಪತಿಗಳು ಗಾನಂಗೈದರು! ಅಂಥಾ ಸಂಭ್ರಮದೊಡನೆ ತನಗೆ ಅನುರಾಗಯುಕ್ತರಾದ ಗೋಪಾಲಕರಿಂದ ಪರಿವೃತನಾಗಿ ಬಲರಾಮಸಮೇತನಾಗಿ ಶ್ರೀಕೃಷ್ಣನು ವ್ರಜವನ್ನು ಪ್ರವೇಶಿಸಿದನು; ಗೋಪಸ್ತ್ರೀಯರು ಆ ಪ್ರಕಾರವಾದ ಶ್ರೀಕೃಷ್ಣನ ಚರಿತ್ರವನ್ನು ಗಾನಂಗೈಯುತ ಪ್ರೇಮಯುಕ್ತರಾಗಿ ವ್ರಜಕ್ಕೆ ಬಂದರು!

---

## ೨೬ ನೇ ಅಧ್ಯಾಯ.

### ಗೋಪಾಲಕರು ಶ್ರೀಕೃಷ್ಣನ ಚರಿತ್ರಗಳನ್ನು ನೋಡಿ ಆಶ್ಚರ್ಯಪಟ್ಟದ್ದು.

ಎಲೈ ಅರಸೆ, ಅನಂತರದಲ್ಲಿ ಗೋಪಾಲಕರು ಈ ಪ್ರಕಾರವಾದ ಶ್ರೀಕೃಷ್ಣನ ಸಾಹಸವ್ಯಾಪಾರಗಳನ್ನು ನೋಡಿ ಆ ಭಗವಂತನ ಮಹತ್ವವನ್ನರಿಯದವರಾದ್ದರಿಂದ ಆಶ್ಚರ್ಯಪಟ್ಟು ನಂದನ ಸಮೀಪಕ್ಕೆ ಬಂದು ಆತನನ್ನು ಕುರಿತು "ಎಲೈ ನಂದಗೋಪನೆ, ಬಾಲಕನಾದ ಕೃಷ್ಣನ ಚರಿತ್ರಗಳು ಅತ್ಯಾಶ್ಚರ್ಯಕರವಾಗಿವೆ; ಆತನು

ಗ್ರಾಮವಾಸಿಗಳಾದ ಗೋಪಾಲಕರಲ್ಲಿ ಅಯೋಗ್ಯಸ್ಥಾನದಲ್ಲಿ ಹ್ಯಾಗೆ ಉತ್ಪತ್ತಿಯನ್ನೈದಿದನೊ ತಿಳಿಯದು ; ಕೃಷ್ಣನು ಏಳುವರುಷದ ವಯಸ್ಸಿನಲ್ಲೇ ಏಕಹಸ್ತದಿಂದ ಮದಗಜವು ತಾವರೇ ಪುಷ್ಪವನ್ನೆತ್ತುವಂತೆ ಗೋವರ್ಧನ ಪರ್ವತವನ್ನೆತ್ತಿ ಧರಿಸಿದನು ; ಈತನು ಮಗುವಾಗಿ ಕಣ್ಣು ತೆರೆಯುವದಕ್ಕೆ ಮೊದಲೇ ಮಹಾಬಲವುಳ್ಳ ಪೂತನೆಯೆಂಬ ರಾಕ್ಷಸಿಯು ಸುಂದರಿಯಾದ ಸ್ತ್ರೀಯವೇಷವನ್ನು ಧರಿಸಿಕೊಂಡು ಬಂದು ಮೊಲೇಕೊಡಲು ಪ್ರಾಣಿಗಳ ಆಯುಸ್ಸನ್ನು ಕಾಲನು ಪಾನಗೈಯುವಂತೆ ಪ್ರಾಣಗಳೊಡನೆ ಅವಳ ಸ್ತನ್ಯಪಾನಮಾಡಿದನು ; ಈತನು ಮೂರುತಿಂಗಳ ಶಿಶುವಾಗಿರುವಾಗ ಅಂತರಂಗನಾಗಿ ಮಲಗಿಕೊಂಡು ಅಳುತ ಕಾಲುಗಳಿಂದ ಒದ್ದು ಶಕಟವನ್ನು ವ್ಯತ್ಯಸ್ತವಾಗುವ ಹಾಗೆ ಕೆಡೆಹಿದನು ; ಒಂದು ವರುಷದ ವಯಸ್ಸಿನಲ್ಲಿ ತೃಣಾವರ್ತನೆಂಬ ಅಸುರನು ಮಹಾ ಪ್ರಚಂಡವಾಯುರೂಪದಿಂದ ಮೇಲಕ್ಕೆ ಹಾರಿಸಿಕೊಂಡು ಹೋಗಲು ಆ ದೈತ್ಯನನ್ನು ಕಂಠಸ್ಥಾನದಲ್ಲಿ ತಬ್ಬಿಕೊಂಡು ಸಂಹರಿಸಿದನು ; ಬಬ್ಬರ ಮನೆಯಲ್ಲಿ ಬೆಣ್ಣೆಯನ್ನು ಕದ್ದು ಯಶೋದಾದೇವಿಯಿಂದ ಒರಳಿನಲ್ಲಿ ಕಟ್ಟಿಸಿಕೊಂಡು ಆ ಒರಳನ್ನೆಳೆದುಕೊಂಡು ಅರ್ಜುನವೃಕ್ಷಗಳೆರಡರ ಮಧ್ಯದಲ್ಲಿ ಹೋಗಿ ತನ್ನ ಭುಜಬಲದಿಂದ ಆ ವೃಕ್ಷಗಳನ್ನು ಕೆಡೆಹಿದನು ; ಒಂದುದಿನ ಬಲರಾಮನ ಸಮೇತನಾಗಿ ಕರುಗಳನ್ನು ಮೇಯಿಸುತ ಬಾಲಕರೊಡಗೂಡಿ ಸಂಚರಿಸುತ ಬಕಾಕಾರವಾದ ಮುಖದಿಂದ ತನ್ನನ್ನು ಸಂಹರಿಸಲೆಣಿಸಿದ್ದ ಶತ್ರುವಾದ ಬಕಾಸುರನನ್ನು ತನ್ನ ಬಾಹುಗಳಿಂದ ಸಂಹರಿಸಿದನು ; ಕರುಗಳ ಮಧ್ಯದಲ್ಲಿ ಕರುವಿನ ರೂಪದಿಂದ ಬಂದು ತನ್ನನ್ನು ಸಂಹರಿಸಬೇಕೆಂದಿದ್ದ ವತ್ಸಾಸುರನನ್ನು ಸಂಹರಿಸಿ ಆ ಅಸುರನ ದೇಹವನ್ನು ಬ್ಯಾಲದಮರದಮೇಲೆ ಬೀಸಿ ಬ್ಯಾಲದಹಣ್ಣುಗಳನ್ನು ಕಡೆಹಿದನು ; ಬಲರಾಮಯುಕ್ತನಾಗಿ ಗರ್ದಭಾಸುರನನ್ನೂ ಅವನ ಬಂಧುಗಳನ್ನೂ ಸಂಹರಿಸಿ ಪಕ್ವಫಲಯುಕ್ತವಾದ ತಾಳೇವನಕ್ಕೆ ಕ್ಷೇಮವನ್ನುಂಟುಮಾಡಿದನು ; ಬಲಶಾಲಿಯಾದ ಬಲರಾಮನಿಂದ ಪ್ರಲಂಬಾಸುರನನ್ನು ಸಂಹಾರಂಗೈಸಿ ವ್ರಜಪಶುಗಳನ್ನೂ ಗೋಪಾಲಕರನ್ನೂ ಕಾಡುಕಿಚ್ಚಿನಿಂದ ತಪ್ಪಿಸಿದನು ; ಮಹಾ ವಿಷದಿಂದ ಕ್ರೂರವಾದ ಕಾಳೀಯಸರ್ಪರಾಜನನ್ನು ನಿಗ್ರಹಿಸಿ ಅವನ ಗರ್ವವನ್ನಡಗಿಸಿ ಯಮುನಾನದಿಯ ಮಡುವಿನಿಂದ ಆಚೆಗೆ ಹೊರಡಿಸಿ ಅದನ್ನು ವಿಷರಹಿತವಾಗಿಯೂ ಶುದ್ಧೋದಕವುಳ್ಳದ್ದಾಗಿಯೂ ನಿರ್ದೋಷವಾಗಿಯೂ ಮಾಡಿದನು ! ಎಲೈ ನಂದಗೋಪನೆ, ನಿನ್ನಪುತ್ರನಾದ ಕೃಷ್ಣನಲ್ಲಿ ವ್ರಜವಾಸಿಗಳಾದ ನಮಗೆಲ್ಲರಿಗೂ ಅನುರಾಗವು ಬಿಡಲಶಕ್ಯವಾಗಿದೆ ; ಆತನಿಗೂ ನಮ್ಮಲ್ಲಿ ಸ್ವಭಾವಿಕವಾದ ವಾತ್ಸಲ್ಯವಿದೆ ; ಏಳುವರುಷದ ಬಾಲಕನೆಲ್ಲಿ—ಮಹಾ ಪರ್ವತಧಾರಣವೆಲ್ಲಿ ! ಆದ್ದರಿಂದ ನಿನ್ನ ಮಗನಲ್ಲಿ ಶಂಕೆಯುಂಟಾಗುತ್ತಿದೆ ; ಈತನು ಮನುಷ್ಯನಲ್ಲ ; ಸಾಕ್ಷಾತ್ ಈಶ್ವರನಾಗಿರಬೇಕೆಂದು ನನಗೆ ತೋರುತ್ತದೆ '' ಎಂದು ನುಡಿದರು.

ಆ ವಾಕ್ಯವನ್ನು ಕೇಳಿ ನಂದಗೋಪನು ಗರ್ಗಾಚಾರ್ಯನ ವಾಕ್ಯವನ್ನು ಸ್ಮರಿಸಿಕೊಂಡು ಅವರನ್ನು ಕುರಿತು '' ಎಲೈ ಗೋಪರಾ, ನನ್ನ ಮಾತನ್ನು ಕೇಳೀ ; ಈ ಬಾಲಕನಲ್ಲಿ ನಿಮಗೆ ಶಂಕಯು ಬೇಡ ; ಈ ಬಾಲಕನನ್ನು ದ್ದೇಶಿಸಿ ಗರ್ಗ್ಯಋಷಿಯು ಹೇಳಿದ ಅರ್ಥವನ್ನು ಹೇಳುತ್ತೇನೆ ಕೇಳೀ : ಆತನು ನನ್ನನ್ನು ಕುರಿತು 'ಎಲೈ ನಂದನೆ, ಕೃತಾದಿಯುಗಗಳಲ್ಲಿ ಶರೀರವನ್ನು ಗ್ರಹಿಸುವ ಈ ಪುರುಷನಿಗೆ ಕ್ರಮವಾಗಿ ಮೂರು ವರ್ಣಗಳುಂಟು ; ಕೃತಯುಗದಲ್ಲಿ ಶುಕ್ಲವರ್ಣವೂ ತ್ರೇತಾಯುಗದಲ್ಲಿ ರಕ್ತವರ್ಣವೂ ದ್ವಾಪರಯುಗದಲ್ಲಿ ಪೀತವರ್ಣವೂ ಉಂಟಾಗುವವು ; ಈಗ ಕೃಷ್ಣವರ್ಣವನ್ನು ಧರಿಸಿಧಾನೆ ; ನಿನ್ನ ಮಗನು ವಸುದೇವನಿಂದ ಜನಿಸಿದ್ದರಿಂದ ಆತನನ್ನು ವಾಸುದೇವನೆಂದು ಪ್ರಾಜ್ಞರು ಹೇಳುವರು ; ನಿನ್ನ ಮಗನಿಗೆ ಅನೇಕ ರೂಪಗಳೂ ಅನೇಕ ನಾಮಗಳೂ ಉಂಟು ; ಗುಣಕರ್ಮಾನುರೂಪಗಳಾಗಿರುವ ಆ ನಾಮಗಳನ್ನೂ ರೂಪಗಳನ್ನೂ ನಾನು ಬಲ್ಲೆನು ; ಜನರು ಅರಿಯರು ; ಈ ಬಾಲಕನು ಗೋಪರನ್ನೂ ಗೋಕುಲವನ್ನೂ ಸಂತೋಷಪಡಿಸಿಕೊಂಡು ನಿಮಗೆ ಶ್ರೇಯಸ್ಸನ್ನುಂಟುಮಾಡುವನು ; ಈ ಬಾಲಕನಿಂದ ನೀವು ಬಹು ಕಷ್ಟಗಳನ್ನು ಪರಿಹರಿಸಿಕೊಂಡು ಸುಖಪಡುವಿರಿ ! ಎಲೈ ವ್ರಜಪತಿಯಾದ ನಂದನೆ, ಪೂರ್ವದಲ್ಲಿ ಶತ್ರುಗಳಿಂದ ಪೀಡಿತರಾದ ಸತ್ಪುರುಷರು ಈ ಪುರುಷನಿಂದ ರಕ್ಷಿತರಾಗಿ ತಮ್ಮ ಶತ್ರುಗಳನ್ನು

ಜಯಿಸಿದರು ; ಈ ಮಹಾ ಪುರುಷನಲ್ಲಿ ಪ್ರೀತಿಯನ್ನು ಮಾಡುವ ಜನರನ್ನು ಶತ್ರುಗಳು ವಿಷ್ಣುಪಕ್ಷಾವಲಂಬಿಗಳನ್ನು ಅಸುರರು ಪೀಡಿಸಲಾರದಂತೆ ಪೀಡಿಸಲಾರರು! ಎಲೈ ನಂದನೆ, ನಿನ್ನ ಮಗನಾದ ಈ ಪುರುಷನು ಗುಣಗಳಿಂದ ನಾರಾಯಣನಿಗೆ ಸಮಾನನು ; ಸಂಪತ್ತಿನಿಂದಲೂ ಕೀರ್ತಿಯಿಂದಲೂ ಮಹತ್ತ್ವದಿಂದಲೂ ವಿಷ್ಣುವಿಗೆ ಸಮಾನನು ; ಆದಕಾರಣ ಈತನಿಂದ ಮಾಡಲ್ಪಡುವ ಕಾರ್ಯಗಳಿಂದ ನೀವು ಆಶ್ಚರ್ಯಪಡಕೆಲಸವಿಲ್ಲ!' ಎಂದು ಹೇಳಿ ಸ್ವರ್ಗಕ್ಕೆ ಹೋದನು ; ಆದ್ದರಿಂದ ಕೃಷ್ಣನನ್ನು ನಾರಾಯಣನ ಅಂಶವನ್ನಾಗಿ ನಾನು ತಿಳಿದುಕೊಂಡಿದ್ದೇನೆ" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ವ್ರಜವಾಸಿಗಳಾದ ಗೋಪರು ಕೃಷ್ಣನ ಮಹಿಮೆಯನ್ನು ಕಣ್ಣುಗಳಿಂದ ನೋಡಿಯೂ ಕಿವಿಗಳಿಂದ ಕೇಳಿಯೂ ಸಂತುಷ್ಟರಾಗಿ ನಂದನನ್ನೂ ಶ್ರೀಕೃಷ್ಣನನ್ನೂ ಪೂಜಿಸಿ "ತನ್ನ ಯಾಗವನ್ನು ಮಾಡದೆ ಬಿಟ್ಟದ್ದರಿಂದ ಕುಪಿತನಾದ ದೇವೇಂದ್ರನು ಪ್ರಚಂಡವಾಯು ಸಮೇತನಾಗಿ ಆನೆಕಲ್ಲುಗಳಿಂದಲೂ ಸ್ಥೂಲಗಳಾದ ಜಲಧಾರೆಗಳಿಂದಲೂ ಶಿಡಿಲುಗಳಿಂದಲೂ ಕೂಡಿದ ಮೇಘಗಳನ್ನು ವರ್ಷಿಸುತ್ತಿರಲು ಅದರಿಂದ ಉಪದ್ರವಪಡುತಿದ್ದ ಗೋವುಗಳು ಕರುಗಳು ಸ್ತ್ರೀಬಾಲವೃದ್ಧರ ಸಹಿತವಾಗಿ ತನ್ನ ಸ್ಥಾನವಾದ ವ್ರಜವನ್ನು ನೋಡಿ ನಗುತ ದಯಾರ್ದ್ರನಾಗಿ ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಬಾಲಕನು ಅಣಬೆಯನ್ನು ಕಿತ್ತೆತ್ತುವಂತೆ ಏಕಹಸ್ತದಿಂದ ವಿಲಾಸದಿಂದೆತ್ತಿ ಹಿಡಿದುಕೊಂಡು ದೇವೇಂದ್ರನ ಗರ್ವವನ್ನು ಪರಿಹರಿಸಿ ವ್ರಜವನ್ನು ರಕ್ಷಿಸಿದನಾದಕಾರಣ ಗೋಪಾಲಕನಾದ ಶ್ರೀಕೃಷ್ಣನು ನಮ್ಮಲ್ಲಿ ಪ್ರೀತಿಯನ್ನು ಮಾಡಲಿ!" ಎಂದು ನುಡಿದರು!

---

## ೨೭ ನೇ ಅಧ್ಯಾಯ.

### ಇಂದ್ರನೂ ಕಾಮಧೇನುವೂ ಕೃಷ್ಣನಿಗೆ ಪಟ್ಟಾಭಿಷೇಕವನ್ನು ಮಾಡಿದ್ದು.

ಎಲೈ ಅರಸೆ, ಈರೀತಿಯಲ್ಲಿ ಶ್ರೀಕೃಷ್ಣನಿಂದ ಗೋವರ್ಧನಪರ್ವತವು ಧರಿಸಲ್ಪಟ್ಟು ವ್ರಜವು ಆ ವೃಷ್ಟ್ಯುಪದ್ರವದಿಂದ ರಕ್ಷಿತವಾಗಲು ಇಂದ್ರನೂ ಕಾಮಧೇನುವೂ ಸ್ವರ್ಗಲೋಕದಿಂದ ಕೃಷ್ಣಸ್ವಾಮಿಯ ಬಳಿಗೆ ಬಂದರು ; ಇಂದ್ರನು ಲಜ್ಜಿತನಾಗಿ ಆತನನ್ನು ಹೇಳನವನ್ನು ಮಾಡಿದಕಾರಣ ಖಿನ್ನನಾಗಿ ಶ್ರೀಕೃಷ್ಣನ ಪಾದಗಳ ಮೇಲೆ ತನ್ನ ಕಿರೀಟವನ್ನಿರಿಸಿ ನಮಸ್ಕರಿಸಿದನು ; ಅಪರಿಮಿತ ಮಹಿಮೆಯುಳ್ಳ ಶ್ರೀಕೃಷ್ಣನ ಪ್ರಭಾವವನ್ನು ಕಂಡೂ ಕೇಳಿಯೂ ಇದ್ದವನಾದಕಾರಣ ಆ ಇಂದ್ರನು ತಾನು ಲೋಕತ್ರಯಾಧಿಪತಿಯೆಂಬ ಗರ್ವವನ್ನು ಬಿಟ್ಟು ಅಂಜಲೀಬಂಧವನ್ನು ಮಾಡಿಕೊಂಡು ಆತನನ್ನು ಕುರಿತು "ಎಲೈ ಭಗವಂತನೆ, ನಿನ್ನ ಸ್ವರೂಪವು ಶುದ್ಧಸತ್ತ್ವಮಯವಾಗಿ ಜ್ಞಾನಘನವಾಗಿ ರಜಸ್ಸು ತಮಸ್ಸುಗಳ ಸಂಬಂಧರಹಿತವಾಗಿ ಶಾಶ್ವತವಾಗಿರುವದು ; ಮಾಯಾಮಯವಾಗಿ ಗುಣಜನ್ಯವಾದ ಸಂಸಾರವೂ ದೇಹಬಂಧವೂ ನಿನಗಿಲ್ಲ! ಎಲೈ ಈಶ್ವರನೆ, ದೇಹಸಂಬಂಧದಿಂದುಂಟಾಗುವ ಲೋಭಾದಿಗಳು ನಿನಗೆ ಬರಲಾರವು ; ಅಜ್ಞಾನಸೂಚಕಗಳಾಗಿ ದೇಹಬಂಧಕಾರಣಗಳಾದ ರಾಗಾದಿಗಳು ನಿನಗಿಲ್ಲ ; ಹಾಗಾದಾಗ್ಯೂ ಧರ್ಮರಕ್ಷಣಾರ್ಥವಾಗಿಯೂ ದುಷ್ಟನಿಗ್ರಹಾರ್ಥವಾಗಿಯೂ ದಂಡವನ್ನು ಧರಿಸುತ್ತಿ! ಎಲೈ ಸ್ವಾಮಿಯೆ, ಜಗತ್ತಿಗೆ ಪಿತೃವೂ ಗುರುವೂ ಈಶ್ವರನೂ ಅಪರಿಹಾರ್ಯವಾದ ಕಾಲವೂ ನೀನೇ ; ಲೋಕಹಿತಾರ್ಥವಾಗಿ ಸ್ವೇಚ್ಛಾಶರೀರಗಳಿಂದ ನಿಗ್ರಹಾನುಗ್ರಹಗಳನ್ನು ಮಾಡುತ ಲೋಕನಾಥರೆಂಬ ಗರ್ವದಿಂದ ಮದಿಸಿದವರ ಗರ್ವವನ್ನು ಪರಿಹರಿಸುವೆ ; ಅಜ್ಞರಾಗಿ ಲೋಕನಾಥರೆಂಬ ಗರ್ವವುಳ್ಳವರೂ ನಿನ್ನನ್ನು ನೋಡಿ ಶೀಘ್ರವಾಗಿ ಗರ್ವವನ್ನು ಬಿಟ್ಟು ನಿನ್ನ ಭಕ್ತಿಯನ್ನು ಮಾಡುವರು ; ಆದ್ದರಿಂದ ನಿನ್ನ ಲೀಲೆಯೇ ದುಷ್ಟರನ್ನು ಶಿಕ್ಷಿಸುವದು ! ಎಲೈ ಕೃಷ್ಣನೆ, ಐಶ್ವರ್ಯಮದದಿಂದ ಗರ್ವಿತನಾಗಿ ನಿನ್ನ ಪ್ರಭಾವವನ್ನರಿಯದೆ ನಿನಗೆ ಅಪರಾಧಿಯಾಗಿ ಮೂಢಚಿತ್ತನಾದ ನನ್ನ ಅಪರಾಧವನ್ನು ಕ್ಷಮಿಸು ; ಇನ್ನುಮೇಲೆ ಇಂಥಾ ಮೂಢವಾದ ಬುದ್ಧಿಯು ನನಗೆ ಬರದಿರಲಿ ! ಎಲೈ ಅಧೋ

ಷ್ಣನೆ, ಭೂಮಿಗೆ ಭಾರವನ್ನುಂಟುಮಾಡುವ ಸೇನಾಪತಿಗಳಾದ ದುಷ್ಟಕ್ಷತ್ರಿಯರ ಸಂಹಾರಾರ್ಥವಾಗಿಯೂ ನಿನ್ನ ಸೇವಕರ ಕ್ಷೇಮಾರ್ಥವಾಗಿಯೂ ನೀನು ಅವತಾರಗಳನ್ನು ಮಾಡುವೆ! ಎಲೈ ಭಗವಂತನಾಗಿ ಮಹಾಪುರುಷನಾಗಿ ವಾಸುದೇವನಾಗಿ ಯಾದವಪತಿಯಾದ ಶ್ರೀಕೃಷ್ಣನೆ, ನಿನಗೆ ನಮಸ್ಕಾರವು! ಭಕ್ತರ ಇಚ್ಛಾನುಸಾರವಾಗಿ ದೇಹವನ್ನು ಧರಿಸಿ ವಿಶುದ್ಧವಾದ ಜ್ಞಾನಸ್ವರೂಪವುಳ್ಳವನಾಗಿ ಸರ್ವಸ್ವರೂಪನಾಗಿ ಸರ್ವಕಾರಣನಾಗಿ ಸರ್ವಭೂತಾತ್ಮಕನಾದ ನಿನಗೆ ನಮಸ್ಕಾರವು! ಎಲೈ ಭಗವಂತನೆ, ನನ್ನ ಪೂಜಾವಿಘಾತವಾದ್ದರಿಂದ ಕೋಪವುಳ್ಳ ನನ್ನಿಂದ ವ್ರಜನಾಶಾರ್ಥವಾಗಿ ಮಹಾವೃಷ್ಟಿಯನ್ನು ಕರೆದ ದುಶ್ಚೇಷ್ಟೆಯು ಮಾಡಲ್ಪಟ್ಟಿತು; ನನ್ನ ದುರಹಂಕಾರವನ್ನು ಪರಿಹರಿಸು; ನಿನ್ನನ್ನು ಶರಣುಹೊಂದಿದೇನೆ" ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣನು ನಗುತ ಮೇಘಗಂಭೀರವಾದ ವಾಕ್ಕಿನಿಂದ ಇಂದ್ರನನ್ನು ಕುರಿತು "ಎಲೈ ಇಂದ್ರನೆ, ಲೋಕತ್ರಯಾಧಿಪತ್ಯದಿಂದ ಗರ್ವಿತನಾದ ನಿನಗೆ ನನ್ನ ಸ್ಮೃತಿಯು ಹುಟ್ಟಬೇಕೆಂದು ನಿನ್ನಲ್ಲಿ ಅನುಗ್ರಹೇಚ್ಛೆಯುಳ್ಳ ನನ್ನಿಂದ ನಿನ್ನ ಪೂಜಾಭಂಗವು ಮಾಡಲ್ಪಟ್ಟಿತು; ಐಶ್ವರ್ಯಮದಾಂಧನಾದ ಪುರುಷನು ಶಿಕ್ಷಕನಾದ ನನ್ನನ್ನು ಮರೆಯುವಾಗ ಅವನಲ್ಲಿ ಅನುಗ್ರಹೇಚ್ಛೆಯಿಂದ ಅವನ ಐಶ್ವರ್ಯವನ್ನ ಪಹರಿಸುತ್ತೇನೆ! ಎಲೈ ಇಂದ್ರನೆ, ನಿನಗೆ ಸುಖವಾಗಲಿ; ನೀನು ಸ್ವಸ್ಥಾನವನ್ನು ಕುರಿತೈದು; ನನ್ನ ಆಜ್ಞೆಯನ್ನುಲ್ಲಂಘಿಸದೆ ಆಚರಿಸುತ ಗರ್ವವನ್ನು ಬಿಟ್ಟು ನಿನ್ನ ಅಧಿಕಾರದಲ್ಲಿ ಅಪ್ರಮತ್ತನಾಗಿರು" ಎಂದು ನುಡಿದನು.

ಆ ಬಳಿಕ ಕಾಮಧೇನುವು ಸ್ವಸಂತಾನಗಳಾದ ಗೋವುಗಳೊಡನೆ ಬಂದು ಶ್ರೀಕೃಷ್ಣನನ್ನು ನಮಸ್ಕರಿಸಿ ಗೋಪಾಲಕರೂಪನಾದ ಶ್ರೀಕೃಷ್ಣನನ್ನು ಕುರಿತು "ಮಹಾಯೋಗಿಯಾಗಿ ವಿಶ್ವಾತ್ಮಕನಾಗಿ ಅಚ್ಯುತನಾಗಿ ಸರ್ವಕಾರಣನಾಗಿ ಭಗವಂತನಾದ ಶ್ರೀಕೃಷ್ಣನೆ, ಲೋಕನಾಥನಾದ ನಿನ್ನಿಂದ ನಾವು ಸನಾಥರು! ಎಲೈ ಜಗದೀಶ್ವರನೆ, ನೀನೇ ನಮಗೆ ಪರದೈವವು; ನೀನೇ ನಮಗೆ ಇಂದ್ರನು; ಸಾಧುಗಳಿಗೂ ಗೋವಿಪ್ರದೇವತೆಗಳಿಗೂ ಕ್ಷೇಮವನ್ನುಂಟುಮಾಡು; ನಾವು ಬ್ರಹ್ಮನಿಂದ ಪ್ರೇರಿತರಾಗಿ ನಿನ್ನನ್ನು ಇಂದ್ರನಾಗಿ ಅಭಿಷೇಕವನ್ನು ಮಾಡುತ್ತೇವೆ! ಎಲೈ ವಿಶ್ವಾತ್ಮಕನಾದ ಕೃಷ್ಣನೆ, ಭೂಭಾರಪರಿಹಾರಾರ್ಥವಾಗಿ ನೀನು ಅವತರಿಸಿದ್ದೀ!" ಎಂದು ಬಿಡಂಬಡಿಸಿ ತನ್ನ ಕ್ಷೀರದಿಂದ ಅಭಿಷೇಕವನ್ನು ಮಾಡಿತು!

ಇಂದ್ರನು ಐರಾವತದ ಸೊಂಡಿಲಿನಿಂದ ತರಲ್ಪಟ್ಟ ದೇವಗಂಗಾ ಉದಕದಿಂದ ದೇವತೆಗಳ ಮತ್ತು ಅದಿತಿ ಮೊದಲಾದ ದೇವಮಾತೃಗಳ ಸಹಿತನಾಗಿ ಶ್ರೀಕೃಷ್ಣನಿಗೆ ಅಭಿಷೇಕವನ್ನು ಮಾಡಿ ಗೋವಿಂದನೆಂಬ ಹೆಸರನ್ನು ಮಾಡಿದನು; ತುಂಬುರನಾರದರು ಮುಂತಾದ ದೇವಋಷಿಗಳು ಗಂಧರ್ವರು ವಿದ್ಯಾಧರರು ಸಿದ್ಧರು ಚಾರಣರು ಮೊದಲಾದವರು ಲೋಕಪಾಪಪರಿಹಾರಕವಾದ ಭಗವಂತನ ಯಶಸ್ಸನ್ನು ಗಾನಂಗೈದರು; ದೇವಸ್ತ್ರೀಯರು ಸಂತೋಷದಿಂದ ನರ್ತನಂಗೈದರು; ದೇವಸಮೂಹಪತಿಗಳಾದ ಇಂದ್ರಾದಿಗಳು ಪುಷ್ಪವೃಷ್ಟಿಯನ್ನು ಕರೆಯುತ ಸ್ತುತಿಸಿದರು! ಆಗ ಮೂರುಲೋಕಗಳೂ ಸುಖವನ್ನೈದಿದವು; ಗೋವುಗಳು ತಮ್ಮ ಕ್ಷೀರಗಳಿಂದ ಭೂಮಿಯನ್ನು ನೆನೆಸಿದವು; ನದಿಗಳು ನಾನಾಪ್ರಕಾರವಾದ ಕ್ಷೀರಾದಿ ರಸಗಳನ್ನು ಪ್ರವಹಿಸಿದವು; ವೃಕ್ಷಗಳು ಫಲಪುಷ್ಪ ಮಕರಂದಗಳನ್ನು ಧರಿಸಿದ್ದವು; ಭೂಮಿಯಲ್ಲಿ ಉತ್ತು ಬಿತ್ತದಿದ್ದರೂ ಭತ್ತ ಮೊದಲಾದ ಧಾನ್ಯಗಳು ಫಲಿಸಿದವು; ಪರ್ವತಗಳು ರತ್ನಗಳನ್ನು ಧರಿಸಿದವು! ಎಲೈ ಅರಸೆ, ಶ್ರೀಕೃಷ್ಣನು ಪಟ್ಟಾಭಿಷಿಕ್ತನಾಗಲು ಈ ರೀತಿಯಲ್ಲಿ ಸರ್ವವೂ ಶುಭವಾಯಿತು; ಮತ್ತು ಸ್ವಭಾವದಿಂದ ಕ್ರೂರಗಳಾದ ಪ್ರಾಣಿಗಳು ಪರಸ್ಪರ ವೈರವಿಲ್ಲದಿದ್ದವು! ಎಲೈ ಅರಸೆ, ಈರೀತಿಯಲ್ಲಿ ದೇವೇಂದ್ರನು ಗೋಕುಲಪತಿಯಾದ ಶ್ರೀಕೃಷ್ಣನಿಗೆ ಪಟ್ಟಾಭಿಷೇಕವನ್ನು ಮಾಡಿ ಆತನ ಅಪ್ಪಣೆಯನ್ನು ತೆಗೆದುಕೊಂಡು ದೇವತೆಗಳಿಂದ ಯುಕ್ತನಾಗಿ ಸ್ವರ್ಗಲೋಕವನ್ನು ಕುರಿತು ಹೋದನು!

## ೨೮ನೇ ಅಧ್ಯಾಯ.

### ಶ್ರೀಕೃಷ್ಣನು ನಂದನನ್ನು ವರುಣನಿಂದ ಬಿಡಿಸಿಕೊಂಡದ್ದು.

ಎಲೈ ಅರಸೆ, ನಂದಗೋಪನು ಒಂದು ಏಕಾದಶೀ ದಿವಸದಲ್ಲಿ ನಿರಾಹಾರವ್ರತವನ್ನಾಚರಿಸಿ ಭಗವಂತನನ್ನು ಪೂಜಿಸಿ ಮರುದಿನದಲ್ಲಿ ದ್ವಾದಶೀ ಕಳಾಮಾತ್ರವಿದ್ದ ಕಾರಣ ತತ್ಕಾಲದಲ್ಲಿ ಪಾರಣೆಯನ್ನು ಮಾಡಬೇಕೆಂಬ ತ್ವರೆಯಿಂದ ಅರುಣೋದಯವಾಗುವದಕ್ಕೆ ಮೊದಲೇ ಅಸುರವೇಳೆಯಲ್ಲಿ ಯಮುನಾನದಿಯನ್ನು ಕುರಿತು ಸ್ನಾನಾರ್ಥವಾಗಿ ಹೋಗಿ ಅಸುರವೇಳೆಯೆಂದು ತಿಳಿಯದೆ ಜಲವನ್ನು ಪ್ರವೇಶಿಸಲು ವರುಣದೂತನಾದ ಒಬ್ಬ ಅಸುರನು ಆತನನ್ನು ಕರೆದುಕೊಂಡು ಹೋಗಿ ವರುಣನಿಗೊಪ್ಪಿಸಿದನು; ಆಗ ಗೋಪಾಲಕರು ನಂದಗೋಪನನ್ನು ಕಾಣದೆ "ಎಲೈ ರಾಮಾ—ಎಲೈ ಕೃಷ್ಣಾ" ಎಂದು ಕೂಗಿದರು; ಅದನ್ನು ಕೇಳಿ ನಂದನು ವರುಣನಿಂದ ಅಪಹೃತನಾದನೆಂದು ತಿಳಿದು ಸ್ವಜನರಕ್ಷಕನಾದ ಕೃಷ್ಣನು ಆತನ ಸಮೀಪಕ್ಕೆ ಹೋದನು; ಲೋಕಪಾಲಕನಾದ ವರುಣನು ಭಗವಂತನ ದರ್ಶನದಿಂದುಂಟಾದ ಮಹೋತ್ಸವದಿಂದ ಹರ್ಷಿತನಾಗಿ ತನ್ನ ಮನೆಗೆಬಂದ ಭಗವಂತನನ್ನು ಅಧಿಕವಾದ ಪೂಜೆಯಿಂದ ಆರಾಧಿಸಿ "ಎಲೈ ಪ್ರಭುವಾದ ಶ್ರೀಕೃಷ್ಣನೆ, ನನ್ನ ದೇಹವು ಈಗ ಸಫಲವಾಯಿತು; ಈಗ ಪುರುಷಾರ್ಥ ಲಾಭವಾಯಿತು; ನಿನ್ನ ಪಾದವನ್ನು ಭಜಿಸುವವರು ಸಂಸಾರಸಮುದ್ರದ ಪಾರವನ್ನು ಕಾಣುವರು; ಭಗವಂತನಾಗಿ ಪರಬ್ರಹ್ಮನಾಗಿ ಪರಮಾತ್ಮನಾದ ನಿನಗೆ ನಮಸ್ಕಾರವು; ಲೋಕಸೃಷ್ಟಿಕಲ್ಪನಾರೂಪವಾದ ಮಾಯೆಯಿಲ್ಲದಂಥಾ ನಿನಗೆ ನಮಸ್ಕಾರವು! ಅಕಾಲದಲ್ಲಿ ಜಲವನ್ನು ಪ್ರವೇಶಿಸಿದ ವ್ರಜಪತಿಯಾಗಿ ನಿನ್ನ ತಂದೆಯಾದ ನಂದನು ನಿನ್ನ ಪ್ರಭಾವವನ್ನರಿಯದ ನನ್ನ ಭೃತ್ಯನಿಂದ ಕರೆದುಕೊಂಡು ಬರಲ್ಪಟ್ಟನು! ಎಲೈ ಪ್ರಭುವಾದ ಶ್ರೀಕೃಷ್ಣನೆ, ಅವನ್ನು ನೀನು ಕ್ಷಮಿಸಬೇಕು! ಎಲೈ ಗೋವಿಂದನೆ, ನನ್ನ ಭೃತ್ಯನಿಂದ ಕರದುಕೊಂಡು ಬರಲ್ಪಟ್ಟ ನಿನ್ನ ತಂದೆಯಾದ ನಂದನನ್ನು ಕರದುಕೊಂಡು ಹೋಗು" ಎಂದು ನುಡಿದು ನಂದನನ್ನು ಒಪ್ಪಿಸಿದನು!

ಅನಂತರದಲ್ಲಿ ಶ್ರೀಕೃಷ್ಣನು ತನ್ನ ತಂದೆಯನ್ನು ಕರದುಕೊಂಡು ಬಂದು ಸ್ವಜನರಿಗೆ ಸಂತೋಷವನ್ನುಂಟುಮಾಡಿದನು; ನಂದನು ಲೋಕಪಾಲಕನಾದ ವರುಣನ ಸರ್ವೋತ್ತಮವಾದ ಐಶ್ವರ್ಯವನ್ನೂ ವರುಣಾದಿಗಳಿಗೆ ಭಗವಂತನಲ್ಲಿರುವ ನಮ್ರಭಾವವನ್ನೂ ನೋಡಿ ಆಶ್ಚರ್ಯಪಡುತ ತನ್ನ ಜ್ಞಾತಿಬಂಧುಗಳಿಗೆ ಆ ವೃತ್ತಾಂತವನ್ನು ಹೇಳಿದನು; ಆ ಗೋಪರು ಆಶ್ಚರ್ಯಯುಕ್ತರಾಗಿ ಈಶ್ವರನಾದ ಶ್ರೀಕೃಷ್ಣನನ್ನು ನಮಸ್ಕರಿಸಿ ತಮಗೂ ಭಗವಂತನು ಪರಗತಿಯನ್ನು ಕೊಡುವನೆಂದು ನಿಶ್ಚಯವನ್ನು ಮಾಡಿಕೊಂಡರು! ಸರ್ವಜ್ಞನಾದ ಭಗವಂತನು ಸ್ವಜನರ ಮನೋರಥವನ್ನು ತಿಳಿದು ಅವರ ಮನೋರಥಸಿದ್ಧ್ಯರ್ಥವಾಗಿ ಚಿಂತಿಸುತ ತನ್ನ ಮನಸ್ಸಿನಲ್ಲಿ ಲೋಕದಲ್ಲಿ ಜನರು ಅವಿದ್ಯಾಮೂಲಕವಾದ ಕಾಮದಿಂದಲೂ ತನ್ನಿಮಿತ್ತಗಳಾದ ಕರ್ಮಗಳಿಂದಲೂ ನಾನಾರೂಪಗಳಾದ ಜನ್ಮಗಳಿಂದಲೂ ಸುತ್ತುತ ಸ್ವಗತಿಯನ್ನರಿಯರೆಂದು ಆಲೋಚಿಸಿ ಪ್ರಭುವಾಗಿ ಮಹಾದಯಶಾಲಿಯಾದಕಾರಣ ಗೋಪಾಲಕರಿಗೆ ಸ್ವಪ್ರಕಾಶವಾಗಿ ನಿತ್ಯಸಿದ್ಧವಾದ ಪರಬ್ರಹ್ಮವಸ್ತುವನ್ನು ತೋರಿಸಿದನು; ಆ ಗೋಪರು ಬ್ರಹ್ಮವೆಂಬ ಮಡುವಿನಲ್ಲಿ ಮುಳುಗಿ ಪುನಹ ಕೃಷ್ಣನಿಂದ ಎತ್ತಲ್ಪಟ್ಟವರಾಗಿ ಅಕ್ರೂರನು ಯಮುನಾನದಿಯಲ್ಲಿ ಮುಳುಗಿ ಅಲ್ಲಿ ಕಂಡಂಥಾ ವೈಕುಂಠವನ್ನು ಕಂಡು ವೇದಗಳಿಂದ ಸ್ತುತಿಸಲ್ಪಡುವ ಶ್ರೀಕೃಷ್ಣನನ್ನು ನೋಡಿ ಆಶ್ಚರ್ಯಪಡುತಿದ್ದರು!

---

## ೨೯ನೇ ಅಧ್ಯಾಯ.

### ಗೋಪಸ್ತ್ರೀಯರು ಕೃಷ್ಣನನ್ನು ಹುಡಿಕಿಕೊಂಡು ಹೋದದ್ದು.

ಎಲೈ ಅರಸೆ, ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಶರತ್ಕಾಲಾಗಮನದಿಂದ ವಿಕಸಿತಗಳಾದ ಮಲ್ಲಿಗೇ ಪುಷ್ಪಗಳುಳ್ಳ ರಾತ್ರಿಗಳನ್ನು ನೋಡಿ ತನ್ನ ಯೋಗಮಾಯೆಯನ್ನಾಶ್ರಯಿಸಿ ರಮಿಸುವದಕ್ಕೆ ಮನಸ್ಸುಮಾಡಿದ

ಸು : ಬಳಿಕ ರಾತ್ರಿಯಲ್ಲಿ ನಕ್ಷತ್ರನಾಥನಾದ ಚಂದ್ರನು ಬಹುಕಾಲ ವಿರಹವುಳ್ಳ ಪುರುಷನು ತನಗೆ ಪ್ರಿಯಳಾದ ಸ್ತ್ರೀಯ ಮುಖವನ್ನು ಕುಂಕುಮಾದಿಗಳಿಂದ ಲೇಪನಮಾಡುವಂತೆ ಪೂರ್ವದಿಕ್ಕೆಂಬ ಸ್ತ್ರೀಯ ಮುಖವನ್ನು ಸುಖಕರಗಳಾದ ತನ್ನ ಕಿರಣಗಳೆಂಬ ಹಸ್ತಗಳಿಂದ ಸಂಧ್ಯಾರಾಗವೆಂಬ ಕುಂಕುಮದಿಂದ ಲೇಪಿಸಿ ಓಷಧಿಗಳ ಬಳಲಿಕೆಗಳನ್ನು ಪರಿಹರಿಸುತ ಉದಯಿಸಿದನು ; ಶ್ರೀಕೃಷ್ಣನು ಕುಂಕುಮಾರುಣವಾದ ಲಕ್ಷ್ಮೀದೇವಿಯ ಮುಖದಂತೆ ಪ್ರಕಾಶಿಸುವ ಪೂರ್ಣಮಂಡಲವುಳ್ಳ ಚಂದ್ರನನ್ನು ನೋಡಿ ಶೀತಳವಾದ ಚಂದ್ರಕಿರಣಗಳಿಂದ ವ್ಯಾಪ್ತವಾಗಿ ಸಮೀಪದಲ್ಲಿದ್ದ ವನವನ್ನು ಪ್ರವೇಶಿಸಿ ಸ್ತ್ರೀಯರಿಗೆ ಮನೋಹರವಾದ ಗಾನವನ್ನು ಮಾಡಿದನು ; ಆಗ ಗೋಪಸ್ತ್ರೀಯರು ಕಾಮೋದ್ದೀಪಿತವಾದ ಆ ಗಾನವನ್ನು ಕೇಳಿ ಕೃಷ್ಣನಿಂದ ಆಕರ್ಷಿಸಲ್ಪಟ್ಟ ಮನಸ್ಸುಳ್ಳವರಾಗಿ ಒಬ್ಬರೊಡನೊಬ್ಬರು ಮಾತಾಡದೆ ವೇಗದಿಂದ ಜೋಲುತಿರುವ ಕುಂಡಲಗಳುಳ್ಳವರಾಗಿ ಶ್ರೀಕೃಷ್ಣನಿರುವ ಸ್ಥಾನಕ್ಕೆ ತೆರಳಿದರು ; ಹಸುಗಳನ್ನು ಕರೆಯುತಿದ್ದ ಕೆಲವು ಸ್ತ್ರೀಯರು ಆ ಕೆಲಸವನ್ನು ಬಿಟ್ಟು ಹೊರಟರು ; ಮನೆಗಳಲ್ಲಿ ಹಾಲುಗಡಿಗೆಗಳನ್ನು ಒಲೆಯಮೇಲಿಟ್ಟು ಕಾಸುತಿದ್ದ ಕೆಲವು ಸ್ತ್ರೀಯರು ಅದು ಉಕ್ಕಿಹೋಗುವದೆಂಬ ಅರ್ಥವನ್ನಾಲೋಚಿಸದೆ ಹಾಗೇ ಬಿಟ್ಟು ಹೊರಟರು ; ಕೆಲವರು ಗೋಧೀಸಜ್ಜಿಗೆಯನ್ನು ಪಾಕಮಾಡುತಿದ್ದು ಅದನ್ನು ತೆಗದು ಕೆಳಗಿಡದೆಯೇ ಹೊರಟರು ; ಕೆಲವರು ಪತಿಪುತ್ರಾದಿಗಳಿಗೆ ಅನ್ನಾದಿಗಳನ್ನು ಬಡಿಸುತಿದ್ದ ಕೆಲಸವನ್ನು ಬಿಟ್ಟು ಹೊರಟರು ; ಕೆಲವರು ಮಕ್ಕಳಿಗೆ ಸ್ತನ್ಯವನ್ನು ಕೊಡುತಿದ್ದು ಆ ಮಕ್ಕಳನ್ನು ಬಿಟ್ಟು ಎದ್ದು ನಡೆದರು ; ಕೆಲವರು ಪತಿಶುಶ್ರೂಷೆಯನ್ನು ಮಾಡುತಿದ್ದು ಅದನ್ನು ಬಿಟ್ಟು ಶೀಘ್ರವಾಗಿ ತೆರಳಿದರು ; ಕೆಲವರು ಭೋಜನವನ್ನು ಮಾಡುವದನ್ನು ಬಿಟ್ಟು ಹೊರಟರು ; ಕೆಲವರು ಅರಸಿನವನ್ನು ತೊಡಕೊಳ್ಳುವದನ್ನು ಬಿಟ್ಟು ಹೊರಟರು ; ಕೆಲವರು ಕಣ್ಣಿಗೆ ಕಪ್ಪುಹಚ್ಚಿಕೊಳ್ಳುತಿದ್ದು ಅದು ಪೂರ್ತಿಯಾಗುವದಕ್ಕೆ ಮೊದಲೇ ಹೊರಟರು ; ಕೆಲವರು ಸೀರೆಗಳನ್ನು ಮೇಲುಕೀಳಾಗುಟ್ಟುಕೊಂಡೂ ಒಡವೆಗಳನ್ನು ವ್ಯತ್ಯಸ್ತವಾಗಿ ಧರಿಸಿಕೊಂಡೂ ಕೃಷ್ಣನ ಸಮೀಪಕ್ಕೆ ಓಡಿದರು ! ಕೆಲವು ಸ್ತ್ರೀಯರು ಪತಿಗಳಿಂದಲೂ ಪಿತೃಗಳಿಂದಲೂ ಭ್ರಾತೃಗಳಿಂದಲೂ ಬಂಧುಗಳಿಂದಲೂ ತಡೆಯಲ್ಪಟ್ಟವರಾದಾಗ್ಯೂ ಭಗವಂತನಿಂದ ಅಪಹೃತಚಿತ್ತರಾಗಿ ಹಿಂತಿರುಗದೇ ನಡೆದರು ; ಒಳಮನೆಯಲ್ಲಿದ್ದ ಕೆಲವು ಸ್ತ್ರೀಯರು ಹೊರಗೆ ಬರುವದಕ್ಕೆ ಸಂದರ್ಭವಿಲ್ಲದೆ ಕೃಷ್ಣನನ್ನೇ ಧ್ಯಾನಿಸುತ ಕಣ್ಣುಗಳನ್ನು ಮುಚ್ಚಿಕೊಂಡು ಅನುಸಂಧಾನವನ್ನು ಮಾಡುತ ತಮ್ಮ ಪ್ರಿಯನಾದ ಶ್ರೀಕೃಷ್ಣನ ವಿರಹದಿಂದುಂಟಾದ ಮಹಾ ತಾಪದಿಂದ ಆತನನ್ನು ಧ್ಯಾನಗೈದು ಸಮಸ್ತ ಪಾಪಗಳನ್ನೂ ಪರಿಹರಿಸಿಕೊಂಡು ಮಾನಸಿಕವಾದ ಆ ಭಗವಂತನ ಆಲಿಂಗನಸುಖದಿಂದ ಕ್ಷೀಣಬಂಧರಾಗಿ ಪರಮಾತ್ಮನಾದ ಕೃಷ್ಣನನ್ನು ಜಾರಪುರುಷನೆಂಬ ಬುದ್ಧಿಯಿಂದ ಕೂಡಿದವರಾದಾಗ್ಯೂ ಗುಣಮಯವಾದ ದೇಹಬಂಧವನ್ನು ತಪ್ಪಿಸಿಕೊಂಡು ಉತ್ತಮಗತಿಯನ್ನೈದಿದರು !

ಶುಕಾಚಾರ್ಯನು ಈ ಪ್ರಕಾರವಾಗಿ ನುಡಿದ ವಾಕ್ಯವನ್ನು ಕೇಳಿ ಪರೀಕ್ಷಿದ್ರಾಯನು ಆತನನ್ನು ಕುರಿತು— ಎಲೈ ಶುಕಾಚಾರ್ಯನೆ, ಗೋಪಸ್ತ್ರೀಯರು ಶ್ರೀಕೃಷ್ಣನನ್ನು ಮನೋಹರನಾದ ಜಾರಕಾಂತನೆಂದು ತಿಳಿದಿದ್ದರೇ ಹೊರತು ಪರಬ್ರಹ್ಮನೆಂದು ತಿಳಿಯಲಿಲ್ಲ ; ಮಾಯಾಜನ್ಯವಾದ ಅಜ್ಞಾನವುಳ್ಳ ಆ ಸ್ತ್ರೀಯರಿಗೆ ಸಂಸಾರಬಂಧ ಪರಿಹಾರವ್ಯಾಗಾಯಿತು? ಎಂದು ಕೇಳಿದನು.

ಆ ವಾಕ್ಯವನ್ನು ಕೇಳಿ ಶುಕಾಚಾರ್ಯನು ಆತನನ್ನು ಕುರಿತು—ಎಲೈ ಅರಸೆ, ಈ ಅರ್ಥವು ಪೂರ್ವದಲ್ಲೇ ನಿನಗೆ ನನ್ನಿಂದ ಹೇಳಲ್ಪಟ್ಟಿತು ; ಶಿಶುಪಾಲನು ಕೃಷ್ಣನಲ್ಲಿ ದ್ವೇಷದಿಂದಲೆ ಭಾವನಾದಾರ್ಢ್ಯದಿಂದ ಮುಕ್ತನಾದನು ; ಇನ್ನು ಭಗವಂತನಲ್ಲಿ ಪ್ರೀತಿಯನ್ನೇ ಮಾಡಿದವರು ಮುಕ್ತರಾಗುವದರಲ್ಲಿ ಆಶ್ಚರ್ಯವೇನು ! ಪ್ರಾಣಿಗಳ ಕ್ಷೇಮಕ್ಕೋಸ್ಕರ ಭಗವಂತನಿಗೆ ಭೂಮಿಯಲ್ಲಿ ಆವಿರ್ಭಾವವು ; ಅವ್ಯಯನಾಗಿ ಅಪ್ರಮೇಯನಾಗಿ ಗುಣರಹಿತನಾಗಿ ಮಾಯಾನಿಯಾಮಕನಾದ ಪರಬ್ರಹ್ಮನಿಗೆ ದೇಹಬಂಧವು ಸ್ವಾಭಾವಿಕವಲ್ಲ ! ಎಲೈ ಅರಸೆ, ಭಗವಂತನಲ್ಲಿ ಕಾಮಕ್ರೋಧಭಯ ಸ್ನೇಹಸಂಬಂಧ ಮೈತ್ರಿಯು ಮೊದಲಾದವಲ್ಲಿ ಯಾವದನ್ನಾದರೂ ಒಂದನ್ನು ದೃಢವಾಗಿ ನಿತ್ಯವೂ ಆಚರಿಸು

ವವರು ಆತನ ಸ್ವರೂಪವನ್ನೈದುವರು ! ಎಲೈ ಅರಸೆ, ಭಗವಂತನಾಗಿ ಯೋಗೀಶ್ವರನಾಗಿ ಶಾಶ್ವತನಾದ ಶ್ರೀಕೃಷ್ಣನ ವ್ಯಾಪಾರದಲ್ಲಿ ನೀನು ಆಶ್ಚರ್ಯಪಡಬೇಡ ; ಆತನ ಅನುಗ್ರಹದಿಂದ ಸ್ಥಾವರಾದಿಗಳೂ ಸದ್ಗತಿಯನ್ನೈದುವವು !

ಎಲೈ ಅರಸೆ, ಅನಂತರದಲ್ಲಿ ವಾಗ್ಚಾತುರ್ಯವುಳ್ಳವರೊಳಗೆ ಶ್ರೇಷ್ಠನಾಗಿ ಭಗವಂತನಾದ ಶ್ರೀಕೃಷ್ಣನು ತನ್ನನ್ನು ಹುಡಿಕಿಕೊಂಡು ಸಮೀಪಕ್ಕೆ ಬಂದ ಆ ಗೋಪಸ್ತ್ರೀಯರನ್ನು ಮರುಳುಮಾಡುತ ಅವರನ್ನು ಕುರಿತು "ಎಲೇ ಪುಣ್ಯವತಿಯರಾದ ಸ್ತ್ರೀಯರುಗಳಿರಾ, ಸುಖದಿಂದ ಬರೋಣವಾಯಿತೆ! ಬನ್ನೀ! ನಿಮಗೆ ಪ್ರಿಯವಾದ ಯಾವ ಕಾರ್ಯವನ್ನು ಮಾಡಲಿ ! ವ್ರಜವು ಕ್ಷೇಮದಲ್ಲಿದೆಯೊ ! ನೀವು ಬಂದ ನಿಮಿತ್ತವೇನು ! ಈ ರಾತ್ರಿಯು ಭಯಂಕರವಾದದ್ದು ; ಈ ವನವು ಭಯಂಕರವಾದ ದುಷ್ಟಜಂತುಗಳಿಂದ ಸೇವಿತವಾದದ್ದು ; ಆದ್ದರಿಂದ ನೀವು ವ್ರಜಕ್ಕೆ ಹೋಗೀ ; ಸ್ತ್ರೀಯರು ಇಲ್ಲಿರಬಾರದು ; ಇದರಮೇಲೆ ನಿಮ್ಮ ತಾಯಿತಂದೆಗಳೂ ಪುತ್ರಭ್ರಾತೃಗಳೂ ಪತಿಗಳೂ ನಿಮ್ಮನ್ನು ಕಾಣದೆ ಹುಡುಕುವರು ; ಬಂಧುಗಳಿಗೆ ಭಯವನ್ನುಂಟುಮಾಡಬೇಡೀ ; ಪೂರ್ಣಚಂದ್ರಕಿರಣಗಳಿಂದ ರಂಜಿತವಾಗಿ ಯಮುನಾನದಿಯ ವಾಯುವಿನಿಂದ ಕಂಪಿಸಲ್ಪಟ್ಟ ವೃಕ್ಷಗಳ ಚಿಗುರುಗಳಿಂದ ಶೋಭಿತವಾದ ಈ ವನವನ್ನು ನೋಡಿದಿರಲ್ಲ ; ಇನ್ನು ಬೇಗ ವ್ರಜಕ್ಕೆ ಹೋಗಿ ನಿಮ್ಮ ಪತಿಗಳ ಶುಶ್ರೂಷೆಯನ್ನು ಮಾಡೀ ; ನಿಮ್ಮ ಮಕ್ಕಳೂ ಕರುಗಳೂ ರೋದನಗೈಯುತ್ತಿವೆ ; ಮಕ್ಕಳಿಗೆ ಸ್ತನ್ಯಪಾನವನ್ನು ಮಾಡಿಸಿ ಹಸುಗಳನ್ನು ಕರೆದು ಕರುಗಳಿಗೆ ಕ್ಷೀರಪಾನವನ್ನು ಮಾಡಿಸೀ ! ಹಾಗಲ್ಲದೆ ನನ್ನಲ್ಲಿ ಸ್ನೇಹದಿಂದ ಕಟ್ಟಲ್ಪಟ್ಟ ಮನಸ್ಸುಳ್ಳವರಾಗಿ ಬಂದಿರುವ ಪಕ್ಷದಲ್ಲಿ ಅದು ಯುಕ್ತವು ; ನನ್ನಲ್ಲಿ ನಿಮಗೆ ಪ್ರೀತಿಯು ಅಧಿಕವಾಗಿದ್ದರೆ ನೀವು ಬಂದದ್ದು ಒಳ್ಳೇದಾಯಿತು ! ಎಲೇ ಸುಂದರೀಗಳಿರಾ, ಸ್ತ್ರೀಯರಿಗೆ ಅಕಪಟವಾದ ಪತಿಶುಶ್ರೂಷೆಯು ಉತ್ತಮಧರ್ಮವು ; ಪತಿಗಳನ್ನೂ ಬಂಧುಗಳನ್ನೂ ಪ್ರಜೆಗಳನ್ನೂ ಪೋಷಿಸುವದೇ ಸ್ತ್ರೀಯರಿಗೆ ಧರ್ಮವು ; ಪತಿಯು ದುಷ್ಟಶೀಲವುಳ್ಳವನಾದರೂ ದುರ್ಬಲನಾದರೂ ವೃದ್ಧನಾದರೂ ಜಡನಾದರೂ ರೋಗಿಯಾದರೂ ಉತ್ತಮಗತಿಯನ್ನೈದಲಿಚ್ಛೆಯುಳ್ಳ ಸ್ತ್ರೀಯರು ಉಪೇಕ್ಷೆಮಾಡಬಾರದು ; ಕುಲಸ್ತ್ರೀಯರಿಗೆ ಜಾರಸಖ್ಯವು ಸ್ವರ್ಗಪ್ರದವಲ್ಲದ್ದಾಗಿ ಯಶಸ್ಕರವಲ್ಲದ್ದಾಗಿ ಅಸಾರವಾದ್ದಾಗಿ ಭಯಪ್ರದವಾದ್ದಾಗಿ ಪರಲೋಕದಲ್ಲೂ ಭಯವನ್ನುಂಟುಮಾಡುವಂಥಾದ್ದಾಗಿ ಈ ಲೋಕದಲ್ಲಿ ನಿಂದಿತವಾದ್ದಾಗಿರುವದು ! ಎಲೇ ಸ್ತ್ರೀಯರುಗಳಿರಾ, ಮನನದಿಂದಲೂ ದರ್ಶನದಿಂದಲೂ ಧ್ಯಾನದಿಂದಲೂ ಕೀರ್ತನೆಯಿಂದಲೂ ನನ್ನಲ್ಲಿ ಚಿತ್ತವಿದ್ದರೆ ಹ್ಯಾಗೋ ಹಾಗೇ ಸಮೀಪದಲ್ಲಿದ್ದರೆ ಆದಾರ್ಢ್ಯವಿರುವದಿಲ್ಲ ; ಆದ್ದರಿಂದ ನೀವು ನಿಮ್ಮ ಮನೆಗಳಿಗೆ ನಡೆಯಿರಿ " ಎಂದು ನುಡಿದನು.

ಮನಸ್ಸಿಗೆ ಇಂಪಾಗಿಲ್ಲದ ಶ್ರೀಕೃಷ್ಣನ ಆ ಮಾತನ್ನು ಕೇಳಿ ಗೋಪಸ್ತ್ರೀಯರು ದುಃಖಿತರಾಗಿ ಭಗ್ನಸಂಕಲ್ಪರಾಗಿ ಅಧಿಕವಾದ ಚಿಂತೆಯನ್ನೈದಿ ಉಷ್ಣವಾದ ಶ್ವಾಸಗಳಿಂದ ಒಣಗುವ ಅಧರೋಷ್ಠಗಳುಳ್ಳ ತಮ್ಮ ಮುಖಗಳನ್ನು ಬೊಗ್ಗಿಸಿಕೊಂಡು ಪಾದಾಂಗುಷ್ಟದಿಂದ ಭೂಮಿಯನ್ನು ಬರೆಯುತ ಕಣ್ಣುಕಪ್ಪಿನಿಂದ ಮಿಶ್ರವಾದ ಬಾಷ್ಪಗಳಿಂದ ಕುಚಗಳ ಕುಂಕುಮಗಳನ್ನು ನೆನೆಯಿಸುತ ಮಹಾ ದುಃಖವುಳ್ಳವರಾಗಿ ಸುಮ್ಮನೆ ನಿಂತುಕೊಂಡು ಪ್ರಿಯನಲ್ಲದವನಂತೆ ಮಾತಾಡುತಿದ್ದ ತಮ್ಮ ಪ್ರಿಯನಾದ ಕೃಷ್ಣನ ನಿಮಿತ್ತವಾಗಿ ಸರ್ವಕಾಮಗಳನ್ನೂ ಬಿಟ್ಟು ಬಂದವರಾದ್ದರಿಂದ ರೋದನದಿಂದ ವಿವರ್ಣವಾದ ನೇತ್ರಗಳನ್ನು ಒರೆಸಿಕೊಂಡು ರೋಷಯುಕ್ತರಾಗಿಯೂ ಅನುರಕ್ತರಾಗಿಯೂ ಆತನನ್ನು ಕುರಿತು " ಎಲೈ ಪ್ರಭುವಾದ ಶ್ರೀಕೃಷ್ಣನೆ, ಈ ರೀತಿಯಲ್ಲಿ ಕ್ರೂರವಾದ ವಾಕ್ಯವನ್ನು ಹೇಳಬಹುದೇ! ಸರ್ವವಿಷಯಗಳನ್ನೂ ತ್ಯಜಿಸಿ ಭಕ್ತರಾಗಿ ನಿನ್ನ ಪಾದಮೂಲಕ್ಕೆ ಬಂದಿರುವ ನಮ್ಮನ್ನು ನೀನು ಬಿಡಬಹುದೇ ! ಎಲೈ ಪಡೆಯಲಶಕ್ಯನಾದ ಶ್ರೀಕೃಷ್ಣನೆ, ಆದಿಪುರುಷನಾದ ಪರಮೇಶ್ವರನು ಮೋಕ್ಷೇಚ್ಛೆಯುಳ್ಳವರಾಗಿ ಭಜಿಸುವ ಭಕ್ತರನ್ನು ತ್ಯಜಿಸುವಂತೆ ನಮ್ಮನ್ನು ತ್ಯಜಿಸಬೇಡ ! ಎಲೈ ಶ್ರೀಕೃಷ್ಣನೆ, ಪತಿ ಪುತ್ರ ಮಿತ್ರ ಬಂಧು ಪಿತೃಗಳನ್ನೂ ಸ್ತ್ರೀಯರನ್ನೂ ಉಪೇಕ್ಷಿಸಬಾರದೆಂದು ಧರ್ಮೋಪದೇಶವು ನಿನ್ನಿಂದ ಮಾಡಲ್ಪಟ್ಟದ್ದು ಸತ್ಯವೇ ಸರಿ ; ನಮಗೆ ಪ್ರಿಯನೂ ಬಂಧುವೂ ಅಂತರಾತ್ಮನೂ ನೀನೇ ಸರಿ ! ಎಲೈ ಕೃಷ್ಣನೆ, ಶಾಸ್ತ್ರಜ್ಞರಾದವರು

ಸಿಕ್ಕಪ್ರಿಯನಾಗಿ ಆತ್ಮನಾದ ನಿನ್ನಲ್ಲೇ ಪ್ರೇಮೆಯುಳ್ಳವರಾಗಿರುವರು ; ದುಃಖಪ್ರದರಾದ ಪತಿಪುತ್ರಾದಿಗಳಿಂದ ಫಲವಿಲ್ಲ! ಎಲೈ ಪರಮೇಶ್ವರನೆ, ಆದಕಾರಣ ನಮ್ಮಲ್ಲಿ ಪ್ರಸನ್ನನಾಗು! ಪದ್ಮನೇತ್ರನಾದ ಶ್ರೀಕೃಷ್ಣನೆ, ನಿನ್ನಲ್ಲಿ ಬಹುಕಾಲದಿಂದಿರಿಸಲ್ಪಟ್ಟ ನಮ್ಮ ಆಪೇಕ್ಷೆಯನ್ನು ವ್ಯರ್ಥಮಾಡಬೇಡ ; ಸುಖಸ್ವರೂಪನಾದ ನಿನ್ನಿಂದ ಅಪಹೃತವಾದ ನಮ್ಮ ಚಿತ್ತವೃತ್ತಿಯು ಮನೆಗಳಲ್ಲಿ ಹ್ಯಾಗಿದ್ದೀತು! ನಮ್ಮ ಹಸ್ತಗಳು ಗೃಹಕೃತ್ಯಗಳಲ್ಲಿ ಉದ್ಯುಕ್ತಗಳಾಗವು; ನಿನ್ನ ಪಾದವನ್ನು ಬಿಟ್ಟು ನಮ್ಮ ಕಾಲುಗಳು ಒಂದು ಹೆಜ್ಜೆಯಾದರೂ ಹಿಂದಕ್ಕೆ ಹೋಗಲಾರದಿರಲು ನಾವು ವ್ರಜಕ್ಕೆ ಹ್ಯಾಗೆ ಹೋದೇವು—ನಾವೇನುಮಾಡೇವು! ಎಲೈ ಕೃಷ್ಣನೆ, ಮುಗುಳುನಗೆಯುಕ್ತವಾದ ನಿನ್ನ ನೋಟದಿಂದಲೂ ಮಧುರವಾದ ಗಾನದಿಂದಲೂ ಹುಟ್ಟಿದ ಕಾಮಾಗ್ನಿಯನ್ನು ನಿನ್ನ ಅಧರಾಮೃತಪ್ರವಾಹದಿಂದ ನೆನೆಯಿಸು ; ಇಲ್ಲದಿದ್ದರೆ ನಿನ್ನ ವಿರಹದಿಂದುಟ್ಟಿದ ಕಾಮಾಗ್ನಿಗೆ ಶರೀರವನ್ನೊಪ್ಪಿಸಿ ನಿನ್ನ ಧ್ಯಾನವನ್ನು ಮಾಡುತ ಪ್ರಾಣಗಳನ್ನು ಬಿಡುತ್ತೇವೆ! ಎಲೈ ಕಮಲಲೋಚನನೆ, ಮಹಾಲಕ್ಷ್ಮಿಗೂ ಉತ್ಸವಪ್ರದವಾದ ನಿನ್ನ ಪಾದಮೂಲವನ್ನು ನೋಡಿದ್ದು ಮೊದಲುಗೊಂಡು ಅರಣ್ಯಜನಪ್ರಿಯನಾಗಿ ಮನೋಹರನಾದ ನಿನ್ನನ್ನು ಬಿಟ್ಟು ಮತ್ತೊಬ್ಬರ ಎದುರಾಗಿ ನಿಲ್ಲುವದಕ್ಕೆ ಶಕ್ತರಾಗದಿದ್ದೇವೆ ; ಮಹಾಲಕ್ಷ್ಮಿಯು ನಿನ್ನ ವಕ್ಷಸ್ಥಳದಲ್ಲಿ ವಾಸವನ್ನು ಮಾಡುತಿದ್ದಾಗ್ಯೂ ತುಲಸೀದೇವಿಯೊಡನೆ ಭಕ್ತರಿಂದ ಸೇವಿತವಾದ ನಿನ್ನ ಪಾದಪದ್ಮ ರಜಸ್ಸನ್ನಪೇಕ್ಷಿಸುತ್ತಾಳೆ ; ಬ್ರಹ್ಮಾದಿಗಳೂ ಲಕ್ಷ್ಮೀದೇವಿಯ ಕಟಾಕ್ಷವನ್ನು ಅಪೇಕ್ಷಿಸಿ ತಪಸ್ಸನ್ನು ಮಾಡುತ್ತಾರೆ ; ಅಂಥಾ ದೇವಿಯೂ ನಿನ್ನ ಪಾದರಜಸ್ಸನ್ನಪೇಕ್ಷಿಸುವ ಹಾಗೆ ನಾವೂ ನಿನ್ನ ಪಾದರಜಸ್ಸನ್ನಪೇಕ್ಷಿಸುತ್ತೇವೆ! ಎಲೈ ಪಾಪಪರಿಹಾರಕನಾದ ಶ್ರೀಕೃಷ್ಣನೆ, ಮನೆಗಳನ್ನು ಬಿಟ್ಟು ನಿನ್ನ ಪಾದಮೂಲವನ್ನೈದಿ ನಿನ್ನನ್ನು ಸೇವಿಸಬೇಕೆಂಬ ಆಶೆಯುಳ್ಳ ನಮ್ಮಲ್ಲಿ ಪ್ರಸನ್ನನಾಗು; ಸುಂದರವಾದ ನಿನ್ನ ನೋಟಗಳಿಂದ ಜನಿಸಿರುವ ಕಾಮದಿಂದ ತಪ್ತರಾಗುವ ನಮಗೆ ದಾಸೀಭಾವವನ್ನು ಕೊಡು! ಎಲೈ ಕೃಷ್ಣನೆ, ಮುಂಗುರುಳುಗಳಿಂದಲಂಕೃತವಾಗಿ ರತ್ನಕುಂಡಲಕಾಂತಿಯುಕ್ತವಾಗಿ ಅಧರಾಮೃತಸಮೇತವಾದ ನಿನ್ನ ಮುಖವನ್ನೂ ಅಭಯಪ್ರದವಾದ ನಿನ್ನ ಬಾಹುಯುಗ್ಮವನ್ನೂ ಮಹಾಲಕ್ಷ್ಮಿಗೆ ಮುಖಸ್ಥಳವಾದ ನಿನ್ನ ವಕ್ಷಸ್ಥಳವನ್ನೂ ನೋಡಿ ನಿನಗೆ ದಾಸಿಯರಾಗಿ ಬಂದಿದ್ದೇವೆ! ಎಲೈ ಶ್ರೀಕೃಷ್ಣನೆ, ಮಧುರವಾದ ಪಾದಗಳುಳ್ಳದ್ದಾಗಿ ದೀರ್ಘವಾದ ಸ್ವರಾಲಾಪವುಳ್ಳ ನಿನ್ನ ಗಾನವನ್ನು ಕೇಳಿ ಯಾವಸ್ತ್ರೀಯು ಮೋಹಿತಳಾಗದೆಯೂ ಸ್ವಧರ್ಮವನ್ನು ಬಿಡದೆಯೂ ಇದ್ದಾಳು! ಲೋಕತ್ರಯ ಮೋಹಕವಾದ ನಿನ್ನ ಸೌಂದರ್ಯವನ್ನು ನೋಡಿ ಗೋವುಗಳೂ ಪಕ್ಷಿಗಳೂ ವೃಕ್ಷಗಳೂ ಮೃಗಗಳೂ ಮೋಹಿತಗಳಾಗಿ ರೋಮಾಂಚವುಳ್ಳವಾಗುತಿವೆ! ಎಲೈ ನಾಥನೆ, ನೀನು ವ್ರಜದಲ್ಲಿರುವ ಜನರ ಕಷ್ಟಗಳನ್ನು ಪರಿಹರಿಸಲೋಸುಗ ದೇವರಕ್ಷಕನಾದ ಆದಿಪುರುಷನಂತೆ ಜನಿಸಿದೆ! ದೀನಬಂಧುವಾದ ಎಲೈ ಶ್ರೀಕೃಷ್ಣನೆ, ಕಿಂಕರಿಯರಾದ ನಮ್ಮ ತಪ್ತಗಳಾದ ಸ್ತನಗಳಲ್ಲಿಯೂ ಶಿರಸ್ಸುಗಳಲ್ಲಿಯೂ ನಿನ್ನ ಹಸ್ತಕಮಲವನ್ನಿರಿಸು " ಎಂದು ನುಡಿದರು.

ಈ ಪ್ರಕಾರವಾದ ಗೋಪಸ್ತ್ರೀಯರ ದೀನವಾಕ್ಯಗಳನ್ನು ಕೇಳಿ ಯೋಗೀಶ್ವರನಾಗಿ ಆತ್ಮಾರಾಮನಾದ ಶ್ರೀಕೃಷ್ಣನು ದಯಾಯುಕ್ತನಾಗಿ ನಗುತ ಅವರೊಡನೆ ರಮಿಸಿದನು ; ಉದಾರಚರಿತ್ರವುಳ್ಳವನಾಗಿ ಮನೋಹರವಾದ ಹಾಸದಿಂದ ಪ್ರಕಾಶಿಸುವ ತನುಕಾಂತಿಯುಳ್ಳ ಶ್ರೀಕೃಷ್ಣನು ತಮ್ಮ ಸವಿನೋಟಗಳುಳ್ಳ ವಿಕಸಿತವಾದ ಮುಖಗಳುಳ್ಳ ಆ ಸ್ತ್ರೀಸಮೂಹಯುಕ್ತನಾಗಿ ನಕ್ಷತ್ರಗಳಿಂದ ಯುಕ್ತನಾದ ಚಂದ್ರನಂತೆ ಪ್ರಕಾಶಿಸುತ ಅವರಿಂದ ಗಾನಮಾಡಲ್ಪಡುತ ಒಂದು ವನದಿಂದ ಮತ್ತೊಂದು ವನಕ್ಕೆ ಸಂಚರಿಸುತ ಶೀತಳವಾದ ಮಳಲುಳ್ಳ ಸೈಕತಗಳಲ್ಲಿಯೂ ನೈದಲೇ ಪರಿಮಳಯುಕ್ತವಾಗಿ ವಾಯುವಿನಿಂದ ರಮಣೀಯವಾದ ಯಮುನಾನದೀ ತೀರದಲ್ಲಿಯೂ ತನ್ನ ಬಾಹುಗಳನ್ನು ಪ್ರಸರಿಸಿ ಅವರನ್ನು ಆಲಿಂಗನಗೈಯುತ ಹಸ್ತಗಳನ್ನಿಡಿದುಕೊಂಡೂ ಕೇಶಗಳನ್ನಿಡಿದೂ ಸ್ತನಗಳನ್ನೂ ಸ್ಪರ್ಶಮಾಡಿ ನಖಕ್ಷತಗಳಗೈಯುತ ಕ್ರೀಡೆಯಿಂದಲೂ ನೋಟಗಳಿಂದಲೂ ಮುಗುಳುನಗೆಗಳಿಂದಲೂ ಅವರಿಗೆ ಕಾಮೋದ್ದೀಪನನ್ನುಂಟುಮಾಡುತ ರಮಿಸುತಿದ್ದು ತನ್ನಿಂದ ಬಹುಮಾನಿತರಾದ ಆ ಗೋಪಸ್ತ್ರೀಯರು ಲೋಕದಲ್ಲಿ ಸ್ತ್ರೀ

ಯರೊಳಗೆ ತಾವೇ ಸೌಂದರ್ಯಶಾಲಿಗಳೆಂದೂ ತಮ್ಮನ್ನೇ ಶ್ರೀಕೃಷ್ಣನು ವರಿಸಿದ್ದನೆಂದೂ ಆನಂದಪರವಶರಾಗಿರಲು ಅವರ ಸೌಂದರ್ಯಮದವನ್ನು ನೋಡಿ ಅವರ ಗರ್ವಪರಿಹಾರಾರ್ಥವಾಗಿಯೂ ಅನುಗ್ರಹಾರ್ಥವಾಗಿಯೂ ಅಲ್ಲೇ ಅಂತರ್ಧಾನವನ್ನೈದಿದನು !

## ೩೦ ನೇ ಅಧ್ಯಾಯ.

### ಗೋಪಸ್ತ್ರೀಯರು ಕೃಷ್ಣನನ್ನು ಹುಡಿಕಿದ್ದು,

ಎಲೈ ಅರಸೆ, ಶ್ರೀಕೃಷ್ಣನು ಈಪ್ರಕಾರವಾಗಿ ಅಂತರ್ಧಾನವನ್ನೈದಲು ಆ ಗೋಪಸ್ತ್ರೀಯರು ಆತನನ್ನು ಕಾಣದೆ ಹೆಣ್ಣಾನೆಯು ಮದಗಜವನ್ನು ಕಾಣದೆ ಸಂತಾಪಪಡುವಂತೆ ಬಹಳವಾಗಿ ಸಂತಾಪಪಟ್ಟರು ; ಲಕ್ಷ್ಮೀಪತಿಯಾದ ಶ್ರೀಕೃಷ್ಣನ ವಿಲಾಸಗಮನದಿಂದಲೂ ಅನುರಾಗಪೂರ್ವಕವಾದ ಮಂದಸ್ಮಿತದಿಂದಲೂ ವೈಯಾರದಿಂದಲೂ ಕಡೆಗಣ್ಣೋಟಗಳಿಂದಲೂ ಮಧುರಭಾಷಣಗಳಿಂದಲೂ ಕ್ರೀಡಾವಿಲಾಸಗಳಿಂದಲೂ ಪರವಶಚಿತ್ತರಾದ ಆ ಗೋಪಸ್ತ್ರೀಯರು ತದಾತ್ಮಕೆಯರಾಗಿ ಭಗವಂತನ ವ್ಯಾಪಾರಗಳನ್ನು ತಾವೇ ಮಾಡುತ ತಮ್ಮ ಪ್ರಿಯನಾದ ಶ್ರೀಕೃಷ್ಣನ ಗಮನ ನೋಟ ಭಾಷಣ ಮೊದಲಾದ ವ್ಯಾಪಾರಗಳಲ್ಲಿ ನಿವಿಷ್ಟವಾದ ಶರೀರವುಳ್ಳವರಾಗಿ ಒಬ್ಬೊಬ್ಬರೂ ತಾನು ಕೃಷ್ಣನೆಂದೂ ಮಿಕ್ಕವರು ಗೋಪಸ್ತ್ರೀಯರೆಂದೂ ಭಾವಿಸಿಕೊಂಡು ಕೃಷ್ಣನ ವಿಹಾರವಿಲಾಸಗಳನ್ನಾಚರಿಸಿ ವಿಹರಿಸುತ ಗುಂಪಾಗಿ ಶ್ರೀಕೃಷ್ಣನನ್ನೇ ಧ್ಯಾನಂಗೈದು ಗಾನಮಾಡುತ ಉನ್ಮತ್ತರಂತೆ ಪ್ರತಿವನದಲ್ಲಿಯೂ ಆತನನ್ನು ಹುಡಿಕಿ ಆಕಾಶದಂತೆ ಪ್ರಾಣಿಗಳ ಒಳಗೂ ಹೊರಗೂ ಪೂರ್ಣನಾದ ಆ ಭಗವಂತನನ್ನು ಕಾಣದೆ ವೃಕ್ಷಗಳನ್ನು ಕುರಿತು " ಎಲೈ ಅಶ್ವತ್ಥವೆ, ಎಲೈ ಬಸರೀಮರವೆ, ಎಲೈ ಆಲದಮರವೆ, ನಂದನಪುತ್ರನಾದ ಶ್ರೀಕೃಷ್ಣನು ಪ್ರೇಮಹಾಸಾವಲೋಕನಗಳಿಂದ ನಮ್ಮ ಮನಸ್ಸನ್ನಪಹರಿಸಿಕೊಂಡು ಹೋದನು ; ಅವನನ್ನು ನೀವು ಕಾಣಲಿಲ್ಲವೆ ! ಎಲೈ ಕುರುವಕವೆ, ಎಲೈ ಅಶೋಕವೆ, ಎಲೈ ನಾಗಕೇಸರವೃಕ್ಷವೆ, ಎಲೈ ಪುನ್ನಾಗವೃಕ್ಷವೆ, ಎಲೈ ಸಂಪಿಗೇ ವೃಕ್ಷವೆ, ಸ್ತ್ರೀಯರ ಗರ್ವವನ್ನು ಪರಿಹರಿಸುವ ಕಪಟವಾದ ನಗುವುಳ್ಳವನಾಗಿ ರಾಮಾನುಜನಾದ ಕೃಷ್ಣನು ಹೊರಟುಹೋದನು ; ಆತನನ್ನು ನೀವು ಕಾಣಲಿಲ್ಲವೆ ! ಗೋವಿಂದಚರಣಪ್ರಿಯಳಾಗಿ ಶುಭಕರಳಾದ ತುಲಸಿಯೇ, ನಿನಗೆ ಅತಿಪ್ರಿಯನಾಗಿ ಭ್ರಮರಗಳೊಡನೆ ನಿನ್ನನ್ನು ವಕ್ಷಸ್ಥಳದಲ್ಲಿ ಧರಿಸಿರುವ ಅಚ್ಯುತನು ನಿನ್ನಿಂದ ಕಾಣಲ್ಪಡಲಿಲ್ಲವೆ! ಎಲೈ ಜಾಜಿಮಲ್ಲಿಕಾ ಯೂಥಿಕಾಲತೆಗಳಿರಾ, ತನ್ನ ಹಸ್ತಸ್ಪರ್ಶದಿಂದ ನಿಮಗೆ ಪ್ರೀತಿಯನ್ನುಂಟುಮಾಡುವ ಮಾಧವನು ಹೋದದ್ದನ್ನು ನೀವು ಕಾಣಲಿಲ್ಲವೆ ! ಎಲೈ ಚೂತ ಪ್ರಿಯಾಳ ಹಲಸು ಬಂದೂಕ ಬಿಲ್ವ ನೀಪವೃಕ್ಷಗಳಿರಾ—ಮತ್ತು ಈ ಯಮುನಾನದೀತೀರದಲ್ಲಿ ಹುಟ್ಟಿರುವ ನಾನಾವಿಧಗಳಾದ ವೃಕ್ಷಗಳಿರಾ, ಕೃಷ್ಣನನ್ನು ಕಾಣದೆ ಶೂನ್ಯಮನಸ್ಕರಾದ ನಮಗೆ ಕೃಷ್ಣನ ಮಾರ್ಗವನ್ನು ತೋರಿಸಿಕೊಡಿ! ಎಲೈ ಭೂಮಿಯೆ, ನಿನ್ನಿಂದ ಯಂಥಾ ತಪಸ್ಸು ಮಾಡಲ್ಪಟ್ಟಿತೊ ! ಭಗವಂತನ ಪಾದಸ್ಪರ್ಶೋತ್ಸವದಿಂದ ರೋಮಾಂಚಿತವಾದ ಶರೀರವುಳ್ಳವಳಾಗಿ ತೋರುತ್ತೀ ! ಶ್ರೀಕೃಷ್ಣನ ಪಾದಸ್ಪರ್ಶಸಂತೋಷವುಳ್ಳವಳಾದ್ದರಿಂದಲೂ ತ್ರಿವಿಕ್ರಮನ ಮಹಾ ವಿಶಾಲವಾದ ಪಾದಸಂಬಂಧಿಯಾದ್ದರಿಂದಲೂ ವರಾಹದೇಹವುಳ್ಳ ಭಗವಂತನ ಆಲಿಂಗನವನ್ನು ಪಡೆದವಳಾದ್ದರಿಂದಲೂ ನೀನು ಶ್ರೀಕೃಷ್ಣನನ್ನು ನೋಡಿರಬೇಕು ! ಎಲೇ ಹೆಣ್ಣುಹುಲ್ಲೆಯೆ, ಮುಖ ಬಾಹು ವಕ್ಷಸ್ಥಳ ಮುಂತಾದ ಅಂಗಗಳಿಂದ ನಿಮ್ಮ ನೇತ್ರಗಳಿಗೆ ಸುಖಪ್ರದನಾದ ಶ್ರೀಕೃಷ್ಣನು ತನ್ನ ಪ್ರಿಯಳಾದ ಸ್ತ್ರೀಯೊಡನೆ ನಿನ್ನಿಂದ ಕಾಣಲ್ಪಡಲಿಲ್ಲವೆ ! ತನ್ನ ಪ್ರಿಯಳಾದ ಸ್ತ್ರೀಯ ಕುಚಕುಂಕುಮದಿಂದ ರಂಜಿತವಾದ ಕೃಷ್ಣನ ವಕ್ಷಸ್ಥಳದಲ್ಲಿರುವ ಮಲ್ಲಿಗೇ ಪುಷ್ಪಮಾಲೆಯ ಗಂಧವು ಬರುತ್ತಿದೆ ; ಅವಳ ಕುಚದಮೇಲೆ ತನ್ನ ಭುಜವನ್ನಿರಿಸಿಕೊಂಡು ಕೈಯಲ್ಲಿ ಪದ್ಮವನ್ನಿಡಿದುಕೊಂಡು ರಾಮಾನುಜನಾದ ಶ್ರೀಕೃಷ್ಣನು ಮದಾಂಧಗಳಾಗಿ ತುಲಸಿಯನ್ನಾಶ್ರಯಿಸಿಕೊಂಡಿರುವ ಭ್ರಮರಗಳಿಂದ ಅನುಸರಿಸಲ್ಪಟ್ಟವನಾಗಿ ಇಲ್ಲಿ

ಸಂಚರಿಸುತಲಿರಬೇಕು! ಎಲೈ ವೃಕ್ಷಗಳೇ ಶ್ರೀಕೃಷ್ಣನು ನಿಮ್ಮಿಂದ ಮಾಡಲ್ಪಟ್ಟ ನಮಸ್ಕಾರವನ್ನು ಶ್ಲಾಘಿಸುತ ನಿಮ್ಮನ್ನು ಪ್ರೇಮವೀಕ್ಷಣಗಳಿಂದ ನೋಡಿದನೇ!—ಎಲೇ ಸ್ತ್ರೀಯರುಗಳಿರ—ಈ ಲತೆಗಳು ವೃಕ್ಷದ ಬಾಹುಗಳನ್ನಾಲಿಂಗಿಸಿಕೊಂಡಿದ್ದಾಗ್ಯೂ ಕೃಷ್ಣನ ನಖಸ್ಪರ್ಶದಿಂದ ರೋಮಾಂಚಿತವುಳ್ಳವಾಗಿವೆ; ಈ ಲತೆಗಳನ್ನು ಕೇಳಿರೀ!'' ಎಂದು ಈರೀತಿಯಲ್ಲಿ ಉನ್ಮತ್ತರಾಗಿ ಮಾತಾಡಿಕೊಂಡು ಕೃಷ್ಣನನ್ನು ಹುಡುಕುತ ಆ ಭಗವಂತನ ತದಾತ್ಮ್ಯಕವನ್ನೈದಿ ಆತನ ವಿಲಾಸಗಳನ್ನು ಆಚರಿಸಿದರು; ಒಬ್ಬಳು ತನ್ನನ್ನು ಕೃಷ್ಣನೆಂದೂ ಮತ್ತೊಬ್ಬಳನ್ನು ಪೂತನೆಯೆಂದೂ ಭಾವಿಸಿ ಅವಳ ಸ್ತನ್ಯವನ್ನು ಪಾನಮಾಡಿದಳು; ಒಬ್ಬಳು ಬಾಲಕನಾದ ಕೃಷ್ಣನಂತೆ ಮತ್ತೊಬ್ಬಳನ್ನು ಶಕಟಾಸುರನೆಂದು ಕಾಲುಗಳಿಂದ ಒದ್ದಳು; ಒಬ್ಬಳು ಬಾಲಕನಾದ ಕೃಷ್ಣನಂತಿರಲು ಮತ್ತೊಬ್ಬಳು ದೈತ್ಯನಂತೆ ಅವಳನ್ನು ಅಪಹರಿಸಿದಳು; ಇಬ್ಬರು ಬಲರಾಮ ಕೃಷ್ಣರಂತೆಯೂ ಮಿಕ್ಕವರು ಗೋಪಾಲಕರಂತೆಯೂ ಕರುಗಳಂತೆಯೂ ಭಾವಿಸಿಕೊಂಡು ಕ್ರೀಡಿಸಿದರು; ಒಬ್ಬಳು ಕೃಷ್ಣನಂತೆ ಮತ್ತೊಬ್ಬಳನ್ನು ವತ್ಸಾಸುರನೆಂದು ತಿರುಗಿಸಿ ಕಡೆಹಿದಳು; ಬಕಾಸುರನಂತೆ ನಟಿಸುತಿದ್ದ ಒಬ್ಬಳನ್ನು ಮತ್ತೊಬ್ಬಳು ಕೃಷ್ಣನಂತೆ ನಟಿಸುತ ಪ್ರಹರಿಸಿದಳು; ಕೆಲವರು ದೂರದಲ್ಲಿರುವ ಗೋಪಾಲಕರಂತೆ ಕೃಷ್ಣನಂತಿದ್ದ ಒಬ್ಬಳನ್ನು ಕರೆದರು; ಒಬ್ಬಳು ಕೃಷ್ಣನಂತೆ ವೇಣುಗಾನಂಗೈಯಲು ಕಡಮೋ ಸ್ತ್ರೀಯರು ಅವಳನ್ನು ಸ್ತುತಿಮಾಡಿದರು; ಒಬ್ಬಳು ತಾನೇ ಕೃಷ್ಣನೆಂದು ಮತ್ತೊಬ್ಬಳ ಭುಜದಮೇಲೆ ಕೈಯಿಟ್ಟುಕೊಂಡು ಮಂದಗಮನವುಳ್ಳವಳಾದಳು; ಮತ್ತೊಬ್ಬಳು ಕೃಷ್ಣನಂತೆ ಮಿಕ್ಕವರನ್ನು ಕುರಿತು ವಾಯುವರ್ಷಗಳಿಂದ ಭಯಪಡದಿರಬೇಕೆಂದೂ ತಾನು ಅವರನ್ನು ರಕ್ಷಿಸುವದಾಗಿಯೂ ನುಡಿಯುತ ಏಕಹಸ್ತದಿಂದ ಗೋವರ್ಧನಪರ್ವತವನ್ನೆತ್ತಿದಂತೆ ಕೈಯನ್ನು ಮೇಲಕ್ಕೆತ್ತಿಕೊಂಡು ನಿಂತಳು! ಎಲೈ ಅರಸೆ, ಒಬ್ಬಳು ಕಾಳೀಯಸರ್ಪವನ್ನು ನಿಗ್ರಹಿಸಿದ ಕೃಷ್ಣನಂತೆ ಮತ್ತೊಬ್ಬಳನ್ನು ಕೆಳಗೆ ಮಲಗಿಸಿ ಅವಳನ್ನು ಕಾಳೀಯ ಸರ್ಪದಂತೆ ಭಾವಿಸಿ ಕಾಲಿಂದ ಮೆಟ್ಟಿಕೊಂಡು "ಎಲೇ ದುಷ್ಟಸರ್ಪವೆ, ನೀನು ಇಲ್ಲಿರದೆ ಆಚೆಗೆಹೋಗು; ನಾನು ಕೃಷ್ಣನು; ದುಷ್ಟರಾದ ನಿಮ್ಮಂಥಾವರನ್ನು ನಿಗ್ರಹಿಸುವೆನು" ಎಂದು ಹೇಳಿದಳು; ಒಬ್ಬಳು ತಾನೇ ಕೃಷ್ಣನೆಂದು ಭಾವಿಸಿಕೊಂಡು "ಎಲೈ ಗೋಪಾಲಕರೆ, ಜ್ವಲಿಸುವ ಕಾಡುಗಿಚ್ಚನ್ನು ನೋಡಿದಿರೇ! ಕಣ್ಣುಮುಚ್ಚಿಕೊಳ್ಳೀ; ನಿಮಗೆ ಶೀಘ್ರವಾಗಿ ಕ್ಷೇಮವನ್ನು ಮಾಡುತ್ತೇನೆ" ಎಂದು ನುಡಿದಳು; ಒಬ್ಬಳು ಯಶೋದಾದೇವಿಯಂತೆ ಕೃಷ್ಣನಂತಿದ್ದ ಮತ್ತೊಬ್ಬಳನ್ನು ಕುರಿತು "ಎಲೈ ಕೃಷ್ಣನೆ, ಬೆಣ್ಣೆಯನ್ನು ಭಕ್ಷಿಸುವದಕ್ಕೋಸ್ಕರ ಮಡಿಕೆಗಳನ್ನು ಒಡೆಯುವ ನಿನ್ನನ್ನು ಒರಳಿನಲ್ಲಿ ಕಟ್ಟಿಹಾಕುತ್ತೇನೆ" ಎಂದು ಪುಷ್ಪಮಾಲೆಯಿಂದ ಕಟ್ಟಲು ಅವಳು ಅತಿ ಸುಂದರವಾದ ನೇತ್ರಗಳುಳ್ಳ ಮುಖವನ್ನು ಮುಚ್ಚಿಕೊಂಡು ಭಯಪಡುತಿದ್ದ ಕೃಷ್ಣನಂತೆ ಮುಖವನ್ನು ಮುಚ್ಚಿಕೊಂಡಿದ್ದಳು! ಈ ರೀತಿಯಲ್ಲಿ ನಟಿಸುತ ಆ ಗೋಪಸ್ತ್ರೀಯರು ಬೃಂದಾವನದ ಲತೆಗಳನ್ನೂ ವೃಕ್ಷಗಳನ್ನೂ ಕುರಿತು ಶ್ರೀಕೃಷ್ಣನೆಲ್ಲೆಂದು ಕೇಳುತ ಧ್ವಜರೇಖೆಗಳಿಂದಲೂ ಚಕ್ರರೇಖೆಗಳಿಂದಲೂ ಪದ್ಮರೇಖೆಗಳಿಂದಲೂ ಅಂಕುಶರೇಖೆಗಳಿಂದಲೂ ಯವಾದಿ ರೇಖೆಗಳಿಂದಲೂ ಚಿಹ್ನಿತಗಳಾದ ಶ್ರೀಕೃಷ್ಣನ ಹೆಜ್ಜೆಗಳನ್ನು ನೋಡಿ ಅವು ನಿಶ್ಚಯವಾಗಿ ನಂದಪುತ್ರನಾಗಿ ಮಹಾತ್ಮನಾದ ಶ್ರೀಕೃಷ್ಣನವೇ ಸರಿಯೆಂದು ತಿಳಿದು ಆಮೇಲೆ ಒಬ್ಬ ಸ್ತ್ರೀಯ ಹೆಜ್ಜೆಗಳಿಂದ ಕೂಡಿದ್ದ ಆ ಹೆಜ್ಜೆಗಳನ್ನು ನೋಡಿ ಆತನನ್ನು ಹುಡುಕುತ ವ್ಯಸನಯುಕ್ತರಾಗಿ ಒಬ್ಬರನ್ನೊಬ್ಬರು ಕರೆದು "ಎಲೇ ಸಖಿಯರುಗಳಿರಾ, ಶ್ರೀಕೃಷ್ಣನ ಭುಜದಮೇಲೆ ತನ್ನ ಭುಜವನ್ನಿರಿಸಿಕೊಂಡು ಆವನ ಸಂಗಡ ಗಂಡಾನೆಯೊಡನೆ ನಡೆಯುವ ಹೆಣ್ಣಾನೆಯಂತೆ ಹೋಗುತಿರುವ ಒಬ್ಬಳ ಹೆಜ್ಜೆಗಳು ಕಾಣಲ್ಪಡುತ್ತಿವೆ ನೋಡಿರೀ; ಆ ಸ್ತ್ರೀಯಿಂದ ಭಗವಂತನಾದ ಹರಿಯು ಪೂರ್ವದಲ್ಲಿ ಬಹಳವಾಗಿ ಆರಾಧಿಸಲ್ಪಟ್ಟಿರಬೇಕು; ಆದ್ದರಿಂದ ಕೃಷ್ಣನು ನಮ್ಮನ್ನು ಬಿಟ್ಟು ಅವಳೊಡನೆ ಕೂಡಿ ರಹಸ್ಯವಾಗಿ ಹೋಗಿದ್ದಾನೆ! ಎಲೇ ಸಖಿಯರುಗಳಿರಾ, ಗೋವಿಂದನ ಪಾದಪದ್ಮ ರೇಣುಗಳು ಮಹಾ ಪುಣ್ಯಾತ್ಮಗಳಾದಂಥಾವು; ಬ್ರಹ್ಮಾದಿಗಳೂ ಈ ರೇಣುಗಳನ್ನು ಧರಿಸುತ್ತಾರೆ! ಆ ಸ್ತ್ರೀಯ ಈ ಹೆಜ್ಜೆಗಳು ನಮಗೆ ವ್ಯಸನವನ್ನುಂಟುಮಾಡುತ್ತಿವೆ; ಸಾವಿಷ್ಟುಮಂದಿಯೂ ವ್ಯಸನ

ಪಡುತ್ತಿರಲು ಅವಳೊಬ್ಬಳು ಮಾತ್ರವೇ ಶ್ರೀಕೃಷ್ಣನ ಅಧರಚುಂಬನೋತ್ಸವವನ್ನನುಭವಿಸುತ್ತಿದ್ಧಳೆ! ಎಲೈ ಸಖಿಯರುಗಳಿರಾ, ಇಲ್ಲಿ ಆ ಸ್ತ್ರೀಯ ಹೆಜ್ಜೆಗಳು ಕಾಣಲ್ಪಡುವದಿಲ್ಲ; ಆದ್ದರಿಂದ ತೃಣಗಳಿಂದ ಪೀಡಿತವಾದ ಪಾದಗಳುಳ್ಳ ಆ ಸ್ತ್ರೀಯನ್ನು ಶ್ರೀಕೃಷ್ಣನು ಎತ್ತಿಕೊಂಡು ಹೋಗಿರಬೇಕು; ಇಲ್ಲಿಂದ ಮುಂದೆ ಕೃಷ್ಣನ ಹೆಜ್ಜೆಗಳು ಆ ಸ್ತ್ರೀಯ ಭಾರದಿಂದ ಬಹಳವಾಗಿ ಊರಲ್ಪಟ್ಟು ಹಳ್ಳಗಳಾಗಿವೆ; ಕಾಮುಕನಾದ ಕೃಷ್ಣನು ಆ ಸ್ತ್ರೀಯನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ನಡೆದಿದ್ದಾನೆ; ಈ ಸ್ಥಳಗಳಲ್ಲಿ ಪುಷ್ಪಗಳನ್ನು ಕುಯ್ದು ಆ ಸ್ತ್ರೀಗೆ ಮುಡಿಯುವದಕ್ಕೋಸ್ಕರ ಅವಳನ್ನಿಳಿಸಿ ಪುಷ್ಪಗಳನ್ನು ಕುಯ್ದಿದ್ಧಾನೆ; ಮೇಲಿರುವ ಪುಷ್ಪಗಳನ್ನು ಕುಯ್ಯಲೋಸುಗ ಮೆಟ್ಟುಂಗಾಲಿಟ್ಟುಕೊಂಡ ಕೃಷ್ಣನು ಪುಷ್ಪಾಪಚಯವನ್ನು ಮಾಡಿದ್ಧಾನೆ; ಆದ್ದರಿಂದ ಹೆಜ್ಜೆಗಳು ಮುಂದೆ ಹಳ್ಳಗಳಾಗಿವೆ; ಹಿಂಗಾಲುಗಳು ಊರಲೇ ಇಲ್ಲ; ಈ ಸ್ಥಳದಲ್ಲಿ ಆ ಸ್ತ್ರೀಯ ಕೇಶಗಳನ್ನು ಶಿಕ್ಕುಬಿಡಿಸಿ ಜಡೆಯನ್ನು ಹಣೆದು ಪುಷ್ಪಗಳನ್ನು ಮುಡಿಸಿದ್ಧಾನೆ!'' ಎಂದು ನುಡಿಯುತ ಕೃಷ್ಣನನ್ನು ಹುಡುಕುತಿದ್ದರು!

ಎಲೈ ಅರಸೆ, ಆ ಸಮಯದಲ್ಲಿ ಶ್ರೀಕೃಷ್ಣನು ಆತ್ಮರಾಮನಾದಾಗ್ಯೂ ಕಾಮುಕರ ದೈನ್ಯದ ರೀತಿಯನ್ನು ತೋರಿಸುತ ಸ್ತ್ರೀಯರಿಗೆ ಪರರ ಶ್ರೇಯಸ್ಸನ್ನು ನೋಡಿ ಸಹಿಸುವದಶಕ್ಯವೆಂಬ ಅರ್ಥವನ್ನು ತೋರಿಸುತ ಒಬ್ಬ ಸ್ತ್ರೀಯನ್ನು ಗೋಪ್ಯವಾಗಿ ಕರೆದುಕೊಂಡು ಹೋಗಿ ಅವಳೊಡನೆ ರಮಿಸುತಿದ್ದನು; ಮಿಕ್ಕ ಗೋಪಸ್ತ್ರೀಯರನ್ನು ವಂಚಿಸಿ ತನ್ನೊಡನೆ ಕೃಷ್ಣನು ರಮಿಸುವದನ್ನು ಕಂಡು ಆ ಸ್ತ್ರೀಯು ತಾನು ಬಹು ಶ್ರೇಷ್ಠಳೆಂದೆಣಿಸಿ ಗರ್ವಿತಳಾಗಿ ಕೃಷ್ಣನನ್ನು ಕುರಿತು "ಎಲೈ ಕೃಷ್ಣನೆ, ನಾನು ನಡೆಯಲಾರೆನು; ನಿನ್ನ ಮನಸ್ಸುಬಂದ ಸ್ಥಳಕ್ಕೆ ನನ್ನನ್ನೆತ್ತಿಕೊಂಡು ಹೋಗು'' ಅಂದಳು.

ಆ ವಾಕ್ಯವನ್ನು ಕೇಳಿ ಕೃಷ್ಣನು "ನನ್ನ ಹೆಗಲಮೇಲೆ ಕುಳಿತುಕೋ'' ಎಂದು ನುಡಿದು ಅಂತರ್ಧಾನವನ್ನೈದಿದನು! ಆ ಸ್ತ್ರೀಯು ವ್ಯಸನಪಡುತ "ಹಾ ನಾಥನೆ, ರಮಣನೆ, ಪ್ರಿಯನಾದವನೆ, ಮಹಾ ಭುಜನಾದ ಶ್ರೀ ಕೃಷ್ಣನೆ, ಎಲ್ಲಿದ್ದೀ! ದೀನಳಾಗಿ ನಿನ್ನ ದಾಸಿಯಾದ ನನಗೆ ದರ್ಶನವನ್ನು ಕೊಡು" ಎಂದು ಪ್ರಲಾಪಿಸುತಿದ್ದಳು. ಆಗ ಶ್ರೀಕೃಷ್ಣನನ್ನು ಹುಡಿಕಿಕೊಂಡು ಹೋದ ಗೋಪಸ್ತ್ರೀಯರು ಆತನ ವಿರಹದಿಂದ ದುಃಖಿತಳಾಗಿ ವಿವಶಳಾದ ಆ ಸ್ತ್ರೀಯನ್ನು ಕಂಡು ಅವಳು ಕೃಷ್ಣನಿಂದ ತನಗಾದ ಬಹುಮಾನವನ್ನೂ ತನ್ನ ಗರ್ವದಿಂದಾದ ಅವಮಾನವನ್ನೂ ಹೇಳಲು ಆಶ್ಚರ್ಯಪಟ್ಟು ಆ ರಾತ್ರಿಯಲ್ಲಿ ಬೆಳದಿಂಗಳಿದ್ದ ಪರ್ಯಂತವು ಕೃಷ್ಣನನ್ನು ಹುಡುಕಿ ಆಮೇಲೆ ಆ ಸ್ತ್ರೀಯೊಡನೆ ಹಿಂತಿರುಗಿ ಕೃಷ್ಣನಲ್ಲೇ ಮನಸ್ಸುಳ್ಳವರಾಗಿ ಆತನ ಪ್ರಸ್ತಾಪಗಳನ್ನೇ ನುಡಿಯುತ ಅವನ ವ್ಯಾಪಾರಗಳನ್ನೇ ಆಚರಿಸುತ ತದಾತ್ಮಕರಾಗಿ ಆತನ ಗುಣಕಥನಗಳನ್ನು ಗಾನಂಗೈಯುತ ತಮ್ಮ ಮನೆಗಳನ್ನು ಮರೆತು ಪುನಹ ಯಮುನಾನದಿಯ ಮಳಲುದಿಣ್ಣೆಗೆ ಹೋಗಿ ಗುಂಪಾಗಿ ಕೂಡಿಕೊಂಡು ಅವನ ಆಗಮನವನ್ನು ನಿರೀಕ್ಷಿಸಿಕೊಂಡು ಗಾನಂಗೈಯುತಿದ್ದರು!

---

### ೩೧ ನೇ ಅಧ್ಯಾಯ.

### ಕೃಷ್ಣನನ್ನು ಕಾಣದೇ ಗೋಪಿಯರು ಪ್ರಲಾಪಿಸಿದ್ದು.

ಎಲೈ ಪರೀಕ್ಷಿದ್ರಾಯನೆ, ಆ ಗೋಪಿಯರು ಕೃಷ್ಣನನ್ನೇ ಚಿಂತಿಸುತ "ಎಲೈ ಪ್ರಾಣಕಾಂತನಾದ ಶ್ರೀಕೃಷ್ಣನೆ, ನೀನು ಆವಿರ್ಭವಿಸಿದ್ದರಿಂದ ವ್ರಜವು ಸರ್ವೋತ್ಕೃಷ್ಟವಾಯಿತು; ಲಕ್ಷ್ಮಿಯು ಸಾನ್ನಿಧ್ಯವಾಗಿದ್ಧಾಳೆ; ನಿನಗೋಸ್ಕರವೇ ಪ್ರಾಣಗಳನ್ನು ಧರಿಸಿರುವವರಾಗಿ ನಿನ್ನ ಸಂಬಂಧಿಗಳಾಗಿ ದಿಕ್ಕುದಿಕ್ಕುಗಳಲ್ಲಿ ನಿನ್ನನ್ನು ಹುಡುಕುತ್ತಿರುವ ನಮಗೆ ಪ್ರತ್ಯಕ್ಷವಾಗು! ಎಲೈ ಸಂಭೋಗಪತಿಯಾಗಿ ಇಷ್ಟಾರ್ಥಪ್ರದನಾದ ಶ್ರೀಕೃಷ್ಣನೆ, ಶರತ್ಕಾ

ಅದರಲ್ಲಿ ಕೋಮಲವಾಗಿ ಬೆಳೆಯುವ ಉತ್ತಮವಾದ ಪದ್ಮಗರ್ಭದ ಕಾಂತಿಯನ್ನಪಹರಿಸುವ ನಿನ್ನ ದೃಷ್ಟಿಪ್ರಸಾರದಿಂದಲೇ ದ್ರವ್ಯವನ್ನು ಪಡೆಯದೆ ನಿನಗೆ ಸ್ವಾಧೀನರಾಗಿ ದಾಸಿಯರಾದ ನಮ್ಮನ್ನು ಪ್ರಹರಿಸುವದರಿಂದ ನಿನಗೆ ಸ್ತ್ರೀವಧೆ ದೋಷವು ಬರದಿರುವದೇ ! ಎಲೈ ಶ್ರೇಷ್ಠನಾದ ಕೃಷ್ಣನೆ, ವಿಷಮಯವಾದ ಉದಕದದೆಶೆಯಿಂದಲೂ ಸರ್ಪಾಕಾರನಾದ ರಾಕ್ಷಸನದೆಶೆಯಿಂದಲೂ ಮಹಾವೃಷ್ಟಿಯದೆಶೆಯಿಂದಲೂ ಚಂಡಮಾರುತನ ದೆಶೆಯಿಂದಲೂ ಸಿಡಿಲಿನ ಪ್ರಹಾರದ ದೆಸೆಯಿಂದಲೂ ಮಯಪುತ್ರನಾದ ವೃಷಭಾಸುರನಿಂದಲೂ ಮತ್ತು ಅನೇಕವಾದ ಮಹಾ ಭಯದದೆಶೆಯಿಂದಲೂ ನಮ್ಮನ್ನು ರಕ್ಷಿಸಿದ ನೀನು ಈಗ ಯಾಕೆ ಉಪೇಕ್ಷೆಯನ್ನು ಮಾಡುತ್ತಿ ! ಎಲೈ ಪರಮಮಿತ್ರನಾದ ಶ್ರೀಕೃಷ್ಣನೆ, ನೀನು ನಮ್ಮಂಥಾ ಸ್ತ್ರೀಯರಿಗೆ ಮಾತ್ರವೆ ಸಂತೋಷಕರನಲ್ಲ ; ಸಮಸ್ತ ಪ್ರಾಣಿಗಳಿಗೂ ಬುದ್ಧಿಸಾಕ್ಷಿಯಾದವನು ; ನೀನು ಜಗದ್ರಕ್ಷಣಾರ್ಥವಾಗಿ ಬ್ರಾಹ್ಮಣರಿಂದ ಪ್ರಾರ್ಥಿಸಲ್ಪಟ್ಟು ಸಾತ್ವತಕುಲದಲ್ಲಿ ಅವತರಿಸಿದೆ ! ಎಲೈ ವೃಷ್ಣಿಕುಲಶ್ರೇಷ್ಠನಾದ ಶ್ರೀಕೃಷ್ಣನೆ, ಸಂಸಾರಭಯದಿಂದ ನಿನ್ನ ಪಾದವನ್ನೈದಿರುವ ಸತ್ಪುರುಷರಿಗೆ ಅಭಯಪ್ರದನಾಗಿ ಇಷ್ಟಾರ್ಥಪ್ರದಳಾದ ಲಕ್ಷ್ಮೀದೇವಿಯನ್ನು ಪಾಣಿಗ್ರಹಣವನ್ನು ಮಾಡಿದ ನಿನ್ನ ಕರಕಮಲವನ್ನು ನಮ್ಮ ಶಿರಸ್ಸಿನಲ್ಲಿರಿಸು ! ವ್ರಜವಾಸಿಗಳಾದ ಜನರ ಕಷ್ಟವನ್ನು ಪರಿಹರಿಸುವ ವೀರನೇ—ಸ್ವಜನರ ಗರ್ವವನ್ನು ಪರಿಹರಿಸುವ ನಗುವುಳ್ಳವನೆ—ಶ್ರೀಕೃಷ್ಣನೆ, ನಿನ್ನನ್ನೇ ನಂಬಿರುವ ಸೇವಕರಾದ ನಮಗೆ ಸುಂದರವಾದ ನಿನ್ನ ಮುಖಪದ್ಮವನ್ನು ತೋರಿಸು ! ಎಲೈ ಶ್ರೀಕೃಷ್ಣನೆ, ಪ್ರಣತರಾದ ಪ್ರಾಣಿಗಳ ಪಾಪನಾಶಕವಾದ ಪಶುಗಳನ್ನನುಸರಿಸಿ ಸಂಚರಿಸುವಂಥಾ ಕಾಂತಿಗೆ ಆವಾಸಸ್ಥಾನವಾದ ಕಾಳೀಯಸರ್ಪದ ಹೆಡೆಗಳಲ್ಲಿಟ್ಟ ನಿನ್ನ ಪಾದಪದ್ಮವನ್ನು ನಮ್ಮ ಕುಚಗಳಮೇಲಿಟ್ಟು ನಮ್ಮ ವಿರಹವ್ಯಥೆಯನ್ನು ಪರಿಹರಿಸು ! ಎಲೈ ಪದ್ಮಲೋಚನನಾದ ಶ್ರೀಕೃಷ್ಣನೆ, ಮನೋಹರವಾದ ಮಾತುಗಳುಳ್ಳದ್ದಾಗಿ ವಿದ್ವಾಂಸರ ಚಿತ್ತಕ್ಕೆ ಸಂತೋಷಕರವಾಗಿ ಮಧುರವಾದ ನಿನ್ನ ವಾಕ್ಕಿನಿಂದಲೂ ಅಧರಾಮೃತದಿಂದಲೂ ನಿನ್ನ ಕಿಂಕರೀಯರಾಗಿ ಮೋಹಪರವಶರಾದ ನಮ್ಮನ್ನು ಸಂತೋಷಪಡಿಸು ! ಎಲೈ ಶ್ರೀಕೃಷ್ಣನೆ, ಸಂಸಾರತಾಪತಪ್ತರಾದ ಜನರನ್ನು ಜೀವಿಸುವಂತೆ ಮಾಡುವಂಥಾದ್ದಾಗಿ ಕವಿಗಳಿಂದ ಹೊಗಳಲ್ಪಡುವಂಥಾದ್ದಾಗಿ ಪಾಪಪರಿಹಾರಕವಾಗಿ ಶ್ರೋತ್ರಸುಖಕರವಾಗಿ ಶ್ರೀಕರವಾಗಿ ವಿಸ್ತೃತವಾಗಿ ಅಮೃತಕ್ಕೆ ಸಮವಾದ ನಿನ್ನ ಚರಿತವನ್ನು ಈ ಭೂಮಿಯಲ್ಲಿ ಹೇಳುವಂಥಾವರು ಜನ್ಮಾಂತರದಲ್ಲಿ ಬಹಳ ದಾನಧರ್ಮಗಳನ್ನು ಮಾಡಿದವರು ! ಎಲೈ ಕಪಟಿಯಾದ ಪ್ರಿಯನೆ, ನಿನ್ನ ಮುಗುಳುನಗೆಯು ಪ್ರೇಮಾರ್ದ್ರವಾದ ನೋಟವು ಕ್ರೀಡೆಯು ಮನಸ್ಸಿಗೆ ಇಂಪಾದ ನರ್ಮಾಲಾಪಗಳು ಮೊದಲಾದವು ಸ್ಮರಣೆಗೆ ಬಂದು ನಮ್ಮನ್ನು ವ್ಯಥೆಪಡಿಸುತ್ತಿವೆ ! ಎಲೈ ಕಾಂತನೆ, ನೀನು ಗೋವುಗಳನ್ನು ಸಂಚಾರಂಗೈಸಿಕೊಂಡು ವ್ರಜದಿಂದ ಹೊರಡುವಾಗ ಪದ್ಮದಂತೆ ಸುಂದರವಾದ ನಿನ್ನ ಪಾದವು ಸಣ್ಣಕಲ್ಲುಗಳಿಂದಲೂ ತೃಣಗಳಿಂದಲೂ ಉಪದ್ರವವನ್ನೈದುವವೆಂದು ನಮ್ಮ ಮನಸ್ಸು ವ್ಯಥೆಪಡುವವು ; ಸಾಯಂಕಾಲದಲ್ಲಿ ಗೋವುಗಳನ್ನು ಮನೆಗೆ ಕರೆದುಕೊಂಡು ಬರುವಾಗ ನೀಲವಾದ ಕುರುಳುಗಳಿಂದ ಆವೃತವಾಗಿ ಭೃಂಗಯುಕ್ತವಾದ ಪದ್ಮದಂತೆ ಶೋಭಿಸುತ ಗೋಧೂಳಿಗಳಿಂದ ವ್ಯಾಪ್ತವಾದ ಮುಖವುಳ್ಳವನಾಗಿ ಆ ಮುಖದರ್ಶನದಿಂದ ನಮ್ಮ ಮನಸ್ಸಿನಲ್ಲಿ ಕಾಮವಿಕಾರವನ್ನುಂಟುಮಾಡುತಿದ್ದೆ ! ಎಲೈ ಮನೋವ್ಯಥೆಪರಿಹಾರಕನಾದ ರಮಣನೆ, ನಿನ್ನನ್ನು ನಮಸ್ಕರಿಸುವ ಜನರ ಇಷ್ಟಾರ್ಥಪ್ರದವಾದ್ದಾಗಿ ಬ್ರಹ್ಮನಿಂದ ಪೂಜಿತವಾದ್ದಾಗಿ ಭೂಮಂಡಲಕ್ಕೆ ಭೂಷಣವಾದ್ದಾಗಿ ಕಷ್ಟಕಾಲದಲ್ಲಿ ಸ್ಮರಿಸುವವರ ಕಷ್ಟಗಳನ್ನು ಪರಿಹರಿಸುವಂಥಾದ್ದಾಗಿ ಶುಭಕರವಾದ ನಿನ್ನ ಪಾದಪದ್ಮವನ್ನು ನಮ್ಮ ಮಸ್ತಕಗಳಲ್ಲಿರಿಸು ! ಎಲೈ ವೀರನಾದ ಶ್ರೀಕೃಷ್ಣನೆ, ರತಿಸುಖವನ್ನು ವೃದ್ಧಿಪಡಿಸುವಂಥಾದ್ದಾಗಿ ಶೋಕಪರಿಹಾರಕವಾಗಿ ಉತ್ಕೃಷ್ಟಸ್ವರವುಳ್ಳ ಕೊಳಲಿನಿಂದ ಸೋಕಿಸಲ್ಪಟ್ಟದ್ದಾಗಿ ಮನುಷ್ಯರಿಗೆ ಅನ್ಯವಾದ ಸಾರ್ವಭೌಮತ್ವಾದಿ ಸುಖಗಳಲ್ಲಿ ಅಪೇಕ್ಷೆಯನ್ನು ತಪ್ಪಿಸುವಂಥಾ ನಿನ್ನ ಅಧರಾಮೃತವನ್ನು ನಮಗೆ ಕೊಡು ! ಎಲೈ ಶ್ರೀಕೃಷ್ಣನೆ, ನೀನು ಹಗಲಿನಲ್ಲಿ ಪಶುಗಳೊಡನೆ ವನವನ್ನು ಕುರಿತು ಹೋಗುವಾಗ ನಿನ್ನನ್ನು ನೋಡದಿರುವ ನಮಗೆ ಒಂದು ಕ್ಷಣವು ಒಂದು ಯುಗದಂತೆ ಕಳೆಯುವದು ; ವಕ್ರಗಳಾದ ಮುಂಗುರುಳುಗಳುಳ್ಳ ದಿವ್ಯವಾದ ನಿನ್ನ ಮು

ಖವನ್ನು ಅನುರಾಗದಿಂದ ನೋಡುವ ಜನರ ನೇತ್ರಗಳಲ್ಲಿ ರೆಪ್ಪೆಹುಯ್ಯೋಣವನ್ನು ನಿರ್ಮಿಸಿದ ಬ್ರಹ್ಮನು ಅಜ್ಞಾನೇ ಸರಿ! ಎಲೈ ಅಚ್ಯುತನೆ, ಪತಿಗಳನ್ನೂ ಪುತ್ರರನ್ನೂ ಸಂಬಂಧಿಗಳನ್ನೂ ಭ್ರಾತೃಗಳನ್ನೂ ಬಾಂಧವರನ್ನೂ ಉಲ್ಲಂಘಿಸಿ ನಿನ್ನ ವೇಣಗಾನದಿಂದ ಮೋಹಿತರಾಗಿ ಅದರ ಗುರುತುನಿಂದಲೆ ನಿನ್ನನ್ನು ಹುಡಿಕಿಕೊಂಡು ಬಂದೆವು; ಹೀಗೆ ರಾತ್ರಿಕಾಲದಲ್ಲಿ ಬಂದ ಸ್ತ್ರೀಯರನ್ನು ಯಾವ ಪುರುಷನಾದರೂ ತ್ಯಾಗಮಾಡುವನೇ! ನೀನು ಕಪಟಿಯಾದ್ದರಿಂದ ನಮ್ಮನ್ನು ಉಪೇಕ್ಷಿಸುತ್ತೀ! ಎಲೈ ಶ್ರೀಕೃಷ್ಣನೆ, ಕಾಮೋದ್ದೀಪಕವಾದ ನಿನ್ನ ಚಟೂಕ್ತಿಗಳನ್ನೂ ಮುಗುಳುನಗೆಯುಕ್ತವಾದ ನಿನ್ನ ಮುಖವನ್ನೂ ಪ್ರೇಮಾರ್ದ್ರವಾದ ನಿನ್ನ ನೋಟವನ್ನೂ ಲಕ್ಷ್ಮಿಗೆ ಆವಾಸಸ್ಥಾನವಾಗಿ ವಿಶಾಲವಾದ ನಿನ್ನ ವಕ್ಷಸ್ಥಳವನ್ನೂ ನೋಡಿ ನಮಗೆ ನಿನ್ನಲ್ಲಪೇಕ್ಷೆಯುಂಟಾಗಿ ನಮ್ಮ ಮನಸ್ಸು ಮೋಹಿತವಾಗಿದೆ! ಎಲೈ ನಾಥನೆ, ಸರ್ವಲೋಕಶುಭ್ರವಾದ ನಿನ್ನ ಆವಿರ್ಭಾವವು ವ್ರಜವಾಸಿಗಳಾದ ಸರ್ವಜನರಿಗೂ ಪಾಪಪರಿಹಾರಕವಾದ್ದು; ನಿನ್ನಲ್ಲಿ ಆಸಕ್ತಚಿತ್ತವುಳ್ಳ ನಮಗೆ ಸ್ವಜನರ ಹೃದ್ರೋಗಪರಿಹಾರಕವಾದ ಸೌಖ್ಯವನ್ನು ಸ್ವಲ್ಪ ಕೊಡು! ಎಲೈ ಪ್ರಿಯನಾದ ಶ್ರೀಕೃಷ್ಣನೆ, ಅತಿ ಕೋಮಲವಾಗಿ ಮೃದುವಾದ ನಿನ್ನ ಪಾದಪದ್ಮವನ್ನು ಕಠಿಣಗಳಾದ ನಮ್ಮ ಮಸ್ತಕಗಳಲ್ಲಿರಿಸುವದಕ್ಕೆ ಭಯಪಟ್ಟು ಮೆಲ್ಲಗಿರಿಸಿಕೊಳ್ಳುತ್ತೇವೆ; ಅಂಥಾ ಪಾದಪದ್ಮದಿಂದ ನೀನು ವನದಲ್ಲಿ ಸಂಚರಿಸುವದರಿಂದ ಸಣ್ಣ ಶಿಲೆಗಳಿಂದಲೂ ಮುಳ್ಳುಗಳಿಂದಲೂ ನಿನ್ನ ಪಾದಪದ್ಮವು ಉಪದ್ರವಪಡುವದೆಂದು ನಿನ್ನನ್ನೇ ನಂಬಿ ಜೀವಿಸುವ ನಮ್ಮ ಬುದ್ಧಿಯು ವ್ಯಸನವನ್ನೈದುತಿದೆ" ಎಂದು ಗಾನಂಗೈಯುತಿದ್ದರು!

## ೩೨ನೇ ಅಧ್ಯಾಯ.

### ಶ್ರೀಕೃಷ್ಣನು ಗೋಪಸ್ತ್ರೀಯರಿಗೆ ಕಾಣಿಸಿಕೊಂಡದ್ದು.

ಎಲೈ ಅರಸೆ, ಈ ರೀತಿಯಲ್ಲಿ ಆ ಗೋಪಿಕಾಸ್ತ್ರೀಯರು ಗಾನಂಗೈಯುತ ಕೃಷ್ಣದರ್ಶನದಲ್ಲಿ ಅತ್ಯಾಸಕ್ತರಾಗಿ ಸ್ವರಯುಕ್ತವಾಗಿ ರೋದನಂಗೈದರು; ಆಗ ಶ್ರೀಕೃಷ್ಣನು ಮುಗುಳುನಗೆಯಿಂದ ರಮ್ಯವಾದ ಮುಖಕಮಲವುಳ್ಳವನಾಗಿ ಪೀತಾಂಬರಧಾರಿಯಾಗಿ ಮನ್ಮಥನಿಗೂ ಮೋಹಕನಾಗಿ ಆ ಗೋಪಿಕಾಸ್ತ್ರೀಯರಿಗೆ ಪ್ರತ್ಯಕ್ಷವಾದನು; ಅವರು ತಮ್ಮ ಪ್ರಾಣಕಾಂತನಾದ ಕೃಷ್ಣನನ್ನು ನೋಡಿ ಪ್ರೇಮದಿಂದ ವಿಕಸಿತವಾದ ನೇತ್ರಗಳುಳ್ಳವರಾಗಿ ಎಲ್ಲರು ಏಕಕಾಲದಲ್ಲಿ ಕರಚರಣಾದಿ ಶರೀರಾವಯವಗಳು ಪ್ರಾಣವನ್ನೈದಿ ಏಳುವಹಾಗೆದ್ದು ಆತನ ಮುಖಸೌಂದರ್ಯವೆಂಬ ಅಮೃತವನ್ನು ನೇತ್ರಗಳೆಂಬ ಪಾತ್ರಗಳಿಂದ ಪಾನಂಗೈದು ಸತ್ಪುರುಷರು ಕೃಷ್ಣನ ಪಾದಪದ್ಮವನ್ನು ಎಷ್ಟು ಧ್ಯಾನಂಗೈದರೂ ದಣಿವಿಲ್ಲದಿರುವಂತೆ ದಣಿವಿಲ್ಲದಿದ್ದರು; ಒಬ್ಬ ಸ್ತ್ರೀಯು ಕೃಷ್ಣನ ಹಸ್ತವನ್ನು ತನ್ನ ಹಸ್ತದ್ವಯದಿಂದಿಡಿದಳು; ಒಬ್ಬಳು ಚಂದನಲಿಪ್ತವಾದ ಆ ಕೃಷ್ಣನ ಬಾಹುವನ್ನು ಹೆಗಲಿನಲ್ಲಿಡಿದಳು; ಒಬ್ಬಳು ತನ್ನ ಬಗಸೆಯಿಂದ ಶ್ರೀಕೃಷ್ಣನ ಮುಖಸ್ತವಾದ ತಾಂಬೂಲವನ್ನು ಗ್ರಹಿಸಿದಳು; ಒಬ್ಬಳು ಆತನ ಪಾದಪದ್ಮವನ್ನು ವಿರಹತಪ್ತವಾದ ತನ್ನ ಕುಚಗಳಲ್ಲಿರಿಸಿಕೊಂಡಳು; ಒಬ್ಬಳು ಹುಬ್ಬುಗಂಟುಹಾಕಿಕೊಂಡು ಪ್ರೇಮಾಧಿಕ್ಯದಿಂದಲೂ ಕಾಮಾಭಿನಿವೇಶದಿಂದಲೂ ಪರವಶಳಾಗಿ ಹಲ್ಲುಮುಡಿಯನ್ನು ಕಚ್ಚಿಕೊಂಡು ತೀಕ್ಷ್ಣವಾದ ಕಡೆಗಣ್ಣೋಟಗಳಿಂದ ಪ್ರಹರಿಸುವವಳಂತಿದ್ದಳು; ಒಬ್ಬಳು ರೆಪ್ಪೆಹಾಕದಿದ್ದ ನೇತ್ರಗಳಿಂದ ಆತನನ್ನು ನೋಡುತಿದ್ದಳು: ಮತ್ತೊಬ್ಬಳು ತನ್ನ ನೇತ್ರಮಾರ್ಗದಿಂದ ಕೃಷ್ಣನನ್ನು ಹೃದಯದಲ್ಲಿ ಸೇರಿಸಿಕೊಂಡು ನೇತ್ರವನ್ನು ಮುಚ್ಚಿಕೊಂಡು ಮನಸ್ಸಿನಲ್ಲೇ ಆಲಿಂಗನಮಾಡಿಕೊಂಡು ರೋಮಾಂಚವುಳ್ಳವಳಾಗಿ ಯೋಗಿಯಂತೆ ಪರವಶಳಾಗಿದ್ದಳು! ಈ ರೀತಿಯಲ್ಲಿ ಸಮಸ್ತ ಗೋಪಸ್ತ್ರೀಯರೂ ಶ್ರೀಕೃಷ್ಣನ ದರ್ಶನದಿಂದುಂಟಾದ ಉತ್ಸವದಿಂದ ಸುಖಿತರಾಗಿ ಪರಬ್ರಹ್ಮನನ್ನೈದಿದ ಜನರು ಸಂಸಾರತಾಪವನ್ನು ಬಿಟ್ಟಂತೆ ವಿರಹತಾಪವನ್ನೂ ಶೋಕವನ್ನೂ ಬಿಟ್ಟು ಆನಂದಭರಿತರಾಗಿ ತನ್ನನ್ನು ಸುತ್ತಿಕೊಂಡಿರಲು ಶ್ರೀಕೃಷ್ಣನು ಸತ್ವಾದಿ ಶಕ್ತಿಗಳಿಂದ ಸುತ್ತಲ್ಪಟ್ಟ ಪರಮಾತ್ಮನಂತೆ ಪ್ರಕಾಶಿಸುತ

ವಿಕಸಿತಗಳಾದ ಕುಂದ ಮಂದಾರ ಪುಷ್ಪಗಳ ಪರಿಮಳಯುಕ್ತವಾದ ಮಂದಮಾರುತವನ್ನಾಶ್ರಯಿಸಿ ಬರುವ ಭ್ರಂಗಗಳುಳ್ಳದ್ದಾಗಿ ಶರತ್ಕಾಲ ಚಂದ್ರನ ಬೆಳದಿಂಗಳಿಂದ ಅಪಹೃತವಾದ ಅಂಧಕಾರವುಳ್ಳದ್ದಾಗಿ ಶುಭಕರವಾದ ಯಮುನಾನದಿಯ ತೆರೆಗಳೆಂಬ ಹಸ್ತಗಳಿಂದ ಹರಹಲ್ಪಟ್ಟ ಸಣ್ಣಮಳಲುಳ್ಳ ಒಂದು ಸೈಕತರಾಶಿಗೆ ಆ ಗೋಪಸ್ತ್ರೀಯರನ್ನು ಕರೆದುಕೊಂಡು ಹೋದನು ; ಆ ಸ್ತ್ರೀಯರು ಆ ಭಗವಂತನಿಂದುಂಟಾದ ಸಂತೋಷದಿಂದ ಮನೋವ್ಯಥೆಯನ್ನು ಬಿಟ್ಟು ಕರ್ಮಕಾಂಡರೂಪಗಳಾದ ಶ್ರುತಿಗಳು ಧರ್ಮಾರ್ಥಕಾಮಮಾತ್ರ ಪ್ರತಿಪಾದಕಗಳಾಗಿ ಪರಮಾತ್ಮನನ್ನು ಕಾಣದಿದ್ದು ಆಮೇಲೆ ಜ್ಞಾನಕಾಂಡರೂಪವಾಗಿ ಪರಬ್ರಹ್ಮನನ್ನು ತಿಳಿಯುವಂತೆ ಪೂರ್ಣಮನೋರಥರಾಗಿ ತಮ್ಮ ಕುಚಕುಂಕುಮಾಂಕಿತಗಳಾದ ಶೀರೆಗಳ ಶರಗುಗಳಿಂದ ಶ್ರೀಕೃಷ್ಣನಿಗೆ ಹಾಸಿಗೆಯನ್ನು ಕಲ್ಪಿಸಿದರು ; ಮಹಾಯೋಗಿಗಳ ಹೃದಯಮಧ್ಯದಲ್ಲಿ ಕಲ್ಪಿತವಾದ ವಾಸವುಳ್ಳ ಭಗವಂತನಾದ ಶ್ರೀಕೃಷ್ಣನು ಲೋಕತ್ರಯಶೋಭಾಲಕ್ಷ್ಮಿಗೆ ಮುಖ್ಯವಾಸವಾದ ಶರೀರವುಳ್ಳವನಾಗಿ ಆ ಗೋಪಸ್ತ್ರೀಯರಿಂದ ರಚಿತವಾದ ಆ ಹಾಸಿಗೆಯಲ್ಲಿ ಕುಳಿತುಕೊಂಡು ಆ ಸ್ತ್ರೀಸಮೂಹದಿಂದ ಪರಿವೃತನಾಗಿ ಪ್ರಕಾಶಿಸಿದನು ! ಅನಂತರದಲ್ಲಿ ಮಂದಹಾಸಯುಕ್ತವಾದ ವಿಲಾಸವೂ ಮನೋಹರವಾದ ನೋಟವೂ ಚಲಿಸುತ್ತಿರುವ ಹುಬ್ಬುಗಳೂ ಉಳ್ಳ ಆ ಗೋಪಿಕಾಸ್ತ್ರೀಯರು ಕಾಮೋದ್ದೀಪಕನಾದ ಶ್ರೀಕೃಷ್ಣನನ್ನು ಬಹುಮಾನದಿಂದ ಪೂಜಿಸಿ ಆತನ ಪಾದಗಳನ್ನೂ ಹಸ್ತಗಳನ್ನೂ ಮೆಲ್ಲಗೆ ಒತ್ತುತ್ತ ಸ್ವಲ್ಪ ಕೋಪವುಳ್ಳವರಾಗಿ ಆತನನ್ನು ಕುರಿತು " ಎಲೈ ಶ್ರೀಕೃಷ್ಣನೆ, ಲೋಕದಲ್ಲಿ ಕೆಲವರು ತಮ್ಮನ್ನು ಭಜಿಸುವವರನ್ನು ಭಜಿಸುವರು ; ಕೆಲವರು ತಮ್ಮನ್ನು ಭಜಿಸದಿರುವವರನ್ನು ಭಜಿಸುವರು ; ಕೆಲವರು ತಮ್ಮನ್ನು ಭಜಿಸುವವರನ್ನು ಭಜಿಸದಿರುವರು ; ಇವುಗಳ ಕಾರಣವನ್ನು ನಮಗೆ ಹೇಳು " ಎಂದು ಕೇಳಿದರು.

ಶ್ರೀಕೃಷ್ಣನು " ಎಲೇ ಸ್ತ್ರೀಯರೇ, ಉಪಕಾರ ಪ್ರತ್ಯುಪಕಾರರೂಪವಾಗಿ ಪರಸ್ಪರವಾಗಿ ಭಜಿಸುವವರು ಸ್ವಾರ್ಥಸಂಪಾದನಾರ್ಥವಾಗಿ ಭಜಿಸುವರು ; ಅವರಿಗೆ ಧರ್ಮದೃಷ್ಟಿಯಿಲ್ಲ ; ಮಿತ್ರತ್ವವೂ ಇಲ್ಲ ; ಅವರದು ಸ್ವಕಾರ್ಯನಿಮಿತ್ತವಾದ ನಟನವು ! ತಮ್ಮನ್ನು ಭಜಿಸದಿರುವ ಜನರನ್ನು ಭಜಿಸುವ ಜನರು ಕರುಣಾಶಾಲಿಗಳು ; ಎಲ್ಲರಲ್ಲೂ ಪ್ರೀತಿಯುಳ್ಳವರು ; ಅವರಿಗೆ ಧರ್ಮಸಿದ್ಧಿಯೂ ಮಿತ್ರತ್ವವೂ ಉಂಟಾಗುವದು ; ತಮ್ಮನ್ನು ಭಜಿಸುವ ಜನರನ್ನು ಭಜಿಸದವರು ಸ್ವಸ್ವರೂಪಾನಂದವನ್ನನುಭವಿಸಿಕೊಂಡಿರುವವರು—ಪೂರ್ಣಕಾಮರಾಗಿ ವಿಷಯಾಪೇಕ್ಷೆಯಿಲ್ಲದವರು—ಕೃತಜ್ಞರಲ್ಲದ ಮೂಢರು—ಉಪಕಾರವನ್ನರಿಯದ ಗುರುದ್ರೋಹಿಗಳು ಎಂದು ನಾಲ್ಕು ಪ್ರಕಾರವಾಗಿರುವರು ! ಎಲೇ ಸ್ತ್ರೀಯರುಗಳಿರ, ನಾನು ಈ ಪೂರ್ವೋಕ್ತರಾದ ಜನರಲ್ಲೊಬ್ಬನಲ್ಲ ; ಮಹಾ ದಯಾಶಾಲಿಯಾಗಿ ಪರಮಮಿತ್ರನಾದವನು ; ಆದಕಾರಣ ನಾನು ನನ್ನನ್ನು ಭಜಿಸುವ ಜನರನ್ನು ಭಜಿಸುವದಿಲ್ಲ ; ಮತ್ತು ನನ್ನನ್ನು ಭಜಿಸಲೆಂದು ಉಪೇಕ್ಷೆಯಿಂದಿರುವವನಂತಿರುವೆನು ; ಅದರಿಂದ ಸ್ವಾಧೀನವಾದ ಧನವು ನಷ್ಟವಾದರೆ ತದೇಕಧ್ಯಾನದಿಂದ ಕ್ಷುತ್ಪಿಪಾಸೆಯನ್ನರಿಯದ ಪುರುಷನಂತೆ ನನ್ನನ್ನು ಭಜಿಸುವರು ! ಎಲೇ ಸ್ತ್ರೀಯರುಗಳಿರಾ, ಈ ರೀತಿಯಲ್ಲಿ ನನ್ನ ನಿಮಿತ್ತವಾಗಿ ಲೋಕಾಪವಾದವನ್ನೂ ಶಾಸ್ತ್ರವಿರೋಧವನ್ನೂ ಸ್ವಜನರನ್ನೂ ಉಪೇಕ್ಷಿಸಿ ನನ್ನಲ್ಲಾಸಕ್ತರಾಗಿ ನನ್ನನ್ನು ಚಿಂತಿಸುತಿರುವ ನಿಮಗೆ ನನ್ನಲ್ಲಿ ಪ್ರೇಮಾತಿಶಯವುಂಟಾಗಿ ನನ್ನನ್ನೇ ಅನುವರ್ತಿಸುವಂತೆ ಮಾಡಲೋಸುಗ ನಾನು ನಿಮ್ಮ ಕಣ್ಣಿಗೆ ಕಾಣದೆ ತಿರೋಹಿತನಾಗಿ ನಿಮ್ಮ ಪ್ರೇಮಪ್ರಲಾಪಗಳನ್ನು ಕೇಳುತಲಿದ್ದೆನು ; ಆದಕಾರಣ ನನ್ನಲ್ಲಿ ಅಸೂಯೆಪಡಬೇಡಿ ; ನೀವು ನನಗೆ ಪ್ರಿಯತಮರು ! ಎಲೇ ಪ್ರಾಣಕಾಂತೆಯರಿರಾ, ನೀವು ಬಿಡಲಶಕ್ಯವಾದ ಗೃಹಾದ್ಯಭಿಮಾನವನ್ನು ನಿಶ್ಶೇಷವಾಗಿ ಬಿಟ್ಟು ನನ್ನನ್ನೇ ಭಜಿಸುತ್ತಿದ್ದೀರಿ ; ನೀವು ಮಾಡುವ ಸವಿರಾಚೀನವಾದ ನನ್ನ ಧ್ಯಾನವ್ಯಾಪಾರವನ್ನು ತಿಳಿದು ಅದಕ್ಕೆ ಪ್ರತ್ಯುಪಕಾರವನ್ನು ಮಾಡುವದಕ್ಕೆ ನಾನು ಬ್ರಹ್ಮಕಲ್ಪಪರ್ಯಂತವಾದ ಕಾಲದಿಂದಲೂ ಸಮರ್ಥನಲ್ಲ ; ನೀವು ಮಾಡುವ ಸಾಧುಕೃತ್ಯವೇ ನಿಮಗೆ ಪ್ರತ್ಯುಪಕಾರವನ್ನು ಮಾಡುವದಾದ್ದರಿಂದ ನಿಮ್ಮ ಮನೋರಥವು ಪೂರ್ಣವಾಗುವದು " ಎಂದು ನಿರೂಪಿಸಿದನು.

## ೩೩ ನೇ ಅಧ್ಯಾಯ.

### ಕೃಷ್ಣನು ಗೋಪಸ್ತ್ರೀಯರೊಡನೆ ರಾಸಕ್ರೀಡೆಯಾಡಿದ್ದು.

ಎಲೈ ಅರಸೆ, ಈ ಪ್ರಕಾರವಾಗಿ ಶ್ರೀಕೃಷ್ಣನಿಂದ ಹೇಳಲ್ಪಟ್ಟ ಅಮೃತವಾಕ್ಯವನ್ನು ಕೇಳಿ ಆ ಗೋಪಸ್ತ್ರೀಯರು ಶ್ರೀಕೃಷ್ಣನ ಅಂಗಸ್ಪರ್ಶದಿಂದ ವಿರಹತಾಪವನ್ನು ಪರಿಹರಿಸಿಕೊಂಡು ಸಂತುಷ್ಟರಾದರು; ಅನಂತರದಲ್ಲಿ ಗೋವಿಂದನು ಆ ಸ್ಥಳದಲ್ಲಿ ಪರಸ್ಪರವಾಗಿ ಭುಜಗಳನ್ನು ಸೇರಿಸಿಕೊಂಡು ವರ್ತುಲಾಕಾರವಾಗಿ ನಿಂತಿರುವ ಆ ಗೋಪಸ್ತ್ರೀಯರೊಡನೆ ಒಡಮುಂದಿ ಸ್ತ್ರೀಯರಿಂದ ಏಕಕಾಲದಲ್ಲಿ ಮಾಡಲ್ಪಡುವ ನಾಟ್ಯವಾದ ರಾಸಕ್ರೀಡೆಯನ್ನು ತೊಡಗಿ ತಾನು ಅನೇಕರೂಪನಾಗಿ ಎರಡೆರಡು ಸ್ತ್ರೀಯರ ಮಧ್ಯದಲ್ಲಿ ಒಂದೊಂದು ರೂಪದಿಂದಿದ್ದುಕೊಂಡು ಮಂಡಲಾಕಾರವಾಗಿ ನರ್ತನವನ್ನು ಮಾಡುತ ಗಾನವನ್ನು ಮಾಡುತ ಕ್ರೀಡಿಸಿದನು! ಆಗ ಶ್ರೀಕೃಷ್ಣನ ರಾಸಕ್ರೀಡಾಮಹೋತ್ಸವವನ್ನು ನೋಡಲೋಸುಗ ವಿಮಾನಾರೂಢರಾಗಿ ದೇವತೆಗಳು ಆಕಾಶದಲ್ಲಿ ತುಂಬಿದರು; ದೇವದುಂದುಭಿಗಳು ಧ್ವನಿಗೈಯಲ್ಪಟ್ಟವು; ಪುಷ್ಪವೃಷ್ಟಿಗಳು ಸುರಿದವು; ಗಂಧರ್ವರು ಗಾನಂಗೈದರು; ದೇವತೆಗಳು ನರ್ತನಂಗೈದರು! ಅನೇಕ ಕೃಷ್ಣಮೂರ್ತಿಗಳಿಂದಲೂ ಅನೇಕ ಗೋಪಸ್ತ್ರೀಯರಿಂದಲೂ ಯುಕ್ತವಾದ ಆ ರಾಸಮಂಡಲದಲ್ಲಿ ಆ ಸ್ತ್ರೀಯರ ಕಡಗಗಳು ಕಾಲಂದಿಗೆಗಳು ಕಾಲುಂಗುರಗಳು ಒಡ್ಯಾಣದ ಕಿರಿಘಂಟೆಗಳು ಗೆಜ್ಜೆಗಳು ಭುಜಕೀರ್ತಿಗಳು ಮುಂತಾದ ಭೂಷಣಗಳ ನಾದಗಳು ಮೆರೆಯುತಿದ್ದವು; ಆ ಗೋಪಸ್ತ್ರೀಯರ ಮಧ್ಯದಲ್ಲಿ ನೀಲಮೇಘಶ್ಯಾಮನಾದ ಶ್ರೀಕೃಷ್ಣನು ಸ್ವರ್ಣಮಯವಾದ ಹಾರಮಧ್ಯದಲ್ಲಿರುವ ಮರಕತ ಮಾಣಿಕ್ಯದಂತೆ ಪ್ರಕಾಶಿಸಿದನು! ಆ ಗೋಪಿಕಾಸ್ತ್ರೀಯರು ಪಾದವಿನ್ಯಾಸಗಳಿಂದಲು ಹಸ್ತಚಾಲನಗಳಿಂದಲೂ ಮುಗುಳುನಗೆಯಿಂದ ಯುಕ್ತವಾದ ಹುಬ್ಬುವಿಲಾಸಗಳಿಂದಲೂ ಬಳುಕುವ ನಡಗಳಿಂದಲೂ ಕುಲುಕುವ ಸ್ತನಗಳಿಂದಲೂ ಕಪೋಲಗಳಲ್ಲಿ ಜೋಲುವ ಓಲೆಗಳಿಂದಲೂ ಬೆವರಿದ ಮುಖಗಳುಳ್ಳವರಾಗಿ ಕೇಶಗ್ರಂಥಿಗಳೂ ವಸ್ತ್ರಗ್ರಂಥಿಗಳೂ ಶಿಥಿಲವಾಗುತಿರಲು ಶ್ರೀಕೃಷ್ಣನ ಸಂಸ್ಪರ್ಶದಿಂದ ಮುದಿತರಾಗಿ ರಾಗಯುಕ್ತವಾದ ಕಂಠಸ್ವರವುಳ್ಳವರಾಗಿ ನರ್ತನಂಗೈಯುತ ಘಟ್ಟಿಯಾಗಿ ಗಾನಂಗೈದರು! ಒಬ್ಬ ಗೋಪಸ್ತ್ರೀಯು ಕೃಷ್ಣನೊಡನೆ ಷಡ್ಜಾದಿ ಸ್ವರವಿಭಾಗದಿಂದ ಗಾನವನ್ನು ಮಾಡಿ ಆತನಿಂದ ಶ್ಲಾಘಿತಳಾಗಿ ಧ್ರುವತಾಳಕ್ಕೆ ಸರಿಯಾಗಿ ಗಾನನರ್ತನಗಳನ್ನು ಮಾಡಿದಳು; ಒಬ್ಬಳು ರಾಸನರ್ತನದಿಂದ ಶ್ರಾಂತಗಳಾಗಿ ಶಿಥಿಲವಾದ ಕಡಗಗಳೂ ಮಲ್ಲಿಗೆ ಪುಷ್ಪಮಾಲಿಕೆಗಳೂ ಉಳ್ಳವಳಾಗಿ ತನ್ನ ಪಾರ್ಶ್ವದಲ್ಲಿದ್ದ ಶ್ರೀಕೃಷ್ಣನ ಹೆಗಲಿನಮೇಲೆ ಭುಜವನ್ನಿರಿಸಿದಳು; ಒಬ್ಬಳು ತನ್ನ ಹೆಕ್ಕತ್ತಿನಮೇಲೆ ಕೈಹಾಕಿಕೊಂಡಿದ್ದ ಕೃಷ್ಣನ ನೈದಿಲೇವಾಸನೆಯುಳ್ಳ ಚೆಂದನದಿಂದ ಲಿಪ್ತವಾದ ಭುಜವನ್ನಾಘ್ರಾಣಂಗೈದು ಚುಂಬನಮಾಡಿದಳು; ಒಬ್ಬಳು ನರ್ತನದಿಂದ ಚಲಿಸುತಿದ್ದ ಕುಂಡಲಗಳ ಕಾಂತಿಯಿಂದಲಂಕೃತವಾದ ತನ್ನ ಕಪೋಲವನ್ನು ಶ್ರೀಕೃಷ್ಣನ ಗಂಡಸ್ಥಳದಲ್ಲಿರಿಸಲು ಅದನ್ನು ಶ್ರೀಕೃಷ್ಣನು ಚುಂಬನಂಗೈದನು; ಮತ್ತೊಬ್ಬಳು ಧ್ವನಿಗೈಯುತಿದ್ದ ಕಾಲಂದಿಗೆಗಳೂ ಒಡ್ಯಾಣಗಳೂ ಉಳ್ಳವಳಾಗಿ ಗಾನಪೂರ್ವಕವಾಗಿ ನಾಟ್ಯವನ್ನು ಮಾಡುತ ಶ್ರಾಂತಳಾಗಿ ಪಾರ್ಶ್ವದಲ್ಲಿದ್ದ ಶ್ರೀಕೃಷ್ಣನ ಹಸ್ತವನ್ನು ತನ್ನ ಕುಚಗಳಮೇಲಿರಿಸಿಕೊಂಡಳು! ಈ ಪ್ರಕಾರದಲ್ಲಿ ಆ ಗೋಪಸ್ತ್ರೀಯರು ಲಕ್ಷ್ಮೀಪತಿಯಾದ ಶ್ರೀಕೃಷ್ಣನನ್ನು ಪತಿಯಾಗಿ ಪಡೆದು ಆತನ ಭುಜಗಳಿಂದ ಗ್ರಹಿಸಲ್ಪಟ್ಟ ಕಂಠಗಳುಳ್ಳವರಾಗಿಯೂ ಕರ್ಣಾಭರಣಗಳಾದ ನೈದಿಲೆಗಳಿಂದಲೂ ಮುಂಗುರುಳುಗಳಿಂದಲೂ ವ್ಯಾಪ್ತವಾದ ಕಪೋಲಗಳಿಂದಲೂ ಶೋಭಿತವಾದ ಮುಖಕಾಂತಿಯುಳ್ಳವರಾಗಿಯೂ ಕಡಗ ಕಾಲಂದಿಗೆ ಒಡ್ಯಾಣಗಳ ಧ್ವನಿಗಳೆಂಬ ವಾದ್ಯಗಳಿಂದ ಯುಕ್ತರಾಗಿಯೂ ತಮ್ಮ ಕೇಶಗಳ ದೆಸೆಯಿಂದ ಜಾರಿಬೀಳುವ ಪುಷ್ಪಮಾಲೆಗಳುಳ್ಳವರಾಗಿಯೂ ಭ್ರಮರಗಳೆಂಬ ಗಾಯಕರುಳ್ಳವರಾಗಿಯೂ ಆ ರಾಸಸಭೆಯಲ್ಲಿ ಕೃಷ್ಣನೊಡಗೂಡಿ ನರ್ತನಂಗೈದರು; ಲಕ್ಷ್ಮೀಪತಿಯಾದ ಶ್ರೀಕೃಷ್ಣನೂ ಅದೇ ರೀತಿಯಲ್ಲಿ ಆಲಿಂಗನಗಳಿಂದಲೂ ಹಸ್ತಸ್ಪರ್ಶಗಳಿಂದಲೂ ಪ್ರೇಮಪೂರ್ಣವಾದ ನೋಟಗಳಿಂದಲೂ ಉತ್ತಮಲೀಲೆಗಳಿಂದಲೂ ಮಂದಹಾಸಗಳಿಂದಲೂ ಕೂಡಿದವನಾಗಿ ಬಾಲಕನು ತನ್ನ ಪ್ರತಿಬಿಂಬವನ್ನು ನೋಡಿ ಕ್ರೀಡಿಸುವಂತೆ ಆ ಗೋಪಸ್ತ್ರೀಯರೊ

ಆನೆ ಕ್ರೀಡಿಸಿದನು ! ಎಲೈ ಪರೀಕ್ಷಿದ್ರಾಜನೆ, ಆ ಗೋಪಸ್ತ್ರೀಯರು ಶ್ರೀಕೃಷ್ಣನ ಅಂಗಸ್ಪರ್ಶದಿಂದುಂಟಾದ ಆನಂದದಿಂದ ಪರವಶವಾದ ಸರ್ವೇಂದ್ರಿಯಗಳುಳ್ಳವರಾಗಿ ಶಿಥಿಲಗಳಾದ ಪುಷ್ಪಮಾಲೆಗಳೂ ವಸ್ತ್ರಭೂಷಣಗಳೂ ಉಳ್ಳವರಾಗಿ ಬಿಚ್ಚಲ್ಪಟ್ಟ ಕೇಶಗಳನ್ನೂ ವಸ್ತ್ರಗಳನ್ನೂ ಕುಪ್ಪಸಗಳನ್ನೂ ಯಥಾಪ್ರಕಾರವಾಗಿ ಕಟ್ಟಿಕೊಳ್ಳುವ ದಕ್ಕೂ ತೋರದೆ ವಿವಶರಾದರು ! ಆಗ ಅಂತರಿಕ್ಷದಲ್ಲಿ ಬಂದಿದ್ದ ದೇವಸ್ತ್ರೀಯರು ಕೃಷ್ಣನ ವಿಲಾಸಕ್ರೀಡೆಯನ್ನು ನೋಡಿ ಕಾಮಪೀಡಿತರಾಗಿ ಮೋಹಿತರಾದರು ; ನಕ್ಷತ್ರಗಣಸಮೇತನಾದ ಚಂದ್ರನು ಆಶ್ಚರ್ಯಪಟ್ಟನು ! ಭಗವಂತನಾದ ಶ್ರೀಕೃಷ್ಣನು ಆತ್ಮಾರಾಮನಾದಾಗ್ಯೂ ಅಷ್ಟುಮಂದಿ ಗೋಪಸ್ತ್ರೀಯರೊಡನೆಯೂ ಅಷ್ಟುಮಂದಿ ಕೃಷ್ಣನಾಗಿ ಅವರೊಡನೆ ವಿಹರಿಸುತ ರತಿವಿಹಾರದಿಂದ ಶ್ರಾಂತರಾದ ಆ ಸ್ತ್ರೀಯರ ಮುಖಗಳನ್ನು ಸುಖಕರವಾದ ತನ್ನ ಹಸ್ತದಿಂದ ತಡವರಿಸುತಿದ್ದನು ; ಆ ಗೋಪಸ್ತ್ರೀಯರು ಸುವರ್ಣಕುಂಡಲಗಳಿಂದಲೂ ಮುಂಗುರುಳುಗಳಿಂದಲೂ ಶೋಭಿತವಾದ ಕಪೋಲಕಾಂತಿಯಿಂದಲೂ ಅಮೃತಪ್ರಾಯವಾದ ಮುಗುಳುನಗೆಯೂ ಕಟಾಕ್ಷಪ್ರಸಾರವೂ ಉಳ್ಳ ಮುಖವಿಲಾಸದಿಂದಲೂ ಕೂಡಿದ ಕೃಷ್ಣನನ್ನು ಪೂಜಿಸಿ ಆತನ ನಖಸ್ಪರ್ಶದಿಂದುಂಟಾದ ಆನಂದಪಾರವಶ್ಯವುಳ್ಳವರಾಗಿ ಆತನ ಚರಿತವನ್ನು ಗಾನಂಗೈದರು ; ಶ್ರೀಕೃಷ್ಣನು ತನ್ನ ಸಮ್ಮರ್ದನದಿಂದ ಶಿಥಿಲವಾದ ಅವರ ಕುಚಕುಂಕುಮರಚಿತವಾದ ಪುಷ್ಪಮಾಲೆಗಳಲ್ಲಿರುವ ಭ್ರಮರಗಳೆಂಬ ಗಾಯಕರಿಂದ ಅನುಯುಕ್ತನಾಗಿ ಬಳಲಿದ ಮದಗಜವು ಹೆಣ್ಣಾನೆಗಳೊಡನೆ ಜಲವನ್ನು ಪ್ರವೇಶಿಸುವಂತೆ ಆ ಗೋಪಸ್ತ್ರೀಯರ ಶ್ರಮೆಯನ್ನು ಪರಿಹರಿಸಲೋಸುಗ ಉದಕವನ್ನು ಪ್ರವೇಶಿಸಿ ಅವರಿಂದ ಉದಕವನ್ನೆರಚಲ್ಪಡುತ ಪುಷ್ಪವೃಷ್ಟಿಯನ್ನುಂಟುಮಾಡುವ ದೇವತೆಗಳಿಂದ ಸ್ತುತಿಸಲ್ಪಡುತ ಜಲವಿಹಾರವನ್ನು ಮಾಡುತಿದ್ದು ಆ ಬಳಿಕ ಪುಷ್ಪಗಳ ಸೌರಭ್ಯಯುಕ್ತವಾದ ಮಂದಮಾರುತವುಳ್ಳ ದಿಗಂತರಗಳುಳ್ಳ ಯಮುನಾತೀರದ ಉದ್ಯಾನವನದಲ್ಲಿ ಭೃಂಗಗಳಿಂದಲೂ ಸ್ತ್ರೀಯರಿಂದಲೂ ಪರಿವೃತನಾಗಿ ಸ್ತ್ರೀಗಜಗಳಿಂದ ಕೂಡಿದ ಮದಗಜದಂತೆ ವನವಿಹಾರವನ್ನು ಮಾಡಿದನು ! ಈ ಪ್ರಕಾರವಾಗಿ ಶರತ್ಕಾಲಸಂಬಂಧವಾಗಿ ಚಂದ್ರನ ಬೆಳದಿಂಗಳಿಂದ ರಮಣೀಯವಾಗಿ ಕಾವ್ಯಾದಿಗಳಲ್ಲಿ ಪ್ರತಿಪಾದಕವಾದ ಶೃಂಗಾರಾದಿ ರಸಗಳಿಗೆ ಆಶ್ರಯವಾದ ರಾತ್ರಿಗಳಲ್ಲಿ ತನ್ನನ್ನು ಅನುಕರಿಸಿದ್ದ ಸ್ತ್ರೀಯರೊಡನೆ ಸತ್ಯಕಾಮನಾದ ಶ್ರೀಕೃಷ್ಣನು ರೇತಶ್ಚಲನವನ್ನು ಮಾಡದೆ ಕ್ರೀಡೆಯಿಂದಲೇ ಅವರನ್ನು ತೃಪ್ತಿಪಡಿಸುತ ವಿಹರಿಸುತಿದ್ದನು !

ಎಲೈ ಋಷಿಗಳಿರಾ, ಈ ಪ್ರಕಾರದಲ್ಲಿ ಶುಕಮುನಿಯಿಂದ ನಿರೂಪಿಸಲ್ಪಟ್ಟ ಅರ್ಥವನ್ನು ಕೇಳಿ ಪರೀಕ್ಷಿದ್ರಾಜನು ಆತನನ್ನು ಕುರಿತು—ಎಲೈ ಶುಕಮುನಿಯೆ, ಧರ್ಮಸಂಸ್ಥಾಪನಾರ್ಥವಾಗಿಯೂ ಅಧರ್ಮನಿಗ್ರಹಾರ್ಥವಾಗಿಯೂ ಅವತರಿಸಿದಂಥಾ ಭಗವಂತನಾದ ಜಗದೀಶ್ವರನು ಧರ್ಮಾರ್ಥವ್ಯವಸ್ಥೆಯನ್ನೂ ಉಪದೇಶವನ್ನೂ ಸಂರಕ್ಷಣವನ್ನೂ ಮಾಡುವವನಾದಾಗ್ಯೂ ಯಾವನಿಮಿತ್ತವಾಗಿ ಶಾಸ್ತ್ರವಿರುದ್ಧವಾದ ಪರದಾರಾಭಿಗಮನವನ್ನು ಮಾಡಿದನು ? ಪೂರ್ಣಕಾಮನಾದಾಗ್ಯೂ ಆ ಭಗವಂತನು ಲೋಕನಿಂದಿತವಾದ ವ್ಯಾಪಾರವನ್ನು ಏನುಕಾರಣ ಆಚರಿಸಿದನು ? ಈ ಸಂಶಯವನ್ನು ಪರಿಹರಿಸು !—ಎಂದು ಕೇಳಿದನು.

ಆ ವಾಕ್ಯವನ್ನು ಕೇಳಿ ಶುಕಾಚಾರ್ಯನು—ಎಲೈ ಅರಸೆ, ಬ್ರಹ್ಮನು ಇಂದ್ರನು ಸೋಮನು ವಿಶ್ವಾಮಿತ್ರನು ಮುಂತಾದ ಮಹಾಪುರುಷರು ಧರ್ಮಾತಿಕ್ರಮವನ್ನು ಮಾಡುವದುಂಟು ; ಆದಾಗ್ಯೂ ತೇಜಸ್ವಿಗಳಾದ್ದರಿಂದ ಅವರಿಗೆ ದೋಷವಿಲ್ಲ ; ಯಜ್ಞೇಶ್ವರನು ಸರ್ವಭಕ್ಷಕನಾದಾಗ್ಯೂ ಪರಿಶುದ್ಧನಾಗಿರುವ ರೀತಿಯಲ್ಲಿ ಮಹಾತ್ಮರು ಯಾವಾಗಲು ಪರಿಶುದ್ಧರಾಗಿರುವರು ; ದೇಹಾದಿ ಪರತಂತ್ರನಾದ ಸಾಧಾರಣ ಪುರುಷನು ಮನಸ್ಸಿನಲ್ಲಾದರೂ ಅಂಥಾ ಕಾರ್ಯವನ್ನು ಸ್ಮರಿಸಬಾರದು ; ಆತನು ಮೂಢಭಾವದಿಂದ ಧರ್ಮಾತಿಕ್ರಮವನ್ನು ಮಾಡಿದರೆ ಶೀಘ್ರವಾಗಿ ಅಧಃಪತನವನ್ನು ಪಡೆಯುವನು ! ಸಾಧಾರಣವಾದ ಒಬ್ಬ ದೇವನು ಮಹೇಶ್ವರನಂತೆ ಕಾಲಕೂಟ ವಿಷವನ್ನು ಧರಿಸಿದರೆ ಅದು ಆತನಿಗೆ ದಕ್ಕಿ ಆತನು ಬದುಕುವನೆ ! ಮಹಾತ್ಮರ ವಚನವು ಸತ್ಯವು ; ಆದರೂ ಅವರಿಂದ ಆಚರಣೆಗಳಲ್ಲಿ ಕೆಲವು ಸತ್ಯವಾಗಿಯೂ ಕೆಲವು ಅಸತ್ಯವಾಗಿಯೂ ಇರುವವು ; ಬುದ್ಧಿವಂತನು ಅವರ ಆಚರಣೆಯನ್ನನುಕರಿಸದೆ

ದುಕೊಂಡುಬರುವ ನಿಮಿತ್ತವಾಗಿ ಆತನ ಸಮೀಪಕ್ಕೆ ಹೋಗಿ ರತ್ನಸಮೇತವಾದ ಅವನ ಶಿರಸ್ಸನ್ನು ತನ್ನ ಮುಷ್ಟಿ ಪ್ರಹಾರದಿಂದ ಕೆಡಹಿ ಶಂಖಚೂಡನನ್ನು ಸಂಹರಿಸಿ ಆ ರತ್ನವನ್ನು ತೆಗೆದುಕೊಂಡುಬಂದು ಆ ಗೋಪಸ್ತ್ರೀಯರು ನೋಡುತ್ತಿರಲು ತನ್ನ ಅಣ್ಣನಾದ ಬಲರಾಮನಿಗೆ ಕೊಟ್ಟನು!

## ೩೫ನೇ ಅಧ್ಯಾಯ.

### ಗೋಪಸ್ತ್ರೀಯರು ಹಗಲಿನಲ್ಲಿ ಕೃಷ್ಣನನ್ನು ನಿರೀಕ್ಷಿಸಿದ್ದು.

ಎಲೈ ಅರಸೆ, ಪ್ರತಿ ಹಗಲಿನಲ್ಲಿಯೂ ಶ್ರೀಕೃಷ್ಣನು ವನವನ್ನು ಕುರಿತು ಹೋದಮೇಲೆ ವಿರಹಖಿನ್ನರಾದ ಗೋಪಸ್ತ್ರೀಯರು ಆತನ ಲೀಲೆಗಳನ್ನು ಗಾನಂಗೈಯುತ ದುಃಖದಿಂದ ಹೊತ್ತು ಕಳೆಯುತಿದ್ದರು; ಆ ಸ್ತ್ರೀಯರು ಒಬ್ಬರನ್ನೊಬ್ಬರು ಕರೆದು "ಎಲೇ ಸಖಿಯರೇ, ಮುಕುಂದನು ವಾಮಭುಜದಲ್ಲಿರಿಸಲ್ಪಟ್ಟ ವಾಮಕಪೋಲವುಳ್ಳವನಾಗಿ ಚಲಿಸುವ ಹುಬ್ಬುಗಳುಳ್ಳವನಾಗಿ ತನ್ನ ಮೃದುವಾದ ಬೆರಳುಗಳಿಂದ ಮುಚ್ಚಲ್ಪಡುವ ಸಪ್ತಸ್ವರ ರಂಧ್ರಗಳುಳ್ಳದ್ದಾಗಿ ತನ್ನ ಅಧರೋಷ್ಠದಲ್ಲಿರಿಸಲ್ಪಟ್ಟ ಕೊಳಲನ್ನು ಗಾನಮಾಡುತಿದ್ದರೆ ತಮ್ಮ ಪತಿಗಳ ಸಮೇತರಾದ ಸಿದ್ಧಸ್ತ್ರೀಯರು ಆ ಗಾನವನ್ನು ಕೇಳಿ ಆಶ್ಚರ್ಯಪಡುತ ಲಜ್ಜಾಯುಕ್ತರಾಗಿ ಕಾಮಬಾಣಾಧೀನವಾದ ಚಿತ್ತವುಳ್ಳವರಾಗಿ ಶಿಥಿಲವಾದ ವಸ್ತ್ರಗ್ರಂಥಿಯುಳ್ಳವರಾಗಿ ವಿರಹಮೂರ್ಛೆಯನ್ನೈದುವರು; ಅಂಥಾ ಕೃಷ್ಣನ ವಿರಹವನ್ನು ನಾವು ಹ್ಯಾಗೆ ಸಹಿಸಲಾಪೆವು! ಎಲೇ ಸಖಿಯರುಗಳಿರಾ, ಒಂದು ಆಶ್ಚರ್ಯವನ್ನು ಕೇಳೀ: ಮುತ್ತಿನಹಾರದಂತೆ ಶುಭ್ರವಾದ ಮುಗುಳುನಗೆಯುಳ್ಳವನಾಗಿ ವಕ್ಷಸ್ಥಳದಲ್ಲಿ ಆವಾಸಿನಿಯಾದ ಲಕ್ಷ್ಮೀದೇವಿಯುಳ್ಳವನಾಗಿ ದೀನಜನರ ಕಷ್ಟಪರಿಹಾರಕನಾಗಿ ನಂದನ ಕುಮಾರನಾದ ಶ್ರೀಕೃಷ್ಣನು ಕೊಳಲನ್ನು ನುಡಿಸುತ್ತಿರುವ ಸಮಯದಲ್ಲಿ ವೃಷಭಗಳೂ ಗೋವುಗಳೂ ಮಿಕ್ಕ ಮೃಗಗಳೂ ಆ ವೇಣುವಾದ್ಯದಿಂದ ಪರವಶವಾಗಿ ಗುಂಪುಗುಂಪಾಗಿ ದಂತಗಳಿಂದ ಕಚ್ಚಲ್ಪಟ್ಟ ತೃಣಕಬಳಗಳುಳ್ಳವಾಗಿ ಸ್ತಬ್ಧವಾದ ಕರ್ಣಗಳುಳ್ಳವಾಗಿ ನಿದ್ರೆಗೈವರೀತಿಯಲ್ಲಿಯೂ ಚಿತ್ರದಲ್ಲಿ ಬರೆಯಲ್ಪಟ್ಟಂತೆಯೂ ನಿಶ್ಚಲವಾಗಿರುವವು! ಎಲೇ ಸಖಿಯರಿರಾ, ನವಿಲುಗರಿಗಳಿಂದಲೂ ಗೈರಿಕಾದಿ ಧಾತುಗಳಿಂದಲೂ ಚಿಗುರುಗಳಿಂದಲೂ ಜಟ್ಟಿಗಳಂತೆ ಅಲಂಕಾರವನ್ನು ಮಾಡಿಕೊಂಡು ಬಲರಾಮಸಮೇತನಾಗಿ ಗೋಪಾಲಕರೊಡಗೂಡಿ ಶ್ರೀಕೃಷ್ಣನು ವೇಣುಗಾನದಿಂದ ಗೋವುಗಳನ್ನು ಹೆಸರಿಟ್ಟು ಕರಿಯುವಾಗ ನದಿಗಳು ಭಗ್ನವಾದ ಮನಸ್ಸುಳ್ಳವಾಗಿ ವಾಯುವಿನಿಂದ ತರಲ್ಪಟ್ಟ ಕೃಷ್ಣನ ಪಾದರಜಸ್ಸನ್ನಪೇಕ್ಷಿಸುತ ನಮ್ಮಂತೆ ಪುಣ್ಯಹೀನಗಳಾದ್ದರಿಂದ ಪ್ರೇಮದಿಂದ ಕಂಪಿತವಾದ ಭುಜವುಳ್ಳವಾಗಿ ಸ್ತಬ್ಧವಾದ ಜಲವುಳ್ಳವಾಗುತ್ತವೆ; ಅನುಚರರಾದ ಗೋಪಾಲಕರಿಂದ ವರ್ಣಿಸಲ್ಪಟ್ಟ ಪರಾಕ್ರಮವುಳ್ಳವನಾಗಿ ಸಾಕ್ಷಾತ್ ನಾರಾಯಣನಂತೆ ಸ್ಥಿರವಿಭೂತಿಯುಳ್ಳ ಶ್ರೀಕೃಷ್ಣನು ವನದಲ್ಲಿ ಸಂಚರಿಸುತ ವೇಣುನಾದದಿಂದ ಗೋವುಗಳನ್ನಾಹ್ವಾನಂಗೈಯುವಾಗ ವನಲತೆಗಳೂ ವೃಕ್ಷಗಳೂ ತಮ್ಮಲ್ಲಿ ವಿಷ್ಣುವನ್ನು ವ್ಯಕ್ತಮಾಡುವಂತೆ ಫಲಪುಷ್ಪಯುಕ್ತಗಳಾಗಿ ಪುಷ್ಪಫಲಭಾರಗಳಿಂದ ಬಗ್ಗಿದ ಕೊಂಬುಗಳುಳ್ಳವಾಗಿ, ಪ್ರೇಮದಿಂದ ರೋಮಾಂಚಿತಶರೀರವುಳ್ಳವಾಗಿ ಮಕರಂದದ ಧಾರೆಗಳನ್ನು ಸ್ರವಿಸುವವು; ನೋಡುವದಕ್ಕೆ ರಮಣೀಯವಾದ ತಿಲಕವುಳ್ಳವನಾಗಿ ವನಮಾಲೆ ದಿವ್ಯಗಂಧ ತುಲಸೀ ಮಕರಂದಗಳಿಂದ ಮದಿಸಿದ ಭ್ರಮರಸಮೂಹಗಳಿಂದ ಅನುಸರಿಸಲ್ಪಟ್ಟ ದಿವ್ಯವಾದ ವೇಣುನಾದವನ್ನು ಮಾಡುತ ಶ್ರೀಕೃಷ್ಣನು ವಿಹರಿಸುವಾಗ ಸರೋವರದಲ್ಲಿ ಸಾರಸಹಂಸಗಳು ಮುಂತಾದ ಪಕ್ಷಿಗಳು ಆ ರಮಣೀಯವಾದ ಗಾನದಿಂದ ಪರವಶಚಿತ್ತವುಳ್ಳವಾದರೂ ಸ್ಥಿರಚಿತ್ತವುಳ್ಳವಾಗಿ ವಾಙ್ಮೌನಮಾಡಿಕೊಂಡು ಕಣ್ಣುಮುಚ್ಚಿಕೊಂಡು ಶ್ರೀಹರಿಯನ್ನು ಧ್ಯಾನಂಗೈಯುವವು! ಎಲೇ ವ್ರಜಸ್ತ್ರೀಯರುಗಳಿರಾ, ಹಾರಗಳಿಂದಲೂ ಶಿರೋಭೂಷಣಗಳಿಂದಲೂ ಅಲಂಕೃತನಾಗಿ ಬಲರಾಮಸಮೇತನಾದ ಶ್ರೀಕೃಷ್ಣನು ಪರ್ವತದ ತಪ್ಪಲುಗಳಲ್ಲಿ ವೇಣುನಾದದಿಂದ ಲೋಕವನ್ನು ಸಂತೋಷಪಡಿಸುತ ಗಾನಂಗೈವ ಸಮಯದಲ್ಲಿ ಮೇಘವು

ಆ ಮಹಾಪುರುಷನ ಗಾನವನ್ನತಿಕ್ರಮಿಸಬಾರದೆಂದು ಭಯವುಳ್ಳದ್ದಾಗಿ ಮೆಲ್ಲನೆ ಗರ್ಜಿಸುತ ಪುಷ್ಪಾಕಾರಗಳಾದ ಉದಕಬಿಂದುಗಳನ್ನು ವರ್ಷಿಸುತ ಛತ್ರದರೀತಿಯಲ್ಲಿ ಕೃಷ್ಣನಿಗೆ ಛಾಯೆಯನ್ನುಂಟುಮಾಡುವದು!——ಎಲೌ ಯಶೋದಾದೇವಿಯೆ, ನಾನಾವಿಧವಾದ ಗೋಪವಿಹಾರದಲ್ಲಿ ಕುಶಲನಾಗಿ ನಿನ್ನ ಕುಮಾರನಾದ ಶ್ರೀಕೃಷ್ಣನು ಬಹುಪ್ರಕಾರವಾಗಿ ತನ್ನ ಸ್ವಬುದ್ಧಿಯಿಂದ ಶಿಕ್ಷಿತಗಳಾದ ಸ್ವರಗಳನ್ನು ತನ್ನ ಅಧರದಲ್ಲಿರಿಸಲ್ಪಟ್ಟ ವೇಣುವಿನಲ್ಲಿ ನುಡಿಸುತ ವಿಹರಿಸುವಾಗ ಇಂದ್ರನು ಈಶ್ವರನು ಬ್ರಹ್ಮನು ಮೊದಲಾದ ದೇವತೆಗಳು ಆ ಗಾನವನ್ನು ಕೇಳಿ ಕಂಠಗಳನ್ನು ಬೊಗ್ಗಿಸಿಕೊಂಡು ಏಕಾಗ್ರಚಿತ್ತರಾಗಿ ಆ ಸ್ವರಭೇದಗಳನ್ನು ತಿಳಿಯದೆ ಸರ್ವಜ್ಞರಾದಾಗ್ಯೂ ಪರವಶರಾಗುವರು!——ಎಲೇ ಸಖಿಯರುಗಳಿರಾ, ಶ್ರೀಕೃಷ್ಣನು ಧ್ವಜರೇಖೆ ವಜ್ರರೇಖೆಗಳಿಂದ ಗುರುತುಮಾಡಲ್ಪಟ್ಟ ಪಾದವಿನ್ಯಾಸಗಳಿಂದ ಗೋವೃಷಭಗಳ ಕಾಲುಕೊಳಗಗಳ ಪ್ರಹಾರವ್ಯಥೆಯನ್ನು ವ್ರಜಭೂಮಿಗೆ ಪರಿಹರಿಸುತ ವೇಣುಗಾನಂಗೈಯುತ ಮದಗಜದಂತೆ ಗಮನವುಳ್ಳವನಾಗಿ ವನವನ್ನು ಕುರಿತು ಹೋಗುತಿದ್ದರೆ ಆತನ ಸೊಕ್ಕಿನ ನೋಟಗಳಿಂದ ಕಾಮಪರವಶರಾಗಿ ವೃಕ್ಷಗಳಂತೆ ಸ್ತಬ್ಧರಾಗಿ ಮೂರ್ಛೆಯಿಂದ ಶಿಥಿಲವಾದ ಕೇಶಗಳನ್ನೂ ವಸ್ತ್ರಗಳನ್ನೂ ತಿಳಿಯದೆ ನಾವು ಪರವಶರಾಗುತ್ತೇವೆ! ಎಲೇ ಸಖಿಯರುಗಳಿರಾ, ಗೋವುಗಳ ಗಣನಾರ್ಥವಾಗಿ ಮಣಿಗಳನ್ನು ಧರಿಸಿಕೊಂಡು ರಮ್ಯವಾದ ಸೌರಭ್ಯವುಳ್ಳ ತುಲಸೀಮಾಲೆಯಿಂದ ಶೋಭಿತನಾದ ಕೃಷ್ಣನು ಗೋವುಗಳನ್ನೆಣಿಸುತ ತನ್ನ ಮಿತ್ರನಾದ ಒಬ್ಬ ಗೋಪಾಲಕನ ಭುಜವನ್ನವಲಂಬಿಸಿಕೊಂಡು ವೇಣುಗಾನವನ್ನು ಮಾಡಿದರೆ ಗಂಡುಹುಲ್ಲೆಯ ಪತ್ನಿಯರಾದ ಹೆಣ್ಣುಹುಲ್ಲೆಗಳು ಆ ವೇಣುನಾದದಿಂದ ವಿವಶಚಿತ್ತವುಳ್ಳವಾಗಿ ಗೃಹಾಶೆಯನ್ನು ಬಿಟ್ಟು ನಮ್ಮಂತೆ ಗುಣಸಮುದ್ರನಾದ ಶ್ರೀಕೃಷ್ಣನನ್ನೇ ಆಶ್ರಯಿಸುವವು!——ಎಲೌ ಯಶೋದೆಯೆ, ಮಲ್ಲಿಕಾಹಾರ ಪುಷ್ಪಗಳಿಂದಲಂಕೃತನಾಗಿ ಗೋಪಾಲಕರಿಂದಲೂ ಗೋವುಗಳಿಂದಲೂ ಪರಿವೃತನಾಗಿ ನಿನ್ನ ಮಗನಾದ ಕೃಷ್ಣನು ಸ್ನೇಹಿತರಿಗೆ ಸುಖಪ್ರದನಾಗಿ ಯಮುನಾನದಿಯಿಂದ ಸಾಯಂಕಾಲದಲ್ಲಿ ಗೋವುಗಳನ್ನು ಹಿಂದಿರಿಗಿಸಿಕೊಂಡು ಜಲಪಾನವನ್ನು ಮಾಡಿಸುತ ವಿಹರಿಸುವಾಗ ಮಲಯಪರ್ವತದಲ್ಲುಟ್ಟಿದ ಮಂದಮಾರುತವು ಸುಖಸ್ಪರ್ಶದಿಂದ ಆತನನ್ನು ಪೂಜಿಸುವದು; ಮತ್ತು ಸ್ತುತಿಪಾಠಕರಾದ ಗಂಧರ್ವರು ವಾದ್ಯ ಗೀತ ಪುಷ್ಪವರ್ಷಾದಿಗಳಿಂದ ಸೇವಿಸುವರು!——ಇಗೋ ವ್ರಜಗೋವುಗಳಲ್ಲಿ ವಾತ್ಸಲ್ಯಶಾಲಿಯಾಗಿ ಗೋವರ್ಧನಧಾರಕನಾದ ಶ್ರೀಕೃಷ್ಣನು ಬ್ರಹ್ಮಾದಿಗಳಿಂದ ನಮಸ್ಕರಿಸಲ್ಪಡುವ ಪಾದವುಳ್ಳವನಾಗಿ ಸಾಯಂಕಾಲದಲ್ಲಿ ತನ್ನ ಅನುಚರರಾದ ಗೋಪಾಲಕರಿಂದ ಸ್ತುತಿಮಾಡಿಸಿಕೊಳ್ಳುತ ಸಮಸ್ತ ಗೋಸಮೂಹವನ್ನೂ ತಿರಿಗಿಸಿಕೊಂಡು ಮಾರ್ಗದಲ್ಲಿ ಕೊಳಲನ್ನು ನುಡಿಸುತ ಬರುತ್ತಾನೆ; ಮಾರ್ಗಶ್ರಮದಿಂದುಂಟಾದ ಕಾಂತಿಯಿಂದಲೂ ರಮ್ಯನಾಗಿ ನೋಡುವವರ ನೇತ್ರಗಳಿಗೆ ಉತ್ಸವವನ್ನು ಕೊಡುತ ಗೋಧೂಳಿಗಳಿಂದ ವ್ಯಾಪ್ತವಾದ ಹಾರಗಳುಳ್ಳವನಾಗಿ ದೇವಕೀಗರ್ಭಜಾತನಾದ ಕೃಷ್ಣನೆಂಬ ಚಂದ್ರನು ಮಿತ್ರರ ಮನೋರಥವನ್ನು ನೋಡಲೋಸುಗ ಬರುತ್ತಾನೆ! ಎಲೇ ಸ್ತ್ರೀಯರುಗಳಿರ, ಮದದಿಂದ ಸೊಕ್ಕುವ ನೇತ್ರವುಳ್ಳವನಾಗಿ ಸ್ವಜನರಿಗೆ ಬಹುಮಾನವನ್ನು ಮಾಡುವ ಶ್ರೀಕೃಷ್ಣನು ಪಕ್ವವಾಗುತಿರುವ ಯಲಚೀಫಲದಂತೆ ಬಿಳುಪಾದ ಮುಖವುಳ್ಳವನಾಗಿ ಕನಕಕುಂಡಲಗಳ ಶೋಭೆಯಿಂದ ಕಪೋಲವನ್ನಲಂಕರಿಸಿಕೊಂಡು ಯದುಪತಿಯಂತೆ ಮದಗಜಗಾಮಿನಿಯಾಗಿ ಚಂದ್ರನಂತೆ ಆಹ್ಲಾದಕನಾಗಿ ಸಂತುಷ್ಟವಾದ ಮುಖವುಳ್ಳವನಾಗಿ ವ್ರಜಗೋವುಗಳ ಅಧಿಕವಾದ ದಿನತಾಪವನ್ನು ಪರಿಹರಿಸುತಿದ್ದಾನೆ!" ಎಂದು ನುಡಿಯುತಿದ್ದರು.

ಎಲೈ ಅರಸೆ, ಈ ರೀತಿಯಲ್ಲಿ ಗೋಪಸ್ತ್ರೀಯರು ಕೃಷ್ಣನ ಲೀಲೆಗಳನ್ನು ಗಾನಂಗೈಯುತ ಆತನಲ್ಲೇ ಲಗ್ನವಾದ ಚಿತ್ತವುಳ್ಳವರಾಗಿ ಮಹಾ ಸಂತೋಷವುಳ್ಳವರಾಗಿ ಹಗಲುಗಳಲ್ಲಿ ರಮಿಸುತಿದ್ದರು!

## ೩೬ ನೇ ಅಧ್ಯಾಯ.

### ಕಂಸನು ರಾಮಕೃಷ್ಣರನ್ನು ಕರೆಯಲು ಅಕ್ರೂರನನ್ನು ಕಳುಹಿಸಿದ್ದು.

ಎಲೈ ಅರಸೆ, ಅನಂತರದಲ್ಲಿ ಅರಿಷ್ಟನಾಮಕನಾದ ಒಬ್ಬ ಅಸುರನು ಸ್ಥೂಲವಾದ ಶರೀರವುಳ್ಳವನಾಗಿ ಕಾಲು ಗೊರಸುಗಳ ಪ್ರಹಾರದಿಂದ ಭೂಮಿಯನ್ನು ಕಂಪಿಸುವಂತೆ ಮಾಡುತ ಗುಟ್ರುಹಾಕುತ ಪಾದಗಳಿಂದ ಭೂಮಿಯನ್ನು ಕೆರೆಯುತ ಬಾಲವನ್ನೆತ್ತಿಕೊಂಡು ಕೊಂಬುಗಳಿಂದ ಗೋಡೆಗಳನ್ನು ತಿವಿಯುತ ಮೂತ್ರಪುರೀಷಗಳನ್ನು ಬಿಡುತ ರೆಪ್ಪೆಹಾಕದ ನೇತ್ರವುಳ್ಳವನಾಗಿ ತನ್ನ ಗರ್ಜನೆಯಿಂದ ಗೋವುಗಳ ಮತ್ತು ಮನುಷ್ಯರ ಗರ್ಭಗಳನ್ನು ಸ್ರವಿಸುವಂತೆ ಮಾಡುತ ಆ ಗೋಸ್ಥಾನಕ್ಕೆ ಬಂದನು; ಆ ವೃಷಭಾಸುರನ ಶರೀರವನ್ನು ನೋಡಿ ಮೇಘಗಳು ಪರ್ವತವೆಂಬ ಭ್ರಾಂತಿಯಿಂದ ಅದರಮೇಲೆ ಕೂತುಕೊಂಡವು; ತೀಕ್ಷ್ಣವಾದ ಶೃಂಗಗಳುಳ್ಳ ಆ ವೃಷಭಾಸುರನನ್ನು ನೋಡಿ ಗೋಪಾಲಕರೂ ಗೋಪಸ್ತ್ರೀಯರೂ ಭಯಪಟ್ಟರು; ಪಶುಗಳು ತಮ್ಮ ಹಿಂಡನ್ನು ಬಿಟ್ಟು ಓಡಿದವು. "ಕೃಷ್ಣಾ ರಕ್ಷಿಸು" ಎಂದು ಗೋಪರು ಕೂಗಿದರು; ಭಗವಂತನಾದ ಶ್ರೀಕೃಷ್ಣನು ಭಯಾರ್ಥರಾದ ಗೋಕುಲವಾಸಿಗಳನ್ನು ನೋಡಿ ಅಂಜದಿರುವಹಾಗೆ ಧೈರ್ಯೋಕ್ತಿಯಿಂದ ಸಮಾಧಾನಮಾಡಿ ವೃಷಭಾಸುರನನ್ನು ಕರೆದು "ಎಲೇ ಮಂದಬುದ್ಧಿಯುಳ್ಳ ದುಷ್ಟನಾದ ಅಸುರಾಧಮನೆ, ಭಯಪಡಿಸಲ್ಪಟ್ಟ ಬಾಲಕರಿಂದ ಯುಕ್ತವಾದ ಪಶುಗಳಿಂದ ನಿನಗೇನು ಕೆಲಸ? ನಿನ್ನಂಥಾ ದುಷ್ಟರ ಬಲಗರ್ವವನ್ನು ನಾಶಮಾಡುವ ನಾನಿಧ್ದೇನೆ; ಇಲ್ಲಿ ಬಾ" ಎಂದು ಭುಜಗಳನ್ನು ತಟ್ಟಿಕೊಂಡು ಹಸ್ತತಾಡನಗಳಿಂದ ಆ ಅಸುರನನ್ನು ಕೋಪಯುಕ್ತನಾಗಿ ಮಾಡುತ ತನ್ನ ಸ್ನೇಹಿತನಾದ ಒಬ್ಬ ಗೋಪಾಲಕನ ಹೆಗಲಿನಮೇಲೆ ಭುಜವನ್ನಿಟ್ಟುಕೊಂಡು ನಿಂತನು. ವೃಷಭಾಸುರನು ಕೋಪಿಸಿಕೊಂಡು ತನ್ನ ಕಾಲುಕೊಳಗಗಳಿಂದ ಭೂಮಿಯನ್ನು ಕೆರೆಯುತ ಎತ್ತಲ್ಪಟ್ಟ ಪುಚ್ಛದಿಂದ ಸುತ್ತುತ್ತಿರುವ ಮೇಘಗಳುಳ್ಳವನಾಗಿ ಕೃಷ್ಣನನ್ನು ತಿವಿಯಲೋಸುಗ ಶೃಂಗಗಳನ್ನು ಮುಂದುಮಾಡಿಕೊಂಡು ಸ್ತಬ್ಧವಾದ ಕೆಂಪಾದ ನೇತ್ರವುಳ್ಳವನಾಗಿ ಆತನನ್ನು ವಕ್ರದೃಷ್ಟಿಯಿಂದ ನೋಡುತ ಇಂದ್ರಪ್ರಯುಕ್ತವಾದ ವಜ್ರಾಯುಧದಂತೆ ಓಡಿಬಂದನು; ಶ್ರೀಕೃಷ್ಣನು ಆತನ ಶೃಂಗಗಳನ್ನಿಡಿದು ಆ ವೃಷಭಾಸುರನನ್ನು ನೂರುಹೆಜ್ಜೆಗಳ ಪರ್ಯಂತ ಹಿಂದಕ್ಕೆ ಮಹಾಗಜವು ಪ್ರತಿಗಜವನ್ನು ತಳ್ಳುವರೀತಿಯಲ್ಲಿ ತಳ್ಳಿದನು; ಆ ಅಸುರನು ಭಗವಂತನಿಂದ ಕಡಹಲ್ಪಟ್ಟು ಹಿಂದಕ್ಕೆ ಹೋಗಿ ಬಿದ್ದು ತ್ವರೆಯಿಂದೆದ್ದು ಬೆವರಿದ ಸರ್ವಾಂಗವುಳ್ಳವನಾಗಿ ನಿಟ್ಟುಸುರುಬಿಡುತ ಪುನಹ ಕೃಷ್ಣನನ್ನು ಆಟ್ಟಿಕೊಂಡು ಬಂದನು; ಕೃಷ್ಣನು ಹಾಗೆ ಕ್ರೋಧದಿಂದ ಬಂದ ಆ ಅಸುರನನ್ನು ಪುನಹ ಶೃಂಗಗಳಿಂದಿಡಿದು ಕೆಳಕ್ಕೆ ಕೆಡಹಿ ತನ್ನ ಪಾದದಿಂದ ಮೆಟ್ಟಿಕೊಂಡು ಆರ್ದ್ರವಸ್ತ್ರವನ್ನು ಹಿಂಡಿದಂತೆ ಹಿಂಡಿ ಅವನ ಶೃಂಗಗಳನ್ನು ಕಿತ್ತುಕೊಂಡು ಅವುಗಳಿಂದಲೆ ಅವನನ್ನು ಪ್ರಹರಿಸಿದನು; ಅದರಿಂದ ಪೀಡಿತನಾದ ಅರಿಷ್ಟನು ರಕ್ತವನ್ನು ಕಾರುತ ಮೂತ್ರಪುರೀಷಗಳನ್ನು ಬಿಡುತ ಅಂಗತಂಗವಾಗಿ ಬಿದ್ದು ಕಾಲುಗಳನ್ನು ಒದ್ದುಕೊಳ್ಳುತ ಕಣ್ಣುಗುಡ್ಡೆ ಹೊರಟು ಮೃತ್ಯುವಶನಾಗಿ ಕ್ಷಯವನ್ನೈದಿದನು! ಈ ಪ್ರಕಾರ ವೃಷಭಾಸುರನನ್ನು ಸಂಹರಿಸಿ ಗೋಪಾಲಕರಿಂದ ಸ್ತುತಿಸಲ್ಪಡುತ ಬಲರಾಮಸಮೇತನಾಗಿದ್ದ ಶ್ರೀಕೃಷ್ಣನು ಗೋಪಸ್ತ್ರೀಯರ ನೇತ್ರಾನಂದಕರನಾಗಿ ಗೋಸ್ಥಾನಕ್ಕೆ ಬಂದನು!

ಎಲೈ ಅರಸೆ, ಅದ್ಭುತವ್ಯಾಪಾರವುಳ್ಳ ಕೃಷ್ಣನಿಂದ ಗೋಷ್ಟದಲ್ಲಿ ಅರಿಷ್ಟಾಸುರನು ಸಂಹೃತನಾಗಲು ಭಗವಂತನಾಗಿ ದೇವರ್ಷಿಯಾದ ನಾರದನು ಕಂಸನ ಬಳಿಗೆ ಹೋಗಿ ಆತನನ್ನು ಕುರಿತು ದುರ್ಗಾರೂಪಳಾದ ಕನ್ಯೆಯನ್ನು ಯಶೋದಾಪುತ್ರಿಯೆಂದೂ ಶ್ರೀಕೃಷ್ಣನನ್ನು ದೇವಕೀಪುತ್ರನೆಂದೂ ರೋಹಿಣೀಗರ್ಭದಲ್ಲಿ ಜನಿಸಿದ ಬಲರಾಮನು ದೇವಕೀದೇವಿಯ ಏಳನೇ ಗರ್ಭವೆಂದೂ ಕಂಸನ ಭಯದಿಂದ ವಸುದೇವನು ತನ್ನ ಮಿತ್ರನಾದ ನಂದನ ವಶದಲ್ಲಿ ರಾಮಕೃಷ್ಣರನ್ನಿರಿಸಿದನೆಂದೂ ರಾಮಕೃಷ್ಣರಿಂದ ಕಂಸನ ಸಂಬಂಧಿಗಳಾದ ಬಹಳಮಂದಿ ಅಸುರರು ಹತರಾದರೆಂದೂ ಎಲ್ಲಾ ರಹಸ್ಯಾರ್ಥಗಳನ್ನೂ ಆಪ್ತನಂತೆ ತಿಳಿಸಿದನು. ಆದನ್ನು ಕೇಳಿ ಕಂಸನು ಕೋಪದಿಂದ ವ್ಯಾ

ಕುಪಿತೇಂದ್ರಿಯನಾಗಿ ವಸುದೇವನನ್ನು ಸಂಹರಿಸಲೋಸುಗ ತೀಕ್ಷ್ಣವಾದ ಖಡ್ಗವನ್ನು ತೆಗೆದುಕೊಂಡನು ; ಆಗ ನಾರದನು ವಸುದೇವನನ್ನು ಸಂಹರಿಸಿದರೆ ರಾಮಕೃಷ್ಣರು ಕಂಸನನ್ನು ಪಲಾಯನ ಮಾಡುವರೆಂದೂ ಆದಕಾರಣ ವಸುದೇವನನ್ನು ಸಂಹರಿಸಬಾರದೆಂದೂ ಹೇಳಿ ಉಪಾಯದಿಂದ ತಪ್ಪಿಸಿದನು ; ಆಮೇಲೆ ಕಂಸನು ದೇವಕೀವಸುದೇವರ ಪುತ್ರನಾದ ಶ್ರೀಕೃಷ್ಣನನ್ನು ತನಗೆ ಮೃತ್ಯುರೂಪನಾಗಿ ತಿಳಿದು ಅವರಿಬ್ಬರನ್ನೂ ಲೋಹಮಯವಾದ ಸಂಕೋಲೆಗಳಿಂದ ಬಂಧಿಸಿ ನಾರದನು ಹೊರಟುಹೋದಮೇಲೆ ಕೇಶಿಯೆಂಬ ಅಸುರನನ್ನು ಕರೆದು ರಾಮಕೃಷ್ಣರನ್ನು ಸಂಹರಿಸಿ ಬರಬೇಕೆಂದು ಕಳುಹಿಸಿ ಮುಷ್ಟಿಕನು ಚಾಣೂರನು ಶಲನು ಕೋಸಲನು ಮುಂತಾದ ಮಂತ್ರಿಗಳನ್ನೂ ಆನೇ ಮಾವುತರನ್ನೂ ಕರಿಸಿ ಅವರನ್ನು ಕುರಿತು “ ಎಲೈ ವೀರನೆ—ಎಲೈ ಚಾಣೂರನೆ—ಎಲೈ ಮುಷ್ಟಿಕನೆ, ವಸುದೇವನ ಪುತ್ರರಾದ ರಾಮಕೃಷ್ಣರು ನಂದವ್ರಜದಲ್ಲಿದ್ದಾರೆಂದೂ ಅವರಿಂದ ನನಗೆ ಮೃತ್ಯುವುಂಟಾಗುವದೆಂದು ನಾರದನು ಹೇಳಿದನು ; ಅವರಿಬ್ಬರನ್ನೂ ನೀವು ಇಲ್ಲಿ ಜಟ್ಟಿಕಾಳಗವೆಂಬ ವ್ಯಾಜದಿಂದ ಸಂಹಾರಮಾಡೀ ; ಯುದ್ಧರಂಗದ ಸುತ್ತಲೂ ನಾನಾಪ್ರಕಾರವಾಗಿ ಉನ್ನತಗಳಾದ ಮಂಚಗಳನ್ನು ಕಲ್ಪಿಸೀ ; ಪುರಜನರೂ ದೇಶದ ಜನರೂ ಸ್ವೇಚ್ಛೆಯಿಂದ ಆ ಯುದ್ಧವನ್ನು ನೋಡಲೀ !—— ಎಲೈ ಮಹಾಮಾತ್ರನೆ, ನೀನು ರಂಗದ್ವಾರದಲ್ಲಿ ಕುವಲಯಾಪೀಡವೆಂಬ ಮಹಾಗಜವನ್ನು ಬಿಟ್ಟು ಅದರಿಂದ ರಾಮಕೃಷ್ಣರನ್ನು ಕೊಲ್ಲಿಸು ; ಚತುರ್ದಶಿಯಲ್ಲಿ ಧನುರ್ಯಾಗವು ವಿಧ್ಯುಕ್ತವಾಗಿ ಆರಂಭಿಸಲ್ಪಡಲಿ ; ಭೂತರಾಜನಾದ ದೇವನಿಗೋಸ್ಕರ ಪವಿತ್ರಗಳಾದ ಪಶುಗಳನ್ನು ಪ್ರಹಾರಮಾಡೀ ” ಎಂದು ಅಜ್ಞಾಪಿಸಿ ಯದುಶ್ರೇಷ್ಠನಾದ ಅಕ್ರೂರನನ್ನು ಕರೆದು ಅವನ ಕೈಯನ್ನು ಹಿಡಿದುಕೊಂಡು “ ಎಲೈ ಅಕ್ರೂರನೆ, ನೀನು ಬಂಧು ಮಿತ್ರಕಾರ್ಯವನ್ನು ನನಗೋಸ್ಕರ ಮಾಡಬೇಕು ; ಭೋಜರಲ್ಲಾದರೂ ವೃಷ್ಣಿಗಳಲ್ಲಾದರೂ ನಿನ್ನಂಥಾ ಆಪ್ತರು ನನಗೆ ಯಾರೂ ಇಲ್ಲ ; ಆದ್ದರಿಂದ ಅಸಾಧ್ಯವಾದ ಕಾರ್ಯವನ್ನಾದರು ನಿರ್ವಾಹಮಾಡುವದರಲ್ಲಿ ಸಮರ್ಥನಾದ ನಿನ್ನನ್ನಾಶ್ರಯಿಸಿದೆನು ; ನೀನು ನಂದವ್ರಜಕ್ಕೆ ಹೋಗು ; ಅಲ್ಲಿ ವಸುದೇವನ ಪುತ್ರರಾದ ರಾಮಕೃಷ್ಣರಿದ್ದಾರೆ ; ಈ ರಥವನ್ನು ತೆಗೆದುಕೊಂಡುಹೋಗಿ ಅವರಿಬ್ಬರನ್ನೂ ಅದರಲ್ಲಿ ಕುಳ್ಳಿರಿಸಿಕೊಂಡು ಶೀಘ್ರವಾಗಿ ಕರೆದುಕೊಂಡು ಬಾ ; ವಿಷ್ಣುವನ್ನಾಶ್ರಯಿಸಿರುವ ದೇವತೆಗಳಿಂದ ನನ್ನ ಮೃತ್ಯುರೂಪರಾಗಿ ಆ ರಾಮಕೃಷ್ಣರು ಸೃಷ್ಟಿಸಲ್ಪಟ್ಟಿದ್ದಾರೆ ; ಆದ್ದರಿಂದ ಕಾಣಿಕೆಗಳನ್ನು ತೆಗೆದುಕೊಂಡು ಬರುವ ನಂದಾದಿಗಳೊಡನೆ ಅವರಿಬ್ಬರನ್ನೂ ಕರದುಕೊಂಡುಬಾ ; ಅವರು ಇಲ್ಲಿಗೆ ಬಂದರೆ ಮೃತ್ಯುಸಮಾನವಾದ ಆನೆಯಿಂದ ಕೊಂದುಹಾಕಿಸುತ್ತೇನೆ ; ಅದು ತಪ್ಪಿದರೆ ಸಿಡಿಲಿನಂತೆ ಅತಿ ಕ್ರೂರವಾದ ಜಟ್ಟಿಗಳಿಂದ ಅವರನ್ನು ಸಂಹಾರಮಾಡಿಸುತ್ತೇನೆ ; ಅವರಿಬ್ಬರು ಹತರಾದಮೇಲೆ ಶೋಕತಪ್ತರಾದ ವಸುದೇವನು ಮುಂತಾದ ವೃಷ್ಣಿಗಳನ್ನೂ ಭೋಜರನ್ನೂ ದಾಶಾರ್ಹರನ್ನೂ ಸಂಹರಿಸುತ್ತೇನೆ ; ಮತ್ತು ವೃದ್ಧನಾಗಿ ರಾಜ್ಯಕಾಮುಕನಾಗಿ ನನ್ನ ತಂದೆಯಾದ ಉಗ್ರಸೇನನನ್ನೂ ಅವನ ತಮ್ಮನಾದ ದೇವಕನನ್ನೂ ಮತ್ತು ನನಗೆ ದ್ವೇಷಿಗಳಾದವರೆಲ್ಲರನ್ನೂ ಸಂಹರಿಸಿ ಈ ಭೂಮಿಯನ್ನು ನಿಷ್ಕಂಟಕವಾಗಿ ನನ್ನ ಸ್ವಾಧೀನಮಾಡಿಕೊಳ್ಳುತ್ತೇನೆ ; ಜರಾಸಂಧನು ನನ್ನ ಗುರುವು ; ದ್ವಿವಿದನು ನನಗೆ ಪ್ರಿಯಮಿತ್ರನು ; ಶಂಬರನೂ ನರಕನೂ ಬಾಣನೂ ನನ್ನಲ್ಲಿ ಸ್ನೇಹವುಳ್ಳವರು ; ಅವರ ಸಮೇತನಾಗಿ ದೇವಪಕ್ಷಪಾತಿಗಳಾಗಿ ದುಷ್ಟರಾದ ಅರಸರನ್ನೂ ಸಂಹರಿಸಿ ಭೂಮಿಯನ್ನನುಭವಿಸುತ್ತೇನೆ ; ಆದ್ದರಿಂದ ಬಾಲಕರಾದ ರಾಮಕೃಷ್ಣರನ್ನು ಧನುರ್ಯಾಗವನ್ನೂ ಮಧುರಾಪುರದ ಸಂಪತ್ತನ್ನೂ ನೋಡುವದಕ್ಕೋಸ್ಕರವೆಂದೇಳಿ ಇಲ್ಲಿಗೆ ಕರಕೊಂಡು ಬಾ ” ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಅಕ್ರೂರನು “ ಎಲೈ ಅರಸಾದ ಕಂಸನೆ, ನಿನ್ನ ಮನೋಭಿಪ್ರಾಯವು ಚನ್ನಾಗಿದೆ ; ನಿನ್ನ ಮೃತ್ಯುವನ್ನ ಪರಿಹರಿಸಲೋಸುಗ ಒಳ್ಳೇ ಪ್ರಯತ್ನವನ್ನು ಮಾಡುತ್ತೀ ; ಆದಾಗ್ಯು ಸಿದ್ಧಿ ಅಸಿದ್ಧಿ ಎಂಬ ಎರಡನ್ನೂ ಸಮವಾಗಿ ಭಾವಿಸಿ ಕೆಲಸವನ್ನು ಮಾಡಬೇಕು ; ಫಲಪ್ರಾಪ್ತಿಯು ದೈವಾಧೀನವು ; ದೈವಸಂಕಲ್ಪವಿಲ್ಲದಿದ್ದಾಗ್ಯು ಮನೋರಥಗಳನ್ನು ಕುರಿತು ಮನುಷ್ಯನು ಯತ್ನವನ್ನು ಮಾಡುತ್ತ ಹರ್ಷಶೋಕಗಳನ್ನೈದುವನು;

ನೀನು ಹೇಳಿದ ರೀತಿಯಲ್ಲಿ ಹೋಗಿ ಕರತರುತ್ತೇನೆ” ಎಂದು ನುಡಿದು ತನ್ನ ವಾಕ್ಯವನ್ನು ಕೇಳಿ ಮಂತ್ರಿಗಳನ್ನು ಕಳುಹಿಸಿ ಕಂಸನು ತನ್ನ ಮನೆಗೆ ಹೋಗಲು ತಾನೂ ತನ್ನ ಮನೆಗೆ ಹೋದನು !

## ೩೭ನೇ ಅಧ್ಯಾಯ.

### ವ್ಯೋಮಾಸುರನ ವಧೆ.

ಎಲೈ ಅರಸೇ, ಅನಂತರದಲ್ಲಿ ಕಂಸನಿಂದ ಕಳುಹಿಸಲ್ಪಟ್ಟ ಕೇಶಿನಾಮಕನಾದ ಅಸುರನು ಮಹತ್ತಾದ ಅಶ್ವದೇಹವನ್ನು ಧರಿಸಿ ಕಾಲು ಕೊಳಗಗಳ ಪ್ರಹರಗಳಿಂದ ಭೂಮಿಯನ್ನು ಸೀಳುತ ಮನೋವೇಗವುಳ್ಳವನಾಗಿ ಹೆಕ್ಕತ್ತಿನಮೇಲಿರುವ ಕೇಸರಗಳಿಂದ ಆಕಾಶವನ್ನು ವ್ಯಾಪಿಸಿ ತಳ್ಳಲ್ಪಟ್ಟ ಮೇಘಗಳೂ ವಿಮಾನಗಳೂ ಉಳ್ಳವನಾಗಿ ಕಂಠಗರ್ಜನೆಗಳಿಂದ ಲೋಕವನ್ನು ಭಯಪಡಿಸುತ ವಿಶಾಲನೇತ್ರವುಳ್ಳವನಾಗಿ ಘೋರವಾದ ಮುಖರಂಧ್ರವುಳ್ಳವನಾಗಿ ಸ್ಥೂಲವಾದ ಕಂಠವುಳ್ಳವನಾಗಿ ಬಂದು ಕಂಸನಿಗೆ ಹಿತವನ್ನುಂಟುಮಾಡುವ ಇಚ್ಛೆಯುಳ್ಳವನಾಗಿ ನಂದವ್ರಜವನ್ನು ಕಂಪಿಸುವಂತೆ ಮಾಡಿದನು ; ಲೋಕಶ್ರೇಷ್ಠನಾದ ಕೃಷ್ಣನು ಭಯಂಕರವಾದ ಆ ಹೇಷಾಧ್ವನಿಗಳಿಂದ ಗೋಕುಲವನ್ನು ಭಯಪಡಿಸುತ ಬಾಲದಿಂದ ಬೀಸಲ್ಪಟ್ಟ ಮೇಘಗಳುಳ್ಳವನಾಗಿ ತನ್ನನ್ನು ಹುಡಿಕಿಕೊಂಡು ಬರುತಿದ್ದ ಆ ಅಸುರನನ್ನು ಕಂಡನು ; ಆ ಅಸುರನು ಸಿಂಹದಂತೆ ಘರ್ಜಿಸುತ ಎದುರಾಗಿದ್ದ ಶ್ರೀಕೃಷ್ಣನನ್ನು ನೋಡಿ ಆಕಾಶವನ್ನೇ ನುಂಗುವಂತೆ ವಿಶಾಲವಾದ ಬಾಯನ್ನು ತೆರೆದುಕೊಂಡು ಬಹುಕೋಪದಿಂದ ಅಟ್ಟಬಂದು ತಿರಿಗಿಕೊಂಡು ತನ್ನ ಹಿಂಗಾಲುಗಳಿಂದ ಶ್ರೀಕೃಷ್ಣನನ್ನು ಪ್ರಹರಿಸಬೇಕೆಂದು ಪ್ರಚಂಡಧ್ವನಿಯುಳ್ಳವನಾಗಿ ಮಹಾಬಲಶಾಲಿಯಾಗಿ ಮಹಾ ಸಾಹಸವನ್ನು ಮಾಡಿದನು ; ಶ್ರೀಕೃಷ್ಣನು ಆ ಪ್ರಹಾರವನ್ನು ತಪ್ಪಿಸಿಕೊಂಡು ಕೋಪದಿಂದ ತನ್ನ ಬಾಹುಗಳಿಂದ ಆ ಅಸುರನನ್ನು ಕಾಲುಗಳಲ್ಲಿಡಿದೆತ್ತಿ ನೂರುಮಾರು ದೂರವಾಗಿ ಗರುಡನು ಸರ್ಪವನ್ನಿಡುವಂತೆ ಬೀಸಿಟ್ಟನು ; ಆ ಅಸುರನು ಮೂರ್ಛಿತನಾಗಿ ಸ್ವಲ್ಪಹೊತ್ತಿಗೆ ತಿಳಿದೆದ್ದು ಬಾಯನ್ನು ತೆರೆದುಕೊಂಡು ಕೋಪಿಸಿಕೊಂಡು ಅತಿ ವೇಗದಿಂದ ಶ್ರೀಕೃಷ್ಣನಿಗೆದುರಾಗಿಬಂದನು ; ಆತನು ನಗುತ ತನ್ನ ಎಡಭುಜವನ್ನು ಆ ಅಸುರನ ಬಾಯೊಳಗೆ ಬಿಲದಲ್ಲಿ ಸರ್ಪವನ್ನುಗ್ಗಿಸಿದಂತೆ ನುಗ್ಗಿಸಲು ಆ ಭಗವಂತನ ಭುಜಸ್ಪರ್ಶದಿಂದ ಉಕ್ಕಿನ ಘಟ್ಟಿಯು ಸ್ಪರ್ಶೆಯನ್ನು ಮಾಡಿದ ರೀತಿಯಲ್ಲಿ ಆ ಅಸುರನ ಹಲ್ಲುಗಳು ಮುರಿದುಬಿದ್ದವು ; ಆಮೇಲೆ ಚಿಕಿತ್ಸೆಯನ್ನು ಮಾಡದೆ ಉಪೇಕ್ಷಿಸಲ್ಪಟ್ಟ ಮಹೋದರರೋಗವು ವೃದ್ಧಿಯನ್ನೈದುವಹಾಗೆ ಅವನ ಬಾಯಲ್ಲಿದ್ದ ಭಗವಂತನ ಭುಜವು ಅಧಿಕವಾಗಿ ಬೆಳೆಯಲು ಆ ಅಸುರನು ಅದರಿಂದ ತಡೆಯಲ್ಪಟ್ಟ ಶ್ವಾಸಗಳುಳ್ಳವನಾಗಿ ಕಾಲುಗಳನ್ನು ಒದ್ದುಕೊಳ್ಳುತ್ತಾ ಬೆವರಿದ ಶರೀರವುಳ್ಳವನಾಗಿ ತಿರುಗುವ ನೇತ್ರಗಳುಳ್ಳವನಾಗಿ ಮೂತ್ರಪುರೀಷೋತ್ಸರ್ಗವನ್ನು ಮಾಡಿಕೊಂಡು ಭೂಮಿಯಲ್ಲಿ ಬಿದ್ದನು ; ಆ ಬಳಿಕ ಮಹಾಭುಜನಾದ ಕೃಷ್ಣನು ಪಕ್ವವಾದ ಕೆಕ್ಕರಿಕೇಹಣ್ಣು ಬಿರಿದಂತೆ ಬಿರಿದು ನಿರ್ಜೀವವಾದ ಆ ಅಸುರನ ದೇಹದದೆಶೆಯಿಂದ ತನ್ನ ಭುಜವನ್ನು ಸೆಳೆದುಕೊಂಡು ಗರ್ವರಹಿತನಾಗಿ ಅಯತ್ನದಿಂದಲೇ ಶತ್ರುವನ್ನು ಸಂಹರಿಸಿ ಪುಷ್ಪವನ್ನು ಕರೆಯುತಿದ್ದ ದೇವತೆಗಳಿಂದ ಸ್ತುತಿಸಲ್ಪಟ್ಟನು ! ಎಲೈ ಅರಸೆ, ಅನಂತರದಲ್ಲಿ ಭಗವಂತನಾಗಿ ದೇವರ್ಷಿಯಾದ ನಾರದನು ಶ್ರೀಕೃಷ್ಣನ ಸಮೀಪಕ್ಕೆ ಬಂದು ಆತನನ್ನು ಕುರಿತು “ ಎಲೈ ಶ್ರೀಕೃಷ್ಣನೆ, ಅಪರಿಚ್ಛಿನ್ನಸ್ವರೂಪನೆ, ಯೋಗೀಶ್ವರನೆ, ಜಗದೀಶ್ವರನೆ, ವಾಸುದೇವನೆ, ಸಮಸ್ತಕ್ಕೂ ಆಧಾರರೂಪನೆ, ಯಾದವಶ್ರೇಷ್ಠನೆ, ಪ್ರಭುವಾದವನೆ ; ನೀನು ಕಾಷ್ಠಗಳಲ್ಲಿರುವ ಅಗ್ನಿಯಂತೆ ಸರ್ವಪ್ರಾಣಿಗಳಲ್ಲಿಯೂ ಅಂತರಾತ್ಮಕನಾಗಿ ಅಗೋಚರನಾದವನು ; ಸರ್ವಭೂತಹೃದಯವಾಸಿಯೂ ಬುದ್ಧಿಸಾಕ್ಷಿಯೂ ಮಹಾಪುರುಷನಾದ ಈಶ್ವರನೂ ನೀನೆ ; ಕೇವಲ ಪರಮಾತ್ಮನಾದ ನೀನು ಸೃಷ್ಟಿಗೆ ನಿನ್ನ ಮಾಯೆಯನ್ನವಲಂಬಿಸಿ ಗುಣಗಳನ್ನು ಸೃಜಿಸಿದೆ ; ಸತ್ಯಸಂಕಲ್ಪನಾದ ನೀನು ಸತ್ವಾದಿ ಗುಣಗಳಿಂದ ಜಗತ್ತನ್ನು ಸೃಷ್ಟಿಸುತಲೂ ರಕ್ಷಿಸುತಲೂ ಸಂಹರಿಸು

ತಲೂ ಇರುವೆ ; ನೀನು ಕ್ಷತ್ರಿಯವಂಶದಲ್ಲಿ ಉತ್ಪನ್ನರಾದ ದೈತ್ಯ ದಾನವ ರಾಕ್ಷಸರನ್ನು ಸಂಹಾರಮಾಡಲೋಸು ಗವೂ ಧರ್ಮವ್ಯವಸ್ಥೆಯನ್ನು ಮಾಡಿ ಸಂರಕ್ಷಿಸಲೋಸುಗವೂ ಈ ಅವತಾರವನ್ನು ಮಾಡಿದ್ದೀ ; ಯಾವ ಅಸುರನ ಹೇಷಾಧ್ವನಿಗಳನ್ನು ಕೇಳಿ ಭಯದಿಂದ ದೇವತೆಗಳು ಸ್ವರ್ಗವನ್ನು ಬಿಟ್ಟು ಹೋಗುವರೋ ಅಂಥಾ ಅಶ್ವಾಕೃತಿ ಯುಳ್ಳ ಕೇಶಿನಾಮಕನಾದ ಅಸುರನು ಜನರು ಮಾಡಿದ ಪುಣ್ಯದಿಂದ ನಿನ್ನಿಂದ ಸಂಹೃತನಾದನು ; ಮುಂದೆ ಚಾಣೂ ರನು ಮುಷ್ಟಿಕನು ಮೊದಲಾದ ಜಟ್ಟಿಗಳನ್ನೂ ಕುವಲಯಾಪೀಡವೆಂಬ ಮದಗಜವನ್ನೂ ಕಂಸನನ್ನೂ ಸಂಹರಿ ಸುವೆ ; ಅದನ್ನು ನಾನು ನೋಡುವೆನು ; ಆಮೇಲೆ ಪಂಚಜನನೆಂಬ ಅಸುರನನ್ನೂ ಯವನನ್ನೂ ಮುರನನ್ನೂ ನರಕನನ್ನೂ ಸಂಹರಿಸುವೆ ; ಇಂದ್ರನನ್ನು ಜಯಿಸಿ ಪಾರಿಜಾತವನ್ನು ತರುವೆ ; ನಿನ್ನ ಪರಾಕ್ರಮವನ್ನೇ ಶುಲ್ಕದ್ರ ವ್ಯವಾಗಿ ಕೊಟ್ಟು ವೀರಕನ್ಯೆಯರನ್ನು ವಿವಾಹಮಾಡಿಕೊಳ್ಳುವೆ ! ಎಲೈ ಜಗತ್ಪತಿಯಾದ ಶ್ರೀಕೃಷ್ಣನೆ, ಅನಂತರ ದಲ್ಲಿ ಜಾಂಬವಂತನ ಪುತ್ರಿಯಾದ ಜಾಂಬವತೀದೇವಿಯನ್ನು ಪಾಣಿಗ್ರಹಣಮಾಡಿಕೊಂಡು ಸ್ಯಮಂತಕಮಣಿಯ ನ್ನು ಸಾಧಿಸಿಕೊಂಡು ಬರುವೆ ; ಒಬ್ಬ ಬ್ರಾಹ್ಮಣನಿಗೆ ಮೃತನಾದ ಆತನ ಪುತ್ರನನ್ನು ತಂದುಕೊಡುವೆ ; ಪೌಂಡ್ರ ಕನನ್ನು ಸಂಹರಿಸುವೆ ; ಕಾಶೀಪುರವನ್ನು ದಹಿಸುವೆ ; ದಂತವಕ್ತ್ರನನ್ನು ಸಂಹರಿಸುವೆ ; ಯುಧಿಷ್ಠಿರನ ರಾಜಸೂ ಯಯಾಗದಲ್ಲಿ ಶಿಶುಪಾಲನನ್ನು ಸಂಹರಿಸುವೆ ; ದ್ವಾರಕಾನಗರದಲ್ಲಿ ವಾಸಮಾಡಿಕೊಂಡು ನೀನು ಮಾಡುವ ಕವಿಗ ಳಿಂದ ಗಾನಂಗೈಯಲು ಯೋಗ್ಯಗಳಾದ ಪರಾಕ್ರಮ ವ್ಯಾಪಾರಗಳನ್ನು ನಾನು ನೋಡುವೆನು ; ಮತ್ತು ಭೂಭಾ ರಪರಿಹಾರಾರ್ಥವಾಗಿ ಅರ್ಜುನನಿಗೆ ಸಾರಥಿಯಾಗಿ ಅನೇಕ ಅಕ್ಷೋಹಿಣೀ ಸೇನೆಗಳನ್ನು ಸಂಹಾರಂಗೈಯುವೆ ; ಶು ದ್ಧಚಿದ್ರೂಪನಾಗಿ ಸ್ವಸ್ವರೂಪಭೂತವಾದ ಪರಮಾನಂದಸ್ಥಿತಿಯನ್ನು ಪಡೆದವನಾಗಿ ಸರ್ವಾರ್ಥಗಳುಳ್ಳ ಅಮೋ ಘವಾದ ಇಚ್ಛೆಯುಳ್ಳವನಾಗಿ ಸತ್ಯಸಂಕಲ್ಪನಾಗಿ ಸ್ವತೇಜಸ್ಸಿನಿಂದ ಪರಿವೃತವಾದ ಮಾಯಾಗುಣಪ್ರವಾಹವುಳ್ಳವನಾಗಿ ಭಗವಂತನಾಗಿ ಪರಮಾತ್ಮನಾದ ನಿನ್ನನ್ನು ನಾನು ಶರಣುಹೊಂದುತ್ತೇನೆ ; ಈಶ್ವರನಾಗಿ ಸ್ವಯಾಶ್ರಯನಾಗಿ ನಿಜ ಮಾಯೆಯಿಂದ ನಿರ್ಮಿಸಲ್ಪಟ್ಟ ಮಹದತ್ವ ಮೊದಲಾದ ಸರ್ವಪ್ರಪಂಚವುಳ್ಳವನಾಗಿ ವಿಲಾಸಾರ್ಥವಾಗಿ ಗ್ರಹಿಸ ಲ್ಪಟ್ಟ ಮಾನುಷದೇಹವುಳ್ಳವನಾಗಿ ಯದು ವೃಷ್ಣಿ ಭೋಜರಿಗೆ ಅಧಿಪತಿಯಾದ ನಿನ್ನನ್ನು ನಮಸ್ಕರಿಸುತ್ತೇನೆ" ಎಂದು ನುಡಿದನು !

ಎಲೈ ಅರಸೆ, ಭಗವದ್ಭಕ್ತನಾದ ನಾರದನು ಈ ಪ್ರಕಾರವಾಗಿ ಯದುಪತಿಯಾದ ಕೃಷ್ಣನನ್ನು ನಮಸ್ಕರಿಸಿ ಆತನಿಂದ ಅನುಜ್ಞಾತನಾಗಿ ಕೃಷ್ಣದರ್ಶನ ಸಂತೋಷದಿಂದ ಪರವಶನಾಗಿ ಹೊರಟುಹೋಗಲು ಭಗವಂತನಾದ ಶ್ರೀಕೃಷ್ಣನು ಕೇಶಿಯೆಂಬ ಅಸುರನನ್ನು ಸಂಹರಿಸಿ ಸಂತುಷ್ಟರಾದ ಗೋಪಾಲಕರೊಡನೆ ಸುಖವಾಗಿ ಪಶುಗಳ ನ್ನು ಪಾಲಿಸಿಕೊಂಡಿದ್ದನು ! ಒಂದು ಸಮಯದಲ್ಲಿ ಗೋಪಾಲಕರು ಪರ್ವತದ ತಪ್ಪಲುಗಳಲ್ಲಿ ಗೋವುಗಳನ್ನು ಸಂಚಾರಮಾಡಿಸುತ ಕೆಲವರು ಚೋರರಂತೆಯೂ ಕೆಲವರು ಗೋಪಾಲಕರಂತೆಯೂ ಕೆಲವರು ಕುರಿಗಳಂತೆಯೂ ವೇಷಗಳನ್ನು ಧರಿಸಿಕೊಂಡು ನಿರ್ಭಯರಾಗಿ ಕ್ರೀಡಿಸುತಿದ್ದರು ; ಆಗ ಮಯನ ಪುತ್ರನಾದ ವ್ಯೋಮಾಸುರನು ಚೋರರಂತಿದ್ದ ಗೋಪಾಲಕವೇಷಧಾರಿಯಾಗಿ ಒಂದು ಕುರಿಗಳ ವೇಷವನ್ನು ಧರಿಸಿದ್ದ ಗೋಪಾಲಕರನ್ನು ಒಬ್ಬೊ ಬ್ಬರಾಗಿ ಅಪಹರಿಸಿಕೊಂಡು ಹೋಗಿ ಒಂದು ಪರ್ವತದ ಗುಹೆಯಲ್ಲಿರಿಸಿ ಆ ಗುಹಾದ್ವಾರಕ್ಕೆ ದೊಡ್ಡ ಕಲ್ಲನ್ನು ಚಾಚಿದನು ; ಸತ್ಪುರುಷರಕ್ಷಕನಾದ ಶ್ರೀಕೃಷ್ಣನು ಆ ಅಸುರನ ವ್ಯಾಪಾರವನ್ನು ತಿಳಿದು ಗೋಪಾಲಕರನ್ನಾಕ ರ್ಷಿಸಿಕೊಂಡು ಹೋದ ಆ ಅಸುರನನ್ನು ಸಿಂಹವು ಕ್ಷುದ್ರಮೃಗವನ್ನಿಡಿಯುವ ರೀತಿಯಲ್ಲಿಡಿದು ಆತನು ಪರ್ವತಕ್ಕೆ ಸಮಾನವಾದ ತನ್ನ ನಿಜರೂಪವನ್ನು ಧರಿಸಿಕೊಂಡು ಬಿಡಿಸಿಕೊಳ್ಳಲಾರದೆ ಪೀಡಿತನಾಗಲು ತನ್ನ ಬಾಹುಗಳಿಂದ ಅವನನ್ನು ತಬ್ಬಿ ಹಿಡಿದು ಭೂಮಿಯಲ್ಲಿ ಕೆಡೆಹಿ ಅಂತರಿಕ್ಷದಲ್ಲಿ ದೇವತೆಗಳು ನೋಡುತ್ತಿರಲು ಯಜ್ಞದಲ್ಲಿ ಪಶುವ ನ್ನು ಶ್ವಾಸಬಿಡದ ರೀತಿಯಲ್ಲಿ ಸಂಹರಿಸುವಂತೆ ಸಂಹರಿಸಿ ಗುಹದ್ವಾರದಲ್ಲಿದ್ದ ಶಿಲೆಯನ್ನು ತಳ್ಳಿ ಗೋಪಾಲಕರನ್ನು ಹೊರಗೆ ಹೊರಡಿಸಿಕೊಂಡು ದೇವತೆಗಳಿಂದ ಸ್ತುತಿಸಲ್ಪಡುತ ಗೋಪಾಲಕರೊಡನೆ ಗೋಕುಲಕ್ಕೆ ಬಂದನು !

## ೩೮ನೇ ಅಧ್ಯಾಯ.

### ಅಕ್ರೂರನು ಕೃಷ್ಣನ ಬಳಿಗೆ ಬಂದದ್ದು.

ಎಲೈ ಅರಸೆ, ಇತ್ತಲ ಮಹಾ ಬುದ್ಧಿಶಾಲಿಯಾದ ಅಕ್ರೂರನು ಈ ಪ್ರಕಾರವಾಗಿ ಕಂಸನಿಂದ ಆಜ್ಞಾಪಿಸಲ್ಪಟ್ಟು ಆ ರಾತ್ರಿ ಮಥುರಾಪುರದಲ್ಲೇ ಇದ್ದು ಬೆಳಗಾದ ವೇಳೆ ರಥಾರೂಢನಾಗಿ ನಂದಗೋಕುಲಕ್ಕೆ ಬರುತ ಭಗವಂತನಾಗಿ ಪದ್ಮಲೋಚನನಾದ ಶ್ರೀಕೃಷ್ಣನಲ್ಲಿ ಪರಮಭಕ್ತಿಯನ್ನು ಮಾಡುತ ತನ್ನ ಮನಸ್ಸಿನಲ್ಲಿ “ ನಾನು ಯಾವ ಪುಣ್ಯವನ್ನು ಮಾಡಿದೆನೋ—ಯಾವ ಉತ್ಕೃಷ್ಟತಪವಂಗೈದೆನೋ—ಸತ್ಪಾತ್ರದಲ್ಲಿ ಯಾವ ವಸ್ತುವನ್ನು ಕೊಟ್ಟೆನೋ—ಅದರಿಂದ ಭಗವಂತನಾದ ಕೇಶವನನ್ನು ನೋಡುವ ಭಾಗ್ಯವುಂಟಾಯಿತು! ವಿಷಯಾಸಕ್ತಚಿತ್ತನಾದ ನನಗೆ ಉತ್ತಮಶ್ಲೋಕನಾದ ಶ್ರೀಕೃಷ್ಣನ ದರ್ಶನವು ಶೂದ್ರೋತ್ಪನ್ನನಾದವನಿಗೆ ವೇದಾಧ್ಯಯನವು ದುರ್ಲಭವಾಗಿರುವಂತೆ ದುರ್ಲಭವಾದಂಥಾದ್ದು; ಹಾಗಿದ್ದರೂ ಅಧಮನಾದ ನನಗೂ ಅಚ್ಯುತನ ದರ್ಶನವು ಪ್ರಾಪ್ತವಾಯಿತು; ಕಾಲವೆಂಬ ನದಿಯಲ್ಲಿ ಕೊಚ್ಚಿಹೋಗುವ ಪುರುಷನು ತಡಿಯನ್ನು ಸೇರುವಂತೆ ನನ್ನ ಪಾಪವು ನಷ್ಟವಾಯಿತು; ನನ್ನ ಜನ್ಮವು ಸಫಲವಾಯಿತು! ಯೋಗಿಗಳಿಂದ ಧ್ಯಾನಯೋಗ್ಯವಾದ ಪಾದಪದ್ಮವುಳ್ಳ ಭಗವಂತನನ್ನು ನಮಸ್ಕರಿಸುವೆನಾದಕಾರಣ ನಾನು ಕೃತಾರ್ಥನೇ ಸರಿ; ಈಗ ನನಗೆ ಕಂಸನು ಮಹತ್ತಾದ ಅನುಗ್ರಹವನ್ನು ಮಾಡಿದನು; ಆತನಿಂದ ಕಳುಹಿಸಲ್ಪಟ್ಟ ನಾನು ಮಾನುಷಾವತಾರವನ್ನು ಮಾಡಿರುವ ಭಗವಂತನ ಪಾದಪದ್ಮವನ್ನು ಕಾಣುವೆನಾದ್ದರಿಂದ ಕಂಸನು ನನ್ನಲ್ಲಿ ಅನುಗ್ರಹಿಸಿದನು; ಪೂರ್ವಿಕರಾದ ಅಂಬರೀಷಾದಿಗಳು ಯಾವ ಪಾದಪದ್ಮದ ನಖಕಾಂತಿಯಿಂದ ಅಪರಿಹಾರ್ಯವಾದ ಸಂಸಾರವನ್ನು ದಾಟಿದರೋ ಅಂಥಾ ಶ್ರೀಕೃಷ್ಣನ ಪಾದಪದ್ಮವನ್ನು ಕಾಣುವೆನು; ಬ್ರಹ್ಮನು ಮೊದಲಾದ ದೇವತೆಗಳಿಂದ ಪೂಜಿತವಾಗಿ ಮಹಾಲಕ್ಷ್ಮಿಯಿಂದಲೂ ಮುನಿಗಳಿಂದಲೂ ಯಾದವರಿಂದಲೂ ಆರಾಧಿತವಾದ್ದಾಗಿ ಗೋವುಗಳನ್ನು ಸಂಚಾರಮಾಡಿಸಲೋಸುಗ ಗೋಪಾಲಕರೊಡನೆ ವನದಲ್ಲಿ ಸಂಚಾರಮಾಡುವಂಥಾದ್ದಾಗಿ ಗೋಪಸ್ತ್ರೀಯರ ಕುಚಕುಂಕುಮ ಲಿಪ್ತವಾದ ಭಗವಂತನ ಪಾದಪದ್ಮವನ್ನು ನೋಡುವೆನು; ಮೃಗಗಳು ನನಗೆ ಪ್ರದಕ್ಷಿಣಾಕಾರವಾಗಿ ಬರುತಲಿವೆ; ದಿವ್ಯಶಕುನವಾಗುವದರಿಂದ ನಾನು ನಿಸ್ಸಂಶಯವಾಗಿ ಮನೋಹರವಾದ ಕಪೋಲಗಳೂ ನಾಸಿಕವೂ ಉಳ್ಳದ್ದಾಗಿ ಮಂದಸ್ಮಿತಯುಕ್ತವಾಗಿ ಕಟಾಕ್ಷಪ್ರಸಾರವುಳ್ಳದ್ದಾಗಿ ಕೆಂದಾವರೆಗೆ ಸಮಾನವಾದ ನೇತ್ರಗಳುಳ್ಳದ್ದಾಗಿ ವಕ್ರವಾದ ಕೇಶಗಳಿಂದ ಆವೃತವಾಗಿರುವ ಕೃಷ್ಣನ ಮುಖವನ್ನು ನೋಡುವೆನು; ಭೂಭಾರಪರಿಹಾರಕ್ಕೋಸ್ಕರ ಸ್ವಜನರಾದ ದೇವತೆಗಳ ಪ್ರಾರ್ಥನೆಯಿಂದ ಮಾನುಷಾವತಾರವನ್ನೈದಿರುವ ಸೌಂದರ್ಯನಿಧಿಯಾದ ಶ್ರೀಕೃಷ್ಣನ ದರ್ಶನವು ನನಗುಂಟಾಗುವದರಿಂದ ನನ್ನ ನೇತ್ರಗಳಿಗೆ ಶೀಘ್ರವಾಗಿ ಸಾಫಲ್ಯವುಂಟಾಗುವದು; ಕಾರ್ಯಾಕಾರಣಗಳನ್ನು ನೋಡುವವನಾಗಿ ಅಹಂಕಾರರಹಿತನಾಗಿ ತನ್ನ ಚಿಚ್ಛಕ್ತಿಯಿಂದ ಪರಿಹರಿಸಲ್ಪಟ್ಟ ಅಜ್ಞಾನಜನ್ಯವಾದ ಭೇದಭ್ರಮೆಯುಳ್ಳವನಾದಾಗ್ಯೂ ತನ್ನ ಮಾಯೆಯಿಂದ ಸ್ವಕೀಯವಾದ ಈಕ್ಷಣದಿಂದ ತನ್ನಲ್ಲಿ ನಿರ್ಮಿತಗಳಾದ ಪ್ರಾಣೇಂದ್ರಿಯ ಬುದ್ಧಿಗಳಿಂದ ಯುಕ್ತವಾದ ಜೀವಗಳಿಂದ ಬೃಂದಾವನಾದಿ ಸ್ಥಾನಗಳಲ್ಲಿಯೂ ಗೋಪಿಕಾಗೃಹಗಳಲ್ಲಿಯೂ ಅವರಿಗೆ ಸ್ವಾಧೀನನಂತೆ ಅಭಿಮುಖನಾಗಿ ವಿಹರಿಸುತ ಸಮಸ್ತ ಪಾಪಪರಿಹಾರಕಗಳಾಗಿ ಅತಿ ಶುಭಪ್ರದಗಳಾದ ತನ್ನ ಕರುಣಾಕಟಾಕ್ಷಾದಿ ಗುಣಗಳಿಂದಲೂ ಚರಿತೆಗಳಿಂದಲೂ ದಿವ್ಯನಾಮಯುಕ್ತವಾದ ವಾಕ್ಯಗಳಿಂದಲೂ ಲೋಕಗಳನ್ನು ಜೀವಿಸುವಂತೆಯೂ ಪ್ರಕಾಶಿಸುವಂತೆಯೂ ಪವಿತ್ರಗಳಾಗಿ ಮಾಡುತ ತನ್ನ ಕರ್ಮನಾಮಗಳಿಂದ ಹೀನಗಳಾದ ವಾಕ್ಯಗಳು ವಸ್ತ್ರಭೂಷಣಾದ್ಯಲಂಕೃತಗಳಾದ ನಿರ್ಜೀವದೇಹಗಳಂತೆ ವ್ಯರ್ಥಗಳಾಗಿ ಮಾಡುವಂಥಾ ಪರಮೇಶ್ವರನು ಯಾದವಕುಲದಲ್ಲವತರಿಸಿ ತನ್ನಿಂದ ನಿರ್ಮಿತಗಳಾದ ಲೋಕಧರ್ಮಾಧರ್ಮ ವ್ಯವಸ್ಥೆಗಳನ್ನು ಪರಿಪಾಲಿಸುವ ಬ್ರಹ್ಮಾದಿಗಳಿಗೆ ಸುಖಪ್ರದನಾಗಿ ಸರ್ವಮಂಗಳಪ್ರದವಾಗಿ ದೇವತೆಗಳಿಗು ಗಾನಯೋಗ್ಯವಾದ ದಿವ್ಯರೂಪವನ್ನು ಧರಿಸಿರುವ ಶ್ರೀಕೃಷ್ಣನನ್ನು ಈದಿನ ನಾನು ಕಾಣುವದು ನಿಶ್ಚಯವು; ನನಗೆ ಪ್ರಾತಃಕಾಲದಲ್ಲಿ ಶುಭಶಕುನಗಳಾದವು; ಇದು ಮಹಾಶಕುನವಾದ್ದರಿಂದ ಭಗವಂತನ ದರ್ಶನವು ನನಗುಂಟಾಗುವದು;

ನಾನು ಶ್ರೀಕೃಷ್ಣ ದರ್ಶನಾನಂತರದಲ್ಲಿ ರಥದಿಂದಿಳಿದು ಯೋಗಿಗಳಿಂದ ಆತ್ಮಸಾಕ್ಷಾತ್ಕಾರಾರ್ಥವಾಗಿ ಮನಸ್ಸಿನಲ್ಲಿ ಧರಿಸಲ್ಪಟ್ಟಿರುವ ಪ್ರಧಾನಪುರುಷರಾದ ರಾಮಕೃಷ್ಣರ ಪಾದಾಬ್ಜಗಳನ್ನು ನಮಸ್ಕರಿಸುತ್ತೇನೆ; ರಾಮಕೃಷ್ಣರ ಮಿತ್ರರಾದ ಗೋಪಾಲಕರನ್ನೂ ನಮಸ್ಕರಿಸುತ್ತೇನೆ; ಶ್ರೀಕೃಷ್ಣನ ಪಾದಮೂಲದಲ್ಲಿ ಬಿದ್ದು ನಮಸ್ಕರಿಸುವ ನನ್ನ ಶಿರಸ್ಸಿನಲ್ಲಿ ಆತನು ಪದ್ಮದಂತೆ ಸುಂದರವಾದ ತನ್ನ ಹಸ್ತವನ್ನಿರಿಸಲಿ; ಆ ಹಸ್ತವು ಮಹಾ ಸರ್ಪದಿಂದ ಭಯಪಟ್ಟು ಮೊರೆಹೊಕ್ಕ ಜನರಿಗೆ ಅಭಯವನ್ನಿತ್ತದ್ದು; ಆ ಹಸ್ತದಲ್ಲಿ ದೇವೇಂದ್ರನು ಸ್ವಲ್ಪವಸ್ತುವನ್ನಿತ್ತು ಲೋಕತ್ರಯಾಧಿಪತ್ಯವನ್ನು ಪಡೆದನು; ಬಲಿಯು ಆ ಹಸ್ತದಲ್ಲಿ ಭೂದಾನಾರ್ಥವಾಗಿ ತೀರ್ಥೋದಕವನ್ನು ಕೊಟ್ಟು ಲೋಕತ್ರಯಾಧಿಪತ್ಯವನ್ನೈದಿದನು; ರಾಸವಿಹಾರದಲ್ಲಿ ಕಲ್ಹಾರಪುಷ್ಪಕ್ಕೆ ಸಮಾನವಾದ ಸುಗಂಧವುಳ್ಳದ್ದಾಗಿ ಸ್ಪರ್ಶಸುಖವನ್ನುಂಟುಮಾಡಿ ಗೋಪಸ್ತ್ರೀಯರ ಕ್ರೀಡಾಶ್ರಮವನ್ನು ಪರಿಹರಿಸಿದಂಥಾ ತನ್ನ ಹಸ್ತವನ್ನು ನನ್ನ ಶಿರಸ್ಸಿನಲ್ಲಿರಿಸಿ ಅನುಗ್ರಹಿಸುವನು; ನಾನು ಕಂಸನಿಂದ ಕಳುಹಿಸಲ್ಪಟ್ಟ ಭೃತ್ಯನಾದಾಗ್ಯೂ ನನ್ನನ್ನು ಶತ್ರುಪಕ್ಷದವನೆಂದು ಆ ಭಗವಂತನು ಉಪೇಕ್ಷೆಯನ್ನು ಮಾಡನು; ಸರ್ವಜ್ಞನಾದ ಕೃಷ್ಣನು ನನ್ನ ಮನಸ್ಸಿನ ಒಳಗೂ ಹೊರಗೂ ಅಂತರ್ಯಾಮಿಯಾಗಿದ್ದುಕೊಂಡು ತನ್ನ ದಿವ್ಯಜ್ಞಾನದಿಂದ ನನ್ನ ಭಕ್ತಿಯನ್ನು ತಿಳಿದಿರುವವನಾದಕಾರಣ ನನ್ನ ಮನೋವೃತ್ತಿಯನ್ನು ಬಲ್ಲನು; ತನ್ನ ಪಾದಮೂಲದಲ್ಲಿ ಕೈಮುಗಿದುಕೊಂಡು ಶಿರಬಾಗಿ ನಿಂತಿರುವ ನನ್ನನ್ನು ಶ್ರೀಕೃಷ್ಣನು ಕೃಪಾದ್ರ್ರದೃಷ್ಟಿಯಿಂದ ನಗುತ ನೋಡಿದರೆ ನಾನು ಆ ಕ್ಷಣದಲ್ಲೇ ಸಮಸ್ತ ಪಾಪಗಳನ್ನೂ ಪರಿಹರಿಸಿಕೊಂಡು ನಿರ್ಭಯನಾಗಿ ಉತ್ತಮವಾದ ಸಂತೋಷವನ್ನು ಪಡೆಯುವೆನು; ಅತ್ಯಂತ ಮಿತ್ರನಾಗಿ ಬಂಧುವಾಗಿ ಎಲ್ಲರನ್ನೂ ಬಿಟ್ಟು ತನ್ನನ್ನೇ ನಂಬಿರುವ ನನ್ನನ್ನು ಶ್ರೀಕೃಷ್ಣನು ತನ್ನ ದೀರ್ಘಬಾಹುಗಳಿಂದ ಆಲಿಂಗನಮಾಡಿಕೊಂಡರೆ ಆಕ್ಷಣದಲ್ಲೇ ನನ್ನ ಶರೀರವು ಪವಿತ್ರವಾಗಿ ನನ್ನ ಕರ್ಮಬಂಧವು ಶಿಥಿಲವಾಗುವದು; ಶ್ರೀಕೃಷ್ಣನ ಶರೀರಸ್ಪರ್ಶವನ್ನು ಪಡೆದು ನಮಸ್ಕರಿಸಿ ಅಂಜಲಿಬಂಧವನ್ನು ಮಾಡಿಕೊಂಡು ನಿಂತಿರುವ ನನ್ನನ್ನು ಆ ಭಗವಂತನು 'ಎಲೇ ಅಕ್ರೂರನೆ' ಎಂದು ಮಾತನಾಡಿಸಿದರೆ ನಾನು ಜನ್ಮವನ್ನು ಪಡೆದದ್ದು ಸಾರ್ಥಕವು; ಭಗವಂತನಿಂದ ಆದರಿಸಲ್ಪಡದವನ ಜನ್ಮವು ವ್ಯರ್ಥವು; ಪರಮೇಶ್ವರನಾದ ಶ್ರೀಕೃಷ್ಣನಿಗೆ ಮಿತ್ರರೂ ಇಲ್ಲ—ಆಪ್ತರೂ ಇಲ್ಲ; ಅಹಿತರೂ ಇಲ್ಲ; ದ್ವೇಷಿಯೂ ಇಲ್ಲ; ಉಪೇಕ್ಷಾವಿಷಯರೂ ಇಲ್ಲ; ಆದಾಗ್ಯೂ ಆತನು ಭಕ್ತರನ್ನು ಭಜಿಸುತ್ತಾನೆ; ಕಲ್ಪವೃಕ್ಷವು ಭಜಿಸುವ ಜನರಿಗೆ ಇಷ್ಟಾರ್ಥವನ್ನು ಕೊಡುವಂತೆ ಆತನು ಭಕ್ತರ ಇಷ್ಟಾರ್ಥವನ್ನು ಕೊಡುವನು; ಯಾದವೋತ್ತಮನಾದ ಕೃಷ್ಣನು ನಮಸ್ಕಾರಮಾಡಿ ಕೃತಾಂಜಲಿಯಾಗಿ ನಿಂತಿರುವ ನನ್ನನ್ನಾಲಿಂಗನಂಗೈದು ನನ್ನ ಕೈಹಿಡಿದುಕೊಂಡು ತನ್ನ ಮನೆಗೆ ಕರಕೊಂಡು ಹೋಗಿ ಅರ್ಘ್ಯಾದಿಗಳಿಂದ ಸತ್ಕರಿಸಿ ಕಂಸನ ದುರಾಲೋಚನೆಗಳನ್ನು ಕೇಳುವನು" ಎಂದು ಚಿಂತಿಸಿದನು.

ಎಲೈ ಪರೀಕ್ಷಿದ್ರಾಯನೆ, ಈ ಪ್ರಕಾರವಾಗಿ ಶ್ರೀಕೃಷ್ಣನನ್ನೆ ಚಿಂತಿಸುತ ಶ್ವಫಲ್ಕಪುತ್ರನಾದ ಅಕ್ರೂರನು ರಥದಿಂದ ಗೋಕುಲಕ್ಕೆ ಬರಲು ಸೂರ್ಯಾಸ್ತಮಯವಾಯಿತು; ಅಕ್ರೂರನು ಸಮಸ್ತ ಲೋಕಪಾಲಕರ ಕಿರೀಟಗಳಿಂದ ಪಡೆಯಲ್ಪಟ್ಟ ಪಾದರೇಣುಗಳುಳ್ಳ ಶ್ರೀಕೃಷ್ಣನ ಸಂಬಂಧಿಗಳಾಗಿ ಭೂಮಿಗೆ ಭೂಷಣಗಳಾಗಿ ಪದ್ಮರೇಖೆಗಳಿಂದಲೂ ಯವರೇಖೆಗಳಿಂದಲೂ ಅಂಕುಶರೇಖೆ ಮೊದಲಾದ ರೇಖೆಗಳಿಂದಲೂ ಅಂಕಿತಗಳಾದ ಹೆಜ್ಜೆಗಳನ್ನು ಗೋಷ್ಠದಲ್ಲಿ ಕಂಡು ಆ ಹೆಜ್ಜೆಗಳ ದರ್ಶನದಿಂದ ಅಭಿವೃದ್ಧಿಯಾದ ತ್ವರೆಯುಳ್ಳವನಾಗಿ ರಥದಿಂದ ಧುಮಿಕಿ ಪ್ರಭುವಾದ ಕೃಷ್ಣನ ಪಾದರಜಸ್ಸುಗಳುಳ್ಳವೆಂದು ಆ ಹೆಜ್ಜೆಗಳಿಗೆರಗಿ ಬಿದ್ದು ಹೊರಳುತ ಡಂಭವನ್ನೂ ಭಯವನ್ನೂ ಶೋಕವನ್ನೂ ಬಿಟ್ಟು ಕಂಸನ ಅಪ್ಪಣೆಯಿಂದ ಬಂದವನಾದರೂ ಭಗವಂತನ ದರ್ಶನ ಶ್ರವಣ ಕೀರ್ತನೆಗಳಿಂದ ಪರವಶನಾಗಿದ್ದನು! ಎಲೈ ಅರಸೆ, ಪ್ರಾಣಿಗಳಿಗೆ ಅದೇ ಪರಮಪುರುಷಾರ್ಥವು! ಈ ರೀತಿಯಲ್ಲಿ ಅಕ್ರೂರನು ಬಹಳಹೊತ್ತು ಹೊರಳಿ ಎದ್ದು ರಥವನ್ನೇರಿಕೊಂಡು ಗೋನಾಥರಾದ ರಾಮಕೃಷ್ಣರಿರುವ ಸ್ಥಾನವನ್ನು ಕೇಳುತ ಗೋಸ್ಥಾನದಲ್ಲಿರುವದಾಗಿ ಗೋಪಾಲಕರಿಂದ ಹೇಳಲ್ಪಟ್ಟು ಶೀಘ್ರವಾಗಿ ಗೋವುಗಳನ್ನು ಕರೆಯುವ ಸ್ಥಾನಕ್ಕೆ ಹೋಗಿ ರಾಮಕೃಷ್ಣರನ್ನು ಕಂಡನು; ಆ ರಾಮಕೃಷ್ಣರು ಪೀತಾಂಬರವನ್ನೂ ನೀಲಾಂಬರವನ್ನೂ ಧರಿಸಿದವರು; ಶರತ್ಕಾಲ

ಪದ್ಮದಂತೆ ಸುಂದರವಾದ ನೇತ್ರಗಳುಳ್ಳವರು ; ಬಾಲಕರು ; ಶ್ಯಾಮವರ್ಣವೂ ಶ್ವೇತವರ್ಣವೂ ಉಳ್ಳವರು ; ದೀರ್ಘವಾದ ಭುಜಗಳುಳ್ಳವರು ; ಶೋಭನವಾದ ಮುಖವುಳ್ಳವರು ; ಅತಿ ಸುಂದರರು ; ಆನೇಮರಿಗಳೋಪಾದಿಯಲ್ಲಿ ಪರಾಕ್ರಮವುಳ್ಳವರು ; ಧ್ವಜ ವಜ್ರ ಅಂಕುಶ ಪದ್ಮರೇಖೆಗಳುಳ್ಳ ಪಾದನ್ಯಾಸಗಳಿಂದ ವ್ರಜವನ್ನು ಶೋಭಿಸುವಂತೆ ಮಾಡುವವರು ; ದಯಾರ್ದ್ರವಾದ ಮುಗುಳುನಗೆಯಿಂದಯುಕ್ತವಾದ ನೇತ್ರಗಳುಳ್ಳವರು ; ಉತ್ಕೃಷ್ಟವಾಗಿ ರಮ್ಯವಾದ ವಿಹಾರವುಳ್ಳವರು ; ಹಾರ ವನಮಾಲೆಗಳಿಂದ ಅಲಂಕೃತರಾದವರು ; ದಿವ್ಯವಾದ ಗಂಧದಿಂದ ಲಿಪ್ತವಾದ ಶರೀರವುಳ್ಳವರು ; ಸ್ನಾತರಾಗಿ ಮಡಿವಸ್ತ್ರಗಳನ್ನು ಧರಿಸಿದವರು ; ಪ್ರಧಾನವಾದ ಆದಿಪುರುಷರು ; ಜಗತ್ಪತಿಗಳಾದವರು ; ಜಗತ್ಸೃಷ್ಟಿಕರ್ತೃಗಳು ; ಭೂರಕ್ಷಣಾರ್ಥವಾಗಿ ತಮ್ಮ ಅಂಶದಿಂದ ಅವತರಿಸಿದವರು ; ಸ್ವಕಾಂತಿಯಿಂದ ದಿಕ್ಕುಗಳ ಅಂಧಕಾರವನ್ನು ಪರಿಹರಿಸುವವರು ; ಮರಕತಪರ್ವತವೂ ರಜತಪರ್ವತವೂ ಸುವರ್ಣಯುಕ್ತವಾಗಿರುವಂತಿರುವವರು ! ಅಂಥಾ ರಾಮಕೃಷ್ಣರನ್ನು ಕಂಡು ಅಕ್ರೂರನು ರಥದಿಂದ ಧುಮಿಕಿ ಸ್ನೇಹಪರವಶನಾಗಿ ಅವರ ಪಾದಗಳ ಸಮೀಪದಲ್ಲಿ ಬಿದ್ದು ಭಗವಂತನ ದರ್ಶನದಿಂದುಂಟಾದ ಆಹ್ಲಾದದಿಂದ ಆನಂದಬಾಷ್ಪಪೂರಿತ ನೇತ್ರನಾಗಿ ರೋಮಾಂಚಿತ ದೇಹವುಳ್ಳವನಾಗಿ ಕುತೂಹಲದಿಂದ ಪರವಶನಾಗಿ ತನ್ನ ಹೆಸರನ್ನು ಹೇಳುವದಕ್ಕೂ ತೋರದೆ ಇದ್ದನು ; ಭಗವಂತನಾದ ಕೃಷ್ಣನು ಆತನು ಅಕ್ರೂರನೆಂದು ತಿಳಿದು ಚಕ್ರಾಯುಧದಿಂದಂಕಿತವಾದ ಹಸ್ತದಿಂದ ಆತನನ್ನು ಬಾಚಿ ತಬ್ಬಿಕೊಂಡನು ; ಬಲರಾಮನು ನಮಸ್ಕರಿಸಿದ ಅಕ್ರೂರನನ್ನು ಭುಜಗಳಿಂದ ಅಪ್ಪಿಕೊಂಡು ಅವನ ಕೈಯನ್ನಿಡಿದು ಕೃಷ್ಣಸಮೇತನಾಗಿ ತಮ್ಮ ಮನೆಗೆ ಕರೆದುಕೊಂಡು ಹೋದನು ; ಆಮೇಲೆ ರಾಮಕೃಷ್ಣರು ಕ್ಷೇಮಸಮಾಚಾರವನ್ನು ಕೇಳಿ ಪೀಠವನ್ನು ಕೊಟ್ಟು ಶಾಸ್ತ್ರೋಕ್ತವಾಗಿ ಪಾದಪ್ರಕ್ಷಾಳನಂಗೈದು ಮಧುಪರ್ಕೋಪಚಾರವನ್ನು ಮಾಡಿ ಗೋವನ್ನು ಸಮರ್ಪಿಸಿ ಮಾರ್ಗಶ್ರಾಂತನಾದ ಅಕ್ರೂರನನ್ನಾದರಿಸಿ ಕಾಲುಗಳನ್ನೊತ್ತಿ ಷಡ್ರಸೋಪೇತವಾದ ದಿವ್ಯಾನ್ನವನ್ನು ಭೋಜನಮಾಡಿಸಿ ಮುಖವಾಸನಾರ್ಥಗಳಾದ ತಾಂಬೂಲಗಳಿಂದಲೂ ಗಂಧಮಾಲ್ಯಗಳಿಂದಲೂ ಉಪಚರಿಸಿದರು !

ಈ ರೀತಿಯಲ್ಲಿ ಸತ್ಕೃತನಾದ ಅಕ್ರೂರನನ್ನು ಕುರಿತು ನಂದನು " ಎಲೈ ಅಕ್ರೂರನೆ, ದಯಾಶೂನ್ಯನಾದ ಕಂಸನು ಜೀವಿಸುತಿರಲು ಅವನ ವಶದಲ್ಲಿ ನೀವು ಹ್ಯಾಗಿದ್ದೀರಿ ! ಕಟಕರ ಸಮೀಪದಲ್ಲಿ ಮೇಷಗಳು ಜೀವಿಸುವಂತೆ ಜೀವಿಸುತ್ತಿದ್ದೀರಿ ; ದುರ್ಜನನಾಗಿ ಸ್ವಪ್ರಾಣಸಂರಕ್ಷಣೆಯಲ್ಲೇ ಉದ್ಯುಕ್ತನಾದ ಕಂಸನು ತನ್ನ ತಂಗಿಯಾದ ದೇವಕೀದೇವಿಯ ಮಕ್ಕಳನ್ನು ಸಂಹರಿಸಿದನು ; ಇನ್ನು ಅವನ ಪ್ರಜೆಗಳಾದ ನಿಮ್ಮ ಕ್ಷೇಮವನ್ನು ಏನುಹೇಳೋಣ ! " ಎಂದು ಕೇಳಲು ಅಂಥಾ ಸತ್ಯಪ್ರಿಯವಾಕ್ಯದಿಂದ ಬಹುಮಾನಿತನಾಗಿ ಅಕ್ರೂರನು ಮಾರ್ಗಶ್ರಮೆಯನ್ನು ಬಿಟ್ಟನು !

---

## ೪೯ ನೇ ಅಧ್ಯಾಯ.

### ಶ್ರೀಕೃಷ್ಣನು ಅಕ್ರೂರನಿಗೆ ಮೋಕ್ಷವನ್ನು ತೋರಿಸಿದ್ದು.

ಎಲೈ ಅರಸೆ, ಅನಂತರದಲ್ಲಿ ಅಕ್ರೂರನು ಮಂಚದಮೇಲೆ ಶಯನಂಗೈದು ರಾಮಕೃಷ್ಣರಿಂದ ಬಹುಮಾನಿತನಾಗಿ ಮಾರ್ಗದಲ್ಲಿ ಬರುವಾಗ ಯಾವ ಯಾವ ಮನೋರಥಗಳನ್ನಾಲೋಚಿಸಿದನೊ ಆ ಮನೋರಥಗಳನ್ನೈದಿದನು ! ಶ್ರೀನಿವಾಸನಾದ ಭಗವಂತನು ಪ್ರಸನ್ನನಾದರೆ ಯಾವದು ತಾನೆ ದುರ್ಲಭವಾದೀತು ! ಆದಾಗ್ಯು ಭಗವದ್ಭಕ್ತರು ಏನನ್ನೂ ಅಪೇಕ್ಷಿಸುವದಿಲ್ಲ ; ಭಗವಂತನಾಗಿ ದೇವಕೀ ಪುತ್ರನಾದ ಕೃಷ್ಣನು ಭೋಜನಂಗೈದು ಅಕ್ರೂರನ ಸಮೀಪದಲ್ಲಿ ಕುಳಿತುಕೊಂಡು ಕಂಸನಿಗೆ ಮಿತ್ರರಲ್ಲಿರುವ ನಡತೆಯನ್ನೂ ಅವನ ಮನೋರಥಗಳಾದ ದುರಾಲೋಚನೆಗಳನ್ನೂ ತಿಳಿಯಲೋಸುಗ ಆತನನ್ನು ಕುರಿತು "ಎಲೈ ಸೌಮ್ಯನಾದ ಅಕ್ರೂರನೆ, ಕ್ಷೇಮದಿಂದ ಬರೋಣವಾಯಿತೆ ! ನಿನಗೆ ಕ್ಷೇಮವಾಗಲಿ ; ನಿನ್ನ ಜ್ಞಾತಿ ಬಂಧುಗಳು ಕ್ಷೇಮದಲ್ಲಿಧಾರೆಯೇ ? ನಮ್ಮ ನಿಮ್ಮ ಕ್ಷೇಮವನ್ನು

ವಿಚಾರಿಸ ಕೆಲಸವಿಲ್ಲ; ನನ್ನ ವಂಶಕ್ಕೆ ಮಹಾರೋಗಸ್ವರೂಪನಾದ ಕಂಸನು ನಮಗೆ ಸೋದರಮಾವನೆನಿಸಿಕೊಂಡೂ ವಧಮಾನನಾಗಿರುವಾಗ ನಮ್ಮ ಸ್ವಜನರಿಗೂ ಪ್ರಜೆಗಳಿಗೂ ಕ್ಷೇಮವೆಂತುಂಟಾದೀತು! ಶ್ರೇಷ್ಠರಾಗಿ ನಮ್ಮ ಮಾತಾಪಿತೃಗಳಾದ ದೇವಕೀ ವಸುದೇವರಿಗೆ ನಮ್ಮ ನಿಮಿತ್ತವಾಗಿ ವಿಪತ್ತು ಬಂತು; ಅವರಿಗೆ ಪುತ್ರಮರಣವೂ ಬಂಧನವೂ ನಮ್ಮ ನಿಮಿತ್ತವಾಗಿ ಪ್ರಾಪ್ತವಾಯಿತು! ಎಲೈ ಸಾಮ್ಯನಾದ ಅಕ್ರೂರನೆ, ದೈವಕೃಪೆಯಿಂದ ಬಹುಕಾಲದಿಂದ ಅಪೇಕ್ಷಿತವಾದ ಸ್ವಜನರಾದ ನಿಮ್ಮ ದರ್ಶನವು ಈದಿನ ಉಂಟಾಯಿತು; ನೀನು ಬಂದಕಾರಣವನ್ನು ಹೇಳು" ಎಂದು ಕೇಳಿದನು.

ಅದನ್ನು ಕೇಳಿ ಅಕ್ರೂರನು ಕಂಸನಿಗೆ ಯಾದವರಲ್ಲಿರುವ ವೈರವನ್ನೂ ವಸುದೇವನ ಸಂಹಾರ ಪ್ರಯತ್ನವನ್ನೂ ಕಂಸನು ತನ್ನನ್ನು ಕಳುಹಿಸಿದ ನಿಮಿತ್ತವನ್ನೂ ನಾರದಋಷಿಯು ಕಂಸನನ್ನು ಕುರಿತು ವಸುದೇವನಿಗೆ ಪುತ್ರೋತ್ಪತ್ತಿಯಾದ ವೃತ್ತಾಂತವನ್ನು ತಿಳಿಸಿದ್ದನ್ನೂ ರಾಮಕೃಷ್ಣರನ್ನು ಚಾಣೂರಾದಿಗಳಿಂದ ಸಂಹಾರಮಾಡಿಸಬೇಕೆಂಬ ತಾತ್ಪರ್ಯವನ್ನೂ ಮಿಕ್ಕ ಅರ್ಥವೆಲ್ಲವನ್ನೂ ವಿಜ್ಞಾಪಿಸಿದನು; ಅವುಗಳನ್ನು ಕೇಳಿ ಕೃಷ್ಣನೂ ಬಲರಾಮನೂ ಅನ್ಯೋನ್ಯವಾಗಿ ನಗುತ ಅಕ್ರೂರನಿಂದ ಹೇಳಲ್ಪಟ್ಟ ಅರ್ಥವನ್ನು ತಮ್ಮ ತಂದೆಯಾದ ನಂದನಿಗೆ ತಿಳಿಸಿದರು; ನಂದನು ಗೋಪಾಲಕರನ್ನು ಕರೆದು "ಎಲೈ ಗೋಪರುಗಳಿರಾ, ಸಮಸ್ತವಾದ ಹಾಲು ಮೊಸರು ಬೆಣ್ಣೆಯನ್ನೂ ಕೈಕಾಣಿಕೆ ಪದಾರ್ಥವಾಗಿ ಸಿದ್ಧಮಾಡಿಕೊಳ್ಳಿರಿ; ನಾಳೆ ಮಧುರಾಪಟ್ಟಣಕ್ಕೆ ಹೋಗಬೇಕು; ಈ ವಸ್ತುಗಳನ್ನೆಲ್ಲ ಅರಸಿಗೆ ಒಪ್ಪಿಸಿ ಮಹತ್ತಾದ ಧನುರ್ಯಾಗವನ್ನು ನೋಡೋಣ; ದೇಶದಲ್ಲಿರುವ ಜನರೆಲ್ಲರು ಬರುತ್ತಾರಂತೆ" ಎಂಬದಾಗಿ ಪುರಾಧಿಕಾರಿಯಾದ ಕ್ಷತ್ತನ ಮುಖಾಂತ್ರ ಸಾರುವದಕ್ಕೆ ನಿಯಮಿಸಿದನು.

ಗೋಪಸ್ತ್ರೀಯರು ಆ ಅರ್ಥವನ್ನು ಕೇಳಿ ಅತ್ಯಂತ ವ್ಯಥೆಪಡುತ ರಾಮಕೃಷ್ಣರನ್ನು ಕರಕೊಂಡು ಹೋಗುವದಕ್ಕೋಸ್ಕರ ಅಕ್ರೂರನು ಬಂದದ್ದನ್ನು ತಿಳಿದು ಬಹಳವಾಗಿ ದುಃಖಪಟ್ಟರು; ಕೆಲವು ಸ್ತ್ರೀಯರು ಮನಸ್ತಾಪದಿಂದ ನಿಟ್ಟುಸುರುಬಿಡುತ ಬಳಲಿದ ಮುಖಕಾಂತಿಯುಳ್ಳವರಾದರು; ಕೆಲವರು ಜಾರುತಲಿರುವ ದುಕೂಲವಸ್ತ್ರಗಳೂ ಕೈಕಡಗಗಳೂ ಕೇಶಬಂಧಗಳೂ ಉಳ್ಳವರಾದರು; ಕೆಲವರು ಕೃಷ್ಣನನ್ನೇ ಧ್ಯಾನಿಸುತ ಸಮಸ್ತ ಗೃಹಕೃತ್ಯಗಳನ್ನೂ ಈ ಭೂಲೋಕವನ್ನೂ ಮರತು ಕೃಷ್ಣಲೋಕವನ್ನೈದಿದವರಂತಿದ್ದರು; ಮತ್ತು ಕೆಲವರು ಅನುರಾಗಪೂರ್ವಕವಾಗಿ ಮುಗುಳುನಗೆಯಿಂದ ಕೂಡಿ ಮನಸ್ಸಿಗೆ ರಮ್ಯಗಳಾದ ವಿಚಿತ್ರಪದಗಳುಳ್ಳ ಶ್ರೀಕೃಷ್ಣನ ಮಾತುಗಳನ್ನು ಸ್ಮರಿಸಿಕೊಂಡು ಮೂರ್ಛಿತರಾದರು! ಈ ಪ್ರಕಾರವಾಗಿ ಗೋಪಿಯರು ಶ್ರೀಕೃಷ್ಣನ ವೈಯಾರ ಗಮನವನ್ನೂ ಚೇಷ್ಟಾರೂಪವಾದ ವ್ಯಾಪಾರವನ್ನೂ ಸ್ನೇಹಯುಕ್ತವಾಗಿ ಸ್ಮಿತಪೂರ್ವಕವಾದ ನೋಟವನ್ನೂ ಶೋಕಪರಿಹಾರವಾದ ಕರ್ಮಗಳನ್ನೂ ಆಶ್ಚರ್ಯಕರವಾದ ಚರಿತ್ರಗಳನ್ನೂ ಚಿಂತಿಸುತ ವಿರಹಕ್ಕೆ ಭಯಪಟ್ಟು ಎಲ್ಲರು ಒಗ್ಗಟ್ಟಾಗಿ ಕೂಡಿ ಕೃಷ್ಣನಲ್ಲಿ ಲಗ್ನವಾದ ಮನಸ್ಸುಳ್ಳವರಾಗಿ ನೇತ್ರೋದಕಗಳನ್ನು ಬಿಡುತ "ಎಲೈ ಬ್ರಹ್ಮನೆ, ನಿನಗೆ ಸ್ವಲ್ಪವಾದರು ದಯೆಯಿಲ್ಲ; ಪ್ರಾಣಿಗಳನ್ನು ಮೈತ್ರಿಯಿಂದಲೂ ಅನುರಾಗದಿಂದಲೂ ಪರಸ್ಪರವಾಗಿ ಮೊದಲು ಕೂಡಿಸಿ ಆಮೇಲೆ ಅವರ ಮನೋರಥಗಳು ಪೂರ್ತಿಯಾಗುವದಕ್ಕೆ ಮೊದಲೇ ಅವರನ್ನಗಲಿಸುತ್ತಿ; ನಿನ್ನ ವ್ಯಾಪಾರವು ಬಾಲಚೇಷ್ಟೆಯಂತಿದೆ! ಎಲೈ ಬ್ರಹ್ಮನೆ, ನೀನು ಮಕರಕುಂಡಲಗಳಿಂದ ಅಲಂಕೃತವಾಗಿ ಸುಂದರವಾದ ಕಪೋಲಗಳುಳ್ಳದ್ದಾಗಿ ಉನ್ನತವಾದ ನಾಸಿಕವುಳ್ಳದ್ದಾಗಿ ಶೋಕಪರಿಹಾರಕವಾದ ಮುಗುಳುನಗೆಯುಳ್ಳ ಸುಂದರವಾದ ಮುಕುಂದನ ಮುಖವನ್ನು ನಮಗೆ ತೋರಿಸಿ ಈಗ ನಮ್ಮ ಕಣ್ಣುಗಳಿಗೆ ಎದಿರಾಗಿರದೆ ತಪ್ಪಿಹೋಗುವಂತೆ ಮಾಡುತ್ತೀ; ಇಂಥಾ ಅಯುಕ್ತವ್ಯಾಪಾರವನ್ನು ಮಾಡಬಹುದೆ! ಎಲೈ ಬ್ರಹ್ಮನೆ, ಕ್ರೂರನಾದ ನೀನು ಅಕ್ರೂರನೆಂಬ ಹೆಸರಿನಿಂದ ಬಂದು ನಿನ್ನಿಂದ ಕೊಡಲ್ಪಟ್ಟ ನಮ್ಮ ನೇತ್ರಗಳನ್ನಪಹರಿಸುತ್ತೀ; ನಿನ್ನ ವ್ಯಾಪಾರವು ದತ್ತಾಪಹಾರರೂಪವಾದದ್ದು; ನಿನ್ನಿಂದ ಕೊಡಲ್ಪಟ್ಟಿರುವ ನೇತ್ರಗಳಿಂದ ಶ್ರೀಕೃಷ್ಣನ ಮುಖಮುಂತಾದ ಅಂಗಗಳಲ್ಲಿ ನಿನ್ನ ಸೃಷ್ಟಿಕೌಶಲವೆಲ್ಲವನ್ನೂ ನೋಡಿದೆವು; ಅಂಥಾ ಶ್ರೀಕೃಷ್ಣನನ್ನಪಹರಿಸಿಕೊಂಡು

ಹೋದಮೇಲೆ ನಮ್ಮ ನೇತ್ರಗಳನ್ನಪಹರಿಸಿದಹಾಗಲ್ಲವೆ!——ನಂದನ ಕುಮಾರನಾದ ಕೃಷ್ಣನು ಕ್ಷಣಿಕವಾದ ಸ್ನೇಹವುಳ್ಳವನು; ಸ್ಥಿರವಾದ ವಿಶ್ವಾಸವುಳ್ಳವನಲ್ಲ; ನೂತನವಸ್ತುಗಳಲ್ಲಿ ಪ್ರೀತಿಯುಳ್ಳವನಾಗಿ ಪೂರ್ವದಲ್ಲಿ ಸ್ನೇಹಿತರಾಗಿ ನಂಬಿಕೊಂಡಿದ್ದವರಲ್ಲಿ ಉಪೇಕ್ಷೆಮಾಡುತ್ತಾನೆ; ಮುಂಚೆ ತನ್ನಿಂದಲೆ ತೋರಿಸಲ್ಪಟ್ಟ ಮಂದಸ್ಮಿತಪೀಕ್ಷಣಗಳನ್ನೂ ವಿಲಾಸಗಳನ್ನೂ ನೋಡಿ ಮರುಳಾಗಿ ಮನೆಗಳನ್ನೂ ಸ್ವಜನರನ್ನೂ ಪತಿಗಳನ್ನೂ ಪುತ್ರರನ್ನೂ ತ್ಯಜಿಸಿ ತನ್ನ ದಾಸಿಭಾವವನ್ನೈದಿರುವ ನಮ್ಮನ್ನು ನೋಡುವದಿಲ್ಲ; ನಾಳೇ ಬೆಳಗಾಗುತ್ತಲೇ ಮಧುರಾಪುರದ ಸ್ತ್ರೀಯರ ಮನೋರಥಗಳು ಸಫಲವಾಗುವವು; ಕೃಷ್ಣನು ಮಧುರಾಪುರಕ್ಕೆ ಹೋಗುತ್ತಾನೆ; ಆಗ ಆ ಪುರದ ಸ್ತ್ರೀಯರು ಮುಗುಳುನಗೆಯಿಂದ ಯುಕ್ತವಾದ ಕಟಾಕ್ಷಪ್ರಸಾರವೆಂಬ ಮದಕರದ್ರವ್ಯವುಳ್ಳ ಕೃಷ್ಣನ ಮುಖವನ್ನು ನಿರ್ಭಯರಾಗಿ ನೋಡುವರು; ನಾವು ಭಾಗ್ಯಹೀನರಾದೆವು!——ಎಲೇ ಸ್ತ್ರೀಯರುಗಳಿರಾ, ಕೃಷ್ಣನು ಕೆಲವು ದಿವಸಗಳು ಅಲ್ಲಿದ್ದು ಪುನಹ ಬರುವನೆಂಬ ಅರ್ಥವು ನಮಗೆ ತೋರುವದಿಲ್ಲ; ಕೃಷ್ಣನು ಒಳ್ಳೇ ಮನಸ್ಸುಳ್ಳವನಾದಾಗ್ಯೂ ಪಿತ್ರಾದಿಗಳಿಗೆ ಅಧೀನನು; ಅದಲ್ಲದೆ ಆ ಪುರಸ್ತ್ರೀಯರ ಮಧುರಭಾಷಣಗಳಿಂದಲೂ ಲಜ್ಜಾಯುಕ್ತಗಳಾದ ಮಂದಸ್ಮಿತಗಳಿಂದಲೂ ಸೊಂಪಿನ ನೋಟಗಳಿಂದಲೂ ಪರವಶಚಿತ್ತನಾಗಿ ಹಳ್ಳಿಗಳಲ್ಲಿ ವಾಸಮಾಡುವ ಮುಗ್ಧರಾದ ನಮ್ಮನ್ನು ನೋಡಲೋಸುಗ ಪುನಹ ಬರನು; ಇನ್ನು ಮಧುರಾಪುರದಲ್ಲಿರುವ ದಾಶಾರ್ಹರು ವೃಷ್ಣಿಗಳು ಅಂಧಕರು ಸಾತ್ವತರು ಭೋಜರು ಮೊದಲಾದವರು ನೇತ್ರೋತ್ಸವವುಂಟಾಗುವಂತೆ ಗುಣಸಮುದ್ರನಾಗಿ ಶ್ರೀಪತಿಯಾದ ಕೃಷ್ಣನನ್ನು ಮಾರ್ಗದಲ್ಲಿ ನೋಡುವರು; ಇಂಥಾ ಅಸದ್ವ್ಯಾಪಾರವುಳ್ಳವನಾಗಿ ದಯಾರಹಿತನಾದ ಶ್ವಫಲ್ಕಪುತ್ರನಿಗೆ ಅಕ್ರೂರನೆಂಬ ಹೆಸರು ಸಲ್ಲನು; ಅತಿ ಕ್ರೂರನಾದ ಇವನು ಬಹು ದುಃಖಿತರಾದ ನಮ್ಮನ್ನು ಸಮಾಧಾನಮಾಡದೆ ಪ್ರಾಣಕ್ಕಿಂತಲು ಪ್ರಿಯನಾದ ಶ್ರೀಕೃಷ್ಣನನ್ನು ದೂರವಾಗಿ ಕರಕೊಂಡು ಹೋಗುತ್ತಾನೆ! ಎಲೇ ಸಖಿಯರುಗಳಿರಾ, ಸ್ವಲ್ಪವಾದರು ಪ್ರೇಮರಹಿತವಾದ ಬುದ್ಧಿಯುಳ್ಳ ಶ್ರೀಕೃಷ್ಣನು ರಥವನ್ನೇರಿದನು; ಶಕಟಗಳನ್ನು ಸನ್ನಾಹಮಾಡಿಕೊಂಡು ದುಷ್ಟರಾದ ಗೋಪರು ತ್ವರೆಪಡುತ್ತಾರೆ; ದೊಡ್ಡವರಾದವರು ಅಡ್ಡಿಮಾಡದೆ ಸುಮ್ಮನಿದ್ದಾರೆ; ದೈವವು ಕೂಡಾ ನಮಗೆ ಪ್ರತಿಕೂಲವನ್ನೆ ಮಾಡುತ್ತೇಹೊರ್ತು ಈ ಪ್ರಯಾಣಕ್ಕೆ ವಿಘ್ನವನ್ನು ಮಾಡುವದಿಲ್ಲ!——ಎಲೇ ಸಖಿಯರುಗಳಿರಾ, ನಾವೆಲ್ಲರು ಗುಂಪಾಗಿ ಹೋಗಿ ಶ್ರೀಕೃಷ್ಣನನ್ನು ಹೋಗಬ್ಯಾಡವೆಂದು ತಡೆಯೋಣ; ಶ್ರೀಕೃಷ್ಣಸಂಗವನ್ನು ಕ್ಷಣಮಾತ್ರವಾದರು ಬಿಡಲಾರದೆ ದುಃಖಿತವಾದ ಮನಸ್ಸುಳ್ಳವರಾಗಿ ದೀನರಾದ ನಮ್ಮನ್ನು ಕುಲವೃದ್ಧರಾದ ಬಾಂಧವರು ಏನುಮಾಡ್ಯಾರು! ಎಲೇ ಸ್ತ್ರೀಯರುಗಳೇ, ರಾಸಸಭೆಯಲ್ಲಿ ಯಾವನು ಅನುರಾಗಪೂರ್ವಕವಾದ ಮಂದಸ್ಮಿತದಿಂದಲೂ ಮನೋಹರಗಳಾದ ಆಪ್ತಾಲೋಚನೆಗಳಿಂದಲೂ ಕ್ರೀಡಿಸುತ್ತಿರಲು ನಾವು ರಾತ್ರಿಗಳನ್ನು ಕ್ಷಣಗಳಂತೆ ಕಳೆದೆವೊ ಅಂಥಾ ಶ್ರೀಕೃಷ್ಣನನ್ನು ಬಿಟ್ಟು ನಾವು ಈ ವಿರಹತಾಪವನ್ನು ಹ್ಯಾಗೆ ಪರಿಹರಿಸಿಕೊಳ್ಳುವೆವು! ಸಾಯಂಕಾಲ ಸಮಯದಲ್ಲಿ ಗೋಪಾಲಕರಿಂದ ಯುಕ್ತನಾಗಿ ಗೋವುಗಳ ಕಾಲುಕೊಳಗಗಳ ಧೂಳಿಗಳಿಂದ ವ್ಯಾಪ್ತವಾದ ಕೇಶಗಳುಳ್ಳವನಾಗಿ ಕೊಳಲನ್ನು ನುಡಿಸುತ ಮುಗುಳುನಗೆಯಿಂದಲೂ ರಮ್ಯವಾದ ಕಟಾಕ್ಷಪ್ರಸಾರಗಳಿಂದಲೂ ನಮ್ಮ ಚಿತ್ತಗಳನ್ನಪಹರಿಸುತ ವ್ರಜಕ್ಕೆ ಬರುತಿದ್ದ ಶ್ರೀಕೃಷ್ಣನನ್ನು ಬಿಟ್ಟು ನಾವು ಹ್ಯಾಗೆ ಜೀವಿಸುವೆವು!" ಎಂದು ಪರಸ್ಪರವಾಗಿ ಮಾತನಾಡುತ ವಿರಹಪೀಡಿತರಾಗಿ ಕೃಷ್ಣನಲ್ಲಿ ಆಸಕ್ತವಾದ ಮನಸ್ಸುಳ್ಳ ಆ ಗೋಪಸ್ತ್ರೀಯರು ಲಜ್ಜೆಯನ್ನು ಬಿಟ್ಟು "ಎಲೈ ಗೋವಿಂದನೆ! ದಾಮೋದರನೆ! ಮಾಧವನೇ!" ಎಂದು ರೋದನಂಗೈದರು!

ಆಮೇಲೆ ಸೂರ್ಯೋದಯಾನಂತರದಲ್ಲಿ ಅಕ್ರೂರನು ಸಂಧ್ಯಾವಂದನವನ್ನು ಮಾಡಿ ಗೋಪಸ್ತ್ರೀಯರು ರೋದನಂಗೈಯುತ್ತಿರಲೂ ರಥದಮೇಲೆ ರಾಮಕೃಷ್ಣರನ್ನು ಕುಳ್ಳಿರಿಸಿಕೊಂಡು ರಥವನ್ನು ನಡಿಸಿದನು; ನಂದನು ಮುಂತಾದ ಗೋಪರು ಕಾಣಿಕೆಗಳನ್ನು ತೆಗೆದುಕೊಂಡು ಹಾಲು ಮೊಸರಿನ ಗಡಿಗೆಗಳನ್ನು ನಡೆಗಳಮೇಲಿರಿಸಿಕೊಂಡು ಅಕ್ರೂರನ ಸಂಗಡ ಹೊರಟರು; ಗೋಪಸ್ತ್ರೀಯರು ಪ್ರಿಯನಾದ ಶ್ರೀಕೃಷ್ಣನ ಸಂಗಡ ಹೋಗಿ

ಭಗವಂತನ ಪ್ರತ್ಯಾಗಮನವನ್ನು ಅಪೇಕ್ಷಿಸುತ ನಿಂತರು ; ಕೃಷ್ಣನು ವಿರಹಕಾತುರರಾಗಿ ರೋದನಗೈಯುತಿದ್ದ ಆ ಸ್ತ್ರೀಯರನ್ನು ದೂತವಾಕ್ಯಗಳಿಂದ ತಾನು ಶೀಘ್ರವಾಗಿ ಬರುವದಾಗಿಯೂ ಅವರು ವ್ಯಸನಪಡಬಾರದೆಂದೂ ಸಮಾಧಾನಗೈದನು ; ಆ ಸ್ತ್ರೀಯರು ರಥಧ್ವಜವು ಎಷ್ಟುಪರ್ಯಂತವು ಕಾಣಲ್ಪಡುತಿತ್ತೋ—ಧೂಳಿಯು ಎಷ್ಟುಪರ್ಯಂತ ಕಾಣಲ್ಪಡುತಿತ್ತೋ ಅಷ್ಟುದೂರವು ರಾಮಕೃಷ್ಣರು ಸಾಗಿಹೋಗುವ ಪರ್ಯಂತವು ನೋಡುತ ಚಿತ್ತವನ್ನು ಕೃಷ್ಣನಲ್ಲಿರಿಸಿಕೊಂಡು ನಿಂತಿದ್ದರು ! ಆ ಬಳಿಕ ಶ್ರೀಕೃಷ್ಣನು ತಿರುಗಿ ಹಿಂದಕ್ಕೆ ಬರುವನೆಂಬ ಆಶೆಯನ್ನು ಬಿಟ್ಟು ದೃಢಚಿತ್ತರಾಗಿ ಆ ಪ್ರಿಯನ ವ್ಯಾಪಾರವನ್ನು ಗಾನಗೈಯುತ ದಿವಸಗಳನ್ನು ಕಳೆದರು !

ಶ್ರೀಕೃಷ್ಣನೂ ಬಲರಾಮನೂ ಅಕ್ರೂರನೂ ವಾಯುವೇಗವುಳ್ಳ ರಥದಲ್ಲಿ ಯಮುನಾನದಿಗೆ ಹೋಗಿ ಆ ನದಿಯಲ್ಲಿ ಪಾದಪ್ರಕ್ಷಾಳನ ಆಚಮನಾದಿಗಳನ್ನು ಮಾಡಿ ನೀಲಮಣಿಪ್ರಭೆಯುಳ್ಳ ನಿರ್ಮಲವಾದ ಆ ಉದಕವನ್ನು ಪಾನಗೈದು ವೃಕ್ಷಗಳ ಸಮೂಹದಲ್ಲಿ ಸಂಚರಿಸುತಲಿದ್ದರು ; ಅಕ್ರೂರನು ರಾಮಕೃಷ್ಣರನ್ನು ರಥದಮೇಲೆ ಕುಳ್ಳಿರಿಸಿ ಅವರ ಅಪ್ಪಣೆಯಿಂದ ಯಮುನಾನದಿಯಲ್ಲಿ ಶಾಸ್ತ್ರಸಮ್ಮತವಾಗಿ ಸ್ನಾನಗೈದು ಜಲದಲ್ಲಿ ಮುಳುಗಿ ವೇದವನ್ನು ಜಪಿಸುತ ರಾಮಕೃಷ್ಣರನ್ನು ಜಲದಲ್ಲಿ ಕಂಡು ಈಗ ರಥದಲ್ಲಿದ್ದ ರಾಮಕೃಷ್ಣರು ಅಲ್ಲಿ ಹ್ಯಾಗೆ ಬಂದರೆಂದೆಣಿಸಿ ಮೇಲಕ್ಕೆ ತಲೆಯೆತ್ತಿ ನೋಡಿ ಯಥಾಪ್ರಕಾರವಾಗಿ ರಥದಲ್ಲಿರುವದನ್ನು ಕಂಡು ಪುನಹ ನೀರಿನಲ್ಲಿ ಮುಳುಗಿ ತಿರಿಗಿ ಅವರಿಬ್ಬರನ್ನು ನೀರಿನಲ್ಲಿ ಕಂಡು ಅದು ಭ್ರಮೆಯೋ ಏನೊ ಎಂದು ಚಿಂತಿಸುತ ಮತ್ತು ನೀರಿನೊಳಗೆ ಮುಳಗಿ ಸಿದ್ಧರಿಂದಲೂ ಗಂಧರ್ವರಿಂದಲೂ ನಮ್ರರಾದ ದೇವತೆಗಳಿಂದಲೂ ಸ್ತುತಿಗೈಯಲ್ಪಡುತಲಿದ್ದ ಸಹಸ್ರ ಫಣಗಳಿಂದ ಮಂಡಿತನಾಗಿ ನೀಲವಸ್ತ್ರಧಾರಿಯಾಗಿ ತಾವರೇ ದಂಟಿನಂತೆ ಶುಭ್ರವರ್ಣವುಳ್ಳವನಾಗಿ ಕೈಲಾಸದಂತೆ ಪ್ರಕಾಶಿಸುತಿದ್ದ ಶೇಷನನ್ನೂ ಆತನಮೇಲೆ ಘನಶ್ಯಾಮನಾಗಿ ಪೀತಾಂಬರಧಾರಿಯಾಗಿ ಚತುರ್ಭುಜನಾಗಿ ಪದ್ಮಪತ್ರಸಮಾನನೇತ್ರವುಳ್ಳವನಾಗಿ ಶಾಂತನಾಗಿ ಸುಂದರನಾಗಿ ಪ್ರಸನ್ನಮುಖವುಳ್ಳವನಾಗಿ ರಮ್ಯವಾದ ಮಂದಹಾಸವೂ ಕಟಾಕ್ಷಪ್ರಸಾರವೂ ಉಳ್ಳವನಾಗಿ ಮನೋಹರವಾದ ಉಬ್ಬುಗಳೂ ಉನ್ನತವಾದ ನಾಸಿಕವೂ ಉಳ್ಳವನಾಗಿ ಸುಕಪೋಲಗಳುಳ್ಳವನಾಗಿ ಕೆಂಪಾದ ಅಧರೋಷ್ಟವುಳ್ಳವನಾಗಿ ಜೋಲುವ ಸ್ಥೂಲವಾದ ಭುಜಗಳುಳ್ಳವನಾಗಿ ಉನ್ನತಗಳಾದ ಭುಜಶಿರಸ್ಸುಗಳುಳ್ಳವನಾಗಿ ವಕ್ಷಸ್ಥಳದಲ್ಲಿ ಲಕ್ಷ್ಮೀದೇವಿಯುಳ್ಳವನಾಗಿ ಶಂಖದಂತೆ ಕಂಠವುಳ್ಳವನಾಗಿ ಹಳ್ಳವಾದ ನಾಭಿಯುಳ್ಳವನಾಗಿ ವಳಿತ್ರಯಶೋಭಿತವಾದ ಉದರಪ್ರದೇಶವುಳ್ಳವನಾಗಿ ವಿಶಾಲವಾದ ಕಟಿಪ್ರದೇಶದಿಂದಲೂ ನಿತಂಬಗಳಿಂದಲೂ ರಮ್ಯವಾದ ತೊಡೆಗಳಿಂದಲೂ ಶೋಭಿತವಾಗಿ ಮನೋಹರವಾದ ಮೊಳಕಾಲುಗಳಿಂದಲೂ ಜಂಘೆಗಳಿಂದಲೂ ಒಪ್ಪುತಿರುವವನಾಗಿ ಕೆಂಪಾದ ನಖಗಳ ಕಾಂತಿಯಿಂದ ಪ್ರಕಾಶಿಸುವ ಪಾದಗಳುಳ್ಳವನಾಗಿ ಅನರ್ಘ್ಯರತ್ನಖಚಿತಗಳಾದ ಕಿರೀಟದಿಂದಲೂ ವಲಯದಿಂದಲೂ ಭುಜಕೀರ್ತಿಗಳಿಂದಲೂ ಕಟಿಸೂತ್ರ ಬ್ರಹ್ಮಸೂತ್ರದಿಂದಲೂ ಹಾರಗಳಿಂದಲೂ ಪಾದಾಭರಣಗಳಿಂದಲೂ ಅಲಂಕೃತನಾಗಿ ಶಂಖಚಕ್ರಗದಾಪದ್ಮಧಾರಿಯಾಗಿ ಶ್ರೀವತ್ಸದಿಂದಲೂ ಕೌಸ್ತುಭಮಣಿಯಿಂದಲೂ ವನಮಾಲೆಯಿಂದಲೂ ಶೋಭಿತನಾಗಿ ಸುನಂದ ನಂದ ಮುಂತಾದ ಪರಿವಾರ ಜನರಿಂದಲೂ ಸನಕಾದಿಗಳಿಂದಲೂ ಬ್ರಹ್ಮರುದ್ರಾದಿ ದೇವೇಶ್ವರರಿಂದಲೂ ಮರೀಚ್ಯಾದಿ ಪ್ರಜೇಶರಿಂದಲೂ ಪ್ರಹ್ಲಾದ ನಾರದ ವಸು ಮುಂತಾದವರಿಂದಲೂ ಸ್ತೂಯಮಾನನಾಗಿ ಶ್ರೀದೇವಿಯಿಂದಲೂ ಪುಷ್ಟಿದೇವಿಯಿಂದಲೂ ಇಳಾದೇವಿಯಿಂದಲೂ ವಿದ್ಯಾದೇವಿಯಿಂದಲೂ ಅವಿದ್ಯಾದೇವಿಯಿಂದಲೂ ಶಕ್ತಿದೇವಿಯಿಂದಲೂ ಮಾಯಾದೇವಿಯಿಂದಲೂ ಸೇವಿತನಾಗಿದ್ದ ಪರಮಪುರುಷನನ್ನು ನೋಡಿ ಪ್ರೀತನಾಗಿ ಪರಮಭಕ್ತಿಯುಕ್ತನಾಗಿ ರೋಮಾಂಚಿತನಾಗಿ ಆನಂದಬಾಷ್ಪದಿಂದ ನೆನಯಿಸಲ್ಪಟ್ಟ ನೇತ್ರವುಳ್ಳವನಾಗಿ ಸತ್ವಗುಣವನ್ನವಲಂಬಿಸಿ ಗದ್ಗದವಾಕ್ಯದಿಂದ ಸ್ತುತಿಮಾಡುತ ಶಿರಸ್ಸಿನಿಂದ ನಮಸ್ಕರಿಸಿ ಏಕಾಗ್ರಚಿತ್ತನಾಗಿ ಅಂಜಲೀಬಂಧವನ್ನು ಮಾಡಿಕೊಂಡು ಭಗವಂತನನ್ನು ಸ್ತೋತ್ರಮಾಡಿದನು !

## ೪೦ ನೇ ಅಧ್ಯಾಯ.

## ರಾಮಕೃಷ್ಣರು ಮಧುರಾಪುರವನ್ನು ಸೇರಿದ್ದು.

ಎಲೈ ಅರಸೆ, ಅಕ್ರೂರನು ಈ ರೀತಿಯಲ್ಲಿ ಭಗವಂತನನ್ನು ಜಲದಲ್ಲಿ ಕಂಡು "ಈ ಸಮಸ್ತಲೋಕ ಸೃಷ್ಟಿ ಕರ್ತೃವಾದ ಬ್ರಹ್ಮನು ಯಾವ ಭಗವಂತನ ನಾಭಿಯಲ್ಲಿ ಹುಟ್ಟಿದ ಪದ್ಮದಿಂದ ಆವಿರ್ಭವಿಸಿದನೊ ಅಂಥಾ ವಿಷ್ಣುವಾದ ನಿನಗೆ ನಮಸ್ಕಾರವು! ಸಮಸ್ತಕ್ಕೂ ಕಾರಣಗಳಾದ ಪಂಚಭೂತಗಳಿಗೂ ಕಾರಣನಾಗಿ ಅವ್ಯಯನಾಗಿ ಆದಿ ಪುರುಷನಾಗಿ ನಾರಾಯಣನಾದ ನಿನ್ನನ್ನು ನಮಸ್ಕರಿಸುತ್ತೇನೆ; ಭೂಮಿಯು ಜಲವು ಅಗ್ನಿಯು ವಾಯುವು ಆಕಾಶವು ಅಹಂಕಾರವು ಮಹದತ್ವವು ಮಾಯೆಯು ಪುರುಷನು ಮನಸ್ಸು ಇಂದ್ರಿಯಗಳು ಸರ್ವವಿಷಯಗಳು ಸಮಸ್ತ ದೇವತೆಗಳು ಮತ್ತು ಜಗತ್ತಿನ ಸೃಷ್ಟಿಗೆ ಕಾರಣಭೂತಗಳಾದವೆಲ್ಲವು ನಿನ್ನ ಅವಯವಗಳು; ಅನಾತ್ಮಭೂತಗಳಾದ ಮಾಯೆ ಮೊದಲಾದ ವಸ್ತುಗಳು ಪರಮಾತ್ಮನಾದ ನಿನ್ನ ಸ್ವರೂಪವನ್ನರಿಯವು; ಸಾಧುಗಳಾದ ಯೋಗಿಗಳು ಅಧ್ಯಾತ್ಮ ಅಧಿಭೂತ ಅಧಿದೈವತಗಳಿಂದ ಯುಕ್ತನಾಗಿ ಮಹಾಪುರುಷನಾಗಿ ಈಶ್ವರನಾದ ನಿನ್ನನ್ನು ಭಜಿಸುವರು; ಕರ್ಮನಿಷ್ಠರಾದ ಬ್ರಾಹ್ಮಣರು ಕರ್ಮಪ್ರತಿಪಾದಕವಾದ ವೇದದಿಂದಲೂ ನಾನಾರೂಪಗಳಾದ ಅಗ್ನಿಷ್ಟೋಮಾದಿ ಯಾಗಗಳಿಂದ ಇಂದ್ರ ಅಗ್ನಿ ವರುಣಾದಿ ನಾಮಭೇದಗಳಿಂದಲೂ ಪ್ರತಿಪಾದ್ಯನಾದ ನಿನ್ನನ್ನೇ ಆರಾಧಿಸುವರು; ಮಹಾ ಯೋಗಿಗಳು ಸಮಸ್ತ ಕರ್ಮಗಳನ್ನು ನಿನ್ನಲ್ಲಿ ಸಮರ್ಪಿಸಿ ಉಪಶಾಂತರಾಗಿ ಜ್ಞಾನಸ್ವರೂಪನಾದ ನಿನ್ನನ್ನು ಜ್ಞಾನಯಜ್ಞದಿಂದ ಆರಾಧನಂಗೈವರು; ಕೆಲವರು ವೈಷ್ಣವದೀಕ್ಷೆಯನ್ನು ಮಾಡಿಕೊಂಡು ನಿನ್ನಿಂದ ಹೇಳಲ್ಪಟ್ಟ ಪಾಂಚರಾತ್ರಾಗಮವಿಹಿತವಾಗಿ ವಿಧಾನವಾದ ತಮ್ಮನ್ನು ನೀನೆಂದು ಭಾವಿಸಿಯೂ ವಾಸುದೇವ ಸಂಕರ್ಷಣ ಅನಿರುದ್ಧ ಪ್ರದ್ಯುಮ್ನರೆಂಬ ಭೇದದಿಂದ ಬಹುಮೂರ್ತಿಗಳುಳ್ಳ ನಿನ್ನನ್ನು ನಾರಾಯಣರೂಪದಿಂದ ಏಕಮೂರ್ತಿಯಾಗಿ ಭಾವಿಸಿ ಭಜಿಸುವರು; ಕೆಲವು ಮಹಾಪುರುಷರು ಪರಮೇಶ್ವರನಿಂದ ಹೇಳಲ್ಪಟ್ಟ ಶೈವಾಗಮ ಮಾರ್ಗದಿಂದ ಶಿವರೂಪನಾದ ನಿನ್ನನ್ನು ಬಹು ಆಚಾರಭೇದದಿಂದಲೂ ಶೈವ ಪಾಶುಪತಾದಿ ಮಾರ್ಗದಿಂದಲೂ ಭಜಿಸುವರು; ಕೆಲವರು ನಾನಾದೇವತಾಭಕ್ತರಾಗಿ ಭೇದಬುದ್ಧಿಯಿಂದ ಸರ್ವದೇವಮಯನಾದ ನಿನ್ನನ್ನೇ ಭಜಿಸುವರು; ಪರ್ವತಗಳಲ್ಲಿ ಹುಟ್ಟಿದ ನದಿಗಳು ವರ್ಷೋದಕಗಳಿಂದ ಪೂರಿತಗಳಾಗಿ ಸಮುದ್ರವನ್ನು ಸೇರುವ ರೀತಿಯಲ್ಲಿ ಸಮಸ್ತ ಶ್ರುತಿ ಸ್ಮೃತಿ ಪುರಾಣಾಗಮಾದಿಗಳಿಂದ ಪ್ರತಿಪಾದಿತಗಳಾದ ಮಾರ್ಗಗಳು ನಿನ್ನನ್ನೇ ಸೇರುವವು; ಸತ್ವ ರಜಸ್ಸು ತಮಸ್ಸುಗಳೆಂಬ ನಿನ್ನ ಮಾಯೆಯ ಗುಣಗಳು ಪ್ರಕೃತಿಕಾರ್ಯೋಪಾಯಗಳಾದ್ದರಿಂದ ಬ್ರಹ್ಮಾದಿ ಸ್ಥಾವರಪರ್ಯಂತವು ಆ ಗುಣತ್ರಯದಿಂದ ಬದ್ಧರಾಗಿರುವರು; ಆ ಮಾಯಾಗುಣಗಳಲ್ಲಿ ಆಸಕ್ತದೃಷ್ಟಿಯಿಲ್ಲದವನಾಗಿ ಸರ್ವಾತ್ಮಕನಾಗಿ ಸರ್ವಬುದ್ಧಿಸಾಕ್ಷಿಯಾದ ನಿನಗೆ ನಮಸ್ಕಾರವು! ನಿನ್ನನ್ನು ತಿಳಿಯದ ಅಜ್ಞಾನದಿಂದ ಗುಣಪ್ರವಾಹರೂಪವಾದ ಸಂಸಾರವು ದೇವ ಮನುಷ್ಯ ತಿರ್ಯಗಾದಿಗಳಲ್ಲಿ ಪ್ರವೃತ್ತವಾಗಿರುವದು! ಎಲೈ ಪರಮಾತ್ಮನೆ, ಅಗ್ನಿಯು ನಿನ್ನ ಮುಖವು; ಭೂಮಿಯು ನಿನ್ನ ಪಾದವು; ಸೂರ್ಯನು ನಿನ್ನ ಚಕ್ಷುಸ್ಸು; ಅಂತರಿಕ್ಷವು ನಿನ್ನ ನಾಭಿಯು; ದಿಕ್ಕುಗಳು ನಿನ್ನ ಶ್ರೋತ್ರಗಳು; ಸ್ವರ್ಗವು ನಿನ್ನ ಶಿರಸ್ಸು; ದೇವಪತಿಗಳು ನಿನ್ನ ಬಾಹುಗಳು; ಸಮುದ್ರಗಳು ನಿನ್ನ ಉದರವು; ವಾಯುವು ನಿನ್ನ ಬಲವು; ವೃಕ್ಷಗಳೂ ಓಷಧಿಗಳೂ ನಿನ್ನ ರೋಮಗಳು; ಮೇಘಗಳು ನಿನ್ನ ಕೇಶಗಳು; ಪರ್ವತಗಳು ನಿನ್ನ ಅಸ್ಥಿನಖಗಳು; ದಿವಾರಾತ್ರಿಗಳು ನಿನ್ನ ರೆಪ್ಪೆಗಳು; ಪ್ರಜೇಶನು ನಿನ್ನ ಮೇಢ್ರವು; ವೃಷ್ಟಿಯು ನಿನ್ನ ವೀರ್ಯವು! ಎಲೈ ಅವ್ಯಯನಾದ ಪರಮಾತ್ಮನೆ, ಪರಮಪುರುಷನಾದ ನಿನ್ನಲ್ಲಿ ಕಲ್ಪಿತಗಳಾಗಿ ಸನಾಯಕಗಳಾದ ಲೋಕಗಳು ಅನೇಕ ಜೀವಗಳಿಂದ ವ್ಯಾಪ್ತವಾಗಿ ಜಲದಲ್ಲಿ ಜಲಜಂತುಗಳಿರುವಂತೆಯೂ ಔದುಂಬರೀ ಫಲದಲ್ಲಿ ಕ್ರಿಮಿಗಳಿರುವಂತೆಯೂ ಮನೋಗಮ್ಯನಾದ ನಿನ್ನಲ್ಲಿ ವಾಸಮಾಡುವವು! ಎಲೈ ಈಶ್ವರನೆ, ನೀನು ಲೋಕರಕ್ಷಣಾರ್ಥವಾಗಿ ಯಾವ ಯಾವ ಅವತಾರಗಳನ್ನು ಧರಿಸುತ್ತೀಯೊ ಆ ರೂಪಗಳಿಂದ ಪರಿಶ್ರುತವಾದ ಶೋಕವುಳ್ಳವರಾಗಿ ಜನರು ಸಂತೋಷದಿಂದ ನಿನ್ನ ಯಶಸ್ಸನ್ನು ಗಾನಂಗೈವರು; ಪ್ರಳಯ

ಸಮುದ್ರದಲ್ಲಿ ಸಂಚರಿಸುವ ಆದಿಮತ್ಸ್ಯರೂಪನಾದ ನಿನಗೆ ನಮಸ್ಕಾರ! ಹಯಗ್ರೀವನಾದ ನಿನಗೆ ನಮಸ್ಕಾರ! ಮಧುಕೈಟಭಧ್ವಂಸಿಯಾದ ನಿನಗೆ ನಮಸ್ಕಾರ! ಮಂದರಧಾರಿಯಾಗಿ ಕೂರ್ಮರೂಪನಾದ ನಿನಗೆ ನಮಸ್ಕಾರ! ಭೂಮಿಯನ್ನುದ್ಧಾರಂಗೈದ ವರಾಹರೂಪನೇ ನಿನಗೆ ನಮಸ್ಕಾರ! ಸಜ್ಜನರಭಯಪರಿಹಾರಕನಾದ ನಾರಸಿಂಹನೆ ನಿನಗೆ ನಮಸ್ಕಾರ! ಮೂರುಲೋಕಗಳನ್ನು ಪಾದನ್ಯಾಸದಿಂದ ಆಕ್ರಮಿಸಿದ ವಾಮನನೇ ನಿನಗೆ ನಮಸ್ಕಾರ! ದುಷ್ಟಕ್ಷತ್ರಿಯ ಸಂಹಾರಕನಾದ ಭಾರ್ಗವರಾಮನೇ ನಿನಗೆ ನಮಸ್ಕಾರ! ರಾವಣಸಂಹಾರಕನಾದ ಶ್ರೀರಾಮನೇ ನಿನಗೆ ನಮಸ್ಕಾರ! ವಾಸುದೇವನೆ ನಿನಗೆ ನಮಸ್ಕಾರ! ಸಂಕರ್ಷಣನೆ ನಿನಗೆ ನಮಸ್ಕಾರ! ಪ್ರದ್ಯುಮ್ನ ಅನಿರುದ್ಧನೆ, ಯಾದವಪತಿಯೆ, ನಿನಗೆ ನಮಸ್ಕಾರ! ದೈತ್ಯದಾನವಮೋಹಕನಾಗಿ ಶುದ್ಧನಾದ ಬುದ್ಧಾವತಾರನೇ ನಿನಗೆ ನಮಸ್ಕಾರ! ಎಲೈ ಭಗವಂತನೆ, ನಿನ್ನ ಮಾಯೆಯಿಂದ ಮೋಹಿತವಾದ ಜೀವಲೋಕವು ತಾನು ತನ್ನದೆಂಬ ಅಹಂಕಾರ ಮಮಕಾರ ಶಬ್ದಗಳಿಂದ ದುಷ್ಟ ವಿಷಯಾಸಕ್ತವಾಗಿ ಕರ್ಮಬಂಧದಿಂದ ಸುತ್ತುತಲಿಧೆ; ನಾನು ದೇಹದಲ್ಲಿ ಪುತ್ರರಲ್ಲಿ ಗೃಹದಲ್ಲಿ ಪತ್ನಿಗಳಲ್ಲಿ ಧನದಲ್ಲಿ ಬಂಧುಗಳಲ್ಲಿ ಸ್ವಪ್ನಸಮಾನವಾಗಿದ್ದಾಗ್ಯೂ ಈ ವಸ್ತುಗಳೆಲ್ಲವು ಸತ್ಯವಾದವೆಂದು ಭಜಿಸುತ್ತೇನೆ; ಮತ್ತು ನಾನು ಅನಿತ್ಯವಾದ ಕರ್ಮಫಲದಲ್ಲಿ ನಿತ್ಯವೆಂಬ ಬುದ್ಧಿಯನ್ನು ಮಾಡುತ ಅನಾತ್ಮಗಳಾದ ದೇಹಾದಿಗಳಲ್ಲಿ ಆತ್ಮನೆಂಬ ಬುದ್ಧಿಯನ್ನು ಮಾಡುತ ದುಃಖರೂಪಗಳಾದ ವಿಷಯಭೋಗಗಳಲ್ಲಿ ಸುಖವೆಂಬ ಬುದ್ಧಿಯನ್ನು ಮಾಡುತ ಸುಖದುಃಖಮಯವಾದ ಸಂಸಾರದಲ್ಲಿ ಆಸಕ್ತನಾಗಿ ಅಜ್ಞಾನವಿಷ್ಟನಾಗಿ ಹಿತಾರ್ಥವನ್ನು ತಿಳಿಯುವದಿಲ್ಲ; ಮೂಢನಾದ ಪುರುಷನು ಯಾವಪ್ರಕಾರ ಜಲದಲ್ಲಿ ಹುಟ್ಟಿದ ತೃಣಗಳಿಂದ ಆಚ್ಛಾದಿತವಾದ ಜಲವನ್ನು ಕಾಣದೆ ಮರುಮರೀಚಿಕಿಗಳಲ್ಲಿ ಜಲಬುದ್ಧಿಯನ್ನು ಮಾಡುವಹಾಗೆ ನಾನು ಮಾಯಾಮಾಯಾಚ್ಛನ್ನನಾದ ನಿನ್ನನ್ನರಿಯದೆ ದೇಹಾದಿಗಳಲ್ಲಿ ಆತ್ಮಬುದ್ಧಿಯನ್ನು ಮಾಡುತ್ತೇನೆ; ನಾನು ಕಾರ್ಯಕರ್ಮಗಳಿಂದ ಕಲುಷವಾಗಿ ಮಾಡಲ್ಪಟ್ಟ ಪ್ರಮತ್ತಗಳಾದ ಇಂದ್ರಿಯಗಳಿಂದ ನಾನಾವಿಷಯಗಳನ್ನು ಕುರಿತು ಎಳೆಯಲ್ಪಡುತಲಿರುವ ಮನಸ್ಸನ್ನು ನಿಗ್ರಹಿಸುವದಕ್ಕೆ ಸಮರ್ಥನಲ್ಲ; ಅಸಜ್ಜನರಿಗೆ ಪಡೆಯಲಶಕ್ಯವಾದ ನಿನ್ನ ಪಾದವನ್ನು ಶರಣುಹೊಂದಿದೆನು; ನಿನ್ನ ಪಾದಸೇವೆಯು ನಿನ್ನ ಅನುಗ್ರಹದಿಂದಲೇ ಉಂಟಾಗಬೇಕೆಂದು ತಿಳಿಯುತಲಿಧೇನೆ; ಪುರುಷನಿಗೆ ಸತ್ಸೇವೆಯಿಂದ ನಿನ್ನಲ್ಲಿ ಬುದ್ಧಿಯು ಹುಟ್ಟುವಾಗ ಸಂಸಾರಬಂಧ ಪರಿಹಾರವಾಗುವದು; ವಿಜ್ಞಾನಶರೀರನಾಗಿ ಸರ್ವಜ್ಞಾನಕಾರಣನಾಗಿ ಜೀವರಿಗೆ ಸುಖದುಃಖ ಪ್ರಾಪಕಗಳಾದ ಕಾಲಕರ್ಮಸ್ವಭಾವಗಳಿಗೆ ನಿಯಾಮಕನಾಗಿ ಅನಂತಶಕ್ತಿಯುಳ್ಳ ಪರಬ್ರಹ್ಮನಾದ ನಿನಗೆ ನಮಸ್ಕಾರ! ಸರ್ವಭೂತಗಳಿಗೂ ಅಧಿಷ್ಠಾನನಾದ ವಸುದೇವನೇ, ನಿನಗೆ ನಮಸ್ಕಾರ! ಹೃಷೀಕೇಶನೇ, ನಿನಗೆ ನಮಸ್ಕಾರ! ಶರಣಾಗತನಾದ ನನ್ನನ್ನು ರಕ್ಷಿಸು!" ಎಂದು ಸ್ತುತಿಗೈದನು.

---

## ೪೧ನೇ ಅಧ್ಯಾಯ.

### ಕೃಷ್ಣನು ಕಂಸನ ಬಟ್ಟೆಗಳನ್ನೂ ಪುಷ್ಪಮಾಲಿಕೆಗಳನ್ನೂ ಅಪಹರಿಸಿದ್ದು.

ಎಲೈ ಅರಸೆ, ಈ ಪ್ರಕಾರದಲ್ಲಿ ಸ್ತೋತ್ರಮಾಡುತಿದ್ದ ಅಕ್ರೂರನಿಗೆ ತನ್ನ ನಿಜಸ್ವರೂಪವನ್ನು ತೋರಿಸಿ ಶ್ರೀಕೃಷ್ಣನು ವೇಷಧಾರಿಯು ವೇಷವನ್ನು ತೆಗೆದುಹಾಕಿ ನಿಜಸ್ವರೂಪನಾದಂತೆ ಆ ಭಗವದ್ರೂಪವನ್ನು ತಿರೋಧಾನವನ್ನು ಮಾಡಿ ಕೃಷ್ಣರೂಪನಾದನು; ಅಕ್ರೂರನು ತಿರೋಹಿತವಾದ ಭಗವಂತನ ಭಗವದ್ರೂಪವನ್ನು ತಿಳಿದು ಜಲದಿಂದೆದ್ದು ಶೀಘ್ರವಾಗಿ ನಿತ್ಯಕರ್ಮವನ್ನು ಮಾಡಿಕೊಂಡು ಆಶ್ಚರ್ಯಪಡುತ ರಥವನ್ನೇರಿದನು; ಶ್ರೀಕೃಷ್ಣನು ಆತನನ್ನು ಕುರಿತು "ಎಲೈ ಅಕ್ರೂರನೆ, ಭೂಮಿಯಲ್ಲಾಗಲಿ ಅಂತರಿಕ್ಷದಲ್ಲಾಗಲಿ ಜಲದಲ್ಲಾಗಲಿ ನಿನ್ನಿಂದ ಆಶ್ಚರ್ಯವೇನಾದರು ಕಾಣಲ್ಪಟ್ಟಿತೊ? ನಿನ್ನನ್ನು ನೋಡಿದರೆ ಬಹು ಆಶ್ಚರ್ಯವನ್ನು ಕಂಡಹಾಗೆ ತೋರುತ್ತದೆ" ಎಂದು ಕೇಳಿದನು.

ಅಕ್ರೂರನು "ಎಲೈ ಶ್ರೀಕೃಷ್ಣನೆ, ಭೂಮಿಯಲ್ಲಿಯೂ ಆಕಾಶದಲ್ಲಿಯೂ ಜಲದಲ್ಲಿಯೂ ಆಶ್ಚರ್ಯಗಳೆಷ್ಟುಂಟೋ ಅವೆಲ್ಲವು ವಿಶ್ವಾತ್ಮಕನಾದ ನಿನ್ನಲ್ಲಿವೆ; ನಿನ್ನನ್ನು ನೋಡುವ ನನ್ನಿಂದ ಸಮಸ್ತ ಆಶ್ಚರ್ಯಗಳೂ ನೋಡಲ್ಪಟ್ಟವು!" ಎಂದು ಹೇಳಿ ರಥವನ್ನು ನಡಿಸಿ ಆ ಸಾಯಂಕಾಲದ ಹೊತ್ತಿಗೆ ರಾಮಕೃಷ್ಣರನ್ನು ಮಧುರಾಪುರವನ್ನು ಸೇರಿಸಿದನು! ಮಾರ್ಗದಲ್ಲಿ ಸಮೀಪ ಗ್ರಾಮಸ್ಥರಾದ ಜನರು ಅಲ್ಲಲ್ಲಿ ಬಂದಿದ್ದುಕೊಂಡು ವಸುದೇವ ಪುತ್ರರನ್ನು ದೃಷ್ಟಿಯನ್ನು ಮುಚ್ಚದೆ ನೋಡಿ ಸಂತುಷ್ಟರಾದರು. ನಂದನು ಮುಂತಾದ ಗೋಪರು ಮೊದಲೇ ಹೋಗಿ ಮಧುರಾಪುರದ ಸಮೀಪದ ಒಂದು ತೋಪಿನಲ್ಲಿದ್ದುಕೊಂಡು ರಾಮಕೃಷ್ಣರನ್ನೆದುರುನೋಡುತ ಕಾದಿದ್ದರು; ಭಗವಂತನಾದ ಶ್ರೀಕೃಷ್ಣನು ಅವರನ್ನು ಸೇರಿ ವಿನಯಯುಕ್ತನಾಗಿದ್ದ ಅಕ್ರೂರನನ್ನು ಕೈಹಿಡಿದುಕೊಂಡು ನಗುತ "ಎಲೈ ಅಕ್ರೂರನೆ, ನೀನು ರಥಾರೂಢನಾಗಿ ಈಗಲೇ ಮಧುರಾಪುರಕ್ಕೆ ಹೋಗು; ನಾವೆಲ್ಲರು ಈ ರಾತ್ರಿ ಇಲ್ಲಿ ವಿಶ್ರಮಿಸಿಕೊಂಡಿದ್ದು ನಾಳೇ ಪ್ರಾತಃಕಾಲದಲ್ಲಿ ಬರುತ್ತೇವೆ" ಅಂದನು.

ಅಕ್ರೂರನು "ಎಲೈ ಭಕ್ತವತ್ಸಲನಾದ ಶ್ರೀಕೃಷ್ಣನೆ, ನಿಮ್ಮಿಬ್ಬರನ್ನು ಬಿಟ್ಟು ನಾನು ಹೋಗುವದಿಲ್ಲ; ಭಕ್ತನಾದ ನನ್ನನ್ನು ಬಿಡಬೇಡ; ನನ್ನ ಸಂಗಡ ನನ್ನ ಮನೆಗೆಬಂದು ನನ್ನನ್ನು ಸನಾಥನಾಗಿಮಾಡು; ಬಲರಾಮ ಸಮೇತನಾಗಿಯೂ ಗೋಪಯುಕ್ತನಾಗಿಯೂ ನಿನ್ನ ಮಿತ್ರರೊಡನೆ ನನ್ನ ಮನೆಯ ಒಳಕ್ಕೆಬಂದು ನಮ್ಮನ್ನೂ ನಮ್ಮ ಗೃಹವನ್ನೂ ನಿನ್ನ ಪಾದಧೂಳಿಯಿಂದ ಪವಿತ್ರಮಾಡು; ನಿನ್ನ ಪಾದಪ್ರಕ್ಷಾಳನೋದಕದಿಂದ ಸಿಕ್ತವಾದರೆ ನಮ್ಮ ಗೃಹಭೂಮಿಯಿಂದ ಅಗ್ನಿಗಳೂ ಪಿತೃಗಳೂ ದೇವತೆಗಳೂ ತೃಪ್ತರಾಗುವರು; ನಿನ್ನ ಪಾದವನ್ನು ತೊಳೆದು ಬಲಿಯು ಪುಣ್ಯಶ್ಲೋಕನಾಗಿ ಅತ್ಯದ್ಭುತವಾದ ಐಶ್ವರ್ಯವನ್ನೂ ಮಹಾಯೋಗಿಗಳ ಗತಿಯನ್ನೂ ಪಡೆದನು; ನಿನ್ನ ಪಾದಪ್ರಕ್ಷಾಳನೋದಕವು ಲೋಕತ್ರಯವನ್ನು ಪವಿತ್ರಮಾಡುವದು; ಆ ಉದಕವನ್ನು ಪರಮೇಶ್ವರನೂ ಶಿರಸ್ಸಿನಲ್ಲಿ ಧರಿಸಿದನು; ಅದರ ಮಹಿಮೆಯಿಂದ ಸಗರಪುತ್ರರು ಸ್ವರ್ಗವನ್ನೈದಿದರು! ಎಲೈ ದೇವದೇವನೆ, ಜಗನ್ನಾಥನೆ, ಪುಣ್ಯಶ್ರವಣಕೀರ್ತನನೆ, ಯದುಕುಲೋತ್ತಮನೆ, ಉತ್ತಮಕೀರ್ತಿಯುಳ್ಳವನೆ, ನಾರಾಯಣನೆ, ನಿನಗೆ ನಮಸ್ಕಾರವು!" ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣನು "ಎಲೈ ಅಕ್ರೂರನೆ, ನಾಳೆ ಉದಯದಲ್ಲಿ ನಿಮ್ಮಮನೆಗೆ ರಾಮನಸಮೇತನಾಗಿ ಬರುತ್ತೇನೆ; ಯಾದವಸಮೂಹದ್ರೋಹಿಯಾದ ಕಂಸನನ್ನು ಸಂಹರಿಸಿ ನಿಮಗೆ ಸುಖವನ್ನುಂಟುಮಾಡುತ್ತೇನೆ" ಅಂದನು.

ಆ ವಾಕ್ಯವನ್ನು ಕೇಳಿ ಅಕ್ರೂರನು ಮನಸ್ಸಿನಲ್ಲಿ ಚಿಂತೆಮಾಡಿಕೊಂಡು ಮಧುರಾಪುರಕ್ಕೆ ಹೋಗಿ ಕಂಸನಿಗೆ ರಾಮಕೃಷ್ಣರ ಆಗಮನವನ್ನು ಹೇಳಿ ತನ್ನ ಮನೆಗೆ ಹೋದನು; ಮಾರನೇ ಪ್ರಾತಃಕಾಲದಲ್ಲಿ ಕೃಷ್ಣನು ಬಲರಾಮ ಸಮೇತನಾಗಿಯೂ ಗೋಪರಿಂದ ಯುಕ್ತನಾಗಿಯೂ ಮಧುರಾಪುರವನ್ನು ನೋಡಲಿಚ್ಛೆಯುಳ್ಳವನಾಗಿ ಹೋದನು; ಆ ಪುರವು ಸ್ಫಟಿಕಶಿಲಾಮಯಗಳಾದ ಉನ್ನತಪುರದ್ವಾರಗಳುಳ್ಳದ್ದಾಗಿ ವಿಶಾಲವಾಗಿ ಸುವರ್ಣಮಯವಾದ ಬಾಗಲುಗಳಿಂದ ಶೋಭಿತವಾದ್ದಾಗಿ ತಾಮ್ರ ಹಿತ್ತಾಳೆಗಳಿಂದ ನಿರ್ಮಿತವಾದ ಗೃಹಗಳುಳ್ಳದ್ದಾಗಿ ಅಗಾಧವಾದ ಅಗಳತೆಯುಳ್ಳದ್ದಾಗಿ ತೋಪುಗಳಿಂದಲೂ ಉದ್ಯಾನವನಗಳಿಂದಲೂ ಶೋಭಿತವಾಗಿ ಸ್ವರ್ಣಮಯವಾದ ಚತುಷ್ಪಥಗಳಿಂದಲೂ ಉಪ್ಪರಿಗೆಗಳಿಂದಲೂ ಗೃಹೋದ್ಯಾನಗಳಿಂದಲೂ ಸಾಲುಮನೆಗಳಿಂದಲೂ ಅಲಂಕೃತವಾಗಿ ವೈಡೂರ್ಯಗಳಿಂದಲೂ ವಜ್ರಗಳಿಂದಲೂ ನಿರ್ಮಲಗಳಾದ ಹವಳಗಳಿಂದ ರಚಿತವಾದ ಜಗುಲಿಗಳಿಂದಲೂ ಲೋವೆಗಳಿಂದಲೂ ಪ್ರಕಾಶಿಸುವಂಥಾದ್ದಾಗಿ ಗವಾಕ್ಷಗಳಲ್ಲಿಯೂ ಲೋವೆಗಳಲ್ಲಿಯೂ ವಾಸಂಗೈವ ಪಾರಾವತಪಕ್ಷಿಗಳಿಂದಲೂ ಮಯೂರಗಳಿಂದಲೂ ಧ್ವನಿಗೈಯಲ್ಪಟ್ಟದ್ದಾಗಿ ಗಂಧೋದಕಗಳಿಂದ ನೆನೆಯಿಸಲ್ಪಟ್ಟ ರಾಜಬೀದಿಗಳುಳ್ಳದ್ದಾಗಿ ಮಾಲ್ಯಗಳಿಂದಲೂ ತೋರಣಗಳಿಂದಲೂ ಅಕ್ಷತೆಗಳಿಂದಲೂ ಹರಹಲ್ಪಟ್ಟ ರಾಜಬೀದಿಗಳೂ ಅಂಗಡಿಬೀದಿಗಳೂ ಉಳ್ಳದ್ದಾಗಿ ದ್ವಾರಗಳ ಉಭಯಪಾರ್ಶ್ವದಲ್ಲಿಯು ಉದಕಕುಂಭಗಳಿಂದಲೂ ಮೊಸರಿನ ಗಡಿಗೆಗಳಿಂದಲೂ ಚಂದನೋದಕದಿಂದಲೂ ನೆನೆಯಿಸಲ್ಪಟ್ಟ ಭೂಮಿಯುಳ್ಳದ್ದಾಗಿ ದೀಪಗಳಿಂದಲೂ ಗೊನೆಗಳಿಂದ ಯುಕ್ತವಾದ ಬಾಳೇಸ್ತಂಭಗಳಿಂದಲೂ

ವೇಲುಕಟ್ಟುಗಳಿಂದಲೂ ಅಲಂಕೃತಗಳಾದ ದ್ವಾರಗಳುಳ್ಳದ್ದಾಗಿ ಅಡಿಕೆ ತಾರುಗಳಿಂದಲೂ ಧ್ವಜಗಳಿಂದಲೂ ಅಲಂಕೃತವಾಗಿತ್ತು ! ಎಲೈ ಅರಸೆ, ಶ್ರೀಕೃಷ್ಣನು ಆ ಪುರವನ್ನು ನೋಡುತ ಬಲರಾಮನ ಸಮೇತನಾಗಿ ರಾಜಮಾರ್ಗದಲ್ಲಿ ಹೋಗುತಲಿರಲು ರಾಮಕೃಷ್ಣರನ್ನು ನೋಡಲೋಸುಗ ಆ ಪುರದ ಸ್ತ್ರೀಯರು ಕುತೂಹಲಯುಕ್ತರಾಗಿ ಉಪ್ಪರಿಗೆಗಳಮೇಲೆ ಹತ್ತಿದರು ; ಶ್ರೀಕೃಷ್ಣನನ್ನು ನೋಡುವ ತ್ವರೆಯಿಂದ ಕೆಲವು ಸ್ತ್ರೀಯರು ವ್ಯತ್ಯಸ್ತವಾಗಿ ವಸ್ತ್ರಭೂಷಣಗಳನ್ನು ಧರಿಸಿದವರಾಗಿಯೂ ಕೆಲವರು ಒಂದು ಹಸ್ತದಲ್ಲಿಮಾತ್ರವೇ ಕಡಗವನ್ನು ಧರಿಸಿದವರಾಗಿಯೂ ಕೆಲವರು ಒಂದುಕಿವಿಗೆ ಓಲೆಯನ್ನಿಟ್ಟವರಾಗಿಯೂ ಕೆಲವರು ಒಂದೇಕಾಲಿಗೆ ಆಭರಣವನ್ನು ಧರಿಸಿಕೊಂಡವರಾಗಿಯೂ ಕೆಲವರು ಒಂದುಕಣ್ಣಿಗೆ ಕಪ್ಪು ಹಚ್ಚಿಕೊಂಡವರಾಗಿಯೂ ಕೆಲವರು ಎಲ್ಲಾ ಗೃಹಕೃತ್ಯಗಳನ್ನೂ ಮರತವರಾಗಿಯೂ ಕೆಲವರು ಭೋಜನಗೈಯುತ್ತಿದ್ದು ಅರ್ಧದಲ್ಲೇ ಬಿಟ್ಟು ಎದ್ದುಬಂದವರಾಗಿಯೂ ಕೆಲವರು ಎಣ್ಣೆಯನ್ನಭ್ಯಂಜನಗೈಯ ಎರಕೊಳ್ಳುವದಕ್ಕೆ ಮೊದಲೆ ಬಂದವರಾಗಿಯೂ ಇದ್ದರು ; ಮಲಗಿದ್ದ ಕೆಲವರು ಆ ಶಬ್ದವನ್ನು ಕೇಳಿ ಮಕ್ಕಳಿಗೆ ಸ್ತನ್ಯವನ್ನು ಕೊಡದೆ ಓಡಿಬಂದರು ! ಮದಗಜಗಾಮಿಯಾಗಿ ಪದ್ಮಲೋಚನನಾದ ಶ್ರೀಕೃಷ್ಣನು ಪ್ರೌಢವಾಗಿ ವಿಲಾಸಯುಕ್ತವಾದ ತನ್ನ ಮುಗುಳುನಗೆಯಿಂದಲೂ ಸೊಕ್ಕುನೋಟಗಳಿಂದಲೂ ಮಹಾಲಕ್ಷ್ಮಿಗೂ ಅಪೇಕ್ಷಿತವಾದ ಸುಂದರವಾದ ದೇಹದಿಂದಲೂ ಆ ಸ್ತ್ರೀಯರ ನೇತ್ರಗಳಿಗೆ ಉತ್ಸವವನ್ನುಂಟುಮಾಡುತ ಅವರ ಮನಸ್ಸನ್ನಪಹರಿಸಿದನು ! ಎಲೈ ಶತ್ರುಸಂಹಾರಕನಾದ ಪರೀಕ್ಷಿದ್ರಾಯನೆ, ಶ್ರೀಕೃಷ್ಣನ ಸೌಂದರ್ಯಾದಿಗುಣಗಳನ್ನು ಬಾರಿಬಾರಿಗೂ ಕೇಳಿ ಆತನಲ್ಲಿ ಲಗ್ನವಾದ ಮನಸ್ಸುಳ್ಳ ಆ ಸ್ತ್ರೀಯರು ಆತನ ನೋಟಗಳೂ ಮಂದಸ್ಮಿತವೂ ಎಂಬ ಅಮೃತಸೇಚನದಿಂದ ಪಡೆಯಲ್ಪಟ್ಟ ಉಲ್ಲಾಸವುಳ್ಳವರಾಗಿ ಆನಂದಮೂರ್ತಿಯಾದ ಆ ದೇವನನ್ನು ನೇತ್ರಗಳಿಂದ ಆಲಿಂಗನ ಮಾಡಿಕೊಂಡು ತಮ್ಮ ವಕ್ಷಸ್ಥಳದಲ್ಲಿ ಸಿಕ್ಕಿದವನಾಗಿ ಭಾವಿಸಿ ರೋಮಾಂಚಿತದೇಹರಾಗಿ ಅಧಿಕವಾಗಿದ್ದ ಮನೋವ್ಯಥೆಯನ್ನು ಬಿಟ್ಟು ಉಪ್ಪರಿಗೆಗಳಲ್ಲಿ ಆರೂಢರಾಗಿ ಪ್ರೀತಿಯಿಂದ ವಿಕಸಿತಗಳಾದ ಮುಖಕಮಲಗಳುಳ್ಳವರಾಗಿ ಪುಷ್ಪಸಮೂಹಗಳನ್ನು ರಾಮಕೃಷ್ಣರಮೇಲೆ ವರ್ಷಿಸಿದರು ! ಬ್ರಾಹ್ಮಣರು ದಧ್ಯಕ್ಷತೆಗಳಿಂದಲೂ ಅಗ್ರೋದಕಗಳಿಂದಲೂ ಗಂಧಮಾಲ್ಯಗಳಿಂದಲೂ ಕಾಣಿಕೆಗಳಿಂದಲೂ ರಾಮಕೃಷ್ಣರನ್ನು ಪೂಜಿಸಿದರು ; ಮತ್ತು ಆ ಪುರದ ಸ್ತ್ರೀಯರು ಪರಸ್ಪರವಾಗಿ ಮಾತನಾಡಿಕೊಳುತ "ವ್ರಜದಲ್ಲಿರುವ ಗೋಪಸ್ತ್ರೀಯರು ಎಷ್ಟು ಪುಣ್ಯವನ್ನು ಮಾಡಿದರೋ ತಿಳಿಯದು ; ಅವರು ಭೂಲೋಕಕ್ಕೆ ಉತ್ಸವರೂಪರಾದ ರಾಮಕೃಷ್ಣರನ್ನು ಕಣ್ಣು ತುಂಬಾ ನೋಡಿಕೊಂಡಿದ್ದರು " ಎಂದು ನುಡಿದುಕೊಂಡರು.

ಅನಂತರದಲ್ಲಿ ರಾಮಕೃಷ್ಣರು ಹೋಗುತಿದ್ದ ಮಾರ್ಗದಲ್ಲಿ ವಸ್ತ್ರಗಳನ್ನು ಚೊಕ್ಕಟವಾಗಿ ಒಗೆದು ಮಡಿಮಾಡಿ ತೆಗೆದುಕೊಂಡು ಹೋಗುತಿದ್ದ ಒಬ್ಬ ಅಗಸನನ್ನು ಕಂಡು ಶ್ರೀಕೃಷ್ಣನು "ಎಲೈ ಗೃಹಸ್ಥನೆ, ನಮ್ಮಿಬ್ಬರಿಗು ಯೋಗ್ಯವಾದ ವಸ್ತ್ರಗಳನ್ನು ಕೊಡು ; ನಮಗೆ ಕೊಟ್ಟರೆ ನಿನಗೆ ಬಹು ಶ್ರೇಯಸ್ಸುಂಟಾಗುವದು" ಎಂದು ಯಾಚಿಸಿದನು.

ಆ ಅಗಸನು ಕಂಸನ ಭೃತ್ಯನಾದಕಾರಣ ಮದಿಸಿದವನಾಗಿ ಕೋಪದಿಂದ "ಎಲೇ ಕೊಬ್ಬಿದ ಹುಡುಗರಿರಾ, ಬೆಟ್ಟಗಳಲ್ಲಿಯೂ ವನಗಳಲ್ಲಿಯೂ ವಾಸವನ್ನು ಮಾಡಿಕೊಂಡಿರುವ ನೀವು ಇಂಥಾ ದಿವ್ಯವಸ್ತ್ರಗಳನ್ನುಟ್ಟದ್ದುಂಟೆ ! ರಾಜದ್ರವ್ಯವನ್ನಪೇಕ್ಷಿಸುತ್ತೀರಿ ; ಮೂಢರಾದ ಹುಡುಗರೇ, ಆಚೆಗೆ ಹೋಗಿ ; ನೀವು ಜೀವಿಸಬೇಕಾದರೆ ಹೀಗೆ ಕೇಳಬೇಡಿ ; ರಾಜಭಟರು ಕೇಳಿದರೆ ಹಿಡಿದು ಕಟ್ಟಿ ಕೊಂದುಹಾಕುವರು " ಅಂದನು.

ಶ್ರೀಕೃಷ್ಣನು ದುರ್ಭಾಷೆಗಳನ್ನಾಡಿದ ಆ ರಜಕನ ಶಿರಸ್ಸನ್ನು ಹಸ್ತಾಗ್ರದಿಂದ ಛೇದಿಸಿ ಅವನ ಸಂಗಡ ಬಂದಿದ್ದ ರಜಕರೆಲ್ಲರು ವಸ್ತ್ರಮೂಟೆಗಳನ್ನು ಬಿಟ್ಟು ಪಲಾಯನಗೈಯಲು ಬಲರಾಮನೊಡನೆ ಬೇಕಾದ ವಸ್ತ್ರಗಳನ್ನಾದು ಉಟ್ಟುಕೊಂಡು ಕೆಲವು ವಸ್ತ್ರಗಳನ್ನು ಗೋಪರಿಗೆ ಕೊಟ್ಟನು. ಅಮೇಲೆ ಒಬ್ಬ ತಂತುವಾಯನು

ಸಂತುಷ್ಟನಾಗಿ ರಾಮಕೃಷ್ಣರಿಗೆ ನಾನಾಪ್ರಕಾರವಾದ ಅಲಂಕಾರವನ್ನು ಮಾಡಲು ಅವರು ಅದರಿಂದ ಶೋಭಿತರಾಗಿ ಉತ್ಸವದಲ್ಲಿ ಮೆರೆಯುವ ಬಾಲಗಜಗಳಂತೆ ಒಪ್ಪಿದರು; ಭಗವಂತನು ಪ್ರಸನ್ನನಾಗಿ ಆ ತಂತುವಾಯನಿಗೆ ಸಾರೂಪ್ಯಮುಕ್ತಿಯನ್ನೂ ಈ ಲೋಕದಲ್ಲಿ ಉತ್ಕೃಷ್ಟವಾದ ಐಶ್ವರ್ಯವನ್ನೂ ಬಲವನ್ನೂ ಜ್ಞಾನವನ್ನೂ ಕೊಟ್ಟನು. ಅನಂತರದಲ್ಲಿ ರಾಮಕೃಷ್ಣರು ಪುಷ್ಪಗಳನ್ನು ಕಟ್ಟುವ ಸುದಾಮನೆಂಬವನ ಗೃಹವನ್ನು ಕುರಿತು ಹೋದರು; ಆತನು ಅವರನ್ನು ದೂರದಲ್ಲೇ ನೋಡಿ ಎದ್ದು ಶಿರಸ್ಸಿನಿಂದ ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕರಿಸಿ ಅವರಿಗೆ ಪೀಠಗಳನ್ನು ಕೊಟ್ಟು ಅರ್ಘ್ಯಾದಿಗಳಿಂದ ಸಪರಿವಾರರಾದ ರಾಮಕೃಷ್ಣರಿಗೆ ಪೂಜೆಯನ್ನು ಮಾಡಿ ಪುಷ್ಪಹಾರಗಳನ್ನೂ ತಾಂಬೂಲಗಳನ್ನೂ ಗಂಧಗಳನ್ನೂ ಒಪ್ಪಿಸಿ ಅವರನ್ನು ಕುರಿತು “ಎಲೈ ರಾಮಕೃಷ್ಣರೇ, ನೀವಿಬ್ಬರು ನಮ್ಮ ಮನೆಗೆ ದಯೆಮಾಡಿ ಬಂದದ್ದರಿಂದ ನಮ್ಮ ಜನ್ಮವು ಸಾರ್ಥಕವಾಯಿತು; ನಮ್ಮ ಕುಲವು ಪವಿತ್ರವಾಯಿತು; ದೇವರ್ಷಿಗಳೂ ನಮ್ಮ ಪಿತೃಗಳೂ ಸಂತುಷ್ಟರಾದರು; ನೀವಿಬ್ಬರು ಸರ್ವಜಗತ್ತಿಗೂ ಕಾರಣರಾದರೂ ಭೂಲೋಕಕ್ಕೆ ಕ್ಷೇಮಾರ್ಥವಾಗಿ ನಿಮ್ಮ ಅಂಶದಿಂದ ಅವತಾರಗೈದು ಬಂದಿದ್ದೀರಿ; ಜಗತ್ಸ್ವರೂಪರಾಗಿ ಜಗನ್ಮಿತ್ರರಾಗಿ ಸರ್ವಪ್ರಾಣಿಗಳಲ್ಲಿಯು ಸಮರಾಗಿ ಸೇವಕರಿಗೆ ರಕ್ಷಕರಾಗಿರುವ ನಿಮಗೆ ಸರ್ವಪ್ರಾಣಿಗಳಲ್ಲಿಯು ವೈಷಮ್ಯವಿಲ್ಲ; ಭೃತ್ಯನಾದ ನನಗೆ ಆಜ್ಞಾಪಿಸೀ; ನಿಮಗೆ ಬೇಕಾದ ಕೆಲಸವನ್ನು ಮಾಡುತ್ತೇನೆ; ಯಾವ ಪುರುಷನಿಗೆ ನೀವು ಕೆಲಸವನ್ನಾಜ್ಞಾಪಿಸುತ್ತೀರೊ ಆ ಪುರುಷನಿಗೆ ಅದೇ ಪರಮಾನುಗ್ರಹವು” ಎಂದು ವಿಜ್ಞಾಪಿಸಿ ಪ್ರೀತಮನಸ್ಕನಾಗಿ ದಿವ್ಯ ಕುಸುಮಗಳಿಂದ ಮಾಲಿಕೆಗಳನ್ನು ಮಾಡಿಕೊಟ್ಟನು!

ಆ ಪುಷ್ಪಮಾಲಿಕೆಗಳಿಂದ ಅಲಂಕೃತರಾದ ರಾಮಕೃಷ್ಣರು ಪ್ರೀತರಾಗಿ ಶರಣಾಗತನಾಗಿ ಪ್ರಣತನಾದ ಸುದಾಮನಿಗೆ ಇಷ್ಟವಾದ ವರಗಳನ್ನು ಕೊಡುವದಾಗಿ ನುಡಿಯಲು ಆತನು ಅಖಿಲಾತ್ಮನಾದ ಶ್ರೀಕೃಷ್ಣನಲ್ಲೇ ಭಕ್ತಿಯನ್ನು ಯಾಚಿಸುತ “ಎಲೈ ಸ್ವಾಮಿಯೆ, ನಿನ್ನ ಭಕ್ತರಲ್ಲಿ ಮೈತ್ರಿಯೂ ಸರ್ವಪ್ರಾಣಿಗಳಲ್ಲಿ ದಯೆಯೂ ನನಗುಂಟಾಗಲಿ” ಎಂದು ಪ್ರಾರ್ಥಿಸಲು ಕೃಷ್ಣನು ಹಾಗೇ ವರಗಳನ್ನಿತ್ತು ವಂಶವೃದ್ಧಿಕರವಾದ ಸಂಪತ್ತನ್ನೂ ಬಲವನ್ನೂ ಆಯುಸ್ಸನ್ನೂ ಕಾಂತಿಯನ್ನೂ ಕೊಟ್ಟು ಸಪರಿವಾರನಾಗಿ ರಾಮಸಮೇತನಾಗಿ ಮುಂದೇ ಹೊರಟನು!

## ೪೨ನೇ ಅಧ್ಯಾಯ.

### ಕಂಸನು ಜಟ್ಟಿಕಾಳಗವನ್ನು ಮರಿಸಿದ್ದು.

ಎಲೈ ಅರಸೆ, ಅನಂತರದಲ್ಲಿ ಶ್ರೀಕೃಷ್ಣನು ರಾಜಮಾರ್ಗದಲ್ಲಿ ಹೋಗುತ ಗಂಧದ ಬಟ್ಟಲಗಳನ್ನು ತೆಗೆದುಕೊಂಡು ಹೋಗುವ ಯೌವನಸ್ಥೆಯಾಗಿ ಸುಂದರವಾದ ಮುಖವುಳ್ಳವಳಾಗಿ ಕುಬ್ಜೆಯಾದ ಒಬ್ಬ ಸ್ತ್ರೀಯನ್ನು ನೋಡಿ ಸುಖಪ್ರದನಾಗಿ ಆ ಸ್ತ್ರೀಯನ್ನು ಕುರಿತು “ಎಲೇ ಶ್ರೇಷ್ಠವಾದ ತೊಡೆಗಳುಳ್ಳ ಸ್ತ್ರೀಯೆ, ನೀನು ಯಾರು? ಈ ಅನುಲೇಪನದ್ರವ್ಯಗಳನ್ನು ಯಾರಿಗೆ ತೆಗೆದುಕೊಂಡು ಹೋಗುತ್ತೀ? ಉತ್ತಮವಾದ ಈ ಗಂಧದ್ರವ್ಯವನ್ನು ನಮ್ಮಿಬ್ಬರಿಗೂ ಕೊಡು; ನಿನಗೆ ಶೀಘ್ರವಾಗಿ ಶ್ರೇಯಸ್ಸುಂಟಾಗುತ್ತದೆ!” ಎಂದು ನುಡಿದನು.

ಆ ಸ್ತ್ರೀಯು “ ಎಲೈ ಸುಂದರನಾದ ಪುರುಷನೆ, ನಾನು ಕಂಸನಿಗೆ ಸಮ್ಮತವಾದ ಅನುಲೇಪನದ್ರವ್ಯಗಳನ್ನು ಮಾಡುವ ಗೌಡಿಯು; ನನ್ನ ಹೆಸರು ತ್ರಿವಕ್ರೆಯು; ನನ್ನಿಂದ ಮಾಡಲ್ಪಡುವ ಗಂಧಾನುಲೇಪನಗಳು ಕಂಸನಿಗೆ ಅತಿ ಪ್ರೀತಿಕರಗಳಾಗಿರುವವು; ದಿವ್ಯಪುರುಷರಾದ ನಿಮ್ಮನ್ನು ಹೊರ್ತು ಈ ಗಂಧದ್ರವ್ಯಗಳಿಗೆ ಯಾರು ಯೋಗ್ಯರಾದಾರು! ನೀವೆ ತೆಗೆದುಕೊಳ್ಳಿ” ಎಂದು ಹೇಳಿ ಅವರಿಬ್ಬರ ಸೌಂದರ್ಯದಿಂದಲೂ ಸೌಕುಮಾರ್ಯದಿಂದಲೂ ಮನೋಹರತ್ವದಿಂದಲೂ ಮಂದಸ್ಮಿತದಿಂದಲೂ ಸರಸಗಳಾದ ಮಾತುಗಳಿಂದಲೂ ನೋಟಗಳಿಂದಲೂ ಮೋಹಿತಗಳಾಗಿ ಘಟ್ಟಿಯಾಗಿರುವ ಆ ಅನುಲೇಪನಗಳನ್ನು ಕೊಟ್ಟಳು.

ಅನಂತರದಲ್ಲಿ ರಾಮಕೃಷ್ಣರು ಕಪ್ಪುಬಿಳುಪು ವರ್ಣಗಳಾದ ತಮ್ಮ ಶರೀರಗಳಿಗೆ ಹಳದಿ ಕೆಂಪು ವರ್ಣವುಳ್ಳ ದಿವ್ಯಗಂಧಗಳನ್ನನುಲೇಪನಮಾಡಿಕೊಂಡು ಪ್ರಕಾಶಿಸಿದರು ; ಆಗ ಭಗವಂತನಾದ ಕೃಷ್ಣನು ಸುಂದರವಾದ ಮುಖವುಳ್ಳವಳಾಗಿ ಕುಬ್ಜೆಯಾದ ತ್ರಿವಕ್ರೆಗೆ ತನ್ನ ದರ್ಶನಫಲವನ್ನು ಆಕ್ಷಣದಲ್ಲೇ ತೋರಿಸುತ ಆ ಸ್ತ್ರೀಯನ್ನು ಎದಿರಾಗಿ ನಿಲ್ಲಿಸಿಕೊಂಡು ಅವಳ ಪಾದಗಳನ್ನು ತನ್ನ ಪಾದಗಳಿಂದ ಮೆಟ್ಟಿಕೊಂಡು ಅವಳ ಗಡ್ಡಕ್ಕೆ ಕೈಹಾಕಿ ಎತ್ತಿದನು ; ಆಗ ಆ ಸ್ತ್ರೀಯು ಸಮವಾದ ಸರ್ವಾಂಗವುಳ್ಳವಳಾಗಿ ಮುಕುಂದನ ಸ್ಪರ್ಶದಿಂದ ಆಕ್ಷಣದಲ್ಲೇ ಉತ್ತಮಸ್ತ್ರೀಯಾಗಿ ರೂಪಸೌಂದರ್ಯಯುಕ್ತಳಾಗಿ ಶ್ರೀಕೃಷ್ಣನ ಶರಗನ್ನಿಡಿದು ಕಾಮಪೀಡಿತಳಾಗಿ "ಎಲೈ ವೀರನೆ, ನನ್ನ ಸಂಗಡ ಬಾ ; ನಮ್ಮ ಮನೆಗೆ ಹೋಗೋಣ ; ನಿನ್ನನ್ನು ಬಿಡಲಾರೆನು ; ನಿನ್ನಿಂದ ಮೋಹಿತಚಿತ್ತಳಾದ ನನಗೆ ಪ್ರಸನ್ನನಾಗು ! ಎಲೈ ಪುರುಷಶ್ರೇಷ್ಠನೆ" ಎಂದು ಯಾಚಿಸಿದಳು.

ಶ್ರೀಕೃಷ್ಣನು ಬಲರಾಮನಿಗೆದುರಾಗಿ ಸಂಗಡ ಬರುವ ಗೋಪರ ಮುಖವನ್ನು ನೋಡಿ ನಗುತ ಅವಳನ್ನು ಕುರಿತು "ಎಲೇ ಸ್ತ್ರೀಯೆ, ನಮ್ಮ ಕಾರ್ಯವನ್ನು ಸಾಧಿಸಿದಮೇಲೆ ಸಾವಕಾಶವಾಗಿ ಪುರುಷರಿಗೆ ವ್ಯಥಾಪರಿಹಾರಕವಾದ ನಿನ್ನ ಮನೆಗೆ ಬರುತ್ತೇನೆ ; ಪತ್ನಿರಹಿತರಾದ ವಿರಹಿಗಳಿಗೆ ನೀನೇ ಗತಿ" ಎಂದು ಮೃದುವಾಕ್ಯದಿಂದ ಅವಳನ್ನು ಕಳುಹಿಸಿ ಅಂಗಡೀಬೀದಿಯಲ್ಲಿ ಹೋಗುತ ವರ್ತಕರಿಂದ ನಾನಾಕಾಣಿಕೆಗಳಿಂದಲೂ ಸ್ರಕ್ಚಂದನ ತಾಂಬೂಲಾದಿಗಳಿಂದಲೂ ಪೂಜಿಸಲ್ಪಡುತಿದ್ದನು ; ಆ ಪುರಸ್ತ್ರೀಯರು ಕೃಷ್ಣದರ್ಶನದಿಂದುಂಟಾದ ಕಾಮವಿಕಾರದಿಂದ ಜಾರಿಹೋಗುತಲಿರುವ ವಸ್ತ್ರಗಳೂ ಕೇಶಗಳೂ ಭೂಷಣಗಳೂ ಉಳ್ಳವರಾಗಿ ಚಿತ್ರಬೊಂಬೆಗಳಂತೆ ಸ್ತಬ್ಧರಾಗಿ ತಮ್ಮ ಶರೀರವನ್ನು ಮರತು ಪರವಶವಾಗಿದ್ದರು ! ಶ್ರೀಕೃಷ್ಣನು ಆ ಪುರಸ್ಥರಾದ ಜನರನ್ನು ಧನುರ್ಯಾಗಸ್ಥಾನವನ್ನು ಕೇಳುತ ಆ ಸ್ಥಾನಕ್ಕೆಹೋಗಿ ಇಂದ್ರಧನುಸ್ಸಿನಂತೆ ಅದ್ಭುತವಾಗಿಯೂ ಅನೇಕ ರಾಜಪುರುಷರಿಂದ ರಕ್ಷಿತವಾಗಿಯೂ ಪೂಜಿತವಾಗಿಯೂ ಅತಿ ವೈಭವಯುಕ್ತವಾದ ಆ ಧನುಸ್ಸನ್ನು ನೋಡಿ ಅಲ್ಲಿದ್ದ ಜನರಿಂದ ನಿವಾರಿತನಾಗಿ ತಡೆಯಲ್ಪಟ್ಟರೂ ಬಲಾತ್ಕಾರದಿಂದ ಹೋಗಿ ಅದನ್ನು ಗ್ರಹಿಸಿ ತನ್ನ ವಾಮಹಸ್ತದಿಂದ ಲೀಲೆಯಿಂದೆತ್ತಿ ಎಲ್ಲರೂ ನೋಡುತ್ತಿರಲು ಒಂದು ಕ್ಷಣಮಾತ್ರದಲ್ಲಿ ಹೆದೆಯನ್ನೇರಿಸಿ ಎಳೆದು ಆ ಧನುಸ್ಸನ್ನು ಮಧ್ಯದಲ್ಲಿ ಮುರಿದನು ! ಹಾಗೆ ಮುರಿಯಲ್ಪಟ್ಟ ಆ ಧನುಸ್ಸಿನ ಶಬ್ದವು ಭೂವ್ಯಾಕಾಶಗಳನ್ನೂ ದಿಕ್ಕುಗಳನ್ನೂ ವ್ಯಾಪಿಸಿತು ! ಆ ಶಬ್ದವನ್ನು ಕೇಳಿ ಕಂಸನು ಭಯವನ್ನೈದಿದನು ; ಆ ಧನುಸ್ಸಿಗೆ ರಕ್ಷಕರಾಗಿದ್ದ ಕಾವಲುಜನರು ಸಾನುಚರರಾಗಿ ಕೋಪಿಷ್ಠರಾಗಿ ದ್ರೋಹಿಗಳಾಗಿ "ಇವರನ್ನು ಹಿಡಿದುಕೊಳ್ಳೀ ! ಕಟ್ಟೀ !" ಎಂದು ಕೂಗುತ ಕೃಷ್ಣನನ್ನಿಡಿಯುವದಕ್ಕಾಗಿ ಆತನನ್ನು ಸುತ್ತಿಕೊಂಡರು ; ದುಷ್ಟಾಭಿಪ್ರಾಯವುಳ್ಳ ಅವರನ್ನು ನೋಡಿ ರಾಮಕೃಷ್ಣರು ಕೋಪಿಷ್ಠರಾಗಿ ಮುರಿದಿದ್ದ ಆ ಧನುಸ್ಸಿನ ಎರಡು ತುಂಡುಗಳನ್ನು ಒಬ್ಬೊಬ್ಬರೊಂದೊಂದನ್ನು ತೆಗೆದುಕೊಂಡು ಅವರೆಲ್ಲರನ್ನೂ ಸಂಹರಿಸಿ ಮತ್ತು ಕಂಸನಿಂದ ಕಳುಹಿಸಲ್ಪಟ್ಟ ಸೇನೆಯನ್ನೂ ಸಂಹರಿಸಿ ಧನುಶ್ಶಾಲೆಯಿಂದ ಹೊರಟು ಪುರದ ಅಲಂಕಾರಗಳನ್ನು ನೋಡುತ ಸಂಚರಿಸುತಿದ್ದರು ! ಪುರವಾಸಿಗಳಾದ ಜನರು ರಾಮಕೃಷ್ಣರ ಅದ್ಭುತಪರಾಕ್ರಮವನ್ನೂ ತೇಜಸ್ಸನ್ನೂ ಪ್ರೌಢತ್ವವನ್ನೂ ಸೌಂದರ್ಯವನ್ನೂ ನೋಡಿ ಅವರು ದೇವತಾಶ್ರೇಷ್ಠರೆಂದು ತಿಳಿದರು ; ಈ ರೀತಿಯಲ್ಲಿ ರಾಮಕೃಷ್ಣರು ಸಂಚರಿಸುತ ಸೂರ್ಯಾಸ್ತಮಯವಾಗಲು ಗೋಪರಿಂದ ಪರಿವೃತರಾಗಿ ಪುರದ ಹೊರಭಾಗದಲ್ಲಿ ತಾವಿಳಿದಿದ್ದ ಸ್ಥಾನಕ್ಕೆ ಹೋದರು ! ಎಲೈ ಅರಸೆ, ವ್ರಜವನ್ನು ಬಿಟ್ಟು ಶ್ರೀಕೃಷ್ಣನು ಹೊರಟಾಗ ಗೋಪಸ್ತ್ರೀಯರು ಮಧುರಾಪುರದ ಜನರಿಗೆ ಪುಣ್ಯಾನುಕೂಲವಾಯಿತೆಂದೂ ಅವರು ಕೃಷ್ಣದರ್ಶನವನ್ನು ಮಾಡಿ ಧನ್ಯರಾಗುವರೆಂದೂ ತಾವು ಪುಣ್ಯಹೀನರೆಂದೂ ಯಾವ್ಯಾವ ಮಾತುಗಳನ್ನಾಡಿಕೊಂಡರೊ ಆ ಮಾತುಗಳೆಲ್ಲವೂ ಆ ಪುರವಾಸಿಗಳಾದ ಜನರಿಗೆ ಸತ್ಯವಾದವು ! ಬ್ರಹ್ಮಾದಿಗಳನ್ನು ಬಿಟ್ಟು ಯಾವ ಭಗವಂತನ ದೇಹಕಾಂತಿಯನ್ನು ನೋಡಿ ಲಕ್ಷ್ಮಿಯು ಮೋಹಿಸಿದಳೊ ಅಂಥಾ ಕೃಷ್ಣನನ್ನು ನೋಡಿ ಆ ಪುರವಾಸಿಗಳು ಆನಂದಭರಿತರಾದರು ! ರಾಮಕೃಷ್ಣರು ತಮ್ಮ ಸ್ಥಾನಕ್ಕೆ ಹೋಗಿ ಪಾದಪ್ರಕ್ಷಾಳನಂಗೈದು ಕ್ಷೀರಾನ್ನವನ್ನು ಭೋಜನಂಗೈದು ಕಂಸನ

ತಾತ್ಪರ್ಯವನ್ನು ತಿಳಿದು ಆ ರಾತ್ರಿ ಸುಖವಾಗಿ ಶಯನಂಗೈದರು! ಕಂಸನು ರಾಮಕೃಷ್ಣರಿಂದ ಮಾಡಲ್ಪಟ್ಟ ಧನುರ್ಭಂಗವನ್ನೂ ಕಾವಲು ಜನರ ಸಂಹಾರವನ್ನೂ ತನ್ನ ಸೇನೆಯ ಸಂಹಾರವನ್ನೂ ಕೇಳಿಯೂ ಮೃತ್ಯುವಿನ ದೂತಕೃತ್ಯವನ್ನು ಮಾಡುವ ಅನೇಕ ದುಶ್ಶಕುನಗಳನ್ನು ಕಂಡೂ ನಿದ್ರೆಯನ್ನು ಬಿಟ್ಟು ಚಿಂತಾಕ್ರಾಂತನಾಗಿ ಭಯಪಡುತ್ತಿದ್ದನು! ಅತನಿಗೆ ಜಾಗರದಲ್ಲಿಯೂ ಸ್ವಪ್ನದಲ್ಲಿಯೂ ದುಶ್ಶಕುನಗಳಾದವು; ಜಾಗರದಲ್ಲಿ ಜಲಾದಿಗಳಲ್ಲಿ ತೋರುವ ತನ್ನ ಪ್ರತಿಬಿಂಬವಲ್ಲಿ ಶಿರಸ್ಸನ್ನು ಕಾಣದೆ ಹೋಗೋಣವು ಸೂರ್ಯಚಂದ್ರಾದಿಗಳು ಎರಡೆರಡಾಗಿ ಕಾಣೋಣವು ತನ್ನ ಪ್ರತಿಬಿಂಬದಲ್ಲಿ ರಂಧ್ರಗಳನ್ನು ಕಾಣೋಣವು ಕಿವಿಮುಚ್ಚಿದರೆ ವಿಪರೀತಶಬ್ದವು ಕೇಳಲ್ಪಡೋಣವೂ ವೃಕ್ಷಗಳು ಸುವರ್ಣಗಳಂತೆ ಕಾಣಲ್ಪಡೋಣವು ಕೆಸರಿನಲ್ಲಿಯೂ ಧೂಳಿಗಳಲ್ಲಿಯೂ ಹೆಜ್ಜೆಗಳು ಕಾಣಲ್ಪಡದೆ ಹೋಗೋಣವು ಇತ್ಯಾದಿ ದುರ್ನಿಮಿತ್ತಗಳುಂಟಾದವು; ಸ್ವಪ್ನದಲ್ಲಿ ಶವಗಳ ಆಲಿಂಗನವು ಗರ್ದಭಾರೋಹಣವು ವಿಷಭಕ್ಷಣವು ದಾಸವಾಳಹೂಮಾಲಿಕಾಧಾರಿಯಾಗಿ ಒಬ್ಬನೇ ಸಂಚಾರಮಾಡೋಣವು ವಸ್ತ್ರಹೀನನಾಗಿ ತೈಲಾಭ್ಯಂಗನ ಮಾಡೋಣವು ಇತ್ಯಾದಿ ದುಶ್ಶಕುನಗಳಾದವು! ಇಂಥಾ ದುರ್ನಿಮಿತ್ತಗಳನ್ನು ಕಂಡು ಮರಣಭಯಗ್ರಸ್ತನಾಗಿ ಕಂಸನು ನಿದ್ರೆಮಾಡದೆ ಆ ರಾತ್ರಿ ಕಳೆದಮೇಲೆ ಸೂರ್ಯನು ಸಮುದ್ರದಿಂದುದಯಿಸುತ್ತಿರಲು ಜಟ್ಟಿಗಳ ಕಾಳಗವೆಂಬ ಮಹೋತ್ಸವವನ್ನು ಮಾಡಿಸಿದನು; ಅನೇಕ ಪುರುಷರು ಆ ರಂಗಸ್ಥಳವನ್ನು ಪೂಜಿಸಿದರು; ಭೇರ್ಯಾದಿಗಳು ಬಾರಿಸಲ್ಪಟ್ಟವು; ರಂಗಸಭಾಮಂಚವು ಪುಷ್ಪಮಾಲಿಕೆಗಳಿಂದಲಂಕೃತವಾಯಿತು; ಆ ಮಂಚದಲ್ಲಿ ಪುರಜನರೂ ದೇಶಜನರೂ ಬ್ರಹ್ಮ ಕ್ಷತ್ರಿಯರು ಮೊದಲಾದವರೂ ಯಥಾಯೋಗ್ಯವಾಗಿ ಕುಳಿತರು; ಅವರ ಮಧ್ಯದಲ್ಲಿ ಕಂಸನು ಮಂತ್ರಿಗಳಿಂದ ಯುಕ್ತನಾಗಿ ಉತ್ತಮವಾದ ರಾಜಾಸನದಲ್ಲಿ ವ್ಯಥಿತವಾದ ಮನಸ್ಸಿನಿಂದ ಕುಳಿತನು! ಆ ಬಳಿಕ ತಮ್ಮ ವಾದ್ಯಗಳಿಂದ ಮಿಶ್ರಿತಗಳಾದ ಅನೇಕ ವಾದ್ಯಗಳು ಬಾರಿಸಲ್ಪಡುತ್ತಿರಲು ಜಟ್ಟಿಗಳು ಅಲಂಕೃತರಾಗಿ ತಮ್ಮ ಆಚಾರ್ಯಸಮೇತರಾಗಿ ಗರ್ವಿತರಾಗಿ ಆ ರಂಗಕ್ಕೆ ಬಂದರು; ಚಾಣೂರನೂ ಮುಷ್ಟಿಕನೂ ಕೂಟನೂ ಶಲನೂ ಕೋಸಲನೂ ಮನೋಹರವಾದ ಆ ವಾದ್ಯಗಳನ್ನು ಕೇಳುತ ಸಂತುಷ್ಟರಾಗಿ ಬಂದರು; ಆ ಬಳಿಕ ಕಂಸನಿಂದ ಕರೆಯಲ್ಪಟ್ಟ ನಂದಗೋಪಾದಿಗಳು ಕಂಸನಿಗೆ ಕಾಣಿಕೆಗಳನ್ನೊಪ್ಪಿಸಿ ಆ ಮಂಟಪದಲ್ಲಿ ಕುಳಿತರು!

---

## ೪೩ ನೇ ಅಧ್ಯಾಯ.

## ಕುವಲಯಾಪೀಡದ ವಧೆ.

ಎಲೈ ಅರಸೆ, ಆ ಬಳಿಕ ರಾಮಕೃಷ್ಣರು ಪರಿಶುದ್ಧರಾಗಿ ಜಟ್ಟಿಗಳ ದುಂದುಭಿಧ್ವನಿಯನ್ನು ಕೇಳಿ ಆ ಜಟ್ಟಿ ಕಾಳಗವನ್ನು ನೋಡಲೋಸುಗ ಬಂದರು; ಶ್ರೀಕೃಷ್ಣನು ರಂಗದಬಾಗಲಿಗೆ ಬಂದು ಮಾವುತನಿಂದ ಪ್ರೇರಿತವಾಗಿ ರಂಗದ್ವಾರದಲ್ಲಿ ನಿಂತಿದ್ದ ಕುವಲಯಾಪೀಡವೆಂಬ ಗಜವನ್ನು ನೋಡಿ ನಡುಕಟ್ಟನ್ನು ಘಟ್ಟಿಯಾಗಿ ಕಟ್ಟಿ ಕೇಶಗಳನ್ನು ಸೇರಿಸಿಕೊಂಡು ಆ ಮಾವುತನನ್ನು ಕುರಿತು ಮೇಘಧ್ವನಿಯಂತೆ ಗಂಭೀರವಾಕ್ಯದಿಂದ "ಎಲೇ ಮಾವುತನೆ, ನಮಗೆ ಮಾರ್ಗವನ್ನು ಬಿಟ್ಟು ಬಂದುಕಡೆಯಾಗಿ ಹೋಗು; ಇಲ್ಲದಿದ್ದರೆ ನಿನ್ನನ್ನೂ ನಿನ್ನ ಗಜವನ್ನೂ ಯಮಲೋಕಕ್ಕೆ ಕಳುಹಿಸುತ್ತೇನೆ" ಅಂದನು.

ಆ ಮಾವುತನು ಕೋಪಪ್ರಜ್ವಲಿತನಾಗಿ ಕಾಲಾಂತಕನಾದ ಯಮನ ಸಮಾನವಾದ ಆ ಗಜವನ್ನು ಕೃಷ್ಣನಮೇಲೆ ಪ್ರೇರಿಸಲು ಆ ಗಜವು ಕೃಷ್ಣನನ್ನು ಸೊಂಡಿಲಿಂದ ಗ್ರಹಿಸಿತು; ಕೃಷ್ಣನು ತಪ್ಪಿಸಿಕೊಂಡು ತನ್ನ ಮುಷ್ಟಿಯಿಂದ ಪ್ರಹರಿಸಿ ಅದರ ಕಾಲುಗಳ ನಡುವೆ ಬಿತ್ತುಕೊಂಡು ಆ ಗಜವು ತನ್ನನ್ನು ಕಾಣದೆ ಸೊಂಡಿಲಿಂದ ಅಲ್ಲಿ ಮೂಸಿ ನೋಡಿ ತಿರಿಗಿ ಹಿಡಿಯಲು ಪ್ರಸಹ ತಪ್ಪಿಸಿಕೊಂಡು ಮಹಾಬಲಶಾಲಿಯಾದ ಆ ಗಜವನ್ನು ಬಾಲಹಿಡಿದು

ಇಪ್ಪತ್ತೈದುಮೂರು ಗರುಡನು ಸರ್ಪವನ್ನು ಶೆಳೆಯುವಂತೆ ಶೆಳೆದು ಅದು ತನ್ನನ್ನು ಗ್ರಹಿಸಲೋಸುಗ ಸವ್ಯವಾಗಿ ತಿರುಗಿದರೆ ದಕ್ಷಿಣವಾಗಿ ಬರುತ ದಕ್ಷಿಣವಾಗಿ ತಿರುಗಿದರೆ ಸವ್ಯವಾಗಿ ಬರುತ ಬಾಲಕನು ಎಳೇಕರುವನ್ನಾಡಿಸುವರೀತಿಯಲ್ಲಿ ಆಡಿಸಿ ಎದಿರಾಗಿಬಂದು ಮುಷ್ಟಿಯಿಂದ ಪ್ರಹರಿಸಿ ಅದರ ಕಾಲಿಗೆ ತೊಡರುಹಾಕಿ ಅದನ್ನು ಕೆಡಹಿ ಭೂಮಿಯಲ್ಲಿ ವಿಲಾಸದಿಂದ ಓಡುವಹಾಗೆ ಬಿಟ್ಟನು ; ಆ ಗಜವು ಕುಪಿತವಾಗಿ ಕೃಷ್ಣನು ಕೆಳಗೆ ಬಿದ್ದನೆಂದು ಕೊಂಬುಗಳಿಂದ ತಿವಿದು ಕೃಷ್ಣನು ತಪ್ಪಿಸಿಕೊಂಡು ಮೊದಲೇ ಎದ್ದುಹೋಗಿದ್ದಕಾರಣ ತನ್ನ ಯತ್ನವು ವ್ಯರ್ಥವಾಗಲು ಮಾವುತನಿಂದ ಪ್ರೇರಿತವಾಗಿ ಆತನನ್ನಟ್ಟಿಬಂತು ; ಭಗವಂತನಾದ ಕೃಷ್ಣನು ಹಾಗೆ ಬರುತಿದ್ದ ಆ ಆನೆಯನ್ನು ಸೊಂಡಿಲಿಂದಿಡಿದು ಭೂಮಿಯಲ್ಲಿ ಜಂಗಿಸಿ ಕೆಡಹಿ ಕೆಳಗೆಬಿದ್ದ ಆ ಆನೆಯನ್ನು ಸಿಂಹದಂತೆ ಲೀಲೆಯಿಂದ ಕಾಲಿನಲ್ಲಿ ಮೆಟ್ಟಿಕೊಂಡು ಅದರ ದಂತವನ್ನು ಕಿತ್ತುಕೊಂಡು ಅದರಿಂದ ಮಾವುತರನ್ನು ಸಂಹರಿಸಿ ಮೃತವಾದ ಆ ಗಜವನ್ನು ಬಿಟ್ಟು ದಂತವನ್ನು ಕೈಯಲ್ಲಿಡಿದುಕೊಂಡು ಆ ಗಜದ ರಕ್ತಬಿಂದುಗಳಿಂದಲೂ ಮದೋದಕ ಬಿಂದುಗಳಿಂದಲೂ ಚಿನ್ಹಿತನಾಗಿ ಬೆವರುಬೊಟ್ಟುಗಳಿಂದಲಂಕೃತವಾದ ಮುಖವುಳ್ಳವನಾಗಿ ಪ್ರಕಾಶಿಸುತ ಬಲರಾಮನು ಆ ಗಜದ ಮತ್ತೊಂದು ದಂತವನ್ನು ಧರಿಸಿಕೊಳ್ಳಲು ಗೋಪರಿಂದ ಪರಿವೃತನಾಗಿ ಜಟ್ಟಿಗಳಿಗೆ ಶಿಡಿಲಿನಂತೆಯೂ ಜನರಿಗೆ ಪುರುಷಶ್ರೇಷ್ಠನಂತೆಯೂ ಸ್ತ್ರೀಯರಿಗೆ ಮೂರ್ತಿವಂತನಾದ ಕಾಮನಂತೆಯೂ ಗೋಪರಿಗೆ ಸ್ವಜನನಂತೆಯೂ ದುಷ್ಟಕ್ಷತ್ರಿಯರಿಗೆ ಶಿಕ್ಷಕನಂತೆಯೂ ಕಂಸನಿಗೆ ಮೃತ್ಯುವಿನಂತೆಯೂ ಅಜ್ಞಾನಿಗಳಿಗೆ ಕೊಬ್ಬಿದ ಪುರುಷನಂತೆಯೂ ಯೋಗಿಗಳಿಗೆ ಪರತತ್ವದಂತೆಯೂ ಯಾದವರಿಗೆ ಪರದೇವತೆಯಂತೆಯೂ ತೋರುತ ಆ ರಂಗವನ್ನು ಪ್ರವೇಶಿಸಿದನು ; ಕಂಸನು ಧೀರನಾದಾಗ್ಯು ಕುವಲಯಾಪೀಡವೆಂಬ ಗಜವು ಹತವಾದ್ದನ್ನೂ ಜಯಿಸಲಶಕ್ಯವಾದ ರಾಮಕೃಷ್ಣರನ್ನೂ ನೋಡಿ ಮನಸ್ಸಿನಲ್ಲಿ ಬಹಳವಾಗಿ ಭಯಪಟ್ಟನು ; ದೀರ್ಘಬಾಹುಗಳುಳ್ಳವರಾಗಿ ವಿಚಿತ್ರಾಲಂಕಾರ ಶೋಭಿತರಾಗಿ ವಸ್ತ್ರಭೂಷಣ ಹಾರಗಳಿಂದಲಂಕೃತರಾದ ರಾಮಕೃಷ್ಣರು ರಂಗವನ್ನೈದಿ ಉತ್ತಮವೇಷಧಾರಿಗಳಾದ ನಟರಂತೆ ತಮ್ಮ ಪ್ರಭೆಯಿಂದ ನೋಡುವ ಜನರ ಮನಸ್ಸನ್ನಪಹರಿಸುತ ಪ್ರಕಾಶಿಸಿದರು ! ಮಂಚಸ್ಥರಾದ ಪೌರಜಾನಪದರು ಪುರುಷೋತ್ತಮರಾದ ರಾಮಕೃಷ್ಣರನ್ನು ನೋಡಿ ಸಂತೋಷಾತಿಶಯದಿಂದ ವಿಕಸಿತವಾದ ನೇತ್ರಗಳುಳ್ಳ ಮುಖಗಳುಳ್ಳವರಾಗಿ ತಮ್ಮ ನೇತ್ರಗಳಿಂದ ರಾಮಕೃಷ್ಣರ ಮುಖಗಳನ್ನು ದಣಿವಿಲ್ಲದೆ ನೋಡುತಿದ್ದರು ; ಮಿಕ್ಕ ಜನರು ರಾಮಕೃಷ್ಣರನ್ನು ನೇತ್ರಗಳಿಂದ ಪಾನಗೈವವರಂತೆಯೂ ಜಿಂಹೆಯಿಂದ ಆಸ್ವಾದನಗೈವವರಂತೆಯೂ ಘ್ರಾಣದಿಂದ ಆಘ್ರಾಣಿಸುವವರಂತೆಯೂ ಬಾಹುಗಳಿಂದ ಆಲಿಂಗನಗೈವವರಂತೆಯೂ ಇದ್ದು ಅವರ ಚರಿತವನ್ನು ಪೂರ್ವದಲ್ಲಿ ಹ್ಯಾಗೆ ಕೇಳಿದ್ದರೊ ಅದಕ್ಕನುರೂಪವಾದ ಸೌಂದರ್ಯವು ಸುಗುಣವು ಮನೋಹರತ್ವವು ಪ್ರೌಢತ್ವವು ಮೊದಲಾದವುಗಳನ್ನು ನೋಡಿ ಮೋಹಿತರಾಗಿ ಪರಸ್ಪರವಾಗಿ “ ರಾಮಕೃಷ್ಣರು ಸಾಕ್ಷಾತ್ ಭಗವಂತನಾಗಿ ನಾರಾಯಣನಾದ ಹರಿಯ ಅಂಶದಿಂದ ವಸುದೇವನ ಗೃಹದಲ್ಲಿ ಅವತರಿಸಿರುವದು ನಿಶ್ಚಯವು ; ಕೃಷ್ಣನು ದೇವಕೀದೇವಿಯಲ್ಲಿ ಹುಟ್ಟಿ ಇಷ್ಟುದಿವಸ ಪರ್ಯಂತವು ಗೂಢವಾಗಿ ನಂದಗೋಪನ ಗೃಹದಲ್ಲಿ ಬೆಳೆದನು ; ಈತನಿಂದಲೇ ಪೂತನೆಯು ಸಂಹೃತಳಾದಳು ; ಮತ್ತು ಚಕ್ರಾಕಾರನಾದ ದೈತ್ಯನು ಯಮಳಾರ್ಜುನರು ಧೇನುಕಾಸುರನು ಯಕ್ಷನು ಶಂಖಚೂಡನು ಅಘಾಸುರಾದಿಗಳು ಮೊದಲಾದವರೂ ಈತನಿಂದಲೇ ಸಂಹೃತರಾದರು ; ಗೋವುಗಳೂ ಗೋಪಾಲಕರೂ ಕಾಡುಗಿಚ್ಚಿನಲ್ಲಿ ಸಿಕ್ಕಿ ಈತನಿಂದಲೇ ರಕ್ಷಿತರಾದರು ; ಕಾಳೀಯಸರ್ಪವು ಈತನಿಂದಲೇ ನಿಗ್ರಹಿಸಲ್ಪಟ್ಟಿತು ; ಈತನಿಂದಲೇ ಇಂದ್ರನು ಗರ್ವರಹಿತನಾಗಿ ಮಾಡಲ್ಪಟ್ಟನು ; ಕೃಷ್ಣನಿಂದ ಏಳುದಿವಸ ಪರ್ಯಂತವು ಗೋವರ್ಧನಪರ್ವತವು ಧರಿಸಲ್ಪಟ್ಟಿತು ; ವೃಷ್ಟಿಯಿಂದಲೂ ಚಂಡಮಾರುತದಿಂದಲೂ ಶಿಡಿಲುಗಳಿಂದಲೂ ಉಂಟಾದ ಉಪದ್ರವವನ್ನು ಪರಿಹರಿಸಿ ಗೋಕುಲವನ್ನು ಈ ಕೃಷ್ಣನೇ ರಕ್ಷಿಸಿದನು ; ಗೋಪಸ್ತ್ರೀಯರು ನಿರಂತರದಲ್ಲಿಯೂ ಸಂತುಷ್ಟನಾಗಿ ಮುಗುಳುನಗೆ ನೋಟಗಳುಳ್ಳ ದಿವ್ಯಮುಖವುಳ್ಳ ಕೃಷ್ಣನನ್ನು ನೋಡುತ ಸಮಸ್ತ ತಾಪಗಳನ್ನೂ ಪರಿಹರಿಸಿಕೊಳ್ಳುವರು ; ಈತನಿಂದಲೇ ಯದುವಂಶವು ಸಂತೋಷಪಡುವದು ; ಪ್ರಸಿದ್ಧ

ವಾದ ಈ ಯಾದವವಂಶವು ಕೃಷ್ಣನ ಅನುಗ್ರಹದಿಂದಲೇ ರಕ್ಷಿತವಾಗಿ ಸಂಪತ್ತನ್ನೂ ಕೀರ್ತಿಯನ್ನೂ ಮಹಾತ್ಮ್ಯವನ್ನೂ ಪಡೆಯುವದು ; ಕೃಷ್ಣನಿಗೆ ಅಗ್ರಜನಾದ ಬಲರಾಮನು ಶ್ರೀಮಂತನಾಗಿ ಪದ್ಮಲೋಚನನಾಗಿ ಪ್ರಕಾಶಿಸುತ್ತಾನೆ ; ಪ್ರಲಂಬ ವತ್ಸಕ ಧೇನುಕಾದಿಗಳು ಈತನಿಂದಲೇ ಹತರಾದರು" ಎಂದು ನುಡಿಯುತ್ತಿದ್ದರು.

ಆ ಸಮಯದಲ್ಲಿ ಶಂಖಭೇರ್ಯಾದಿ ವಾದ್ಯಗಳು ಧ್ವನಿಗೈಯುತಿರಲು ಚಾಣೂರನೆಂಬ ಪ್ರಧಾನಜಟ್ಟಿಯು ಸಹಿಸಲಾರದೆ ರಾಮಕೃಷ್ಣರನ್ನು ಕುರಿತು "ಎಲೈ ನಂದಕೃಷ್ಣನೆ, ಎಲೈ ಬಲರಾಮನೆ, ನೀವಿಬ್ಬರು ಪರಾಕ್ರಮವಂತರು ; ಬಾಹುಯುದ್ಧದಲ್ಲಿ ಸಮರ್ಥರೆಂದು ತಿಳಿದು ನೋಡಬೇಕೆಂಬ ಇಚ್ಛೆಯಿಂದ ಅರಸಾದ ಕಂಸನಿಂದ ಕರೆಯಿಸಲ್ಪಟ್ಟು ಬಂದಿರಿ ; ಪ್ರಜೆಗಳು ಅರಸಿಗೆ ಮನೋವಾಕ್ಕಾಯ ಕರ್ಮಗಳಿಂದಲೂ ಪ್ರಿಯವನ್ನು ಮಾಡಿದರೆ ಸೌಖ್ಯವನ್ನೈದುವರು ; ಇಲ್ಲದಿದ್ದರೆ ಕಷ್ಟವನ್ನೈದುವರು ; ಗೋಪಾಲಕರಾದ ನೀವು ಸಂತುಷ್ಟರಾಗಿ ಮಲ್ಲಯುದ್ಧದಿಂದ ವಿಹರಿಸುತ ಗೋವುಗಳನ್ನು ಸಂಚಾರಮಾಡಿಸಿಕೊಂಡಿರುವಿರಿ ; ಆದಕಾರಣ ನೀವೂ ನಾವೂ ಅರಸಿಗೆ ಪ್ರಿಯವನ್ನುಂಟುಮಾಡೋಣ ; ಅರಸು ಸರ್ವದೇವತಾಮಯನಾದ್ದರಿಂದ ಆತನು ಸಂತೋಷಪಟ್ಟರೆ ಸರ್ವಭೂತಗಳೂ ಸಂತೋಷಪಡುವವು" ಅಂದನು.

ಆ ಮಾತನ್ನು ಕೇಳಿ ಶ್ರೀಕೃಷ್ಣನು ಬಾಹುಯುದ್ಧಕ್ಕೆ ಸಮ್ಮತಿಸಿ ದೇಶಕಾಲೋಚಿತವಾದ ಮಾತುಗಳಿಂದ "ಎಲೈ ಚಾಣೂರನೆ, ವನಚರರಾದ ನಾವೂ ಮಿಕ್ಕವರೂ ಕಂಸನ ಪ್ರಜೆಗಳೇ ಹೊರ್ತು ಬೇರೆ ಅಲ್ಲ ; ನಿರಂತರದಲ್ಲಿಯು ಆತನಿಗೆ ಪ್ರಿಯವನ್ನು ಮಾಡುವದೇ ನಮಗೆ ಪರಮಾನುಗ್ರಹವು ; ನಾವು ಬಾಲಕರು ; ನಮ್ಮ ಸಮಾನ ವಯಸ್ಕರೊಡನೆ ಯಥೋಚಿತವಾಗಿ ವಿಹರಿಸುತ್ತೇವೆ ; ಅಧರ್ಮವನ್ನು ಮಾಡಬಾರದು" ಅಂದನು.

ಚಾಣೂರನು "ಎಲೈ ಕೃಷ್ಣನೆ, ನೀನು ಬಾಲಕನಲ್ಲ ; ಬಲರಾಮನೂ ಬಾಲಕನಲ್ಲ ; ಸಾವಿರ ಆನೆಗಳ ಬಲವುಳ್ಳ ಮಹಾಗಜವನ್ನು ಲೀಲೆಯಿಂದಲೆ ಸಂಹರಿಸಿದೆ ; ಆದ್ದರಿಂದ ನಿಮ್ಮ ಸಂಗಡ ಯುದ್ಧವನ್ನು ಮಾಡುವದರಲ್ಲಿ ಅಧರ್ಮವಿಲ್ಲ! ಎಲೈ ಕೃಷ್ಣನೆ, ನೀನು ನನ್ನಲ್ಲಿ ಪರಾಕ್ರಮವನ್ನು ತೋರಿಸು ; ಮುಷ್ಟಿಕನು ಬಲರಾಮನೊಡನೆ ಯುದ್ಧವನ್ನುಮಾಡಲಿ" ಎಂದು ನುಡಿದನು.

## ೪೪ ನೇ ಅಧ್ಯಾಯ.

## ಕಂಸಾದಿಗಳ ವಧೆ.

ಎಲೈ ಅರಸೆ, ಅನಂತರದಲ್ಲಿ ಈ ಪ್ರಕಾರ ನಿಶ್ಚಿತಸಂಕಲ್ಪನಾಗಿ ಭಗವಂತನಾದ ಶ್ರೀಕೃಷ್ಣನು ಚಾಣೂರನೊಡನೆ ಬಾಹುಯುದ್ಧಕ್ಕೆ ಹೋದನು ; ಬಲರಾಮನು ಮುಷ್ಟಿಕನಮೇಲೆ ಹೋದನು ; ಆಗ ಅವರು ಹಸ್ತಗಳಿಂದ ಭುಜಗಳನ್ನೂ ತೊಡೆಗಳನ್ನೂ ಬಾರಿಬಾರಿಗು ತಟ್ಟಿಕೊಂಡು ಹಿಂದಕ್ಕೂ ಮುಂದಕ್ಕೂ ಚಲಿಸುತ ಪರಸ್ಪರ ಎದಿರಿಸಿಕೊಂಡು ಹಸ್ತಗಳಿಂದ ಹಸ್ತಗಳನ್ನಿಡಿದೂ ಪಾದಗಳಿಂದ ಪಾದಗಳನ್ನು ತೊಡರುಹಾಕಿಯೂ ಎಳೆದಾಡುತ ಮೊಳಕೈಗಳಿಂದ ಮೊಳಕೈಗಳನ್ನೂ ಮೊಳಕಾಲುಗಳಿಂದ ಮೊಳಕಾಲುಗಳನ್ನೂ ಶಿರಸ್ಸಿನಿಂದ ಶಿರಸ್ಸನ್ನೂ ವಕ್ಷಸ್ಸಿನಿಂದ ವಕ್ಷಸ್ಸನ್ನೂ ಪ್ರಹರಿಸುತ ಹಸ್ತಾದಿಗಳ್ಹಿಡಿದು ಸುತ್ತಿಸುತಲೂ ಹಿಂದಕ್ಕೆ ತಳ್ಳುತಲೂ ಬಾಹುಗಳಿಂದ ತಬ್ಬಿ ಪೀಡಿಸುತಲೂ ಕೆಡಹುತಲೂ ಎದಿರಾಗಿ ಹೋಗಿ ಬೀಳುತಲೂ ಹಿಂಭಾಗದಿಂದ ಬಂದು ಹಿಡುಕೊಳ್ಳುತಲೂ ಕೆಳಗೆ ಬಿದ್ದವರನ್ನು ಮುದುರಿ ಮೂಟೆಕಟ್ಟಿ ಎತ್ತಿಹಾಕುತಲೂ ಪಕ್ಕತ್ತಿನಮೇಲೆ ಭುಜವನ್ನು ಸೇರಿಸಿ ಬೊಗ್ಗಿಸುತಲೂ ಕೆಳಗೆ ಹಾಕಿ ಮೆಟ್ಟುತಲೂ ಅನ್ಯೋನ್ಯವಾಗಿ ಪೀಡಿಸುತ ಯುದ್ಧಮಾಡಿದರು ; ಆ ಪುರಸ್ತ್ರೀಯರು ಗುಂಪುಗುಂಪಾಗಿ ನಿಂತು ಬಾಲಕನಾದ ಶ್ರೀಕೃಷ್ಣನಿಗೂ ದೊಡ್ಡವನಾದ ಚಾಣೂರನಿಗೂ ನಡೆಯುತಿದ್ದ ಆ ದ್ವಂದ್ವಯುದ್ಧವನ್ನು

ನೋಡಿ ಅದು ವಿಷಮವೆಂದು ಒಬ್ಬರಿಗೊಬ್ಬರು "ಈ ರಾಜಸಭಾಸ್ಥಾನದಲ್ಲಿರುವ ಸಭಾಸದರು ಅಧರ್ಮಪ್ರವೃತ್ತರಾಗಿದ್ದಾರೆ; ಬಾಲಕನಿಗೂ ದೊಡ್ಡ ರಾಕ್ಷಸನಿಗೂ ಜೊತೆಮಾಡಿ ಕುತೂಹಲದಿಂದ ನೋಡುತ್ತಾರೆ; ಅರಸಿಗೂ ವಿವೇಕವಿಲ್ಲ; ನ್ಯಾಯವಾಗಿ ಕಾಳಗವನ್ನು ಬಿಡಿಸಬೇಕು; ಅದನ್ನು ಬಿಟ್ಟು ನೋಡುತ್ತಿದ್ದಾರೆ; ವಜ್ರಸಾರದಂತೆ ಕಠಿಣವಾದ ದೇಹವುಳ್ಳವರಾಗಿ ಪರ್ವತಾಕಾರರಾದ ಚಾಣೂರ ಮುಷ್ಟಿಕರೆಲ್ಲಿ—ಅತಿ ಮೃದುವಾದ ದೇಹವುಳ್ಳವರಾಗಿ ಈಗಲೇ ಹುಟ್ಟಿಬರುವ ಯೌವನವುಳ್ಳ ಈ ಬಾಲಕರೆಲ್ಲಿ! ಆದ್ದರಿಂದ ಈ ಸಭಾಜನರಿಗೆ ಅಧರ್ಮವು ನಿಶ್ಚಯವಾಗಿ ಉಂಟಾಗುವದು; ಎಲ್ಲಿ ಅಧರ್ಮವುಂಟಾಗುತ್ತಿರುವದೋ ಅಲ್ಲಿ ಕ್ಷಣಮಾತ್ರವಾದರೂ ಇರಬಾರದು! ಪ್ರಾಜ್ಞನಾದವನು ಸಭಾಜನರ ದೋಷಗಳನ್ನು ತಿಳಿದು ಆ ಸಭೆಗೆ ಹೋಗಬಾರದು; ನ್ಯಾಯಾನ್ಯಾಯಗಳನ್ನು ತಿಳಿದಿದ್ದಾಗ್ಯೂ ಹೇಳದಿರುವ ಪುರುಷನೂ ದಾಕ್ಷಿಣ್ಯದಿಂದ ನ್ಯಾಯವನ್ನು ಅನ್ಯಾಯವಾಗಿಯೂ ಅನ್ಯಾಯವನ್ನು ನ್ಯಾಯವಾಗಿಯೂ ಹೇಳುವ ಪುರುಷನೂ ಮಹಾಪಾಪವನ್ನೈದುವರು! ಎಲೈ ಸಖಿಯರುಗಳಿರಾ, ಶತ್ರುವಿಗೆದುರಾಗಿ ಸಂಚರಿಸುತ್ತಿರುವ ಶ್ರೀಕೃಷ್ಣನ ಸ್ವೇದಯುಕ್ತವಾದ ಮುಖಕಮಲವು ಜಲಬಿಂದುಯುಕ್ತವಾದ ತಾವರೇಪುಷ್ಪದಂತಿದೆ ನೋಡಿರಿ; ಸ್ವಲ್ಪ ಕೆಂಪಾದ ನೇತ್ರವುಳ್ಳದ್ದಾಗಿ ಮುಷ್ಟಿಕನನ್ನು ಕುರಿತು ಕೋಪಯುಕ್ತವಾದ ನಗುವಿನಿಂದಲೂ ಪ್ರಯತ್ನದಿಂದಲೂ ಶೋಭಿತವಾದ ಬಲರಾಮನ ಮುಖವನ್ನು ನೋಡಿರಿ! ವ್ರಜಭೂಮಿಯು ಬಹು ಪುಣ್ಯವುಳ್ಳಂಥಾದ್ದು; ಪುರಾಣಪುರುಷನಾದ ಪರಮಾತ್ಮನು ಮಾನುಷವೇಷಗೂಢನಾಗಿ ವನಪುಷ್ಪಗಳ ಮಾಲಿಕಾಧಾರಿಯಾಗಿ ಬಲರಾಮ ಸಮೇತನಾಗಿ ಕೊಳಲನ್ನು ಬಾರಿಸುತ ರುದ್ರನಿಂದಲೂ ಲಕ್ಷ್ಮಿಯಿಂದಲೂ ಪೂಜಿತವಾದ ಪಾದವುಳ್ಳವನಾಗಿ ಗೋವುಗಳನ್ನು ಸಂರಕ್ಷಿಸುತ ಆ ವ್ರಜಭೂಮಿಯಲ್ಲಿ ವಾಸವನ್ನು ಮಾಡಿದನು; ಇಷ್ಟುಮಾತ್ರವೇ ಅಲ್ಲ; ಲಕ್ಷ್ಮೀಪತಿಯಾದ ಕೃಷ್ಣನ ಸೌಂದರ್ಯಾತಿಶಯವನ್ನು ನೇತ್ರಗಳಿಂದ ನೋಡುತ್ತಿದ್ದ ಆ ಗೋಪಸ್ತ್ರೀಯರು ಏನು ಪುಣ್ಯವನ್ನು ಮಾಡಿದರೊ! ಭಗವಂತನ ಸೌಂದರ್ಯಾತಿಶಯಕ್ಕೆ ಸಮಾನವಾದ ಸೌಂದರ್ಯವೆಲ್ಲಿಯೂ ಇಲ್ಲ; ಅದಕ್ಕೆ ಅಧಿಕವಾದದ್ದೂ ಇಲ್ಲ; ಅದು ಸ್ವಭಾವಸಿದ್ಧವಾಗಿ ಪ್ರತಿಕ್ಷಣದಲ್ಲಿಯು ನೂತನವಾಗಿ ತೋರುವದು; ಪುಣ್ಯಹೀನರಿಗೆ ನೋಡುವದಕ್ಕೆ ದುರ್ಲಭವಾದದ್ದು; ಕಾಂತಿಗೂ ಯಶಸ್ಸಿಗೂ ಮುಖ್ಯಸ್ಥಾನವಾದದ್ದು; ಅಂಥಾ ಸೌಂದರ್ಯವನ್ನು ನೋಡುತ್ತಿದ್ದ ಆ ಗೋಪಸ್ತ್ರೀಯರ ಪುಣ್ಯವನ್ನು ಹೇಳತಕ್ಕದ್ದೇನು! ಗೋವುಗಳನ್ನು ಕರೆಯುವಾಗಲೂ ಅಕ್ಕಿಗಳನ್ನು ತೊಳೆಯುವಾಗಲೂ ದಧಿಮಥನಕಾಲದಲ್ಲಿಯೂ ಅರಿಸಿನ ಗಂಧಗಳನ್ನು ತೊಡಕೊಳ್ಳುವಾಗಲೂ ತೂಗುಮಂಚಗಳಲ್ಲಿ ತೂಗಾಡುವಾಗಲೂ ಬಾಲಕರು ರೋದನಗೈವಾಗಲೂ ಮೈತೊಳೆಯುವಾಗಲೂ ಮಾರ್ಜನಕಾಲದಲ್ಲಿಯೂ ಕೃಷ್ಣನಲ್ಲಿ ಲಗ್ನವಾದ ಮನಸ್ಸುಳ್ಳವರಾಗಿ ಬಾಷ್ಪಗದ್ಗದ ಕಂಠಸ್ವರವುಳ್ಳವರಾಗಿ ಈ ಕೃಷ್ಣನನ್ನೇ ಗಾನಗೈಯುತ್ತಿರುವ ಆ ಗೋಪಸ್ತ್ರೀಯರು ಧನ್ಯರು; ಇಷ್ಟುಮಾತ್ರವೆ ಅಲ್ಲ; ಬಹು ಪುಣ್ಯಶಾಲಿಗಳಾದ ಆ ಗೋಪಸ್ತ್ರೀಯರು ಪ್ರಾತಃಕಾಲದಲ್ಲಿ ವ್ರಜದಿಂದ ಶ್ರೀಕೃಷ್ಣನು ಹೋಗುವಾಗಲೂ ಸಾಯಂಕಾಲದಲ್ಲಿ ಗೋವುಗಳ ಸಂಗಡ ಕೊಳಲನ್ನು ಬಾರಿಸಿಕೊಂಡು ಬರುವಾಗಲೂ ವೇಣುನಾದವನ್ನು ಕೇಳಿ ಬೀದಿಬಾಗಿಲಿಗೆ ಬಂದು ಸ್ಮಿತಯುಕ್ತವಾದ ಮುಖವುಳ್ಳ ದಯಾರ್ದ್ರದೃಷ್ಟಿಯುಳ್ಳ ಶ್ರೀಕೃಷ್ಣನನ್ನು ನೋಡುತ್ತಿರುವದರಿಂದ ಅವರು ಧನ್ಯರು" ಎಂದು ಮಾತಾಡುತ್ತಿದ್ದರು. ದೇವಕೀ ವಸುದೇವರು ಆ ಸ್ತ್ರೀಯರ ಮಾತುಗಳನ್ನು ಕೇಳಿ ಪುತ್ರವಾತ್ಸಲ್ಯದಿಂದ ಶೋಕಪೀಡಿತರಾಗಿ ಪುತ್ರರ ಬಲವನ್ನರಿಯದ ಕಾರಣ ವ್ಯಸನಪಟ್ಟರು!

ಆ ಸಮಯದಲ್ಲಿ ಯೋಗೀಶ್ವರನಾದ ಕೃಷ್ಣನು ಶತ್ರುವಾದ ಚಾಣೂರನನ್ನು ಸಂಹರಿಸಲು ಮನಸ್ಸು ಮಾಡಿದನು; ನಾನಾಪ್ರಕಾರಗಳಾದ ಬಾಹುಯುದ್ಧ ಚಾತುರ್ಯಗಳಿಂದ ಕೃಷ್ಣ ಬಲರಾಮರು ಚಾಣೂರ ಮುಷ್ಟಿಕರೊಡನೆ ಯುದ್ಧವನ್ನು ಮಾಡಿದರು; ವಜ್ರಘಟ್ಟನಗಳಂತೆ ಕಠಿನಗಳಾದ ಭಗವಂತನ ಶರೀರಪೀಡೆಗಳಿಂದ ಚಾಣೂರನು ಮುರಿದುಬಿಟ್ಟ ಅಂಗಗಳುಳ್ಳವನಾಗಿ ಅತ್ಯಂತವಾಗಿ ಬಳಲಿ ಕುಪಿತನಾಗಿ ಗಿಡಗನಂತೆ ವೇಗವುಳ್ಳವನಾಗಿ ನೆಗದು ಭಗವಂತನಾದ ಶ್ರೀಕೃಷ್ಣನ ವಕ್ಷಸ್ಥಳದಲ್ಲಿ ಮುಷ್ಟಿಗಳಿಂದ ಪ್ರಹರಿಸಿದನು; ಶ್ರೀಕೃಷ್ಣನು ಚಲಿಸದೆ ಪುಷ್ಪಮಾ

ಲ್ಯಪ್ರಹಾರದಿಂದ ನೋಯದಿರುವ ಮಾಗಜದಂತೆ ಲಕ್ಷ್ಯವನ್ನು ಮಾಡದೆ ಭುಜಗಳಿಂದ ಚಾಣೂರನನ್ನು ತಬ್ಬಿ ಬಿಡುವಪ್ರಕಾರವಾಗಿ ತಿರುಗಿಸಿ ಭೂಮಿಯಲ್ಲಿ ಕೆಡಹಿ ಹೊರಳಿಸಿ ಕುಕ್ಕಿದನು; ಅದರಿಂದ ಶಿಥಿಲವಾದ ಅಲಂಕಾರವೂ ಕೇಶಗಳೂ ಪುಷ್ಪಮಾಲೆಗಳೂ ಉಳ್ಳವನಾಗಿ ಚಾಣೂರನು ನಿರ್ಜೀವನಾಗಿ ಇಂದ್ರಧ್ವಜವು ಬಿದ್ದಂತೆ ಬಿದ್ದನು! ಅದೇಪ್ರಕಾರವಾಗಿ ಮುಷ್ಟಿಕನು ಬಲರಾಮನನ್ನು ತನ್ನ ಮುಷ್ಟಿಪ್ರಹಾರಗಳಿಂದ ಬಾಧಿಸಿ ಬಲಿಷ್ಟನಾದ ಬಲರಾಮನ ಹಸ್ತಪ್ರಹಾರದಿಂದ ಪೀಡಿತನಾಗಿ ನಡುಗುತ ರಕ್ತವನ್ನು ಕಾರಿಕೊಂಡು ನಿರ್ಜೀವನಾಗಿ ಭೂಮಿಯಲ್ಲಿ ಚಂಡವಾಯುವಿನಿಂದ ಕೆಡಹಲ್ಪಟ್ಟ ವೃಕ್ಷದಂತೆ ಬಿದ್ದನು! ಆಮೇಲೆ ಕೂಟನೆಂಬ ಜಟ್ಟಿಯನ್ನು ಮಹಾ ಪರಾಕ್ರಮಿಯಾದ ಬಲರಾಮನು ವಿಲಾಸದಿಂದ ಅಲಕ್ಷ್ಯಮಾಡಿ ಮುಷ್ಟಿಯಿಂದಲೆ ಸಂಹರಿಸಿದನು; ಶಲನೆಂಬ ಜಟ್ಟಿಯು ಕೃಷ್ಣನ ಪಾದಪ್ರಹಾರದಿಂದ ತಲೆ ಒಡೆದುಬಿದ್ದನು; ತೋಸಲನೆಂಬ ಜಟ್ಟಿಯು ಅದೇರೀತಿಯಲ್ಲಿ ಕೃಷ್ಣನ ಪಾದ ಪ್ರಹಾರದಿಂದ ಬಿದ್ದು ಪ್ರಾಣವನ್ನು ಬಿಟ್ಟನು! ಚಾಣೂರನು ಮುಷ್ಟಿಕನು ಕೂಟನು ಶಲನು ತೋಸಲನು ಎಂಬ ಐದುಮಂದಿ ಪ್ರಧಾನಜಟ್ಟಿಗಳು ಬಿದ್ದು ಮೃತರಾಗಲು ಕಡಿಮೆ ಜಟ್ಟಿಗಳು ಪ್ರಾಣರಕ್ಷಣವನ್ನು ಮಾಡಿಕೊಂಡು ಪಲಾಯನಂಗೈದರು! ಅನಂತರದಲ್ಲಿ ರಾಮಕೃಷ್ಣರು ಸ್ನೇಹಿತರಾದ ಗೋಪಕರನ್ನು ಕೂಡಿಕೊಂಡು ವಾದ್ಯಗಳು ಧ್ವನಿಗೈಯುತಿರಲು ಸಂಚರಿಸುತ ರತ್ನಮಯಗಳಾದ ಪಾದಾಭರಣಗಳು ಘಲ್ಲುಘಲ್ಲೆನಲು ಆ ರಂಗದಲ್ಲಿ ವಿಹರಿಸಿದರು; ರಾಮಕೃಷ್ಣರ ಸಾಹಸದಿಂದ ನೋಡುತಿದ್ದ ಜನರು ಸಂತೋಷಪಟ್ಟರು; ಬ್ರಾಹ್ಮಣೋತ್ತಮರು ಒಳ್ಳೆ ಕೆಲಸ ಮಾಡಿದರೆಂದು ಶ್ಲಾಘಿಸಿದರು; ಕಂಸನು ವ್ಯಥೆಪಟ್ಟನು; ಪ್ರಧಾನಜಟ್ಟಿಗಳು ಹತರಾದಮೇಲೆ ಮಿಕ್ಕ ಜಟ್ಟಿಗಳು ಓಡಿಹೋದರು; ಕಂಸನು ವಾದ್ಯಗಳನ್ನು ನಿಲ್ಲಿಸಿ ತನ್ನ ಆಪ್ತರನ್ನು ಕರೆದು "ವಸುದೇವನ ಪುತ್ರರಾಗಿ ದುಷ್ಟರಾದ ಇವರನ್ನು ಊರುಬಿಟ್ಟು ದಾಟಿಸಿಬಿಡೀ; ಗೋಪಾಲಕರ ಧನಗಳನ್ನು ಅರಮನೆಗೆ ತೆಗೆದುಕೊಳ್ಳಿ; ದುಷ್ಟಬುದ್ಧಿಯುಳ್ಳ ನಂದನನ್ನಿಡಿದುಕಟ್ಟೀ; ದುಷ್ಟಬುದ್ಧಿಯುಳ್ಳವನಾಗಿ ದುರ್ಜನನಾದ ವಸುದೇವನನ್ನು ಸಂಹರಿಸೀ; ನನ್ನ ತಂದೆಯಾದ ಉಗ್ರಸೇನನು ಶತ್ರುಪಕ್ಷನಾದಕಾರಣ ಆವನನ್ನು ಸಂಹರಿಸೀ" ಎಂದು ನುಡಿದನು.

ಕಂಸನು ಈ ರೀತಿಯಲ್ಲಿ ದುರ್ಭಾಷೆಗಳನ್ನಾಡುತ್ತಿರಲು ಭಗವಂತನಾದ ಕೃಷ್ಣನು ಕೋಪಿಷ್ಠನಾಗಿ ಲಾಘವದಿಂದ ನೆಗೆದು ಉನ್ನತವಾದ ಆ ಮಂಚವನ್ನೇರಿ ಕಂಸನು ತನಗೆ ಮೃತ್ಯುವಾಗಿ ಬಂದ ತನ್ನನ್ನು ನೋಡಿ ಧೈರ್ಯದಿಂದೆದ್ದು ಖಡ್ಗವನ್ನೂ ಗುರಾಣಿಯನ್ನೂ ಗ್ರಹಿಸಿ ಗಿಡಗನಂತೆ ಸವ್ಯದಕ್ಷಿಣವಾಗಿ ಸಂಚರಿಸುತಿರಲು ಸಹಿಸಲಶಕ್ಯವಾದ ತನ್ನ ಮಹಾಪರಾಕ್ರಮದಿಂದ ಗರುಡನು ಸರ್ಪವನ್ನು ಗ್ರಹಿಸುವಂತೆ ಗ್ರಹಿಸಿದನು; ಆ ಬಳಿಕ ಪದ್ಮನಾಭನಾಗಿ ಸ್ವತಂತ್ರನಾದ ಶ್ರೀಕೃಷ್ಣನು ಕಂಸನ ಕೇಶಗಳನ್ನಿಡಿದು ಕಳಚಿ ಬೀಳುವ ಕಿರೀಟ ಸಹಿತವಾಗಿ ಆ ರಂಗದಲ್ಲಿ ಕೆಡಹಿ ಅವನಮೇಲೆ ತಾನೂ ಬಿದ್ದು ಆತನನ್ನು ಸಿಂಹವು ಗಜವನ್ನೆಳೆಯುವಂತೆ ಸರ್ವಜನರು ನೋಡುತ್ತಿರಲು ಭೂಮಿಯಲ್ಲೆಳೆದನು! ಎಲೈ ಅರಸೆ, ಆಗ ಸರ್ವಜನರು ಹಾಹಾಕಾರವನ್ನು ಮಾಡಿದರು; ಕಂಸನು ನಿರಂತರದಲ್ಲಿಯು ಭೀತವಾದ ಬುದ್ಧಿಯಿಂದ ಆ ಭಗವಂತನನ್ನು ಧ್ಯಾನಿಸುತ ಮಲಗುವಾಗಲೂ ಏಳುವಾಗಲೂ ತದೇಕಧ್ಯಾನದಿಂದ ಆತನನ್ನೇ ಸ್ಮರಿಸುತಲಿದ್ದದ್ದರಿಂದ ಚಕ್ರಾಯುಧನಾದ ಭಗವಂತನನ್ನುನೋಡಿ ಆ ಭಗವಂತನ ಸಾರೂಪ್ಯವನ್ನು ಪಡೆದನು!

ಆ ಬಳಿಕ ನ್ಯಗ್ರೋಧನು ಮೊದಲಾದ ಎಂಟುಮಂದಿ ಕಂಸನ ಭ್ರಾತೃಗಳು ಕ್ರೋಧದಿಂದ ರಾಮಕೃಷ್ಣರ ಮೇಲೆ ಯುದ್ಧಕ್ಕೆ ಬಂದರು; ಅತಿ ರಭಸದಿಂದ ಬಂದ ಆ ಎಂಟುಮಂದಿಯನ್ನು ಬಲರಾಮನು ಗದೆಯನ್ನೆತ್ತಿಕೊಂಡು ವ್ಯಾಘ್ರವು ಪಶುಗಳನ್ನು ಸಂಹರಿಸುವಂತೆ ಸಂಹರಿಸಿದನು; ಆಗ ಅಂತರಿಕ್ಷದಲ್ಲಿ ದೇವದುಂದುಭಿಗಳು ಧ್ವನಿಗೈದುವು; ಬ್ರಹ್ಮರುದ್ರಾದಿ ಭಗವನ್ಮೂರ್ತಿಗಳು ಪುಷ್ಪವೃಷ್ಟಿಯನ್ನು ಕರೆದರು; ದೇವಸ್ತ್ರೀಯರು ನರ್ತನಂಗೈದರು! ಆಗ ಕಂಸಾದಿಗಳ ಸ್ತ್ರೀಯರು ಪತಿಗಳ ಮರಣದಿಂದ ದುಃಖಿತರಾಗಿ ತಲೆಗಳನ್ನೂ ವಕ್ಷಸ್ಥಳಗಳನ್ನು ಕುಟ್ಟಿಕೊಳ್ಳುತ ಕಣ್ಣೀರುಬಿಡುತ ಆ ರಂಗಸ್ಥಳಕ್ಕೆ ಬಂದು ವೀರಶಯನದಲ್ಲಿ ಮಲಗಿದ್ದ ತಮ್ಮ ಪತಿಗಳನ್ನಾಲಿಂಗ

ನವಗಾಡಿಕೊಂಡು ರೋದನಂಗೈವವರಾಗಿ ನೇತ್ರೋದಕಗಳನ್ನು ಬಿಡುತ ಸ್ವರಯುಕ್ತವಾಗಿ ವಿಲಾಪಂಗೈಯುತ "ಎಲೈ ನಾಥನೆ, ಪ್ರಿಯನೆ, ಧರ್ಮಜ್ಞನೆ, ದಯಾಶಾಲಿಯಾದ ವಾತ್ಸಲ್ಯಪುಳ್ಳ ಪತಿಯೆ, ನೀನು ಹತನಾದಮೇಲೆ ನಾವೂ ಪ್ರಜೆಗಳೂ ಹತರಾದವರೇ ಸರಿ; ಪತಿಯಾದ ನಿನ್ನಿಂದ ರಹಿತವಾದ ಈ ಪುರವು ನಮ್ಮಂತೆ ಅನಾಥವಾಗಿ ಉತ್ಸವಮಂಗಳರಹಿತವಾಗಿ ಪ್ರಕಾಶಿಸುವದಿಲ್ಲ! ಎಲೈ ಪುರುಷಶ್ರೇಷ್ಠನೆ, ನೀನು ನಿರಪರಾಧಿಗಳಾದ ಪ್ರಾಣಿಗಳಿಗೆ ಅಧಿಕವಾದ ದ್ರೋಹವನ್ನು ಮಾಡಿದಯಾದಕಾರಣ ಈ ಅವಸ್ಥೆಯು ಬಂತು; ಪ್ರಾಣಿಗಳಿಗೆ ದ್ರೋಹವನ್ನು ಮಾಡಿ ಯಾವನು ಸುಖವನ್ನೈದುವನು! ಕೃಷ್ಣನು ಸರ್ವಜಗತ್ತುಗಳಿಗೂ ಸೃಷ್ಟಿಕಾರಣನು; ಸಂಹಾರಕನು; ಸರ್ವಜಗದ್ರಕ್ಷಕನು; ಅಂಥಾ ಶ್ರೀಕೃಷ್ಣನಿಗೆ ಅವಮಾನವನ್ನು ಮಾಡಿದವನು ಯಾವಾಗಲೂ ಸುಖವನ್ನೈದನು" ಎಂದು ನುಡಿಯುತಿದ್ದರು.

ಈ ರೀತಿಯಲ್ಲಿ ವಿಲಾಪಂಗೈದ ಆ ರಾಜಸ್ತ್ರೀಯರನ್ನು ಸಮಾಧಾನಮಾಡಿ ಶ್ರೀಕೃಷ್ಣನು ಮೃತರಾದ ಕಂಸಾದಿಗಳಿಗೆ ಪರಲೋಕೀಕವ್ಯಾಪಾರಗಳನ್ನು ಮಾಡಿಸಿ ಅನಂತರದಲ್ಲಿ ಮಾತಾಪಿತೃಗಳಿಗೆ ಬಂಧನವನ್ನು ಬಿಡಿಸಿ ಬಲರಾಮನೊಡನೆ ಅವರ ಪಾದಗಳಿಗೆ ನಮಸ್ಕರಿಸಿದನು; ದೇವಕೀ ವಸುದೇವರು ರಾಮಕೃಷ್ಣರನ್ನು ಜಗದೀಶ್ವರರೆಂದು ತಿಳದು ಭಯದಿಂದ ಆಲಿಂಗನಮಾಡಲಿಲ್ಲ!

## ೪೫ನೇ ಅಧ್ಯಾಯ.

### ಶ್ರೀಕೃಷ್ಣರಾಮರು ವಿದ್ಯಾಭ್ಯಾಸಮಾಡಿದ್ದು.

ಎಲೈ ಅರಸೆ, ಅನಂತರದಲ್ಲಿ ಶ್ರೀಕೃಷ್ಣನು ಮಾತಾಪಿತೃಗಳಾದ ದೇವಕೀ ವಸುದೇವರು ತಾನು ಪರಮೇಶ್ವರನೆಂಬ ಅರ್ಥವನ್ನು ತಿಳಿದ ಜ್ಞಾನಿಗಳಾಗಿ ಸಂಸಾರಸುಖಾನುಭವದಲ್ಲಿ ವಿರಕ್ತರಾಗುವರೆಂದಾಲೋಚಿಸಿ ಮೋಹಕವಾದ ತನ್ನ ಮಾಯೆಯನ್ನು ಅವರಮೇಲೆ ಪ್ರವರ್ತಿಸುವಂತೆ ಮಾಡಿ ಪುನಹ ವ್ಯವಹಾರಾಸಕ್ತರಾಗಿ ಮಾಡಿ ಬಲರಾಮಯುಕ್ತನಾಗಿ ಅವರ ಸಮೀಪಕ್ಕೆ ಹೋಗಿ ವಿನಯದಿಂದ ನಮ್ರನಾದವನಾಗಿ "ಎಲೌ ತಾಯೆ, ಎಲೈ ತಂದೆಯೇ, ನಮ್ಮ ನಿಮಿತ್ತವಾಗಿ ನಿತ್ಯದಲ್ಲಿಯು ಉತ್ಕಂಠಿತರಾದ ನಿಮಗೆ ಪುತ್ರರಾದ ನಮ್ಮ ಬಾಲ್ಯಯೌವನಾದಿ ಲೀಲೆಗಳನ್ನು ನೋಡುವದಕ್ಕಿಲ್ಲದೆ ಹೋಯಿತು; ನಾವು ಭಾಗ್ಯಹೀನರಾದ ಕಾರಣ ನಮಗೆ ನಿಮ್ಮ ಸಮೀಪದಲ್ಲಿ ವಾಸವನ್ನು ಮಾಡುವದಕ್ಕಿಲ್ಲದೆ ಹೋಯಿತು; ಲೋಕದಲ್ಲಿ ಬಾಲಕರು ಪಿತೃಗೃಹದಲ್ಲಿದ್ದು ಅವರಿಂದ ಲಾಲಿತರಾಗಿ ಸಂತೋಷವನ್ನೈದುತ್ತಾರೆ; ಆ ಪುಣ್ಯವು ನಮಗಿಲ್ಲದೆ ಹೋಯಿತು; ಸರ್ವಪುರುಷಾರ್ಥಸಾಧನವಾದ ಶರೀರವನ್ನು ಕಲ್ಪಿಸಿ ಪೋಷಣೆಯನ್ನು ಮಾಡಿ ಸಂತೋಷಪಡುವ ಮಾತಾಪಿತೃಗಳ ಋಣವನ್ನು ಪ್ರತ್ಯುಪಕಾರಾದಿಗಳಿಂದ ನಿರ್ವಹಿಸುವದಕ್ಕೆ ಶತವರುಷಗಳಾದರೂ ಪುತ್ರನು ಸಮರ್ಥನಾಗನು; ಸಮರ್ಥನಾಗಿದ್ದಾಗ್ಯೂ ತನ್ನ ಶರೀರದಿಂದಲೂ ಧನಾದಿಗಳಿಂದಲೂ ಮಾತಾಪಿತೃಗಳಿಗೆ ಜೀವನವನ್ನು ಕಲ್ಪಿಸದ ಪುತ್ರಾಧಮನನ್ನು ಯಮದೂತರು ಅವನ ಮಾಂಸವನ್ನೇ ತಿನ್ನಿಸುವರು; ಸಮರ್ಥನಾದಾಗ್ಯೂ ಮಾತೃವನ್ನೂ ವೃದ್ಧನಾದ ಪಿತೃವನ್ನೂ ಪತಿವ್ರತೆಯಾದ ಪತ್ನಿಯನ್ನೂ ಶಿಶುವಾದ ಪುತ್ರನನ್ನೂ ಗುರುವನ್ನೂ ಬ್ರಾಹ್ಮಣನನ್ನೂ ಶರಣಾಗತನನ್ನೂ ಪೋಷಿಸದ ಪುರುಷನು ಜೀವವಂತನಾದಾಗ್ಯೂ ಮೃತಪ್ರಾಯನು; ಆದಕಾರಣ ಅಸಮರ್ಥರಾಗಿ ಕಂಸನ ಭಯದಿಂದ ಖಿನ್ನಚೇತಸ್ಕರಾಗಿ ನಿಮ್ಮ ಪೂಜೆಯನ್ನು ಮಾಡದ ನಮಗೆ ಇಷ್ಟುದಿವಸಗಳು ವ್ಯರ್ಥಗಳಾಗಿ ಕಳೆದುಹೋದವು! ಎಲೈ ತಂದೆಯೇ, ಎಲೌ ತಾಯೆ, ದುಷ್ಟನಾದ ಕಂಸನಿಂದ ಕ್ಲೇಶಪಡಿಸಲ್ಪಟ್ಟು ಪರಾಧೀನರಾಗಿ ಅಜ್ಞಾತವಾಸವನ್ನು ಮಾಡಿಕೊಂಡು ನಿಮ್ಮ ಶಿಶ್ರೂಷೆಯನ್ನು ಮಾಡದಿದ್ದ ನಮ್ಮ ಅಪರಾಧವನ್ನು ನೀವು ಕ್ಷಮಿಸಬೇಕು" ಎಂದು ನುಡಿದನು.

ಈ ರೀತಿಯಲ್ಲಿ ನುಡಿಯುತಿದ್ದ ಮಾಯಾಮನುಷ್ಯನಾಗಿ ಸರ್ವಾತ್ಮಕನಾದ ಶ್ರೀಕೃಷ್ಣನ ವಾಕ್ಯದಿಂದ ಮೋಹಿತರಾಗಿ ದೇವಕೀ ವಸುದೇವರು ಪುತ್ರರನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಆಲಿಂಗನಗೈದು ಸಂತೋಷ

ವಕ್ಷಸ್ಥಲವ ನೇತ್ರೋದಕಧಾರೆಗಳಿಂದ ನೆನೆಯಿಸುವವರಾಗಿ ಸ್ನೇಹಪಾಶಬದ್ಧರಾಗಿ ಬಾಷ್ಪಗದ್ಗದ ಕಂಠರಾಗಿ ಮೋಹಿತರಾಗಿ ಏನೂ ಮಾತಾಡದಿದ್ದರು. ಭಗವಂತನಾದ ದೇವಕೀಪುತ್ರನು ಮಾತಾಪಿತೃಗಳನ್ನೀರೀತಿಯಲ್ಲಿ ಸಮಾಧಾನವನ್ನು ಮಾಡಿ ಮಾತಾಮಹನಾದ ಉಗ್ರಸೇನನನ್ನು ಯಾದವರಿಗೆ ಪತಿಯಾಗಿ ಮಾಡಿ "ಎಲೈ ಮಹಾರಾಜನೆ, ಪ್ರಜೆಗಳಾದ ನಮಗೆ ಕೆಲಸಗಳನ್ನು ಆಜ್ಞಾಪಿಸು; ಯಯಾತಿಶಾಪದಿಂದ ನಮಗೆ ಸಿಂಹಾಸನಾರೋಹಣವಾಗದು; ನೀನು ಯಾದವನಾದಾಗ್ಯು ದೋಷವಿಲ್ಲದಂತೆ ನಾನು ಮಾಡುತ್ತೇನೆ; ಭೃತ್ಯನಾದ ನಾನು ನಿನ್ನ ಸಮೀಪದಲ್ಲಿ ಕುಳಿತಿದ್ದರೆ ದೇವತೆಗಳೂ ನಿನಗೆ ಕಾಣಿಕೆಗಳನ್ನು ಕೊಡುವರು; ಇನ್ನು ಮನುಷ್ಯಾದಿಗಳನ್ನು ಹೇಳತಕ್ಕದ್ದೇನು!" ಎಂದು ನುಡಿದು ಆತನಿಗೆ ಪಟ್ಟವನ್ನು ಕಟ್ಟಿ ಮತ್ತು ಕಂಸನ ಭಯದಿಂದ ದೇಶಾಂತರಗಳಿಗೆ ಹೋಗಿದ್ದ ಸ್ವಜ್ಞಾತಿ ಸಂಬಂಧಿ ಬಂಧುಗಳು ಯಾದವರು ವೃಷ್ಣಿಗಳು ಅಂಧಕರು ಮಾಧವರು ದಾಶಾರ್ಹರು ಕುಕರರು ಅರ್ಬುಕರು ಮೊದಲಾದವರೆಲ್ಲರನ್ನು ಕರೆಸಿ ಸಮಾಧಾನಗೈದು ಅವರವರ ಮನೆಗಳಲ್ಲಿರಿಸಿ ಧನಾದಿಗಳಿಂದ ಅವರನ್ನು ಪೋಷಿಸಿದನು; ಶ್ರೀಕೃಷ್ಣರಾಮರ ಭುಜಬಲಗಳಿಂದ ರಕ್ಷಿತರಾದ ಸಮಸ್ತ ಪ್ರಜೆಗಳೂ ಇಷ್ಟಾರ್ಥಗಳನ್ನು ಪಡೆದು ಕೃಷ್ಣರಾಮರಿಂದ ಸಂತಾಪಗಳನ್ನೂ ಪರಿಹರಿಸಿಕೊಂಡು ಸ್ವಗೃಹಗಳಲ್ಲಿ ವಿಹರಿಸುತ ಸದಾಸಂತುಷ್ಟವಾಗಿ ಕಾಂತಿಯುಕ್ತವಾಗಿ ದಯಾಯುಕ್ತವಾದ ಸ್ಮಿತನೋಟವುಳ್ಳ ಶ್ರೀಕೃಷ್ಣನ ಮುಖಪದ್ಮವನ್ನು ಪ್ರತಿದಿವಸದಲ್ಲಿಯೂ ನೋಡುತ ಪ್ರೀತರಾಗಿ ಸುಖಿಸಿಕೊಂಡಿದ್ದರು; ವೃದ್ಧರಾದವರು ಮುಕುಂದನ ಮುಖಪದ್ಮದ ಅಮೃತವನ್ನು ನೇತ್ರಗಳಿಂದ ಪಾನಂಗೈಯುತ ಉತ್ತಮವಾದ ಬಲವೂ ಯೌವನವೂ ಉಳ್ಳವರಾದರು!

ಆ ಬಳಿಕ ಭಗವಂತನಾದ ಶ್ರೀಕೃಷ್ಣನು ಬಲರಾಮನೊಡಗೂಡಿ ನಂದನನ್ನು ಆಲಿಂಗನಮಾಡಿಕೊಂಡು ಆತನನ್ನು ಕುರಿತು "ಎಲೈ ತಂದೆಯೆ, ನಿಮ್ಮಿಂದ ನಾವು ಪೋಷಿತರಾದೆವು—ಲಾಲಿತರಾದೆವು; ಮಾತಾಪಿತೃಗಳಿಗೆ ಶರೀರಕ್ಕಿಂತಲೂ ಪುತ್ರರಲ್ಲಿ ಪ್ರೀತಿ ಅಧಿಕವು; ಪೋಷಿಸುವದರಲ್ಲಿಯೂ ರಕ್ಷಿಸುವದರಲ್ಲಿಯೂ ಅಸಮರ್ಥರಾದ ಮಾತಾಪಿತೃಗಳ ತ್ಯಕ್ತರಾದ ಪುತ್ರರನ್ನು ಯಾವ ದಂಪತಿಗಳು ತಮ್ಮ ಪುತ್ರರಂತೆ ಪೋಷಿಸುವರೋ ಅವರೇ ಅವರಿಗೆ ಮಾತಾಪಿತೃಗಳು! ಎಲೈ ತಂದೆಯೆ, ನೀವೆಲ್ಲರು ವ್ರಜಕ್ಕೆ ಹೋಗಿ; ನಾವು ಸ್ನೇಹದಿಂದ ಪ್ರೀತರಾದ ಮಿತ್ರರಿಗೆ ಸುಖವನ್ನುಂಟುಮಾಡಿ ಸ್ವಜನರಾದ ನಿಮ್ಮನ್ನು ನೋಡುವದಕ್ಕೆ ಬರುತ್ತೇವೆ" ಎಂದು ನುಡಿದು ವಸ್ತ್ರಗಳಿಂದಲೂ ಭೂಷಣಗಳಿಂದಲೂ ತಾಮ್ರ ಹಿತ್ತಾಳೆ ಕಂಚು ಮೊದಲಾದ ಲೋಹಪಾತ್ರಾದಿಗಳಿಂದಲೂ ಆದರಪೂರ್ವಕವಾಗಿ ನಂದನನ್ನು ಸಂತೋಷಪಡಿಸಿದನು.

ಈ ರೀತಿಯಲ್ಲಿ ಕೃಷ್ಣನಿಂದ ಹೇಳಲ್ಪಟ್ಟ ಬಹುಮಾನಿತನಾದ ನಂದನು ಪ್ರೇಮಪರವಶನಾಗಿ ಶ್ರೀಕೃಷ್ಣರಾಮರನ್ನಾಲಿಂಗನೆಮಾಡಿಕೊಂಡು ಉದಕದಿಂದ ತುಂಬಿದ ಕಣ್ಣುಗಳುಳ್ಳವನಾಗಿ ಗೋಪರಿಂದ ಯುಕ್ತನಾಗಿ ವ್ರಜಕ್ಕೆ ಹೋದನು! ಆಮೇಲೆ ವಸುದೇವನು ಪುರೋಹಿತನಾದ ಗರ್ಗಋಷಿಯನ್ನೂ ಬ್ರಾಹ್ಮಣರನ್ನೂ ಕರೆಸಿ ರಾಮಕೃಷ್ಣರಿಗೆ ಯಥಾವಿಧಿಯಾಗಿ ಉಪನಯನವನ್ನು ಮಾಡಿಸಿ ಅವರಿಗೆ ದಕ್ಷಿಣೆಗಳನ್ನೂ ಸುವರ್ಣಭೂಷಿತಗಳಾದ ದುಕೂಲ ವಸ್ತ್ರಾಚ್ಛಾದಿತಗಳನ್ನೂ ಗೋವುಗಳನ್ನೂ ಕೊಟ್ಟನು; ರಾಮಕೃಷ್ಣರ ಜನ್ಮೋತ್ಸವದಲ್ಲಿ ವಸುದೇವನು ಯಾವ ಗೋವುಗಳನ್ನು ಮನಸ್ಸಿನಲ್ಲಿ ಉದ್ದೇಶಮಾಡಿದನೊ ಆ ಗೋವುಗಳು ಕಂಸನಿಂದ ಅಪಹರಿಸಲ್ಪಟ್ಟು ಅರಮನೆಯಲ್ಲಿದ್ದವು; ಆ ಗೋವುಗಳನ್ನು ತರಿಸಿ ಬ್ರಾಹ್ಮಣರಿಗೆ ದಾನಗೈದನು! ಆಮೇಲೆ ಉಪನಯನ ಸಂಸ್ಕೃತರಾದ ರಾಮಕೃಷ್ಣರು ಪುರೋಹಿತನಾದ ಗರ್ಗಾಚಾರ್ಯನಿಂದ ಉಪದಿಷ್ಟವಾದ ಕ್ರಮದಿಂದ ಬ್ರಹ್ಮಚರ್ಯವ್ರತವನ್ನಾಚರಿಸಿಕೊಂಡು ಸರ್ವವಿದ್ಯೆಗಳಿಗೂ ಆಶ್ರಯರಾಗಿ ಸರ್ವಜ್ಞರಾಗಿ ಜಗದೀಶ್ವರರಾಗಿ ಸ್ವತಸ್ಸಿದ್ಧವಾದ ವಿದ್ಯಾಜ್ಞಾನವನ್ನು ಮರೆಮಾಡಿಕೊಂಡಿದ್ದರು! ಅನಂತರದಲ್ಲಿ ರಾಮಕೃಷ್ಣರು ಗುರುಕುಲವಾಸವನ್ನು ನಿಶ್ಚಯಿಸಿ ಅವಂತೀಪುರವಾಸಿಯಾದ ಸಾಂದೀಪನಿನಾಮಕನಾದ ಋಷಿಯು ಕಾಶಿಯಲ್ಲಿ ವಾಸವನ್ನು ಮಾಡಿಕೊಂಡಿರುವದನ್ನು ಕೇಳಿ ಅಲ್ಲಿಗೆ ಹೋಗಿ ಯಥಾವಿಧಿಯಾಗಿ ದಾಂತರಾಗಿ ನಿರ್ದೋಷರಾಗಿ ಗುರುಶುಶ್ರೂಷಾಕ್ರಮವನ್ನೆಲ್ಲರಿಗೂ ಉಪ

ದೇಶಿಕುವಂತೆ ಭಕ್ತಿಯಿಂದ ಪರಮೇಶ್ವರನನ್ನು ಸೇವಿಸುವಂತೆ ಆತನನ್ನು ಸೇವಿಸುತಿದ್ದರು ; ಸಾಂದೀಪನೀಋಷಿಯು ರಾಮಕೃಷ್ಣರ ಶುದ್ಧಮನಸ್ಸಿನಿಂದ ಮಾಡಲ್ಪಟ್ಟ ಶುಶ್ರೂಷೆಗಳಿಂದ ಸಂತುಷ್ಟನಾಗಿ ನಾಲ್ಕುವೇದಗಳನ್ನೂ ಷಡಂಗಗಳನ್ನೂ ಉಪನಿಷತ್ತುಗಳನ್ನೂ ರಹಸ್ಯವಾದ ಧನುರ್ವೇದವನ್ನೂ ಧರ್ಮಶಾಸ್ತ್ರಗಳನ್ನೂ ಅಧ್ಯಯನವನ್ನು ಮಾಡಿಸಲು ಸರ್ವವಿದ್ಯಾಪ್ರವರ್ತಕರಾಗಿ ದೇವಶ್ರೇಷ್ಠರಾದ ರಾಮಕೃಷ್ಣರು ಗುರುವಿನಿಂದ ಹೇಳಲ್ಪಟ್ಟ ಸಮಸ್ತ ವಿದ್ಯೆಗಳನ್ನೂ ಒಂದಾವರ್ತಿ ಹೇಳಿದಮಾತ್ರದಿಂದಲೆ ಗ್ರಹಿಸಿ ಅರವತ್ತುನಾಲ್ಕು ದಿವಸಗಳಲ್ಲಿ ಅರವತ್ತುನಾಲ್ಕು ವಿದ್ಯಗಳನ್ನೂ ಮಿಕ್ಕ ಸಮಸ್ತ ವಿದ್ಯಗಳನ್ನೂ ಕಲಿತು ಕೃತಾರ್ಥರಾಗಿ ಆ ಋಷಿಯನ್ನು ಕುರಿತು ಗುರುದಕ್ಷಿಣೆಯಾಗಿ ಏನನ್ನು ಒಪ್ಪಿಸಬೇಕೆಂದು ಪ್ರಾರ್ಥಿಸಿದರು ! ಎಲೈ ಅರಸೆ, ಆ ಋಷಿಯು ಅಪ್ರಾಕೃತವಾದ ಅವರ ಬುದ್ಧಿಯನ್ನೂ ಅವರ ಮಹಿಮೆಯನ್ನೂ ನೋಡಿ ತನ್ನ ಪತ್ನಿಯೊಡನೆ ಆಲೋಚಿಸಿ ಸಮುದ್ರಪ್ರಭಾಸಕ್ಷೇತ್ರದಲ್ಲಿ ಮೃತನಾದ ತಮ್ಮ ಸ್ವಪುತ್ರನನ್ನು ಬದುಕಿಸಿಕೊಡಬೇಕೆಂದು ಕೇಳಿದನು ; ಮಹಾರಥಿಕರಾದ ರಾಮಕೃಷ್ಣರು ಒಳ್ಳೇದೆಂದಂಗೀಕರಿಸಿ ರಥಾರೂಢರಾಗಿ ಅಪಾರವಿಕ್ರಮರಾಗಿ ಸಮುದ್ರತೀರದಲ್ಲಿರುವ ಪ್ರಭಾಸಕ್ಷೇತ್ರಕ್ಕೆ ಹೋಗಿ ಒಂದು ಕ್ಷಣಮಾತ್ರ ನಿಂತಿರಲು ಸಮುದ್ರನು ಅವರು ಜಗದೀಶ್ವರರೆಂದು ತಿಳಿದು ಪೂಜೆಯನ್ನು ಮಾಡಿದನು ; ಶ್ರೀಕೃಷ್ಣನು ಸಮುದ್ರನನ್ನು ಕುರಿತು " ಎಲೈ ಸಮುದ್ರನೆ, ನಮ್ಮ ಗುರುಪುತ್ರನಾದ ಬಾಲಕನು ನಿನ್ನಿಂದ ಅಪಹರಿಸಲ್ಪಟ್ಟಿದ್ಧಾನೆ ; ಅವನನ್ನು ತಂದುಕೊಡು " ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಸಮುದ್ರನು " ಎಲೈ ಸ್ವಾಮಿಯೆ, ಗುರುಪುತ್ರನನ್ನು ನಾನು ಅಪಹರಿಸಲಿಲ್ಲ ; ಪಂಚಜನನಾಮಕನಾದ ಅಸುರನು ಶಂಖರೂಪಧಾರಿಯಾಗಿದ್ಧಾನೆ ; ಅವನಿಂದ ಆ ಪುತ್ರನು ಅಪಹೃತನಾದನು " ಎಂದು ನುಡಿದನು.

ಆ ಮಾತನ್ನು ಕೇಳಿ ಕೃಷ್ಣನು ಜಲವನ್ನು ಪ್ರವೇಶಿಸಿ ಆ ಅಸುರನನ್ನು ಸಂಹರಿಸಿ ಅವನ ಉದರದಲ್ಲಿ ಆ ಋಷಿಕುಮಾರನನ್ನು ಕಾಣದೆ ಅವನ ದೇಹದಲ್ಲಿದ್ದ ಶಂಖವನ್ನು ತೆಗೆದುಕೊಂಡು ರಥಾರೂಢನಾಗಿ ಬಲರಾಮನೊಡನೆ ಸಂಯಮನೀನಾಮಕವಾದ ಯಮಪುರಕ್ಕೆ ಹೋಗಿ ಶಂಖವನ್ನು ಧ್ವನಿಗೈದನು ; ಆ ಮಹಾ ಶಂಖನಾದವನ್ನು ಕೇಳಿ ಪ್ರಜಾಶಿಕ್ಷಕನಾದ ಯಮನು ಭಕ್ತಿಪೂರ್ವಕವಾಗಿ ರಾಮಕೃಷ್ಣರಿಗೆ ಪೂಜೆಯನ್ನು ಮಾಡಿ ಸರ್ವಭೂತಾಂತರ್ಯಾಮಿಯಾದ ಶ್ರೀಕೃಷ್ಣನನ್ನು ಕುರಿತು " ಸಾಕ್ಷಾತ್ ವಿಷ್ಣುವಿನ ಅಂಶದಿಂದ ಲೀಲಾಮಾನುಷಶರೀರಧಾರಿಗಳಾದ ನಿಮಗೆ ನಾನು ಏನುಕೆಲಸವನ್ನು ಮಾಡಲೀ ? " ಎಂದು ಕೇಳಿದನು.

ಭಗವಂತನು " ಎಲೈ ಮಹಾತ್ಮನಾದ ಯಮನೆ, ಸ್ವಕರ್ಮವಶದಿಂದ ನಿನ್ನ ಲೋಕಕ್ಕೆ ಬಂದಿರುವ ನಮ್ಮ ಗುರುಪುತ್ರನನ್ನು ಕರಕೊಂಡು ಬಾ ; ನನ್ನ ಆಜ್ಞೆಯನ್ನು ಪುರಸ್ಕರಿಸಿ ನಡೆ " ಅಂದನು.

ಯಮನು ಹಾಗೇ ಆಗಲೆಂದು ನುಡಿದು ಆ ಹುಡುಗನನ್ನು ಕರಕೊಂಡು ಬಂದು ಒಪ್ಪಿಸಲು ರಾಮಕೃಷ್ಣರು ಆ ಕುಮಾರನನ್ನು ಕರಕೊಂಡು ಬಂದು ಗುರುವಿಗೆ ಒಪ್ಪಿಸಿ " ಇನ್ನೇನು ನಿಮ್ಮ ಮನಸ್ಸಿನಲ್ಲಿದೆಯೋ ಅದನ್ನಾಜ್ಞಾಪಿಸೀ " ಎಂದು ಕೇಳಿದರು. ಸಾಂದೀಪನೀ ಋಷಿಯು ಅವರನ್ನು ಕುರಿತು " ಎಲೈ ಬಾಲಕರಾದ ರಾಮಕೃಷ್ಣರುಗಳಿರಾ, ನಿಮ್ಮಿಂದ ಗುರುದಕ್ಷಿಣೆಯು ಚನ್ನಾಗಿ ಕೊಡಲ್ಪಟ್ಟಿತು ; ನಿಮ್ಮಂಥಾ ಮಹಾತ್ಮರಿಗೆ ಗುರುವಾದ ನನಗೆ ಯಾವ ಮನೋರಥವು ದುರ್ಲಭವಾದಾತು ! ಎಲೈ ಪರಾಕ್ರಮಿಗಳಿರಾ, ಇನ್ನು ನೀವು ನಿಮ್ಮ ಮನೆಗೆ ಹೋಗೀ ; ಪಾವನವಾದ ಕೀರ್ತಿಯು ನಿಮಗುಂಟಾಗಲೀ ; ನಿಮ್ಮಲ್ಲಿ ವೇದಗಳು ಮರೆಯದೆ ದೃಢವಾಗಿರಲೀ " ಅಂದನು.

ಈ ಪ್ರಕಾರದಲ್ಲಿ ಗುರುವಿನಿಂದ ಅನುಜ್ಞಾತರಾಗಿ ರಾಮಕೃಷ್ಣರು ವಾಯುವೇಗವುಳ್ಳದ್ದಾಗಿ ಮೇಘದಂತೆ ಧ್ವನಿಯುಳ್ಳ ರಥದಿಂದ ಮಥುರಾಪುರಿಗೆ ತಿರಿಗಿ ಬರಲು ಬಹಳ ದಿವಸಗಳು ಹೊರಗೆ ಹೋಗಿ ಬಂದ ಅವರನ್ನು ನೋಡಿ ನಷ್ಟವಾದ ಧನವು ಪುನಶ್ಚ ಲಬ್ಧವಾದಪ್ರಕಾರದಲ್ಲಿ ಪ್ರಜೆಗಳು ಸಂತೋಷಪಟ್ಟರು.

## ೪೬ ನೇ ಅಧ್ಯಾಯ.

### ಉದ್ಧವನು ನಂದಯಶೋದೆಗಳಿಗೆ ಕೃಷ್ಣನ ಕ್ಷೇಮವನ್ನು ತಿಳಿಸಿದ್ದು.

ಎಲೈ ಅರಸೆ, ವೃಷ್ಣಿಗಳಲ್ಲಿ ಶ್ರೇಷ್ಠನಾಗಿ ಬೃಹಸ್ಪತಿಗೆ ಶಿಷ್ಯನಾಗಿ ಮಹಾ ಬುದ್ಧಿಶಾಲಿಯಾಗಿ ಕೃಷ್ಣನ ಸಖನಾಗಿ ಆತನಿಗೆ ಮಂತ್ರಿಯಾದ ಉದ್ಧವನು ಎಂಬ ಮಹಾಪುರುಷನನ್ನು ಶರಣಾಗತ ಭಕ್ತರ ಕಷ್ಟಪರಿಹಾರಕನಾದ ಶ್ರೀಕೃಷ್ಣನು ಕೈಹಿಡಿದುಕೊಂಡು ಆತನನ್ನು ಕುರಿತು "ಎಲೈ ಸೌಮ್ಯನಾದ ಉದ್ಧವನೆ, ನೀನು ವ್ರಜಕ್ಕೆ ಹೋಗು; ನಮ್ಮ ಮಾತಾಪಿತೃಗಳಾದ ಯಶೋದಾನಂದರಿಗೆ ಪ್ರೀತಿಯನ್ನುಂಟುಮಾಡು; ಗೋಪಸ್ತ್ರೀಯರಿಗೆ ನನ್ನ ವಿರಹದಿಂದುಂಟಾದ ಮನೋವ್ಯಸನವನ್ನು ನಾನು ಹೇಳುವ ಮಾತುಗಳಿಂದ ಪರಿಹರಿಸು; ಆ ಸ್ತ್ರೀಯರು ನನ್ನಲ್ಲೇ ಮನಸ್ಸುಳ್ಳವರು; ನನ್ನನ್ನೇ ಪ್ರಾಣವಾಗಿ ತಿಳಿದಿರುವರು; ನನ್ನ ನಿಮಿತ್ತವಾಗಿ ಪತಿ ಪುತ್ರ ಬಂಧುಗಳನ್ನು ಬಿಟ್ಟಿರುವರು; ನನ್ನನ್ನೇ ಪರದೈವವಾಗಿಯೂ ಶ್ರೇಷ್ಠನಾದ ಪರಮಾತ್ಮನಾಗಿಯೂ ತಿಳಿದು ಮನಸ್ಸಿನಲ್ಲಿ ಧ್ಯಾನಿಸುವರು; ಲೋಕದಲ್ಲಿ ನನ್ನ ನಿಮಿತ್ತವಾಗಿ ಲೋಕಧರ್ಮಗಳನ್ನು ತ್ಯಜಿಸುವವರನ್ನು ನಾನು ಸಂರಕ್ಷಿಸುವೆನು; ಪ್ರೀತಿಪಾತ್ರರಲ್ಲಿ ಶ್ರೇಷ್ಠನಾದ ನಾನು ದೂರದಲ್ಲಿರುವದರಿಂದ ಗೋಪಸ್ತ್ರೀಯರು ನನ್ನನ್ನೇ ಸ್ಮರಿಸುತ ವಿರಹಕಳವಳದಿಂದ ಮೂರ್ಛಿತರಾಗುವರು; ಪುನಹ ಬರುವೆನೆಂದು ನನ್ನಿಂದ ಹೇಳಲ್ಪಟ್ಟ ಮಾತಿನಿಂದ ಆಶೆಯುಳ್ಳವರಾಗಿ ನನ್ನನ್ನೇ ಧ್ಯಾನಿಸಿ ನನ್ನಲ್ಲಿ ಐಕ್ಯಭಾವವುಳ್ಳವರಾಗಿ ಅತಿ ಪ್ರಯಾಸದಿಂದ ಜೀವಿಸುವರು" ಎಂದು ಹೇಳಿದನು.

ಉದ್ಧವನು ಪರಮಾತ್ಮನಾಗಿ ಲೋಕಕ್ಕೆ ಪ್ರಭುವಾದ ಶ್ರೀಕೃಷ್ಣನ ಆಜ್ಞೆಯನ್ನು ಗ್ರಹಿಸಿ ರಥಾರೂಢನಾಗಿ ನಂದಗೋಕುಲಕ್ಕಾಗಿ ಹೊರಟು ಸೂರ್ಯಾಸ್ತಮಯಕಾಲದಲ್ಲಿ ತಿರಿಗಿ ಬರುತಿದ್ದ ಗೋವುಗಳ ಕಾಲು ಕೊಳಗಗಳಿಂದೆಬ್ಬಿಸಲ್ಪಟ್ಟ ಧೂಳಿಗಳಿಂದಾಚ್ಛಾದಿತವಾದ ರಥವುಳ್ಳವನಾಗಿ ನಂದವ್ರಜಕ್ಕೆ ಹೋದನು! ಆ ವ್ರಜವು ಪುಷ್ಪವತಿಗಳಾದ ಗೋವುಗಳ ರತ್ಯರ್ಥವಾಗಿ ಕಾಳಗವನ್ನು ಮಾಡುತ ಕೊಬ್ಬಿದ ವೃಷಭಗಳಿಂದ ಶಬ್ದಯುಕ್ತವಾಗಿ ಅಲ್ಲಲ್ಲಿ ಓಡ್ಯಾಡುತಿರುವ ಕರುಗಳಸಂಗಡ ಓಡುತ ಸ್ಥೂಲಗಳಾದ ಕೆಚ್ಚಲುಗಳುಳ್ಳ ಗೋವುಗಳ ನಾದಗಳಿಂದ ಪೂರಿತವಾಗಿ ದಿಕ್ಕುದಿಕ್ಕುಗಳಲ್ಲಿಯು ಓಡಾಡುವ ಕರುಗಳಿಂದ ಶೋಭಿತವಾಗಿ ಹಸಗಳನ್ನು ಕರೆಯುವಾಗುಂಟಾಗುವ ಶಬ್ದಗಳಿಂದಲೂ ಕೊಳಲು ನಾದಗಳಿಂದಲೂ ಯುಕ್ತವಾಗಿ ಅಲಂಕೃತರಾಗಿ ಕೃಷ್ಣರಾಮರ ಚರಿತಗಳನ್ನು ಗಾನಂಗೈವ ಗೋಪಸ್ತ್ರೀಯರಿಂದ ಪ್ರಕಾಶಿತವಾಗಿ ಯಜ್ಞೇಶ್ವರ ಸೂರ್ಯಾತಿಥಿ ಗೋಬ್ರಾಹ್ಮಣ ಪಿತೃದೇವತೆಗಳ ಪೂಜೆಗಳಿಂದಲೂ ಧೂಪದೀಪ ಮಾಲ್ಯಗಳಿಂದಲೂ ಯುಕ್ತವಾದ ಗೋಪಗೃಹಗಳಿಂದ ಮನೋಹರವಾಗಿ ಎಲ್ಲಾ ಕಡೆಯಲ್ಲಿಯೂ ಪುಷ್ಪಿತವಾದ ವನವುಳ್ಳದ್ದಾಗಿ ಪಕ್ಷಿಗಳಿಂದಲೂ ಭ್ರಮರಗಳಿಂದಲೂ ನಾದಿತವಾಗಿ ಹಂಸಕಾರಂಡವಕೀರ್ಣವಾಗಿ ಪದ್ಮಸಮೂಹಗಳಿಂದ ಶೋಭಿತವಾಗಿತ್ತು! ಆ ಬಳಿಕ ನಂದನು ಕೃಷ್ಣನಿಗೆ ಆಪ್ತನಾಗಿ ಪ್ರಿಯನಾದ ಉದ್ಧವನನ್ನು ನೋಡಿ ಸಂತುಷ್ಟನಾಗಿ ಆತನನ್ನು ಶ್ರೀಕೃಷ್ಣನೆಂದು ಭಾವಿಸಿ ಆಲಿಂಗನಂಗೈದು ಪೂಜೆಯನ್ನು ಮಾಡಿ ದಿವ್ಯಾನ್ನ ಭೋಜನವನ್ನು ಮಾಡಿಸಿ ಮಂಚದಮೇಲೆ ಹಾಸಿಗೆಯನ್ನಾಕಿಸಿ ಅದರಮೇಲೆ ವಿಶ್ರಮಿಸಿಕೊಂಡಿರಲು ಆತನ ಪಾದಗಳನ್ನೊತ್ತುತ ಶ್ರಮೆಯನ್ನು ಪರಿಹರಿಸಿ ಕುಶಲಪ್ರಶ್ನೆಯಂಗೈಯುತ "ಎಲೈ ಉದ್ಧವನೆ, ನನಗೆ ಪರಮಮಿತ್ರನಾಗಿ ಮಹಾತ್ಮನಾಗಿ ಶೂರಪುತ್ರನಾದ ವಸುದೇವನು ತನ್ನ ಪುತ್ರರ ಸಮೇತನಾಗಿ ಮಿತ್ರಯುಕ್ತನಾಗಿ ಬಂಧನಮುಕ್ತನಾಗಿ ಸುಖದಿಂದಿರ್ಧಾನೆಯೆ? ಸಾಧುಗಳಾಗಿ ಧರ್ಮಶೀಲರಾದ ಯಾದವರಿಗೆ ನಿತ್ಯದ್ವೇಷಿಯಾಗಿ ಸಪರಿವಾರನಾದ ಕಂಸನು ತನ್ನ ದುಷ್ಕೃತ್ಯದಿಂದ ದೈವಬಲದಿಂದ ಹತನಾದನು; ಶ್ರೀಕೃಷ್ಣನು ತನ್ನ ಮಾತೃವಾದ ಯಶೋದಾದೇವಿಯನ್ನೂ ತನ್ನ ಆಪ್ತರಾದ ಗೋಪರನ್ನೂ ವ್ರಜವನ್ನೂ ಗೋವುಗಳನ್ನೂ ಬೃಂದಾವನವನ್ನೂ ಗೋವರ್ಧನಪರ್ವತವನ್ನೂ ಸ್ಮರಿಸುತ್ತಾನೆಯೆ? ಗೋವಿಂದನು ಸ್ವಜನರಾದ ನಮ್ಮನ್ನು ಬಂದಾವರ್ತಿ ನೋಡಲೋಸುಗ ಬರುವನೆ? ಬಂದಪಕ್ಷದಲ್ಲಿ ಸುಂದರವಾದ ನಾಶಿಕವುಳ್ಳವನಾಗಿ ಮುಗುಳುನಗೆಯಿಂದ ಮನೋಹರವಾದ ನೋಟವುಳ್ಳ ಆತನ ಮುಖವನ್ನು ನೋಡುವೆವು; ಕಾಡುಗಿಚ್ಚಿನ ದೆಸೆಯಿಂದಲೂ ವೃಷಭಾಸು

ರನ ದೆಸೆಯಿಂದಲೂ ಸರ್ಪದಶೆಯಿಂದಲೂ ಮತ್ತು ಅನೇಕ ಮಹಾ ಮೃತ್ಯುಗಳದೆಶೆಯಿಂದಲೂ ನಾವು ಮಹಾತ್ಮನಾದ ಕೃಷ್ಣನಿಂದ ರಕ್ಷಿಸಲ್ಪಟ್ಟೆವು; ಇಷ್ಟುಮಾತ್ರವೆ ಅಲ್ಲ: ಶ್ರೀಕೃಷ್ಣನ ಪರಾಕ್ರಮ ಸಾಹಸಗಳನ್ನೂ ಲೀಲಾಕಟಾಕ್ಷಪ್ರಸಾದಗಳನ್ನೂ ಮಂದಸ್ಮಿತಮಾತುಗಳನ್ನೂ ಸರ್ವಕಾಲದಲ್ಲಿಯೂ ಸ್ಮರಿಸುತಲಿರುವ ನಮಗೆ ಗ್ರಹಕೃತ್ಯಗಳ್ಯಾವವೂ ತೋರುವದಿಲ್ಲ; ಮುಕುಂದನ ಪಾದಚಿನ್ಹೆಗಳಿಂದ ಭೂಷಿತಗಳಾದ ನದಿಗಳು ಪರ್ವತಗಳು ವನಸ್ಥಳಗಳು ಉದ್ಯಾನಗಳು ಮೊದಲಾದವನ್ನು ನೋಡುತಿರುವ ನಮ್ಮ ಮನಸ್ಸು ಕೃಷ್ಣರೂಪವನ್ನೈದಿರುವದರಿಂದ ಏನೂ ತೋರುವದಿಲ್ಲ; ದೇವಕಾರ್ಯಾರ್ಥವಾಗಿ ಕೃಷ್ಣರಾಮರು ದೇವಸಾರ್ವಭೌಮರಾಗಿ ಅವತರಿಸಿಧಾರೇ ಎಂದು ಗರ್ಗಋಷೀಶ್ವರನು ಹೇಳಿದನು; ಅದು ಯಥಾರ್ಥವು; ಗರ್ಗಾಚಾರ್ಯನ ವಚನಮಾತ್ರವಲ್ಲ; ದೃಷ್ಟಾಂತಗಳನ್ನು ನೋಡಿದರೂ ಕೃಷ್ಣರಾಮರು ಪ್ರತ್ಯಕ್ಷವಾಗಿ ಭಗವದವತಾರಗಳೆಂಬ ಅರ್ಥವು ಸಿದ್ಧವಾಗುತ್ತೆ; ಹತ್ತುಸಾವಿರಗಜ ಬಲವುಳ್ಳ ಕಂಸನನ್ನೂ ಚಾಣೂರ ಮುಷ್ಟಿಕಾದಿ ಜಟ್ಟಿಗಳನ್ನೂ ಮಹಾಗಜವನ್ನೂ ಲೀಲಾಮಾತ್ರದಿಂದಲೆ ಕ್ಷುದ್ರಮೃಗಗಳನ್ನು ಸಿಂಹವು ಸಂಹರಿಸುವಂತೆ ಶ್ರೀಕೃಷ್ಣನು ಸಂಹರಿಸಿದನು; ಮದಗಜವು ಕಾಷ್ಠವನ್ನು ಮುರಿಯುವಂತೆ ಮಹಾ ದೃಢವಾಗಿ ತಾಳತ್ರಯ ಪ್ರಮಾಣವುಳ್ಳ ಮಹಾ ಧನುಸ್ಸನ್ನು ಆತನು ಏಕಹಸ್ತದಿಂದ ಮುರಿದುಹಾಕಿದನು; ಏಳುದಿನಸಗಳ ಪರ್ಯಂತವು ಗೋವರ್ಧನ ಪರ್ವತವನ್ನು ಧರಿಸಿದನು; ಪ್ರಲಂಬನು ಧೇನುಕನು ಅರಿಷ್ಟನು ತೃಣಾವರ್ತನು ಬಕನು ಮೊದಲಾದ ಅಸುರರು ದೇವತೆಗಳಿಗೂ ಅಸಾಧ್ಯರಾದರೂ ಲೀಲೆಯಿಂದಲೇ ಕೃಷ್ಣನಿಂದ ಹತರಾದರು" ಎಂದು ನುಡಿದನು.

ಈ ರೀತಿಯಲ್ಲಿ ನಂದನಿಂದ ವರ್ಣಿಸಲ್ಪಡುತಿದ್ದ ಪುತ್ರನ ಚರಿತಗಳನ್ನು ಕೇಳಿ ಯಶೋದಾದೇವಿಯು ಪುತ್ರವಾತ್ಸಲ್ಯದಿಂದ ಸೋರೆಯುತಿದ್ದ ಸ್ತನಭಾರವುಳ್ಳವಳಾಗಿ ನೇತ್ರೋದಕಗಳನ್ನು ಬಿಟ್ಟಳು; ಯಶೋದಾನಂದರಿಗೆ ಭಗವಂತನಾದ ಕೃಷ್ಣನಲ್ಲಿರುವ ಪರಮಾನುರಾಗವನ್ನು ನೋಡಿ ಉದ್ಧವನು ಸಂತೋಷದಿಂದ ಅವರನ್ನು ಕುರಿತು "ಎಲೈ ಮಹಾತ್ಮನಾದ ನಂದನೆ, ನೀವಿಬ್ಬರೂ ಶ್ಲಾಘ್ಯರು; ಸರ್ವಗುರುವಾದ ನಾರಾಯಣನಲ್ಲಿ ನಿಮ್ಮ ಬುದ್ಧಿಯು ಈ ರೀತಿಯಲ್ಲಿ ಲಗ್ನವಾಗಿದೆ; ರಾಮಕೃಷ್ಣರು ಜಗತ್ತಿಗೆ ನಿಮಿತ್ತಕಾರಣರು; ಪ್ರಧಾನಪುರುಷರು; ಪ್ರಾಣಿಗಳಲ್ಲಿ ಅನುಪ್ರವೇಶಿಸಿ ವಿಲಕ್ಷಣವಾದ ನಾನಾಭೇದಗಳುಳ್ಳ ಜ್ಞಾನಕ್ಕೂ ಜೀವಿಗಳಿಗೂ ನಿಯಾಮಕರು; ಪುರಾಣಪುರುಷರು; ಪ್ರಾಣೋತ್ಕ್ರಮಣಕಾಲದಲ್ಲಿ ಯಾವ ಭಗವಂತನಲ್ಲಿ ಶುದ್ಧವಾದ ಮನಸ್ಸನ್ನು ಕ್ಷಣಮಾತ್ರವು ನಿಲ್ಲಿಸುವವರು ಅನಾದಿಕರ್ಮವಾಸನೆಯು ದಹಿಸಲ್ಪಟ್ಟ ಪರಬ್ರಹ್ಮಭಾವವನ್ನೈದಿ ಶುದ್ಧಸತ್ವರೂಪವಾಗಿ ಶೀಘ್ರವಾಗಿ ಪರಮಗತಿಯನ್ನೈದುವರೊ ಅಂಥಾ ಭಗವಂತನೇ ಶ್ರೀಕೃಷ್ಣನು; ಸರ್ವಪ್ರಪಂಚಕ್ಕೂ ಅಂತರಾತ್ಮನಾಗಿ ಕಾರಣವಾಗಿ ಲೀಲಾಮಾನುಷ ಶರೀರಧಾರಿಯಾಗಿ ಸಾಕ್ಷಾತ್ ನಾರಾಯಣನಾದ ಶ್ರೀಕೃಷ್ಣನಲ್ಲಿ ಮಹಾತ್ಮರಾದ ನೀವಿಬ್ಬರೂ ಚಿತ್ತವನ್ನಿರಿಸಿದಿರೀ; ನಿಮಗಾಗತಕ್ಕ ಪ್ರಯೋಜನವಿನ್ನೇನಿದೆ; ನೀವು ಕೃತಕೃತ್ಯರು; ಅಚ್ಯುತನು ಸ್ವಲ್ಪಕಾಲದಲ್ಲಿ ವ್ರಜಕ್ಕೆ ಬರುವನು; ಭಗವಂತನಾಗಿ ಸಾತ್ವತಕುಲಶ್ರೇಷ್ಠನಾದ ಶ್ರೀಕೃಷ್ಣನು ಮಾತಾಪಿತೃಗಳಾದ ನಿಮಗೆ ಪ್ರಿಯವನ್ನು ಮಾಡುವನು; ರಂಗಮಧ್ಯದಲ್ಲಿ ಸಮಸ್ತ ಸಾತ್ವತರಿಗೂ ದ್ವೇಷಿಯಾದ ಕಂಸನನ್ನು ಸಂಹರಿಸಿ ನಿಮ್ಮ ಸಂಗಡ ಹೇಳಿದ ಅರ್ಥವನ್ನು ಸತ್ಯವಾಗಿ ಮಾಡುವನು! ಎಲೈ ಮಹಾತ್ಮರಿರಾ, ನೀವು ವ್ಯಸನಪಡಬೇಡಿ; ಶ್ರೀಕೃಷ್ಣನನ್ನು ಸಮೀಪದಲ್ಲೇ ಕಾಣುವಿರಿ; ಕೃಷ್ಣನು ಸರ್ವಪ್ರಾಣಿಗಳ ಹೃದಯದಲ್ಲಿಯೂ ಕಾಷ್ಠಗಳಲ್ಲಿ ಜ್ಯೋತಿಸ್ಸಿರುವಂತೆ ಇಧಾನೆ; ಅಹಂಕಾರರಹಿತನಾದ ಭಗವಂತನಿಗೆ ಅತಿ ಪ್ರಿಯನೂ ಇಲ್ಲ—ಅತಿ ದ್ವೇಷಿಯೂ ಇಲ್ಲ; ಉತ್ತಮನೂ ಇಲ್ಲ—ಅಧಮನೂ ಇಲ್ಲ; ಸಮಾನನೂ ಇಲ್ಲ—ಪುತ್ರಾದಿಗಳೂ ಇಲ್ಲ; ಸ್ವಜನವೂ ಇಲ್ಲ—ಪರಜನವೂ ಇಲ್ಲ; ದೇಹವೂ ಇಲ್ಲ—ಜನ್ಮವೂ ಇಲ್ಲ—ಕರ್ಮವೂ ಇಲ್ಲ; ಆದಾಗ್ಯು ಭಗವಂತನು ಸತ್ಪುರುಷರನ್ನು ಸಂರಕ್ಷಿಸಲೋಸುಗ ಲೀಲೆಯಿಂದ ದೇವತಿರ್ಯಗ್ಮನುಷ್ಯಾದಿ ಯೋನಿಗಳಲ್ಲಿ ಆವಿರ್ಭವಿಸುತ್ತಾನೆ; ನಿರ್ಗುಣನಾದ ಪರಮಾತ್ಮನು ಸತ್ವವು ರಜಸ್ಸು ತಮಸ್ಸು ಎಂಬ ಮೂರು ಗುಣಗಳನ್ನು ಆಶ್ರಯಿಸಿ ಜಗತ್ತಿನ ಪರಿಪಾಲನವನ್ನೂ ಸೃಷ್ಟಿಯ

ನ್ನೂ ಲಯವನ್ನೂ ಮಾಡುತ್ತಾನೆ; ತಾನು ತಿರಿಗಿದರೆ ಭೂಮಿಯೂ ತಿರುಗುವಹಾಗೆ ಕಾಣುವಂತೆ ಕರ್ತೃತ್ವದ ಮನಸ್ಸಿನ ಅಧ್ಯಾಸದಿಂದ ಆತ್ಮನು ಕರ್ತೃವಂತೆ ತೋರುವದು; ಕೃಷ್ಣನು ನಿಮಗೆ ಮಾತ್ರವೆ ಪುತ್ರನಲ್ಲ; ಸರ್ವ ಜನರಿಗೂ ಪುತ್ರನು; ಅಂತರಾತ್ಮನು; ಪಿತೃವು; ಮಾತೃವು; ಈಶ್ವರನು; ಕಾಣಲ್ಪಡುವ ವಸ್ತುವು ಕೇಳಲ್ಪಡುವ ವಸ್ತುವು ಪೂರ್ವದಲ್ಲಿ ಹುಟ್ಟಿದ್ದು ಈಗ ಹುಟ್ಟುವದು ಉತ್ತರೋತ್ತರ ಹುಟ್ಟುವದು ಸ್ಥಾವರವು ಜಂಗಮವು ಮೊದಲಾದ ಸಮಸ್ತ ವಸ್ತುಗಳೂ ಆ ಭಗವಂತನಿಗೆ ಅನ್ಯವಾದವಲ್ಲ; ಸಮಸ್ತ ಪ್ರಪಂಚವೂ ಆ ಪರಮಾತ್ಮನ ಸ್ವರೂಪವು" ಎಂದು ನುಡಿದನು.

ಈ ರೀತಿಯಲ್ಲಿ ಉದ್ಧವನು ನಂದನೊಡನೆ ಸಂಭಾಷಣೆ ಮಾಡುತಿರಲು ಆ ರಾತ್ರಿಯು ಕಳೆದುಹೋಯಿತು; ಮಾರನೇ ಅರುಣೋದಯದಲ್ಲಿ ಗೋಪಸ್ತ್ರೀಯರೆದ್ದು ದೀಪಗಳನ್ನಚ್ಚಿ ಮನೇಬಾಗಲುಗಳನ್ನು ಸಾರಿಸಿ ರಂಗವಲ್ಲಿಗಳನ್ನಿಕ್ಕಿ ಮಥನಹಗ್ಗಗಳನ್ನು ಭುಜಗಳಿಂದ ಪರ್ಯಾಯವಾಗಿ ಶೆಳೆಯುತ ಧ್ವನಿಗೈವ ಹಸ್ತಕಡಗಗಳೂ ಚಲಿಸುತಲಿರುವ ಕಟಿಪಶ್ಚಾದ್ಭಾಗಗಳೂ ಕುಚಗಳೂ ಜೋಲುವ ಓಲೆಗಳೂ ಕುಂಕುಮಕಾಂತಿಯುಕ್ತವಾದ ಕಪೋಲಗಳೂ ದೀಪಪ್ರಭೆಯಿಂದ ಹೊಳೆಯುವ ಮಣಿಗಳ ಶೋಭೆಯೂ ಉಳ್ಳವರಾಗಿ ದಧಿಮಥನಂಗೈಯುತ ಪದ್ಮಲೋಚನನಾದ ಭಗವಂತನನ್ನು ಗಾನಂಗೈದರು; ಆಗ ಆ ಸ್ತ್ರೀಯರ ಕಂಠಧ್ವನಿಯು ಆಕಾಶವನ್ನು ವ್ಯಾಪಿಸುತ ದಧಿಮಥನ ಶಬ್ದದಿಂದ ಮಿಶ್ರವಾಗಿ ದಿಕ್ಕುಗಳ ಅಮಂಗಳವೆಲ್ಲವನ್ನು ಪರಿಹರಿಸುತಿತ್ತು! ಆ ಬಳಿಕ ಭಗವಂತನಾದ ಸೂರ್ಯನು ಉದಯಿಸಲು ವ್ರಜವಾಸಿಗಳಾದ ಗೋಪಗೋಪೀಜನರು ಸುವರ್ಣಮಯವಾದ ಒಂದು ರಥವನ್ನು ವ್ರಜದ್ವಾರದಲ್ಲಿ ನೋಡಿ ಆ ರಥಸ್ವಾಮಿಯೆಂದೂ ಮೊದಲು ಕಮಲಲೋಚನನಾದ ಕೃಷ್ಣನನ್ನು ಮಧುರಾಪುರಕ್ಕೆ ಕರಕೊಂಡುಹೋದ ಕಂಸನ ಕಾರ್ಯಸಾಧಕನಾದ ಅಕ್ರೂರನು ಮೃತನಾದ ಕಂಸನಿಗೆ ಪರಲೋಕಕ್ರಿಯೆಗಳನ್ನು ಮಾಡಲೋಸುಗ ತಮ್ಮನ್ನು ಸಂಹರಿಸಿ ತಮ್ಮ ಶರೀರಮಾಂಸಪಿಂಡಗಳಿಂದ ಕಂಸನನ್ನು ತೃಪ್ತಿಮಾಡಲೋಸುಗ ಬಂದನೊ ಎಂದೂ ಮಾತಾಡುತಿರಲು ಉದ್ಧವನು ಸಂಧ್ಯಾವಂದನೆಯನ್ನು ಮಾಡಿ ಅಲ್ಲಿಗೆ ಬಂದನು!

## ೪೭ ನೇ ಅಧ್ಯಾಯ.

### ಉದ್ಧವನು ಗೋಪಸ್ತ್ರೀಯರಿಗೆ ಕೃಷ್ಣನ ಕ್ಷೇಮವನ್ನು ತಿಳಿಸಿದ್ದು.

ಎಲೈ ಅರಸೆ, ವ್ರಜಸ್ತ್ರೀಯರು ದೀರ್ಘಬಾಹುವಾಗಿ ನೂತನಕಮಲದಂತೆ ನೇತ್ರಗಳುಳ್ಳವನಾಗಿ ಪೀತಾಂಬರಧಾರಿಯಾಗಿ ಪದ್ಮಮಾಲಾಧಾರಿಯಾಗಿ ಪ್ರಕಾಶಮಾನವಾದ ಮುಖಪದ್ಮವುಳ್ಳವನಾಗಿ ಹೊಳೆಯುವ ಕುಂಡಲಗಳುಳ್ಳವನಾಗಿ ಶ್ರೀಕೃಷ್ಣನಿಗೆ ಅನುಚರನಾದ ಉದ್ಧವನನ್ನು ನೋಡಿ ಆಶ್ಚರ್ಯಪಟ್ಟು ಸುಂದರರೂಪನಾದ ಶ್ರೀಕೃಷ್ಣನಂತೆ ಅಲಂಕಾರವುಳ್ಳ ಆ ಪುರುಷನು ಯಾರೆಂದೂ ಎಲ್ಲಿಂದ ಬಂದನೆಂದೂ ವಿಚಾರಿಸುತ ಉತ್ತಮಶ್ಲೋಕನ ಪಾದಪದ್ಮಾವಲಂಬಿಯಾದ ಉದ್ಧವನನ್ನು ಸುತ್ತಿಕೊಂಡು ವಿನಯದಿಂದ ನಮ್ರರಾಗಿ ಆತನು ಶ್ರೀಕೃಷ್ಣನು ಹೇಳಿದ ಕ್ಷೇಮವಾರ್ತೆಯನ್ನು ಹೇಳುವದಕ್ಕೆ ಬಂದನೆಂದೆಣಿಸಿ ಲಜ್ಜಾಸಹಿತವಾಗಿ ಮುಗುಳುನಗುನೋಟಗಳೂ ಮೃದುವಾಕ್ಕುಗಳೂ ಉಳ್ಳವರಾಗಿ ರಹಸ್ಯವಾಗಿ ಒಬ್ಬೊಬ್ಬರೂ ಆತನನ್ನು ಕುರಿತು "ಎಲೈ ಮಹಾತ್ಮನೆ, ನೀನು ಕೃಷ್ಣನ ಸೇವಕನು; ಶ್ರೀಕೃಷ್ಣನು ತನ್ನ ಮಾತಾಪಿತೃಗಳಿಗೆ ಪ್ರಿಯವನ್ನು ಮಾಡಲೋಸುಗ ನಿನ್ನನ್ನು ಕಳುಹಿಸಿಧಾನೆ; ಆತನಿಗೆ ಇಲ್ಲಿ ಸ್ಮರಣೀಯವಾದ ವ್ಯಾಪಾರವು ಮತ್ತೇನಿದೆ! ಬಂಧುಗಳಲ್ಲಿ ಸ್ನೇಹಾನುಬಂಧವು ಯೋಗಿಗಳಿಗೂ ಬಿಡುವದಕ್ಕಸಾಧ್ಯವು; ಹಾಗಲ್ಲದ ಮೈತ್ರಿಯು ಕಾರ್ಯನಿಮಿತ್ತವಾಗಿ ನಟನಮಾತ್ರವೇಸರಿ; ಪುರುಷರಿಂದ ಸ್ತ್ರೀಯರಲ್ಲಿ ಮಾಡಲ್ಪಡುವ ಸ್ನೇಹವು ಭ್ರಮರಗಳಿಂದ ಪುಷ್ಪಗಳೊಡನೆ ಮಾಡಲ್ಪಡುವ ಸ್ನೇಹದಂತೆ ಕಾರ್ಯಾರ್ಥವಾಗಿರುವದು! ವೇಶ್ಯಾಸ್ತ್ರೀಯರು ನಿರ್ಧನನಾದ ಪುರುಷನನ್ನು ತ್ಯಜಿಸುವರು; ಪ್ರಜೆಗಳು ಅಧಮನಾದ ಅರಸನನ್ನು

ತ್ಯಜಿಸುವರು ; ಶಿಷ್ಯರು ವಿದ್ಯಾಪ್ರಾಪ್ತ್ಯನಂತರದಲ್ಲಿ ಆಚಾರ್ಯನನ್ನು ತ್ಯಜಿಸುವರು ; ಋತ್ವಿಕ್ಕುಗಳು ದಕ್ಷಿಣೆ ಸಂದಮೇಲೆ ಯಜಮಾನನನ್ನು ತ್ಯಜಿಸುವರು ; ಪಕ್ಷಿಗಳು ಫಲರಹಿತವಾದ ವೃಕ್ಷವನ್ನು ತ್ಯಜಿಸುವವು ; ಅತಿಥಿಗಳು ಭೋಜನವಾದಮೇಲೆ ಗೃಹಸ್ಥನನ್ನು ತ್ಯಜಿಸುವರು ; ಮೃಗಗಳು ದಗ್ಧವಾದ ಅರಣ್ಯವನ್ನು ತ್ಯಜಿಸುವವು ; ಜಾರಪುರುಷನು ಪರಸ್ತ್ರೀಯನ್ನನುಭವಿಸಿ ಅವಳಿಗೆ ಕಾಮತೃಪ್ತಿಯಿಲ್ಲದಿದ್ದಾಗ್ಯೂ ಅವಳನ್ನು ತ್ಯಜಿಸುವನು !” ಎಂದು ನುಡಿಯುತ ಶ್ರೀಕೃಷ್ಣನಲ್ಲೇ ಲಗ್ನವಾದ ಮನೋವಾಕ್ಕಾಯಗಳುಳ್ಳವರಾಗಿ ಗೃಹಕೃತ್ಯಗಳನ್ನು ಮರೆತು ಶ್ರೀಕೃಷ್ಣನ ವ್ಯಾಪಾರಗಳನ್ನು ಗಾನಂಗೈಯುತ ಲಜ್ಜೆಯನ್ನು ಬಿಟ್ಟು ರೋದನಂಗೈಯುತ ಕೃಷ್ಣನ ಬಾಲ ಚೋರಚರಿತ್ರೆಗಳನ್ನು ಸ್ಮರಿಸಿ ವ್ಯಸನಪಡುತಿದ್ದರು.

ಒಬ್ಬಳು ಬಂದು ಭ್ರಮರವನ್ನು ನೋಡಿ ಕೃಷ್ಣಸಮಾಗಮಾಕಾಂಕ್ಷೆಯಿಂದ ಅದನ್ನು ಕೃಷ್ಣನಿಂದ ಕಳುಹಿಸಲ್ಪಟ್ಟ ದೂತನನ್ನಾಗಿ ಭಾವಿಸಿ ಅದನ್ನು ಕುರಿತು “ ಎಲೈ ಧೂರ್ತನಾದ ಭ್ರಮರಪತಿಗೆ ದೂತನಾದವನೆ, ಸಪತ್ನೀ ಸ್ತ್ರೀಯರ ಕುಚಗಳಲ್ಲಿ ಜೋಲುವ ಮಾಲ್ಯಗಳ ಕುಂಕುಮಗಳಿಂದ ವ್ಯಾಪ್ತವಾದ ಮೀಸೆಗಳಿಂದ ನಮ್ಮ ಪಾದಗಳನ್ನು ಮುಟ್ಟಬೇಡ ; ಆ ಭೃಂಗಪತಿಯು ಆ ಸ್ತ್ರೀಯರ ದಯವನ್ನು ಸಂಪಾದಿಸಿಕೊಳ್ಳಲಿ ; ಅವನ ಕಪಟಕೃತ್ಯವನ್ನು ನೋಡಿ ಯಾದವಸಭೆಯಲ್ಲೆಲ್ಲರೂ ನಿಂದಿಸಲಿ ; ಆ ಭ್ರಮರನಾಥನು ಮೋಹಕವಾಗಿ ಸ್ವಕೀಯವಾದ ಅಧರಾಮೃತವನ್ನು ಒಂದಾವರ್ತಿ ನಮಗೆ ಪಾನವನ್ನು ಮಾಡಿಸಿ ಭ್ರಮರವು ಪಾನಮಾಡಿದ ಪುಷ್ಪವನ್ನು ತ್ಯಜಿಸುವಂತೆ ನಮ್ಮನ್ನು ತ್ಯಜಿಸಿದನು ; ಅಂಥಾ ಮೋಸಗಾರನ ಪಾದಪದ್ಮವನ್ನು ನೀನು ಹ್ಯಾಗೆ ಪರಿಚರಣಂಗೈಯುತ್ತೀ ! ಆ ಪುರುಷನ ಬೆಲ್ಲಮಾತುಗಳಿಂದ ಮರುಳಾಗಿ ಲಕ್ಷ್ಮಿಯು ಅವನನ್ನು ಸೇರಿದ್ದಾಳೆ ; ನಾವು ಲಕ್ಷ್ಮಿಯಂತೆ ಅಪ್ರಾಜ್ಞರಲ್ಲ ! ಎಲೇ ಭೃಂಗವೆ, ಮೊದಲು ಕಂಡೂ ಕೇಳಿಯೂ ಇರುವ ಯದುಪತಿಯಾದ ಪುರುಷನನ್ನು ಬಹಳವಾಗಿ ನಮ್ಮ ಮುಂದೆ ಯಾಕೆ ಗಾನಂಗೈಯುತ್ತೀ ! ಕೃಷ್ಣನಿಗೆ ಆಪ್ತರಾದ ಸ್ತ್ರೀಯರ ಮುಂದೆ ಗಾನವನ್ನು ಮಾಡು ; ಆಲಿಂಗನದಿಂದ ಪರಿಹರಿಸಲ್ಪಟ್ಟ ಕುಚರೋಗವುಳ್ಳವರಾಗಿ ಆ ಸ್ತ್ರೀಯರು ನಿನಗೆ ಪ್ರಿಯವನ್ನು ಮಾಡುವರು ; ಸ್ವರ್ಗದಲ್ಲಿಯೂ ಭೂಮಿಯಲ್ಲಿಯೂ ಪಾತಾಳದಲ್ಲಿಯೂ ಅನೇಕ ಸ್ತ್ರೀಯರುಂಟು ; ಅವರೊಳಗೆ ಕಪಟವಾಗಿ ಮನೋಹರವಾದ ನಗುವೂ ಹುಬ್ಬುಗಳ ಚಲನವೂ ಉಳ್ಳ ಆ ಕೃಷ್ಣನಿಗೆ ನಾವು ಎಷ್ಟುಮಾತ್ರವು ! ಆತನು ದೀನರನ್ನು ಕಾಪಾಡುವವನೆಂದೂ ಉತ್ತಮಶ್ಲೋಕನೆಂದೂ ಹೇಳಿಸಿಕೊಂಡಿದ್ದಾನೆ ; ನಮ್ಮ ಪಾದಗಳಲ್ಲಿ ಶಿರಸ್ಸನ್ನಿರಿಸಿ ನಮಸ್ಕರಿಸಬೇಡ ; ಮುಕುಂದನದೆಶೆಯಿಂದ ಕಲಿತುಕೊಂಡಿರುವ ಚಾಟುವಾಕ್ಯಗಳಿಂದ ಸ್ತ್ರೀಯರನ್ನೊಡಂಬಡಿಸುವ ನಿನ್ನ ವಿದ್ಯವನ್ನು ನಾನು ಬಲ್ಲೆನು ; ಕೃಷ್ಣನು ತನ್ನ ನಿಮಿತ್ತವಾಗಿ ಪತಿಪುತ್ರಾದಿಗಳನ್ನೂ ಧರ್ಮವನ್ನೂ ಪರಲೋಕವನ್ನೂ ಬಿಟ್ಟು ತನ್ನನ್ನೇ ನಂಬಿದ ನಮ್ಮನ್ನು ಬಿಟ್ಟನು ; ಅವನ ವ್ಯಾಪಾರವನ್ನು ಸ್ಮರಿಸಿದರೆ ಭಯವಾಗುತ್ತೆ ! ಪೂರ್ವದಲ್ಲಿ ದಶರಥರಾಮಾವತಾರದಿಂದ ಬೇಟೆಗಾರನಂತೆ ವಾಲಿಯನ್ನು ಸಂಹರಿಸಿದನು ; ಕ್ರೂರನಾಗಿ ಸೀತಾಧೀನನಾಗಿ ಸ್ವೇಚ್ಛೆಯಿಂದ ವನದಲ್ಲಿ ಸಂಚರಿಸುತ್ತಿದ್ದ ಶೂರ್ಪನಖಿಯ ಕರ್ಣನಾಶಿಕಾಛೇದವನ್ನು ಮಾಡಿ ವಿರೂಪೆಯಾಗಿ ಮಾಡಿದನು ; ಬಲಿಚಕ್ರವರ್ತಿಯಿಂದ ಮಾಡಲ್ಪಟ್ಟ ಪೂಜೆಯನ್ನು ಗ್ರಹಿಸಿ ಅವನನ್ನು ಬಂಧನಂಗೈದನು ; ಅಂಥಾವನ ಸ್ನೇಹವು ಸಾಕು ! ಆದರೂ ಅವನ ಕಥೆಯನ್ನು ಮಾತ್ರ ಬಿಡಲಶಕ್ಯವು ; ಯಾವ ಶ್ರೀಕೃಷ್ಣನ ಚರಿತ್ರದ ವಿಲಾಸಗಳೆಂಬ ಅಮೃತರಸದ ಬಿಂದುವನ್ನು ಸೇವಿಸುವದರಿಂದ ಪರಿವೃತವಾದ ರಾಗದ್ವೇಷಾದಿಗಳುಳ್ಳವರಾಗಿ ಬಹುಮಂದಿ ಯೋಗಿಗಳು ಆಕ್ಷಣದಲ್ಲೆ ದೀನರಾದ ಪತ್ನೀಪುತ್ರಾದಿಗಳನ್ನು ತ್ಯಜಿಸಿ ಪಕ್ಷಿಗಳಂತೆ ಉದರಭರಣಮಾತ್ರವನ್ನು ಮಾಡಿಕೊಂಡು ಭಿಕ್ಷುಗಳಂತಿರುವರೋ ಅಂಥಾ ಕೃಷ್ಣನ ಚರಿತ್ರವು ಬಿಡಲಶಕ್ಯವು ; ಬೇಟೆಗಾರನ ಕಪಟಗಾನದಿಂದ ಮೋಹಿತಗಳಾದ ಮೃಗಗಳಂತೆ ಕಪಟಿಯಾದ ಶ್ರೀಕೃಷ್ಣನ ಮಾತುಗಳನ್ನು ಸತ್ಯವಾಗಿ ತಿಳಿದು ಅವನ ನಖಸ್ಪರ್ಶದಿಂದುದ್ದೀಪಿತವಾದ ಕಾಮವುಳ್ಳವರಾಗಿ ಅವನ ಮೋಸಗತಿಗಳನ್ನು ಬಹಳಾವರ್ತಿ ಕಂಡಿದ್ದೇವೆ ! ಎಲೇ ದೂತನೆ, ಶ್ರೀಕೃಷ್ಣನು ನಿನ್ನನ್ನು ಕಳುಹಿಸಿದ್ದರಿಂದ ನೀನು ನಮಗೆ ಪೂಜಾಯೋಗ್ಯನು ;

ನಿನ್ನ ಮನೋಗತವೇನು! ನಮ್ಮನ್ನು ಪುರಸ್ತ್ರೀಯರ ಸಮೇತನಾದ ಕೃಷ್ಣನ ಸಮೀಪಕ್ಕೆ ಹ್ಯಾಗೆ ಕರಕೊಂಡು ಹೋಗುತ್ತೀ! ಆತನ ವಕ್ಷಸ್ಥಳದಲ್ಲಿ ಲಕ್ಷ್ಮಿಯು ಸರ್ವದಾ ಇದ್ದಾಳೆ; ಅಲ್ಲಿಗೆ ನಾವು ಬರುವದು ಹ್ಯಾಗೆ! ಎಲೈ ದೂತನೆ, ಕೃಷ್ಣನು ಗುರುಕುಲದಿಂದ ಬಂದು ಈಗ ಮಧುರಾಪುರದಲ್ಲಿರುವನೆಯೋ! ಎಲೈ ಸೌಮ್ಯನೆ, ಆತನು ಮಾತಾಪಿತೃಗಳನ್ನೂ ಮನೆಗಳನ್ನೂ ಬಂಧುಗಳನ್ನೂ ಗೋಪಾಲಕರನ್ನೂ ಸ್ಮರಿಸುತ್ತಾನೆಯೆ! ಅಗರುಗಂಧ ಲಿಪ್ತವಾದ ಭುಜವನ್ನು ನಮ್ಮ ಶಿರಸ್ಸಿನಲ್ಲಿ ಇನ್ನ್ಯಾವಾಗಲಾದರೂ ಇರಿಸುವನೇ!'' ಎಂದು ನುಡಿದಳು.

ಈ ಪ್ರಕಾರದಲ್ಲಿ ಕೃಷ್ಣನನ್ನು ನೋಡಲಿಚ್ಛೆಯುಳ್ಳ ಆ ಗೋಪಸ್ತ್ರೀಯರನ್ನು ಶ್ರೀಕೃಷ್ಣನ ವಾಕ್ಯಗಳಿಂದ ಸಮಾಧಾನವನ್ನು ಮಾಡುತ ಉದ್ಧವನು ಅವರನ್ನು ಕುರಿತು ''ಎಲೇ ಸ್ತ್ರೀಯರುಗಳಿರಾ, ನೀವು ಪೂರ್ಣಕಾಮರು; ಲೋಕಪೂಜಿತರಾದವರು; ಭಗವಂತನಾದ ವಾಸುದೇವನಲ್ಲೇ ನಿಮ್ಮ ಮನಸ್ಸು ಈರೀತಿ ಲಗ್ನವಾಗಿರುವದರಿಂದ ನೀವು ಧನ್ಯರು; ಧ್ಯಾನದಿಂದಲೂ ವ್ರತಗಳಿಂದಲೂ ತಪಸ್ಸಿನಿಂದಲೂ ಹೋಮದಿಂದಲೂ ಜಪದಿಂದಲೂ ವೇದಾಧ್ಯಯನದಿಂದಲೂ ಮನೋನಿಗ್ರಹದಿಂದಲೂ ಶ್ರೇಯಸ್ಪ್ರಾಪ್ತಿಸಾಧನಗಳಾದ ಕರ್ಮಗಳಿಂದಲೂ ಶ್ರೀಕೃಷ್ಣನಲ್ಲಿ ಭಕ್ತಿಯು ಸಾಧಿಸಲ್ಪಡುವದು; ನಿಮ್ಮಿಂದ ಉತ್ತಮಶ್ಲೋಕನಾದ ಭಗವಂತನಲ್ಲಿ ಉತ್ತಮೋತ್ತಮರಾದ ಮುನಿಗಳಿಗೂ ದುರ್ಲಭವಾದ ದೃಢಭಕ್ತಿಯು ಮಾಡಲ್ಪಟ್ಟದೆ; ದೈವಯೋಗದಿಂದ ನೀವು ಪುತ್ರರನ್ನೂ ಪತಿಗಳನ್ನೂ ದೇಹಗಳನ್ನೂ ಉಪೇಕ್ಷಿಸಿ ಕೃಷ್ಣಾಖ್ಯನಾದ ಪರಮಪುರುಷನನ್ನು ಪೇಕ್ಷಿಸಿದಿರಾದಕಾರಣ ನೀವು ಧನ್ಯರು; ನಿಮ್ಮಿಂದ ಭಗವಂತನಲ್ಲಿ ಏಕಾಂತಭಕ್ತಿಯು ಮಾಡಲ್ಪಟ್ಟಿತು; ಭಗವದ್ವಿರಹಜನ್ಯವಾದ ಪಾರವಶ್ಯದಿಂದ ಸರ್ವವಸ್ತುಗಳನ್ನು ಕೃಷ್ಣನನ್ನಾಗಿ ಭಾವಿಸುತ್ತೀರಿ; ಇಂಥಾ ನಿಮ್ಮ ಭಕ್ತಿಯನ್ನೋಡುವ ನನಗೆ ಪರಮಾನುಗ್ರಹವುಂಟಾಗಿದೆ; ಪ್ರಿಯನಾದ ಶ್ರೀಕೃಷ್ಣನ ಸಂದೇಶವನ್ನು ನಿಮಗೆ ನಾನು ಹೇಳುವದಕ್ಕೋಸ್ಕರ ಬಂದೆನು; ಆ ವಾರ್ತೆಯು ನಿಮಗೆ ಸುಖಕರವಾದದ್ದು; ಅದನ್ನು ಕೇಳೀ; ಆತನು ನಿಮ್ಮನ್ನುದ್ದೇಶಿಸಿ 'ಎಲೇ ಗೋಪಸ್ತ್ರೀಯರುಗಳಿರಾ, ಸರ್ವಪ್ರಕಾರದಿಂದಲೂ ನಿಮಗೂ ನನಗೂ ವಿಯೋಗವಿಲ್ಲ; ಪೃಥ್ವ್ಯಾದಿ ಪಂಚಭೂತಗಳು ಸರ್ವಪ್ರಾಣಿಗಳಲ್ಲಿಯೂ ಅವಿಭಾವಿಸಿರುವಹಾಗೆ ನಾನು ಮನಸ್ಸು ಪ್ರಾಣಗಳು ಬುದ್ಧಿ ಇಂದ್ರಿಯಗಳು ಸತ್ವಾದಿ ಗುಣಗಳು ಮೊದಲಾದವುಗಳಿಗೆ ಆಧಾರನಾಗಿ ಸರ್ವತ್ರ ಇದ್ದೇನೆ; ಭೂತೇಂದ್ರಿಯ ಗುಣಸ್ವರೂಪದಿಂದ ನನ್ನಿಂದಲೇ ನನ್ನಲ್ಲಿ ಮಾಯಾಪ್ರಭಾವದಿಂದ ನನ್ನನ್ನೇ ಆವಿರ್ಭವಿಸುವಂತೆ ಮಾಡುತ ಪಾಲಿಸುತ ಲಯಮಾಡುತ ಇದ್ದೇನೆ; ಜಗದ್ವ್ಯತಿರಿಕ್ತನಾಗಿ ಶುದ್ಧನಾಗಿ ಜ್ಞಾನಸ್ವರೂಪನಾದ ಪರಮಾತ್ಮನು ಸ್ವಪ್ನಜಾಗರಗಳಿಂದ ತಿಳಿಯಲ್ಪಡುತ್ತಾನೆ; ಸ್ವಪ್ನದಿಂದೆಚ್ಚತ್ತ ಪುರುಷನು ಮನಸ್ಸಿನಿಂದ ಸ್ವಪ್ನದಲ್ಲಿ ಅನುಭೂತವಾದ ಅರ್ಥವನ್ನು ಮಿಥ್ಯಾಭೂತವೆಂದು ತಿಳಿದು ಇಂದ್ರಿಯಾರ್ಥಗಳನ್ನು ಧ್ಯಾನಿಸುವಂತೆ ಮನಸ್ಸನ್ನು ನಿಗ್ರಹಿಸಬೇಕು; ಸಾಂಖ್ಯವು ಯೋಗವು ಸನ್ಯಾಸವು ತಪಸ್ಸು ಸತ್ಯವು ಮೊದಲಾದವು ಸರ್ವನದಿಗಳೂ ಸಮುದ್ರವನ್ನೈದುವ ರೀತಿಯಲ್ಲಿ ಮನೋನಿಗ್ರಹಪೂರ್ವಕವಾಗಿ ಪರಮಾತ್ಮಪ್ರಾಪ್ತಿಸಾಧನಗಳು; ನಾನು ದೂರದಲ್ಲಿರುವದು ನಿಮ್ಮ ಮನಸ್ಸಿನಲ್ಲೇ ಸನ್ನಿಹಿತವಾಗಿರುವ ನಿಮಿತ್ಯದಿಂದೆಂದು ತಿಳಿಯಬೇಕು; ಸ್ತ್ರೀಯರಿಗೆ ದೂರದಲ್ಲಿರುವ ಪುರುಷನಲ್ಲಿ ಮನಸ್ಸು ಲಗ್ನವಾಗಿರುವಹಾಗೆ ಕಣ್ಣಿಗೆದುರಾಗಿರುವ ಪ್ರಿಯನಲ್ಲಿ ಲಗ್ನವಾಗಿರದು! ಎಲೇ ಸ್ತ್ರೀಯರುಗಳಿರಾ, ಮನಸ್ಸನ್ನು ನನ್ನಲ್ಲಿರಿಸಿ ಸಮಸ್ತ ಲೌಕೀಕವ್ಯಾಪಾರಗಳನ್ನೂ ಬಿಟ್ಟು ನನ್ನನ್ನೇ ಸ್ಮರಿಸುವ ನೀವು ನನ್ನನ್ನೈದುವಿರಿ! ನಾನು ನಿಮ್ಮ ಸಮೇತನಾಗಿ ವನದಲ್ಲಿ ರಾಸಕ್ರೀಡೆಯನ್ನು ಮಾಡುತಿರುವಾಗ ಮನೆಗಳಲ್ಲಿ ಪತಿಗಳಿಂದ ಶೀಕ್ಷಿತರಾಗಿ ವನಕ್ಕೆ ಬರುವದಕ್ಕೆ ಕೂಡದೆ ನನ್ನನ್ನೇ ಧ್ಯಾನಿಸುತ ಮನೆಗಳಲ್ಲಿದ್ದ ಗೋಪಸ್ತ್ರೀಯರು ನನ್ನನ್ನೈದಿದರು' ಎಂದು ನುಡಿದನು'' ಅಂದನು.

ಈ ಪ್ರಕಾರವಾದ ಶ್ರೀಕೃಷ್ಣನ ಸಂದೇಶವಾಕ್ಯಗಳನ್ನು ಉದ್ಧವನಿಂದ ಕೇಳಿ ಆ ಗೋಪಸ್ತ್ರೀಯರು ಸುಪ್ರೀತರಾಗಿ ಅದರಿಂದ ಲಬ್ಧವಾದ ಜ್ಞಾನವುಳ್ಳವರಾಗಿ ಉದ್ಧವನನ್ನು ಕುರಿತು ''ಎಲೈ ಉದ್ಧವನೆ, ಯಾದವರಿಗೆ ದ್ರೋಹಿಯಾಗಿ ಶತ್ರುವಾದ ಕಂಸನು ದೈವಯೋಗದಿಂದ ಹತನಾದನು; ದೈವಗತಿಯಿಂದ ಇಷ್ಟಾರ್ಥಗಳನ್ನೈದಿ ಸು

ಶಿವಂತರಾದ ಆಪ್ತಬಂಧುಗಳ ಸಹಿತನಾಗಿ ಶ್ರೀಕೃಷ್ಣನು ಕ್ಷೇಮದಿಂದಿಧಾನೆಯೇ? ಎಲೈ ಉದ್ಧವನೇ, ಶ್ರೀಕೃಷ್ಣನು ಪುರಸ್ತ್ರೀಯರ ಸ್ನೇಹಯುಕ್ತವಾಗಿ ಲಜ್ಜಾಯುಕ್ತವಾಗಿ ಮುಗುಳುನಗೆಯಿಂದಲೂ ಮನೋಹರವಾದ ಕಟಾಕ್ಷದಿಂದಲೂ ಅರ್ಚಿತನಾಗಿ ಆ ಸ್ತ್ರೀಯರಿಗೆ ಪ್ರೀತಿಯನ್ನುಂಟುಮಾಡುತ್ತಾನೆಯೇ? ರತಿವಿಶೇಷಗಳನ್ನು ತಿಳಿದಿರುವ ಪ್ರಿಯನಾದ ಶ್ರೀಕೃಷ್ಣನು ಪುರುಷಸ್ತ್ರೀಯರ ವಿಲಾಸಗಳಿಂದಲೂ ಆಲಾಪಗಳಿಂದಲೂ ಪೂಜಿತನಾಗಿ ಹ್ಯಾಗೆ ಮರುಳಾಗದಿದ್ದಾನು! ಎಲೈ ಸತ್ಪುರುಷನೆ, ಗೋವಿಂದನು ಆ ಪುರಸ್ತ್ರೀಯರ ಸಭಾಮಧ್ಯದಲ್ಲಿ ಸಲ್ಲಾಪದಿಂದಿರುವದನ್ನು ಬಿಟ್ಟು ಹಳ್ಳಿಗಳಲ್ಲಿರುವ ಮುಗ್ಧರಾದ ನಮ್ಮನ್ನು ಸ್ಮರಿಸುವನೆ! ಎಲೈ ಉದ್ಧವನೆ, ಶ್ರೀಕೃಷ್ಣನು ಬಿಳೀನೈದಲೆಗಳಿಂದಲೂ ಸಣ್ಣ ಮೊಲ್ಲೆಗಳಿಂದಲೂ ಚಂದ್ರಿಕಗಳಿಂದಲೂ ರಮ್ಯವಾದ ಬೃಂದಾವನದಲ್ಲಿ ಧ್ವನಿಗೈಯುವ ಕಾಲಂದಿಗೆಗಳುಳ್ಳ ರಾಸಸಭೆಯಲ್ಲಿ ಪ್ರೀತಿಪಾತ್ರರಾದ ನಮ್ಮಿಂದ ಹೇಳಲ್ಪಟ್ಟ ಮನೋಹರವಾದ ಕಥೆಗಳುಳ್ಳವನಾಗಿ ಯಾವ ರಾತ್ರಿಗಳಲ್ಲಿ ಕ್ರೀಡಿಸಿದನೊ ಆ ರಾತ್ರಿಗಳನ್ನಾದರೂ ಸ್ಮರಿಸುತ್ತಾನೆಯೇ! ಕೃಷ್ಣನಿಂದುಂಟಾದ ಶೋಕದಿಂದ ತಪ್ತರಾಗಿರುವ ನಮ್ಮನ್ನು ತನ್ನ ಅಂಗಗಳಿಂದ ಸ್ಪರ್ಶಿಸಿ ಜೀವಿಸುವಂತೆ ಮಾಡುವದಕ್ಕಾಗಿ ಇಲ್ಲಿಗೆ ಇನ್ನೊಂದಾವರ್ತಿ ಬರುವನೇ! ಶತ್ರುವಾದ ಕಂಸನನ್ನು ಸಂಹರಿಸಿ ರಾಜ್ಯಾಧಿಪತ್ಯವನ್ನೈದಿ ರಾಜಕನ್ಯೆಯರನ್ನು ವಿವಾಹಮಾಡಿಕೊಂಡು ಸುಹೃತ್ತುಗಳನ್ನು ಲಾಲಿಸುತಲಿರುವ ಕೃಷ್ಣನು ಇಲ್ಲಿಗೆ ಯಾಕೆ ಬಂದಾನು! — — ಮಹಾತ್ಮನಾಗಿ ಶ್ರೀಪತಿಯಾಗಿ ಪೂರ್ಣಕಾಮನಾದ ಶ್ರೀಕೃಷ್ಣನಿಗೆ ಅರಣ್ಯವಾಸಿಗಳಾದ ನಮ್ಮಿಂದಾಗಲೀ ರಾಜಕನ್ಯೆಯರಿಂದಾಗಲೀ ಅನ್ಯರಿಂದಾಗಲೀ ಏನು ಪ್ರಯೋಜನವು! ನಿರಾಸೆಯೇ ಸುಖಪ್ರದವೆಂದು ಪಿಂಗಳಾನಾಮಕಳಾದ ಜಾರಣಸ್ತ್ರೀಯು ಹೇಳಿದ ಅರ್ಥವನ್ನು ತಿಳಿದವನಾದಾಗ್ಯೂ ನಾವು ಕೃಷ್ಣನಲ್ಲಿ ಆಸೆಯುಳ್ಳವರಾಗಿಧೇವೆ; ಉತ್ತಮಶ್ಲೋಕನಾದ ಶ್ರೀಕೃಷ್ಣನ ಏಕಾಂತ ಯೋಗಕ್ಷೇಮವನ್ನು ಉಪೇಕ್ಷಿಸುವದಕ್ಕೆ ಯಾರು ಸಮರ್ಥರಾದಾರು! ಲಕ್ಷ್ಮೀದೇವಿಯು ಆತನು ತನ್ನನ್ನಿಚ್ಛೈಸದಿದ್ದಾಗ್ಯು ಆತನ ವಕ್ಷಸ್ಥಳವನ್ನು ಬಿಡುವದಿಲ್ಲ; ಈ ನದಿಗಳು ಪರ್ವತಗಳು ಗೋವುಗಳು ಮೊದಲಾದವು ಬಲರಾಮ ಸಮೇತನಾದ ಕೃಷ್ಣನಿಂದ ಸೇವಿತಗಳಾದಂಥಾವು; ಇವುಗಳನ್ನು ನೋಡಿದರೆ ನಮಗೆ ಬಾರಿಬಾರಿಗೂ ನಂದಗೋಪನ ಪುತ್ರನಾದ ಶ್ರೀಕೃಷ್ಣನ ಸ್ಮರಣೆಯುಂಟಾಗುತ್ತದೆ; ಕಾಂತಿಯುಕ್ತಗಳಾದ ಆತನ ಪಾದನ್ಯಾಸಗಳಿಂದಲೂ ಲಲಿತವಾದ ಗಮನದಿಂದಲೂ ಉತ್ಕೃಷ್ಟವಾದ ಮಂದಹಾಸ ಕಟಾಕ್ಷಪ್ರಸಾದಗಳಿಂದಲೂ ಮಧುರವಾದ ಮಾತುಗಳಿಂದಲೂ ಪರವಶಚಿತ್ತರಾದ ನಾವು ಆತನನ್ನು ಹ್ಯಾಗೇಮರತೇವು! — — ಎಲೈ ನಾಥನೆ, ಲಕ್ಷ್ಮೀಪತಿಯೆ, ಗೋಕುಲಪತಿಯೆ, ಕಷ್ಟಪರಿಹಾರಕನೆ, ಪಾಪಸಮುದ್ರದಲ್ಲಿ ಮುಳಗಿರುವ ಗೋಕುಲವನ್ನುದ್ಧಾರಮಾಡು" ಎಂದು ಮೊರೆಯಿಡುತ್ತಿದ್ದರು.

ಅನಂತರದಲ್ಲಿ ಆ ಗೋಪಸ್ತ್ರೀಯರು ಕೃಷ್ಣಸಂದೇಶದಿಂದ ವಿರಹಜ್ವರವನ್ನು ಪರಿಹರಿಸಿಕೊಂಡು ಆತನನ್ನು ಪರಮಾತ್ಮನೆಂದು ತಿಳಿದು ಉದ್ಧವನನ್ನು ಪೂಜಿಸಿದರು; ಉದ್ಧವನು ಆ ಗೋಪಸ್ತ್ರೀಯರ ಶೋಕವನ್ನು ಪರಿಹರಿಸುತ ಶ್ರೀಕೃಷ್ಣನ ಲೀಲಾಕಥೆಗಳನ್ನು ಗಾನಗೈದು ಗೋಕುಲವನ್ನು ಸಂತೋಷಪಡಿಸುತ ಕೆಲವು ಮಾಸಗಳು ಅಲ್ಲೇ ವಾಸವನ್ನು ಮಾಡಿಕೊಂಡಿದ್ದನು; ಆತನು ನಂದಗೋಕುಲದಲ್ಲಿ ಎಷ್ಟುತಿಂಗಳು ವಾಸಮಾಡಿಕೊಂಡಿದ್ದನೋ ಅಷ್ಟೂ ಶ್ರೀಕೃಷ್ಣನ ಪ್ರಸ್ತಾಪಗಳಿಂದ ಕ್ಷಣಗಳಂತೆ ಕಳೆದವು; ಪುಷ್ಪಿತಗಳಾದ ವೃಕ್ಷಗಳುಳ್ಳ ವನಗಳು ನದಿಗಳು ಪರ್ವತಗಳು ಗುಹೆಗಳು ಮೊದಲಾದವನ್ನು ನೋಡುತ ಹರಿದಾಸನಾದ ಉದ್ಧವನು ಎಲ್ಲರೂ ಕೃಷ್ಣನನ್ನು ಸ್ಮರಿಸುವಂತೆ ಮಾಡುತ ವಾಸಗೈದು ಗೋಪಸ್ತ್ರೀಯರ ಹೃದಯವು ಕೃಷ್ಣಾಸಕ್ತವಾಗಿ ತದೇಕಾಯತ್ತವಾಗಿರುವದನ್ನು ನೋಡಿ ಪರಮಪ್ರೀತನಾಗಿ ತನ್ನ ಮನಸ್ಸಿನಲ್ಲಿ "ಈ ಗೋಪಸ್ತ್ರೀಯರು ಸಫಲವಾದ ಜನ್ಮವುಳ್ಳವರು; ಸರ್ವಾತ್ಮಕನಾದ ಗೋವಿಂದನಲ್ಲೇ ದೃಢವಾದ ಚಿತ್ತವುಳ್ಳವರು; ಸಂಸಾರಭಯವುಳ್ಳ ಮುನಿಗಳು ಯಾವ ದೃಢಭಕ್ತಿಯನ್ನಪೇಕ್ಷಿಸುವರೋ—ಭಕ್ತರಾದ ನಾವು ಯಾವ ಭಕ್ತಿಯನ್ನಪೇಕ್ಷಿಸುವೆವೋ ಅಂಥಾ ಭಕ್ತಿಯನ್ನು ಈ ಸ್ತ್ರೀಯರು ಪಡೆದಿದ್ದಾರೆ; ಭಗವಂತನಲ್ಲಿ ಭಕ್ತಿಯುಳ್ಳವನು ಯಾವಜಾತಿಯಲ್ಲಿ ಹುಟ್ಟಿದರೇನು! ವನಚರರಾಗಿ

ಚಪಲಚಿತ್ತರಾದ ಸ್ತ್ರೀಯರೆಲ್ಲಿ—ಪರಮಾತ್ಮನಾದ ಶ್ರೀಕೃಷ್ಣನಲ್ಲಿ ಸ್ಥಿರವಾದ ಭಕ್ತಿಯೆಲ್ಲಿ! ಈಶ್ವರನು ತನ್ನನ್ನು ಭಜಿಸುವ ಮೂರ್ಖನನ್ನೂ ಅನುಗ್ರಹಿಸುತ್ತಾನೆ; ತನ್ನನ್ನು ಸೇವಿಸಿದರೆ ಸೌಖ್ಯವನ್ನುಂಟುಮಾಡುವದಕ್ಕೆ ಸಮಾನನಾದ ಭಗವಂತನಲ್ಲಿ ಅತ್ಯಂತಾಸಕ್ತಳಾದ ಲಕ್ಷ್ಮಿಗೂ ಇಂಥಾ ಭಗವದನುಗ್ರಹವಿಲ್ಲ; ಪದ್ಮಗಂಧವುಳ್ಳ ಸ್ವರ್ಗಸ್ತ್ರೀಯರಿಗೂ ಇಲ್ಲ; ಮಿಕ್ಕ ಸ್ತ್ರೀಯರನ್ನು ಹೇಳತಕ್ಕದ್ದೇನು! ರಾಸೋತ್ಸವದಲ್ಲಿ ಭಗವಂತನ ಭುಜಗಳಿಂದ ಗ್ರಹಿಸಲ್ಪಟ್ಟ ಕಂಠಗಳುಳ್ಳವರಾಗಿ ಧನ್ಯರಾದ ಗೋಪಸ್ತ್ರೀಯರಿಗೆ ಯಾವ ಅನುಗ್ರಹವುಂಟಾಯಿತೊ ಆ ಅನುಗ್ರಹವು ಮಿಕ್ಕವರಿಗೆ ದುರ್ಲಭವು; ಈ ಗೋಪಸ್ತ್ರೀಯರ ಪಾದರಜಸ್ಸಂಬಂಧವುಳ್ಳ ಬೃಂದಾವನಸ್ಥಗಳಾದ ವೃಕ್ಷಲತಾಗುಲ್ಮಗಳಲ್ಲಿ ಒಂದಾಗಿ ಹುಟ್ಟಿದರೂ ಧನ್ಯನಾಗುವೆನು; ಈ ಗೋಪಸ್ತ್ರೀಯರು ಬಿಡಲಶಕ್ಯವಾದ ಧರ್ಮಮಾರ್ಗವನ್ನು ತ್ಯಜಿಸಿ ವೇದಗಳಿಂದ ಹುಡುಕಲು ಯೋಗ್ಯವಾದ ಗೋವಿಂದನ ಮಾರ್ಗವನ್ನು ಭಜಿಸುತ್ತಾರೆ; ಲಕ್ಷ್ಮೀದೇವಿಯಿಂದಲೂ ಪೂರ್ಣಕಾಮರಾದ ಬ್ರಹ್ಮಾದಿಗಳಿಂದಲೂ ಯೋಗೀಶ್ವರರಿಂದಲೂ ಮನಸ್ಸಿನಲ್ಲಿ ಪೂಜಿತನಾಗಿ ಭಗವಂತನಾದ ಕೃಷ್ಣನ ಪಾದಪದ್ಮವನ್ನು ಯಾವ ಗೋಪಸ್ತ್ರೀಯರು ತಮ್ಮ ಕುಚಗಳಲ್ಲಿರಿಸಿಕೊಂಡು ಆಲಿಂಗನಗೈದು ತಾಪವನ್ನು ಪರಿಹರಿಸಿಕೊಂಡರೊ ಅಂಥಾ ಗೋಪಸ್ತ್ರೀಯರ ಪಾದರೇಣುವನ್ನು ನಾನು ಬಾರಿಬಾರಿಗೂ ನಮಸ್ಕರಿಸುತ್ತೇನೆ; ಈ ಸ್ತ್ರೀಯರಿಂದ ಗಾನಗೈಯಲ್ಪಟ್ಟ ಹರಿಕಥೆಯು ಲೋಕತ್ರಯವನ್ನೂ ಪವಿತ್ರಮಾಡುವದು'' ಎಂದು ಚಿಂತಿಸುತ ಆ ಗೋಪಿಯರಿಗೆ ನಮಸ್ಕರಿಸಿ ಅವರಿಂದಲೂ ಯಶೋದಾನಂದರಿಂದಲೂ ಅಪ್ಪಣೆಯನ್ನು ತೆಗೆದುಕೊಂಡು ಗೋಪಾಲಕರನ್ನು ಸಮ್ಮತಿಸಿ ರಥವನ್ನೇರಿದನು!

ನಂದಾದಿಗಳು ನಾನಾರೂಪವಾದ ಕಾಣಿಕೆಗಳನ್ನು ತೆಗೆದುಕೊಂಡು ಅನುರಾಗದಿಂದ ಬಾಷ್ಪಲೋಚನರಾಗಿ ಹೊರಟುಹೋಗುತಿದ್ದ ಉದ್ಧವನನ್ನು ಕುರಿತು ''ಎಲೈ ಉದ್ಧವನೆ, ನಮ್ಮ ಮನಸ್ಸು ಶ್ರೀಕೃಷ್ಣನ ಪಾದವನ್ನೇ ಆಶ್ರಯಿಸಿರಲಿ; ನಮ್ಮ ವಾಕ್ಕುಗಳು ಕೃಷ್ಣನ ನಾಮಗಳನ್ನೇ ಉಚ್ಚರಿಸಲಿ; ನಮ್ಮ ದೇಹಗಳು ಕೃಷ್ಣನ ಸೇವೆಯಲ್ಲೇ ನಮ್ರವಾಗಿರಲೀ; ನಾವು ಕರ್ಮಗಳಿಂದ ನಾನಾದೇಹಗಳನ್ನೈದಿದವರಾದಾಗ್ಯು ಸತ್ಕಾರ್ಯಗಳನ್ನು ಮಾಡಿಕೊಂಡು ಕೃಷ್ಣನಲ್ಲೇ ಆಸಕ್ತರಾಗಿರುವೆವು'' ಎಂದು ನುಡಿದರು.

ಈ ರೀತಿಯಲ್ಲಿ ಗೋಪರಿಂದ ಪ್ರೇರಿಸಲ್ಪಟ್ಟವನಾಗಿ ಉದ್ಧವನು ಪುನಹ ಕೃಷ್ಣಪಾಲಿತವಾದ ಮಥುರಾಪಟ್ಟಣಕ್ಕೆ ಹೋಗಿ ಕೃಷ್ಣನಿಗೆ ನಮಸ್ಕರಿಸಿ ವ್ರಜವಾಸಿಗಳಾದ ಗೋಪಿಗೋಪರ ಭಕ್ತ್ಯತಿಶಯವನ್ನು ಆತನಿಗೂ ವಸುದೇವನಿಗೂ ಬಲರಾಮನಿಗೂ ಉಗ್ರಸೇನನಿಗೂ ತಿಳಿಸಿ ಕಾಣಿಕೆಗಳನ್ನು ಒಪ್ಪಿಸಿದನು!

---

## ೪೮ ನೇ ಅಧ್ಯಾಯ.

### ಕೃಷ್ಣನು ಅಕ್ರೂರನನ್ನು ಧೃತರಾಷ್ಟ್ರನ ಬಳಿಗೆ ಕಳುಹಿಸಿದ್ದು.

ಎಲೈ ಅರಸೆ, ಅನಂತರದಲ್ಲಿ ಸರ್ವಾತ್ಮಕನಾಗಿ ಸರ್ವಜ್ಞನಾಗಿ ಭಗವಂತನಾದ ಶ್ರೀಕೃಷ್ಣನು ಕುಬ್ಜೆಯ ಪ್ರಾರ್ಥನೆಯನ್ನು ಸ್ಮರಿಸಿ ಕಾಮತಪ್ತಳಾದ ಆಕೆಯ ಮನೋರಥಪೂರ್ಣಕ್ಕಾಗಿ ಅವಳ ಮನೆಗೆ ಹೋದನು; ಆ ಗೃಹವು ಅನರ್ಘ್ಯವಾದ ವಸ್ತುಗಳಿಂದ ಪೂರ್ಣವಾಗಿ ಕಾಮವಿಹಾರೋಪಯುಕ್ತಗಳಾದ ವಸ್ತುಗಳಿಂದ ಯುಕ್ತವಾಗಿ ಮುತ್ತುಗಳ ಕುಚ್ಚುಗಳಿಂದಲೂ ಪತಾಕೆಗಳಿಂದಲೂ ಮೇಲುಕಟ್ಟುಗಳಿಂದಲೂ ಹಾಸಿಗೆಗಳಿಂದಲೂ ಪೀಠಗಳಿಂದಲೂ ಪರಿಮಳಯುಕ್ತಗಳಾದ ಧೂಪದೀಪಗಳಿಂದಲೂ ಪುಷ್ಪಹಾರಗಳಿಂದಲೂ ದಿವ್ಯಗಂಧಗಳಿಂದಲೂ ಅಲಂಕೃತವಾಗಿತ್ತು; ಆ ಕುಬ್ಜೆಯು ತನ್ನ ಮನೆಗೆ ಬರುತಿದ್ದ ಶ್ರೀಕೃಷ್ಣನನ್ನು ನೋಡಿ ಪೀಠದಿಂದೆದ್ದು ಸಂತೋಷಯುಕ್ತಳಾಗಿ ತ್ವರೆಯಿಂದ ತನ್ನ ಸಖಿಯರೊಡನೆ ಎದುರಾಗಿಹೋಗಿ ಕರತಂದು ಪೀಠಪ್ರದಾನಾದಿಗಳಿಂದ ಪೂಜಿಸಿದಳು;

ಶ್ರೀಕೃಷ್ಣನ ಸಂಗಡ ಹೋಗಿದ್ದ ಉದ್ಧವನು ಆ ಸ್ತ್ರೀಯಿಂದ ಪೂಜಿತನಾಗಿ ಭೂಮಿಯಲ್ಲಿ ಪೀಠದಮೇಲೆ ಕುಳಿತುಕೊಂಡನು; ಶ್ರೀಕೃಷ್ಣನು ಅನರ್ಘ್ಯವಾಗಿ ನೂತನವಾದ ಹಾಸಿಗೆಯನ್ನೈದಿದನು; ಆ ಕುಬ್ಜೆಯು ಅಭ್ಯಂಜನವನ್ನು ಮಾಡಿಕೊಂಡು ಅರಿಸಿನವನ್ನು ತೊಡಕೊಂಡು ದಿವ್ಯದುಕೂಲವನ್ನುಟ್ಟು ಆಭರಣಗಳನ್ನು ಧರಿಸಿಕೊಂಡು ಗಂಧ ತಾಂಬೂಲ ಸುವಾಸನೆಗಳಿಂದ ಶರೀರವನ್ನಲಂಕರಿಸಿಕೊಂಡು ಲಜ್ಜಾಯುಕ್ತವಾದ ಮುಗುಳುನಗೆಯಿಂದಲೂ ಬಿಯ್ಯಾರದಿಂದಲೂ ಕಡೆಗಣ್ಣೋಟಗಳಿಂದಲೂ ಶ್ರೀಕೃಷ್ಣನ ಸಮೀಪಕ್ಕೆ ಬಂದಳು; ಕೃಷ್ಣನು ನೂತನಸಮಾಗಮಲಜ್ಜೆಯಿಂದ ಶಂಕಿತಳಾಗಿ ಸುಂದರಿಯಾದ ಆ ಸ್ತ್ರೀಯನ್ನು ಕಂಕಣಭೂಷಿತವಾದ ಹಸ್ತದಿಂದಿಡಿದು ಮಂಚದ ಮೇಲಕ್ಕೆ ಕರದು ಪುರಪ್ರವೇಶಕಾಲದಲ್ಲಿ ಲೇಪನದ್ರವ್ಯವನ್ನು ತನಗೆ ಕೊಟ್ಟದ್ದರಿಂದ ಲಬ್ಧವಾದ ಸ್ವಲ್ಪ ಪುಣ್ಯಮಹಿಮೆಯಿಂದ ಆ ಸ್ತ್ರೀಯೊಡನೆ ರಮಿಸಿದನು; ಆ ಸ್ತ್ರೀಯು ಕಾಮತಪ್ತಗಳಾದ ಕುಚಗಳು ವಕ್ಷಸ್ಥಳವು ನೇತ್ರಗಳು ಮೊದಲಾದವುಗಳ ತಾಪವನ್ನು ಭಗವಂತನ ಚರಣಾಲಿಂಗನದಿಂದ ಪರಿಹರಿಸಿಕೊಂಡು ಸುಂದರನಾದ ಕೃಷ್ಣನನ್ನು ತನ್ನ ಭುಜಗಳಿಂದ ವಕ್ಷಸ್ಥಳದಲ್ಲಿ ಅಪ್ಪಿಕೊಂಡು ಆನಂದಾನುಭವದಿಂದ ಕಾಮತಾಪವನ್ನು ಪರಿಹರಿಸಿಕೊಂಡು ಕೈವಲ್ಯನಾಥನಾಗಿ ದುರ್ಲಭನಾದ ಈಶ್ವರನನ್ನೈದಿಯೂ ಭಾಗ್ಯಹೀನಳಾಗಿ "ಎಲೈ ನಾಯಕನೆ, ನನ್ನ ಮನೆಯಲ್ಲಿ ಕೆಲವುದಿನಗಳಿದ್ದು ನನ್ನೊಡನೆ ರಮಿಸು! ಎಲೈ ಪದ್ಮಲೋಚನನೆ, ನಿನ್ನ ಸಂಗಮವನ್ನು ನಾನು ಬಿಡಲಾರೆನು" ಎಂದು ಯಾಚಿಸಿದಳು.

ಸರ್ವೇಶ್ವರನಾದ ಶ್ರೀಕೃಷ್ಣನು ಅವಳಿಗೆ ಕಾಮವರವನ್ನಿತ್ತು ಸಂತೋಷಪಡಿಸಿ ಉದ್ಧವನೊಡನೆ ತನ್ನ ದಿವ್ಯಗೃಹಕ್ಕೆ ಹೋದನು! ಸರ್ವೇಶ್ವರನಾಗಿ ಪೂಜಿಸಲು ದುರ್ಲಭನಾದ ವಿಷ್ಣುವನ್ನಾರಾಧಿಸಿಯೂ ಆ ಕುಬ್ಜೆಯು ತುಚ್ಛವಾದ ವಿಷಯಸುಖವನ್ನು ಯಾಚಿಸಿದಳೇ ಹೊರ್ತು ಪರಮಪುರುಷಾರ್ಥವಾದ ಮುಕ್ತಿಯನ್ನು ಯಾಚಿಸಲಿಲ್ಲವಾದಕಾರಣ ಅವಳು ಪುಣ್ಯಹೀನಳಾದಳು! ಅನಂತರದಲ್ಲಿ ಕೃಷ್ಣನು ಉದ್ಧವ ಬಲರಾಮರಿಂದ ಯುಕ್ತನಾಗಿ ಅಕ್ರೂರನ ಹಿತಾರ್ಥವಾಗಿ ಆತನ ಗೃಹಕ್ಕೆ ಹೋದನು; ಅಕ್ರೂರನು ಮನುಷ್ಯಶ್ರೇಷ್ಠರಾಗಿ ಬಂಧುಗಳಾದ ಕೃಷ್ಣರಾಮ ಉದ್ಧವರನ್ನು ನೋಡಿ ಪ್ರತ್ಯುತ್ಥಾನವನ್ನು ಮಾಡಿ ಸಂತುಷ್ಟನಾಗಿ ಆಲಿಂಗನಂಗೈದು ರಾಮಕೃಷ್ಣರಿಗೆ ನಮಸ್ಕರಿಸಿ ಅವರಿಂದ ನಮಸ್ಕರಿಸಲ್ಪಟ್ಟು ಪೀಠಗಳಲ್ಲಿ ಕುಳ್ಳಿರಿಸಿ ಯಥಾಶಾಸ್ತ್ರವಾಗಿ ಪೂಜಿಸಿ ಅವರ ಪಾದಪ್ರಕ್ಷಾಳನೋದಕವನ್ನು ಶಿರಸ್ಸಿನಲ್ಲಿ ಧರಿಸಿ ದಿವ್ಯವಸ್ತ್ರಗಳಿಂದಲೂ ಗಂಧಮಾಲ್ಯಾದಿಗಳಿಂದಲೂ ದಿವ್ಯಭೂಷಣಗಳಿಂದಲೂ ಸನ್ಮಾನಿಸಿ ಕೃಷ್ಣನ ಪಾದಗಳನ್ನು ತನ್ನ ತೊಡೆಯಮೇಲಿರಿಸಿಕೊಂಡು ತನ್ನ ಹಸ್ತಗಳಿಂದ ಮೆಲ್ಲಗೆ ಒತ್ತುತ ವಿನಯದಿಂದ ನಮ್ರನಾಗಿ ರಾಮಕೃಷ್ಣರನ್ನು ಕುರಿತು "ಎಲೈ ಮನುಷ್ಯೋತ್ತಮರುಗಳಿರಾ, ಪಾಪಿಷ್ಠನಾದ ಕಂಸನು ಸಪರಿವಾರನಾಗಿ ನಿಮ್ಮಿಂದ ಹತನಾದನು; ಆದರಿಂದ ಬಹಳ ಕ್ಷೇಮವಾಯಿತು; ಅತ್ಯಂತ ಕಷ್ಟವನ್ನನುಭವಿಸುತಿದ್ದ ನಮ್ಮ ಕುಲವು ನಿಮ್ಮಿಂದ ಉದ್ಧಾರವಾಯಿತು; ನೀವಿಬ್ಬರೂ ಪ್ರಧಾನಪುರುಷರು; ಜಗತ್ಕಾರಣರು; ಜಗನ್ಮಯರು; ನಿಮ್ಮಿಬ್ಬರನ್ನು ಹೊರ್ತು ದಿಕ್ಕ್ಯಾರೂ ಇಲ್ಲ!——ಎಲೈ ಶ್ರೀಕೃಷ್ಣನೆ, ಸ್ವಮಾಯಾಶಕ್ತಿಗಳಿಂದ ನಿನ್ನಿಂದ ಸೃಷ್ಟಿಸಲ್ಪಟ್ಟ ಜಗತ್ತಿನಲ್ಲಿ ಪ್ರವೇಶಿಸಿ ಬಹುಪ್ರಕಾರವಾಗಿ ಪ್ರತ್ಯಕ್ಷದಿಂದಲೂ ಶೃತಿಗಳಿಂದಲೂ ಗಮ್ಯವಾಗಿ ನೀನೆ ಇದ್ದೀ; ಪೃಥಿವ್ಯಾದಿ ಪಂಚಭೂತಗಳು ಸ್ವಕಾರ್ಯಗಳಾದ ಚರಾಚರ ಪ್ರಾಣಿಗಳಲ್ಲಿ ನಾನಾ ರೂಪಗಳಾಗಿ ಅನುವರ್ತಿಸಿರುವ ರೀತಿಯಲ್ಲಿ ನಿನ್ನಿಂದ ಸೃಷ್ಟಿತಗಳಾದ ಜಗತ್ತುಗಳಲ್ಲಿ ನೀನು ಸ್ವತಂತ್ರನಾಗಿ ಅಂತರಾತ್ಮನಾಗಿ ಬಹುರೂಪಗಳಿಂದ ತೋರುತಿದ್ದೀ!. ಎಲೈ ಶ್ರೀಕೃಷ್ಣನೆ, ನೀನು ಸತ್ವವು ರಜಸ್ಸು ತಮಸ್ಸು ಎಂಬ ಗುಣಾತ್ಮಕಗಳಾದ ಸ್ವಮಾಯಾಶಕ್ತಿಗಳಿಂದಲೂ ಕರ್ಮಗಳಿಂದಲೂ ಬದ್ಧನಾಗುವದಿಲ್ಲ; ಜ್ಞಾನಸ್ವರೂಪನಾದ ನಿನಗೆ ಬಂಧಕಾರಣವಾದ ಅವಿದ್ಯೆಯಿಲ್ಲ; ಆತ್ಮನಿಗೆ ದೇಹಾದಿ ಉಪಾಧಿಗಳಿಲ್ಲದ್ದರಿಂದ ಜನ್ಮವಿಲ್ಲ; ತನ್ಮೂಲಕವಾದ ಭೇದವೂ ಇಲ್ಲ; ಆದಕಾರಣ ಪರಮಾತ್ಮನಾದ ನಿನಗೆ ಬಂಧವೂ ಇಲ್ಲ—ಮೋಕ್ಷವೂ ಇಲ್ಲ; ನಿನ್ನ ಸ್ವರೂಪವನ್ನು ತಿಳಿಯಲಾರದ ನಮ್ಮ ಅವಿವೇಕವೇ ನಿನಗೆ ಬಂಧಮೋಕ್ಷಗಳನ್ನಾರೋಪಿಸುವದು; ಅನಾದಿಸಿದ್ಧವಾದ ವೇದಮಾರ್ಗ

ವು ಲೋಕಹಿತಾರ್ಥವಾಗಿ ನಿನ್ನಿಂದ ನಿರ್ಮಿಸಲ್ಪಟ್ಟಿದೆ; ಅಸಚ್ಛಾಸ್ತ್ರಗಳಾದ ಪಾಷಂಡಮಾರ್ಗಗಳಿಂದ ವೇದಮಾರ್ಗವು ಬಾಧಿತವಾಗುವಾಗ ನೀನು ಸ್ವಗುಣವನ್ನವಲಂಬಿಸಿ ಅವತರಿಸುತ್ತೀ; ಈಗ ನೀನು ಭೂಭಾರಪರಿಹಾರಾರ್ಥವಾಗಿ ಸ್ವಾಂಶದಿಂದ ವಸುದೇವನ ಮನೆಯಲ್ಲವತರಿಸಿ ಮಾನುಷಾಕಾರರಾಗಿ ಹುಟ್ಟಿರುವ ದುಷ್ಟಕ್ಷತ್ರಿಯರ ಸಂಬಂಧಿಗಳಾದ ಅಕ್ಷೋಹಿಣೀಶತಸಂಖ್ಯಾತಗಳಾದ ಸೇನೆಗಳನ್ನು ಸಂಹರಿಸಿ ಸುಕ್ಷತ್ರಿಯರ ವಂಶಕ್ಕೆ ಕೀರ್ತಿಯನ್ನುಂಟುಮಾಡುವೆ! ಎಲೈ ಸ್ವಾಮಿಯೆ, ಸಮಸ್ತ ದೇವತೆಗಳೂ ಪಿತೃಗಳೂ ಭೂತಗಳೂ ಮನುಷ್ಯರೂ ಅರಸುಗಳೂ ಏಕಸ್ವರೂಪವಾದ ಮೂರ್ತಿಯುಳ್ಳ ನೀನು ನಮ್ಮ ಮನೆಗೆ ಬಂದದ್ದರಿಂದ ನಮ್ಮ ಗೃಹವು ಪವಿತ್ರವಾಗಿ ಬಹು ಭಾಗ್ಯವುಳ್ಳದ್ದಾಯಿತು; ನಿನ್ನ ಪಾದಪ್ರಕ್ಷಾಳನೋದಕವು ಲೋಕತ್ರಯವನ್ನೂ ಪವಿತ್ರಮಾಡುವದು; ಅಂಥಾ ನೀನೇ ನಮ್ಮ ಮನೆಗೆ ಬಂದದ್ದರಿಂದ ನಾವು ಧನ್ಯರೆಂದು ಹೇಳತಕ್ಕದ್ದೇನು! ಭಕ್ತಪ್ರಿಯನಾಗಿ ಸತ್ಯಪ್ರಿಯನಾಗಿ ಸರ್ವಸುಹೃತ್ತಾಗಿ ಕೃತಜ್ಞನಾದ ನಿನ್ನನ್ನು ಹೊರತು ಮತ್ತೊಬ್ಬನನ್ನು ಬುದ್ಧಿವಂತನು ಭಜಿಸನು; ನೀನು ನಿನ್ನನ್ನು ಭಜಿಸುವ ಜನರಿಗೆ ಸಮಸ್ತ ಕಾಮಗಳನ್ನಿತ್ತು ವೃದ್ಧಿಕ್ಷಯಗಳಿಂದ ರಹಿತವಾದ ನಿಜಸ್ವರೂಪವನ್ನು ಕೊಡುವೆ; ಯೋಗೀಶ್ವರರಿಂದಲೂ ದೇವಪತಿಗಳಿಂದಲೂ ತಿಳಿಯಲಶಕ್ಯವಾದ ಸ್ವರೂಪವುಳ್ಳ ನೀನು ದೈವಬಲದಿಂದ ನಮಗೆ ಪ್ರಸನ್ನನಾದೆ! ಎಲೈ ಜನಾರ್ದನನೆ, ಪುತ್ರರು ಪತಿಗಳು ಧನವು ಮಿತ್ರರು ಗೃಹಗಳು ದೇಹವು ಮೊದಲಾದವುಗಳಲ್ಲಿ ಮೋಹವನ್ನುಂಟುಮಾಡುವ ನಿನ್ನ ಮಾಯೆಯನ್ನು ಛೇದಿಸಿ ನಮ್ಮನ್ನು ರಕ್ಷಿಸು!" ಎಂದು ಸ್ತುತಿಸಿದನು.

ಭಗವಂತನಾದ ಶ್ರೀಕೃಷ್ಣನು ಮಧುರವಾಕ್ಯಗಳಿಂದ ಮೋಹಿಸುವಂತೆ ಮಾಡುತ ಅಕ್ರೂರನನ್ನು ಕುರಿತು "ಎಲೈ ಮಹಾತ್ಮನಾದ ಅಕ್ರೂರನೆ, ನೀನು ನಮಗೆ ಗುರುವೂ ಚಿಕ್ಕಪ್ಪನೂ ಶ್ಲಾಘ್ಯನಾದ ಬಂಧುವೂ ಆಗಿದ್ದೀ; ನಾವು ನಿನ್ನಿಂದ ಪೋಷಿಸಲ್ಪಡತಕ್ಕವರು; ನಾವೆಲ್ಲರು ನಿನ್ನ ಪುತ್ರರು; ನಮ್ಮಲ್ಲಿ ನೀನು ದಯೆಮಾಡು; ಯೋಗ್ಯರಾಗಿ ಶ್ರೇಯಸ್ಕಾಮರಾದ ಪುರುಷರು ನಿನ್ನಂಥಾ ಪರಮಭಾಗವತರನ್ನು ಸೇವಿಸಬೇಕು; ನಿನ್ನಂಥಾ ಸಾಧುಜನರು ದೇವತೆಗಳಿಗೂ ಸೇವ್ಯರು; ದೇವತೆಗಳು ಸ್ವಾರ್ಥಪರರಾಗಿರುವರು; ಸಾಧುಗಳು ಪರಾರ್ಥವನ್ನೇ ಮಾಡುವರು; ಜಲರೂಪಗಳಾದ ತೀರ್ಥಗಳು ತೀರ್ಥಗಳಲ್ಲ; ಮೃಚ್ಛಿಲಾರೂಪರಾದ ದೇವತೆಗಳು ದೇವತೆಗಳಲ್ಲ; ಅವುಗಳನ್ನು ಸೇವಿಸಿದರೆ ಬಹುಕಾಲಾನಂತರದಲ್ಲಿ ಅನುಗ್ರಹವನ್ನು ಮಾಡುವವು; ನಿನ್ನಂಥಾ ಮಹಾತ್ಮರು ದರ್ಶನಮಾತ್ರದಿಂದಲೇ ಅನುಗ್ರಹವನ್ನು ಮಾಡುವರು! ಎಲೈ ಅಕ್ರೂರನೆ, ನೀನು ನಮ್ಮ ಮಿತ್ರರೊಳಗೆ ಪರಮಶ್ರೇಷ್ಠನು; ಪಾಂಡವರಿಗೆ ಶ್ರೇಯಸ್ಸನ್ನು ಮಾಡುವ ಇಚ್ಛೆಯಿಂದ ಅವರ ಯೋಗಕ್ಷೇಮವನ್ನು ತಿಳಿಯುವದಕ್ಕೆ ಹಸ್ತಿನಾಪುರಕ್ಕೆ ಹೋಗಬೇಕು; ಅಂಬಿಕಾಪುತ್ರನಾದ ಧೃತರಾಷ್ಟ್ರನು ದುಷ್ಪುತ್ರರಾದ ದುರ್ಯೋಧನಾದಿಗಳ ಸ್ವಾಧೀನನಾಗಿ ನೇತ್ರಹೀನನಾದ್ದರಿಂದ ದೀನಬುದ್ಧಿಯುಳ್ಳವನಾಗಿ ತನ್ನ ಭ್ರಾತೃಪುತ್ರರಾದ ಪಾಂಡವರಲ್ಲಿ ಸಮದೃಷ್ಟಿಯಿಂದಿರುವದಿಲ್ಲ; ಆದ್ದರಿಂದ ನೀನು ಅಲ್ಲಿಗೆ ಹೋಗಿ ಧೃತರಾಷ್ಟ್ರನ ನಡತೆಯನ್ನು ತಿಳಿದುಕೊಂಡು ಬಂದರೆ ಸುಹೃತ್ತುಗಳಾದ ಪಾಂಡವರಿಗೆ ಸುಖವುಂಟಾಗುವಹಾಗೆ ಮಾಡೋಣ" ಎಂದು ಆಜ್ಞಾಪಿಸಿ ಬಲರಾಮ ಉದ್ಧವರ ಸಹಿತವಾಗಿ ಸ್ವಗೃಹಕ್ಕೆ ಹೋದನು!

---

## ೪೯ ನೇ ಅಧ್ಯಾಯ.

### ಅಕ್ರೂರನು ಧೃತರಾಷ್ಟ್ರನಿಗೆ ನೀತಿ ಹೇಳಿದ್ದು.

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ಅಕ್ರೂರನು ಕೌರವೇಂದ್ರರ ಯಶಸ್ಸಿನಿಂದ ಅಂಕಿತವಾದ ಹಸ್ತಿನಾಪುರಕ್ಕೆ ಹೋಗಿ ಧೃತರಾಷ್ಟ್ರನು ಭೀಷ್ಮನು ವಿದುರನು ಕುಂತಿ ಬಾಹ್ಲೀಕನು ಸೋಮದತ್ತನು ದ್ರೋಣನು ಕೃಪನು ಕರ್ಣನು ದುರ್ಯೋಧನನು ಅಶ್ವತ್ಥಾಮನು ಪಾಂಡವರು ಮೊದಲಾದ ಮಿತ್ರರನ್ನು ಕಂಡು ಅವರೀವ ಯಾದ

ವರ ಯೋಗಕ್ಷೇಮವನ್ನು ಕೇಳಲ್ಪಟ್ಟು ಅವರ ಯೋಗಕ್ಷೇಮವನ್ನು ಪ್ರಶ್ನೆಗೈದು ಕೆಲವು ಮಾಸಗಳು ಅಲ್ಲೇ ವಾಸಮಾಡುತ ದುಷ್ಟರಾದ ಪುತ್ರರುಳ್ಳವನಾಗಿ ಸ್ವಲ್ಪಬಲನಾಗಿ ದುರ್ಜನರಾದ ಪುತ್ರರ ಚಿತ್ತಾನುವೃತ್ತಿಯಾದ ಧೃತರಾಷ್ಟ್ರನ ಚಿತ್ತವೃತ್ತಿಯನ್ನು ತಿಳಿಯುವದಕ್ಕಾಗಿ ಪರೀಕ್ಷಿಸಿದನು ; ಪಾಂಡವರ ತೇಜಸ್ಸು ಬಲವೀರ್ಯವಿನಯಾದಿ ಸದ್ಗುಣಗಳನ್ನೂ ಪಾಂಡವರಲ್ಲಿ ಪ್ರಜೆಗಳಿಗಿರುವ ಅನುರಾಗವನ್ನೂ ನೋಡಿ ಸಹಿಸಲಾರದೆ ಸಂಕಟಪಡುವ ಧೃತರಾಷ್ಟ್ರಪುತ್ರರಾದ ದುರ್ಯೋಧನಾದಿಗಳಿಂದ ಮಾಡಲ್ಪಟ್ಟ ವಿಷಮಿಶ್ರಾನ್ನದಾನವು ಸರ್ಪಗಳಿಂದ ಕಚ್ಚಿಸೋಣವು ಗಂಗೆಯಲ್ಲಿ ಭೀಮಸೇನನನ್ನು ಕಟ್ಟಿಹಾಕಿದ್ದು ಮೊದಲಾದ ಅನ್ಯಾಯವ್ಯಾಪಾರಗಳನ್ನು ಕುಂತಿಯೂ ವಿದುರನೂ ಅಕ್ರೂರನಿಗೆ ಹೇಳಿದರು ; ಕುಂತಿಯು ಭ್ರಾತೃವಾದ ಅಕ್ರೂರನನ್ನೈದಿ ತವರುಮನೆಯನ್ನು ಸ್ಮರಿಸಿಕೊಂಡು ಕಣ್ಣೀರು ತುಂಬಲು ಆತನನ್ನು ಕುರಿತು " ಎಲೈ ಸೌಮ್ಯನಾದ ಅಕ್ರೂರನೆ, ನಮ್ಮ ತಂದೆಗಳು ಅಣ್ಣತಮ್ಮಂದಿರು ಅಕ್ಕತಂಗಿಯರು ಸೋದರಳಿಯಂದಿರು ಸೊಸೆಯಂದಿರು ಸಖಿಯರು ಮೊದಲಾದವರು ನನ್ನನ್ನು ಸ್ಮರಿಸುತ್ತಾರೆಯೇ ? ನಮ್ಮ ಅಣ್ಣನಮಗನಾಗಿ ಭಗವಂತನಾಗಿ ಭಕ್ತವತ್ಸಲನಾಗಿ ದೀನರಕ್ಷಕನಾದ ಶ್ರೀಕೃಷ್ಣನೂ ಪದ್ಮನೇತ್ರನಾದ ಬಲರಾಮನೂ ಸೋದರತ್ತೆಯಾದ ನನ್ನ ಪುತ್ರರಾದ ಪಾಂಡವರನ್ನು ಸ್ಮರಿಸುತ್ತಾರೆಯೇ ? ತೋಳಗಳ ಸಮೂಹದಲ್ಲಿ ಶಿಕ್ಕಿರುವ ಹುಲ್ಲೆಯಂತೆ ಶತ್ರುಗಳ ಮಧ್ಯದಲ್ಲಿ ಶಿಕ್ಕಿ ದುಃಖಿತಳಾದ ನನ್ನನ್ನೂ ಪಿತೃಹೀನರಾದ ನನ್ನ ಪುತ್ರರನ್ನೂ ಶ್ರೀಕೃಷ್ಣನು ಮೃದುವಾಕ್ಯಗಳಿಂದ ಸಮಾಧಾನಗೈಯುತ್ತಾನೆಯೆ ? " ಎಂದು ಕುಶಲಪ್ರಶ್ನೆಯನ್ನು ಕೇಳಿ ಪರತತ್ವವನ್ನು ತಿಳಿದವಳಾದ್ದರಿಂದ ಕೃಷ್ಣನನ್ನು ಕುರಿತು " ಎಲೈ ಮಹಾಯೋಗಿಯಾದ ಶ್ರೀಕೃಷ್ಣನೆ, ಸರ್ವಾತ್ಮಕನೆ, ಜಗದ್ರಕ್ಷಕನೆ, ಗೋವಿಂದನೆ, ಶರಣಾಗತಳಾಗಿ ಬಾಲಕರಾದ ಪುತ್ರರೊಡನೆ ದುಃಖಪಡುವ ನನ್ನನ್ನು ರಕ್ಷಿಸು ; ಮೃತ್ಯುರೂಪವಾದ ಸಂಸಾರಭಯದಿಂದ ಪೀಡಿತರಾದ ಜನರಿಗೆ ಮೋಕ್ಷಪ್ರದವಾದ ನಿನ್ನ ಪಾದಪದ್ಮವನ್ನು ಹೊರತು ಮತ್ತೊಂದನ್ನು ರಕ್ಷಕವಾಗಿ ನಾನು ಕಾಣುವದಿಲ್ಲ ! ಎಲೈ ಪರಮಾತ್ಮನಾಗಿ ಯೋಗೀಶ್ವರನಾಗಿ ಯೋಗರೂಪನಾಗಿ ಶುದ್ಧನಾಗಿ ಪರಬ್ರಹ್ಮನಾದ ಶ್ರೀಕೃಷ್ಣನೆ, ನಿನ್ನನ್ನು ನಮಸ್ಕರಿಸುತ್ತೇನೆ ; ನಿನ್ನನ್ನೇ ನಾನು ಮರೆಹೊಕ್ಕಿದ್ದೇನೆ ! " ಎಂದು ಸ್ತುತಿಸಿದಳು.

ಎಲೈ ಅರಸೆ, ಈ ಪ್ರಕಾರವಾಗಿ ಸ್ವಜನವನ್ನೂ ಜಗದೀಶ್ವರನಾದ ಕೃಷ್ಣನನ್ನೂ ಸ್ಮರಿಸಿ ದುಃಖಿತಳಾಗಿ ನಿನ್ನ ಪ್ರಪಿತಾಮಹಿಯಾದ ಕುಂತಿಯು ರೋದನಗೈಯಲು ಸುಖದುಃಖಗಳನ್ನು ಸಮವಾಗೆಣಿಸುತ ಮಹಾ ಯಶಸ್ವಿಗಳಾದ ಅಕ್ರೂರ ವಿದುರರು ಕುಂತಿಯನ್ನು ಸಮಾಧಾನಗೈಯುತ "ಎಲೌ ಕುಂತಿಯೆ, ನಿನ್ನ ಪುತ್ರರು ಧರ್ಮಾದಿಗಳಿಂದ ಉತ್ಪನ್ನರಾದವರು ; ಮಹಾ ಸಮರ್ಥರು ; ನೀನು ವ್ಯಸನಪಡಬೇಡ" ಎಂದು ಹೇಳಿದರು ! ಅನಂತರದಲ್ಲಿ ಅಕ್ರೂರನು ಮಧುರಾಪುರಕ್ಕೆ ಹೋಗುವ ಯತ್ನವನ್ನು ಮಾಡಿಕೊಂಡು ಧೃತರಾಷ್ಟ್ರನ ಮನೆಗೆ ಹೋಗಿ ವಿಷಮನಾಗಿ ಪುತ್ರಾಧೀನನಾದ ಧೃತರಾಷ್ಟ್ರನನ್ನು ಕುರಿತು ಮಿತ್ರರ ಮಧ್ಯದಲ್ಲಿ ಬಂಧುಗಳಾದ ರಾಮಕೃಷ್ಣಾದಿಗಳಿಂದ ಹೇಳಲ್ಪಟ್ಟ ಮಾತುಗಳಿಂದ "ಎಲೈ ವಿಚಿತ್ರವೀರ್ಯನ ಪುತ್ರನಾದ ಧೃತರಾಷ್ಟ್ರನೆ, ನೀನು ಕುರುವಂಶಸ್ಥರಾದ ಅರಸರಿಗೆ ಕೀರ್ತಿಯನ್ನು ವೃದ್ಧಿಪಡಿಸುವವನು ; ನಿನ್ನ ತಮ್ಮನಾದ ಪಾಂಡುರಾಯನು ಸ್ವರ್ಗಸ್ಥನಾದಮೇಲೆ ಸಿಂಹಾಸನಾರೂಢನಾಗಿ ಧರ್ಮದಿಂದ ಭೂಮಿಯನ್ನು ಪರಿಪಾಲಿಸುತ ಸಚ್ಚರಿತ್ರೆಗಳಿಂದ ಪ್ರಜೆಗಳನ್ನು ಸಂತೋಷಪಡಿಸಿಕೊಂಡು ಸ್ವಜನರಲ್ಲಿ ಸಮದೃಷ್ಟಿಯುಳ್ಳವನಾಗಿದ್ದರೆ ಶ್ರೇಯಸ್ಸನ್ನೂ ಕೀರ್ತಿಯನ್ನೂ ಪಡೆಯುವೆ ; ಅದಕ್ಕೆ ವಿರುದ್ಧವಾಗಿ ಆಚರಿಸಿದರೆ ಅಪಕೀರ್ತಿಯನ್ನು ಪಡೆಯುವೆ ; ಆದ್ದರಿಂದ ಪಾಂಡವರಲ್ಲಿಯೂ ನಿನ್ನ ಪುತ್ರರಲ್ಲಿಯೂ ಸಮಭಾವದಿಂದಿರು ; ಲೋಕದಲ್ಲಿ ಯಾರಿಗೂ ಯಾರೊಡನೆಯಾದರು ನಿತ್ಯವಾದ ಸಹವಾಸವುಂಟಾಗುವದಿಲ್ಲ ; ಸ್ವದೇಹವೇ ನಿತ್ಯವಲ್ಲ ; ಇನ್ನು ಪತ್ನೀಪುತ್ರಾದಿಗಳನ್ನು ಹೇಳತಕ್ಕದ್ದೇನು ! ಸ್ವಕರ್ಮವಶದಿಂದ ಒಬ್ಬನೇ ಹುಟ್ಟಿ ಒಬ್ಬನೇ ಮೃತನಾಗುವನು ; ಒಬ್ಬನು ಸುಕೃತಫಲವನ್ನನುಭವಿಸುವನು ; ದುರ್ಬುದ್ಧಿಯುಳ್ಳ ಪುರುಷನು ಅಧರ್ಮದಿಂದ ಸಂಪಾದಿಸಿದ ಧನವನ್ನು ಪುತ್ರಾದಿಗಳು ತಾವು ಪೋಷ್ಯರೆಂದೂ ತಮ್ಮನ್ನು ಪೋಷಿಸಬೇಕೆಂದೂ ಅಪಹರಿಸು

ವರು ; ಮೋಹಪಾಶಬದ್ಧನಾದ ಪುರುಷನಿಂದ ಸಂಪಾದಿಸಲ್ಪಟ್ಟ ದ್ರವ್ಯದಿಂದ ಪೋಷಿಸಲ್ಪಡುವವರು ಸ್ವಕಾರ್ಯವಾದ ಮೇಲೆ ಅವನನ್ನು ತ್ಯಜಿಸುವರು ; ಪಾಪಗಳನ್ನು ಮಾಡಿ ಧನಾದಿಗಳನ್ನು ಸಂಪಾದಿಸಿ ಸ್ವಜನರೆಂಬ ದುರ್ಬುದ್ಧಿಯಿಂದ ಅವರಿಗೆ ಕೊಟ್ಟು ತಾನು ಪಾಪಭಾಗಕ್ಕಾಗಿ ನರಕಾದಿಗಳಿಗೆ ಒಬ್ಬನೆ ಹೋಗುವನು ; ಅವನ ಧನವನ್ನನುಭವಿಸಿದವರು ಸಂಗಡ ಹೋಗುವದಿಲ್ಲ ! ಎಲೈ ಅರಸಾದ ಧೃತರಾಷ್ಟ್ರನೆ, ಆದಕಾರಣ ಈ ಲೋಕವನ್ನು ಸ್ವಪ್ನಮನೋರಥಛಾಯಾಪನ್ನವಾಗಿ ನೋಡಿ ಸ್ವಬುದ್ಧಿಯಿಂದ ಚಿತ್ತವನ್ನು ನಿರೋಧಿಸಿ ಸರ್ವಸಮನಾಗಿ ಶಾಂತನಾಗಿರು'' ಅಂದನು.

ಆ ಮಾತನ್ನು ಕೇಳಿ ಧೃತರಾಷ್ಟ್ರನು '' ಎಲೈ ಸಾಮ್ಯನಾದ ಅಕ್ರೂರನೆ, ನೀನು ಶುಭವಾದ ವಾಕ್ಕುಗಳನ್ನು ಹೇಳುತ್ತೀ ; ಆ ವಾಕ್ಯಗಳನ್ನು ಕೇಳಿಯೂ ನಾನು ತೃಪ್ತನಾಗುವದಿಲ್ಲ ; ಮನುಷ್ಯನು ಅಮೃತವನ್ನು ಪಡದಂತೆ ನಿನ್ನ ಮಾತುಗಳನ್ನು ಮತ್ತು ಮತ್ತು ಕೇಳಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ ! ಎಲೈ ಸಾಮ್ಯನಾದ ಅಕ್ರೂರನೆ, ಸತ್ಯಪ್ರಿಯವಾಗಿ ಶುಭಕರವಾದ ನಿನ್ನ ವಾಕ್ಕು ಪುತ್ರಾನುರಾಗದಿಂದ ವಿಷಮವಾಗಿ ಚಂಚಲವಾದ ನನ್ನ ಚಿತ್ತದಲ್ಲಿ ಸ್ಥಿರವಾಗಿ ನಿಲ್ಲದೆ ಮಿಂಚಿನಂತೆ ತಿರೋದಾನವಾಗುತ್ತದೆ ; ಭೂಭಾರಪರಿಹಾರಾರ್ಥವಾಗಿ ಯದುಕುಲದಲ್ಲವತರಿಸಿರುವ ಭಗವಂತನ ಸಂಕಲ್ಪವನ್ನು ತಪ್ಪಿಸುವದಕ್ಕೆ ಯಾರು ಸಮರ್ಥರು ! ತಿಳಿಯಲಶಕ್ಯವಾದ ಮಾರ್ಗವುಳ್ಳ ತನ್ನ ಮಾಯೆಯಿಂದ ಈ ಪ್ರಪಂಚವನ್ನು ಸೃಷ್ಟಿಸಿ ಆ ಜಗತ್ತಿನಲ್ಲಿ ಪ್ರವಿಷ್ಟನಾಗಿ ಗುಣಕರ್ಮಗಳ ವಿಭಾಗವನ್ನು ಮಾಡುತ ತಿಳಿಯಲಶಕ್ಯವಾದ ಕ್ರೀಡಾಪ್ರಧಾನವಾದ ಸಂಸಾರಚಕ್ರಗತಿಯುಳ್ಳ ಪರಮೇಶ್ವರನಿಗೆ ನಮಸ್ಕಾರವು ! '' ಎಂದು ನುಡಿದನು.

ಆ ಬಳಿಕ ಧೃತರಾಷ್ಟ್ರನ ಅಭಿಪ್ರಾಯವನ್ನು ತಿಳಿದು ಅಕ್ರೂರನು ಮಿತ್ರರಿಂದ ಅನುಜ್ಞಾತನಾಗಿ ಮಧುರಾಪುರಕ್ಕೆ ತಿರಿಗಿಹೋಗಿ ಪಾಂಡವರ ವಿಷಯದಲ್ಲಿರುವ ಧೃತರಾಷ್ಟ್ರನ ಚಿತ್ತವೃತ್ತಿಯನ್ನು ರಾಮಕೃಷ್ಣರಿಗೆ ವಿಜ್ಞಾಪನಂಗೈದನು.

---

## ೫೦ ನೇ ಅಧ್ಯಾಯ.

## ದ್ವಾರಕಾಪಟ್ಟಣ ನಿರ್ಮಾಣವು.

ಎಲೈ ಅರಸೆ, ಕಂಸನು ಪರಲೋಕಯಾತ್ರೆಯನ್ನು ಮಾಡಿದನಂತರದಲ್ಲಿ ಅವನ ಪತ್ನಿಯರಾದ ಅಸ್ತಿಪ್ರಾಪ್ತಿಗಳೆಂಬವರಿಬ್ಬರು ದುಃಖಿತರಾಗಿ ನನ್ನ ತಂದೆಯಾದ ಜರಾಸಂಧನ ಮನೆಗೆ ಹೋಗಿ ಆತನನ್ನು ಕುರಿತು ತಮ್ಮ ವೈಧವ್ಯಕ್ಕೆ ಕಾರಣವಾದ ಕೃಷ್ಣನ ವ್ಯಾಪಾರವನ್ನು ಹೇಳಿದರು ; ಜರಾಸಂಧನು ಆ ಅಪ್ರಿಯವಾಕ್ಯಗಳನ್ನು ಕೇಳಿ ಶೋಕದಿಂದಲೂ ರೋಷದಿಂದಲೂ ಯುಕ್ತನಾಗಿ ಭೂಮಿಯಲ್ಲಿ ಯಾದವರೆಂಬ ಶಬ್ದವಿರದಂತೆ ಮಾಡಬೇಕೆಂದು ಇಪ್ಪತ್ತುಮೂರಕ್ಷೋಹಿಣಿ ಸಂಖ್ಯೆಯುಳ್ಳ ಸೇನೆಗಳನ್ನು ಕರೆದುಕೊಂಡು ಯಾದವರ ಸ್ಥಾನವಾದ ಮಧುರಾಪುರವನ್ನು ನಾಲ್ಕುದಿಕ್ಕುಗಳಲ್ಲಿಯೂ ಮುತ್ತಿಕೊಂಡನು ; ಮೇರೆತಪ್ಪಿ ಹಾಯುವ ಸಮುದ್ರದಂತಿದ್ದ ಆ ಸೇನೆಯಿಂದ ಪರಿವೃತವಾದ ಪುರವನ್ನೋಡಿ ಭಯಾಕುಲವಾದ ಸ್ವಜನವನ್ನು ನೋಡಿ ಲೀಲಾಮಾನುಷನಾಗಿ ಭಗವಂತನಾದ ಶ್ರೀಕೃಷ್ಣನು ತನ್ನ ಮನಸ್ಸಿನಲ್ಲಿ ಜರಾಸಂಧನಿಂದ ತರಲ್ಪಟ್ಟ ಈ ಸೇನೆಯು ಭೂಭಾರರೂಪವಾದ್ದರಿಂದ ಸಮಸ್ತ ಕ್ಷತ್ರಿಯರು ನೋಡುತ್ತಿರಲು ಅನೇಕಾಕ್ಷೋಹಿಣಿಸಂಖ್ಯಾತವಾಗಿ ಚತುರಂಗಯುಕ್ತವಾದ ಈ ಸೇನೆಯನ್ನು ಮಾತ್ರವೇ ಈಗ ಸಂಹರಿಸುತ್ತೇನೆ ; ಜರಾಸಂಧನನ್ನೀಗ ಸಂಹರಿಸುವದಿಲ್ಲ ; ಇವನು ಜೀವದಲ್ಲಿದ್ದರೆ ಇನ್ನು ಬಹು ಸೇನೆಗಳನ್ನು ಕೂಡಿಸಿ ತರುವನು ; ಅದನ್ನು ಸಂಹರಿಸಿ ಭೂಭಾರವನ್ನು ತಪ್ಪಿಸಬೇಕು ; ಭೂಭಾರಪರಿಹಾರಾರ್ಥವಾಗಿಯೂ ದುಷ್ಟನಿಗ್ರಹವನ್ನು ಮಾಡಿ ಸತ್ಪುರುಷರನ್ನು ರಕ್ಷಿಸಲೋಸುಗವೂ ಧರ್ಮಸಂಸ್ಥಾಪನಕ್ಕೋಸ್ಕರವೂ ಅಧರ್ಮವನ್ನು ನಿಗ್ರಹಿಸುವದಕ್ಕೋಸ್ಕರವೂ ನಾನು ಅವತರಿಸಿದ್ದೇನೆ '' ಎಂದು ಚಿಂತಿಸುತ್ತಿರಲು ಸಾರಥಿಸಮೇತವಾಗಿ

ಯುದ್ಧಸಾಧನಗಳಿಂದ ಯುಕ್ತವಾದ ರಥಗಳೆರಡು ಆಕಾಶದಿಂದ ಬಂದಿಳಿದವು; ದಿವ್ಯಗಳಾದ ಆಯುಧಗಳೂ ಬಂದವು; ಅವನ್ನು ನೋಡಿ ಕೃಷ್ಣನು ಬಲರಾಮನನ್ನು ಕುರಿತು "ಎಲೈ ಅಣ್ಣನಾದ ಬಲರಾಮನೆ, ನಿನ್ನನ್ನೇ ನಂಬಿರುವ ಯಾದವರಿಗೆ ಪ್ರಾಪ್ತವಾದ ವ್ಯಸನವನ್ನು ನೋಡಿದೆಯಾ! ಈ ರಥವೂ ಉತ್ತಮವಾದ ಆಯುಧಗಳೂ ನಿನಗಾಗಿ ಬಂದಿವೆ; ಈ ರಥವನ್ನೇರಿಕೊಂಡು ಪರಸೇನೆಯನ್ನು ಸಂಹರಿಸಿ ಯಾದವರನ್ನುದ್ಧರಮಾಡು! ಎಲೈ ಸಾಧುಗಳಿಗೆ ಸುಖಕರನಾದ ಬಲರಾಮನೆ, ಇದಕ್ಕೋಸ್ಕರವೇ ನಮ್ಮ ಅವತಾರವಲ್ಲವೆ! ಇಪ್ಪತ್ತುಮೂರು ಅಕ್ಷೋಹಿಣೀ ಸಂಖ್ಯಾತ ಸೇನಾರೂಪವಾದ ಭೂಭಾರವನ್ನು ಪರಿಹರಿಸು" ಎಂದು ನುಡಿದನು.

ಆ ಬಳಿಕ ರಾಮಕೃಷ್ಣರು ಆಲೋಚಿಸಿ ಕವಚಗಳನ್ನು ಧರಿಸಿ ರಥಾರೂಢರಾಗಿ ಆಯುಧಗಳನ್ನು ಧರಿಸಿಕೊಂಡು ಸ್ವಲ್ಪ ಸೇನೆಯನ್ನು ಕರೆದುಕೊಂಡು ಪುರದಿಂದ ಹೊರಟರು; ಆಗ ದಾರುಕನನ್ನು ಸಾರಥಿಯಾಗುಳ್ಳ ಶ್ರೀಕೃಷ್ಣನು ಶಂಖವನ್ನು ಧ್ವನಿಗೈದನು; ಆ ಮಹಾಧ್ವನಿಯಿಂದ ಶತ್ರುಸೇನೆಗಳಲ್ಲಿ ಮಹಾಭಯದಿಂದ ಕಂಪವೂ ಚಿಂತೆಯೂ ಉಂಟಾಯಿತು; ಜರಾಸಂಧನು ರಾಮಕೃಷ್ಣರನ್ನು ನೋಡಿ "ಎಲೇ ಪುರುಷಾಧಮನಾದ ಕೃಷ್ಣನೆ, ಬಾಲಕನಾದ ನಿನ್ನೊಡನೆ ನಾನು ಲಜ್ಜೆಯಿಂದ ಯುದ್ಧವನ್ನು ಮಾಡುವದಿಲ್ಲ! ಎಲೇ ಮೂಢಬುದ್ಧಿಯುಳ್ಳವನೆ, ಗೋಪಾಲಕನಾದ ನಿನ್ನೊಡನೆ ನಾನು ಹ್ಯಾಗೆ ಯುದ್ಧವನ್ನು ಮಾಡಲಿ! ನೀನು ಸ್ವಜನರನ್ನು ಸಂಹರಿಸುವದಕ್ಕೆ ಹೋಗು!——ಎಲೇ ಬಲರಾಮನೆ, ನಿನಗೆ ಶ್ರದ್ಧೆಯಿದ್ದರೆ ನನ್ನೊಡನೆ ಯುದ್ಧವನ್ನು ಮಾಡು; ಧೈರ್ಯವನ್ನವಲಂಬಿಸು; ನನ್ನ ಬಾಣಗಳಿಂದ ಛೇದಿಸಲ್ಪಟ್ಟ ದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋಗು; ಇಲ್ಲದಿದ್ದರೆ ನನ್ನನ್ನು ಸಂಹರಿಸು" ಅಂದನು.

ಆ ವಾಕ್ಯವನ್ನು ಕೇಳಿ ಭಗವಂತನು "ಎಲೈ ಜರಾಸಂಧನೆ, ಶೂರರಾದವರು ಆತ್ಮಪೌರುಷವನ್ನು ಹೇಳಿಕೊಳ್ಳುವದಿಲ್ಲ; ಪರಾಕ್ರಮವನ್ನೇ ತೋರಿಸುವರು; ಮರಣಭಯದಿಂದ ಪೀಡಿತನಾದ ನಿನ್ನ ಮಾತನ್ನು ನಾವು ಗ್ರಹಿಸುವದಿಲ್ಲ" ಅಂದನು.

ಕೃಷ್ಣನ ವಾಕ್ಯವನ್ನು ಕೇಳಿ ಜರಾಸಂಧನು ಮಹಾ ಬಲಿಷ್ಟವಾದ ಸೇನಾಸಮೂಹದೊಡನೆ ರಾಮಕೃಷ್ಣರಮೇಲೆ ನಡೆದು ರಥಗಳಿಂದಲೂ ಗಜಗಳಿಂದಲೂ ತುರಗಗಳಿಂದಲೂ ಪಾದಚಾರಿಗಳಿಂದಲೂ ಯುಕ್ತನಾಗಿ ಸೂರ್ಯಾಗ್ನಿಗಳನ್ನು ವಾಯುವು ಮೇಘಗಳಿಂದಲೂ ಧೂರೇಣುಗಳಿಂದಲೂ ಮುಚ್ಚುವಂತೆ ಸುತ್ತಿಕೊಂಡನು; ಆಗ ಗರುಡಧ್ವಜದಿಂದಲೂ ತಾಳಧ್ವಜದಿಂದಲೂ ಅಂಕಿತಗಳಾದ ಕೃಷ್ಣರಾಮರ ರಥಗಳನ್ನು ನೋಡುವದಕ್ಕಾಗಿ ಆ ಪುರಸ್ತ್ರೀಯರು ಗೋಪುರಗಳಮೇಲೆಯೂ ಉಪ್ಪರಿಗೆಗಳಮೇಲೆಯೂ ಹತ್ತಿ ನೋಡುತ ಶೋಕಪಡುತಿದ್ದರು! ಶ್ರೀಕೃಷ್ಣನು ಶತ್ರುಸೇನೆಗಳೆಂಬ ಮೇಘಗಳಿಂದ ವರ್ಷಿಸಲ್ಪಟ್ಟ ಬಾಣಗಳೆಂಬ ಉದಕಗಳಿಂದ ಪೀಡಿತವಾದ ತನ್ನ ಸೇನೆಯನ್ನು ನೋಡಿ ಸುರಾಸುರಾರ್ಚಿತವಾದ ಶಾರ್ಙ್ಗಧನುಸ್ಸನ್ನು ಟಂಕಾರಂಗೈದು ಬತ್ತಳಿಕೆಗಳಿಂದ ಬಾಣಗಳನ್ನು ತೆಗೆದು ಧನುಸ್ಸಿನಲ್ಲಿ ಸಂಧಾನಮಾಡಿ ಎಸೆದು ಶತ್ರುರಥಗಳನ್ನೂ ಗಜಗಳನ್ನೂ ಅಶ್ವಗಳನ್ನೂ ಪಾದಚಾರಿಗಳನ್ನೂ ಸಂಹರಿಸುತ ಅಲಾತಚಕ್ರದಂತೆ ತಿರುಗುತಿದ್ದನು; ಆತನ ಬಾಣಗಳ ಪ್ರಹಾರದಿಂದ ಕುಂಭಸ್ಥಳಗಳೊಡೆದು ಆನೆಗಳು ಬಿದ್ದವು; ಕತ್ತರಿಸಲ್ಪಟ್ಟ ಕಂಠಗಳುಳ್ಳವಾಗಿ ಕುದುರೆಗಳು ಬಿದ್ದವು; ರಥಗಳೂ ರಥಾಶ್ವಗಳೂ ಸಾರಥಿಗಳೂ ಧ್ವಜಗಳೂ ಆತನ ಬಾಣಪೀಡಿತಗಳಾಗಿ ಬಿದ್ದವು; ಪಾದಚಾರಿಗಳು ಛೇದಿಸಲ್ಪಟ್ಟ ಭುಜಗಳೂ ತೊಡೆಗಳೂ ಕಂಠಗಳೂ ಉಳ್ಳವರಾಗಿ ಬಿದ್ದರು. ಈಪ್ರಕಾರದಲ್ಲಿ ಛೇದಿಸಲ್ಪಟ್ಟ ಗಜ ತುರಗ ಪದಾತಿಗಳ ಶರೀರದಿಂದ ಸ್ರವಿಸುವ ರಕ್ತನದಿಗಳು ನೂರುಪ್ರಕಾರವಾಗಿ ಪ್ರವಹಿಸಿದವು; ಶೂರರ ಭುಜಗಳೆಂಬ ಸರ್ಪಗಳುಳ್ಳವಾಗಿ ಅಶ್ವಗಳೆಂಬ ಮೊಸಳೆಗಳುಳ್ಳವಾಗಿ ಬಿದ್ದಿರುವ ಆನೆಗಳ ದೇಹಗಳೆಂಬ ತಿಟ್ಟುಗಳುಳ್ಳವಾಗಿ ಶಿರಸ್ಸುಗಳೆಂಬ ಕೂರ್ಮಗಳುಳ್ಳವಾಗಿ ಹಸ್ತಗಳು ತೊಡೆಗಳೆಂಬ ಮತ್ಸ್ಯಗಳುಳ್ಳವಾಗಿ ಕೇಶಗಳೆಂಬ ಪಾಶಗಳೂ ಧನುಸ್ಸುಗಳೆಂಬ ತೆರೆಗಳೂ ಉಳ್ಳವಾಗಿ ಆಯುಧಗಳೆಂಬ ಗುಲ್ಮಗಳೂ ಗುರಾಣಿಗಳೆಂಬ ಸುಳಿಗಳೂ ಉಳ್ಳವಾಗಿ ಭಯಂಕರವಾದ ಆ ರಕ್ತನದಿಗಳು ಎಲ್ಲಾ

ಕಡೆಯುಲ್ಲಿಯೂ ಪ್ರವಹಿಸಿದವು! ಈ ರೀತಿಯಲ್ಲಿ ಕೃಷ್ಣರಾಮರೀರ್ವರಿಂದ ಸೃಷ್ಟಿಸಲ್ಪಟ್ಟ ರಕ್ತನದಿಗಳು ಮಹಾಮನಸ್ವಿಗಳಾದವರಿಗೆ ಸಂತೋಷಕರಗಳಾದವು ; ಮುಸಲಾಯುಧದಿಂದ ಶತ್ರುಗಳನ್ನು ಚೂರ್ಣೀಕರಿಸುವ ಅಮಿತ ಪರಾಕ್ರಮಶಾಲಿಯಾದ ಬಲರಾಮನಿಂದ ಅನೇಕ ರಕ್ತನದಿಗಳುಂಟುಮಾಡಲ್ಪಟ್ಟವು! ಎಲೈ ಅರಸೆ, ಸಮುದ್ರದಂತೆ ಭಯಂಕರವಾಗಿ ಜರಾಸಂಧನಿಂದ ರಕ್ಷಿತನಾದ ಆ ಮಹಾಸೇನೆಯು ವಸುದೇವನ ಪುತ್ರರಿಂದ ಕ್ಷಯವನ್ನೈದಿಸಲ್ಪಟ್ಟಿತು ; ಅದು ಜಗದೀಶ್ವರರಾದ ರಾಮಕೃಷ್ಣರಿಗೆ ಕ್ರೀಡಾರೂಪವಾಗಿತ್ತು ; ಅನಂತಗುಣನಾದ ಯಾವ ಭಗವಂತನು ಲೋಕತ್ರಯದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಲೀಲೆಯಿಂದಲೆ ಮಾಡುತ್ತಾನೆಯೊ ಅಂಥಾ ಭಗವಂತನಿಗೆ ಶತ್ರುಸೇನೆಯ ನಿಗ್ರಹವು ಆಶ್ಚರ್ಯಕರವಲ್ಲ ; ಆದಾಗ್ಯೂ ಮಾನುಷಲೀಲೆಯು ವರ್ಣಿಸಲ್ಪಡುವದು!

ಆ ಬಳಿಕ ವಿರಥನಾಗಿ ಸೇನೆಯನ್ನು ಕಳೆದುಕೊಂಡು ಪ್ರಾಣಮಾತ್ರದಿಂದ ಉಳಿದ ಮಹಾ ಬಲಿಷ್ಟನಾದ ಜರಾಸಂಧನನ್ನು ಬಲರಾಮನು ಸಿಂಹವನ್ನು ಜಯಿಸಿದ ಸಿಂಹದಂತೆ ಕೈಶರೆಹಿಡಿದು ವಾರುಣಪಾಶಗಳಿಂದಲು ಮಾನುಷಪಾಶಗಳಿಂದಲೂ ಕಟ್ಟುತಿರಲು ಶ್ರೀಕೃಷ್ಣನು ಭವಿಷ್ಯತ್ಕಾರ್ಯವನ್ನಾಲೋಚಿಸಿ ಕಟ್ಟುವದನ್ನು ತಪ್ಪಿಸಿ ಜರಾಸಂಧನನ್ನು ಬಿಡಿಸಿದನು! ಆ ಬಳಿಕ ಲೋಕನಾಥನಾದ ಕೃಷ್ಣನಿಂದ ಬಿಡಿಸಲ್ಪಟ್ಟ ಜರಾಸಂಧನು ಲಜ್ಜಿತನಾಗಿ ತಪಸ್ಸಿಗೋಸ್ಕರ ಸಂಕಲ್ಪವನ್ನು ಮಾಡಿಕೊಂಡು ಹೋಗುತಿರಲು ಮಾರ್ಗದಲ್ಲಿ ಕೆಲವು ಅರಸುಗಳಿಂದ ಪರಿಶುದ್ಧವಾದ ಅರ್ಥವುಳ್ಳ ನೀತಿವಾಕ್ಯಗಳಿಂದಲೂ ಲೌಕೀಕದೃಷ್ಟಾಂತಗಳಿಂದಲೂ ಧರ್ಮದಿಂದಲೂ ಕೂಡಿದ ವಾಕ್ಯಗಳಿಂದ ಪೂರ್ವಕರ್ಮದಿಂದ ತನಗೆ ಅಲ್ಪಬಲರಾದ ಯಾದವರಿಂದ ಪರಾಭವವುಂಟಾಯಿತೆಂದೂ ಅದರಿಂದ ಲಜ್ಜೆಪಡಕಲಸವಿಲ್ಲವೆಂದೂ ಬೋಧಿಸಲ್ಪಟ್ಟ ಸಮಸ್ತ ಸೈನ್ಯಗಳನ್ನೂ ಕಳಕೊಂಡು ಕೃಷ್ಣನಿಂದುಪೇಕ್ಷಿತನಾಗಿ ವ್ಯಸನಪಡುತ ಹೊರಟುಹೋದನು ; ಶ್ರೀಕೃಷ್ಣನು ತನ್ನ ಸೇನೆಯನ್ನು ರಕ್ಷಿಸಿಕೊಂಡು ಶತ್ರುಗಳನ್ನು ಸಂಹರಿಸಿ ದೇವತೆಗಳಿಂದ ಪುಷ್ಪವೃಷ್ಟಿಯನ್ನು ಕರೆಯಿಸಿಕೊಳ್ಳುತ ಶ್ಲಾಘಿತನಾಗಿ ವ್ಯಸನರಹಿತರಾಗಿ ಸಂತೋಷಯುಕ್ತರಾದ ಮಧುರಾಪುರವಾಸಿಗಳಿಂದ ಸ್ತುತಿಸಲ್ಪಡುತ ಸೂತಮಾಗಧರಿಂದ ಗಾನಂಗೈಯಲ್ಪಡುತ ಜಯವುಳ್ಳವನಾಗಿ ಮಧುರಾಪುರವನ್ನು ಪ್ರವೇಶಮಾಡಲು ಶಂಖಗಳೂ ದುಂದುಭಿಗಳೂ ಧ್ವನಿಗೈದವು ; ಭೇರಿಗಳು ನಾನಾಪ್ರಕಾರವಾಗಿ ನಾದಂಗೈದವು ; ವೀಣೆವೇಣು ಮೃದಂಗಗಳು ಬಾರಿಸಲ್ಪಟ್ಟವು! ಸುಗಂಧಗಳಿಂದ ನೆನಯಿಸಲ್ಪಟ್ಟ ಮಾರ್ಗವುಳ್ಳದ್ದಾಗಿ ಪತಾಕಗಳಿಂದ ಅಲಂಕೃತವಾಗಿ ಬ್ರಾಹ್ಮಣರ ವೇದಘೋಷದಿಂದ ವ್ಯಾಪ್ತವಾಗಿ ಅನೇಕವಾಗಿ ಕಟ್ಟಲ್ಪಟ್ಟ ತೋರಣಗಳುಳ್ಳದ್ದಾಗಿ ಸಂತುಷ್ಟವಾದ ಜನವುಳ್ಳದ್ದಾಗಿ ಶೋಭಿತವಾದ ಆ ಪಟ್ಟಣವನ್ನು ಪ್ರವೇಶಿಸಿ ಶ್ರೀಕೃಷ್ಣನು ಪುಷ್ಪಗಳಿಂದಲೂ ದಧಿಯಿಂದಲೂ ಅಕ್ಷತೆಗಳಿಂದಲೂ ಸ್ತ್ರೀಯರಿಂದಲೂ ಪೂಜಿತನಾಗಿ ಪ್ರೀತಿಯಿಂದ ವಿಕಸಿತವಾದ ನೇತ್ರಗಳುಳ್ಳ ಸ್ತ್ರೀಸಮೂಹಗಳು ನೋಡುತ್ತಿರಲು ಅರಮನೆಯನ್ನು ಪ್ರವೇಶಿಸಿ ಯುದ್ಧರಂಗದಲ್ಲಿ ಸಿಕ್ಕಿದವರ ಶರೀರಗಳಿಂದ ಕಳಚಿಬಿದ್ದ ರತ್ನಭೂಷಣಗಳನ್ನೂ ಅನೇಕ ಧನವನ್ನೂ ಅರಸಾದ ಉಗ್ರಸೇನನಿಗೆ ಕೊಟ್ಟನು!

ಈ ರೀತಿಯಲ್ಲಿ ಜರಾಸಂಧನು ಅನೇಕ ಅಕ್ಷೋಹಿಣೀ ಬಲವನ್ನು ತೆಗೆದುಕೊಂಡು ಬರುತ ಹದಿನೇಳುಸಾರಿ ಯುದ್ಧವನ್ನು ಮಾಡಿ ಯಾದವರಿಂದ ಪರಾಜಿತನಾಗಿ ಹೋದನು ; ಹದಿನೆಂಟನೇಸಾರಿ ಯುದ್ಧಸನ್ನಾಹವನ್ನು ಮಾಡಿಕೊಂಡು ಬರುವದರೊಳಗಾಗಿ ನಾರದಋಷಿಯಿಂದ ಪ್ರೇರಿತನಾದ ಕಾಲಯವನನು ಮೂರುಕೋಟಿ ಮ್ಲೇಚ್ಛರ ಸಮೇತನಾಗಿ ಬಂದು ಮಧುರಾಪುರವನ್ನು ಮುತ್ತಿಕೊಂಡನು ; ಲೋಕತ್ರಯದಲ್ಲಿಯೊ ಎದುರಿಲ್ಲದ ಕಾಲಯವನನು ಯಾದವರನ್ನು ತನಗೆ ಸಮಾನರೆಂದೆಣಿಸಿ ಬರಲು ಶ್ರೀಕೃಷ್ಣನು ಬಲರಾಮನನ್ನು ಕುರಿತು "ಯಾದವರಿಗೆ ಜರಾಸಂಧನಿಂದಲೂ ಕಾಲಯವನನಿಂದಲೂ ಮಹಾವ್ಯಸನವು ಪ್ರಾಪ್ತವಾಯಿತು ; ಕಾಲಯವನನು ಬಂದು ಪುರವನ್ನು ಮುತ್ತಿಕೊಂಡಿದ್ದಾನೆ ; ಜರಾಸಂಧನು ಈಹೊತ್ತೋ ನಾಳೆಯೋ ಬರುತ್ತಾನೆ ; ನಾವಿಬ್ಬರು ಕಾಲಯವನನೊಡನೆ ಯುದ್ಧವನ್ನು ಮಾಡುತ್ತಿದ್ದರೆ ಜರಾಸಂಧನು ಬಂದು ನಮ್ಮ ಬಂಧುಗಳಾದ ಯಾದವರನ್ನು ಸಂಹರಿಸುವನು ; ಜಯಿಸಿದ್ದರೆ ಎಲ್ಲರನ್ನು ಸೆರೆಹಿಡಿದು ತನ್ನ ಪಟ್ಟಣಕ್ಕೆ ಸಾಗಿಸಿಕೊಂಡು ಹೋಗುವನು ; ಆದಕಾರಣ ಶತ್ರುಗಳಿಗೆ ಪ್ರ

ವೇಶಿಸಲು ಯೋಗ್ಯವಲ್ಲದ ಒಂದು ದುರ್ಗಮಸ್ಥಾನವನ್ನು ನಿರ್ಮಿಸಿ ಅದರಲ್ಲಿ ನಮ್ಮ ಬಂಧುಗಳೆಲ್ಲರನ್ನು ನಿಲ್ಲಿಸಿ ನಾವು ಕಾಲಯವನನನ್ನು ಸಂಹರಿಸೋಣ'' ಎಂದು ನುಡಿದು ಸಮುದ್ರಮಧ್ಯದಲ್ಲಿ ಸರ್ವಾಶ್ಚರ್ಯಸ್ಥಾನವಾಗಿ ದ್ವಾದಶ ಯೋಜನ ವಿಸ್ತೀರ್ಣವುಳ್ಳ ಒಂದು ನಗರವನ್ನು ನಿರ್ಮಾಣಮಾಡಿಸಿದನು ; ವಿಶ್ವಕರ್ಮನ ಶಿಲ್ಪಿಸಾಮರ್ಥ್ಯವೆಲ್ಲವು ಆ ಪುರದಲ್ಲಿ ತೋರಿಸಲ್ಪಟ್ಟಿತು; ಅದು ರಾಜಬೀದಿಗಳೂ ಚಿಕ್ಕಬೀದಿಗಳೂ ಅಂಗಳಗಳೂ ಯಥಾಯೋಗ್ಯವಾಗುಳ್ಳದ್ದಾಗಿ ಕಲ್ಪವೃಕ್ಷಗಳಿಂದಲೂ ಉದ್ಯಾನಗಳಿಂದಲೂ ವಿಚಿತ್ರವಾದ ತೋಟಗಳಿಂದಲೂ ಶೋಭಿತವಾಗಿ ಅಂತರಿಕ್ಷವ್ಯಾಪ್ತವಾದ ಸುವರ್ಣಶೃಂಗಗಳಿಂದಲೂ ಸ್ಫಟಿಕಮಯಗಳಾದ ಮಾಳಿಗೆಗಳಿಂದಲೂ ರಮ್ಯವಾಗಿ ಸುವರ್ಣಕಲಶಗಳಿಂದ ಅಲಂಕೃತವಾದ ರಜತಗೃಹಗಳಿಂದಲೂ ಹಿತ್ತಾಳೆ ಗೃಹಗಳಿಂದಲೂ ಕುದುರೇಲಾಯಗಳಿಂದಲೂ ಗಜಬಂಧನಸ್ಥಾನಗಳಿಂದಲೂ ಮರಕತರತ್ನಮಯವಾದ ದೇವಸ್ಥಾನಗಳಿಂದಲೂ ಶೋಭಿತವಾಗಿ ಚತುರ್ವರ್ಣಜನರಿಂದ ಪೂರಿತವಾಗಿ ಯಾದವರ ಗೃಹಗಳಿಂದಲೂ ಕೃಷ್ಣರಾಮರ ಗೃಹಗಳಿಂದಲೂ ಶೋಭಿತವಾಗಿತ್ತು; ದೇವೇಂದ್ರನು ಸುಧರ್ಮನಾಮಕವಾದ ತನ್ನ ಆಸ್ಥಾನಮಂಟಪವನ್ನೂ ಪಾರಿಜಾತವನ್ನೂ ಶ್ರೀಕೃಷ್ಣನಿಗೆ ಕಳುಹಿಸಿದನು ; ಆ ದೇವಸಭಾಸ್ಥಾನದಲ್ಲಿ ವಾಸಮಾಡುವ ಮನುಷ್ಯನು ಕ್ಷುತ್ಪಿಪಾಸಾದಿ ಮನುಷ್ಯಧರ್ಮಗಳನ್ನು ಬಿಡುವನು ; ವರುಣನು ಶ್ಯಾಮವರ್ಣವಾಗಿ ಒಂದು ಕಿವಿಯುಳ್ಳವಾಗಿ ಶುಭ್ರದೇಹವುಳ್ಳವಾಗಿ ಮನೋವೇಗವುಳ್ಳ ಸಾವಿರ ಉತ್ತಮಾಶ್ವಗಳನ್ನು ಕೊಟ್ಟನು ; ಕುಬೇರನು ಅಕ್ಷಯವಾದ ಎಂಟು ನಿಧಿಗಳನ್ನು ಕಳುಹಿಸಿದನು ; ಮಿಕ್ಕ ಲೋಕಪಾಲಕರು ತಮ್ಮ ತಮ್ಮ ಧನಗಳನ್ನು ಕಳುಹಿಸಿದರು ; ಪೂರ್ವದಲ್ಲಿ ದಿಕ್ಪಾಲಕರಿಗೆ ಆಧಿಪತ್ಯವನ್ನಿತ್ತಾಗ ಭಗವಂತನಿಂದ ಯಾವ ವಸ್ತುಗಳು ಕೊಡಲ್ಪಟ್ಟವೊ ಆ ವಸ್ತುಗಳೆಲ್ಲವನ್ನು ಶ್ರೀಹರಿಯು ಭೂಮಿಗೆ ಬಂದ ಸಮಯದಲ್ಲಿ ಅವರು ತಂದು ಒಪ್ಪಿಸಿದರು ; ಭಗವಂತನಾದ ಶ್ರೀಕೃಷ್ಣನು ಆ ಪುರಕ್ಕೆ ಸ್ವಜನರೆಲ್ಲರನ್ನು ತನ್ನ ಯೋಗಸಾಮರ್ಥ್ಯದಿಂದ ಕರೆದುಕೊಂಡುಹೋಗಿರಿಸಿ ತಾನು ಮಥುರಾಪುರಕ್ಕೆ ತಿರಿಗಿ ಬಂದು ಬಲರಾಮನನ್ನು ಅಲ್ಲಿದ್ದು ಪ್ರಜೆಗಳನ್ನು ಪಾಲಿಸಹೇಳಿ ನಿರಾಯುಧನಾಗಿ ಪುರದ್ವಾರದಿಂದ ಹೊರಕ್ಕೆ ಹೊರಟನು.

---

## ೫೧ ನೇ ಅಧ್ಯಾಯ.

### ಕಾಲಯವನನ ವಧೆ—ಮುಚುಕುಂದನ ವೃತ್ತಾಂತವು.

ಎಲೈ ಅರಸೆ, ಅನಂತರದಲ್ಲಿ ಮಥುರಾಪುರದಿಂದ ನಿರಾಯುಧನಾಗಿ ಹೊರಟುಬರುತ ಉದಯಿಸಿಬರುವ ಪೂರ್ಣಚಂದ್ರನಂತೆ ನೋಡುವದಕ್ಕೆ ಮನೋಹರನಾಗಿ ಶಾಂತನಾಗಿ ಪೀತಾಂಬರಧಾರಿಯಾಗಿ ಶ್ರೀವತ್ಸಚಿಹ್ನಿತನಾಗಿ ಕೌಸ್ತುಭದಿಂದ ಪ್ರಕಾಶಿಸುವ ಕಂಠವುಳ್ಳವನಾಗಿ ಸ್ಥೂಲವಾಗಿ ದೀರ್ಘವಾದ ನಾಲ್ಕು ಭುಜಗಳುಳ್ಳವನಾಗಿ ಪದ್ಮಲೋಚನನಾಗಿ ನಿರಂತರದಲ್ಲಿಯು ಪ್ರಮುದಿತವಾಗಿ ಕಾಂತಿಯುಕ್ತವಾದ ಸುಂದರಕಪೋಲಗಳುಳ್ಳವನಾಗಿ ಮುಗುಳುನಗೆಯುಳ್ಳವನಾಗಿ ಮಕರಕುಂಡಲವನ್ನು ಧರಿಸಿದ ದಿವ್ಯಮುಖವುಳ್ಳವನಾಗಿ ಒಪ್ಪುತಿದ್ದ ಶ್ರೀಕೃಷ್ಣನನ್ನು ನೋಡಿ ಕಾಲಯವನನು “ ಈತನೇ ಸಾಕ್ಷಾತ್ ವಾಸುದೇವನು ; ಶ್ರೀವತ್ಸಲಾಂಛನನಾಗಿ ಚತುರ್ಭುಜನಾಗಿ ಪದ್ಮಲೋಚನನಾಗಿ ವನಮಾಲಾಲಂಕೃತನಾಗಿದ್ದಾನೆ ; ನಾರದಮಹರ್ಷಿಯಿಂದ ಹೇಳಲ್ಪಟ್ಟ ಲಕ್ಷಣಗಳೆಲ್ಲವು ಈತನಲ್ಲಿವೆ ; ಆದಕಾರಣ ಈತನು ಸಾಕ್ಷಾತ್ನಾರಾಯಣನೇ ಅಲ್ಲದೆ ಮತ್ತೊಬ್ಬನಲ್ಲ'' ಎಂದು ಮನಸ್ಸಿನಲ್ಲೆಣಿಸಿ ಆತನು ನಿರಾಯುಧನಾಗಿರುವದರಿಂದ ತಾನೂ ನಿರಾಯುಧನಾಗಿ ಆತನೊಡನೆ ಯುದ್ಧವನ್ನು ಮಾಡಬೇಕೆಂದು ನಿಶ್ಚಯಿಸಿ ಪರಾಙ್ಮುಖನಾಗಿ ಓಡಿಹೋಗುತ ಯೋಗಿಗಳಿಗೂ ಪಡೆಯಲಶಕ್ಯನಾದ ಶ್ರೀಕೃಷ್ಣನನ್ನು ಹಿಡಿಯಲೋಸುಗ ಹಿಂಬಟ್ಟಿದನು ; ಶ್ರೀಕೃಷ್ಣನು ಅವನಿಗೆ ಸಿಕ್ಕದೆ ತಪ್ಪಿಸಿಕೊಂಡು ಬಹುದೂರಪರ್ಯಂತವು ಕಾಲಯವನನನ್ನು ಕರೆದುಕೊಂಡು ಹೋಗಿ ಒಂದು ಪರ್ವತದ ಗುಹೆಯೊಳಗೆ ಪ್ರವೇಶಿಸಿದನು ; ಕಾಲಯವನನು “ ಎಲೈ ಕೃಷ್ಣನೆ, ಯದುಕುಲದಲ್ಲಿ ಹುಟ್ಟಿದವನೆ, ನಿನಗೆ

ಪಲಾಯನವು ಉಚಿತವಲ್ಲ ; ನಿಂತುಕೊ" ಎಂದು ಹೇಳನಂಗೈಯುತ ಅಟ್ಟಿಕೊಂಡು ಹೋಗಿ ಪಾಪಿಷ್ಠನಾದ್ದರಿಂದ ಕೃಷ್ಣನನ್ನು ಹಿಡಿಯಲಾರದೆ ಶ್ರೀಕೃಷ್ಣನು ಗುಹೆಯನ್ನು ಪ್ರವೇಶಿಸಲು ತಾನೂ ಗುಹೆಯನ್ನು ಹೊಕ್ಕು ಅಲ್ಲಿ ಮಲಗಿದ್ದ ಬಬ್ಬ ಪುರುಷನನ್ನು ಕಂಡು ಕೃಷ್ಣನು ತನ್ನನ್ನು ದೂರವಾಗಿ ಕರತಂದು ಅಲ್ಲಿ ಏನನ್ನೂ ಅರಿಯದವನಂತೆ ಮಲಗಿಧಾನೆಂದೆಣಿಸಿ ಅಲ್ಲಿ ಮಲಗಿದ್ದ ಪುರುಷನನ್ನು ಕಾಲಿಂದ ಒದ್ದನು ; ಬಹುಕಾಲದಿಂದ ಮಲಗಿದ್ದ ಆ ಪುರುಷನು ಎದ್ದು ಕಣ್ಣುಗಳನ್ನುಜ್ಜಿಕೊಂಡು ತೆರದು ದಿಕ್ಕುಗಳನ್ನು ನೋಡಿ ಪಾರ್ಶ್ವದಲ್ಲಿ ನಿಂತಿದ್ದ ಕಾಲಯವನನನ್ನು ನೋಡಲು ಕೋಪಿಷ್ಟನಾದ ಆ ಪುರುಷನ ದೃಷ್ಟಿಘಾತದಿಂದ ದೇಹಜನ್ಯವಾದ ಅಗ್ನಿಯಿಂದ ದಗ್ಧನಾಗಿ ಕಾಲಯವನನು ಭಸ್ಮರೂಪನಾದನು !

[ಈ ಪ್ರಕಾರವಾಗಿ ನುಡಿದ ಶುಕಮುನೀಶ್ವರನ ವಾಕ್ಕನ್ನು ಕೇಳಿ ಪರೀಕ್ಷಿದ್ರಾಯನು—ಎಲೈ ಬ್ರಾಹ್ಮಣೋತ್ತಮನಾದ ಶುಕಾಚಾರ್ಯನೆ, ಅಲ್ಲಿ ಮಲಗಿದ್ದ ಪುರುಷನು ಯಾರು ? ಯಾರ ಮಗನು ? ಎಂಥಾ ಸಾಮರ್ಥ್ಯವುಳ್ಳವನು ? ಕಾಲಯವನನನ್ನು ಸಂಹರಿಸಿದ ತೇಜಸ್ಸು ಎಲ್ಲಿಯದು ? ಏನುಕಾರಣ ಗುಹೆಯಲ್ಲಿ ಮಲಗಿದ್ದನು ?—ಎಂದು ಕೇಳಿದನು.]

ಶುಕಮುನೀಶ್ವರನು ಆತನನ್ನು ಕುರಿತು—ಎಲೈ ಅರಸೆ, ಆ ಪುರುಷನು ಇಕ್ಷ್ವಾಕುರಾಯನ ವಂಶದಲ್ಲಿ ಹುಟ್ಟಿದ ಮಾಂಧಾತರಾಯನ ಪುತ್ರನು ; ಮಹಾತ್ಮನು ; ಮುಚುಕುಂದನೆಂಬ ನಾಮಧೇಯವುಳ್ಳವನು ; ಬ್ರಾಹ್ಮಣಪ್ರಿಯನು ; ಸತ್ಯಪ್ರತಿಜ್ಞೆಯುಳ್ಳವನು ; ಅಸುರರಿಂದ ಭಗ್ನರಾಗಿ ರಕ್ಷಕನನ್ನು ಕಾಣದಿದ್ದ ಇಂದ್ರಾದಿಗಳಿಂದ ತಮ್ಮನ್ನು ರಕ್ಷಿಸಲೋಸುಗ ಪ್ರಾರ್ಥಿತನಾಗಿ ಬಹುಕಾಲಪರ್ಯಂತವು ಅಸುರರನ್ನು ಸಂಹರಿಸಿ ದೇವತೆಗಳನ್ನು ರಕ್ಷಿಸಿದನು ; ಅನಂತರದಲ್ಲಿ ಕುಮಾರಸ್ವಾಮಿಯನ್ನು ದೇವಸೇನಾಪತಿಯಾಗಿ ಪಡೆದು ದೇವತೆಗಳು ಮುಚುಕುಂದನನ್ನು ಕುರಿತು "ಎಲೈ ಮಹಾವೀರನಾದ ಮುಚುಕುಂದರಾಯನೆ, ಮಹಾ ಕಷ್ಟವನ್ನು ಪರಿಹರಿಸಿ ನೀನು ನಮ್ಮನ್ನು ರಕ್ಷಿಸಿದೆ ; ನಿಷ್ಕಂಟಕವಾದ ರಾಜ್ಯವನ್ನು ಬಿಟ್ಟು ಭೂಲೋಕವನ್ನು ಪರಿತ್ಯಜಿಸಿ ನಮ್ಮ ಸಂರಕ್ಷಣಾರ್ಥವಾಗಿ ಸರ್ವಭೋಗಗಳನ್ನೂ ಬಿಟ್ಟೆ! ಎಲೈ ಮುಚುಕುಂದರಾಯನೆ, ನಿನ್ನ ಪುತ್ರರು ಪತ್ನಿಯರು ಜ್ಞಾತಿಗಳು ಮಂತ್ರಿಗಳು ನಿನ್ನ ಸಮಾನವಯಸ್ಕರಾದ ಪ್ರಜೆಗಳು ಮೊದಲಾದವರೆಲ್ಲರು ಕಾಲಾಧೀನರಾದರು ; ಕಾಲಾತ್ಮಕನಾಗಿ ಭಗವಂತನಾದ ಈಶ್ವರನು ಬಲಿಷ್ಠರಿಗೂ ಬಲಿಷ್ಠನು ; ಅಂಥಾ ಕಾಲಪುರುಷನು ಪ್ರಜೆಗಳನ್ನು ಲೋಕಾಂತರಗಳಿಗೆ ಸಂಚಾರಮಾಡಿಸುತ ಗೋಪಾಲಕನು ಗೋವುಗಳನ್ನು ಸಂಚಾರಮಾಡಿಸುವಂತೆ ಕ್ರೀಡಿಸುತ್ತಾನೆ! ಎಲೈ ಮುಚುಕುಂದನೆ, ಮೋಕ್ಷವುಹೊರ್ತಾಗಿ ಮಿಕ್ಕ ಯಾವ ವರಗಳನ್ನಾದರೂ ಕೇಳು ; ನಾವು ಕೊಡುತ್ತೇವೆ ; ಈಶ್ವರನಾಗಿ ಭಗವಂತನಾದ ಶ್ರೀಹರಿ ಒಬ್ಬನೇ ಮೋಕ್ಷವನ್ನು ಕೊಡುವದಕ್ಕೆ ಸಮರ್ಥನು" ಎಂದು ಹೇಳಿದರು.

ಮಹಾ ಕೀರ್ತಿಶಾಲಿಯಾದ ಮುಚುಕುಂದನು ಆ ದೇವತೆಗಳಿಗೆ ನಮಸ್ಕರಿಸಿ ಆ ಗುಹೆಯನ್ನು ಪ್ರವೇಶಿಸಿ ದೇವತೆಗಳಿಂದ ಕೊಡಲ್ಪಟ್ಟ ನಿದ್ರೆಯಿಂದ ಶಯನಂಗೈದನು ! ಎಲೈ ಅರಸೆ, ಈರೀತಿಯಲ್ಲಿ ಮುಚುಕುಂದನ ನೇತ್ರ ತೇಜಸ್ಸಿನಿಂದ ಕಾಲಯವನನು ಭಸ್ಮಭೂತನಾದಮೇಲೆ ಭಗವಂತನಾದ ಶ್ರೀಕೃಷ್ಣನು ಬುದ್ಧಿಶಾಲಿಯಾದ ಮುಚುಕುಂದನಿಗೆ ನಿಜರೂಪವನ್ನು ತೋರಿಸಿದನು ; ನೀಲಮೇಘಶ್ಯಾಮನಾಗಿ ಪೀತಕೌಶೇಯಧಾರಿಯಾದ ಶ್ರೀಕೃಷ್ಣನನ್ನು ಮುಚುಕುಂದನು ಸಾಕ್ಷಾತ್ ಭಗವಂತನೆಂದು ತಿಳಿದನು ; ಶ್ರೀವತ್ಸನೆಂಬ ಚಿಹ್ನೆಯಿಂದ ಅಲಂಕೃತವಾದ ವಕ್ಷಸ್ಥಳವುಳ್ಳವನಾಗಿ ಹೊಳೆಯುವ ಕೌಸ್ತುಭರತ್ನದಿಂದ ಪ್ರಕಾಶಿಸುವವನಾಗಿ ನಾಲ್ಕು ಭುಜಗಳುಳ್ಳವನಾಗಿ ವೈಜಯಂತೀ ಮಾಲೆಯಿಂದ ಶೋಭಿತನಾಗಿ ಸುಂದರವಾಗಿ ಪ್ರಸನ್ನವಾದ ಮುಖವುಳ್ಳವನಾಗಿ ಮಕರಕುಂಡಲಗಳಿಂದ ಅಲಂಕೃತನಾಗಿ ಸರ್ವಲೋಕಗಳಿಗೂ ನೋಡುವದಕ್ಕೆ ಮನೋಹರವಾಗಿ ಅನುರಾಗಯುಕ್ತವಾಗಿ ಮಂದಸ್ಮಿತಯುಕ್ತವಾದ ನೋಟಗಳಿಂದ ರಮ್ಯನಾಗಿ ದಿವ್ಯವಾದ ಯಶಸ್ಸಿನಿಂದ ಕಾಂತನಾಗಿ ಸಿಂಹದಂತೆ ಉತ್ಕೃಷ್ಟವಾದ ಬಯ್ಯಾರಗಮನವುಳ್ಳವನಾಗಿದ್ದ ಆ ಭಗವಂತನನ್ನು ನೋಡಿ ಮುಚುಕುಂದನು ಆತನ ತೇಜಸ್ಸಿನಿಂದ ತಿರಸ್ಕೃತನಾಗಿ ಭಯ

ಪಡುತ ಆತನನ್ನು ಕುರಿತು “ ಎಲೈ ಮಹಾಪುರುಷನೆ, ಈ ಪರ್ವತಗುಹೆಯಲ್ಲಿ ಬಂದಿರುವ ನೀನ್ಯಾರು ? ಪದ್ಮದಳದಂತೆ ಕೋಮಲವಾದ ಪಾದಗಳಿಂದ ಮುಳ್ಳುಗಳಿಂದ ವ್ಯಾಪ್ತವಾದ ಈ ಪ್ರದೇಶದಲ್ಲಿ ಸಂಚರಿಸುವ ನೀನು ತೇಜಸ್ವಿಯಾದ ಅಗ್ನಿಯೊ—ಭಗವಂತನಾದ ಸೂರ್ಯನೊ—ಚಂದ್ರನೊ—ಮಹೇಂದ್ರನೊ—ಮತ್ತೊಬ್ಬ ಲೋಕಪಾಲಕನೊ ? ನಿನ್ನನ್ನು ನೋಡಿದರೆ ತ್ರಿಮೂರ್ತಿಗಳಾಗಿ ದೇವದೇವರಾದ ಬ್ರಹ್ಮ ವಿಷ್ಣು ಮಹೇಶ್ವರರೊಳಗೆ ಶ್ರೇಷ್ಠನಾದ ನಾರಾಯಣನೆಂದು ತೋರುತ್ತದೆ ; ದೀಪವು ಸ್ವಪ್ರಭೆಯಿಂದ ಅಂಧಕಾರವನ್ನು ಪರಿಹರಿಸುವಂತೆ ಗುಹಾಮಧ್ಯಗತವಾದ ಮಹಾಂಧಕಾರವನ್ನು ನಿನ್ನ ದಿವ್ಯತೇಜಸ್ಸಿನಿಂದ ಪರಿಹರಿಸುತಿದ್ದಿ ! ಎಲೈ ಪುರುಷಶ್ರೇಷ್ಠನೆ, ಕೇಳಲಿಚ್ಛೆಯುಳ್ಳ ನನಗೆ ಯಥಾರ್ಥವಾಗಿ ನಿನ್ನ ಜನ್ಮಕರ್ಮಗೋತ್ರಗಳನ್ನು ಹೇಳು ! ನಾನು ಇಕ್ಷ್ವಾಕುವಂಶಸ್ಥನಾದ ಕ್ಷತ್ರಿಯನು ; ಯುವನಾಶ್ವನ ಪುತ್ರನಾದ ಮಾಂಧಾತನಿಗೆ ಪುತ್ರನು ; ಮುಚುಕುಂದನೆಂಬ ನಾಮಧೇಯವುಳ್ಳವನು ; ಬಹುಕಾಲವು ಜಾಗರದಿಂದ ಶ್ರಾಂತನಾಗಿ ನಿದ್ರಾಪರವಶವಾದ ಇಂದ್ರಿಯಗಳುಳ್ಳವನಾಗಿ ಈ ವಿಜನವಾದ ಗುಹೆಯಲ್ಲಿ ಶಯನಂಗೈದಿರುವ ನನ್ನನ್ನು ಯಾವನೋ ಬಂದೆಬ್ಬಿಸಿದನು ; ಆ ಪುರುಷನು ತನ್ನ ಪಾಪದಿಂದ ತಾನೇ ಭಸ್ಮಭೂತನಾದನು ; ಆಮೇಲೆ ಶ್ರೀಮಂತನಾಗಿ ಶತ್ರುಸಂಹಾರಕನಾದ ನಿನ್ನನ್ನು ನೋಡಿದೆನು ; ನಿನ್ನ ತೇಜಸ್ಸಿನಿಂದ ಪ್ರತಿಹತನಾದ ನಾನು ವಿಶೇಷವಾಗಿ ಕೇಳುವದಕ್ಕೆ ಶಕ್ತನಲ್ಲ ! ಎಲೈ ಮಹಾಭುಜನೆ, ನೀನು ಸರ್ವಪ್ರಾಣಿಗಳಿಗೂ ಶ್ಲಾಘ್ಯನಾಗಿದ್ದೀ ! ” ಅಂದನು.

ಈ ಪ್ರಕಾರದಲ್ಲಿ ಮುಚುಕುಂದನಿಂದ ಬಹುಮಾನಿತನಾದ ಭಗವಂತನು ನಗುತ ಗಂಭೀರವಾದ ವಾಕ್ಯದಿಂದ ಆತನನ್ನು ಕುರಿತು “ಎಲೈ ಮುಚುಕುಂದನೆ, ಜನ್ಮಗಳೂ ಕರ್ಮಗಳೂ ನಾಮಧೇಯಗಳೂ ನನಗೆ ಅನೇಕಸಹಸ್ರಸಂಖ್ಯಾತಗಳಾಗಿವೆ ; ನಾನು ಅನಂತನಾದಕಾರಣ ನನ್ನ ಜನ್ಮಕರ್ಮನಾಮಗಳು ಎಣಿಸುವದಕ್ಕಾಗುವದಿಲ್ಲ ; ಭೂಮಿಯ ಧೂಳಿಗಳನ್ನಾದರು ಎಣಿಸಬಹುದು ; ನನ್ನ ಗುಣಕರ್ಮ ಜನ್ಮನಾಮಗಳನ್ನೆಣಿಸುವದಕ್ಕಾಗದು ; ಭೂತಭವಿಷ್ಯದ್ವರ್ತಮಾನಕಾಲಗಳಲ್ಲುಂಟಾದ ನನ್ನ ಜನ್ಮಕರ್ಮನಾಮಧೇಯಗಳನ್ನೆಣಿಸಿ ಪಾರವನ್ನು ಕಾಣದೆ ಈಗಲೂ ಮಹರ್ಷಿಗಳು ಚಿಂತಿಸುತ್ತಾರೆ ; ಆದಾಗ್ಯೂ ಈಗ ನನಗುಂಟಾಗಿರುವ ಜನ್ಮಕರ್ಮನಾಮಧೇಯಗಳನ್ನು ಹೇಳುತ್ತೇನೆ ಕೇಳು ; ನಾನು ಪೂರ್ವದಲ್ಲಿ ಧರ್ಮರಕ್ಷಣಾರ್ಥವಾಗಿ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟು ಭೂಭಾರರೂಪವಾದ ಅಸುರರನ್ನು ಸಂಹರಿಸಲೋಸುಗ ಯದುಕುಲದಲ್ಲಿ ವಸುದೇವನ ಮನೆಯಲ್ಲಿ ಅವತರಿಸಿದ್ದೇನೆ ; ವಸುದೇವನ ಪುತ್ರನಾದಕಾರಣ ವಾಸುದೇವನೆಂದು ನನ್ನನ್ನು ಕರಿಯುತ್ತಾರೆ ; ಕಂಸರೂಪನಾದ ಕಾಲನೇಮಿಯನ್ನೂ ಪ್ರಲಂಬನು ಮೊದಲಾದ ಅಸುರರನ್ನೂ ನಾನು ಸಂಹರಿಸಿದೆನು ! ಎಲೈ ಮುಚುಕುಂದರಾಯನೆ, ತೀಕ್ಷ್ಣವಾದ ನಿನ್ನ ನೇತ್ರತೇಜಸ್ಸಿನಿಂದ ಈಗ ಕಾಲಯವನನು ದಗ್ಧನಾದನು ; ನಾನು ನಿನ್ನನ್ನನುಗ್ರಹಿಸಲೋಸುಗ ಈ ಗುಹೆಗೆ ಬಂದೆನು ; ನೀನು ಪೂರ್ವದಲ್ಲಿ ಬಹಳವಾಗಿ ನನ್ನನ್ನಾರಾಧಿಸಿ ಪ್ರಾರ್ಥಿಸಿದೆಯಾದಕಾರಣ ಭಕ್ತವಾತ್ಸಲ್ಯದಿಂದ ನಾನು ಇಲ್ಲಿಗೆ ಬಂದೆನು ! ಎಲೈ ಅರಸೆ, ನಿನಗೆ ಬೇಕಾದ ವರಗಳನ್ನು ಕೇಳು ; ಸಮಸ್ತ ವರಗಳನ್ನೂ ಕೊಡುತ್ತೇನೆ ; ನನ್ನನ್ನು ಶರಣುಹೊಂದಿದ ಪುರುಷನು ಪುನಹ ಶೋಕವನ್ನು ಪಡೆಯುವದಿಲ್ಲ ” ಎಂದು ನುಡಿದನು.

ಮುಚುಕುಂದನು ಸಂತೋಷಯುಕ್ತನಾಗಿ ಇಪ್ಪತ್ತೆಂಟನೇ ಯುಗದಲ್ಲಿ ಭಗವಂತನು ಅವತರಿಸುವನೆಂದು ಗರ್ಗಾಚಾರ್ಯನಿಂದ ಹೇಳಲ್ಪಟ್ಟ ವಾಕ್ಯವನ್ನು ಸ್ಮರಿಸಿಕೊಂಡು ಕೃಷ್ಣನನ್ನು ಸಾಕ್ಷಾತ್ ನಾರಾಯಣನೆಂದು ತಿಳಿದು ನಮಸ್ಕರಿಸಿ “ ಎಲೈ ಪರಮೇಶ್ವರನೆ, ನಿನ್ನ ಮಾಯೆಯಿಂದ ಮೋಹಿತವಾದ ಈ ಜನ್ಮವು ಅನಾತ್ಮವಸ್ತುಗಳಲ್ಲಿ ದೃಷ್ಟಿಯುಳ್ಳದ್ದಾಗಿ ನಿನ್ನನ್ನು ಭಜಿಸುವದಿಲ್ಲ ; ಸ್ತ್ರೀಯಾಗಲೀ ಪುರುಷನಾಗಲೀ ಈ ಜನ್ಮವು ದುಃಖಪ್ರದವಾದ ಗೃಹಾದಿಗಳಲ್ಲಿ ಸುಖಭ್ರಾಂತಿಯಿಂದ ಆಸಕ್ತವಾಗುತ್ತದೆ ; ಈ ಜನ್ಮವು ದುರ್ಲಭವಾದ ಮಾನುಷದೇಹವನ್ನು ದೈವಪ್ರೇರಣೆಯಿಂದ ಪಡದಾಗ್ಯೂ ದುಷ್ಟಬುದ್ಧಿಯುಳ್ಳದ್ದಾಗಿ ನಿನ್ನನ್ನು ಭಜಿಸದೆ ಗೃಹಾದಿ ವಿಷಯಗಳೆಂಬ ಮಹಾಕೂಪದಲ್ಲಿ ಬೀಳುತ್ತದೆ ! ಅಸ್ಥಿರವಾದ ದೇಹದಲ್ಲಿ ಆತ್ಮಬುದ್ಧಿಯುಳ್ಳವನಾಗಿ ಪತ್ನೀಪುತ್ರ ಗೃಹಾದಿಗಳಲ್ಲಿ ಆಸಕ್ತವಾದ ಬುದ್ಧಿಯು

ಳ್ಳವನಾಗಿ ರಾಜ್ಯಲಕ್ಷ್ಮಿಯಿಂದ ಮದಿಸಿದವನಾಗಿ ಭೂಪತಿಯೆನಿಸಿಕೊಂಡು ದುರಹಂಕೃತನಾದ ನನಗೆ ಇಷ್ಟುಕಾಲವು ವ್ಯರ್ಥವಾಗಿ ಕಳೆದುಹೋಯಿತು ! ಎಲೈ ಭಗವಂತನೆ, ದುರ್ಬುದ್ಧಿಯಾದ ನಾನು ಮೃಣ್ಮಯವಾದ ಘಟಕುಡಗಳಿಗೆ ಸಮಾನವಾದ ಈ ಜಡದೇಹದಲ್ಲಿ ಅರಸೆಂಬ ಅಭಿಮಾನವುಳ್ಳವನಾಗಿ ರಥಗಳಿಂದಲೂ ಗಜಗಳಿಂದಲೂ ಅಶ್ವಗಳಿಂದಲೂ ಪಾದಚಾರಿಗಳಿಂದಲೂ ಯುಕ್ತವಾದ ಸೈನ್ಯಗಳೊಡನೆ ಭೂಮಿಯಲ್ಲಿ ಸಂಚರಿಸುತ ನಿನ್ನನ್ನು ಗಣನೆಮಾಡದೆ ಕಾಲವನ್ನು ವ್ಯರ್ಥವಾಗಿ ಕಳೆದೆನು ! ಎಲೈ ಸ್ವಾಮಿಯೆ, ಅಧಿಕವಾದ ಮನೋರಥಪರಂಪರೆಯನ್ನಾಲೋಚಿಸುತ ಪ್ರಮತ್ತನಾಗಿ ಅಭಿವೃದ್ಧವಾದ ಲೋಭವುಳ್ಳವನಾಗಿ ವಿಷಯಾಸಕ್ತನಾಗಿರುವ ಪುರುಷನನ್ನು ನೀನು ಅಪ್ರಮತ್ತನಾಗಿ ಕ್ಷುತ್ತಿನಿಂದ ನಾಲಿಗೆಯನ್ನು ನೀಡುತಿರುವ ಮೂಷಕವನ್ನಾಕ್ರಮಿಸುವಂತೆ ಆಕ್ರಮಿಸುತ್ತೀ! ಎಲೈ ಭಗವಂತನೆ, ಸುವರ್ಣಾಲಂಕೃತವಾದ ರಥಗಳಿಂದಲೂ ಗಜಗಳಿಂದಲೂ ಅಶ್ವಗಳಿಂದಲೂ ಭಟರಿಂದಲೂ ಸಂಚರಿಸುತ ಭೂಪತಿಯೆನಿಸಿಕೊಂಡು ತನಗ್ಯಾರೂ ಸರಿಯಿಲ್ಲವೆಂದಿರುವ ಪುರುಷನು ಅಪಾರಶಕ್ತಿಯುಳ್ಳ ಕಾಲದಿಂದ ಅಚೇತನವಾದ ಶರೀರದಲ್ಲಿ ಗೃಧ್ರಾದಿಗಳಿಂದ ಭಕ್ಷಿತನಾಗಿ ಕ್ರಿಮಿವ್ಯಾಪ್ತನಾಗಿ ಭಸ್ಮರೂಪನಾಗುವನು ; ಯಾವ ಪುರುಷನು ದಿಕ್ಕುಗಳನ್ನು ಜಯಿಸಿ ನಿಷ್ಕಂಟಕನಾಗಿ ಯುದ್ಧಪ್ರಸಕ್ತಿರಹಿತನಾಗಿ ಸಿಂಹಾಸನಾರೂಢನಾಗಿ ಸಮಾನರಾದ ಅರಸುಗಳಿಂದ ನಮಸ್ಕೃತನಾಗಿ ದಿವ್ಯಗೃಹಗಳಲ್ಲಿ ವಿಷಯಾಸಕ್ತನಾಗಿ ಸ್ತ್ರೀಯರಿಗೆ ಕ್ರೀಡಾಮೃಗನಾಗಿರುವನೋ ಆ ಪುರುಷನೂ ಕಾಲದಿಂದ ಚಲಿಸಲ್ಪಡುವನು ! ಎಲೈ ಶ್ರೀಹರಿಯೆ, ತಪೋನಿಷ್ಠನಾಗಿ ಉತ್ತರೋತ್ತರ ಮಹಾಭೋಗಾಪೇಕ್ಷೆಯಿಂದ ವೀರ್ಯಮಾನಭೋಗಗಳಲ್ಲಿ ಅಪೇಕ್ಷೆಯನ್ನು ಬಿಟ್ಟು ಕರ್ಮಗಳನ್ನಾಚರಿಸಿ ಲೋಕಾಧಿಪತಿಯಾಗಬೇಕೆಂಬ ಅಪೇಕ್ಷೆಯುಳ್ಳವನು ಸುಖವನ್ನೈದುವದಿಲ್ಲ ! ಎಲೈ ಅಚ್ಯುತನೆ, ಪುರುಷನಿಗೆ ಯಾವಾಗ ಸತ್ಸಂಗವುಂಟಾಗುತ್ತದೋ ಆಗ ಸಂಸಾರಬಂಧಮೋಕ್ಷವುಂಟಾಗುವದು ; ಯಾವಾಗ ಸತ್ಸಂಗವುಂಟಾಗುತ್ತದೋ ಆಗ ಪರಮಾತ್ಮನಲ್ಲಿ ಬುದ್ಧಿಯುಂಟಾಗುವದು ! ಎಲೈ ಈಶ್ವರನೆ, ನನಗೆ ನಿನ್ನ ಅನುಗ್ರಹವು ಪೂರ್ವದಲ್ಲೇ ಉಂಟಾಯಿತೆಂದು ತಿಳಿಯುತ್ತೇನೆ ; ಅಖಂಡಭೂಮಂಡಲಾಧಿಪತಿಗಳಾಗಿ ಮಹಾತ್ಮರಾದ ರಾಜರ್ಷಿಗಳಿಂದ ಯಾವ ರಾಜ್ಯತ್ಯಾಗವು ಅಪೇಕ್ಷಿಸಲ್ಪಟ್ಟು ತಪಸ್ಸಿಗೋಸ್ಕರ ವನವನ್ನು ಕುರಿತು ಹೋಗುವದಕ್ಕೆ ಇಚ್ಛೆಯುಂಟಾಗುತ್ತದೋ ಅಂಥಾ ರಾಜ್ಯತ್ಯಾಗವು ದೈವಾನುಗ್ರಹದಿಂದ ನನಗುಂಟಾಯಿತು ! ಎಲೈ ಭಗವಂತನೆ, ಅವಶ್ಯಕವಾಗಿ ಪ್ರಾರ್ಥಿಸುವದಕ್ಕೆ ಯೋಗ್ಯವಾದ ನಿನ್ನ ಪಾದಸೇವೆಗಿಂತಲೂ ಅನ್ಯವಾದ ವರವನ್ನು ನಾನು ಸ್ವಲ್ಪವಾದರೂ ಅಪೇಕ್ಷಿಸುವದಿಲ್ಲ ! ಎಲೈ ಶ್ರೀಹರಿಯೆ, ಮೋಕ್ಷಪ್ರದನಾದ ನಿನ್ನನ್ನಾರಾಧಿಸಿಯೂ ಯಾವನಾದಾಗ್ಯೂ ಆತ್ಮಬಂಧಕವಾದ ತುಚ್ಛವರವನ್ನಪೇಕ್ಷಿಸುವನೇ ! ಎಲೈ ಈಶ್ವರನೆ, ರಜಸ್ತಮಸ್ಸತ್ವಗಳೆಂಬ ಗುಣಗಳಿಂದ ಕಲ್ಪಿತಗಳಾದ ಕಾಮ್ಯಫಲಾಪೇಕ್ಷೆಗಳನ್ನು ಬಿಟ್ಟು ಆವರಣರಹಿತನಾಗಿ ನಿರ್ಗುಣನಾಗಿ ದ್ವಿತೀಯವಸ್ತುರಹಿತನಾಗಿ ಜ್ಞಾನಘನನಾಗಿ ಪರಮಪುರುಷನಾದ ನಿನ್ನನ್ನು ಶರಣುಹೊಂದುತ್ತೇನೆ ! ಎಲೈ ಜ್ಞಾನಪ್ರದನಾದ ಸ್ವಾಮಿಯೆ, ನಾನು ಬಹುಕಾಲದಿಂದ ಕರ್ಮಫಲಗಳಿಂದ ಪೀಡಿತನಾಗಿ ಪಶ್ಚಾತಪ್ತನಾಗಿ ಅಶಾಂತಗಳಾಗಿ ಶತ್ರುರೂಪಗಳಾದ ಇಂದ್ರಿಯಗಳುಳ್ಳವನಾಗಿ ದೈವಕಟಾಕ್ಷದಿಂದ ಈಗ ಸ್ವಲ್ಪ ಶಾಂತನಾಗಿ ಭಯರಹಿತನಾಗಿ ಸತ್ಯವಾಗಿ ಶೋಕನಾಶಕವಾದ ನಿನ್ನ ಪಾದವನ್ನು ಶರಣುಹೊಂದಿಧೇನೆ ; ನನ್ನನ್ನು ರಕ್ಷಿಸು ” ಎಂದು ಪ್ರಾರ್ಥಿಸಿದನು.

ಈ ಪ್ರಕಾರದಲ್ಲಿ ನುಡಿದ ಮುಚುಕುಂದನನ್ನು ಕುರಿತು ಭಗವಂತನು “ ಎಲೈ ಸಾರ್ವಭೌಮನಾದ ಮಹಾರಾಜನೆ, ನಿನ್ನ ಬುದ್ಧಿಯು ನಿರ್ಮಲವಾಗಿ ಉತ್ಕೃಷ್ಟವಾದದ್ದು ; ನಿನಗೆ ಬೇಕಾದ ವರಗಳನ್ನು ಕೊಡುತ್ತೇನೆಂದಾಗ್ಯೂ ಅವುಗಳಲ್ಲಿ ಆಶೆಮಾಡದೆ ದೃಢವಾಗಿದ್ದೀಯಾದಕಾರಣ ನೀನು ಧನ್ಯನು ; ನನ್ನಲ್ಲಿ ಮುಖ್ಯಭಕ್ತರಾದವರಿಗೆ ಕಾಮ್ಯಫಲಭ್ರಾಂತಿಯಿಂದ ಬುದ್ಧಿಯು ಚಲಿಸುವದಿಲ್ಲ; ಪ್ರಾಣಾಯಾಮಾದಿಗಳಿಂದ ಮನಸ್ಸನ್ನು ಸ್ಥಿರೀಕರಿಸಲೋಸುಗ ಯೋಗವನ್ನು ಸೇವಿಸುವ ಭಕ್ತರಾದ ಪುರುಷರಿಗೆ ವಾಸನಾಕ್ಷಯವಿಲ್ಲದ್ದರಿಂದ ಚಿತ್ತವು ಒಂದುಕಾಲದಲ್ಲಾದರೂ ವಿಷಯಾಭಿಮುಖವಾಗುವದು ! ಎಲೈ ಮುಚುಕುಂದನೆ, ನೀನು ನನ್ನಲ್ಲಿ ನಿಲ್ಲಿಸಲ್ಪಟ್ಟ ಚಿತ್ತವುಳ್ಳವನಾಗಿ

ಭೂಮಿಯಲ್ಲಿ ಸಂಚರಿಸುತ್ತಿರು ; ನಿನಗೆ ನನ್ನಲ್ಲಿ ಭಕ್ತಿಯು ದೃಢವಾಗಿರಲಿ ; ಪೂರ್ವದಲ್ಲಿ ನೀನು ಕ್ಷತ್ರಧರ್ಮದಲ್ಲಿದ್ದು ಬೇಟೆ ಮೊದಲಾದ ವ್ಯಾಪಾರಗಳಿಂದ ಪ್ರಾಣಿಗಳನ್ನು ಸಂಹರಿಸುತಿದ್ದೆಯಾದಕಾರಣ ತಪಸ್ಸಿನಿಂದ ಸ್ಥಿರಚಿತ್ತನಾಗಿ ಆ ಪಾಪವನ್ನು ಪರಿಹರಿಸಿಕೊಳ್ಳು ! ಎಲೈ ಅರಸೆ, ಉತ್ತರಜನ್ಮದಲ್ಲಿ ಸರ್ವಭೂತಮಿತ್ರನಾದ ಬ್ರಾಹ್ಮಣೋತ್ತಮನಾಗಿ ಹುಟ್ಟಿ ನನ್ನನ್ನೈದುವೆ ! ” ಎಂದು ನಿರೂಪಿಸಿದನು.

---

## ೫೨ನೇ ಅಧ್ಯಾಯ.

### ರುಕ್ಮಿಣಿಯು ಕೃಷ್ಣನ ಬಳಿಗೆ ದೂತನನ್ನು ಕಳುಹಿಸಿದ್ದು.

ಎಲೈ ಪರೀಕ್ಷಿದ್ರಾಯನೆ, ಈ ರೀತಿಯಲ್ಲಿ ಶ್ರೀಕೃಷ್ಣನಿಂದ ಅನುಗ್ರಹಿತನಾದ ಮುಚುಕುಂದರಾಯನು ಶ್ರೀಕೃಷ್ಣನಿಗೆ ಪ್ರದಕ್ಷಿಣ ನಮಸ್ಕಾರಂಗೈದು ಗುಹೆಯಿಂದ ಹೊರಗೆಬಂದು ಸ್ವಲ್ಪಪ್ರಮಾಣವುಳ್ಳ ಮನುಷ್ಯರನ್ನೂ ಪಶುಗಳನ್ನೂ ಲತಾವೃಕ್ಷಗಳನ್ನೂ ನೋಡಿ ಕಲಿಯುಗವು ಪ್ರಾಪ್ತವಾಯಿತೆಂದು ತಿಳಿದು ಉತ್ತರದಿಕ್ಕಿಗೆ ಹೋಗಿ ಶ್ರದ್ಧಾವಂತನಾಗಿ ಧೀರನಾಗಿ ಸಂಗರಹಿತನಾಗಿ ಮುಕ್ತಸಂಶಯನಾಗಿ ಶ್ರೀಕೃಷ್ಣನಲ್ಲಿ ಚಿತ್ತವನ್ನರ್ಪಿಸಿ ಗಂಧಮಾದನ ಪರ್ವತವನ್ನು ಸೇವಿಸಿ ನರನಾರಾಯಣ ಋಷಿಗಳಿಗೆ ಆವಾಸಸ್ಥಾನವಾದ ಬದರಿಕಾಶ್ರಮವನ್ನೈದಿ ಸುಖದುಃಖಗಳನ್ನು ಸಮವಾಗಿ ಭಾವಿಸಿ ಶಾಂತನಾಗಿ ತಪಸ್ಸಿನಿಂದ ಹರಿಯನ್ನಾರಾಧಿಸುತಿದ್ದನು ! ಭಗವಂತನಾದ ಶ್ರೀಕೃಷ್ಣನು ಮಧುರಾಪುರಕ್ಕೆ ತಿರಿಗಿ ಹೋಗಿ ಮ್ಲೇಚ್ಛಸಮೂಹಗಳನ್ನು ಸಂಹರಿಸಿ ಅವರ ಧನವನ್ನು ದ್ವಾರಕೆಗೆ ಸಾಗಿಸಿದನು ; ಕೃಷ್ಣಪ್ರೇರಿತರಾದ ರಾಜಭಟರು ಅವುಗಳನ್ನು ಎತ್ತುಗಳಮೇಲೆಯೂ ಭಂಡಿಗಳಮೇಲೆಯೂ ಹಾಕಿಕೊಂಡು ದ್ವಾರಕಾನಗರಕ್ಕೆ ಹೋಗುತಿರುವಾಗ ಜರಾಸಂಧನು ಇಪ್ಪತ್ತುಮೂರು ಅಕ್ಷೋಹಿಣೀ ಸೇನೆಗಳಿಂದ ಕೂಡಿಕೊಂಡು ಬಂದನು ! ಎಲೈ ಅರಸೆ, ಆಗ ರಾಮಕೃಷ್ಣರು ಶತ್ರುಸೇನೆಗಳ ವೇಗರಭಸವನ್ನು ನೋಡಿ ಮನುಷ್ಯರ ವ್ಯಾಪಾರವನ್ನಾಶ್ರಯಿಸಿ ಅತ್ಯಂತ ಭಯಪಟ್ಟವರಂತೆ ಆ ಧನವೆಲ್ಲವನ್ನು ಬಿಟ್ಟು ಪದ್ಮದಳದಂತೆ ಮೃದುಗಳಾದ ಪಾದಗಳಿಂದ ಬಹುಯೋಜನದೂರ ಪಲಾಯನಂಗೈದರು ; ಅವರ ಪ್ರಭಾವವನ್ನರಿಯದವನಾಗಿ ಬಲಶಾಲಿಯಾದ ಜರಾಸಂಧನು ನೋಡಿ ನಗುತ ಸೇನಾಸಮೇತನಾಗಿ ಅವರನ್ನು ಬೆನ್ನಟ್ಟಿದನು ; ರಾಮಕೃಷ್ಣರು ಬಹುದೂರ ಪರ್ಯಂತವು ಓಡಿ ಶ್ರಾಂತರಾಗದೆ ಉನ್ನತವಾಗಿ ಹನ್ನೊಂದುಯೋಜನ ಪ್ರಮಾಣವುಳ್ಳ ಒಂದು ಪರ್ವತವನ್ನೇರಿದರು ; ಆ ಪರ್ವತದಲ್ಲಿ ಭಗವಂತನಾದ ಪರ್ಜನ್ಯನು ನಿರಂತರವೂ ವರ್ಷಿಸುವದರಿಂದ ಆಪ್ರವರ್ಷವೆಂಬ ನಾಮಧೇಯವುಂಟಾಗಿರುವದು ; ಜರಾಸಂಧನು ಆ ಪರ್ವತದಲ್ಲಿ ಅಡಗಿಕೊಂಡಿದ್ದ ರಾಮಕೃಷ್ಣರನ್ನು ಕಾಣದೆ ಅದರ ಸುತ್ತಲೂ ಕಾಷ್ಠಗಳನ್ನು ರಾಶಿಹಾಕಿಸಿ ಅಗ್ನಿಆವೇಶವನ್ನು ಮಾಡಿಸಲು ರಾಮಕೃಷ್ಣರು ಅಗ್ನಿಯಿಂದ ದಹಿಸಲ್ಪಡುತಿದ್ದ ಹನ್ನೊಂದು ಯೋಜನ ಪ್ರಮಾಣವುಳ್ಳ ಆ ಪರ್ವತದಿಂದ ಭೂಮಿಯಲ್ಲಿ ಧುಮಿಕಿ ಸೇನಾಸಮೇತನಾದ ಜರಾಸಂಧನ ಕಣ್ಣಿಗೆ ಗೋಚರವಾಗದೆ ತಪ್ಪಿಸಿಕೊಂಡು ಸಮುದ್ರಮಧ್ಯದಲ್ಲಿರುವ ದ್ವಾರಕಾನಗರಕ್ಕೆ ಹೋದರು ! ಜರಾಸಂಧನು ರಾಮಕೃಷ್ಣರು ಆ ಪರ್ವತದಲ್ಲಿ ದಗ್ಧರಾದರೆಂಬ ಭ್ರಾಂತಿಯಿಂದ ಸೇನಾಸಮೇತನಾಗಿ ಸ್ವದೇಶಕ್ಕೆ ಹೋದನು !

ಎಲೈ ಅರಸೆ, ಆನರ್ತದೇಶಾಧಿಪತಿಯಾದ ಕಕುದ್ಮಿರಾಯನು ಬ್ರಹ್ಮನ ಅನುಜ್ಞೆಯಿಂದ ತನ್ನ ಪುತ್ರಿಯಾದ ರೇವತೀದೇವಿಯನ್ನು ಬಲರಾಮನಿಗೆ ಕೊಟ್ಟನೆಂದು ಪೂರ್ವದಲ್ಲೇ ನನ್ನಿಂದ ಹೇಳಲ್ಪಟ್ಟಿತು ; ಭಗವಂತನಾದ ಶ್ರೀಕೃಷ್ಣನು ದ್ವಾರಕಾನಗರವನ್ನು ಸೇರಿದಮೇಲೆ ವಿದರ್ಭದೇಶಾಧಿಪತಿಯಾದ ಭೀಷ್ಮಕರಾಯನ ಪುತ್ರಿಯಾಗಿ ಸಾಕ್ಷಾತ್ ಲಕ್ಷ್ಮಿಯ ಅಂಶಭೂತಳಾದ ರುಕ್ಮಿಣೀದೇವಿಯನ್ನು ಸ್ವಯಂವರದಲ್ಲಿ ಶಿಶುಪಾಲನ ಪಕ್ಷವನ್ನವಲಂಬಿಸಿದ ಸಾಲ್ವನು ಮೊದಲಾದ ಕ್ಷತ್ರಿಯರನ್ನು ಜಯಿಸಿ ಗರುಡನು ಅಮೃತವನ್ನಪಹರಿಸಿದಂತೆ ರುಕ್ಮಿಣೀದೇವಿಯನ್ನಪಹರಿಸಿಕೊಂಡು ಬಂದು ವಿವಾಹವನ್ನು ಮಾಡಿಕೊಂಡನು !

[ಈ ಪ್ರಕಾರವಾದ ಶುಕವಾಕ್ಯವನ್ನು ಕೇಳಿ ಪರೀಕ್ಷಿದ್ರಾಯನು—ಎಲೈ ಆಚಾರ್ಯನೇ, ಭಗವಂತನಾದ ಶ್ರೀಕೃಷ್ಣನು ಸುಂದರವಾದ ಮುಖವುಳ್ಳವಳಾಗಿ ಭೀಷ್ಮಕನ ಪುತ್ರಿಯಾದ ರುಕ್ಮಿಣಿಯನ್ನು ರಾಕ್ಷಸವಿವಾಹದಿಂದ ಪಾಣಿಗ್ರಹಣವನ್ನು ಮಾಡಿಕೊಂಡನೆಂದು ಹೇಳಲ್ಪಟ್ಟಿಗೆ; ಯುದ್ಧದಲ್ಲಿ ಕ್ಷತ್ರಿಯರನ್ನು ಜಯಿಸಿ ಬಲಾತ್ಕಾರದಿಂದ ಕನ್ಯೆಯನ್ನಪಹರಿಸಿಕೊಂಡು ಬರೋಣವು ರಾಕ್ಷಸವಿವಾಹವೆನಿಸಿಕೊಳ್ಳುವದು; ಭಗವಂತನಾಗಿ ಅಮಿತತೇಜಸ್ಸುಳ್ಳ ಶ್ರೀಕೃಷ್ಣನು ಸಮಸ್ತ ಕ್ಷತ್ರಿಯರನ್ನೂ ಸೋಲಿಸಿ ರುಕ್ಮಿಣೀದೇವಿಯನ್ನು ಪಾಣಿಗ್ರಹಣ ಮಾಡಿಕೊಂಡ ವೃತ್ತಾಂತವನ್ನು ವಿಸ್ತಾರವಾಗಿ ಕೇಳಲಿಚ್ಛೈಸುತ್ತೇನೆ; ಜರಾಸಂಧ ಸಾಲ್ವರು ಮೊದಲಾದ ಕ್ಷತ್ರಿಯರನ್ನು ಶ್ರೀಕೃಷ್ಣನೊಬ್ಬನೆ ಹ್ಯಾಗೆ ಜಯಿಸಿದನು! ಎಲೈ ಬ್ರಾಹ್ಮಣೋತ್ತಮನಾದ ಶುಕಾಚಾರ್ಯನೆ, ಪುಣ್ಯಕರವಾಗಿ ಲೋಕಗಳ ಪಾಪಗಳನ್ನು ಪರಿಹರಿಸುವಂಥಾದ್ದಾಗಿ ಶ್ರೋತ್ರಗಳಿಗೆ ಮಧುರವಾಗಿ ನಿತ್ಯನೂತನವಾದ ಶ್ರೀಕೃಷ್ಣನ ಕಥೆಗಳನ್ನು ಕೇಳುವ ಪುರುಷನು ಯಾವನೂ ದಣಿವನ್ನೊಂದನು—ಅಂದನು.]

ಶುಕಾಚಾರ್ಯನು ಆತನನ್ನು ಕುರಿತು— ಎಲೈ ಅರಸೆ, ವಿದರ್ಭದೇಶಾಧಿಪತಿಯಾಗಿ ಮಹಾತ್ಮನಾಗಿ ಭೀಷ್ಮಕನಾಮಕನಾದ ಒಬ್ಬ ಅರಸನಿದ್ದನು; ಆತನಿಗೆ ಐದುಮಂದಿ ಪುತ್ರರೂ ಒಬ್ಬ ಪುತ್ರಿಯೂ ಉಂಟಾದರು; ರುಕ್ಮಿ ರುಕ್ಮರಥ ರುಕ್ಮಬಾಹು ರುಕ್ಮಕೇಶ ರುಕ್ಮಮಾಲಿ ಎಂಬವರೈದುಮಂದಿಯೂ ಪುತ್ರರು; ಅವರ ತಂಗಿ ರುಕ್ಮಿಣೀದೇವಿಯು; ರುಕ್ಮಿಣಿದೇವಿಯು ಶ್ರೀಕೃಷ್ಣನ ಸೌಂದರ್ಯಪರಾಕ್ರಮಗಳನ್ನೂ ಔದಾರ್ಯ ಮೊದಲಾದ ಸುಗುಣಸಂಪತ್ತುಗಳನ್ನೂ ತಮ್ಮ ಮನೆಗೆ ಬರುವ ಜನರು ಗಾನಂಗೈವದರಿಂದ ಕೇಳಿ ಆತನನ್ನೇ ತನಗೆ ಅನುರೂಪನಾದ ಪತಿಯೆಂದು ನಿಶ್ಚಯಿಸಿದಳು; ಶ್ರೀಕೃಷ್ಣನೂ ಉತ್ತಮವಾದ ಬುದ್ಧಿಗೂ ಶುಭಲಕ್ಷಣಗಳಿಗೂ ಔದಾರ್ಯಕ್ಕೂ ಸಚ್ಚರಿತ್ರಕ್ಕೂ ಸುಗುಣಗಳಿಗೂ ಆಶ್ರಯಳಾದ ರುಕ್ಮಿಣಿಯನ್ನು ತನಗೆ ಅನುರೂಪಳಾದ ಪತ್ನಿಯೆಂದು ತಿಳಿದು ವಿವಾಹ ಮಾಡಿಕೊಳ್ಳಲೋಸುಗ ಮನಸ್ಸನ್ನು ಮಾಡಿದ್ದನು! ಎಲೈ ಅರಸೆ, ಸ್ವಜನರೂ ಬಂಧುಗಳೂ ಶ್ರೀಕೃಷ್ಣನಿಗೆ ರುಕ್ಮಿಣಿಯನ್ನು ಕೊಡಲು ಸಮ್ಮತಿಸಿರಲು ಕೃಷ್ಣದ್ವೇಷಿಯಾದ ರುಕ್ಮಿಯೆಂಬ ಜೇಷ್ಠನು ಶಿಶುಪಾಲನಿಗೆ ತನ್ನ ತಂಗಿಯಾದ ರುಕ್ಮಿಣೀದೇವಿಯನ್ನು ಕೊಡಬೇಕೆಂದು ನಿಶ್ಚಯಿಸಿ ಅಡ್ಡಿಮಾಡಿದನು; ರುಕ್ಮಿಣೀದೇವಿಯು ಆ ಅರ್ಥವನ್ನು ತಿಳಿದು ವ್ಯಸನಪಡುತ ಮನಸ್ಸಿನಲ್ಲಿ ಆಲೋಚಿಸಿ, ಆಪ್ತನಾದ ಒಬ್ಬ ಬ್ರಾಹ್ಮಣನನ್ನು ಶ್ರೀಕೃಷ್ಣನ ಸಮೀಪಕ್ಕೆ ಕಳುಹಿಸಿದಳು; ಆ ಬ್ರಾಹ್ಮಣನು ದ್ವಾರಕಾಪುರಕ್ಕೆ ಹೋಗಿ ದ್ವಾರಪಾಲಕರಿಂದ ಅಂತಃಪ್ರವೇಶವನ್ನು ಮಾಡಿಸಿಕೊಂಡು ಸುವರ್ಣಮಯ ಪೀಠದಮೇಲೆ ಕುಳಿತಿದ್ದ ಪುರಾಣಪುರುಷನಾದ ಶ್ರೀಕೃಷ್ಣನನ್ನು ಕಂಡನು; ಬ್ರಾಹ್ಮಣಪ್ರಿಯನಾದ ಶ್ರೀಕೃಷ್ಣನು ಆತನನ್ನು ನೋಡಿ ಶೀಘ್ರವಾಗಿ ಪೀಠದಿಂದಿಳಿದು ಆ ಪೀಠದಮೇಲೆ ಬ್ರಾಹ್ಮಣನನ್ನು ಕುಳ್ಳಿರಿಸಿ ತನ್ನನ್ನು ದೇವತೆಗಳು ಪೂಜಿಸುವಂತೆ ಪೂಜಿಸಿ ಭೋಜನವನ್ನು ಮಾಡಿಸಿ ವಿಶ್ರಮಿಸಿಕೊಂಡಿದ್ದ ಆ ಬ್ರಾಹ್ಮಣನ ಸಮೀಪಕ್ಕೆ ಹೋಗಿ ಆತನ ಪಾದಗಳನ್ನು ತನ್ನ ಹಸ್ತಗಳಿಂದ ಮೃದುವಾಗಿ ಒತ್ತುತ ಕುಶಲಂಗೈದು "ಎಲೈ ಬ್ರಾಹ್ಮಣಶ್ರೇಷ್ಠನೆ, ವೃದ್ಧಸಮ್ಮತವಾದ ನಿನ್ನ ಸ್ವಧರ್ಮವು ಕ್ಷೇಮದಿಂದ ವೃದ್ಧಿಯನ್ನೈದುತ್ತಿದೆಯೇ! ಸದಾಸಂತುಷ್ಟವಾದ ಮನಸ್ಸುಳ್ಳವನಾಗಿ ಕಷ್ಟವಿಲ್ಲದೆ ಸುಖವಾಗಿದ್ದೀಯೇ! ಬ್ರಾಹ್ಮಣನು ಯದೃಚ್ಛಾಲಾಭದಿಂದ ಸಂತುಷ್ಟನಾಗಿ ಸ್ವಧರ್ಮವನ್ನು ಬಿಡದಿದ್ದರೆ ಸಮಸ್ತ ಕಾಮಗಳನ್ನೂ ಕೊಡುವವನಾಗುವನು; ದೇವೇಂದ್ರನಾದಾಗ್ಯೂ ಸಂತುಷ್ಟನಲ್ಲದಿದ್ದರೆ ಅವನಿಗೆ ಸುಖವೂ ಪುಣ್ಯಲೋಕಗಳೂ ಇಲ್ಲ; ದರಿದ್ರನಾದಾಗ್ಯೂ ಸಂತುಷ್ಟನಾದರೆ ಆರೋಗ್ಯಸಂಪನ್ನನಾಗಿ ಸುಖಿಯಾಗಿ ಮಲಗಿರುವನು; ಯದೃಚ್ಛಾಲಾಭಸಂತುಷ್ಟರಾಗಿ ಸಾಧುಗಳಾಗಿ ಪ್ರಾಣಿದಯಾಪರರಾಗಿ ಅಹಂಕಾರರಹಿತರಾಗಿರುವ ಬ್ರಾಹ್ಮಣರನ್ನು ನಾನು ಬಾರಿಬಾರಿಗೂ ಶಿರಸ್ಸಿನಿಂದ ನಮಸ್ಕರಿಸುತ್ತೇನೆ! ಎಲೈ ಬ್ರಾಹ್ಮಣನೆ, ನಿಮ್ಮ ದೇಶದ ದೊರೆಯಿಂದ ನಿಮಗೆ ಕ್ಷೇಮವುಂಟೆ! ಯಾವ ದೊರೆಯ ರಾಜ್ಯದಲ್ಲಿ ಜನರು ಸುಖವಂತರಾಗಿರುತ್ತಾರೆಯೊ ಆ ಅರಸು ನನಗೆ ಪ್ರೀತಿಪಾತ್ರನು; ಯಾವ ದೇಶದಿಂದ ದುರ್ಗಮವಾದ ಈ ಪುರಕ್ಕೆ ನೀನು ಬಂದೆ? ಯಾವ ಕಾರ್ಯನಿಮಿತ್ತವಾಗಿ ಬರೋಣವಾಯಿತು? ರಹಸ್ಯವಲ್ಲದಿದ್ದರೆ ನನಗೆ ಹೇಳು; ನಿನ್ನ ಕಾರ್ಯವ್ಯಾವದನ್ನು ನಾನು ಮಾಡಲೀ?" ಎಂದು ಕೇಳಿದನು.

ಪರಮಪುರುಷನಾಗಿ ಲೀಲಾಮಾನುಷನಾದ ಶ್ರೀಕೃಷ್ಣನಿಂದ ಈ ಪ್ರಕಾರವಾಗಿ ಪ್ರಶ್ನೆಗೈಯಲ್ಪಟ್ಟ ಆ ಬ್ರಾಹ್ಮಣನು ಶ್ರೀಕೃಷ್ಣನಿಗೆ ತನ್ನ ವೃತ್ತಾಂತವನ್ನು ಹೇಳಿ ರುಕ್ಮಿಣೀದೇವಿಯಿಂದ ರಹಸ್ಯವಾಗಿ ಸ್ವಹಸ್ತ ಲಿಖಿತವಾದ ಕಾಗದಪತ್ರವನ್ನು ಕೃಷ್ಣನಿಗೆ ತೋರಿಸಿ ಆತನ ಅನುಜ್ಞೆಯಿಂದ ಆ ಪತ್ರವನ್ನು ವಾಚಿಸಿದನೆಂತೆನೆ: "ಎಲೈ ಶ್ರೀಕೃಷ್ಣನೆ, ವಿದರ್ಭದೇಶಾಧಿಪತಿಯಾದ ಭೀಷ್ಮಕನ ಪುತ್ರಿಯಾಗಿ ನಿನ್ನ ಕಿಂಕರಿಯಾದ ರುಕ್ಮಿಣಿಯು ವಿವಾಹಮಂಗಳವನ್ನು ಯತ್ನಮಾಡಿಕೊಂಡು ನಿನಗೆ ವಿಜ್ಞಾಪಿಸುತ್ತೇನೆ! ಲೋಕಸುಂದರನಾದ ಶ್ರೀಕೃಷ್ಣನೆ ಕೇಳು: ವಚನರ ಶ್ರೋತ್ರಮಾರ್ಗದಿಂದ ಅಂತಃಪ್ರವೇಶವನ್ನು ಮಾಡಿ ಸಮಸ್ತ ತಾಪಗಳನ್ನು ಪರಿಹರಿಸುವ ನಿನ್ನ ಗುಣಗಳನ್ನೂ ನೇತ್ರಗಳಿಗೆ ಮಹೋತ್ಸವರೂಪವಾದ ನಿನ್ನ ಸೌಂದರ್ಯವನ್ನೂ ಕೇಳಿ ನನ್ನ ಮನಸ್ಸು ಲಜ್ಜೆಯನ್ನು ತೊರೆದು ನಿನ್ನಲ್ಲಿ ಲಗ್ನವಾಗಿದೆ! ಎಲೈ ಪುರುಷಶ್ರೇಷ್ಠನಾದ ಶ್ರೀಕೃಷ್ಣನೆ, ಸತ್ಕುಲಪ್ರಸೂತಳಾಗಿ ಬುದ್ಧಿಶಾಲಿಯಾದ ಕನ್ಯಕೆಯು ಯಾವಳು ತಾನೇ ಕುಲದಿಂದಲೂ ಶೀಲದಿಂದಲೂ ವಿದ್ಯೆಯಿಂದಲೂ ವಯಸ್ಸಿನಿಂದಲೂ ಧನದಿಂದಲೂ ಕಾಂತಿಯಿಂದಲೂ ಅಸದೃಶನಾದ ನಿನ್ನನ್ನು ಪತಿಯಾಗಿ ಕಾಮಿಸದಿದ್ದಾಳು! ನಾನು ನಿನ್ನನ್ನು ಪತಿಯಾಗಿ ವರಿಸಿದೇನೆ; ನನ್ನನ್ನು ನಿನ್ನ ಪತ್ನಿಯಾಗಿ ಮಾಡಿಕೋ; ಸಿಂಹಕ್ಕೆ ಭೋಗ್ಯವಾದ ವಸ್ತುವನ್ನು ನರಿಯು ಮುಟ್ಟದಂತೆ ವೀರನಿಗೆ ಸಲ್ಲತಕ್ಕ ಒಡೆವೆಯಾದ ನನ್ನನ್ನು ಶಿಶುಪಾಲನು ಮುಟ್ಟದಹಾಗೆ ಮಾಡು; ಇಷ್ಟಾಪೂರ್ತ್ಯಾದಿ ಕರ್ಮಗಳಿಂದಲೂ ದಾನಗಳಿಂದಲೂ ಭಗವಂತನಾದ ಪರಮಪುರುಷನನ್ನು ನಾನು ಪೂರ್ವದಲ್ಲಿ ಆರಾಧನೆಗೈದದ್ದು ನಿಜವಾದರೆ—ಶ್ರೀಕೃಷ್ಣನೇ, ನೀನು ಬಂದು ನನ್ನನ್ನು ಪಾಣಿಗ್ರಹಣ ಮಾಡಿಕೋ; ಶಿಶುಪಾಲನು ಮೊದಲಾದವರು ನನ್ನನ್ನೈದದಿರಲೀ! ಎಲೈ ಶ್ರೀಕೃಷ್ಣನೆ, ನಾಳೇದಿವಸ ಸ್ವಯಂವರವಾಗುವಾಗ ನೀನು ಗುಪ್ತವಾಗಿ ಸೇನೆಗಳನ್ನು ಕೂಡಿಸಿಕೊಂಡು ವಿದರ್ಭದೇಶಕ್ಕೆ ಬಂದು ಶಿಶುಪಾಲ ಜರಾಸಂಧರ ಬಲವನ್ನು ಮಥಿಸಿ ಬಲಾತ್ಕಾರದಿಂದ ಪರಾಕ್ರಮವೆ ಶುಲ್ಕದ್ರವ್ಯವಾಗುಳ್ಳ ನನ್ನನ್ನು ವಿವಾಹಮಾಡಿಕೋ; ಅಂತಃಪುರದಲ್ಲಿರುವ ಜನರನ್ನು ಸಂಹರಿಸದೆ ನನ್ನನ್ನಪಹರಿಸಿಕೊಂಡು ಹೋಗುವದಕ್ಕೆ ಉಪಾಯವನ್ನು ಹೇಳುತ್ತೇನೆ ಕೇಳು: ವಿವಾಹದ ಪೂರ್ವದಿವಸದಲ್ಲಿ ಕುಲದೇವತಾ ಪೂಜಾರ್ಥವಾಗಿ ಊರಿಂದ ಹೊರಗೆ ಗೌರೀದೇವಸ್ಥಾನವನ್ನು ಕುರಿತು ನಾನು ಹೋಗುತ್ತೇನೆ; ಆಗ ನೀನು ಬಂದು ನನ್ನನ್ನಪಹರಿಸಿಕೊಂಡು ಹೋಗು; ಮಹಾತ್ಮರಾದ ಯೋಗಿಗಳೂ ಯಾವ ನಿನ್ನ ಪಾದಪದ್ಮದ ರಜಸ್ಸಿನಲ್ಲಿ ಸ್ನಾನವನ್ನು ಪಾಪಪರಿಹಾರಾರ್ಥವಾಗಿ ಅಪೇಕ್ಷಿಸುತ್ತಾರೆಯೋ—ಎಲೈ ಅಂಬುಜಾಕ್ಷನೆ, ಅಂಥಾ ನಿನ್ನ ಅನುಗ್ರಹವನ್ನೈದದಿದ್ದರೆ ನೂರುಜನ್ಮಗಳಾದಾಗ್ಯೂ ವ್ರತೋಪವಾಸಾದಿಗಳಿಂದ ಪ್ರಾಣಗಳನ್ನು ಶೋಷಿಸುತ್ತೇನೆ; ನೂರುಜನ್ಮಗಳಮೇಲಾದರೂ ನಿನ್ನ ಅನುಗ್ರಹವು ಬಂದೀತಲ್ಲ!"

ಎಲೈ ಅರಸೇ, ಈ ಅರ್ಥವನ್ನು ಶ್ರುತಪಡಿಸಿ ಆ ಬ್ರಾಹ್ಮಣನು ಕೃಷ್ಣನನ್ನು ಕುರಿತು "ಎಲೈ ಯಾದವಪತಿಯೆ, ಈ ಪ್ರಕಾರವಾದ ರಹಸ್ಯ ಸಂದೇಶಗಳು ರುಕ್ಮಿಣೀದೇವಿಯಿಂದ ಕಳುಹಿಸಲ್ಪಟ್ಟ ನನ್ನಿಂದ ನಿನಗೆ ತಿಳುಹಿಸಲ್ಪಟ್ಟವು; ಇನ್ನು ನೀನು ಆಲೋಚಿಸಿ ಯಾವ ಕೆಲಸ ಹ್ಯಾಗಾಗಬೇಕೊ ಹಾಗೆ ಮಾಡತಕ್ಕದ್ದು" ಎಂದು ನುಡಿದನು.

## ೫೩ನೇ ಅಧ್ಯಾಯ.

### ಕೃಷ್ಣನು ರುಕ್ಮಿಣೀದೇವಿಯನ್ನಪಹರಿಸಿದ್ದು.

ಎಲೈ ಅರಸೆ, ಈ ಪ್ರಕಾರವಾದ ರುಕ್ಮಿಣೀಸಂದೇಶವನ್ನು ಕೇಳಿ ಶ್ರೀಕೃಷ್ಣನು ಆ ಬ್ರಾಹ್ಮಣನ ಕೈಯನ್ನಿಡಿದುಕೊಂಡು ನಗುತ "ಎಲೈ ಬ್ರಾಹ್ಮಣನೆ, ನಾನೂ ಅದೇರೀತಿಯಲ್ಲಿ ರಾತ್ರಿಗಳಲ್ಲಿ ನಿದ್ರೆಯನ್ನು ಪಡೆಯದೆ ರುಕ್ಮಿಣಿಯಲ್ಲಿ ಲಗ್ನವಾದ ಚಿತ್ತವುಳ್ಳವನಾಗಿ ದಿವಾರಾತ್ರಿಗಳಲ್ಲಿ ಆಹಾರನಿದ್ರೆಗಳನ್ನು ಬಿಟ್ಟಿದ್ದೇನೆ; ರುಕ್ಮಿಯೆಂಬವನ ದ್ವೇಷದಿಂದ ನನ್ನ ವಿವಾಹವು ಅಡ್ಡಿಮಾಡಲ್ಪಟ್ಟಿತೆಂಬ ಅರ್ಥವನ್ನು ನಾನು ಬಲ್ಲೆನು; ಶಿಶುಪಾಲ ಜರಾಸಂಧರು

ಮೊದಲಾದ ಕ್ಷತ್ರಿಯಾಧಮರನ್ನು ಪ್ರಹರಿಸಿ ಪರಾಜಯವನ್ನೈದಿಸಿ ನನ್ನಲ್ಲಿ ಆಸಕ್ತಚಿತ್ತಳಾಗಿ ನಿರ್ದೋಷಕಗಳಾದ ಅವಯವಗಳುಳ್ಳ ರುಕ್ಮಿಣಿಯನ್ನು ಅರಣಿಕಾಷ್ಠದಿಂದ ಅಗ್ನಿಜ್ವಾಲೆಯನ್ನು ತರುವಪ್ರೋಪಾದಿಯಲ್ಲಿ ಕರೆದುಕೊಂಡು ಬರುತ್ತೇನೆ" ಎಂದು ಹೇಳಿ ರುಕ್ಮಿಣೀದೇವಿಯ ವಿವಾಹನಕ್ಷತ್ರವನ್ನು ತಿಳಿದು ಸಾರಥಿಯಾದ ದಾರುಕನನ್ನೂ ಕರೆದು ರಥವನ್ನು ಸನ್ನಾಹಮಾಡಲು ಅಜ್ಞಾಪಿಸಿ ದಾರುಕನು ಸೈನ್ಯ ಸುಗ್ರೀವ ಮೇಘಪುಷ್ಪ ವಲಾಹಕಗಳೆಂಬ ನಾಲ್ಕು ಅಶ್ವಗಳನ್ನು ರಥಕ್ಕೆ ಕಟ್ಟಿ ಸಿದ್ಧಮಾಡಿ ಕೈಮುಗಿದುಕೊಂಡು ನಿಂತಿರಲು ರಥವನ್ನೇರಿ ಆ ಬ್ರಾಹ್ಮಣನನ್ನು ರಥದಮೇಲೆ ಕುಳ್ಳಿರಿಸಿಕೊಂಡು ವೇಗಶಾಲಿಗಳಾದ ಆ ಅಶ್ವಗಳಿಂದ ಒಂದು ದಿವಸದಲ್ಲಿ ಆನರ್ತದೇಶವನ್ನು ದಾಂಟಿ ಮರುದಿವಸ ವಿದರ್ಭದೇಶಕ್ಕೆ ಹೋದನು! ಕುಂಡಿನೀಪುರಾಧಿಪತಿಯಾದ ಭೀಷ್ಮಕನು ಪುತ್ರಸ್ನೇಹಪರವಶನಾಗಿ ರುಕ್ಮಿಯೆಂಬ ಜ್ಯೇಷ್ಠಪುತ್ರನ ಚಿತ್ತಾನುಸಾರವಾಗಿ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಲು ನಿಶ್ಚಯಮಾಡಿಕೊಂಡು ಚಪ್ಪರ ಮೇಲುಕಟ್ಟುಗಳು ದೇವತಾಪ್ರಾರ್ಥನೆಗಳು ಬ್ರಾಹ್ಮಣಸಂತರ್ಪಣೆಗಳು ಮೊದಲಾದ ಶುಭಕಾರ್ಯಗಳನ್ನು ಮಾಡಿಸಿ ಪುರದಲ್ಲಿರುವ ರಾಜಬೀದಿಗಳನ್ನು ಗುಡಿಸಿ ಗಂಧೋದಕಾದಿಗಳಿಂದ ಸೇಚನವನ್ನು ಮಾಡಿಸಿ ಚಿತ್ರಧ್ವಜಪತಾಕೆಗಳಿಂದ ಅಲಂಕರಿಸಿ ತೋರಣಗಳನ್ನು ಕಟ್ಟಿಸಿ ಸಮಸ್ತಗೃಹಗಳಲ್ಲಿಯೂ ಅಗರು ಧೂಪಗಳಿಂದ ವಾಸನೆಯನ್ನು ಕಟ್ಟಿಸಿ ದಿವ್ಯವಸ್ತ್ರ ಭೂಷಣ ಗಂಧಮಾಲ್ಯಾದಿಗಳಿಂದ ಅಲಂಕೃತರಾದ ಸ್ತ್ರೀಪುರುಷರಿಂದ ಯುಕ್ತವಾಗಿ ಆ ಪುರವನ್ನು ಪ್ರಕಾಶಿಸುವಂತೆ ಮಾಡಿಸಿ ಪಿತೃಗಳನ್ನೂ ದೇವತೆಗಳನ್ನೂ ಪೂಜಿಸಿ ಯಥಾಶಾಸ್ತ್ರವಾಗಿ ಬ್ರಾಹ್ಮಣಸಮಾರಾಧನೆಯನ್ನು ಮಾಡಿಸಿ ಸ್ವಸ್ತಿವಾಚನೆಯನ್ನು ಮಾಡಿಸಿ ರಮ್ಯವಾದ ದಂತಪಙ್ಕ್ತಿಯುಳ್ಳ ತನ್ನ ಪುತ್ರಿಯಾದ ರುಕ್ಮಿಣಿಗೆ ಮಂಗಳಸ್ನಾನವನ್ನು ಮಾಡಿಸಿ ನೂತನವಸ್ತ್ರಗಳನ್ನುಡಿಸಿ ದಿವ್ಯಾಭರಣಗಳನ್ನು ತೊಡಿಸಿ ಕಂಕಣಬಂಧವನ್ನು ಮಾಡಿಸಿ ಮಂತ್ರಜ್ಞರಾದ ಬ್ರಾಹ್ಮಣರಿಂದ ಋಗ್ಯಜುಸ್ಸಾಮಮಂತ್ರಗಳಿಂದ ರಕ್ಷಾಬಂಧನವನ್ನು ಮಾಡಿಸಿ ಪುರೋಹಿತನು ಮಂತ್ರಜ್ಞರಾದ ಬ್ರಾಹ್ಮಣರೊಡನೆ ಗೃಹಯಜ್ಞವನ್ನು ಮಾಡಲು ಗೋ ಭೂ ತಿಲ ಹಿರಣ್ಯಾಜ್ಯ ವಸ್ತ್ರ ಧಾನ್ಯ ಗುಡ ರಜತ ಲವಣಗಳೆಂಬ ದಶದಾನಗಳನ್ನು ಮಾಡಿದನು! ಅದೇರೀತಿಯಲ್ಲಿ ದಮಘೋಷನಪುತ್ರನಾಗಿ ಚೇದಿದೇಶಾಧಿಪತಿಯಾದ ಶಿಶುಪಾಲನು ಮಂತ್ರಜ್ಞರಾದ ಬ್ರಾಹ್ಮಣರಿಂದ ಅಭ್ಯುದಯಿಕವಾದ ಶುಭಕಾರ್ಯವನ್ನು ಮಾಡಿಸಿ ಮದೋದಕವನ್ನು ಸ್ರವಿಸುವ ಗಜಸಮೂಹಗಳೊಡನೆಯೂ ಸುವರ್ಣಭೂಷಿತಗಳಾದ ರಥಸಮೂಹಗಳೊಡನೆಯೂ ಪಾದಚಾರಿಗಳೊಡನೆಯೂ ಕೂಡಿ ಮಹಾಸೇನಾಪರಿವೃತನಾಗಿ ಕುಂಡಿನಪುರಕ್ಕೆ ಬಂದನು; ವಿದರ್ಭಪತಿಯಾದ ಭೀಷ್ಮಕನು ಶಿಶುಪಾಲನನ್ನು ಎದುರುಗೊಂಡು ಕರೆದುಕೊಂಡು ಬಂದು ಪೂಜಿಸಿ ಬಿಡಿದಿಯನ್ನು ಮಾಡಿಸಿ ಅದರಲ್ಲಿಳಿಸಿದನು; ಸಾಲ್ವನು ಜರಾಸಂಧನು ದಂತವಕ್ತ್ರನು ವಿಡೂರಥನು ಪೌಂಡ್ರಕನು ಮೊದಲಾದ ಸಹಸ್ರಸಂಖ್ಯಾತವಾದ ಅರಸರು ಆತನಿಗೆ ಸಹಾಯವಾಗಿ ಬಂದರು; ಶ್ರೀಕೃಷ್ಣರಾಮದ್ವೇಷಿಗಳಾದ ಜರಾಸಂಧಾದಿಗಳು ಯಾದವಬಲಸಮೇತರಾಗಿ ರಾಮಕೃಷ್ಣರು ಬಂದು ರುಕ್ಮಿಣಿಯನ್ನಪಹರಿಸಿಕೊಂಡು ಹೋಗುವರೆಂಬ ಶಂಕೆಯಿಂದ ಶಿಶುಪಾಲನಿಗೆ ರುಕ್ಮಿಣಿಯನ್ನು ಸಾಧಿಸಿ ಕೊಡಲೋಸುಗ ಬಂದರು; ಭಗವಂತನಾದ ಬಲರಾಮನು ಭ್ರಾತೃವಾತ್ಸಲ್ಯದಿಂದ ಪರವಶನಾಗಿ ಏಕರಥದಿಂದ ಹೋದ ಶ್ರೀಕೃಷ್ಣನನ್ನು ಚಿಂತಿಸಿ ಶತ್ರುಗಳಾದ ಜರಾಸಂಧಾದಿಗಳ ಪ್ರಯತ್ನವನ್ನು ಕೇಳಿ ಮಹಾಕಲಹವು ನಡೆಯುವದೆಂದು ತಿಳಿದು ಹಸ್ತ್ಯಶ್ವ ರಥಪದಾತಿಗಳೆಂಬ ಚತುರಂಗಯುಕ್ತವಾದ ಮಹಾ ಸೈನ್ಯವನ್ನು ಕರೆದುಕೊಂಡು ಅತಿ ತ್ವರೆಯಿಂದ ಹೊರಟನು!

ಅತ್ತಲ ರುಕ್ಮಿಣಿಯು ಉದಯಕ್ಕಿಂತಲು ಮೊದಲೇ ಎದ್ದು ಶ್ರೀಕೃಷ್ಣಾಗಮನವನ್ನು ನಿರೀಕ್ಷಿಸುತ ಬ್ರಾಹ್ಮಣನು ತಿರಿಗಿ ಬರಲಿಲ್ಲವೆಂದೂ ಸಮಾಚಾರವು ತಿಳಿಯಲಿಲ್ಲವೆಂದೂ ಚಿಂತಿಸುತ "ಈ ರಾತ್ರಿಯು ಸ್ವಲ್ಪವೇ ಉಳಿದಿದೆ; ಭಾಗ್ಯಹೀನಳಾದ ನನಗೆ ವಿವಾಹವೆಂಬ ಯತ್ನವುಂಟಾಗಿದೆ; ಅರವಿಂದಾಕ್ಷನಾದ ಶ್ರೀಕೃಷ್ಣನು ಇನ್ನೂ ಬರಲಿಲ್ಲ; ಅದು ಏನುನಿಮಿತ್ತವೊ ತಿಳಿಯಲಿಲ್ಲ; ಶ್ರೀಕೃಷ್ಣದೇವನ ಸಮೀಪಕ್ಕೆ ಹೋದ ಬ್ರಾಹ್ಮಣನೂ ಬರಲಿಲ್ಲ; ದೋಷರಹಿತನಾದ ಶ್ರೀಕೃಷ್ಣನು ನನ್ನಲ್ಲೇನಾದರು ದೋಷವನ್ನೆಣಿಸಿ ನನ್ನ ಪಾಣಿಗ್ರಹಣದಲ್ಲಿ ಪ್ರಯತ್ನವನ್ನು ಮಾಡದೆ ಇಲ್ಲಿಗೆ ಬರಲಿಲ್ಲವೊ ಏನೊ! ಭಾಗ್ಯಹೀನಳಾದ ನನಗೆ ಬ್ರಹ್ಮದೇವನು ಅನುಕೂಲವಾಗಲಿಲ್ಲವೊ ಏನೊ! ಶ್ರೀ ಮಹೇ

ಶ್ವರನು ನನಗೆ ಪ್ರಸನ್ನನಾಗಲಿಲ್ಲವೊ ಏನೊ! ರುದ್ರಾಣಿಯಾಗಿ ಜಗದೀಶ್ವರೀಯಾದ ಗೌರೀದೇವಿಯೂ ನನ್ನಲ್ಲಿ ವಿಮುಖಳಾದಳೊ ಏನೊ'' ಎಂದು ಚಿಂತಿಸುತ ಶ್ರೀಕೃಷ್ಣನಲ್ಲೇ ಆಸಕ್ತವಾದ ಚಿತ್ತವುಳ್ಳವಳಾಗಿ ಕೃಷ್ಣಾಗಮನಕಾಲವನ್ನೇ ನಿರೀಕ್ಷಿಸಿ ಬಾಷ್ಪಪೂರ್ಣಗಳಾದ ನೇತ್ರಗಳನ್ನು ಮುಚ್ಚಿಕೊಂಡಳು! ಎಲೈ ಅರಸೆ, ಈರೀತಿಯಲ್ಲಿ ಶ್ರೀಕೃಷ್ಣಾಗಮನಕಾಲವನ್ನು ನಿರೀಕ್ಷಿಸುತ ರುಕ್ಮಿಣಿಯು ನಿದ್ರೆಯಿಲ್ಲದೆ ವ್ಯಸನಪಡುತಿರುವಾಗ ಆಕೆಯ ಎಡತೊಡೆಯೂ ಎಡಭುಜವೂ ವಾಮನೇತ್ರವೂ ಅದರಿದವು; ಸ್ತ್ರೀಯರಿಗೆ ಎಡಬಾಗದಲ್ಲದರಿದರೆ ಶುಭವಾಗುವದು! ಅನಂತರದಲ್ಲಿ ಶ್ರೀಕೃಷ್ಣನಿಂದ ಕಳುಹಿಸಲ್ಪಟ್ಟ ಆ ಬ್ರಾಹ್ಮಣನು ಅಂತಃಪುರದಲ್ಲಿ ಸಂಚರಿಸುತಿದ್ದ ರಾಜಪುತ್ರಿಯಾದ ರುಕ್ಮಿಣೀದೇವಿಯನ್ನು ಕಂಡನು; ಆ ದೇವಿಯು ಸಂತುಷ್ಟವಾದ ಮುಖವುಳ್ಳವನಾಗಿ ಸ್ಥಿರಚಿತ್ತನಾಗಿದ್ದ ಬ್ರಾಹ್ಮಣನನ್ನು ನೋಡಿ ದೂತಲಕ್ಷಣಗಳಿಂದ ಕಾರ್ಯವು ಶುಭವೆಂದು ತಿಳಿದು ನಗುತ ಕೇಳಲು ಆತನು ಶ್ರೀಕೃಷ್ಣನು ಬಂದನೆಂದು ನುಡಿದು ಆತನಿಂದ ಹೇಳಲ್ಪಟ್ಟ ಸತ್ಯವಾದ ವಾಕ್ಯವನ್ನು ಹೇಳಿದನು; ರುಕ್ಮಿಣಿಯು ಶ್ರೀಕೃಷ್ಣನು ಬಂದನೆಂದು ತಿಳಿದು ಸಂತುಷ್ಟಳಾಗಿ ಆ ಬ್ರಾಹ್ಮಣನಿಗೆ ಏನು ಪ್ರತ್ಯುಪಕಾರವನ್ನು ಮಾಡಬೇಕೆಂದು ಆಲೋಚಿಸಿ ನಮಸ್ಕಾರಂಗೈದಳು! ಅನಂತರದಲ್ಲಿ ಭೀಷ್ಮಕನು ತನ್ನ ಪುತ್ರಿಯ ವಿವಾಹೋತ್ಸವವನ್ನು ನೋಡಲೋಸುಗ ಶ್ರೀರಾಮಕೃಷ್ಣರು ಬಂದರೆಂದೆಣಿಸಿ ಎದುರುಗೊಂಡು ಮಹಾವಿಭವದಿಂದ ಕರತಂದು ಮಧುಪರ್ಕವನ್ನು ಮಾಡಿ ದಿವ್ಯವಾದ ನೂತನವಸ್ತ್ರಗಳನ್ನು ಕೊಟ್ಟು ಬೇಕಾದ ಕಾಣಿಕೆಗಳಿಂದ ಯಥಾಶಾಸ್ತ್ರವಾಗಿ ಪೂಜಿಸಿ ಅವರಿಗೂ ಅವರ ಸೇನೆಗಳಿಗೂ ಮಿತ್ರರಿಗೂ ಬಿಡಿದಿಯನ್ನು ಕಲ್ಪಿಸಿ ಎಲ್ಲರಿಗೂ ಆತಿಥ್ಯವನ್ನು ಮಾಡಿದನು; ವಿದರ್ಭಪುರವಾಸಿಗಳಾದ ಜನರು ಶ್ರೀಕೃಷ್ಣನು ಬಂದನೆಂದು ಕೇಳಿ ಆ ದೇವನ ಮುಖಕಮಲವನ್ನು ನೇತ್ರಗಳಿಂದ ನೋಡುತ ರುಕ್ಮಿಣೀದೇವಿಯು ಆತನಿಗೆ ಯೋಗ್ಯಳಾದ ಪತ್ನಿಯೆಂದೂ ಮತ್ತೊಬ್ಬಳು ಯೋಗ್ಯಳಲ್ಲವೆಂದೂ ದೋಷರಹಿತನಾದ ಶ್ರೀಕೃಷ್ಣನು ರುಕ್ಮಿಣಿಗೆ ಅನುರೂಪನಾದ ಪತಿಯೆಂದೂ ತಾವು ಸ್ವಲ್ಪವಾದರು ಪುಣ್ಯವನ್ನು ಮಾಡಿದ್ದರೆ ಆತನು ರುಕ್ಮಿಣಿಯನ್ನು ಪಾಣಿಗ್ರಹಣಮಾಡಿಕೊಳ್ಳುವಂತೆ ಬ್ರಹ್ಮನು ಅನುಗ್ರಹಿಸಲೆಂದೂ ಪ್ರಾರ್ಥಿಸುತಿದ್ದರು! ಆ ಸಮಯದಲ್ಲಿ ಪರಿವಾರಸಮೇತಳಾದ ರುಕ್ಮಿಣೀದೇವಿಯು ಅಂತಃಪುರದಿಂದ ಹೊರಟು ಪಾದಚಾರಿಣಿಯಾಗಿ ಪಾರ್ವತೀದೇವಿಯ ಪಾದಪದ್ಮವನ್ನು ನೋಡಲೋಸುಗ ಶ್ರೀಕೃಷ್ಣನ ಪಾದಪದ್ಮವನ್ನೇ ಧ್ಯಾನಿಸುತ ಮೌನವ್ರತದಿಂದ ಮಾತೃಗಳೊಡನೆಯೂ ಸಖಿಯರೊಡನೆಯೂ ಕೂಡಿ ಖಡ್ಗಪಾಣಿಗಳಾದ ರಾಜಭಟರಿಂದ ರಕ್ಷಿತಳಾಗಿ ಗೌರೀಸೇವಾರ್ಥವಾಗಿ ಹೊರಟಳು; ಆಗ ಮೃದಂಗಗಳು ಶಂಖಗಳು ಡೋಲುಗಳು ಭೇರಿಗಳು ಧ್ವನಿಗೈದವು; ಲಕ್ಷಣಯುಕ್ತರಾದ ವೇಶ್ಯಾಸ್ತ್ರೀಯರು ಉಭಯಪಾರ್ಶ್ವಗಳಲ್ಲಿಯೂ ಸಾಲಾಗಿ ನಿಂತು ನಾಟ್ಯವನ್ನು ಮಾಡಿದರು; ರಾಜಭಟರು ಕಾಣಿಕೆಗಳನ್ನೂ ಫಲಪುಷ್ಪಗಳನ್ನೂ ಸಹಸ್ರಸಂಖ್ಯಾತಗಳಾದ ತಟ್ಟೆಗಳಲ್ಲಿರಿಸಿಕೊಂಡು ನಡೆದರು; ಬ್ರಾಹ್ಮಣರೂ ಮುತ್ತೈದೆಯರೂ ವಸ್ತ್ರಮಾಲ್ಯ ಭೂಷಣಗಳಿಂದಲಂಕೃತರಾಗಿ ಮಂಗಳಶ್ಲೋಕಗಳನ್ನೇಳುತ ಬಂದರು; ಸೂತ ಮಾಗಧ ವಂದಿಗಳು ಹೊಗಳುತ ಬಂದರು! ಈ ರೀತಿಯಲ್ಲಿ ರುಕ್ಮಿಣೀದೇವಿಯು ದೇವಾಲಯಕ್ಕೆ ಹೋಗಿ ಹಸ್ತಪಾದಪ್ರಕ್ಷಾಳನಂಗೈದು ಆಚಮನವನ್ನು ಮಾಡಿ ಪರಿಶುದ್ಧಳಾಗಿ ಶಾಂತಳಾಗಿ ಪಾರ್ವತೀದೇವಿಯ ಸಮೀಪಕ್ಕೆ ಹೋಗಲು ಪೂಜಾವಿಧಾನಜ್ಞರಾಗಿ ವೃದ್ಧರಾದ ಮುತ್ತೈದೆಯರು ಆ ದೇವಿಯಿಂದ ಪರಮೇಶ್ವರನ ಪತ್ನಿಯಾದ ಸಾಕ್ಷಾತ್ ಪಾರ್ವತೀದೇವಿಗೆ ನಮಸ್ಕಾರವನ್ನು ಮಾಡಿಸಿದರು; ರುಕ್ಮಿಣೀದೇವಿಯು "ಎಲೌ ಪಾರ್ವತೀದೇವಿಯೆ, ಲೋಕಮಾತೃವಾದ ನಿನ್ನನ್ನು ನಮಸ್ಕರಿಸುತ್ತೇನೆ; ಭಗವಂತನಾದ ಶ್ರೀಕೃಷ್ಣನು ನನಗೆ ಪತಿಯಾಗಲಿ; ಈ ಅರ್ಥದಲ್ಲಿ ನನಗೆ ಅನುಗ್ರಹಿಸು'' ಎಂದು ಪ್ರಾರ್ಥಿಸುತ ಮುತ್ತೈದೆಯರೊಡನೆ ಆ ದೇವಿಯನ್ನು ಗಂಧಾಕ್ಷತೆ ದೂಪದೀಪ ನೈವೇದ್ಯ ತಾಂಬೂಲಗಳಿಂದ ಪೂಜಿಸಿ ಆ ದೇವಿಯ ಸಮೀಪದಲ್ಲಿ ದೀಪಪಜ್ತಿಗಳನ್ನು ಹಚ್ಚಿಸಿ ಆಮೇಲೆ ಆ ಬ್ರಾಹ್ಮಣರನ್ನೂ ಮುತ್ತೈದೆಯರನ್ನು ಲವಣ ಅಪೂಪ ತಾಂಬೂಲ ಕಂಠಸೂತ್ರ ಫಲಗಳಿಂದಲೂ ಇಕ್ಷುಖಂಡಗಳಿಂದಲೂ ಪೂಜಿಸಿ ಆ ಮುತ್ತೈದೆಯರು ದೇವಿನಿರ್ಮಾಲ್ಯರೂಪವಾದ ಫಲಪುಷ್ಪಾದಿಗಳನ್ನು ತೆಗೆದು ಆಶೀರ್ವಾದಪೂರ್ವಕವಾಗಿ ಕೊಡಲು ಅವರಿಗೆ ದ್ರವ್ಯದಕ್ಷಿಣೆಗಳನ್ನು ಕೊಟ್ಟು ನಮಸ್ಕರಿಸಿ ಆ ದೇವಿನಿರ್ಮಾಲ್ಯವನ್ನು ಗ್ರಹಿಸಿದಳು !

ಈ ರೀತಿಯಲ್ಲಿ ರುಕ್ಮಿಣೀದೇವಿಯು ಗೌರೀಪೂಜೆಯನ್ನು ಮಾಡಿ ಮೌನವ್ರತವನ್ನು ಪೂರ್ತಿಮಾಡಿ ದೇವಾಲಯದಿಂದ ಹೊರಟು ರತ್ನಮಯವಾದ ಉಂಗುರಗಳಿಂದ ಶೋಭಿತವಾದ ಹಸ್ತದಿಂದ ಬಟ್ಟ ಸಖಿಯ ಕೈಯನ್ನಿಡಿದುಕೊಂಡು ಮಂದಗಮನದಿಂದ ಬರುತಿರಲು ಆಕೆಯನ್ನು ನೋಡಿ ಅಲ್ಲಿಗೆ ಬಂದಿದ್ದ ಅರಸರು ಕಾಮಪೀಡಿತರಾದರು; ವೀರರನ್ನು ಮೋಹಿಸುವಂತೆ ಮಾಡುವ ದೇವಮಾಯೆಯೋ ಎಂಬಹಾಗೆ ಸೂಕ್ಷ್ಮವಾದ ಮಧ್ಯಭಾಗವುಳ್ಳವಳಾಗಿ ಕುಂಡಲಗಳಿಂದ ಪ್ರಕಾಶಿಸುವ ಮುಖವುಳ್ಳವಳಾಗಿ ರತ್ನಮಯವಾದ ಒಡ್ಯಾಣದಿಂದ ಶೋಭಿತಳಾಗಿ ವ್ಯಕ್ತವಾಗಿರುವ ಕುಚಭಾರವುಳ್ಳವಳಾಗಿ ಮುಂಗುರುಳುಗಳಿಂದ ಭಯಪಡುವಂತೆ ಚಪಲಗಳಾದ ದೃಷ್ಟಿಯುಳ್ಳವಳಾಗಿ ಶುಭ್ರವಾದ ಮುಗುಳುನಗುವುಳ್ಳವಳಾಗಿ ಬಿಂಬಫಲದಂತೆ ಕೆಂಪಾದ ಅಧರೋಷ್ಠಕಾಂತಿಯುಳ್ಳವಳಾಗಿ ದಾಳಿಂಬೇ ಬೀಜಗಳಂತೆ ಹೊಳೆಯುವ ದಂತಪಜ್ತಿಯುಳ್ಳವಳಾಗಿ ಧ್ವನಿಗೈಯುವ ಪಾದಾಭರಣಗಳಿಂದ ಭೂಷಿತಗಳಾದ ಪಾದಗಳುಳ್ಳವಳಾಗಿ ಹಂಸಗಮನಕ್ಕೆ ಸಮಾನವಾದ ಗಮನವುಳ್ಳವಳಾಗಿ ದೇವಾಲಯ ಯಾತ್ರಾವ್ಯಾಜದಿಂದ ಶ್ರೀಕೃಷ್ಣನಿಗೆ ತನ್ನ ದೇಹ ಸೌಂದರ್ಯವನ್ನು ತೋರಿಸುತ ಬರುತಿದ್ದ ರುಕ್ಮಿಣಿಯನ್ನು ನೋಡಿ ಆ ಅರಸರು ಪರವಶರಾಗಿ ರಥ ಗಜಾಶ್ವ ಅಂದೋಳಿಕಾದಿ ವಾಹನಗಳನ್ನೇರಿ ಬರುತ ಅನೇಕರು ತಮ್ಮ ವಾಹನಗಳದೆಸೆಯಿಂದ ಬೀಳುತಿದ್ದರು; ರುಕ್ಮಿಣೀದೇವಿಯು ಕಮಲದ ಮೊಗ್ಗುಗಳನ್ನು ಕೈಯಲ್ಲಿಡಿದು ಆಡಿಸುತ ಶ್ರೀಕೃಷ್ಣನೆಲ್ಲೆಂದು ನೋಡುತ ಮುಖದಲ್ಲಿ ಚದರಿ ಬೀಳುತಲಿರುವ ಮುಂಗುರುಳುಗಳನ್ನು ವಾಮಹಸ್ತ ಬೆರಳುಗಳಿಂದ ಹಿಂದಕ್ಕೆ ತಳ್ಳಿ ಸರಿಮಾಡುತ ಲಜ್ಜೆಯಿಂದ ಆ ಅರಸರನ್ನು ನೋಡುತ ಶ್ರೀಕೃಷ್ಣನನ್ನು ಕಂಡಳು; ಆಗ ಶ್ರೀಕೃಷ್ಣನು ತನ್ನ ರಥವಲ್ಲಾರೋಪಣಮಾಡಲಿಚ್ಛೆಯುಳ್ಳವಳಾಗಿ ರಾಜಪುತ್ರಿಯಾದ ರುಕ್ಮಿಣಿಯನ್ನು ಶೀಘ್ರವಾಗಿ ಗರುಡಧ್ವಜ ಚಿಹ್ನಿತವಾದ ತನ್ನ ರಥದಲ್ಲೆತ್ತಿಸಿಕೊಂಡು ಜರಾಸಂಧಾದಿ ದ್ವೇಷಿಗಳು ನೋಡುತಿರಲು ಅವರನ್ನತಿಕ್ರಮಿಸಿ ಬಲರಾಮಸಮೇತನಾಗಿ ಮಹಾ ಸಿಂಹವು ನರಿಗಳ ಗುಂಪಿನಿಂದ ತನ್ನ ಭೋಗ್ಯವಸ್ತುವನ್ನಪಹರಿಸಿಕೊಂಡು ಹೋಗುವಂತೆ ಅಪಹರಿಸಿಕೊಂಡು ಹೋದನು; ಜರಾಸಂಧನು ಮೊದಲಾದ ಅರಸರು ತಮ್ಮ ಯಶಸ್ಸಿಗೆ ಬಂದ ಕ್ಷಯವನ್ನೂ ಮಾನಭಂಗವನ್ನೂ ಸಹಿಸಲಾರದೆ "ನಾವೆಲ್ಲರು ಅಧಮರು; ಗೋಪಾಲಕರು ಬಂದು ನಮ್ಮನ್ನತಿಕ್ರಮಿಸಿ ನಮ್ಮ ಯಶಸ್ಸನ್ನು ಹೋಗಲಾಡಿಸಿದರು; ಈ ಆಶ್ಚರ್ಯವನ್ನು ನೋಡಿದಿರೆ! ನಮ್ಮ ಜನ್ಮವು ವ್ಯರ್ಥವಾಯಿತು" ಎಂದು ಮಾತಾಡಿಕೊಂಡರು!

---

## ೫೪ನೇ ಅಧ್ಯಾಯ.

### ಕೃಷ್ಣ ರುಕ್ಮಿಣೀದೇವಿಯರ ವಿವಾಹವು.

ಎಲೈ ಅರಸೆ, ಈ ರೀತಿಯಲ್ಲಿ ನುಡಿಯುತ ಜರಾಸಂಧಾದಿ ಸರ್ವಕ್ಷತ್ರಿಯರೂ ವಾಹನಗಳನ್ನೇರಿ ಸಂರಂಭಯುಕ್ತರಾಗಿ ಬದ್ಧಕವಚರಾಗಿ ತಮ್ಮ ತಮ್ಮ ಸೇನೆಗಳನ್ನು ಕೂಡಿಸಿಕೊಂಡು ಧನುರ್ಧಾರಿಗಳಾಗಿ ಕೃಷ್ಣನನ್ನು ಬೆನ್ನಟ್ಟಿದರು; ಅದನ್ನು ನೋಡಿ ಯಾದವಸೇನಾಧಿಪತಿಗಳು ಧನುಷ್ಟಾಂಕಾರವನ್ನು ಮಾಡಿ ಅವರಿಗೆ ಎದುರಾಗಿ ನಿಂತರು; ಅಶ್ವಾರೋಹಣದಲ್ಲಿಯೂ ಗಜಾರೋಹಣದಲ್ಲಿಯೂ ರಥಾರೋಹಣದಲ್ಲಿಯೂ ಕುಶಲರಾದ ಜರಾಸಂಧಾದಿಗಳು ಪರ್ವತಗಳಲ್ಲಿ ಮೇಘಗಳು ವರ್ಷಧಾರೆಗಳನ್ನು ಸುರಿಯುವಂತೆ ಯಾದವ ಸೇನಾಧಿಪತಿಗಳಮೇಲೆ ಬಾಣಗಳನ್ನು ವರ್ಷಿಸಿದರು; ಆಗ ರುಕ್ಮಿಣಿಯು ಶತ್ರುಗಳ ಬಾಣವೃಷ್ಟಿಗಳಿಂದ ವ್ಯಾಪ್ತವಾದ ಶ್ರೀಕೃಷ್ಣನ ಸೇನೆಯನ್ನು ನೋಡಿ ಲಜ್ಜಿತಳಾಗಿ ಭಯದಿಂದ ವ್ಯಾಕುಲಳಾಗಿ ಶ್ರೀಕೃಷ್ಣನ ಮುಖವನ್ನು ನೋಡಿದಳು; ಆತನು ರುಕ್ಮಿಣಿಯನ್ನು ಕುರಿತು "ಎಲೇ ರುಕ್ಮಿಣಿಯೇ, ನೀನು ಭಯಪಡಬೇಡ; ನಿನ್ನ ಸೈನ್ಯಸ್ಥರಾಗಿ ಶೂರರಾದ ಯಾದವರಿಂದ ಶತ್ರುಸೈನ್ಯವು ನಾಶವನ್ನು ಪಡೆಯುವದು" ಎಂದು ನುಡಿದನು.

ಆಗ ಬಲರಾಮನು ಗದನು ಮೊದಲಾದ ಯಾದವರು ಶತ್ರುಗಳ ಪರಾಕ್ರಮವನ್ನು ಸಹಿಸಲಾರದೆ ತಮ್ಮ ಬಾಣಗಳಿಂದ ಅವರ ಅಶ್ವಗಳನ್ನೂ ರಥಗಳನ್ನೂ ಪ್ರಹರಿಸಲು ಶತ್ರುಸೇನೆಗಳಲ್ಲಿದ್ದ ರಥಿಕರು ಗಜಾರೋಹಿಗಳು ಅಶ್ವಾರೋಹಿಗಳು ಮೊದಲಾದ ಶೂರರ ಶಿರಸ್ಸುಗಳು ಕಿರೀಟಗಳಿಂದಲೂ ಕುಂಡಲಗಳಿಂದಲೂ ಛೇದಿಸಲ್ಪಟ್ಟು ಭೂಮಿಯಲ್ಲಿ ಅನೇಕಕೋಟಿ ಸಂಖ್ಯಾತವಾಗಿ ಬಿದ್ದವು; ಖಡ್ಗಗಳಿಂದಲೂ ಗದೆಗಳಿಂದಲೂ ಧನುಸ್ಸುಗಳಿಂದಲೂ ಯುಕ್ತಗಳಾದ ಹಸ್ತಗಳೂ ತೊಡೆಗಳೂ ಬಾಹುಗಳೂ ಪಾದಗಳೂ ಕತ್ತರಿಸಲ್ಪಟ್ಟು ಅನೇಕಪ್ರಕಾರವಾಗಿ ಭೂಮಿಯಲ್ಲಿ ಬಿದ್ದವು; ಅಶ್ವಗಳು ಗಜಗಳು ಹೇಸರಕತ್ತೆಗಳು ಪಾದಚಾರಿಗಳು ಮೊದಲಾದವರ ಶಿರಸ್ಸುಗಳು ಬಾಹುಗಳು ಇತ್ಯಾದಿ ಅಂಗಗಳು ಕತ್ತರಿಸಲ್ಪಟ್ಟು ಬಿದ್ದವು! ಈ ರೀತಿಯಲ್ಲಿ ಯಾದವಸೇನಾಪತಿಗಳಿಂದ ಛೇದಿಸಲ್ಪಟ್ಟವರಾಗಿ ಶತ್ರುಗಳಾದ ಅರಸರು ವಿಮುಖರಾಗಿ ಪಲಾಯನಂಗೈದರು; ಆಗ ವಿವರ್ಣಮುಖನಾಗಿ ಉತ್ಸಾಹಶೂನ್ಯನಾಗಿ ಬಣಗಿದ ಬಾಯುಳ್ಳವನಾಗಿ ಪರರಿಂದ ಅಪಹರಿಸಲ್ಪಟ್ಟ ಪತ್ನಿಯುಳ್ಳವನಂತೆ ವ್ಯಸನಪಡುತಿದ್ದ ಶಿಶುಪಾಲನನ್ನು ಕುರಿತು ಭಗ್ನರಾದ ಕೆಲವು ಅರಸರು "ಎಲೈ ಪುರುಷಶ್ರೇಷ್ಠನಾದ ಶಿಶುಪಾಲನೆ, ಈ ಮನಸ್ತಾಪವನ್ನು ಬಿಡು; ಪ್ರಾಣಿಗಳಿಗೆ ಸುಖದುಃಖಗಳಲ್ಲಿ ಸ್ಥೈರ್ಯವು ಕಾಣಲ್ಪಡುವದಿಲ್ಲ; ಮರದ ಬೊಂಬೆಗಳನ್ನು ಸೂತ್ರಧಾರನು ನರ್ತನಮಾಡಿಸುವಂತೆ ಪ್ರಾಣಿಸಮೂಹಗಳನ್ನು ಈಶ್ವರನು ಚೇಷ್ಟೆಗಳನ್ನು ಮಾಡಿಸುತ್ತಾನೆ" ಎಂದು ಹೇಳಿದರು.

ಆ ಬಳಿಕ ಜರಾಸಂಧನು ಶಿಶುಪಾಲನನ್ನು ಕುರಿತು "ಎಲೈ ಶಿಶುಪಾಲನೆ, ನಾನು ಹದಿನೇಳುಸರ್ತಿ ಇಪ್ಪತ್ತುಮೂರು ಅಕ್ಷೋಹಿಣೀ ಸೇನೆಗಳೊಡಗೂಡಿ ಕೃಷ್ಣನಿಂದ ಪರಾಜಿತನಾಗಿ ಪಲಾಯನಂಗೈದೆನಾದರೂ ಹದಿನೆಂಟನೇ ಆವರ್ತಿ ಜಯಿಸಿ ಬಂದೆನು; ಆಗ ವ್ಯಸನವೂ ಇಲ್ಲ—ಸಂತೋಷವೂ ಇಲ್ಲ; ಹರ್ಷಶೋಕಗಳನ್ನು ನಾನು ಸಮವಾಗಿ ಭಾವಿಸುತ್ತೇನೆ; ದೇವವಶವಾದ ಕಾಲದಿಂದ ಜಗತ್ತು ಸುತ್ತಿಸಲ್ಪಡುತ್ತಿದೆ; ಮಹಾ ಸೇನಾಪತಿಗಳಾದ ನಾವು ಸ್ವಲ್ಪಬಲರಾಗಿ ಕೃಷ್ಣಪಾಲಿತರಾದ ಯಾದವರಿಂದ ಪರಾಜಿತರಾದೆವು; ಈಶ್ವರಾಧೀನವಾದ ಕಾಲಬಲದಿಂದ ಶತ್ರುಗಳಿಗೆ ಜಯವುಂಟಾಯಿತು; ನಮಗೆ ಕಾಲವುಂಟಾದಾಗ ನಾವೂ ಜಯಿಸುವೆವು" ಎಂದು ನುಡಿದನು.

ಈ ಪ್ರಕಾರದಲ್ಲಿ ತನ್ನ ಮಿತ್ರರಾದ ಜರಾಸಂಧಾದಿಗಳಿಂದ ಬೋಧಿತನಾಗಿ ಶಿಶುಪಾಲನು ಹತಶೇಷವಾದ ಸೇನೆಗಳೊಡನೆ ತನ್ನ ಪಟ್ಟಣಕ್ಕೆ ಹೋದನು; ಮಿಕ್ಕ ಅರಸರೂ ಅದೇರೀತಿ ಹತಶೇಷವಾದ ಸೇನೆಗಳೊಡನೆ ತಮ್ಮ ತಮ್ಮ ಪುರಗಳಿಗೆ ಹೋದರು! ಆಗ ಶ್ರೀಕೃಷ್ಣದ್ವೇಷಿಯಾದ ರುಕ್ಮಿಯು ಮಾತ್ರವು ತನ್ನ ತಂಗಿಯಾದ ರುಕ್ಮಿಣಿಗೆ ರಾಕ್ಷಸವಿವಾಹವನ್ನು ಸಹಿಸದೆ ಅಕ್ಷೋಹಿಣೀ ಸೇನಾಯುಕ್ತನಾಗಿ ಆತನನ್ನು ಬೆನ್ನಟ್ಟಿ ಕ್ರೋಧಾವಿಷ್ಟನಾಗಿ ಕವಚವನ್ನು ತೊಟ್ಟು ಧನುರ್ಧಾರಿಯಾಗಿ ಸಮಸ್ತ ಅರಸರೂ ಕೇಳುತ್ತಿರಲು "ಎಲೈ ಅರಸುಗಳಿರಾ, ನಾನು ಯುದ್ಧದಲ್ಲಿ ಕೃಷ್ಣನನ್ನು ಸಂಹರಿಸದೆಯೂ ರುಕ್ಮಿಣಿಯನ್ನು ಹಿಂದಕ್ಕೆ ಕರೆದುಕೊಂಡು ಬರದೆಯೂ ಕುಂಡಿನನಗರವನ್ನು ಪ್ರವೇಶಿಸುವದಿಲ್ಲ; ಈ ಅರ್ಥವನ್ನು ಸತ್ಯವಾಗಿ ಹೇಳುತ್ತೇನೆ!— — ಎಲೈ ಸಾರಥಿಯೆ, ಕೃಷ್ಣನಿರುವ ಸ್ಥಳಕ್ಕೆ ರಥವನ್ನು ನಡೆಯಿಸು; ನನ್ನ ತಂಗಿಯನ್ನಪಹರಿಸಿಕೊಂಡು ಹೋಗುವ ದುರ್ಬುದ್ಧಿಯಾದ ಆ ಗೋಪಾಲಕನ ಗರ್ವವನ್ನು ತೀಕ್ಷ್ಣಗಳಾದ ಬಾಣಗಳಿಂದ ಪರಿಹರಿಸುತ್ತೇನೆ" ಎಂದು ತನ್ನ ಪ್ರತಾಪವನ್ನು ಹೇಳಿಕೊಳ್ಳುತ ಶ್ರೀಕೃಷ್ಣನ ಮಹಿಮೆಯನ್ನರಿಯದೆ ಏಕರಥದಿಂದಲೇ ಶ್ರೀಕೃಷ್ಣನನ್ನು ನಿಲ್ಲೆಂದು ನುಡಿಯುತ ಅಟ್ಟಿ ಹೋಗಿ ದೃಢವಾದ ಧನುಸ್ಸನ್ನಾಕರ್ಷಣಂಗೈದು ಮೂರು ಬಾಣಗಳಿಂದ ಆತನನ್ನು ಪ್ರಹರಿಸಿ ಆತನನ್ನು ಕುರಿತು "ಎಲೋ ಯಾದವಕುಲ ದೂಷಕನಾಗಿ ಚೋರನಾದ ಗೋಪಾಲಕನೆ, ಕ್ಷಣಮಾತ್ರವು ನಿಲ್ಲು; ವಾಯಸವು ಹವಿಸ್ಸನ್ನಪಹರಿಸುವಂತೆ ನನ್ನ ತಂಗಿಯನ್ನಪಹರಿಸಿಕೊಂಡು ಎಲ್ಲಿಗೆ ಹೋಗುತ್ತೀ! ಮಾಯಾವಿಯಾಗಿ ಕಪಟಯುದ್ಧವನ್ನು ಮಾಡುವ ನಿನ್ನ ಮದವನ್ನು ಪರಿಹರಿಸುತ್ತೇನೆ; ಇನ್ನು ನೀನು ನನ್ನ ಬಾಣಗಳಿಂದ ಹತನಾಗಿ ಭೂಮಿಯಲ್ಲಿ ಶಯನಂಗೈಯುವೆ" ಅಂದನು.

ಅದನ್ನು ಕೇಳಿ ಶ್ರೀಕೃಷ್ಣನು ಒಂದು ಬಾಣದಿಂದ ಅವನ ಧನುಸ್ಸನ್ನೂ ಆರು ಬಾಣಗಳಿಂದ ಸಾರಥಿಯನ್ನೂ ಮೂರು ಬಾಣಗಳಿಂದ ಧ್ವಜವನ್ನೂ ಛೇದಿಸಿದನು; ರುಕ್ಮಿಯು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಐದು

ಬಾಣಗಳಿಂದ ಕೃಷ್ಣನನ್ನು ಪ್ರಹರಿಸಲು ಆ ಬಾಣಗಳಿಂದ ಪೆಟ್ಟುಬಿದ್ದ ಕೃಷ್ಣನು ಅನೇಕ ಬಾಣಸಮೂಹಗಳಿಂದ ಆ ಧನುಸ್ಸನ್ನೂ ಛೇದಿಸಿದನು ; ರುಕ್ಮಿಯು ಮತ್ತೊಂದು ಧನುಸ್ಸನ್ನು ತೆಗೆದುಕೊಳ್ಳಲು ಶ್ರೀಕೃಷ್ಣನು ಅದನ್ನೂ ಛೇದಿಸಿ ಆತನು ಪರಿಘ ಪಟ್ಟಸ ಶೂಲ ಶಕ್ತಿ ತೋಮರಾದಿ ನಾನಾಪ್ರಕಾರವಾದ ಆಯುಧಗಳನ್ನು ಪ್ರಯೋಗಿಸಲು ಅವೆಲ್ಲವನ್ನೂ ಛೇದಿಸಿದನು ; ಆಮೇಲೆ ರುಕ್ಮಿಯು ರಥದಿಂದ ಧುಮಿಕಿ ಖಡ್ಗವನ್ನು ಧರಿಸಿಕೊಂಡು ಶ್ರೀಕೃಷ್ಣನನ್ನು ಸಂಹರಿಸಬೇಕೆಂಬ ಇಚ್ಛೆಯಿಂದಲೂ ಕೋಪದಿಂದಲೂ ಪತಂಗವು ದೀಪದಮೇಲೆ ಬೀಳುವಂತೆ ಕೃಷ್ಣನಮೇಲೆ ನಡೆಯಲು ಕೃಷ್ಣನು ಆ ಖಡ್ಗವನ್ನೂ ಗುರಾಣಿಯನ್ನೂ ಚೂರುಚೂರಾಗಿ ಛೇದಿಸಿ ರುಕ್ಮಿಯನ್ನು ಸಂಹರಿಸಲುದ್ಯುಕ್ತನಾಗಿ ಖಡ್ಗಧಾರಿಯಾಗಿ ಹೊರಡಲಿಚ್ಛೈಸಿದನು ; ಆಗ ರುಕ್ಮಿಣಿಯು ಅಣ್ಣನಾದ ರುಕ್ಮಿಯನ್ನು ಸಂಹರಿಸಲುದ್ಯುಕ್ತನಾದ ಶ್ರೀಕೃಷ್ಣನನ್ನು ನೋಡಿ ಭಯದಿಂದ ವ್ಯಾಕುಲಳಾಗಿ ಪತಿಯಾದ ಶ್ರೀಕೃಷ್ಣನ ಪಾದಗಳಲ್ಲಿ ಬಿದ್ದು ದೀನಳಾಗಿ ಆತನನ್ನು ಕುರಿತು "ಯೋಗೀಶ್ವರನಾಗಿ ಅಪಾರಮಹಿಮೆಯುಳ್ಳ ದೇವದೇವನಾಗಿ ಜಗತ್ಪತಿಯಾದ ಶ್ರೀಕೃಷ್ಣನೆ, ನನ್ನ ಅಣ್ಣನನ್ನು ಸಂಹರಸಬೇಡ" ಎಂದು ನುಡಿದಳು.

ಈ ಪ್ರಕಾರದಲ್ಲಿ ನುಡಿದು ಭಯದಿಂದ ನಡುಗುತಲಿರುವ ಅಂಗಗಳುಳ್ಳವಳಾಗಿ ದುಃಖದಿಂದ ಬಣಗಿದ ನಾಲಿಗೆಯುಳ್ಳವಳಾಗಿ ಕಾತರಭಾವದಿಂದ ಶಿಥಿಲವಾದ ಸುವರ್ಣಮಾಲಿಕೆಯುಳ್ಳವಳಾದ ರುಕ್ಮಿಣಿಯಿಂದ ಗ್ರಹಿಸಲ್ಪಟ್ಟ ಪಾದವುಳ್ಳವನಾಗಿ ಶ್ರೀಕೃಷ್ಣನು ದಯೆಯಿಂದ ಅಕಾರ್ಯವನ್ನು ಮಾಡಿದ ರುಕ್ಮಿಯನ್ನು ವಸ್ತ್ರದಿಂದ ಕಟ್ಟಿ ಕ್ಷೌರಮಾಡಿ ಮಧ್ಯ ಮಧ್ಯೆ ಕೇಶಗಳನ್ನು ಬಿಟ್ಟು ಸ್ವಲ್ಪ ಗಡ್ಡವನ್ನೂ ಸ್ವಲ್ಪ ಮೀಸೆಯನ್ನೂ ಬೋಳಿಸಿ ವಿಕಾರವನ್ನೈದಿಸಿದನು ; ಆ ಸಮಯದಲ್ಲಿ ಯಾದವರು ಶ್ರೀಕೃಷ್ಣನ ಸಮೀಪಕ್ಕೆ ಬಂದು ರುಕ್ಮಿಯನ್ನು ನೋಡಿದರು ; ಹಾಗೆ ವೈರೂಪ್ಯವನ್ನೈದಿ ಹತಪ್ರಾಯನಾದ ರುಕ್ಮಿಯನ್ನು ನೋಡಿ ಬಲರಾಮನು ದಯಾರ್ದ್ರಚಿತ್ತನಾಗಿ ಕಟ್ಟುಗಳನ್ನು ಬಿಡಿಸಿ ಶ್ರೀಕೃಷ್ಣನನ್ನು ಕುರಿತು "ಎಲೈ ಕೃಷ್ಣನೆ, ನೀನು ಅಕಾರ್ಯವನ್ನು ಮಾಡಿದೆ ; ಗಡ್ಡಮೀಸೆಗಳ ಕ್ಷೌರವು ಜುಗುಪ್ಸಿತವಾದದ್ದು ; ಈ ವೈರೂಪ್ಯಕರಣವು ಮಿತ್ರನ ವಧಪ್ರಾಯವೇ ಸರಿ" ಎಂದು ಹೇಳಿ ರುಕ್ಮಿಣೀದೇವಿಯನ್ನು ಸಮಾಧಾನಮಾಡುತ "ಎಲೇ ಪತಿವ್ರತೆಯಾದ ರುಕ್ಮಿಣಿಯೆ, ಅಣ್ಣನಿಗೆ ವೈರೂಪ್ಯವುಂಟಾಯಿತೆಂದು ನೀನು ಅಸೂಯೆಪಡಬೇಡ ; ಪುರುಷನಿಗೆ ಸುಖದುಃಖಗಳನ್ನು ಕೊಡುವವನು ಬೇರೇ ಇಲ್ಲ ; ತನ್ನ ಸ್ವಕರ್ಮದಿಂದಲೇ ಅವನ್ನು ಅನುಭವಿಸುವನು !— — ಎಲೈ ಕೃಷ್ಣನೆ, ಬಂಧುವಾದವನು ಸಂಹಾರಕ್ಕೆ ಯೋಗ್ಯವಾದ ಅಪರಾಧವನ್ನು ಮಾಡಿದಾಗ್ಯೂ ಆತನನ್ನು ಸಂಹರಿಸಬಾರದು ; ಅವನು ಆ ದೋಷಮಾಡಿದಾಗಲೇ ಹತನಾಗುವನು ; ಹತನಾದವನನ್ನು ಕೊಲ್ಲುವದುಂಟೆ !— — ಎಲೇ ರುಕ್ಮಿಣೀದೇವಿಯೆ, ಕ್ಷತ್ರಿಯಧರ್ಮವು ಬ್ರಹ್ಮನಿಂದಲೇ ನಿರ್ಮಿತವಾಗಿದೆ ; ಅಣ್ಣನು ತಮ್ಮನನ್ನಾದರೂ ಸಂಹರಿಸುವನು ; ಆದ್ದರಿಂದ ಕ್ಷತ್ರಿಯಧರ್ಮವು ಘೋರವಾದದ್ದು !— — ಎಲೈ ಕೃಷ್ಣನೆ, ಮಾನಶಾಲಿಗಳಾಗಿ ಸ್ತ್ರೀಮದಾಂಧರಾದ ಪುರುಷರು ರಾಜ್ಯನಿಮಿತ್ತವಾಗಿಯೂ ಮಾನಕ್ಕೋಸ್ಕರವಾಗಿಯೂ ಪರಾಕ್ರಮಿಯೆನಿಸಿಕೊಳ್ಳಬೇಕೆಂಬ ನಿಮಿತ್ತವಾಗಿಯೂ ಪರರನ್ನು ಸಂಹರಿಸುತ್ತಾರೆ ; ಇದು ನಮಗೂ ಸ್ವಧರ್ಮವು ! — — ಎಲೇ ರುಕ್ಮಿಣಿಯೆ, ನಿನಗೆ ಬುದ್ಧಿಯು ವಿಷಮವಾಗಿದೆ ; ಸಮಬುದ್ಧಿಯಿಲ್ಲ ; ನೀನು ಅಜ್ಞಳಂತೆ ಶತ್ರುಗಳಿಗೆ ಅಶುಭವನ್ನಪೇಕ್ಷಿಸುತ್ತೀ ; ದೇವಮಾಯೆಯಿಂದ ಮನುಷ್ಯರಿಗೆ ಈ ಅಜ್ಞಾನವು ಕಲ್ಪಿತವಾಗಿದೆ ; ತಮ್ಮ ದೇಹದಲ್ಲಿ ಪ್ರತ್ಯೇಕವಾದ ಆತ್ಮನಿರುವನೆಂಬ ಅಜ್ಞಾನಿಗಳಿಗೆ ಮಿತ್ರರು ಶತ್ರುಗಳು ಉದಾಸೀನರು ಎಂಬ ಪೃಥಗ್ಭಾವವು ಸ್ವಾಭಾವಿಕವು ; ಸರ್ವಪ್ರಾಣಿಗಳಲ್ಲಿಯೂ ಆತ್ಮನು ಒಬ್ಬನೇ ಆದಾಗ್ಯೂ ಅನೇಕವಾಗಿ ತೋರುವನು ; ಒಂದೇ ಆಕಾಶವು ಘಟಪಟಾದಿಗಳಲ್ಲಿ ಬೇರೆ ಬೇರೆಯಾಗಿ ತೋರುವದು ; ಆಧಿಭೂತ ಆಧ್ಯಾತ್ಮ ಆಧಿದೈವರೂಪಗಳಾದ ದ್ರವ್ಯ ಪ್ರಾಣ ಗುಣಗಳ ಸಮಷ್ಟಿರೂಪವಾದ ದೇಹವು ಉತ್ಪತ್ತಿ ವಿನಾಶಗಳುಳ್ಳದ್ದು ; ಅದು ಅಜ್ಞಾನದಿಂದ ಆತ್ಮನಲ್ಲಿ ಕಲ್ಪಿತವಾಗಿ ಜೀವಗಳನ್ನು ಸಂಸಾರಿಗಳನ್ನಾಗಿ ಮಾಡುತ್ತದೆ ; ಆತ್ಮನಿಗೆ ಅಸದ್ರೂಪಗಳಾದ ದೇಹಾದಿಗಳಿಂದ ಸಂಯೋಗವೂ ವಿಯೋಗವೂ ಇಲ್ಲ ; ದೇಹಾದಿ ಪ್ರಕಾಶವು ದೃಗ್ರೂಪನಾದ ಆತ್ಮನದೆಸೆಯಿಂದಲೆ ಆಗುವದು ; ಸೋ

ಚುವ ತ್ವಕ್ಕು ನೋಡಿಸಿಕೊಳ್ಳುವ ರೂಪವು ಇವೆರಡಕ್ಕೂ ಸೂರ್ಯನಿಂದಲೆ ಪ್ರಕಾಶವುಂಟಾಗುವಂತೆ ದ್ರಷ್ಟ್ರವಾದ ಆತ್ಮನಿಗೂ ದೃಶ್ಯಗಳಾದ ದೇಹಾದಿಗಳಿಗೂ ಆತ್ಮನಿಂದಲೆ ಪ್ರಕಾಶವು; ದೇಹಾದಿಗಳಿಗೆ ಹೊರ್ತು ಆತ್ಮನಿಗೆ ವಿಕೃತಿಯಿಲ್ಲ; ಚಂದ್ರನಿಗೆ ಕಲಾಕ್ಷಯವಾದರೆ ಆತನು ಹೋದಂತೆಯೂ ಕಳೆಗಳುಂಟಾದರೆ ಹುಟ್ಟುವಂತೆಯೂ ತೋರುವಹಾಗೆ ದೇಹಸಿಷ್ಟಗಳಾದ ಉತ್ಪತ್ತಿ ವಿನಾಶಗಳು ಅಜ್ಞಾನದಿಂದ ಆತ್ಮನಲ್ಲಿ ತೋರುವವು; ಪುರುಷನು ಶಯನಾಗೈದು ನಿದ್ರೆಮಾಡುವಾಗ ಸ್ವಪ್ನದಲ್ಲಿ ಅವಿದ್ಯಮಾನಗಳಾದ ವಿಷಯಗಳನ್ನನುಭವಿಸುವಂತೆ ತಿಳುಕೊಳ್ಳುವಹಾಗೆ ಅಸದ್ರೂಪಗಳಾದ ವಿಷಯಾದಿಗಳನ್ನೈದಿ ಸ್ವರೂಪಜ್ಞಾನವಿಲ್ಲದ್ದರಿಂದ ಅಜ್ಞಾನಿಗಳು ಸಂಸಾರವನ್ನನುಭವಿಸುತ್ತಾರೆ; ಆದಕಾರಣ ದೇಹಶೋಷಕವಾಗಿ ಮೋಹಕವಾಗಿ ಅಜ್ಞಾನಜನ್ಯವಾದ ಶೋಕವನ್ನು ತತ್ವಜ್ಞಾನದಿಂದ ಪರಿಹರಿಸಿಕೊಂಡು ಸ್ವಸ್ಥಳಾಗು" ಎಂದು ನುಡಿದನು.

ಈರೀತಿ ಭಗವಂತನಾದ ಬಲರಾಮನಿಂದ ಬೋಧಿತಳಾಗಿ ರುಕ್ಮಿಣೀದೇವಿಯು ವ್ಯಸನವನ್ನು ಬಿಟ್ಟು ಮನಸ್ಸನ್ನು ಬುದ್ಧಿಯೊಡನೆ ಸೇರಿಸಿ ಸ್ವಸ್ಥಳಾದಳು! ಪ್ರಾಣದೊಡನೆ ಬಿಡಲ್ಪಟ್ಟ ರುಕ್ಮಿಯು ದ್ವೇಷಿಗಳಾದ ಯಾದವರಿಂದ ಹತಪ್ರಭನಾಗಿ ವ್ಯರ್ಥಮನೋರಥನಾಗಿ ತನ್ನ ವೈರೂಪ್ಯವನ್ನು ಸ್ಮರಿಸಿಕೊಂಡು ದುಃಖಿತನಾಗಿ ಭೋಜಕಟವೆಂಬ ನಾಮಧೇಯವುಳ್ಳ ಒಂದು ಮಹತ್ತಾದ ಪುರವನ್ನು ನಿರ್ಮಿಸಿ ತನ್ನ ತಂಗಿಯನ್ನಪಹರಿಸಿದ ಕೃಷ್ಣನನ್ನು ಸಂಹರಿಸದೆಯೂ ತಂಗಿಯಾದ ರುಕ್ಮಿಣೀದೇವಿಯನ್ನು ಕರತರದೆಯೂ ಕುಂಡಿನನಗರವನ್ನು ಪ್ರವೇಶಮಾಡುವದಿಲ್ಲವೆಂದು ನುಡಿದು ರೋಷದಿಂದ ಆ ಪುರದಲ್ಲಿ ವಾಸಮಾಡುತಿದ್ದನು! ಭಗವಂತನಾದ ಕೃಷ್ಣನು ಸರ್ವಕ್ಷತ್ರಿಯರನ್ನೂ ಜಯಿಸಿ ರುಕ್ಮಿಣಿಯನ್ನು ತನ್ನ ಪುರಕ್ಕೆ ಕರೆದುಕೊಂಡು ಹೋಗಿ ಯಥಾಶಾಸ್ತ್ರವಾಗಿ ವಿವಾಹವನ್ನುಮಾಡಿಕೊಂಡನು! ಎಲೈ ಅರಸೆ, ಆಗ ಯಾದವರ ಆವಾಸಸ್ಥಾನವಾದ ದ್ವಾರಕಾಪುರದಲ್ಲಿ ಶ್ರೀಕೃಷ್ಣನಲ್ಲಿ ಅಭೇದಭಾವದಿಂದಿದ್ದ ಪುರವಾಸಿಗಳಾದ ಜನರಿಗೆ ಮನೆಮನೆಗಳಲ್ಲಿಯೂ ಮಹೋತ್ಸವವಾಯಿತು; ಉತ್ತಮವಾದ ರತ್ನಕುಂಡಲಗಳನ್ನು ಧರಿಸಿದವರಾಗಿ ಸ್ತ್ರೀಯರೂ ಪುರುಷರೂ ಸಂತೋಷದಿಂದ ರುಕ್ಮಿಣೀ ಕೃಷ್ಣರಿಗೆ ಉಡುಗರೆಗಳನ್ನು ಕೊಟ್ಟರು; ಆ ವಿವಾಹೋತ್ಸವಕಾಲದಲ್ಲಿ ದ್ವಾರಕಾಪುರವು ಎತ್ತಿಕಟ್ಟಲ್ಪಟ್ಟ ಧ್ವಜವಿಶೇಷಗಳಿಂದಲೂ ವಿಚಿತ್ರಗಳಾದ ಮಾಲ್ಯಗಳಿಂದಲೂ ವಸ್ತ್ರಗಳಿಂದಲೂ ರತ್ನತೋರಣಗಳಿಂದಲೂ ಪ್ರತಿ ಗೃಹದ್ವಾರಗಳಲ್ಲಿಯು ಕಲ್ಪಿಸಲ್ಪಟ್ಟ ಲಾಜಾಂಕುರ ಪುಷ್ಪ ಮೊದಲಾದ ಶುಭದ್ರವ್ಯಗಳಿಂದಲೂ ಪೂರ್ಣಕುಂಭಗಳಿಂದಲೂ ಅಗರು ಧೂಪಗಳಿಂದಲೂ ದೀಪಗಳಿಂದಲೂ ಶೋಭಿತವಾಗಿ ಪ್ರಕಾಶಿಸಿತು; ವಿವಾಹಾರ್ಥವಾಗಿ ಬಂದ ಅರಸರ ಗಜಗಳ ಮದೋದಕಗಳಿಂದ ಬೀದಿಗಳು ನೆನೆಯಿಸಲ್ಪಟ್ಟವು; ಕೌರವರು ಸೃಂಜಯರು ಕೈಕೆಯರು ವಿದರ್ಭರು ಯಾದವರು ಕುಂತೀಭೋಜರು ಮೊದಲಾದವರು ಪರಸ್ಪರವಾಗಿ ಸಂತೋಷದಿಂದ ಸಂಭಾಷಣೆಮಾಡುತ ಶ್ರೀಕೃಷ್ಣನಿಂದ ಮಾಡಲ್ಪಟ್ಟ ರುಕ್ಮಿಣೀಹರಣವನ್ನು ಕೇಳಿ ಅತ್ಯಂತವಾಗಿ ಆಶ್ಚರ್ಯಪಟ್ಟರು; ಸಾಕ್ಷಾತ್ ಲಕ್ಷ್ಮೀರೂಪಳಾದ ರುಕ್ಮಿಣೀಯುಕ್ತನಾಗಿದ್ದ ಶ್ರೀಕೃಷ್ಣನನ್ನು ನೋಡಿ ಆ ಪುರವಾಸಿಗಳಾದ ಸ್ತ್ರೀಪುರುಷರಿಗೆ ಮಹಾ ಸಂತೋಷವಾಯಿತು!

---

## ೫೫ನೇ ಅಧ್ಯಾಯ.

### ಪ್ರದ್ಯುಮ್ನನು ಶಂಬರಾಸುರನನ್ನು ಸಂಹರಿಸಿದ್ದು.

ಎಲೈ ಅರಸೆ, ವಾಸುದೇವಾಂಶನಾದ ಕಾಮನು ಪೂರ್ವದಲ್ಲಿ ಪರಮೇಶ್ವರನ ಕೋಪದಿಂದ ದಗ್ಧನಾಗಿ ಪುನಹ ದೇಹಪ್ರಾಪ್ತ್ಯರ್ಥವಾಗಿ ಆ ಭಗವಂತನನ್ನೈದಿ ರುಕ್ಮಿಣಿಯಲ್ಲಿ ಹುಟ್ಟಿ ಪ್ರದ್ಯುಮ್ನನೆಂಬ ನಾಮಧೇಯದಿಂದ ತಂದೆಗೆ ಸಮಾನನಾಗಿದ್ದನು; ಆಗ ಕಾಮರೂಪಿಯಾದ ಶಂಬರಾಸುರನು ಆ ಬಾಲಕನನ್ನಪಹರಿಸಿ ತನಗೆ ಶತ್ರುವೆಂದೆತ್ತಿಕೊಂಡು ಹೋಗಿ ಸಮುದ್ರದಲ್ಲಿ ಹಾಕಿಬಿಟ್ಟು ಮನೆಗೆ ಹೋದನು; ಆ ಸಮುದ್ರದಲ್ಲಿದ್ದ ಮಹತ್ತಾದ ಒಂದು ಮ

ತ್ಸ್ಯವು ಆ ಶಿಶುವನ್ನು ನುಂಗಿತು ; ಅನಂತರದಲ್ಲಿ ಮತ್ಸ್ಯಗ್ರಾಹಿಗಳು ಬಲೆಹಾಕಿ ಅನೇಕ ಮತ್ಸ್ಯಗಳೊಡನೆ ಆ ಮತ್ಸ್ಯವನ್ನೂ ಹಿಡಿದು ಅದನ್ನು ಶಂಬರನಿಗೆ ಕಾಣಿಕೆಯಾಗಿ ಕೊಟ್ಟರು ; ಆತನಿಗೆ ಪಾಕಮಾಡುವವರು ಅದನ್ನು ಅಡಿಗೇಮನೆಗೆ ತೆಗೆದುಕೊಂಡು ಹೋಗಿ ಖಡ್ಗದಿಂದ ಭೇದಿಸಿ ಅದರ ಉದರದಲ್ಲಿ ಆ ಬಾಲಕನನ್ನು ನೋಡಿ ಅವನನ್ನು ಶಂಬರನ ಪತ್ನಿಯಾದ ಮಾಯಾವತಿಯೆಂಬವಳಿಗೆ ತೋರಿಸಿದರು ; ಅದನ್ನು ನೋಡಿ ಮಾಯಾವತಿಯು ಶಂಕಿತಳಾಗಿರಲು ನಾರದಋಷಿಯು ಬಂದು ಆ ಶಿಶುವಿನ ಉತ್ಪತ್ತಿಕ್ರಮವನ್ನೂ ಅವನು ಕಾಮನೆಂದೂ ಆಕೆಯ ಪತಿಯೆಂದೂ ಹೇಳಿದನು ; ಮಾಯಾವತಿಯು ಪೂರ್ವದಲ್ಲಿ ರತಿದೇವಿಯಾದ್ದರಿಂದ ಪತಿಗೆ ಪುನಹ ದೇಹಪ್ರಾಪ್ತಿಯನ್ನೇ ಪ್ರತೀಕ್ಷಿಸಿಕೊಂಡಿದ್ದಳು ; ಪ್ರದ್ಯುಮ್ನನು ಕೆಲವುಕಾಲದಮೇಲೆ ಯೌವನಭಾವವುಳ್ಳವನಾಗಿ ನೋಡುವ ಸ್ತ್ರೀಯರಿಗೆ ಉಲ್ಲಾಸಕಾರಿಯಾದನು ; ಪದ್ಮದಳಾಕ್ಷನಾಗಿ ದೀರ್ಘಬಾಹುವಾಗಿ ಮನುಷ್ಯಲೋಕದಲ್ಲಿ ಬಹು ಸುಂದರನಾಗಿದ್ದ ಪ್ರದ್ಯುಮ್ನನನ್ನು ನೋಡಿ ಮಾಯಾವತಿಯು ತನ್ನ ಪತಿಯೆಂದು ತಿಳಿದು ಸಂತೋಷದಿಂದ ವಿಕಸಿತನೇತ್ರಳಾಗಿ ಹಾವಭಾವವಿಲಾಸಗಳಿಂದ ಅವನನ್ನು ಮೋಹಿಸಿದಳು ; ಭಗವಂತನಾದ ಪ್ರದ್ಯುಮ್ನನು ಮಾಯಾವತಿಯನ್ನು ಕುರಿತು "ಎಲೌ ತಾಯೆ, ಮಾತೃಭಾವವನ್ನು ಬಿಟ್ಟು ನಿನ್ನ ಬುದ್ಧಿಯು ಕಾಮುಕಾಸ್ತ್ರೀಯಂತೆ ನನ್ನಲ್ಲಿರುವಹಾಗಿದೆ" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಮಾಯಾವತಿಯು ಪ್ರದ್ಯುಮ್ನನನ್ನು ಕುರಿತು "ಎಲೈ ಪುರುಷನೆ, ನೀನು ನಾರಾಯಣನ ಪುತ್ರನು ; ಶಂಬರಾಸುರನಿಂದ ಬಲಾತ್ಕಾರದಿಂದ ಅಪಹೃತನಾಗಿ ಇಲ್ಲಿಗೆ ಬಂದೆ ; ನಾನು ನಿನ್ನ ಪತ್ನಿಯಾದ ರತಿಯು ; ನೀನು ನನ್ನ ಪತಿಯಾದ ಕಾಮನು ; ಶಂಬರನು ಶಿಶುವಾದ ನಿನ್ನನ್ನಪಹರಿಸಿಕೊಂಡು ಬಂದು ಸಮುದ್ರದಲ್ಲಿ ಹಾಕಿದನು ; ಬಂದು ಮತ್ಸ್ಯವು ನಿನ್ನನ್ನು ನುಂಗಿತು ; ಅದರಿಂದ ನೀನು ಇಲ್ಲಿಗೆ ಬಂದೆ ; ಆದಕಾರಣ ಜಯಿಸಲಶಕ್ಯನಾಗಿ ನಿನಗೆ ಶತ್ರುವಾದ ಶಂಬರನನ್ನು ಸಂಹರಿಸು ; ಈ ಅಸುರನು ಮಾಯಾಶತವನ್ನು ಬಲ್ಲನು ; ನೀನೂ ಅದೇ ರೀತಿ ಮಾಯೆಗಳಿಂದ ಅವನನ್ನು ಮೋಹಿಸುವಂತೆ ಮಾಡಿ ಸಂಹರಿಸು ; ನಿನ್ನ ಮಾತೃವಾದ ರುಕ್ಮಿಣಿಯು ಪುತ್ರನಾದ ನಿನ್ನನ್ನು ಕಾಣದೆ ಕುರರೀ ಪಕ್ಷಿಯಂತೆ ರೋದನಗೈಯುತ ಪುತ್ರಸ್ನೇಹಪರವಶಳಾಗಿ ಕರವನ್ನು ಕಾಣದ ಗೋವಿನಂತೆ ವ್ಯಸನಪಡುತ್ತಾಳೆ" ಎಂದು ಹೇಳಿ ಮಹಾತ್ಮನಾದ ಪ್ರದ್ಯುಮ್ನನಿಗೆ ಸರ್ವಮಾಯೆಗಳನ್ನೂ ಪರಿಹರಿಸುವ ಮಹಾ ಮಾಯಾವಿದ್ಯವನ್ನು ಬೋಧಿಸಿದಳು !

ಅನಂತರದಲ್ಲಿ ಪ್ರದ್ಯುಮ್ನನು ಅಸಹ್ಯಗಳಾದ ದುರ್ಭಾಷೆಗಳಿಂದ ಶಂಬರನಿಗೆ ಕೋಪವನ್ನುಟ್ಟಿಸಿ ಅವನನ್ನು ಯುದ್ಧಕ್ಕೆ ಕರೆದನು ; ಶಂಬರನು ಪ್ರದ್ಯುಮ್ನನ ದುರ್ಭಾಷೆಗಳನ್ನು ಸಹಿಸದೆ ಕಾಲಿಂದ ತುಳಿಯಲ್ಪಟ್ಟ ಸರ್ಪದಂತೆ ಕೋಪಿಷ್ಠನಾಗಿ ಗದಾಪಾಣಿಯಾಗಿ ಯುದ್ಧಾರ್ಥವಾಗಿ ಬಂದು ಮಹಾತ್ಮನಾದ ಪ್ರದ್ಯುಮ್ನನಮೇಲೆ ಗದೆಯನ್ನು ಪ್ರಯೋಗಿಸಿ ಸಿಡಿಲಿನಂತೆ ಗರ್ಜಿಸಿದನು ; ಭಗವಂತನಾದ ಪ್ರದ್ಯುಮ್ನನು ತನ್ನಮೇಲೆ ಬರುತಿದ್ದ ಆ ಗದೆಯನ್ನು ತನ್ನ ಗದೆಯಿಂದ ಭಗ್ನಮಾಡಿ ಗರ್ಜಿಸುತ ತನ್ನ ಗದೆಯನ್ನು ಶಂಬರನಮೇಲೆ ಪ್ರಯೋಗಿಸಿದನು ; ಶಂಬರನು ಮಾಯೆಯನ್ನಾಶ್ರಯಿಸಿ ಅಂತರಿಕ್ಷದಲ್ಲಿದ್ದುಕೊಂಡು ಪ್ರದ್ಯುಮ್ನನಮೇಲೆ ಶಿಲಾವರ್ಷವನ್ನು ಕರೆದನು ; ರುಕ್ಮಿಣೀಪುತ್ರನಾಗಿ ಮಹಾ ರಥಿಕನಾದ ಪ್ರದ್ಯುಮ್ನನು ಆ ಶಿಲಾವರ್ಷದಿಂದ ಪೀಡಿತನಾಗಿ ಸಮಸ್ತ ಮಾಯಾನಾಶಕವಾಗಿ ಸತ್ವಮಯವಾದ ಮಹಾಮಾಯೆಯನ್ನು ಪ್ರಯೋಗಿಸಿದನು ; ಅನಂತರದಲ್ಲಿ ಶಂಬರನು ಯಕ್ಷಮಾಯೆಗಳು ಗಂಧರ್ವಮಾಯೆಗಳು ಪಿಶಾಚಮಾಯೆಗಳು ರಾಕ್ಷಸಮಾಯೆಗಳು ಮೊದಲಾದ ಮಾಯೆಗಳನ್ನು ಆಕರ್ಷಿಸಿದನು ; ಪ್ರದ್ಯುಮ್ನನು ಆ ಮಾಯೆಗಳೆಲ್ಲವನ್ನು ಕ್ಷಣಮಾತ್ರದಲ್ಲಿ ಸಂಹರಿಸಿ ತೀಕ್ಷ್ಣವಾದ ಖಡ್ಗವನ್ನು ತೆಗೆದುಕೊಂಡು ಕಿರೀಟಕುಂಡಲಸಮೇತವಾದ ಶಂಬರನ ಶಿರಸ್ಸನ್ನು ಛೇದಿಸಿ ಕಡೆಹಿ ದೇವತೆಗಳಿಂದ ಪುಷ್ಪವೃಷ್ಟಿಗಳನ್ನು ಕರೆಯಿಸಿಕೊಂಡು ಸ್ತುತಿಮಾಡಿಸಿಕೊಳ್ಳುತ ಆಕಾಶಚಾರಿಣಿಯಾದ ಮಾಯಾವತಿಯಿಂದ ಆಕಾಶಮಾರ್ಗದಲ್ಲಿ ಕರೆದುಕೊಂಡು ಬರಲ್ಪಟ್ಟು ದ್ವಾರಕಾಪಟ್ಟಣಕ್ಕೆ ಹೋಗಿ ಮಾಯಾವತಿಯೊಡನೆ ಮಿಂಚಿನೊಡಗೂಡಿದ ಮೇಘದಂತೆ ಹೊಳೆ

ಯುಂತ ಅನೇಕಸ್ತ್ರೀಸಂಕುಲವಾದ ಅಂತಃಪುರವನ್ನು ಪ್ರವೇಶಿಸಿದನು! ಆ ಅಂತಃಪುರದಲ್ಲಿದ್ದ ಶ್ರೀಕೃಷ್ಣನ ಪತ್ನಿಯರು ನೀಲಮೇಘಶ್ಯಾಮನಾಗಿ ಪೀತಾಂಬರಧಾರಿಯಾಗಿ ಅಜಾನುಬಾಹುವಾಗಿ ಕೆಂಪಾದ ನೇತ್ರವುಳ್ಳವನಾಗಿ ಮಂದಸ್ಮಿತವುಳ್ಳವನಾಗಿ ಮನೋಹರವಾದ ಕುಂಡಲಗಳುಳ್ಳವನಾಗಿ ನೀಲವಾದ ಮುಂಗುರುಳುಗಳಿಂದಲಂಕೃತವಾದ ಮುಖವುಳ್ಳವನಾಗಿ ಬಂದ ಪ್ರದ್ಯುಮ್ನನನ್ನು ನೋಡಿ ಕೃಷ್ಣನೆಂದೆಣಿಸಿ ಲಜ್ಜೆಯಿಂದ ಅಲ್ಲಲ್ಲಿ ಬಚ್ಚಿಟ್ಟುಕೊಂಡು ನೋಡುತ ಕೆಲವು ಲಕ್ಷಣಗಳಿಂದ ಕೃಷ್ಣನಲ್ಲವೆಂದು ನಿಶ್ಚಯಿಸಿ ಎಲ್ಲರು ಹತ್ತಿರಕ್ಕೆ ಬಂದು ನೋಡಿದರು; ಆಗ ಮಧುರಾಲಾಪಾವತಿಯಾಗಿ ನೀಲವಾದ ಕಡೆಗಣ್ಣೋಟವುಳ್ಳ ರುಕ್ಮಿಣಿಯು ತನ್ನ ಪುತ್ರನನ್ನು ಸ್ಮರಿಸಿಕೊಂಡು ಪುತ್ರಸ್ನೇಹದಿಂದ ಸೋರೆಯುವ ಸ್ತನಗಳುಳ್ಳವಳಾಗಿ ತನ್ನ ಮನಸ್ಸಿನಲ್ಲಿ "ಈ ಪುರುಷಶ್ರೇಷ್ಠನು ಯಾರು! ಯಾರ ಮಗನು! ಪದ್ಮಲೋಚನನಾಗಿಧಾನೆ; ಸೂತಿಕಾಗೃಹದಿಂದ ಅಪಹರಿಸಲ್ಪಟ್ಟ ನನ್ನ ಪುತ್ರನು ಯಾರಿಂದ ಪೋಷಿತನಾದನೊ—ಯಾರಿಗೆ ಲಬ್ಧನಾದನೊ! ಇವನಿಗೆ ಸಮಾನವಾದ ವಯಸ್ಸೂ ರೂಪವು ಉಳ್ಳ ನನ್ನ ಮಗನು ಎಲ್ಲಾದರು ಜೀವಿಸಿಕೊಂಡಿದ್ದರೆ ನೋಡುವೆನು; ಈ ಪುರುಷನಿಂದ ಶ್ರೀಕೃಷ್ಣನ ಸಾರೂಪ್ಯವು ಹ್ಯಾಗೆ ಪಡೆಯಲ್ಪಟ್ಟಿತು! ಈತನು ಆಕೃತಿಯಿಂದಲೂ ಅಂಗಗಳಿಂದಲೂ ಗಮನದಿಂದಲೂ ಸ್ವರದಿಂದಲೂ ಹಾಸದಿಂದಲೂ ನೋಟಗಳಿಂದಲೂ ಶ್ರೀಕೃಷ್ಣನನ್ನು ಹೋಲಿಧಾನೆ; ಇವನು ನಾನು ಗರ್ಭದಲ್ಲಿ ಧರಿಸಿದ ಬಾಲಕನೇ ಆಗಿರಬಹುದು; ಇವನಲ್ಲಿ ನನಗೆ ಪ್ರೀತಿಯು ಅಧಿಕವಾಗಿದೆ; ನನ್ನ ವಾಮಭುಜವು ಅದರುತ್ತದೆ" ಎಂದು ಚಿಂತಿಸುತಿದ್ದಳು.

ಆ ಸಮಯದಲ್ಲಿ ದೇವಕೀ ವಸುದೇವರ ಸಮೇತನಾಗಿ ಶ್ರೀಕೃಷ್ಣನು ಅಲ್ಲಿಗೆ ಬಂದು ಸರ್ವಜ್ಞನಾದಾಗ್ಯೂ ಸುಮ್ಮನಿದ್ದನು; ಆಗ ನಾರದಋಷಿಯು ಅಲ್ಲಿಗೆ ಬಂದು ಪ್ರದ್ಯುಮ್ನನು ಶಂಬರಾಸುರನಿಂದ ಅಪಹರಿಸಲ್ಪಟ್ಟ ವೃತ್ತಾಂತವನ್ನೂ ಆತನು ಮಾಯಾವತಿಯಿಂದ ಪೋಷಿಸಲ್ಪಟ್ಟದ್ದು ಮೊದಲಾದವನ್ನು ಹೇಳಿದನು; ಅತ್ಯಾಶ್ಚರ್ಯಕರವಾದ ಆ ವೃತ್ತಾಂತವನ್ನು ಕೇಳಿ ಅಂತಃಪುರದ ಸ್ತ್ರೀಯರು ಆಶ್ಚರ್ಯಪಟ್ಟು ಬಹುಕಾಲಕ್ಕೆ ಕಳವಾಗಿ ಶಿಕ್ಕಿದ ಪುತ್ರನನ್ನು ನೋಡಿ ಸಂತೋಷಪಟ್ಟರು; ದೇವಕೀವಸುದೇವರೂ ರಾಮಕೃಷ್ಣರೂ ಮಿಕ್ಕವರೆಲ್ಲರೂ ಆ ದಂಪತಿಗಳನ್ನಾಲಿಂಗನ ಮಾಡಿಕೊಂಡರು; ರುಕ್ಮಿಣೀದೇವಿಯು ಅತ್ಯಂತ ಸಂತೋಷಪಟ್ಟಳು; ತಪ್ಪಿಹೋದ ಪ್ರದ್ಯುಮ್ನನು ತಿರಿಗಿ ಬಂದನೆಂಬ ಸಮಾಚಾರವನ್ನು ಕೇಳಿ ದ್ವಾರಕಾವಾಸಿಗಳು ಮೃತನಾದ ಪುತ್ರನು ಬದುಕಿಬಂದಂತಾಯಿತೆಂದು ಸಂತೋಷಪಟ್ಟರು! ಕೃಷ್ಣನಿಗೆ ಸಮಾನವಾದ ರೂಪವುಳ್ಳ ಪ್ರದ್ಯುಮ್ನನಲ್ಲಿ ಕೃಷ್ಣನೆಂಬ ಭ್ರಾಂತಿಯಿಂದ ಕೃಷ್ಣನ ಪತ್ನಿಯರೂ ರಹಸ್ಯದಲ್ಲಿ ಮೋಹಿತರಾಗುವರು; ಅಂಥಾ ಸಾಕ್ಷಾತ್ ಮನ್ಮಥನನ್ನು ನೋಡಿದರೆ ಮಿಕ್ಕ ಸ್ತ್ರೀಯರು ಮೋಹಿಸುವದರಲ್ಲಿ ಆಶ್ಚರ್ಯವೇನು!

---

## ೫೬ ನೇ ಅಧ್ಯಾಯ.

### ಕೃಷ್ಣನು ಸತ್ಯಭಾಮೆಯನ್ನು ಮದಿವೆಮಾಡಿಕೊಂಡದ್ದು.

ಎಲೈ ಅರಸೆ, ಸತ್ರಾಜಿತ್ ರಾಯನು ಭಗವಂತನಿಗೆ ಅಪರಾಧವನ್ನು ಮಾಡಿ ಅಪರಾಧಪರಿಹಾರಾರ್ಥವಾಗಿ ಶಮಂತಕವೆಂಬ ಮಣಿಯೊಡನೆ ತನ್ನ ಪುತ್ರಿಯಾದ ಸತ್ಯಭಾಮೆಯನ್ನು ಶ್ರೀಕೃಷ್ಣನಿಗೆ ಕೊಟ್ಟನು!

[ಈರೀತಿ ನುಡಿದ ಶುಕಮುನಿಯ ವಾಕ್ಯವನ್ನು ಕೇಳಿ ಪರೀಕ್ಷಿದ್ರಾಯನು—ಎಲೈ ಶುಕಾಚಾರ್ಯನೆ, ಸತ್ರಾಜಿತ್ ರಾಯನು ಶ್ರೀಕೃಷ್ಣನಿಗೆ ಏನು ಅಪರಾಧವನ್ನು ಮಾಡಿದನು? ಸತ್ರಾಜಿತ್ತಿಗೆ ಶಮಂತಕಮಣಿಯು ಹ್ಯಾಗೆ ಬಂತು? ಯಾವನಿಮಿತ್ತದಿಂದ ಮಗಳನ್ನು ಕೃಷ್ಣನಿಗೆ ಕೊಟ್ಟನು? ಎಂದು ಕೇಳಿದನು.]

ಶುಕಮುನೀಶ್ವರನು ಆತನನ್ನು ಕುರಿತು "ಎಲೈ ಅರಸೆ, ಸತ್ರಾಜಿತ್ ರಾಯನು ಸೂರ್ಯನ ಭಕ್ತನಾದಕಾರಣ ಸೂರ್ಯನು ಆತನಲ್ಲಿ ಮೈತ್ರಿಯುಳ್ಳವನಾಗಿ ಸಂತೋಷದಿಂದ ಶಮಂತಕವೆಂಬ ಮಹಾಮಣಿಯನ್ನು ಕೊಟ್ಟ

ನು; ಒಂದು ಸಮಯದಲ್ಲಿ ಸತ್ರಾಜಿತ್ರಾಯನು ದ್ವಾರಕಾಪುರಕ್ಕೆ ಬರಲು ಆ ಮಣಿಪ್ರಭೆಯಿಂದ ಆತನ ಗುರುತುತಿಳಿಯದೆ ಆ ಪುರವಾಸಿಗಳು ದೂರದಲ್ಲೇ ನೋಡಿ ಸೂರ್ಯನು ಬಂದನೆಂದೆಣಿಸಿ ಪಗಡೇಕಾಯಿಗಳನ್ನಾಡುತಿದ್ದ ಕೃಷ್ಣನ ಬಳಿಗೆ ಹೋಗಿ ಆತನನ್ನು ಕುರಿತು "ಶಂಖಚಕ್ರಗದಾಧರನಾದ ನಾರಾಯಣನೆ ನಿನಗೆ ನಮಸ್ಕಾರ; ದಾಮೋದರನಾಗಿ ಅರವಿಂದಾಕ್ಷನಾಗಿ ಗೋವಿಂದನಾದ ಯಾದವಪತಿಯೆ, ಜಗತ್ಪತಿಯಾದ ಸೂರ್ಯನು ನಿನ್ನನ್ನು ನೋಡಲೋಸುಗ ಕಿರಣಸಮೂಹಗಳಿಂದ ಮನುಷ್ಯರ ಕಣ್ಣುಗಳನ್ನು ಮುಚ್ಚಿಸುತ ಬರುತ್ತಾನೆ! ಎಲೈ ಪ್ರಭುವಾದ ಶ್ರೀಕೃಷ್ಣನೆ, ಮಾನುಷಲೋಕದಲ್ಲಿ ಗೂಢವಾದ ನಿನ್ನನ್ನು ನೋಡಲೋಸುಗ ದೇವತೆಗಳೆಲ್ಲರು ಅಪೇಕ್ಷಿಸುತ್ತಾರಾದ್ದರಿಂದ ಈಗ ಸೂರ್ಯನು ಬರುತ್ತಿದ್ದಾನೆ" ಅಂದರು.

ಆ ಬಾಲಕ ವಚನವನ್ನು ಕೇಳಿ ಭಗವಂತನು ನಗುತ "ಎಲೈ ಜನಗಳಿರಾ, ಈಗ ಬರುವವನು ಸೂರ್ಯದೇವನಲ್ಲ; ಮಣಿಯಿಂದ ಪ್ರಕಾಶಿಸುತ ಸತ್ರಾಜಿತ್ರಾಯನು ಬರುತ್ತಾನೆ" ಎಂದು ನುಡಿದನು.

ಅನಂತರದಲ್ಲಿ ಸತ್ರಾಜಿತ್ರಾಯನು ತನ್ನ ಮನೆಗೆ ಹೋಗಿ ಮಹೋತ್ಸವವನ್ನು ಮಾಡಿ ಬ್ರಾಹ್ಮಣರೊಡನೆ ಸ್ವಸ್ತಿವಾಚಕಪೂರ್ವಕವಾಗಿ ದೇವತಾರ್ಚನಗೃಹದಲ್ಲಿ ಆ ಮಣಿಯನ್ನಿಟ್ಟು ಪೂಜಿಸಿದನು; ಆ ಮಣಿಯು ಪ್ರತಿದಿವಸದಲ್ಲಿಯು ಎಂಟುಭಾರ ಪ್ರಮಾಣವಾದ ಸುವರ್ಣವನ್ನು ಕೊಡುವದು! ನಾಲ್ಕು ಭತ್ತದಕಾಳು ಕೂಡಿದರೆ ಒಂದು ಗುಲಗಂಜೀತೂಕವು; ಐದು ಗುಲಗಂಜೀತೂಕವು ಒಂದು ಹಣವೆನಿಸಿಕೊಳ್ಳುವದು; ಎಂಟು ಹಣಗಳು ಒಂದು ಧರಣವು; ಎಂಟು ಧರಣಗಳು ಒಂದು ಕರ್ಷಣವು; ನಾಲ್ಕು ಕರ್ಷಣಗಳು ಒಂದು ಪಲವು; ನೂರುಪಲಗಳು ಒಂದು ತೊಲೆಯು; ಇಪ್ಪತ್ತು ತೊಲೆಗಳು ಒಂದು ಭಾರವು! ಇಂಥಾ ಭಾರಗಳೆಂಟನ್ನು ಆ ಶಮಂತಕಮಣಿಯು ಪ್ರತಿದಿವಸದಲ್ಲಿಯೂ ಕೊಡುತಿತ್ತು; ಆ ಮಣಿಯನ್ನು ಪೂಜೆಮಾಡಿಕೊಂಡಿದ್ದ ಸ್ಥಳದಲ್ಲಿ ದುರ್ಭಿಕ್ಷವು ಮೃತ್ಯುಭಯವು ಅರಿಷ್ಟಗಳು ವ್ಯಾಧಿಗಳು ಸರ್ಪಭಯವು ಮಾಯಾಕಪಟಗಳು ಮೊದಲಾದವ್ಯಾವೂ ಸೇರುವದಿಲ್ಲ! ಶ್ರೀಕೃಷ್ಣನು ಉಗ್ರಸೇನನಿಗಾಗಿ ಆ ಮಣಿಯನ್ನು ಕೇಳಿದನು; ಸತ್ರಾಜಿತ್ರಾಯನು ಧನಲೋಭದಿಂದ ಭಗವಂತನು ಕೇಳಿದಾಗ್ಯೂ ಕೊಡದೆಹೋದನು! ಹೀಗಿರುವಲ್ಲಿ ಒಂದುದಿವಸ ಸತ್ರಾಜಿತ್ತಿನ ಭ್ರಾತೃವಾದ ಪ್ರಸೇನನು ಪ್ರಕಾಶಮಾನವಾದ ಆ ಮಣಿಯನ್ನು ಕಂಠದಲ್ಲಿ ಧರಿಸಿಕೊಂಡು ಅಶ್ವಾರೂಢನಾಗಿ ಬೇಟೆಗೆ ಹೋದನು; ಆ ಅರಣ್ಯದಲ್ಲಿ ಒಂದು ಸಿಂಹವು ಪ್ರಸೇನನನ್ನೂ ಆತನ ಅಶ್ವವನ್ನೂ ಸಂಹರಿಸಿ ಮಣಿಯನ್ನಪರಿಸಿಕೊಂಡು ಪರ್ವತದ ಗುಹೆಗೆ ಹೋಗುತಿದ್ದ ಸಮಯದಲ್ಲಿ ಜಾಂಬವಂತನು ಆ ಸಿಂಹವನ್ನು ಸಂಹರಿಸಿ ಆ ಮಣಿಯನ್ನು ತೆಗೆದುಕೊಂಡು ಹೋಗಿ ತನ್ನ ಕುಮಾರ್ತೆಗೆ ಆಡುವದಕ್ಕಾಗಿ ಕೊಟ್ಟನು; ಸತ್ರಾಜಿತ್ರಾಯನು ತಮ್ಮನನ್ನು ಕಾಣದೆ ದುಃಖಿತನಾಗಿ ಆತನನ್ನು ಕೃಷ್ಣನು ಸಂಹರಿಸಿದನೆಂದೆಣಿಸಿಕೊಂಡಿದ್ದನು; ಅದೇ ಪ್ರಕಾರದಲ್ಲಿ ಜನರು ಒಬ್ಬರಿಗೊಬ್ಬರು ರಹಸ್ಯವಾಗಿ ಮಾತಾಡಿಕೊಳ್ಳುವದನ್ನು ಕೇಳಿ ಭಗವಂತನು ತನಗೆ ಸುಮ್ಮನೆ ಅಪಕೀರ್ತಿಬಂತೆಂದಾಲೋಚಿಸಿ ಪುರವಾಸಿಗಳಾದ ಕೆಲವು ಜನರನ್ನು ಕರೆದುಕೊಂಡು ಪ್ರಸೇನನು ಹೋದ ಮಾರ್ಗದಲ್ಲಿ ಹುಡಿಕಿಕೊಂಡು ಹೋಗಿ ಅರಣ್ಯದಲ್ಲಿ ಸಿಂಹದಿಂದ ಸಂಹೃತನಾದ ಪ್ರಸೇನನನ್ನೂ ಕುದುರೆಯನ್ನೂ ಆಮೇಲೆ ಜಾಂಬವಂತನಿಂದ ಸಂಹೃತವಾದ ಆ ಸಿಂಹವನ್ನೂ ನೋಡಿ ಆ ಜನರಿಗೆ ತೋರಿಸಿ ಅವರನ್ನು ಹೊರಗೆ ನಿಲ್ಲಿಸಿ ತಾನೊಬ್ಬನೇ ಅಂಧಕಾರವ್ಯಾಪ್ತವಾದ ಜಾಂಬವಂತನ ಗುಹೆಯನ್ನು ಹೊಕ್ಕು ಹೋಗಿ ಒಳಗೆ ಒಬ್ಬ ಬಾಲಕನ ಸಮೀಪದಲ್ಲಿದ್ದ ಶಮಂತಕಮಣಿಯನ್ನು ನೋಡಿ ಅದನ್ನು ತೆಗೆದುಕೊಳ್ಳುತಿರಲು ಆಶ್ಚರ್ಯಕರವಾದ ಅಂಗಸೌಷ್ಠವುಳ್ಳ ಮಹಾಪುರುಷನಾದ ಶ್ರೀಕೃಷ್ಣನನ್ನು ನೋಡಿ ಆ ಬಾಲಕನ ತಾಯಿ ಭಯದಿಂದ ಕೂಗಿದಳು; ಆ ಶಬ್ದವನ್ನು ಕೇಳಿ ಬಲಿಷ್ಠನಾದ ಜಾಂಬವಂತನು ಕ್ರೋಧದಿಂದ ಓಡಿಬಂದು ಶ್ರೀಕೃಷ್ಣನ ಪ್ರಭಾವವನ್ನರಿಯದೆ ಸಾಧಾರಣ ಮನುಷ್ಯನೆಂದೆಣಿಸಿ ಯುದ್ಧಕ್ಕೆ ತೊಡಗಲು ಒಬ್ಬರನ್ನೊಬ್ಬರು ಜಯಿಸಬೇಕೆಂದು ಅವರಿಬ್ಬರಿಗೂ ಮಾಂಸನಿಮಿತ್ತವಾಗಿ ಗಿಡಗಪಕ್ಷಿಗಳಿಗೆ ಯುದ್ಧವಾದಂತೆ ಇಪ್ಪತ್ತೆಂಟು ದಿವಸಗಳ ಪರ್ಯಂತವು ಆಯುಧಗಳಿಂದಲೂ ಶಿಲಾವರ್ಷಗಳಿಂದಲೂ ವಜ್ರಪ್ರಹಾರಗಳಿಗೆ

ಸಮಾನಗಳಾದ ಮುಷ್ಟಿಪ್ರಹಾರಗಳಿಂದಲೂ ವಿಶ್ರಮವಿಲ್ಲದೆ ಅವಿಚ್ಛಿನ್ನವಾಗಿ ಯುದ್ಧವಾಯಿತು ; ಆ ಬಳಿಕ ಜಾಂಬವಂತನು ಶ್ರೀಕೃಷ್ಣನ ಮುಷ್ಟಿಪ್ರಹಾರಗಳಿಂದ ಶಿಥಿಲವಾದ ಸಂಧಿಗಳೂ ಅಂಗಗಳೂ ಉಳ್ಳವನಾಗಿ ಕ್ಷೀಣಬಲನಾಗಿ ಬೆವರಿದ ಶರೀರವುಳ್ಳವನಾಗಿ ಮಹರ್ಷಿಪರವಶನಾಗಿ ಆತನನ್ನು ಕುರಿತು "ಎಲೈ ಮಹಾಪುರುಷನೆ, ಸರ್ವಭೂತಗಳ ಪ್ರಾಣವು ಬಲವು ತೇಜಸ್ಸು ಕಾಯಬಲವು ಇಂದ್ರಿಯಬಲವು ಬುದ್ಧಿಬಲವು ಮೊದಲಾದವೆಲ್ಲವೂ ನೀನೇ ಎಂದು ತಿಳಿಯುತ್ತೇನೆ; ಪ್ರಭುವಾಗಿ ಪುರಾಣಪುರುಷನಾದ ಸಾಕ್ಷಾತ್ ವಿಷ್ಣುವು ನೀನೇ ಎಂದು ತಿಳಿಯುತ್ತೇನೆ; ಜಗತ್ಸೃಷ್ಟಿಕರ್ತೃಗಳಾದ ಬ್ರಹ್ಮಾದಿಗಳಿಗೂ ಸ್ರಷ್ಟ್ರವಾದವನೂ ಉತ್ತರೋತ್ತರ ಹುಟ್ಟುವ ಭೂತಗಳಿಗೂ ಕಾರಣನೂ ಕಾಲಸ್ವರೂಪನೂ ಅಂತರಾತ್ಮನು ನೀನೇ; ಯಾವ ಮಹಾಪುರುಷನ ಸ್ವಲ್ಪ ಕೋಪದಿಂದ ಕೂಡಿದ ಕಟಾಕ್ಷಪಾತಗಳಿಂದ ಭಯಪಟ್ಟ ಸಮುದ್ರನು ಭಯಪೀಡಿತಗಳಾದ ನಕ್ರಮಕರಾದಿ ಜಲಜಂತುಗಳುಳ್ಳವನಾಗಿ ಮಾರ್ಗವನ್ನು ಕೊಡಲು ಸೇತುವೆಯನ್ನು ಕಟ್ಟಿ ಕಪಿಸೇನಾಸಮೇತನಾಗಿ ಸಮುದ್ರವನ್ನು ದಾಟಿ ಲಂಕಾಪುರವನ್ನು ದಹಿಸಿ ರಾವಣನ ಸಿರಸ್ಸುಗಳನ್ನು ಬಾಣಗಳಿಂದ ಛೇದಿಸಿದನೊ ಅಂಥಾ ಶ್ರೀರಾಮನು ನೀನೇ ಎಂದು ತಿಳಿಯುತ್ತೇನೆ" ಎಂದು ನುಡಿದನು.

ಈರೀತಿ ತನ್ನನ್ನು ತಿಳಿದು ವಿಜ್ಞಾಪನೆಗೈಯುತಿದ್ದ ಭಕ್ತನಾದ ಜಾಂಬವಂತನನ್ನು ಶ್ರೀಕೃಷ್ಣನು ಹಸ್ತದಿಂದ ಸ್ಪರ್ಶನಮಾಡಿ ಕೃಪೆಯಿಂದಲೂ ಗಂಭೀರವಾದ ವಾಕ್ಯಗಳಿಂದಲೂ ಆತನನ್ನು ಕುರಿತು "ಎಲೈ ಋಕ್ಷಪತಿಯಾದ ಜಾಂಬವಂತನೆ, ಈ ಮಣಿಯ ನಿಮಿತ್ತವಾಗಿ ನಾನು ಇಲ್ಲಿಗೆ ಬಂದೆನು ; ಈ ಮಣಿಯಿಂದ ನನಗೆ ಮಿಥ್ಯಾಪವಾದವು ಬಂದಿಥೆ ; ಆ ಅಪವಾದ ಪರಿಹಾರಾರ್ಥವಾಗಿ ಈ ಬಿಲಕ್ಕೆ ಬಂದೆನು" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಜಾಂಬವಂತನು ಸಂತೋಷದಿಂದ ತನ್ನ ಪುತ್ರಿಯಾದ ಜಾಂಬವತಿಯನ್ನೂ ಆ ಮಣಿಯನ್ನೂ ಶ್ರೀಕೃಷ್ಣನಿಗೆ ಕಾಣಿಕೆಯಾಗಿ ಒಪ್ಪಿಸಿದನು! ಬಿಲದ ಹೊರಗಿದ್ದ ಕೃಷ್ಣನ ಅನುಚರರು ಆತನು ಬಿಲಪ್ರವೇಶಮಾಡಿದ ಮೊದಲು ಹನ್ನೆರಡು ದಿವಸ ಪರ್ಯಂತವು ಕಾದು ನೋಡಿ ಹೊರಗೆ ಬರದಿರಲು ದುಃಖಿತರಾಗಿ ಊರಿಗೆ ತಿರಿಗಿ ಹೋಗಿ ಆ ವೃತ್ತಾಂತವನ್ನು ಹೇಳಲು ದೇವಕೀದೇವಿಯು ವಸುದೇವನು ರುಕ್ಮಿಣಿಯು ಮೊದಲಾದ ಬಂಧುಗಳೆಲ್ಲರು ದುಃಖಪಟ್ಟು ಸತ್ರಾಜಿತ್ರಾಯನನ್ನು ಬಯ್ಯುತ ಆತನು ಕ್ಷೇಮದಿಂದ ಬರುವದಕ್ಕೋಸ್ಕರ ಮಹಾ ಮಾಯಾರೂಪಳಾದ ದುರ್ಗಾದೇವಿಯನ್ನು ಪ್ರಾರ್ಥಿಸುತ್ತಿದ್ದರು ; ಆ ಸಮಯದಲ್ಲಿ ಕೃಷ್ಣನು ಆ ಬಿಲದಿಂದ ಹೊರಟು ಜಾಂಬವತೀ ಶಮಂತಕಮಣೀ ಸಮೇತವಾಗಿ ಆವಿರ್ಭೂತನಾಗಿ ಅವರೆಲ್ಲರು ಮಹೋತ್ಸವವನ್ನೈದಿರಲು ರಾಜಸಭೆಯಲ್ಲಿ ಉಗ್ರಸೇನನಿಗೆದುರಾಗಿ ಸತ್ರಾಜಿತ್ರಾಯನನ್ನು ಕರೆಸಿ ಆ ಮಣಿಯು ಹೋಗಿ ಬಂದ ವೃತ್ತಾಂತವನ್ನು ಹೇಳಿ ಅದನ್ನು ಆತನಿಗೆ ಕೊಟ್ಟನು ; ಸತ್ರಾಜಿತ್ರಾಯನು ಲಜ್ಜೆಯಿಂದ ಶಿರವನ್ನು ಬೊಗ್ಗಿಸಿಕೊಂಡು ಪಶ್ಚಾತ್ತಪ್ತನಾಗಿ ತನ್ನ ಮನೆಗೆ ಬಂದು ತನ್ನ ಮನಸ್ಸಿನಲ್ಲಿ "ಬಲವದ್ವಿರೋಧವನ್ನು ಭಾವಿಸಿದ ಅಪರಾಧವನ್ನು ನಾನು ಹ್ಯಾಗೆ ಪರಿಹರಿಸಿಕೊಳ್ಳಲಿ! ಕೃಷ್ಣನಿಗೆ ನನ್ನಲ್ಲಿ ಹ್ಯಾಗೆ ವಿಶ್ವಾಸವುಟ್ಟೀತು! ಏನು ಮಾಡಿದರೆ ಈ ಅಪರಾಧವು ಪರಿಹಾರವಾದೀತು! ಜನರು ನನ್ನನ್ನು ಹ್ಯಾಗೆ ಬಯ್ಯದಿದ್ದಾರು! ದುರಾಲೋಚನೆಯನ್ನು ಮಾಡಿ ದ್ರವ್ಯಲೋಭವುಳ್ಳವನಾಗಿ ಕ್ಷುದ್ರನಾದ ನನ್ನನ್ನು ಜನರು ಹ್ಯಾಗೆ ದೂಷಣಂಗೈಯದಿರುವರು! ನನ್ನ ಪುತ್ರಿಯಾದ ಸತ್ಯಭಾಮೆಯನ್ನೂ ಈ ಮಣಿಯನ್ನೂ ಶ್ರೀಕೃಷ್ಣನಿಗೆ ಕೊಡುವದೇ ಉತ್ತಮವು" ಎಂದು ಆಲೋಚಿಸಿ ಶುಭಲಕ್ಷಣವುಳ್ಳವಳಾಗಿ ತನ್ನ ಪುತ್ರಿಯಾದ ಸತ್ಯಭಾಮೆಯನ್ನೂ ಶಮಂತಕಮಣಿಯನ್ನೂ ಶ್ರೀಕೃಷ್ಣನಿಗೆ ಕಾಣಿಕೆಯಾಗಿ ಒಪ್ಪಿಸಿದನು.

ಆಮೇಲೆ ಶ್ರೀಕೃಷ್ಣನು ಯಥಾವಿಧಿಯಾಗಿ ರೂಪೌದಾರ್ಯಗುಣಸಂಪನ್ನಳಾದಕಾರಣ ಕೃತವರ್ಮಾದಿಗಳು ಮೊದಲಾದ ಬಹುಮಂದಿ ಅರಸರಿಂದ ಅಪೇಕ್ಷಿಸಲ್ಪಟ್ಟ ಸತ್ಯಭಾಮೆಯನ್ನು ವಿವಾಹಮಾಡಿಕೊಂಡು ಸತ್ರಾಜಿತ್ರಾಯನನ್ನು ಕುರಿತು "ಎಲೈ ಸತ್ರಾಜಿತ್ರಾಯನೆ, ಈ ಮಣಿಯು ನಿನ್ನಲ್ಲಿರಲಿ; ನೀನು ಸೂರ್ಯನ ಭಕ್ತನು ;

ನಿನಗೆ ಸೂರ್ಯನು ಕೊಟ್ಟದ್ದು ನಿನ್ನಲ್ಲೇ ಇರಲಿ; ನಾವು ಫಲಭಾಗಿಗಳು" ಎಂದು ಹೇಳಿ ಮನಸ್ಸಿನಲ್ಲಿ ಆ ರಾಯನು ಅಪುತ್ರನಾದ್ದರಿಂದ ಆತನ ಧನವೆಲ್ಲವು ತನಗೆ ಬರುವದೆಂಬ ಗೂಢಾಭಿಪ್ರಾಯವನ್ನಿಟ್ಟು ಆ ಮಣಿಯನ್ನು ಸತ್ರಾಜಿತ್ರಾಯನಿಗೆ ಕೊಟ್ಟನು!

## ೫೭ ನೇ ಅಧ್ಯಾಯ.

### ಕೃಷ್ಣನು ಶತಧನ್ವನನ್ನು ವಧಿಸಿದ್ದು.

ಎಲೈ ಅರಸೆ, ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಲಾಕ್ಷಾಗೃಹದಲ್ಲಿ ಪಾಂಡವರೂ ಕುಂತಿಯೂ ದಗ್ಧರಾದರೆಂಬ ಸಮಾಚಾರವನ್ನು ಕೇಳಿ ಬಲರಾಮನ ಸಮೇತನಾಗಿ ಪಾಂಡವರು ಬಿಲದ್ವಾರಮಾರ್ಗದಿಂದ ತಪ್ಪಿಸಿಕೊಂಡು ಹೋದರೆಂಬ ಅರ್ಥವನ್ನು ತಿಳಿದಿದ್ದಾಗ್ಯೂ ಲೋಕಾಪವಾದಪರಿಹಾರಾರ್ಥವಾಗಿ ಹಸ್ತಿನಾಪುರಕ್ಕೆ ತೆರಳಿಹೋಗಿ ಭೀಷ್ಮನನ್ನೂ ಧೃತರಾಷ್ಟ್ರನನ್ನೂ ವಿದುರನನ್ನೂ ಗಾಂಧಾರಿಯನ್ನೂ ದ್ರೋಣಾಚಾರ್ಯನನ್ನೂ ಐದಿ ಬಹು ದುಃಖದಿಂದ ಪಾಂಡವರಿಗೆ ಅಂಥಾ ವಿಪತ್ತು ಬರಬಹುದೇ ಎಂದು ಖಿನ್ನನಾಗಿ ನುಡಿದನು; ಆ ಸಮಯದಲ್ಲಿ ಅಕ್ರೂರನೂ ಕೃತವರ್ಮನೂ ಶತಧನ್ವನನ್ನು ಕುರಿತು "ಎಲೈ ಶತಧನ್ವನೆ, ಸತ್ರಾಜಿತ್ರಾಯನ ಶಮಂತಕಮಣಿಯನ್ನು ಏನುನಿಮಿತ್ತವಾಗಿ ನೀನು ಅಪಹರಿಸಲಿಲ್ಲ! ದುಷ್ಟನಾದ ಸತ್ರಾಜಿತ್ತನು ತನ್ನ ಪುತ್ರಿಯನ್ನು ನಮಗೆ ಕೊಡುವದಾಗಿ ಹೇಳಿ ನಮ್ಮನ್ನು ಲಕ್ಷ್ಯಮಾಡದೆ ಕೃಷ್ಣನಿಗೆ ಕೊಟ್ಟನು; ಆದ್ದರಿಂದ ಸತ್ರಾಜಿತ್ತನು ತನ್ನ ತಮ್ಮನಾದ ಪ್ರಸೇನನ ಮಾರ್ಗವನ್ನೈದಲಿ; ಅವನನ್ನು ಸಂಹರಿಸಿ ಆ ಮಣಿಯನ್ನಪಹರಿಸು" ಎಂದು ಬೋಧಿಸಿದರು.

ದುಷ್ಟನಾದ ಶತಧನ್ವನು ಕ್ಷೀಣವಾದ ಆಯುಸ್ಸುಳ್ಳ ಪಾಪಿಷ್ಠನಾದಕಾರಣ ಮಲಗಿದ್ದ ಸತ್ರಾಜಿತ್ರಾಯನನ್ನು ಆ ಮಣಿಲೋಭದಿಂದ ಆತನ ಸ್ತ್ರೀಯರು ಅನಾಥರಂತೆ ರೋದನಗೈಯುತಿರಲು ಮಾಂಸವಿಕ್ರಯಮಾಡುವ ಕಟುಕನು ಪಶುವನ್ನು ಸಂಹರಿಸುವಂತೆ ಆ ರಾಯನನ್ನು ಸಂಹರಿಸಿ ಆ ಮಣಿಯನ್ನು ತೆಗೆದುಕೊಂಡು ಹೋದನು! ಸತ್ಯಭಾಮೆಯು ತನ್ನ ತಂದೆಯು ಮೃತನಾದದ್ದನ್ನು ನೋಡಿ "ಎಲೈ ತಂದೆಯೇ! ಎಲೈ ಅಪ್ಪಾ!" ಎಂದು ಅಳುತ ಮೂರ್ಛಿತಳಾದಳು; ಆಮೇಲೆ ತಿಳಿದೆದ್ದು ತೈಲದೋಣಿಯಲ್ಲಿ ತಂದೆಯ ದೇಹವನ್ನಿರಿಸಿ ಹಸ್ತಿನಾಪುರಕ್ಕೆ ಹೋಗಿ ಈ ಅನರ್ಥವನ್ನು ಮೊದಲೇ ತಿಳಿದಿದ್ದ ಸರ್ವಜ್ಞನಾದ ಕೃಷ್ಣನಿಗೆ ಹೇಳಿದನು; ಆ ವಾಕ್ಯವನ್ನು ಕೇಳಿ ರಾಮಕೃಷ್ಣನು ಪ್ರಾಕೃತಮಾನುಷರೀತಿಯನ್ನವಲಂಬಿಸಿ "ಹಾ! ನಮಗೆ ಏನುಕಷ್ಟಬಂತು!" ಎಂದು ಬಾಷ್ಪನೇತ್ರರಾಗಿ ಶೋಕಪಡುತ ಸತ್ಯಭಾಮಾಯುಕ್ತರಾಗಿ ದ್ವಾರಕಾಪುರಕ್ಕೆ ಬಂದು ಶತಧನ್ವನನ್ನು ಸಂಹರಿಸಲು ಪ್ರಯತ್ನವನ್ನು ಮಾಡಿದರು; ಶತಧನ್ವನು ಶ್ರೀಕೃಷ್ಣನ ಪ್ರಯತ್ನವನ್ನು ತಿಳಿದು ಭೀತನಾಗಿ ಜೀವವನ್ನುಳಿಸಿಕೊಳ್ಳಲೋಸುಗ ಕೃತವರ್ಮನನ್ನು ಸಹಾಯಾರ್ಥವಾಗಿ ಕರೆದನು; ಆತನು "ಜಗದೀಶ್ವರರಾದ ರಾಮಕೃಷ್ಣರಿಗೆ ನಾನು ವಿರೋಧವನ್ನು ಮಾಡುವದಿಲ್ಲ; ಅವರಿಗೆ ಅಪಕಾರವನ್ನು ಚಿಂತಿಸಿದವರು ಯಾರಾದರು ಕ್ಷೇಮವಂತರಾದಾರೆ! ಕೃಷ್ಣವಿರೋಧಿಯಾದ್ದರಿಂದ ಕಂಸನು ಸಪರಿವಾರನಾಗಿ ಹತನಾದನು; ಜರಾಸಂಧನು ಹದಿನೇಳಾವರ್ತಿ ಪರಾಜಿತನಾಗಿ ಓಡಿಹೋದನು" ಎಂದು ಹೇಳಿದನು.

ಶತಧನ್ವನು ಅಕ್ರೂರನನ್ನು ಅದೇರೀತಿಯಲ್ಲಿ ಸಹಾಯಾರ್ಥವಾಗಿ ಕರೆದನು; ಅಕ್ರೂರನು "ಎಲೈ ಶತಧನ್ವನೆ, ಬುದ್ಧಿವಂತನಾದ ಪುರುಷನು ಯಾವನಾದರೂ ಜಗದೀಶ್ವರರಾದ ರಾಮಕೃಷ್ಣರಲ್ಲಿ ವಿರೋಧವನ್ನಾಚರಿಸುವನೇ! ಯಾವ ಪರಮೇಶ್ವರನು ಜಗತ್ತನ್ನು ಲೀಲೆಯಿಂದಲೆ ಸೃಷ್ಟಿಸುತ್ತಾನೆಯೊ—ಸಂಹರಿಸುತ್ತಾನೆಯೋ—ಯಾವ ಈಶ್ವರನ ವ್ಯಾಪಾರವನ್ನು ಮಾಯಾಮೋಹಿತರಾದ ಬ್ರಹ್ಮಾದಿಗಳೂ ಅರಿಯರೊ_ಯಾವ ಶ್ರೀಕೃಷ್ಣನು ಏಳುವರ್ಷದ ಬಾಲಕನಾಗಿರುವಾಗಲೇ ಗೋವರ್ಧನಪರ್ವತವನ್ನು ಒಂದು ಕೈಯಿಂದ ಬಾಲಕನು ಅಣಬೆಯನ್ನು

ಕಿತ್ತು ಮೇಲಕ್ಕೆತ್ತುವಂತೆ ಕಿತ್ತೆತ್ತಿದನೊ ಅಂಥಾ ಆಶ್ಚರ್ಯಚರಿತವುಳ್ಳವನಾಗಿ ಅನಂತನಾಗಿ ಆದಿಪುರುಷನಾಗಿ ಕೂಟಸ್ಥನಾಗಿ ಪರಮಾತ್ಮನಾಗಿ ಭಗವಂತನಾದ ಕೃಷ್ಣನಿಗೋಸ್ಕರ ನಮಸ್ಕಾರವು" ಅಂದನು.

ಈ ರೀತಿಯಲ್ಲಿ ಅಕ್ರೂರನಿಂದಲೂ ನಿರಾಕರಿಸಲ್ಪಟ್ಟು ಶತಧನ್ವನು ಆ ಮಣಿಯನ್ನು ಅಕ್ರೂರನ ವಶದಲ್ಲಿರಿಸಿ ಅಶ್ವಾರೂಢನಾಗಿ ನೂರುಯೋಜನ ದೂರವು ಓಡಿದನು; ರಾಮಕೃಷ್ಣರು ಗರುಡಧ್ವಜರಥವನ್ನೇರಿಕೊಂಡು ಮಹಾವೇಗಶಾಲಿಗಳಾದ ಅಶ್ವಗಳಿಂದ ರಥವನ್ನು ಓಡಿಸುತ ಗುರುದ್ರೋಹಿಯಾದ ಶತಧನ್ವನನ್ನು ಅಟ್ಟಿಕೊಂಡು ಹೋದರು; ಆತನು ಮಿಥಿಲಾಪುರದ ಸಮೀಪವನದಲ್ಲಿ ಸೋತುಬಿದ್ದ ಕುದುರೆಯನ್ನು ಬಿಟ್ಟು ಕಾಲುಗಳಿಂದಲೆ ಓಡಿದನು; ಶ್ರೀಕೃಷ್ಣನು ಅಟ್ಟಿಕೊಂಡು ಹೋಗಿ ತೀಕ್ಷ್ಣಧಾರೆಯುಳ್ಳ ಚಕ್ರಾಯುಧದಿಂದ ಅವನ ಶಿರಸ್ಸನ್ನು ಛೇದಿಸಿ ಅವನ ವಸ್ತ್ರಗಳಲ್ಲಿ ಮಣಿಯನ್ನು ಹುಡುಕಿ ಆ ಮಣಿಯು ಅಕ್ರೂರನ ವಶದಲ್ಲಿರುವದನ್ನು ತಿಳಿದಿದ್ದಾಗ್ಯೂ ಬಲರಾಮನ ವಂಚನಾರ್ಥವಾಗಿ ಹುಡಿಕಿದಹಾಗೆ ನಟಿಸಿ ಮಣಿಯನ್ನು ಕಾಣದೆ ಬಲರಾಮನ ಸಮೀಪಕ್ಕೆ ಹೋಗಿ "ಶತಧನ್ವನನ್ನು ವ್ಯರ್ಥವಾಗಿ ಸಂಹರಿಸಿದೆವು; ಮಣಿಯು ಅವನಲ್ಲಿಲ್ಲ" ಅಂದನು.

ಆ ವಾಕ್ಯವನ್ನು ಕೇಳಿ ಬಲರಾಮನು ಕೃಷ್ಣನ ಕಪಟವನ್ನು ತಿಳಿದು ಮನಸ್ಸಿನಲ್ಲಿ ಸ್ವಲ್ಪ ಕೋಪಯುಕ್ತನಾಗಿ "ಶತಧನ್ವನು ಓಡಿಬರುವಾಗ ಆ ಮಣಿಯನ್ನು ಯಾರವಶದಲ್ಲೋ ಇರಿಸಿರಬಹುದು; ಆದ್ದರಿಂದ ನೀನು ಊರಿಗೆಹೋಗಿ ಆ ಪುರುಷನನ್ನು ಗೊತ್ತುಮಾಡು; ನಾನು ನನ್ನ ಮಿತ್ರನಾಗಿ ಮಿಥಿಲಾಪುರನಾಥನಾದ ಜನಕನನ್ನು ನೋಡಿ ಬರುತ್ತೇನೆ" ಎಂದು ಹೇಳಿ ಮಿಥಿಲಾಪುರಕ್ಕೆ ಹೊರಟುಹೋದನು.

ಜನಕನು ಬಲರಾಮನನ್ನು ನೋಡಿ ಸಂತುಷ್ಟಮನಸ್ಕನಾಗಿದ್ದು ಪ್ರತ್ಯುತ್ಥಾನಾದಿಗಳನ್ನು ಮಾಡಿ ಯಥಾಶಾಸ್ತ್ರವಾಗಿ ಪೂಜಿಸಿದನು; ಬಲರಾಮನು ಮಿಥಿಲಾಪುರದಲ್ಲಿ ಮಹಾತ್ಮನಾದ ಜನಕನಿಂದ ಮಾನಿತನಾಗಿ ಗದಾಯುದ್ಧವನ್ನು ಅಭ್ಯಾಸಂಗೈಯುತಿದ್ದನು! ಅನಂತರದಲ್ಲಿ ಪ್ರಭುವಾದ ಶ್ರೀಕೃಷ್ಣನು ದ್ವಾರಕಾಪುರಕ್ಕೆ ಹೋಗಿ ಸತ್ಯಭಾಮೆಗೆ ಪ್ರೀತಿಯನ್ನುಂಟುಮಾಡಲೋಸುಗ ಶತಧನ್ವನ ಸಂಹಾರವನ್ನೂ ಅವನಲ್ಲಿ ಮಣಿಯಿಲ್ಲದ ವೃತ್ತಾಂತವನ್ನೂ ಹೇಳಿ ಸತ್ರಾಜಿತ್ರಾಯನಿಗೆ ಔರ್ಧ್ವದೈಹಿಕಕೃತ್ಯಗಳನ್ನು ಮಾಡಿಸಿದನು; ಅನಂತರದಲ್ಲಿ ಅಕ್ರೂರ ಕೃತವರ್ಮರೀರ್ವರೂ ಶತಧನ್ವನಿಗೆ ಬೋಧಿಸಿದವರಾದ್ದರಿಂದ ಭಯಗ್ರಸ್ತರಾಗಿ ದ್ವಾರಕಾಪುರವನ್ನು ಬಿಟ್ಟು ಪಲಾಯನಂಗೈದರು; ಅಕ್ರೂರನು ಕೃಷ್ಣನ ಸಮ್ಮತಿಯಿಂದ ಕಾಶಿಗೆ ಹೋಗಿ ಆ ಕ್ಷೇತ್ರದಲ್ಲಿ ಆ ಮಣೀಪ್ರಭಾವದಿಂದುಂಟಾದ ಬಹುಧನವನ್ನು ದಾನಮಾಡಿ ಯಾಗಗಳನ್ನು ಮಾಡುತ ದಾನಪತಿಯೆಂಬ ಹೆಸರನ್ನು ಸಂಪಾದಿಸಿಕೊಂಡಿದ್ದನು; ಅದರಿಂದ ಸತ್ಯಭಾಮೆಗೆ ಕೃಷ್ಣನಲ್ಲಿ ನಂಬಿಕೆ ತಪ್ಪುವಹಾಗಾಗಲು ಆತನು ಅಪವಾದ ಪರಿಹಾರಾರ್ಥವಾಗಿ ಅಕ್ರೂರನನ್ನು ಕರೆಸುವದಕ್ಕೆ ಪ್ರಯತ್ನವನ್ನು ಮಾಡಿದನು; ಆಗ ಕೆಲವರು ಮಹಾಪುರುಷನಾದ ಅಕ್ರೂರನು ಹೊರಟುಹೋದಾರಭ್ಯ ದ್ವಾರಕಾನಗರದಲ್ಲಿ ಅರಿಷ್ಟಗಳೂ ರೋಗಾದ್ಯುಪದ್ರವಗಳೂ ಉಂಟಾದದ್ದರಿಂದ ಆತನನ್ನು ಕೃಷ್ಣನು ಕರೆಕಳುಹಿಸುತ್ತಾನೆಂದು ನಿಶ್ಚಯಿಸಿದರು! ಎಲೈ ಅರಸೆ, ಅದು ಯಥಾರ್ಥವಲ್ಲ; ಸಾಕ್ಷಾತ್ ಭಗವಂತನಾಗಿ ಮುನಿಗಳಿಗೆ ಧ್ಯಾನಯೋಗ್ಯನಾಗಿ ಪರಮವಸ್ತುವಾದ ಶ್ರೀಕೃಷ್ಣನಿರುವಾಗ ಅರಿಷ್ಟಗಳುಂಟಾಗಲಾರವು; ಅದು ಭಗವಂತನ ತಾತ್ಪರ್ಯವಲ್ಲ! ಕೆಲವು ವೃದ್ಧರು ಪೂರ್ವದಲ್ಲಿ ಕಾಶೀದೇಶದಲ್ಲಿ ಅನಾವೃಷ್ಟಿಯು ಪ್ರಾಪ್ತವಾಗಲು ಅಕ್ರೂರನ ತಂದೆಯಾದ ಶ್ವಫಲ್ಕನು ಅಲ್ಲಿಗೆ ಹೋದನೆಂದೂ ಆಮೇಲೆ ಅನಾವೃಷ್ಟಿಪರಿಹಾರವಾಗಿ ಮಹಾವೃಷ್ಟಿಯುಂಟಾಯಿತೆಂದೂ ಕಾಶೀರಾಯನು ಸಂತೋಷದಿಂದ ತನ್ನ ಮಗಳಾದ ಗಾಂದಿನಿಯನ್ನು ಶ್ವಫಲ್ಕನಿಗೆ ಕೊಟ್ಟನೆಂದೂ ಆದ್ದರಿಂದ ಶ್ವಫಲ್ಕನ ಮಗನಾದ ಅಕ್ರೂರನು ಮಹಾತ್ಮನೆಂದು ಹೇಳುತಿದ್ದರು! ಆ ವಾಕ್ಯವನ್ನು ಕೇಳುತ ಕೃಷ್ಣನು ಒಬ್ಬ ದೂತನನ್ನು ಕಳುಹಿಸಿ ಅಕ್ರೂರನನ್ನು ಕರೆಸಿ ಬಹುಮಾನದಿಂದ ಕೆಲವು ಪ್ರಸ್ತಾಪಗಳನ್ನು ನುಡಿದು ನಗುತ "ಎಲೈ ದಾನಪತಿಯಾದ ಅಕ್ರೂರನೆ, ಶಮಂತಕಮಣಿಯನ್ನು ಶತಧನ್ವನು ನಿನ್ನ ವಶದಲ್ಲಿರಿಸಿದ್ದನೆಂಬ ಅರ್ಥವನ್ನು ನಾವು ಮೊದಲೆ ತಿಳಿದಿದ್ದೆವು; ಸತ್ರಾಜಿತ್ರಾಯನು ಅಪುತ್ರನಾದಕಾರಣ ಅವನ ಸ್ವತ್ತು ದೌಹಿತ್ರ

ರಿಗೆ ಸಲ್ಲತಕ್ಕದ್ದು; ಅಪುತ್ರನಾಗಿ ಸ್ವರ್ಗಸ್ಥನಾದ ಪುರುಷನ ಧನವನ್ನು ಔರ್ಧ್ವದೈಹಿಕಕ್ರಿಯೆಗಳಿಗೆ ಉಪಯುಕ್ತವಾದ್ದನ್ನು ಬಿಟ್ಟು ನಿಂತ ದ್ರವ್ಯವನ್ನು ದೌಹಿತ್ರರು ಗ್ರಹಿಸಬೇಕು; ಶಾಸ್ತ್ರವು ಹೀಗಿದೆಯೆಂದು ದೊಡ್ಡವರು ಹೇಳುತ್ತಾರೆ; ಆದ್ದರಿಂದ ಆ ಮಣಿಯನ್ನು ತೋರಿಸಿ ಬಂಧುಗಳ ದುಃಖವನ್ನು ಪರಿಹರಿಸು; ಆ ಮಣಿಯು ನಿನ್ನ ವಶದಲ್ಲಿಲ್ಲದಿದ್ದರೆ ಅನೇಕ ಯಾಗಗಳನ್ನು ಮಾಡುವದಕ್ಕೆ ನಿನಗೆ ದ್ರವ್ಯವು ಹ್ಯಾಗೆಬಂದೀತು?'' ಎಂದು ಉಪಾಯೋಕ್ತಿಗಳಿಂದ ಕೇಳಿದನು.

ಅಕ್ರೂರನು ತನ್ನ ವಸ್ತ್ರದ ಶೆರಗಿನಲ್ಲಿದ್ದ ಆ ಮಣಿಯನ್ನು ಬಿಚ್ಚಿಕೊಟ್ಟನು; ಶ್ರೀಕೃಷ್ಣನು ಆ ಮಣಿಯನ್ನು ಜ್ಞಾತಿಬಂಧುಗಳಿಗೆ ತೋರಿಸಿ ತನ್ನ ಅಪವಾದವನ್ನು ಪರಿಹರಿಸಿಕೊಂಡು ಪುನಹ ಆ ಮಣಿಯನ್ನು ಅಕ್ರೂರನಿಗೆ ಕೊಟ್ಟನು! ಎಲೈ ಅರಸೆ, ಭಗವಂತನಾದ ಶ್ರೀಕೃಷ್ಣನ ಪರಾಕ್ರಮಯುಕ್ತವಾಗಿ ಪಾಪಪರಿಹಾರಕವಾಗಿ ಶುಭಪ್ರದವಾದ ಈ ಉಪಾಖ್ಯಾನವನ್ನು ಯಾವ ಪುರುಷನು ಪಠಿಸುವನೊ—ಶ್ರವಣಂಗೈವನೊ—ಸ್ಮರಿಸುವನೊ ಆ ಪುರುಷನು ಅಪಕೀರ್ತಿಯನ್ನೂ ಪಾಪವನ್ನೂ ಪರಿಹರಿಸಿಕೊಂಡು ಉಪಶಾಂತನಾಗುವನು!

---

## ೫೮ ನೇ ಅಧ್ಯಾಯ.

### ಶ್ರೀಕೃಷ್ಣನು ಕಾಳಿಂದೀ ಮೊದಲಾದವರನ್ನು ವಿವಾಹವಾದದ್ದು.

ಎಲೈ ಅರಸೆ, ಒಂದು ಸಮಯದಲ್ಲಿ ಶ್ರೀಕೃಷ್ಣನು ಪಾಂಡವರನ್ನು ನೋಡಲೋಸುಗ ಸಾತ್ಯಕಿ ಮೊದಲಾದ ಸ್ವಜನರ ಸಮೇತನಾಗಿ ಇಂದ್ರಪ್ರಸ್ಥಪುರಕ್ಕೆ ತೆರಳಿಹೋದನು; ಸರ್ವೇಶ್ವರನಾದ ಮುಕುಂದನನ್ನು ನೋಡಿ ಪಾಂಡವರು ಇಂದ್ರಿಯಗಳು ಪ್ರಾಣವನ್ನೆದುರುಗೊಳ್ಳುವಂತೆ ಏಕಕಾಲದಲ್ಲಿ ಪ್ರತ್ಯುತ್ಥಾನಾರ್ಥವಾಗಿ ಎದ್ದು ಎದುರಾಗಿ ಬಂದು ಅಚ್ಯುತನನ್ನಾಲಿಂಗನಂಗೈದು ಭಗವಂತನ ಶರೀರಸ್ಪರ್ಶದಿಂದ ಪಾಪರಹಿತರಾಗಿ ಅನುರಾಗಯುಕ್ತವಾಗಿ ಮುಗುಳು ನಗೆಯುಳ್ಳ ಭಗವಂತನ ಮುಖವನ್ನು ನೋಡಿ ಸಂತೋಷವನ್ನೈದಿದರು; ಶ್ರೀಕೃಷ್ಣನು ಯುಧಿಷ್ಠಿರನನ್ನೂ ಭೀಮಸೇನನನ್ನೂ ನಮಸ್ಕರಿಸಿ ಅರ್ಜುನನನ್ನಾಲಿಂಗನಂಗೈದು ನಕುಲ ಸಹದೇವರಿಂದ ನಮಸ್ಕೃತನಾಗಿ ಉತ್ಕೃಷ್ಟವಾದ ಪೀಠದಲ್ಲಿ ಕುಳಿತಿರಲು ನಿರ್ದೋಷಿಯಾಗಿ ನವೋಢೆಯಾದ ದ್ರೌಪದಿಯು ಲಜ್ಜೆಯೊಡಗೂಡಿ ಮೆಲ್ಲಗೆ ಬಂದು ನಮಸ್ಕರಿಸಿದಳು; ಸಾತ್ಯಕಿಯು ಪಾಂಡವರಿಂದ ಪೂಜಿತನಾಗಿ ಉತ್ತಮವಾದ ಪೀಠದಲ್ಲಿ ಕುಳಿತನು; ಮಿಕ್ಕಯಾದವರೂ ಅದೇ ರೀತಿಯಲ್ಲಿ ಪೂಜಿತರಾಗಿ ಪೀಠಗಳಲ್ಲಿ ಕುಳಿತರು; ಆ ಬಳಿಕ ಶ್ರೀಕೃಷ್ಣನು ತನ್ನ ಸೋದರತ್ತೆಯಾದ ಕುಂತಿಯನ್ನು ನಮಸ್ಕರಿಸಿ ಅತಿ ಪ್ರೇಮಾರ್ದ್ರದೃಷ್ಟಿಯುಳ್ಳ ಆ ದೇವಿಯಿಂದ ಕೇಳಲ್ಪಟ್ಟ ಕುಶಲಪ್ರಶ್ನೆಗಳಿಗೆ ಉತ್ತರವನ್ನಿತ್ತು ದ್ರೌಪದೀಸಮೇತಳಾದ ಕುಂತಿಯನ್ನು ಕುರಿತು ಕುಶಲಪ್ರಶ್ನೆಯನ್ನು ಮಾಡಿದನು; ಕುಂತಿಯು ಪ್ರೇಮದಿಂದಲೂ ದುಃಖದಿಂದಲೂ ತಡೆಯಲ್ಪಟ್ಟ ಕಂಠಸ್ವರವುಳ್ಳವಳಾಗಿ ಬಾಷ್ಪಪೂರ್ಣನೇತ್ರಳಾಗಿ ತನಗೂ ತನ್ನ ಪುತ್ರರಿಗೂ ಪೂರ್ವದಲ್ಲಿ ಪ್ರಾಪ್ತವಾದ ಕ್ಲೇಶಗಳನ್ನು ಸ್ಮರಿಸಿಕೊಂಡು ಕ್ಲೇಶಪರಿಹಾರಕವಾದ ದರ್ಶನವುಳ್ಳ ಶ್ರೀಕೃಷ್ಣನನ್ನು ಕುರಿತು "ಎಲೈ ಶ್ರೀಕೃಷ್ಣನೆ, ನನ್ನ ತಮ್ಮನಾದ ಅಕ್ರೂರನನ್ನು ನಮ್ಮ ಯೋಗಕ್ಷೇಮವನ್ನು ವಿಚಾರಿಸಲೋಸುಗ ಯಾವಾಗ ಕಳುಹಿಸಿ ನಮಗೆ ದಿಕ್ಕನ್ನುಂಟುಮಾಡಿದೆಯೊ ಆಗಲೇ ನಮಗೆ ಕ್ಷೇಮವುಂಟಾಯಿತು! ಎಲೈ ಶ್ರೀಕೃಷ್ಣನೆ, ಪರಮಾತ್ಮನಾದ ನಿನಗೆ ಸ್ವಜನರಿಲ್ಲ; ಸರ್ವಲೋಕಗಳಿಗೂ ಅಂತರಾತ್ಮನಾದವನೂ ಮಿತ್ರನಾದವನೂ ನೀನೇ; ನೀನು ನಿನ್ನನ್ನು ಸ್ಮರಿಸುವ ಜನರ ಹೃದಯದಲ್ಲಿದ್ದುಕೊಂಡು ಶುಭವನ್ನುಂಟುಮಾಡುತ ಅವರ ಕ್ಲೇಶಗಳನ್ನು ಪರಿಹರಿಸುವೆ!'' ಎಂದು ನುಡಿದಳು.

ಆ ಬಳಿಕ ಧರ್ಮರಾಯನು ಶ್ರೀಕೃಷ್ಣನನ್ನು ಕುರಿತು "ಎಲೈ ಈಶ್ವರನೆ, ನಮ್ಮಿಂದ ಯಾವ ಸುಕೃತವು ಆಚರಿಸಲ್ಪಟ್ಟಿತೊ ನಾವರಿಯೆವು; ಯೋಗೀಶ್ವರರಿಗೂ ಅಗೋಚರನಾದ ನೀನು ವಿಷಯಾಸಕ್ತವಾದ ದುರ್ಬುದ್ಧಿ

ಯುಳ್ಳ ನಮಗೆ ಪ್ರಸನ್ನನಾಗಿ ನಮ್ಮ ನೇತ್ರಗಳನ್ನು ಸಂತೋಷಪಡಿಸಿದೆ; ಈ ವರ್ಷಾಕಾಲದ ನಾಲ್ಕುತಿಂಗಳೂ ಇಲ್ಲೇ ವಾಸಮಾಡುತ್ತಿರು'' ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣನು ಹಾಗೇ ಆಗಲೆಂದು ಧರ್ಮರಾಯನ ಪ್ರಾರ್ಥನೆಯಿಂದ ಜನರಿಗೆ ನೇತ್ರೋತ್ಸವವನ್ನುಂಟು ಮಾಡುತ ಇಂದ್ರಪ್ರಸ್ಥದಲ್ಲಿ ವಾಸಮಾಡುತಿದ್ದನು! ಒಂದು ಸಮಯದಲ್ಲಿ ಅರ್ಜುನನು ವಾನರಧ್ವಜವುಳ್ಳ ರಥವನ್ನೇರಿಕೊಂಡು ಧನುಸ್ಸನ್ನೂ ಬಾಣಗಳಿಂದ ಪೂರ್ಣವಾದ ಬತ್ತಳಿಕೆಗಳು ಮೊದಲಾದವನ್ನೂ ಧರಿಸಿಕೊಂಡು ಶ್ರೀಕೃಷ್ಣನಸಹಿತವಾಗಿ ವಿಹರಿಸಲೋಸುಗ ಅನೇಕ ದುಷ್ಟಮೃಗಯುಕ್ತವಾದ ಒಂದು ಮಹಾ ಅರಣ್ಯಕ್ಕೆ ತೆರಳಿ ಹೋಗಿ ತನ್ನ ಬಾಣಗಳಿಂದ ವ್ಯಾಘ್ರಗಳು ವರಾಹಗಳು ಮಹಿಷಗಳು ರುರುಮೃಗಗಳು ಶರಭಗಳು ಗವಯಗಳು ಖಡ್ಗಮೃಗಗಳು ಹುಲ್ಲೆಗಳು ಮೊಲಗಳು ಶಲ್ಯಮೃಗಗಳು ಮೊದಲಾದವನ್ನು ಅನೇಕವಾಗಿ ಸಂಹರಿಸಿ ಸಾಯಂಕಾಲವು ಪ್ರಾಪ್ತವಾದಾಗ ಪವಿತ್ರಗಳಾದ ಆ ಮೃಗಗಳನ್ನು ರಾಜಭೃತ್ಯರು ಧರ್ಮರಾಯನ ಸಮೀಪಕ್ಕೆ ತಕೊಂಡು ಹೋಗಿ ಒಪ್ಪಿಸಲು ಶ್ರಾಂತನಾಗಿ ಬಾಯಾರಿಕೆಯುಳ್ಳವನಾಗಿ ಯಮುನಾನದಿಯನ್ನೈದಿ ಆ ನದಿಯಲ್ಲಿ ಪಾದಪ್ರಕ್ಷಾಳನಪೂರ್ವಕವಾಗಿ ಶುದ್ಧಾಚಮನಂಗೈದು ಜಲಪಾನವನ್ನು ಮಾಡಿ ಆ ಪ್ರದೇಶದಲ್ಲಿ ಸುಂದರಾಂಗಿಯಾಗಿ ಸಂಚರಿಸುತಿದ್ದ ಒಬ್ಬ ಕನ್ಯಕೆಯನ್ನು ಕಂಡು ಕೃಷ್ಣನಿಂದ ಪ್ರೇರಿಸಲ್ಪಟ್ಟು ಉತ್ತಮವಾದ ನಿತಂಬವುಳ್ಳವಳಾಗಿ ರಮ್ಯವಾದ ದಂತಪಙ್ತಿಯುಳ್ಳವಳಾಗಿ ಮನೋಹರವಾದ ಮುಖವುಳ್ಳ ಆ ಕನ್ಯಕೆಯ ಸಮೀಪಕ್ಕೆ ಹೋಗಿ ಆಕೆಯನ್ನು ಕುರಿತು ''ಓ ಸುಂದರವಾದ ನಿತಂಬವುಳ್ಳ ಸ್ತ್ರೀಯೇ, ನೀನ್ಯಾರು? ಯಾರ ಮಗಳು? ಯಾವ ನಿಮಿತ್ತದಿಂದ ಇಲ್ಲಿಗೆ ಬಂದೆ? ನಿನ್ನ ಮನೋಗತಾರ್ಥವೇನು? ನೀನು ಪತಿಯನ್ನಪೇಕ್ಷಿಸುತ್ತೀಯೆಂದು ನಾನು ತಿಳಿಯುತ್ತೇನೆ! ನಿನ್ನ ವೃತ್ತಾಂತವನ್ನು ಸತ್ಯವಾಗಿ ಹೇಳು" ಎಂದು ಕೇಳಿದನು.

ಆ ವಾಕ್ಯವನ್ನು ಕೇಳಿ ಆ ಕನ್ಯಕೆಯು ''ನಾನು ದೇವದೇವನಾದ ಸೂರ್ಯನ ಮಗಳು; ನಾರಾಯಣನನ್ನು ಪತಿಯಾಗಪೇಕ್ಷಿಸಿಕೊಂಡು ಪರಮತಪಸ್ಸನ್ನಾಚರಿಸುತ್ತಿದ್ದೇನೆ; ಮತ್ತೊಬ್ಬರನ್ನು ಪತಿಯಾಗಿ ಅಪೇಕ್ಷಿಸುವದಿಲ್ಲ; ಅನಾಥರಕ್ಷಕನಾದ ಆ ಭಗವಂತನು ಪ್ರಸನ್ನನಾಗಲಿ; ನಾನು ಕಾಳಿಂದೀಯೆಂಬ ನಾಮಧೇಯವುಳ್ಳವಳು; ಈ ಯಮುನಾಜಲದಲ್ಲಿ ನನ್ನ ತಂದೆಯಿಂದ ನಿರ್ಮಿತವಾದ ಗೃಹದಲ್ಲಿ ಆ ಭಗವಂತನ ದರ್ಶನವಾಗುವಪರ್ಯಂತವೂ ಇರುತ್ತೇನೆ" ಎಂದು ನುಡಿದಳು.

ಅರ್ಜುನನು ಕೃಷ್ಣನ ಸಮೀಪಕ್ಕೆ ಹೋಗಿ ಆ ಅರ್ಥವನ್ನು ಹೇಳಲು ಅದನ್ನು ಮೊದಲೇ ತಿಳಿದಿದ್ದ ಶ್ರೀಕೃಷ್ಣನು ಆ ಕನ್ಯಕೆಯನ್ನು ರಥದಮೇಲೆ ಕುಳ್ಳಿರಿಸಿಕೊಂಡು ಇಂದ್ರಪ್ರಸ್ಥಪುರಕ್ಕೆ ಹೋದನು. ಎಲೈ ಪರೀಕ್ಷಿದ್ರಾಯನೆ, ಪೂರ್ವದಲ್ಲಿ ರಾಜ್ಯವಿಭಾಗವನ್ನು ಮಾಡಿಕೊಂಡು ಪಾಂಡವರು ಇಂದ್ರಪ್ರಸ್ಥಪುರಕ್ಕೆ ಹೋಗಿ ಬಹುಕಾಲದಿಂದ ಜನಶೂನ್ಯವಾಗಿದ್ದ ಆ ಪುರವನ್ನು ನೋಡಿ ಶ್ರೀಕೃಷ್ಣನನ್ನು ಕುರಿತು ವಿಜ್ಞಾಪಿಸಲು ಆತನು ಆಕ್ಷಣವಲ್ಲೇ ವಿಶ್ವಕರ್ಮನನ್ನು ಕರೆದು ಆ ಪುರವನ್ನು ನಿರ್ಮಾಣಮಾಡಿಸಿದನು; ಭಗವಂತನು ಸ್ವಜನರಾದ ಪಾಂಡವರ ಹಿತಾರ್ಥವಾಗಿ ಆ ನಗರದಲ್ಲೇ ವಾಸವನ್ನು ಮಾಡಿಕೊಂಡಿದ್ದು ಯಜ್ಞೇಶ್ವರನಿಗೆ ಖಾಂಡವ ವನವನ್ನು ಕೊಡಲೋಸುಗ ಅರ್ಜುನನಿಗೆ ಸಾರಥಿಯಾದನು; ಯಜ್ಞೇಶ್ವರನು ಸಂತುಷ್ಟನಾಗಿ ಗಾಂಡೀವಧನುಸ್ಸನ್ನೂ ಶ್ವೇತಾಶ್ವಗಳುಳ್ಳ ರಥವನ್ನೂ ಅಕ್ಷಯವಾದ ಬತ್ತಳಿಕೆಗಳನ್ನೂ ಅಭೇದ್ಯವಾದ ಕವಚವನ್ನೂ ಅರ್ಜುನನಿಗೆ ಕೊಟ್ಟನು; ಆ ಬಳಿಕ ಅರ್ಜುನನು ಖಾಂಡವವನವನ್ನು ದಹಿಸುವ ಕಾಲದಲ್ಲಿ ರಾಕ್ಷಸಶಿಲ್ಪಿಯಾದ ಮಯನನ್ನು ಸಂರಕ್ಷಿಸಲು ಆತನು ಪಾಂಡವರಿಗೆ ಒಂದು ಸಭೆಯನ್ನು ನಿರ್ಮಿಸಿಕೊಟ್ಟನು; ಆ ಸಭೆಯನ್ನು ನೋಡಿದಾಗ ದುರ್ಯೋಧನನಿಗೆ ಜಲದಲ್ಲಿ ಸ್ಥಳಭ್ರಾಂತಿಯೂ ಸ್ಥಳದಲ್ಲಿ ಜಲಭ್ರಾಂತಿಯೂ ಉಂಟಾಯಿತು!

ಅನಂತರದಲ್ಲಿ ಶ್ರೀಕೃಷ್ಣನು ಪಾಂಡವರಿಂದ ಅಪ್ಪಣೆಯನ್ನು ತೆಗೆದುಕೊಂಡು ಮಿತ್ರರಿಂದನುಮೋದಿತನಾಗಿ, ಸಾತ್ಯಕೀ ಮೊದಲಾದ ಸ್ವಜನರಿಂದ ಯುಕ್ತನಾಗಿ ಸಂತೋಷದಿಂದ ದ್ವಾರಕಾನಗರಕ್ಕೆ ಹೋಗಿ ಶುಭನಕ್ಷತ್ರ ಶುಭ

ದಿನ ಶುಭಲಗ್ನಯುಕ್ತವಾದ ಸುಮುಹೂರ್ತದಲ್ಲಿ ಸ್ವಜನರಿಗೆ ಆನಂದವನ್ನುಂಟುಮಾಡುತ ಕಾಳಿಂದೀದೇವಿಯನ್ನು ವಿವಾಹಮಾಡಿಕೊಂಡನು! ಎಲೈ ಅರಸೆ, ಅವಂತೀದೇಶಪತಿಗಳಾಗಿ ದುರ್ಯೋಧನನ ಮಿತ್ರರಾದ ವಿಂದಾನುವಿಂದರೆಂಬವರಿಬ್ಬರಿದ್ದರು; ಅವರ ತಂಗಿಯಾದ ಮಿತ್ರವಿಂದಾದೇವಿಯು ಶ್ರೀಕೃಷ್ಣನಲ್ಲಿ ಲಗ್ನವಾದ ಮನಸ್ಸುಳ್ಳವಳಾಗಿ ಆತನನ್ನು ವಿವಾಹಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿಂದಿರಲು ವಿಂದಾನುವಿಂದರು ಅಡ್ಡಿಮಾಡಿದರು; ಆಕೆಯು ತನ್ನ ಸೋದರತ್ತೆಯಾದ ರಾಜಾಧಿದೇವಿಯ ಮಗಳಾದ್ದರಿಂದ ಶ್ರೀಕೃಷ್ಣನು ಸರ್ವಕ್ಷತ್ರಿಯರೂ ನೋಡುತ್ತಿರಲು ಸ್ವಯಂವರಕಾಲದಲ್ಲಿ ಆಕೆಯನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದನು! ಎಲೈ ಅರಸೆ, ಕೋಸಲದೇಶಪತಿಯಾಗಿ ಅಯೋಧ್ಯಾಪುರಿವಾಸಿಯಾಗಿ ಧಾರ್ಮಿಕನಾದ ನಗ್ನಜಿತ್ತೆಂಬ ಅರಸಿದ್ದನು; ಆ ಅರಸಿಗೆ ಸತ್ಯಾದೇವಿಯೆಂಬ ಪುತ್ರಿಯಿದ್ದಳು; ಆಕೆಯು ನಾಗ್ನಜಿತಿಯೆಂದೂ ಪ್ರಸಿದ್ಧಳಾಗಿದ್ದಳು; ಆ ಪುರದಲ್ಲಿ ಏಳು ಮಹಾವೃಷಭಗಳಿದ್ದವು; ಅವು ಮಹಾಬಲಿಷ್ಟಗಳಾದವು; ಎಂಥಾ ಬಲಶಾಲಿಗಳಿಂದಲೂ ನಿಗ್ರಹಿಸಲಸಾಧ್ಯಗಳಾದ ಅವುಗಳನ್ನಿಡಿದು ಮೂಗುದಾರಗಳನ್ನು ಹಾಕಿ ಕಟ್ಟಿಹಾಕುವವರಿಗೆ ತನ್ನ ಮಗಳಾದ ಸತ್ಯಾದೇವಿಯನ್ನು ಕೊಡುವದಾಗಿ ನಗ್ನಜಿದ್ರಾಯನು ಪ್ರತಿಜ್ಞೆಮಾಡಿದ್ದನು; ಯಾವ ಆರಸರೂ ಆ ಸಾಹಸವನ್ನು ಮಾಡಲಾರದಿದ್ದದ್ದರಿಂದ ಸತ್ಯಾದೇವಿಯು ವಿವಾಹವಿಲ್ಲದಿದ್ದಳು; ಆ ವೃತ್ತಾಂತವನ್ನು ಕೇಳಿ ಶ್ರೀಕೃಷ್ಣನು ಸೇನಾಸಮೇತನಾಗಿ ಕೋಸಲಪುರಕ್ಕೆ ತೆರಳಿಹೋಗಲು ನಗ್ನಜಿದ್ರಾಯನು ಆತನನ್ನು ನೋಡಿ ಸಂತೋಷಪಟ್ಟು ಪ್ರತ್ಯುತ್ಥಾನಾದಿಗಳಿಂದ ಬಹುಮಾನವನ್ನು ಮಾಡಿ ಅರ್ಘ್ಯಾದಿಗಳಿಂದ ಯಥಾಶಾಸ್ತ್ರವಾಗಿ ಸತ್ಕರಿಸಿ ಪೂಜಿಸಿದನು; ಆ ರಾಜನ ಪುತ್ರಿಯಾದ ಸತ್ಯಾದೇವಿಯು ಲಕ್ಷ್ಮೀಪತಿಯಾಗಿ ತನಗೆ ಅನುರೂಪನಾಗಿ ಅಭಿಮತನಾಗಿ ಭಗವಂತನಾದ ಶ್ರೀಕೃಷ್ಣನನ್ನು ಪತಿಯನ್ನಾಗಿ ವರಿಸಿ ಆತನಲ್ಲಿ ಕಾಮಿಸಿ ತಾನು ಮಾಡಿದ ವ್ರತನಿಯಮಗಳು ಸಫಲವಾದರೆ ಆತನೇ ತನಗೆ ಪತಿಯಾಗಬೇಕೆಂದು ಪ್ರಾರ್ಥಿಸಿದಳು; ಅನಂತರದಲ್ಲಿ ನಗ್ನಜಿದ್ರಾಯನು ಸತ್ಕೃತನಾದ ಶ್ರೀಕೃಷ್ಣನನ್ನು ಕುರಿತು "ಎಲೈ ಜಗತ್ಪತಿಯಾದ ನಾರಾಯಣನೆ, ಆತ್ಮಾನಂದಪೂರ್ಣನಾದ ನಿನಗೆ ಸ್ವಲ್ಪವಾದರೂ ನಾನು ಏನುಮಾಡೇನು!— —ಯಾವನ ಪಾದಪದ್ಮ ರಜಸ್ಸನ್ನು ಲಕ್ಷ್ಮಿಯೂ ಬ್ರಹ್ಮನೂ ರುದ್ರನೂ ಲೋಕಪಾಲಕರೂ ಶಿರಸ್ಸಿನಲ್ಲಿ ಧರಿಸುತ್ತಾರೆಯೊ—ಯಾವ ಭಗವಂತನು ಸ್ವನಿರ್ಮಿತಗಳಾದ ಧರ್ಮಾಧರ್ಮಗಳ ವ್ಯವಸ್ಥೆಯನ್ನು ಮಾಡಲೋಸುಗ ಲೀಲಾಮಾನುಷನಾಗಿ ತತ್ತದ್ಧರ್ಮವ್ಯವಸ್ಥೆಯನ್ನು ಸ್ಥಿರೀಕರಿಸುತ್ತಾನೆಯೋ—ಅಂಥಾ ಭಗವಂತನು ಯಾತರಿಂದ ಸಂತುಷ್ಟನಾದಾನು!" ಎಂದು ಚಿಂತಿಸುತಿದ್ದನು.

ಶ್ರೀಕೃಷ್ಣನು ಪೀಠದಲ್ಲಿ ಕುಳಿತುಕೊಂಡು ಮೇಘಗಂಭೀರವಾಕ್ಯದಿಂದ ಮುಗುಳುನಗೆಯುಕ್ತನಾಗಿ "ಎಲೈ ಧೊರೆಯೆ, ಸ್ವಧರ್ಮದಲ್ಲಿರುವ ಕ್ಷತ್ರಿಯರಿಗೆ ಯಾಚನಾವೃತ್ತಿಯು ನಿಂದಿತವಾದದ್ದೆಂದು ವಿದ್ವಾಂಸರು ಹೇಳುವರು; ಆದಾಗ್ಯು ನಿನ್ನಲ್ಲಿ ಮೈತ್ರಿಯನ್ನು ಮಾಡುವ ಇಚ್ಛೆಯಿಂದ ನಿನ್ನನ್ನು ನಾನು ಯಾಚಿಸುತ್ತೇನೆ; ನಿನ್ನ ಕನ್ಯಕೆಯನ್ನು ನನಗೆ ಕೊಡು; ನಾವು ದ್ರವ್ಯಾದಿಗಳನ್ನು ಕೊಡುವವರಲ್ಲ" ಎಂದು ನುಡಿದನು.

ಆ ಅರಸನು "ಎಲೈ ನಾಥನೆ, ನನ್ನ ಪುತ್ರಿಗೆ ನಿನಗಿಂತಲೂ ಶ್ರೇಷ್ಠನಾದ ವರನು ಯಾವನು! ಸರ್ವಗುಣಾಕರನಾದ ನಿನ್ನ ವಕ್ಷಸ್ಥಳದಲ್ಲಿ ಸಾಕ್ಷಾತ್ ಲಕ್ಷ್ಮಿಯು ಎಡೆಬಿಡದೆ ಸರ್ವಥಾ ವಾಸಂಗೈಯುತ್ತಾಳೆ; ಪೂರ್ವದಲ್ಲಿ ನನ್ನಿಂದ ಒಂದು ಪ್ರತಿಜ್ಞೆಯು ಮಾಡಲ್ಪಟ್ಟದೆ; ಶೂರಪುರುಷರ ಪರಾಕ್ರಮ ಪರೀಕ್ಷಾರ್ಥವಾಗಿಯೂ ನನ್ನ ಪುತ್ರಿಗೆ ವರಲಾಭಾರ್ಥವಾಗಿಯೂ ಒಂದು ಸಮಯಬಂಧವು ನನ್ನಿಂದ ಮಾಡಲ್ಪಟ್ಟದೆ; ನನ್ನಲ್ಲಿ ಏಳು ವೃಷಭಗಳಿವೆ; ಅವು ನಿಗ್ರಹಿಸಲಶಕ್ಯವಾಗಿ ಮಥಿಸಿ ಯಾರನ್ನೂ ಲಕ್ಷ್ಯಮಾಡುವದಿಲ್ಲ; ಅವುಗಳನ್ನಿಡಿಯಲೋಸುಗ ಬಹುಮಂದಿ ರಾಜಪುರುಷರು ಪ್ರಯತ್ನಮಾಡಿ ಭಗ್ನರಾಗಿ ಕೈಕಾಲುಗಳನ್ನು ಮುರಿದುಕೊಂಡು ಹೋದರು; ಆ ವೃಷಭಗಳನ್ನು ಯಾವ ಪುರುಷನು ಹಿಡಿದು ನಿಗ್ರಹಿಸುತ್ತಾನೆಯೊ ಅವನಿಗೆ ನನ್ನ ಪುತ್ರಿಯನ್ನು ಕೊಡುವದಾಗಿ ಸಮಯಬಂಧವನ್ನು ಮಾಡಿದೇನೆ! ಎಲೈ ಲಕ್ಷ್ಮೀಪತಿಯಾಗಿ ಯದುನಂದನನಾದ ಶ್ರೀಕೃಷ್ಣನೆ, ಆ ವೃಷಭಗಳನ್ನು ಮುರಿಯಲು ನೀನೇ ಸಮರ್ಥನು" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಶ್ರೀಕೃಷ್ಣನು ಏಳುರೂಪಗಳುಳ್ಳವನಾಗಿ ನಡುಕಟ್ಟನ್ನು ಬಿಗಿದು ಕಟ್ಟಿಕೊಂಡು ವಿಲಾಸದಿಂದಲೇ ಆ ವೃಷಭಗಳನ್ನಿಡಿದು ಅವುಗಳ ಕೊಬ್ಬನ್ನಡಿಗಿಸಿ ಅವುಗಳ ದುರಾಗ್ರಹವನ್ನು ಪರಿಹರಿಸಿ ಹಗ್ಗಗಳಿಂದ ಕಟ್ಟಿ ಬಾಲಕರು ಮರದ ಬಸವನನ್ನೆಳೆಯುವಂತೆ ಅಲ್ಲಲ್ಲಿಗೆ ಎಳೆದನು ; ಆತನ ಸಾಹಸವನ್ನು ನೋಡಿ ನಗ್ನಜಿದ್ರಾಯನು ಆಶ್ಚರ್ಯಪಟ್ಟು ಸಂತುಷ್ಟನಾಗಿ ತನ್ನ ಪುತ್ರಿಯಾದ ಸತ್ಯಾದೇವಿಯನ್ನು ಕೊಡಲು ಶ್ರೀಕೃಷ್ಣನು ಆ ಕನ್ಯಕೆಯನ್ನು ಯಥಾಶಾಸ್ತ್ರವಾಗಿ ವಿವಾಹಮಾಡಿಕೊಂಡನು ; ಆಗ ಆ ರಾಯನ ಪತ್ನಿಯರು ಮಗಳಿಗೆ ಅನುರೂಪನಾದ ಶ್ರೀಕೃಷ್ಣನನ್ನು ನೋಡಿ ಸಂತೋಷಪಟ್ಟರು ; ಶಂಖಭೇರ್ಯಾದಿ ವಾದ್ಯಗಳು ಧ್ವನಿಗೈದವು ; ನೃತ್ಯಗೀತ ವಾದ್ಯಗಳು ವಿಜೃಂಭಿಸಿದವು ; ಬ್ರಾಹ್ಮಣರ ಆಶೀರ್ವಾದವಾಚಕಗಳುಂಟಾದವು ; ಸ್ತ್ರೀಯರೂ ಪುರುಷರೂ ದಿವ್ಯಾಲಂಕಾರಭೂಷಿತರಾಗಿ ಸಂತೋಷಪಟ್ಟರು ; ನಗ್ನಜಿದ್ರಾಯನು ಅಳಿಯನಾದ ಕೃಷ್ಣನಿಗೆ ಹತ್ತುಸಾವಿರ ಗೋವುಗಳನ್ನೂ ಸುವರ್ಣಭೂಷಿತರಾಗಿ ದಿವ್ಯವಸ್ತ್ರಧಾರಣೀಯರಾದ ಮೂರುಸಾವಿರ ದಾಸೀಜನರನ್ನೂ ಒಂಭತ್ತುಸಾವಿರ ಆನೆಗಳನ್ನೂ ಅವಕ್ಕೆ ಶತಗುಣಿತವಾದ ರಥಗಳನ್ನೂ ಅವಕ್ಕೆ ಶತಗುಣಿತವಾದ ಅಶ್ವಗಳನ್ನೂ ಅವಕ್ಕೆ ಶತಗುಣಿತವಾದ ಪಾದಚಾರಿಗಳನ್ನೂ ಕೊಟ್ಟು ಅಳಿಯನನ್ನೂ ಮಗಳನ್ನೂ ರಥದಮೇಲೆ ಕುಳ್ಳಿರಿಸಿ ಮಹಾ ಸೇನಾಸಮೇತರಾದ ಆ ದಂಪತಿಗಳನ್ನು ದ್ವಾರಕಾನಗರಕ್ಕೆ ಕಳುಹಿಸಿದನು ! ಪೂರ್ವದಲ್ಲಿ ಯಾದವರಿಂದಲೂ ಆ ಏಳು ವೃಷಭಗಳಿಂದಲೂ ಪೆಟ್ಟುಬಿದ್ದು ಪರಾಜಿತರಾದಾಗ್ಯೂ ಕೆಲವು ಅರಸರು ಆ ಸಮಾಚಾರವನ್ನು ಕೇಳಿ ಬಹುಕ್ರೋಧದಿಂದ ಬಂದು ಪತ್ನೀಸಮೇತನಾಗಿ ಹೋಗುತ್ತಿದ್ದ ಶ್ರೀಕೃಷ್ಣನನ್ನು ತಡೆದು ಮುತ್ತಿಕೊಂಡು ಬಾಣಸಮೂಹಗಳನ್ನು ಪ್ರಯೋಗಿಸಿದರು ; ಆಗ ಕೃಷ್ಣಪ್ರಿಯನಾದ ಅರ್ಜುನನು ಗಾಂಡೀವ ಧನುಸ್ಸನ್ನು ಹೆದೆಯೇರಿಸಿ ತನ್ನ ಬಾಣಗಳಿಂದ ಸಿಂಹವು ಕ್ಷುದ್ರಮೃಗಗಳನ್ನು ಓಡಿಸುವಂತೆ ಓಡಿಸಿ ಹಿಂದಟ್ಟಿದನು ! ದೇವಕೀಪುತ್ರನಾದ ಭಗವಂತನು ಮಾವನಿಂದ ಕೊಡಲ್ಪಟ್ಟ ರಥಾದಿ ಸಮಸ್ತ ಸೇನೆಗಳನ್ನೂ ಕರೆದುಕೊಂಡು ದ್ವಾರಕಾಪುರಕ್ಕೆ ಬಂದು ಸತ್ಯಾದೇವಿಯೊಡನೆ ಆನಂದದಿಂದ ರಮಿಸುತ್ತಿದ್ದನು ! ಅನಂತರದಲ್ಲಿ ಶ್ರೀಕೃಷ್ಣನು ವಸುದೇವನ ತಂಗಿಯಾದ ಶ್ರುತಕೀರ್ತಿಯ ಮಗಳಾದ ಭದ್ರಾದೇವಿಯನ್ನು ಸಂತರ್ದನನು ಮೊದಲಾದ ಭ್ರಾತೃಗಳಿಂದ ಕೊಡಲ್ಪಟ್ಟು ಪಾಣಿಗ್ರಹಣವನ್ನು ಮಾಡಿಕೊಂಡನು ! ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ಮಾದ್ರದೇಶಾಧಿಪತಿಯ ಪುತ್ರಿಯಾಗಿ ಲಕ್ಷಣಯುಕ್ತಳಾದ ಲಕ್ಷಣಾದೇವಿಯನ್ನು ಸ್ವಯಂವರದಲ್ಲಿ ಶ್ರೀಕೃಷ್ಣನೊಬ್ಬನೆ ಹೋಗಿ ಗರುಡನು ಅಮೃತವನ್ನು ತಂದಂತೆ ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದನು ! ಎಲೈ ಅರಸೆ, ಇದೇಪ್ರಕಾರವಾಗಿ ಇನ್ನು ಬಹುಮಂದಿ ಸಹಸ್ರಸಂಖ್ಯೆಯುಳ್ಳ ಸ್ತ್ರೀಯರು ಕೃಷ್ಣನಿಗೆ ಪತ್ನಿಯರಾದರು ; ಅವರಲ್ಲಿ ರುಕ್ಮಿಣಿಯು ಜಾಂಬವತಿಯು ಸತ್ಯಭಾಮೆಯು ಸತ್ಯಾದೇವಿಯು ಭದ್ರಾದೇವಿಯು ಲಕ್ಷಣಾದೇವಿಯು ಕಾಳಿಂದಿಯು ಮಿತ್ರವಿಂದೆಯು ಎಂಬ ಎಂಟುಮಂದಿಯು ಶ್ರೀಕೃಷ್ಣನ ಪಟ್ಟಮಹಿಷಿಯರು !

## ೫೯ನೇ ಅಧ್ಯಾಯ.

## ನರಕಾಸುರನ ವಧೆ.

ಎಲೈ ಅರಸೆ, ನರಕಾಸುರನು ಇಂದ್ರನ ಛತ್ರವನ್ನೂ ಇಂದ್ರನ ಮಾತೃವಾದ ಅದಿತೀದೇವಿಯ ಕರ್ಣಕುಂಡಲಗಳನ್ನೂ ಇಂದ್ರನಿಗೆ ವಿಹಾರಸ್ಥಾನವಾಗಿ ಮೇರುಶಿಖರಸ್ಥವಾದ ಮಣಿಪರ್ವತವನ್ನೂ ಅಪಹರಿಸಿದನು ; ಇಂದ್ರನು ಶ್ರೀಕೃಷ್ಣನ ಸಮೀಪಕ್ಕೆ ಹೋಗಿ ಆ ವೃತ್ತಾಂತವನ್ನು ಹೇಳಲು ಆ ಭಗವಂತನು ಗರುಡಾರೂಢನಾಗಿ ಸತ್ಯಭಾಮಾಸಮೇತನಾಗಿ ಪರ್ವತಪ್ರಾಕಾರಗಳಿಂದಲೂ ಶಸ್ತ್ರಪ್ರಾಕಾರಗಳಿಂದಲೂ ಜಲದುರ್ಗಗಳಿಂದಲೂ ಅಗ್ನಿವಾಯುಮಯವಾದ ಆವರಣಗಳಿಂದಲೂ ಕಬ್ಬಿಣದ ಸರಪಣಿಗಳಿಂದ ನಿರ್ಮಿತವಾದ ಆವರಣಗಳಿಂದಲೂ ಎಲ್ಲಾ ಕಡೆಯಲ್ಲೂ ಆವೃ

ತವಾದ ಪ್ರಾಗ್ಜ್ಯೋತಿಷಪುರಕ್ಕೆ ಹೋಗಿ ಗದೆಯಿಂದ ಪರ್ವತರೂಪಗಳಾದ ಆವರಣಗಳನ್ನೂ ಬಾಣಗಳಿಂದ ಶಸ್ತ್ರಪ್ರಾಕಾರಗಳನ್ನು ಚಕ್ರಾಯುಧದಿಂದ ಅಗ್ನಿದುರ್ಗ ಜಲದುರ್ಗ ವಾಯುದುರ್ಗಗಳನ್ನೂ ಖಡ್ಗದಿಂದ ಪಾಶಗಳನ್ನೂ ಛೇದಿಸಿ ಶಂಖನಾದದಿಂದ ಯಂತ್ರಗಳನ್ನೂ ಶೂರರ ಹೃದಯಗಳನ್ನೂ ಸಹಾ ಭೇದಿಸಿ ಸ್ಥೂಲವಾದ ಗದೆಯಿಂದ ಪ್ರಾಕಾರಗಳನ್ನು ಬೀಳಿಸಿದನು ; ಆಗ ಯುಗಾಂತಸಿಡಿಲಿನಂತೆ ಭಯಂಕರವಾದ ಆ ಪಾಂಚಜನ್ಯ ಶಂಖನಾದವನ್ನು ಕೇಳಿ ಶಯನಗೈದಿದ್ದ ಮುರನೆಂಬ ಅಸುರನು ಜಲದಿಂದೆದ್ದು ಯುಗಾಂತಸೂರ್ಯಸಮಾನವಾಗಿ ಮಹಾ ತೀಕ್ಷ್ಣವಾದ ತ್ರಿಶೂಲವನ್ನು ಧರಿಸಿಕೊಂಡು ತನ್ನ ಐದು ಮುಖಗಳಿಂದಲೂ ಲೋಕತ್ರಯವನ್ನೂ ನುಂಗುವವನಂತೆ ಸರ್ಪವು ಗರುಡನನ್ನಟ್ಟಿದಂತೆ ಶ್ರೀಕೃಷ್ಣನನ್ನಟ್ಟಿಬಂದು ಗರುಡನಮೇಲೆ ಶೂಲವನ್ನು ಪ್ರಯೋಗಿಸಿ ಐದು ಮುಖಗಳಿಂದಲೂ ಅಟ್ಟಹಾಸವನ್ನು ಮಾಡಿದನು ; ಆ ನಾದವು ಆಕಾಶವನ್ನೂ ಭೂಮಿಯನ್ನೂ ದಿಕ್ಕುಗಳನ್ನೂ ಬ್ರಹ್ಮಾಂಡವನ್ನೂ ವ್ಯಾಪಿಸುತ್ತಿರಲು ಗರುಡನಮೇಲೆ ಬರುತಿದ್ದ ಆ ಶೂಲವನ್ನು ಶ್ರೀಕೃಷ್ಣನು ಬಾಣಗಳಿಂದ ಮೂರುತುಂಡಾಗಿ ಛೇದಿಸಿ ಮುರನ ಮುಖಗಳಲ್ಲಿ ಬಾಣಗಳನ್ನು ಪ್ರಯೋಗಿಸಿದನು ; ಮುರನು ಕೃಷ್ಣನಮೇಲೆ ಗದೆಯನ್ನು ಪ್ರಯೋಗಿಸಿದನು ; ಶ್ರೀಕೃಷ್ಣನು ಆ ಗದೆಯನ್ನು ತನ್ನ ಗದೆಯಿಂದ ಸಹಸ್ರಭಾಗವಾಗಿ ಛೇದಿಸಿ ಬಾಹುಗಳನ್ನೆತ್ತಿಕೊಂಡು ಪ್ರಹರಿಸಲೋಸುಗ ಬರುತಿದ್ದ ಮುರನ ಶಿರಸ್ಸುಗಳನ್ನು ಚಕ್ರದಿಂದ ಛೇದಿಸಲು ಮುರನು ನಿರ್ಜೀವನಾಗಿ ಇಂದ್ರನಿಂದ ಛೇದಿಸಲ್ಪಟ್ಟ ಪರ್ವತದಂತೆ ಛೇದಿಸಲ್ಪಟ್ಟ ಐದುಮುಖಗಳೊಡನೆ ಜಲದಲ್ಲಿ ಬಿದ್ದನು !

ಆ ಬಳಿಕ ಮುರನಪುತ್ರರೇಳುಮಂದಿಯು ಪಿತೃವಧೆಯಿಂದ ದುಃಖಿತರಾಗಿ ಪ್ರತಿಕ್ರಿಯೆಯನ್ನು ಮಾಡಲಿಚ್ಛೆಯುಳ್ಳವರಾಗಿ ಮಹಾ ಕೋಪದಿಂದ ಹೊರಟರು ; ತಾಮ್ರನು ಅಂತರಿಕ್ಷನು ಶ್ರವಣನು ವಿಭಾವಸುವು ವಸುವು ನಭಸ್ವತನು ಅರುಣನು ಎಂಬ ಅವರೇಳುಮಂದಿಯೂ ಸೇನಾಪತಿಯಾದ ಪೀಠಾಸುರನನ್ನು ಮುಂದುಮಾಡಿಕೊಂಡು ನರಕಾಸುರನಿಂದ ಪ್ರೇರಿತರಾಗಿ ಆಯುಧಗಳನ್ನು ಧರಿಸಿಕೊಂಡು ಬಂದು ಶ್ರೀಕೃಷ್ಣನಮೇಲೆ ಅಸ್ತ್ರಗಳನ್ನೂ ಬಾಣಗಳನ್ನೂ ಖಡ್ಗಗಳನ್ನೂ ಗದೆಗಳನ್ನೂ ಶಕ್ತಿಗಳನ್ನೂ ದೊಣ್ಣೆಗಳನ್ನೂ ಶೂಲಗಳನ್ನೂ ಪ್ರಯೋಗಿಸಿದರು ; ಅಮೋಘಪರಾಕ್ರಮವುಳ್ಳ ಭಗವಂತನು ಅವರಿಂದ ಪ್ರಯುಕ್ತಗಳಾದ ಆಯುಧಗಳನ್ನು ತನ್ನ ಬಾಣಗಳಿಂದ ತುತ್ತುಮುರಾಗಿ ಚೂರ್ಣೀಕರಿಸಿ ಪೀಠಾಸುರನು ಮೊದಲಾದ ಅವರೆಂಟುಮಂದಿಯ ಬಾಹುಗಳನ್ನೂ ಕಂಠಗಳನ್ನೂ ಪಾದಗಳನ್ನೂ ತೊಡೆಗಳನ್ನೂ ಛೇದಿಸಿ ಎಲ್ಲರನ್ನೂ ಯಮಪುರಪ್ರವೇಶಮಾಡಿಸಿದನು ! ಆಮೇಲೆ ಭೂಪುತ್ರನಾದ ನರಕಾಸುರನು ಭಗವಂತನ ಚಕ್ರಾಯುಧದಿಂದಲೂ ಬಾಣಗಳಿಂದಲೂ ಛೇದಿಸಲ್ಪಟ್ಟು ನಾಶವನ್ನೈದಿದ ತನ್ನ ಸೈನ್ಯಗಳನ್ನು ನೋಡಿ ಬಹು ಕೋಪಯುಕ್ತನಾಗಿ ಸಮುದ್ರೋತ್ಪನ್ನಗಳಾಗಿ ಮದಸ್ರಾವಿಗಳಾದ ಮದ್ದಾನೆಗಳಿಂದ ಯುಕ್ತನಾಗಿ ಬಂದು ಸೂರ್ಯನಮೇಲೆ ಮಿಂಚಿನಿಂದ ಕೂಡಿರುವ ನೀಲಮೇಘದಂತೆ ಮೆರೆಯುತ ಗರುಡನಮೇಲೆ ಸತ್ಯಭಾಮಾಸಮೇತನಾಗಿ ಕುಳಿತಿದ್ದ ಶ್ರೀಕೃಷ್ಣನನ್ನು ಕಂಡು ಶತಘ್ನಿಯೆಂಬ ಆಯುಧವನ್ನು ಪ್ರಯೋಗಿಸಲು ಅವನ ಭಟರೆಲ್ಲರು ಏಕಕಾಲದಲ್ಲಿ ಕೃಷ್ಣನನ್ನು ಪ್ರಹರಿಸಿದರು ; ಭಗವಂತನಾದ ಶ್ರೀಕೃಷ್ಣನು ವಿಚಿತ್ರವಾದ ಪಕ್ಷಗಳುಳ್ಳ ಬಾಣಗಳಿಂದ ನರಕಾಸುರನ ಭಟರನ್ನು ಛೇದಿಸಲ್ಪಟ್ಟ ಬಾಹುಗಳೂ ತೊಡೆಗಳೂ ಕಂಠಗಳೂ ಉಳ್ಳವರಾಗಿ ಮಾಡಿ ಆನೆಗಳನ್ನೂ ಕುದುರೆಗಳನ್ನೂ ಸಂಹರಿಸಿ ತನ್ನ ರೆಕ್ಕೆಗಳಿಂದ ಗಜಗಳನ್ನು ಸಂಹರಿಸುತಿದ್ದ ಗರುಡನಮೇಲೆ ಕುಳಿತು ನರಕಾಸುರನ ಯೋಧರಿಂದ ಪ್ರಯುಕ್ತಗಳಾದ ಶಸ್ತ್ರಾಸ್ತ್ರಗಳನ್ನು ಒಂದೊಂದನ್ನು ಮೂರು ಮೂರು ಬಾಣಗಳಿಂದ ಛೇದಿಸಿದನು ; ಆಗ ಗರುಡನ ರೆಕ್ಕೆಗಳಿಂದಲೂ ಮುಖನಖಗಳಿಂದಲೂ ತಾಡಿತಗಳಾದ ಆನೆಗಳು ಆರ್ತಸ್ವರವನ್ನು ಮಾಡಿಕೊಂಡು ಪುರಕ್ಕೆ ಓಡಿದವು ! ನರಕಾಸುರನು ಗರುಡನಿಂದ ಪಲಾಯನಗೈಸಲ್ಪಟ್ಟ ಸ್ವಸೈನ್ಯವನ್ನು ನೋಡಿ ವಜ್ರಾಯುಧವನ್ನಾದರೂ ಪರಾಙ್ಮುಖವಾಗಿ ಮಾಡುವಂಥಾ ಶಕ್ತ್ಯಾಯುಧದಿಂದ ಗರುಡನನ್ನು ಪ್ರಹರಿಸಿದನು ; ಗರುಡನು ಶಕ್ತ್ಯಾಯುಧದಿಂದ ಪೆಟ್ಟುಬಿದ್ದು ಪುಷ್ಪಮಾಲೆಯಿಂದ ಪ್ರಹರಿಸಲ್ಪಟ್ಟ ಗಜದಂತೆ ಸ್ವಲ್ಪವಾದರೂ ಚಲಿಸಲಿಲ್ಲ ; ಗರುಡನಮೇಲೆ ಮಾಡಿದ ಸಾಹಸವು ವ್ಯರ್ಥವಾಗಲು ನರಕಾಸುರನು ಶೂಲವನ್ನು ತೆಗೆದು

ಕೊಂಡು ಭಗವಂತನನ್ನು ಪ್ರಹರಿಸಲುದ್ಯೋಗಿಸಿದನು; ಅದಕ್ಕೆ ಮೊದಲೇ ಶ್ರೀಕೃಷ್ಣನು ತೀಕ್ಷ್ಣಾಗ್ರವುಳ್ಳ ಚಕ್ರಾಯುಧದಿಂದ ಆನೆಯಮೇಲೆ ಕುಳಿತಿದ್ದ ನರಕಾಸುರನ ಶಿರಸ್ಸನ್ನು ಛೇದಿಸಲು ಕುಂಡಲಯುಕ್ತವಾಗಿ ಮನೋಹರವಾದ ಕಿರೀಟದಿಂದ ಶೋಭಿತವಾಗಿ ಪ್ರಕಾಶಿಸುತ್ತಿದ್ದ ಆತನ ಶಿರಸ್ಸು ಭೂಮಿಯಲ್ಲಿ ಬಿದ್ದು ಹೊಳೆಯುತ್ತಿತ್ತು! ಆಗ ಋಷಿಗಳೂ ದೇವತೆಗಳೂ ಮಹಾ ಚನ್ನಾಯಿತೆಂದು ಪುಷ್ಪವೃಷ್ಟಿಯನ್ನು ಕರೆಯುತ ಭಗವಂತನನ್ನು ಸ್ತುತಿಸಿದರು!

ಅನಂತರದಲ್ಲಿ ಭೂದೇವಿಯು ಶ್ರೀಕೃಷ್ಣನ ಸಮೀಪಕ್ಕೆ ಬಂದು ಉತ್ತಮವಾದ ಸುವರ್ಣದಲ್ಲಿ ಕೆತ್ತಲ್ಪಟ್ಟ ರತ್ನಗಳಿಂದ ಪ್ರಕಾಶಿಸುವ ಅದಿತೀದೇವಿಯ ಕುಂಡಲಗಳನ್ನೂ ವರುಣನ ಛತ್ರವನ್ನೂ ಮಣಿಪರ್ವತವನ್ನೂ ವನಮಾಲೆಯೊಡನೆ ಕೃಷ್ಣನಿಗೆ ಒಪ್ಪಿಸಿ ದೇವದೇವನಾಗಿ ವಿಶ್ವೇಶ್ವರನಾದ ಭಗವಂತನನ್ನು ಕುರಿತು ಭಕ್ತಿನಮ್ರತವಾದ ಬುದ್ಧಿಯಿಂದ ಕೈಮುಗಿದುಕೊಂಡು "ದೇವದೇವನಾಗಿ ಶಂಖಚಕ್ರಗದಾಧರನಾದ ನಿನಗೆ ನಮಸ್ಕಾರ; ಭಕ್ತರ ಇಚ್ಛಾನುಸಾರವಾಗಿ ಸ್ವೀಕರಿಸಲ್ಪಟ್ಟ ದೇಹವುಳ್ಳ ಪರಮಾತ್ಮನಾದ ನಿನಗೆ ನಮಸ್ಕಾರ! ಪದ್ಮನಾಭನಾದ ನಿನಗೆ ನಮಸ್ಕಾರ! ಪದ್ಮಮಾಲಾಧಾರಿಯಾದ ನಿನಗೆ ನಮಸ್ಕಾರ! ಪದ್ಮನೇತ್ರನಾಗಿ ಪದ್ಮಪಾದನಾದ ನಿನಗೆ ನಮಸ್ಕಾರ! ಎಲೈ ಭಗವಂತನೆ, ವಾಸುದೇವನಾಗಿ ಮಹಾವಿಷ್ಣುವಾಗಿ ಆದಿಕಾರಣನಾಗಿ ಪುರಾಣಪುರುಷನಾಗಿ ಪೂರ್ಣಜ್ಞಾನಸ್ವರೂಪನಾದ ನಿನಗೆ ನಮಸ್ಕಾರ; ಉತ್ಪತ್ತಿಶೂನ್ಯನಾಗಿ ಜಗತ್ಸೃಷ್ಟಿಕರ್ತೃವಾಗಿ ಅನಂತಶಕ್ತಿಯುಳ್ಳವನಾಗಿ ಕಾರ್ಯಕಾರಣರೂಪವಾದ ಜಗದ್ರೂಪನಾಗಿ ಪರಮಾತ್ಮನಾದ ನಿನಗೆ ನಮಸ್ಕಾರ! ಎಲೈ ಪ್ರಭುವಾದ ಶ್ರೀಕೃಷ್ಣನೆ, ನೀನು ಪ್ರಪಂಚಸೃಷ್ಟಿಗೋಸ್ಕರ ರಜೋಗುಣವನ್ನು ಧರಿಸುತ್ತೀ; ಲಯಾರ್ಥವಾಗಿ ತಮೋಗುಣವನ್ನಾಶ್ರಯಿಸುತ್ತೀ; ರಕ್ಷಣಾರ್ಥವಾಗಿ ಸತ್ವಗುಣವನ್ನು ಗ್ರಹಿಸುತ್ತೀ; ಕಾಲವೂ ಪ್ರಧಾನವೂ ಪುರುಷನೂ ಪರಮಾತ್ಮನೂ ನೀನೇ ಸರಿ! ಎಲೈ ಭಗವಂತನೆ, ನಾನು ಜಲವು ತೇಜಸ್ಸು ವಾಯುವು ಆಕಾಶವು ದೇವತೆಗಳು ಮನಸ್ಸು ಇಂದ್ರಿಯಗಳು ಅಹಂಕಾರವು ಮಹತತ್ವವು ಮೊದಲಾದ ಸಮಸ್ತವೂ ದ್ವಿತೀಯವಸ್ತುರಹಿತನಾದ ನಿನ್ನಲ್ಲೇ ಅಂತರ್ಭೂತಗಳು; ಭ್ರಮೆಯಿಂದ ಪೃಥಗ್ವಿಧಿಯಾಗಿ ತೋರುವದೇಹೊರತು ಪರಮಾರ್ಥವಲ್ಲ! ಎಲೈ ಶರಣಾಗತರಕ್ಷಕನಾದ ಭಗವಂತನೆ, ಈ ಬಾಲಕನು ಭಗದತ್ತನು; ನರಕಾಸುರನ ಪುತ್ರನು; ಈತನು ಭೀತನಾಗಿ ನಿನ್ನ ಪಾದಮೂಲವನ್ನು ಹಿಡಿದಿದ್ದಾನೆ; ಆದಕಾರಣ ಇವನ ಶಿರಸ್ಸಿನಮೇಲೆ ಸರ್ವಪಾಪಪರಿಹಾರಕವಾದ ನಿನ್ನ ಹಸ್ತವನ್ನಿಟ್ಟು ರಕ್ಷಿಸು" ಎಂದು ಪ್ರಾರ್ಥಿಸಿದಳು.

ಎಲೈ ಅರಸೆ, ಈ ರೀತಿಯಲ್ಲಿ ಭಕ್ತಿನಮ್ರಳಾದ ಭೂದೇವಿಯು ಸ್ತುತಿವಾಕ್ಯಗಳಿಂದ ಪ್ರಾರ್ಥಿತನಾದ ಭಗವಂತನು ಭಗದತ್ತನಿಗೆ ಅಭಯವನ್ನಿತ್ತು ಸಂಪದ್ಯುಕ್ತವಾದ ನರಕಾಸುರನ ಗೃಹವನ್ನು ಪ್ರವೇಶಿಸಿ ನರಕಾಸುರನ ಅಂತಃಪುರದಲ್ಲಿ ಆ ಅಸುರನಿಂದ ಬಲಾತ್ಕಾರವಾಗಿ ಅಪಹರಿಸಿಕೊಂಡು ಬರಲ್ಪಟ್ಟ ರಾಜಕನ್ಯಕೆಯರಾದ ಹದಿನಾರುಸಾವಿರ ಮಂದಿಯನ್ನು ಕಂಡನು; ಆ ಕನ್ಯಕೆಯರು ಅಂತಃಪುರವನ್ನು ಪ್ರವೇಶಿಸಿದ ಪುರುಷಶ್ರೇಷ್ಠನಾದ ಶ್ರೀಕೃಷ್ಣನನ್ನು ನೋಡಿ ಮನಸ್ಸಿನಲ್ಲಿ ಆತನೆ ತಮಗೆ ಯೋಗ್ಯನಾದ ಪತಿಯೆಂದೂ ತಮಗೆ ಅನುರೂಪನಾದವನನ್ನು ದೈವವೇ ತೋರಿಸಿತೆಂದೂ ಎಣಿಸಿ ಭಗವಂತನ ಸೌಂದರ್ಯವನ್ನು ನೋಡಿ ಮೋಹಿತರಾಗಿ ಆತನು ತಮಗೆ ಪತಿಯಾಗುವದಕ್ಕೆ ಬ್ರಹ್ಮನು ಸಮ್ಮತಿಸಲೆಂದು ಪ್ರಾರ್ಥಿಸಿದರು; ಆಮೇಲೆ ಭಗವಂತನು ದಿವ್ಯದುಕೂಲಧಾರಿಣಿಯರಾದ ಆ ಸ್ತ್ರೀಯರೆಲ್ಲರನ್ನು ಡೋಲಿಗಳಲ್ಲಿ ಹತ್ತಿಸಿ ದ್ವಾರಕಾಪುರಕ್ಕೆ ಕಳುಹಿಸಿ ಅಲ್ಲಿದ್ದ ರಥಗಳು ಬೊಕ್ಕಸಗಳು ಅಶ್ವಗಳು ಮಹತ್ತಾದ ಧನವು ಐರಾವತಕುಲೋತ್ಪನ್ನಗಳಾಗಿ ಚತುರ್ದಂತೆಗಳುಳ್ಳವಾಗಿ ಶುಭ್ರವರ್ಣಗಳಾದ ಅರವತ್ತುನಾಲ್ಕು ದಿವ್ಯಗಜಗಳು ಮೊದಲಾದವನ್ನು ತನ್ನ ಪುರಕ್ಕೆ ಕಳುಹಿಸಿ ಆಮೇಲೆ ಸ್ವರ್ಗಕ್ಕೆ ಹೋಗಿ ಅದಿತೀದೇವಿಯ ಕುಂಡಲಗಳನ್ನು ಆಕೆಗೆ ಕೊಟ್ಟು ಇಂದ್ರನಿಂದಲೂ ಶಚೀದೇವಿಯಿಂದಲೂ ಪೂಜಿತನಾಗಿ ಸತ್ಯಭಾಮೆಯಿಂದ ಪ್ರೇರಿತನಾಗಿ ಪಾರಿಜಾತವೃಕ್ಷವನ್ನು ಕಿತ್ತು ಗರುಡನಮೇಲಿರಿಸಿಕೊಂಡು ಅದನ್ನು ತಡೆದ ಇಂದ್ರಾದಿ ದೇವತೆಗಳನ್ನು ಜಯಿಸಿ ಸ್ವಪುರಕ್ಕೆ ಬಂದು ಸತ್ಯಭಾಮೆಯ ಗೃಹೋದ್ಯಾನದಲ್ಲಿ ಪಾರಿಜಾತವೃಕ್ಷವನ್ನು ನೆಡಿಸಿದನು; ಸ್ವರ್ಗವಾಸಿಗಳಾದ

ಭ್ರಮರಗಳು ಆ ಪಾರಿಜಾತಪುಷ್ಪಗಳ ಗಂಧಕ್ಕೆ ಆಶೆಪಟ್ಟು ಬರುತ್ತಿದ್ದವು! ಎಲೈ ಅರಸೇ, ದೇವೇಂದ್ರನು ಕಾರ್ಯಾರ್ಥವಾಗಿ ಬಂದು ತನ್ನ ಕಿರೀಟಾಗ್ರಗಳಿಂದ ಭಗವಂತನ ಪಾದಗಳನ್ನು ಸ್ಪರ್ಶಮಾಡಿ ಸ್ವಕಾರ್ಯವನ್ನು ವಿಜ್ಞಾಪನೆಗೈದು ಆ ಭಗವಂತನಿಂದ ಆ ಕಾರ್ಯವನ್ನು ಮಾಡಿಸಿಕೊಂಡು ಆತನ ಸಂಗಡಲೇ ಯುದ್ಧವನ್ನು ಮಾಡಿದನು; ದೇವತೆಗಳಿಗೆ ಅಜ್ಞಾನವೂ ಧನಮದವೂ ಅಧಿಕವಾಗಿರುವವು!

ಅನಂತರದಲ್ಲಿ ಅವ್ಯಯನಾದ ಭಗವಂತನು ಏಕಮುಹೂರ್ತದಲ್ಲಿ ನಾನಾರೂಪಧಾರಿಯಾಗಿ ಯಥಾಶಾಸ್ತ್ರವಾಗಿ ಆ ಹದಿನಾರುಸಾವಿರ ಸ್ತ್ರೀಯರನ್ನೂ ಪಾಣಿಗ್ರಹಣ ಮಾಡಿಕೊಂಡು ಊಹಿಸಲಶಕ್ಯವಾದ ಚರಿತ್ರವುಳ್ಳವನಾಗಿ ಅಸದೃಶವಿಭವಗಳುಳ್ಳ ಗೃಹಗಳಲ್ಲಿರುವ ಮಹಾಲಕ್ಷ್ಮಿಯ ಅಂಶಭೂತರಾದ ಆ ಸ್ತ್ರೀಯರೊಡನೆ ಗೃಹಸ್ಥಾಶ್ರಮಧರ್ಮಗಳನ್ನಾಚರಿಸುತ ವಿಹರಿಸುತ್ತಿದ್ದನು! ಬ್ರಹ್ಮಾದಿಗಳೂ ಯಾವ ಭಗವಂತನ ಮಾರ್ಗವನ್ನರಿಯರೊ ಅಂಥಾ ರಮಾನಾಥನಾದ ಭಗವಂತನನ್ನು ಪತಿಯಾಗಿ ಪಡೆದು ಆ ಸ್ತ್ರೀಯರು ಅನುರಾಗಪೂರ್ವಕವಾದ ನಗುನೋಟಗಳೂ ನವಸಂಗಮಲಜ್ಜೆಯೂ ಉಳ್ಳವರಾಗಿ ಸುಖವಾಗಿದ್ದುಕೊಂಡು ಅನೇಕ ದಾಸೀಜನರುಳ್ಳವರಾದಾಗ್ಯೂ ಶ್ರೀಕೃಷ್ಣನಿಗೆ ಎದುರಾಗಿಹೋಗಿ ಕರೆದುಕೊಂಡುಬರುವದು ಪೀಠಪಾದೋದಕ ತಾಂಬೂಲಾದಿಗಳನ್ನು ಕೊಡುವದು ಕಾಲುಗಳನ್ನೊತ್ತುವದು ಬೀಸಣಿಗೆಯಿಂದ ಬೀಸುವದು ಗಂಧಲೇಪನವು ಪುಷ್ಪಗಳನ್ನು ಮುಡಿಸುವದು ಕೇಶಗಳನ್ನು ಶಿಕ್ಕು ಬಿಡಿಸಿ ಕಟ್ಟುವದು ಹಾಸಿಗೆಯನ್ನು ಹಾಸುವದು ಸ್ನಾನಮಾಡಿಸುವದು ಫಲಹಾರಗಳನ್ನು ಕೊಡುವದು ಎಲೇಹಾಕಿ ಭೋಜನಪದಾರ್ಥಗಳನ್ನು ಬಡಿಸುವದು ಮೊದಲಾದ ಸೇವೆಗಳನ್ನೂ ಉಪಚಾರಗಳನ್ನೂ ತಾವೇ ಮಾಡುತ್ತಿದ್ದರು!

---

## ೬೦ನೇ ಅಧ್ಯಾಯ.

## ಶ್ರೀಕೃಷ್ಣ ರುಕ್ಮಿಣೀದೇವಿಯರ ಸಂವಾದ.

ಎಲೈ ಅರಸೆ, ಒಂದು ಸಮಯದಲ್ಲಿ ರುಕ್ಮಿಣೀದೇವಿಯು ಹಾಸಿಗೆಯಮೇಲೆ ಸುಖವಾಗಿ ಕುಳಿತಿದ್ದ ಜಗದ್ಗುರುವಾಗಿ ತನಗೆ ಪತಿಯಾದ ಶ್ರೀಕೃಷ್ಣನನ್ನು ಸಖೀಜನರೊಡಗೂಡಿ ಬೀಸಣಿಗೆಯಿಂದ ಬೀಸಿಕೊಂಡು ಸಮಸ್ತ ಜಗತ್ತನ್ನೂ ಸೃಷ್ಟಿಸಿ ರಕ್ಷಿಸಿ ಲೀಲೆಯಿಂದ ಸಂಹರಿಸುವಂಥಾವನಾಗಿ ಧರ್ಮಸಂಸ್ಥಾಪನಾರ್ಥವಾಗಿ ಯಾದವವಂಶದಲ್ಲಿ ಲೀಲಾಮಾನುಷನಾಗಿ ಅವತರಿಸಿದವನಾಗಿ ದಿವ್ಯವಾದ ಆ ಗರ್ಭಗೃಹದಲ್ಲಿ ಕ್ಷೀರದ ನೊರೆಯಂತೆ ಶುಭ್ರವಾಗಿ ಉತ್ತಮವಾದ ಹಾಸಿಗೆಯಲ್ಲಿ ಕುಳಿತಿದ್ದ ಶ್ರೀಕೃಷ್ಣನನ್ನು ಉಪಚರಿಸುತ್ತಿದ್ದಳು; ಪ್ರಕಾಶಿಸುವ ಮುತ್ತುಗಳ ಕುಚ್ಚುಗಳಿಂದ ಒಪ್ಪುವ ಮೇಲುಕಟ್ಟುಗಳಿಂದ ಯುಕ್ತವಾಗಿ ರತ್ನದೀಪಗಳಿಂದ ಶೋಭಿತವಾಗಿ ಭ್ರಮರಸಮೂಹಗಳಿಂದ ನಾದಿತವಾದ ಪುಷ್ಪಮಾಲೆಗಳಿಂದಲೂ ಧೂಪಗಳಿಂದಲೂ ಗವಾಕ್ಷಗಳಿಂದ ಬರುವ ಚಂದ್ರಕಿರಣಗಳಿಂದಲೂ ಪಾರಿಜಾತವನದ ಪರಿಮಳವನ್ನಪಹರಿಸಿಕೊಂಡು ಬರುವ ಮಂದಮಾರುತದಿಂದಲೂ ಗವಾಕ್ಷರಂಧ್ರಗಳಿಂದ ಬರುವ ಅಗರುಧೂಪಗಳಿಂದಲೂ ಅತಿ ಮನೋಹರವಾದ ಆ ದಿವ್ಯಗೃಹದಲ್ಲಿ ರುಕ್ಮಿಣಿಯು ಸುವರ್ಣಮಯವಾದ ದಂಡವುಳ್ಳ ವಾಲವ್ಯಜನವನ್ನು ಒಬ್ಬ ಸಖಿಯ ಹಸ್ತದಿಂದ ತೆಗೆದುಕೊಂಡು ಅದರಿಂದ ಬೀಸುತ ಶ್ರೀಕೃಷ್ಣನ ಸಮೀಪದಲ್ಲಿ ರತ್ನಮಯವಾದ ಕಾಲಂದಿಗೆಗಳನ್ನು ಧ್ವನಿಗೈಸುತ ಉಂಗುರಗಳಿಂದಲೂ ಕಡಗಗಳಿಂದಲೂ ವ್ಯಜನದಿಂದಲೂ ಪ್ರಕಾಶಿಸುವ ಹಸ್ತವುಳ್ಳವಳಾಗಿ ಸೀರೆಯ ಸೆರಗಿನಲ್ಲಿ ಗೂಢವಾದ ಕುಚಕುಂಭಯುಗ್ಮದಲ್ಲಿ ಪ್ರಕಾಶಿಸುವ ಕುಂಕುಮದಿಂದಲೂ ಕೆಂಪಾದ ಮುತ್ತಿನಹಾರವುಳ್ಳ ವಕ್ಷಸ್ಥಳದಿಂದಲೂ ಬಳುಕುವವಳಾಗಿ ನಡುವಿನಲ್ಲಿ ಹೊಳೆಯುವ ಒಡ್ಯಾಣಕಾಂತಿಯಿಂದ ಪ್ರಕಾಶಿತಳಾಗಿದ್ದಳು; ಶ್ರೀಕೃಷ್ಣನು ಲೀಲೆಯಿಂದ ಧರಿಸಲ್ಪಟ್ಟ ಮಾನುಷದೇಹವುಳ್ಳವಳಾಗಿ ತನಗೆ ಅನುರೂಪವಾದ ಸೌಂದರ್ಯವುಳ್ಳವಳಾಗಿ ಅನ್ಯರಿಗೆ ದುರ್ಲಭವಾಗಿ ಮಹಾಲಕ್ಷ್ಮೀರೂಪಳಾದ ರುಕ್ಮಿಣಿಯನ್ನು ನೋಡಿ ಕೇಶಗಳಿಂದಲೂ ಕುಂಡಲಗಳಿಂದಲೂ ಹಾರಗಳಿಂದಲೂ ಪ್ರಕಾಶಮಾನವಾದ ಮುಖದಲ್ಲಿ ಹೊಳೆಯುವ ಮುಗುಳು

ನಗುವೆಂಬ ಅಮೃತವುಳ್ಳ ರುಕ್ಮಿಣಿಯನ್ನು ಕುರಿತು ನಗುತ "ಎಲೇ ರಾಜಪುತ್ರಿಯಾದ ರುಕ್ಮಿಣಿಯೆ, ನೀನು ಪೂರ್ವದಲ್ಲಿ ಲೋಕಪಾಲಕರಿಗೆ ಸಮಾನವಾದ ಸಂಪತ್ತುಳ್ಳವರಾಗಿ ಮಹಾನುಭಾವರಾಗಿ ಧನವಂತರಾಗಿ ಸೌಂದರ್ಯದಿಂದಲೂ ಔದಾರ್ಯದಿಂದಲೂ ಬಲದಿಂದಲೂ ಪ್ರಖ್ಯಾತರಾದ ಅರಸುಗಳಿಂದ ಅಪೇಕ್ಷಿಸಲ್ಪಟ್ಟವಳಾಗಿದ್ದು; ಕಾಮಮದದಿಂದ ಉದ್ಧತರಾಗಿ ನಿನ್ನನ್ನು ಅಪೇಕ್ಷಿಸಿಕೊಂಡು ಬಂದು ಕಾದಿದ್ದ ಶಿಶುಪಾಲನು ಮೊದಲಾದ ಅರಸರನ್ನು ಬಿಟ್ಟು ನಿನಗೆ ಸಮಾನರಲ್ಲದ ನಮ್ಮನ್ನು ಯಾಕೆ ಅಪೇಕ್ಷಿಸಿದೆ! ನಾವು ಶಿಶುಪಾಲ ಜರಾಸಂಧರು ಮೊದಲಾದ ಅರಸರಿಗೆ ಭಯಪಟ್ಟು ಸಮುದ್ರಮಧ್ಯದಲ್ಲಿ ವಾಸಮಾಡಿಕೊಂಡಿದ್ದೇವೆ; ಬಲವದ್ವಿರೋಧದಿಂದ ಇಲ್ಲಿ ಸೇರಿಕೊಂಡಿರುವ ನಾವು ಸಿಂಹಾಸನಾರೋಹಣಕ್ಕೆ ಯೋಗ್ಯರಲ್ಲದವರು; ಒಬ್ಬರಿಗು ತಿಳಿಯದ ಆಚಾರವುಳ್ಳವರಾಗಿ ಲೋಕಮಾರ್ಗವನ್ನು ಬಿಟ್ಟು ವಿರುದ್ಧಾಚರಣವನ್ನು ಮಾಡುವ ಪುರುಷರ ಮಾರ್ಗವನ್ನನುಸರಿಸಿಕೊಂಡಿರುವ ಸ್ತ್ರೀಯರು ವ್ಯಸನಪಡುವರು; ಇಷ್ಟುಮಾತ್ರವೆ ಅಲ್ಲ: ನಾವು ನಿರ್ಧನರು; ಆದ್ದರಿಂದ ಧನಿಕರು ನಮ್ಮನ್ನು ಭಜಿಸುವದಿಲ್ಲ; ಧನವೂ ವಯಸ್ಸೂ ಆಕೃತಿಯೂ ಐಶ್ವರ್ಯವೂ ಯಾರಿಗೆ ಸಮವಾಗಿರುವವೊ ಅವರಿಗೆ ವಿವಾಹವೂ ಮೈತ್ರಿಯೂ ಉಂಟಾಗುವವು; ಉತ್ತಮಾಧಮಜನರು ಕೂಡಿರುವದಿಲ್ಲ! ಎಲೇ ರುಕ್ಮಿಣಿಯೆ, ಈ ಅರ್ಥವನ್ನು ತಿಳಿಯದೆಯೂ ದೂರಾಲೋಚನೆಯನ್ನು ಮಾಡದೆಯೂ ನೀನು ಗುಣಹೀನರಾಗಿ ಭಿಕ್ಷುಗಳಾಗಿ ಶ್ಲಾಘಿತರಲ್ಲದ ನಮ್ಮನ್ನು ವ್ಯರ್ಥವಾಗಿ ಅಪೇಕ್ಷಿಸಿದೆ; ಈಗಲಾದರು ನಿನಗೆ ಅನುರೂಪನಾದ ಪುರುಷಶ್ರೇಷ್ಠನನ್ನೈದು; ಯಾವ ಪುರುಷನಿಂದ ಇಹಲೋಕದಲ್ಲೂ ಪರಲೋಕದಲ್ಲೂ ಮನೋರಥಗಳನ್ನೈದುವೆಯೊ ಅಂಥಾ ಪುರುಷನನ್ನೈದು; ಶಿಶುಪಾಲನು ಸಾಲ್ವನು ಜರಾಸಂಧನು ದಂತವಕ್ರನು ಮೊದಲಾದ ಕ್ಷತ್ರಿಯರೂ ನಿನ್ನ ಅಣ್ಣನಾದ ರುಕ್ಮಿಯೂ ನನ್ನಲ್ಲಿ ದ್ವೇಷವನ್ನು ಮಾಡುತ್ತಾರೆ; ಶೌರ್ಯಮದಾಂಧರಾದ ಶಿಶುಪಾಲಾದಿಗಳ ಗರ್ವಪರಿಹಾರಾರ್ಥವಾಗಿ ದುಷ್ಟರ ತೇಜಸ್ಸನ್ನಪಹರಿಸುವ ನಮ್ಮಿಂದ ನೀನು ತರಲ್ಪಟ್ಟೆ; ನಾವು ಯಥಾರ್ಥವಾಗಿ ಉದಾಸೀನರು; ಪತ್ನೀಪುತ್ರಧನಾದಿಗಳಲ್ಲಿ ಅಪೇಕ್ಷೆಯುಳ್ಳವರಲ್ಲ; ನಾವು ಆತ್ಮಲಾಭದಿಂದ ಪೂರ್ಣರಾಗಿ ದೀಪಗಳಂತೆ ಸಾಕ್ಷಿಗಳಾಗಿ ಅಕ್ರಿಯಾವಂತರಾಗಿರುವವರು" ಎಂದು ನುಡಿದು ನಿರಂತರಸಾನ್ನಿಧ್ಯದಿಂದ ಆತನಿಗೆ ತಾನೇ ಪ್ರೀತಿಪಾತ್ರಳೆಂದು ಗರ್ವಿತಳಾದ ರುಕ್ಮಿಣಿಯ ಗರ್ವವನ್ನು ಪರಿಹರಿಸಲೋಸುಗ ನುಡಿದು ಸುಮ್ಮನಿದ್ದನು!

ರುಕ್ಮಿಣೀದೇವಿಯು ಲೋಕತ್ರಯನಾಥನಾಗಿ ಪತಿಯಾದ ಶ್ರೀಕೃಷ್ಣನಿಂದ ನುಡಿಯಲ್ಪಟ್ಟ ಕಠೋರವಾಗಿ ಮೊದಲ್ಯಾವಾಗಲೂ ಕೇಳಲ್ಪಡದ ಆ ವಾಕ್ಯವನ್ನು ಕೇಳಿ ಭಯದಿಂದ ಕಂಪಿಸುತ ರೋದನಗೈಯುತ ಅಪಾರಚಿಂತೆಯನ್ನೈದಿ ಕೆಂಪಾದ ನಖಗಳಿಂದ ಶೋಭಿಸುವ ಕೋಮಲವಾದ ಪಾದದಿಂದ ಭೂಮಿಯನ್ನು ಬರೆಯುತ ಕಪ್ಪುಮಿಶ್ರಿತವಾದ ನೇತ್ರೋದಕದಿಂದ ಕುಚಕುಂಭಗಳನ್ನು ನೆನೆಯಿಸುತ ಅತಿದುಃಖದಿಂದ ಮಾತಾಡಲಾರದೆ ಶಿರಬಾಗಿ ಸುಮ್ಮನೆ ನಿಂತಿರಲು ಬಹುದುಃಖದಿಂದಲೂ ಭಯದಿಂದಲೂ ಶೋಕದಿಂದಲೂ ನಷ್ಟವಾದ ಪ್ರಜ್ಞೆಯುಳ್ಳ ರುಕ್ಮಿಣಿಯ ಶಿಥಿಲವಾದ ಕಡಗಗಳುಳ್ಳ ಹಸ್ತದಿಂದ ವ್ಯಜನವು ಜಾರಿಬಿತ್ತು; ಪ್ರಜ್ಞಾರಹಿತಳಾದ ಆ ದೇವಿಯ ಕೇಶಗಳು ವಾಯುವಿನಿಂದ ಚಲಿತವಾದ ಕದಳೀಸ್ತಂಭದಂತೆ ಕೆಳಗೆ ಚದರಿಬಿದ್ದವು; ಹಾಸ್ಯಚಾತುರ್ಯವನ್ನರಿಯದ ರುಕ್ಮಿಣಿಯ ಪ್ರೇಮಾನುಬಂಧವನ್ನು ನೋಡಿ ಶ್ರೀಕೃಷ್ಣನು ದಯೆಯಿಂದ ಮಂಚದಿಂದಿಳಿದು ಹಸ್ತಗಳಿಂದ ಆ ದೇವಿಯನ್ನೆತ್ತಿ ಆಕೆಯ ಕೇಶಗಳನ್ನು ಸರಿಯಾಗಿ ಕಟ್ಟಿ ಪದ್ಮಸಮಾನವಾದ ಹಸ್ತದಿಂದ ಮುಖವನ್ನೂ ಬಾಷ್ಪಪೂರ್ಣವಾದ ನೇತ್ರಗಳನ್ನೂ ನೇತ್ರೋದಕದಿಂದ ನೆನೆಯಿಸಲ್ಪಟ್ಟ ಕುಚಕುಂಭಗಳನ್ನೂ ಒರಸಿ ತನ್ನ ಬಾಹುಗಳಿಂದ ಅಪ್ಪಿಕೊಂಡು ಸಮಾಧಾನಮಾಡುತ "ಎಲೇ ರುಕ್ಮಿಣಿಯೆ, ನೀನು ನನ್ನಲ್ಲಿ ಅಸೂಯೆಯನ್ನು ಮಾಡಬೇಡ; ನೀನು ನನ್ನಲ್ಲೇ ಪರಮಾನುರಕ್ತಳೆಂಬ ಅರ್ಥವನ್ನು ಬಲ್ಲೆನು; ಆದಾಗ್ಯು ನೀನು ಏನುಹೇಳುತ್ತೀಯೊ ಕೇಳಬೇಕೆಂಬ ಇಚ್ಛೆಯಿಂದ ನಾನು ಕಪಟೋಕ್ತಿಗಳನ್ನು ಹೇಳಿದೆನು; ಕೋಪದಿಂದ ನಡುಗುವ ಅಧರೋಷ್ಠವುಳ್ಳದ್ದಾಗಿ ಕೆಂಪಾದ ಕಡೆಗಣ್ಣೋಟಗಳಿಂದ ಸುಂದರವಾಗಿ ವಕ್ರವಾದ ಹುಬ್ಬುಗಳುಳ್ಳ ನಿನ್ನ ಮುಖವನ್ನು ನೋಡಬೇಕೆಂದು ನಾನು ಹೀಗೆ ನುಡಿದೆ

ನು ; ಪತ್ನೀಸಮೇತರಾದ ಗೃಹಸ್ಥಾಶ್ರಮಿಗಳಿಗೆ ಪತ್ನಿಯೊಡನೆ ವಿನೋದಹಾಸ್ಯಾಲಾಪಗಳಿಂದ ಕಾಲವನ್ನು ಕಳೆಯುವದು ಪರಮಸುಖವು" ಅಂದನು.

ಈ ರೀತಿಯಲ್ಲಿ ವಿದರ್ಭರಾಜನ ಪುತ್ರಿಯಾದ ರುಕ್ಮಿಣಿಯು ಭಗವಂತನಾದ ಶ್ರೀಕೃಷ್ಣನಿಂದ ಸಮಾಧಾನವನ್ನು ಮಾಡಲ್ಪಟ್ಟು ಅದು ಪರಿಹಾಸವಾಕ್ಯವೆಂದು ನಂಬಿ ಆತನು ತನ್ನನ್ನು ತ್ಯಾಗಮಾಡುವನೆಂಬ ಭಯವನ್ನು ಬಿಟ್ಟು ಭಗವಂತನ ಮುಖವನ್ನು ನೋಡಿ ಲಜ್ಜಾಯುಕ್ತವಾದ ನಗುವಿನಿಂದಲೂ ಮನೋಹರವಾಗಿ ಪ್ರೇಮಯುಕ್ತವಾದ ನೋಟಗಳಿಂದಲೂ ಆತನನ್ನು ಕುರಿತು " ಎಲೈ ಪದ್ಮಲೋಚನನೆ, ನಾನು ನಿನಗೆ ಅನುರೂಪಳಲ್ಲವೆಂದು ನೀನು ಹೇಳಿದ್ದು ಸತ್ಯವೇ ಸರಿ; ಸ್ವಕೀಯವಾದ ಮಹಿಮೆಯಲ್ಲಿ ರಮಿಸುವ ಮೂರ್ತಿತ್ರಯನಿಯಾಮಕನಾದ ನೀನೆಲ್ಲಿ— ಗುಣಾತ್ಮಕಳಾಗಿ ಅಜ್ಞಳಾಗಿ ಕಾಮ್ಯಫಲಾಪೇಕ್ಷೆಗಳಿಂದ ಆಕ್ರಮಿಸಲ್ಪಟ್ಟ ಚಿತ್ತವುಳ್ಳ ನಾನೆಲ್ಲಿ! ಕ್ಷತ್ರಿಯರ ಭಯದಿಂದ ನೀನು ಸಮುದ್ರಮಧ್ಯದಲ್ಲಿ ವಾಸವನ್ನು ಮಾಡುವದಾಗಿ ನೀನು ಹೇಳಿದ್ದು ಸತ್ಯವು ; ಶಬ್ದಾದಿ ವಿಷಯಗಳಿಂದ ಭಯಪಟ್ಟಂತೆ ನೀನು ಸಮುದ್ರದೋಪಾದಿಯಲ್ಲಿ ಅಗಾಧವಾದ ಪ್ರಾಣಿಹೃದಯವೆಂಬ ಗುಹೆಯಲ್ಲಿ ಜ್ಞಾನಸ್ವರೂಪನಾಗಿ ಇಂದ್ರಿಯಗಳಿಗೆ ಅಗೋಚರನಾಗಿದ್ದೀ! ನೀನು ದುಷ್ಟರಾದ ಜರಾಸಂಧಾದಿ ಬಲವಂತರೊಡನೆ ದ್ವೇಷವನ್ನು ಮಾಡಿಕೊಂಡಿರುವದಾಗಿ ಹೇಳಿದ್ದೂ ಸತ್ಯವೇ ಸರಿ; ನೀನು ನಿರಂತರವಲ್ಲಿಯು ಕುತ್ಸಿತಗಳಾದ ಇಂದ್ರಿಯಗಳೊಡನೆ ವಿರೋಧವನ್ನು ಮಾಡುತ್ತೀ! ಎಲೈ ಶ್ರೀಕೃಷ್ಣನೆ, ನೀವು ಸಿಂಹಾಸನಯೋಗ್ಯರಲ್ಲವೆಂದು ಹೇಳಿದ್ದೂ ಸತ್ಯವೇ ಸರಿ ; ನಿನ್ನ ಸೇವಕರಾದ ಭಕ್ತರಿಂದಲೂ ರಾಜ್ಯಾಧಿಪತ್ಯವು ಪಾಪಫಲಪ್ರದವಾಗಿ ಬಂಧಕಾರಣವಾಗ್ದೆಂದು ಬಿಡಲ್ಪಟ್ಟಿದೆ ; ಅಂಥಾ ರಾಜ್ಯಾಧಿಪತ್ಯವನ್ನು ನೀನು ಬಿಡುವದರಲ್ಲಿ ಹೇಳತಕ್ಕದ್ದೇನು ! ಬಬ್ಬರಿಗೂ ಗೋಚರವಲ್ಲದ ವ್ಯಾಪಾರವುಳ್ಳವರು ಲೌಕಿಕವ್ಯಾಪಾರವನ್ನು ಕಂಡವರಲ್ಲವೆಂದು ನೀನು ನುಡಿದಿದ್ದೂ ಸತ್ಯವೇ ಸರಿ ! ಎಲೈ ಭಗವಂತನೆ, ನಿನ್ನ ಪಾದಪದ್ಮ ಮಕರಂದವನ್ನು ಸೇವಿಸುವ ಋಷಿಗಳ ಮಾರ್ಗವೂ ಅಗೋಚರವಾದದ್ದು ! ಎಲೈ ಈಶ್ವರನೆ, ನಿನ್ನನ್ನು ಸೇವಿಸುವವರಿಗೆ ಲೌಕಿಕವ್ಯಾಪಾರಗಳಿಲ್ಲ ; ನಿನಗೆ ಹೇಳತಕ್ಕದ್ದೇನು ! ನೀವು ದರಿದ್ರರೆಂದು ಹೇಳಿದ್ದೂ ಸತ್ಯವು ; ನಿನಗಿಂತಲು ಅನ್ಯವಾದದ್ದು ಬೇರೆ ಇಲ್ಲ ; ಬ್ರಹ್ಮಾದಿಗಳೂ ನಿನ್ನನ್ನೇ ಪೂಜೆಮಾಡುತ್ತಾರೆ ! ದರಿದ್ರರೇ ನಿನಗೆ ಬೇಕಾದವರೆಂದು ನೀನು ಹೇಳಿದ್ದೂ ಸತ್ಯವೇ ; ಧನಿಕರು ಮದಾಂಧರಾಗಿ ನಿನ್ನನ್ನು ಭಜಿಸುವದಿಲ್ಲ ; ಅವರಲ್ಲಿ ನಿನಗೆ ಪ್ರೇಮೆಯಿಲ್ಲ ; ದರಿದ್ರರೇ ನಿನ್ನನ್ನು ಭಜಿಸುತ್ತಾರೆ ; ಅವರಲ್ಲಿ ನಿನಗೆ ಪರಮಾನುಗ್ರಹವುಂಟು ; ಬ್ರಂಹಾದಿಗಳಿಗೂ ಪೂಜಿಸುವದಕ್ಕೆ ನೀನೇ ವಿಷಯನು ! ಎಲೈ ಶ್ರೀಕೃಷ್ಣನೆ, ನೀನು ಸಮಸ್ತ ಪುರುಷಾರ್ಥಫಲಗಳ ಸ್ವರೂಪನು ; ಬುದ್ಧಿವಂತರು ಯಾವ ಪುರುಷಾರ್ಥಾಪೇಕ್ಷೆಯಿಂದ ಸರ್ವವನ್ನೂ ತ್ಯಜಿಸುತ್ತಾರೋ ಆ ಪುರುಷಾರ್ಥರೂಪನೇ ನೀನು ; ಅಂಥಾ ಮಹಾಯೋಗಿಗಳ ಸಮಾಜದಲ್ಲಿರುವ ನೀನು ಕಾಮುಕರಾದ ಸ್ತ್ರೀಪುರುಷರಿಗೆ ಗೋಚರನಲ್ಲ! ಎಲೈ ಶ್ರೀಕೃಷ್ಣನೆ, ನೀನು ಸರ್ವಸಂಗತ್ಯಾಗವನ್ನುಮಾಡಿದ ಮುನಿಗಳಿಂದ ವರ್ಣಿಸಲ್ಪಡುವ ಮಹತ್ವವುಳ್ಳವನೆಂದೂ ಜಗತ್ತಿಗೆ ಅಂತರಾತ್ಮನೆಂದೂ ಸೇವಕರಿಗೆ ನಿಜಸ್ವರೂಪವನ್ನು ತೋರಿಸುವವನೆಂದೂ ತಿಳಿದು ನಿನ್ನನ್ನು ನಾನು ಅಪೇಕ್ಷಿಸಿದೆನು ; ನಿನ್ನ ಹುಬ್ಬುಗಳ ಪ್ರೇರಣೆಯಿಂದುಂಟಾದ ಕಾಲದಿಂದ ಪರಿವೃತವಾದ ಐಶ್ವರ್ಯವು ಆಯುಷ್ಯವು ಮೊದಲಾದ ಸರ್ವಫಲಗಳೂ ಉಳ್ಳ ಬ್ರಹ್ಮಾದಿಗಳನ್ನೂ ಬಿಟ್ಟು ನಾನು ನಿನ್ನನ್ನೇ ಅಪೇಕ್ಷಿಸಿದೆನು ; ಆದ್ದರಿಂದ ನಾನು ದೂರಾಲೋಚನೆಯನ್ನು ಮಾಡದಿದ್ದವಳಲ್ಲ! ಎಲೈ ಈಶ್ವರನೆ, ನೀನು ಧನುಷ್ಟಾಂಕಾರಶಬ್ದದಿಂದಲೇ ಜರಾಸಂಧಾದಿ ಕ್ಷತ್ರಿಯರನ್ನು ಪಲಾಯನಂಗೈಸಿ ಸಿಂಹವು ಕ್ಷುದ್ರಮೃಗಗಳನ್ನು ಓಡಿಸಿ ತನ್ನ ವಸ್ತುವನ್ನು ಸಾಧಿಸುವರೀತಿಯಲ್ಲಿ ನನ್ನನ್ನು ಪಹರಿಸಿಕೊಂಡು ಬಂದೆ ; ಅಂಥಾ ನೀನು ಕ್ಷತ್ರಿಯರ ಭಯದಿಂದ ಸಮುದ್ರಮಧ್ಯದಲ್ಲಿ ವಾಸವನ್ನು ಮಾಡುವದೆಂಬದು ಅಸಂಗತವೇ ಸರಿ ! ನಿನ್ನನ್ನು ತಿಳಿಯಬೇಕೆಂಬ ಇಚ್ಛೆಯಿಂದ ಅಂಗರಾಯನು ಪೃಥುರಾಯನು ಭರತರಾಯನು ಯಯಾತಿರಾಯನು ಗಯರಾಯನು ಮೊದಲಾದ ರಾಜಶ್ರೇಷ್ಠರು ಏಕಾಧಿಪತ್ಯಸಾಂಬ್ರಾಜ್ಯವನ್ನು ಬಿಟ್ಟು ವನಕ್ಕೆ ಹೋಗಿ ದುಃಖಪಡದೆ ನಿನ್ನ ಸ್ಥಾನವನ್ನೈದಿದರು ! ಎಲೈ ಶ್ರೀಕೃಷ್ಣನೆ, ಗುಣಪರಿಜ್ಞಾನವುಳ್ಳ ಯಾವ ಸ್ತ್ರೀಯಾದರೂ ಲೋಕಸಂತಾಪ ಪರಿಹಾರಕವಾಗಿ ವಿದ್ವಾಂಸರಿಂದ ಶ್ಲಾಘಿತವಾದ

ನಿನ್ನ ಪಾದಪದ್ಮಗಂಧವನ್ನಾಘ್ರಾಣಂಗೈದು ನಿನ್ನನ್ನತಿಕ್ರಮಿಸಿ ಮರಣಧರ್ಮವುಳ್ಳವನಾಗಿ ಅಪರಿಮಿತ ಭಯವುಳ್ಳ ಸಾಧಾರಣ ಮನುಷ್ಯನನ್ನಪೇಕ್ಷಿಸುವಳೇ! ಜಗತ್ತುಗಳಿಗೆ ನಾಥನಾಗಿ ಇಹಲೋಕ ಪರಲೋಕಗಳಲ್ಲಿ ಇಷ್ಟಾರ್ಥಪ್ರಾಪಕನಾಗಿ ಅಂತರಾತ್ಮನಾದ ನಿನ್ನನ್ನು ಅನುರೂಪನನ್ನಾಗಿ ತಿಳಿದೇ ನಾನು ನಿನ್ನನ್ನೈದಿದೆನು; ಸೇವಕರ ಸಂಸಾರಬಂಧವಿಮೋಚಕವಾದ ನಿನ್ನ ಪಾದಪದ್ಮವೇ ನನಗೆ ರಕ್ಷಕವಾಗಲಿ! ನಾನು ಸಂಸಾರಬದ್ಧಳಾಗಿ ಜನನಮರಣಾದಿರೂಪವಾದ ಮಹಾಸಾಗರದಲ್ಲಿ ಮಗ್ನಳಾಗಿದ್ದೇನೆ! ಎಲೈ ಸ್ವಾಮಿಯೆ, ಬ್ರಹ್ಮಾದಿಗಳಿಂದ ಗಾನಂಗೈಯಲ್ಪಡುವ ನಿನ್ನ ಚರಿತವು ಯಾವ ಸ್ತ್ರೀಯ ಶ್ರೋತ್ರಮಾರ್ಗವನ್ನು ಪ್ರವೇಶಿಸುವದಿಲ್ಲವೊ ಆ ಸ್ತ್ರೀಗೆ ನಿನ್ನಿಂದ ಹೇಳಲ್ಪಟ್ಟ ಜರಾಸಂಧಾದಿಗಳು ಪತಿಗಳಾಗಲೀ; ಜರಾಸಂಧಾದಿಗಳು ಗರ್ದಭಗಳಂತೆ ಭಾರವಾಹಕರಾಗಿ ವೃಷಭಗಳಂತೆ ಸರ್ವಥಾ ದೇಹಪ್ರಯಾಸಪಡುವವರಾಗಿ ನಾಯಿಗಳಂತೆ ಅವಮಾನವನ್ನೈದುವವರಾಗಿ ಮಾರ್ಜಾಲಗಳಂತೆ ದೀನರಾಗಿ ಸ್ತ್ರೀಯರ ಅಧೀನರಾಗಿರುವರು; ಯಾವ ಸ್ತ್ರೀಯು ನಿನ್ನ ಪಾದಪದ್ಮ ಮಕರಂದವನ್ನಾಘ್ರಾಣಂಗೈಯದಿರುವಳೊ ಆ ಸ್ತ್ರೀಯು ಕಿವಿಗಳಿಂದಲೂ ಗಡ್ಡಮೀಸೆಗಳಿಂದಲೂ ರೋಮಗಳಿಂದಲೂ ನಖಗಳಿಂದಲೂ ಕೇಶಗಳಿಂದಲೂ ಕಟ್ಟಲ್ಪಟ್ಟು ಒಳಗೆ ಮಾಂಸದಿಂದಲೂ ಅಸ್ತಿಗಳಿಂದಲೂ ಪುರೀಷದಿಂದಲೂ ಕ್ರಿಮಿಗಳಿಂದಲೂ ವಾತಪಿತ್ಥಶ್ಲೇಷ್ಮಗಳಿಂದಲೂ ಪೂರಿತವಾಗಿ ಜೀವಯುಕ್ತವಾದ ಶವವನ್ನು ಪತಿಯೆಂಬ ಭ್ರಾಂತಿಯಿಂದ ಪಡೆಯುವಳು! ಎಲೈ ಪದ್ಮಲೋಚನನೆ, ನಿನ್ನ ಪಾದಪದ್ಮದಲ್ಲೇ ನನಗೆ ಅನುರಾಗವಿರಲಿ; ಆತ್ಮಾರಾಮನಾಗಿ ನನ್ನಲ್ಲಿ ಇವಳು ಅನ್ಯಳಾದ ಸ್ತ್ರೀಯೆಂಬ ಭೇದಬುದ್ಧಿರಹಿತನಾದ ನಿನಗೆ ಅತಿರಿಕ್ತವಾದ ವಸ್ತುವಿಲ್ಲದಿದ್ದಾಗ್ಯು ಲೋಕರಕ್ಷಣಾರ್ಥವಾಗಿ ಗೃಹೀತವಾದ ದೇಹವುಳ್ಳ ನೀನು ರಜೋಗುಣಪ್ರಧಾನವಾಗಿ ಸಾನುರಾಗದಿಂದ ಯುಕ್ತವಾದ ದೃಷ್ಟಿಯಿಂದ ನನ್ನನ್ನು ನೋಡುತ್ತಿರುವದೇ ನನಗೆ ಪರಮಾನುಗ್ರಹವು! ಎಲೈ ಮಧುಸೂದನನಾದ ಶ್ರೀಕೃಷ್ಣಸ್ವಾಮಿಯೆ, ನಿನ್ನಿಂದ ಹೇಳಲ್ಪಡುವ ಅರ್ಥವು ಅನೃತವಲ್ಲ; ಲೋಕದಲ್ಲಿ ಕನ್ಯಾಜನರಿಗೆ ಒಬ್ಬನಲ್ಲಿ ಪ್ರೇಮೆಯುಂಟಾಗುವದು ಸತ್ಯವು; ಕಾಶೀರಾಯನ ಪುತ್ರಿಯರಾದ ಅಂಬಾ ಅಂಬಾಲಿಕಾ ಅಂಬಿಕಾದೇವಿಯರೆಂಬ ಮೂರು ಪುತ್ರಿಯರೊಳಗೆ ಅಂಬಾ ಎಂಬವಳಿಗೆ ಸಾಲ್ವರಾಯನಲ್ಲಿ ಅಪೇಕ್ಷೆಯಿತ್ತು; ವಿವಾಹಿಕಳಾದಾಗ್ಯು ಕನ್ಯಕೆಯು ವ್ಯಭಿಚಾರಣಿಯಾದರೆ ಅವಳಿಗೆ ನೂತನ ಪುರುಷರಲ್ಲಿ ಅಪೇಕ್ಷೆಯಿರುವದು; ಅಂಥಾ ವ್ಯಭಿಚಾರಣಿಯನ್ನು ಬುದ್ಧಿವಂತನಾದ ಪತಿಯು ಪೋಷಿಸಬಾರದು; ಪೋಷಿಸಿದರೆ ಇಹಲೋಕ ಪರಲೋಕಗಳಿಂದ ಚ್ಯುತನಾಗುವನು!” ಎಂದು ನುಡಿದಳು.

ಆ ವಾಕ್ಯವನ್ನು ಕೇಳಿ ಭಗವಂತನು “ಎಲೈ ಪತಿವ್ರತೆಯಾದ ರುಕ್ಮಿಣಿಯೆ, ಈ ಅರ್ಥವನ್ನು ನೀನು ಹೇಳುವೆ ಎಂಬ ಇಚ್ಛೆಯಿಂದ ನಾನು ನಿನ್ನನ್ನು ಪರಿಹಾಸಂಗೈದೆನು; ನನ್ನಿಂದ ಹೇಳಲ್ಪಟ್ಟ ಅರ್ಥಗಳನ್ನು ನೀನು ಅನುವಾದಮಾಡಿದ್ದು ಸತ್ಯವೇ ಸರಿ! ಎಲೇ ರುಕ್ಮಿಣಿಯೆ, ಮೋಕ್ಷಪ್ರಾಪ್ತಿಗೋಸ್ಕರ ನನ್ನಲ್ಲಿ ಯಾವ ಇಷ್ಟಾರ್ಥಗಳನ್ನಪೇಕ್ಷಿಸುತ್ತೀಯೊ ಆ ಇಷ್ಟಾರ್ಥಗಳು ನನ್ನಲ್ಲಿ ಏಕಾಂತಭಕ್ತಳಾದ ನಿನಗೆ ಸಿದ್ಧವಾಗಿವೆ! ಎಲೇ ಪತಿವ್ರತೆಯೆ, ನಿನಗೆ ಪತಿಯಾದ ನನ್ನಲ್ಲಿರುವ ಪ್ರೇಮಾತಿಶಯವನ್ನು ತಿಳಿದೆನು; ನಿನ್ನ ಪಾತಿವ್ರತ್ಯವನ್ನೂ ತಿಳಿದೆನು; ನಾನು ನಾನಾಪ್ರಕಾರವಾಗಿ ಚಾತುರ್ಯಯುಕ್ತವಾದ ವಾಕ್ಯಗಳಿಂದ ಹೇಳಿದಾಗ್ಯು ನಿನ್ನ ಬುದ್ಧಿಯು ನನ್ನಲ್ಲಿ ಉಪೇಕ್ಷೆಯನ್ನು ಮಾಡಿ ಅನ್ಯಪುರುಷನ ವಿಷಯವಾಗಿ ಚಲಿಸಲಿಲ್ಲ; ಸ್ತ್ರೀಪುರುಷರ ಸಂಭೋಗಸುಖಾರ್ಥವಾಗಿ ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಕಾಮಬುದ್ಧಿಯಿಂದಲೂ ನನ್ನನ್ನು ಭಜಿಸುವವರು ನನ್ನ ಮಾಯೆಯಿಂದ ಮೋಹಿತರಾದವರು! ಎಲೇ ರುಕ್ಮಿಣಿಯೆ, ಮೋಕ್ಷಕ್ಕೂ ಸಮಸ್ತ ಸಂಪತ್ತುಗಳಿಗೂ ನಾಥನಾದ ನನ್ನನ್ನು ಭಜಿಸಿದಾಗ್ಯೂ ನನ್ನನ್ನು ಬಿಟ್ಟು ಸಂಪತ್ತುಗಳ ಮಾತ್ರವನ್ನು ಅಪೇಕ್ಷಿಸುವ ಜನರು ಪುಣ್ಯಹೀನರಾಗಿ ವಿಷಯಸುಖಾಪೇಕ್ಷಿಗಳಾಗಿ ವಿಷಯರೂಪಗಳಾದ ನರಕಗಳನ್ನೇ ಅನುಭವಿಸುವರು! ಎಲೇ ಗೃಹನಾಥಳಾದ ರುಕ್ಮಿಣಿಯೆ, ದುರ್ಜನರಿಗೆ ದುರ್ಲಭವಾಗಿ ಫಲಾಭಿಸಂಧಿರಹಿತವಾದ ನಿಷ್ಕಾಮಾನುವೃತ್ತಿಯು ನನ್ನಲ್ಲಿ ನಿನ್ನಿಂದ ಅನೇಕಾವರ್ತಿಮಾಡಲ್ಪಟ್ಟಿತು; ಆ ಅನುವೃತ್ತಿಯು ದುಷ್ಟಾಭಿಪ್ರಾಯವುಳ್ಳವಳಾಗಿ ಪ್ರಾಣತೃಪ್ತಿಯಲ್ಲೇ ಅಪೇಕ್ಷೆಯುಳ್ಳವಳಾಗಿ ವಂಚಕಳಾದ ದುಷ್ಟಸ್ತ್ರೀಗೆ

ಅತಿ ದುರ್ಲಭವಾದದ್ದು! ಎಲೇ ಮಾನಶಾಲಿಯಾದ ರುಕ್ಮಿಣಿಯೆ, ನಿನ್ನ ಸಮಾನಗಳಾಗಿ ಪ್ರೇಮಯುಕ್ತಗಳಾಗಿ ಗೃಹಗಳಲ್ಲಿ ಶುಭಕರ್ಮಸಾಧಕಗಳಾದ ಸ್ತ್ರೀಯುನ್ನು ನಾನು ಎಲ್ಲಿಯೂ ಕಾಣುವದಿಲ್ಲ; ನೀನು ವಿವಾಹಕಾಲದಲ್ಲಿ ಬಂದ ಜರಾಸಂಧಾದಿಗಳನ್ನು ಗಣನೆಮಾಡದೆ ಪರೋಕ್ಷದಲ್ಲಿ ನನ್ನ ಸತ್ಕಥೆಗಳನ್ನು ಕೇಳಿದಮಾತ್ರದಲ್ಲೇ ನನ್ನಲ್ಲಿ ಚಿತ್ತವನ್ನಿರಿಸಿ ಬ್ರಾಹ್ಮಣನನ್ನು ನನ್ನ ಸಮೀಪಕ್ಕೆ ಕಳುಹಿಸಿದೆ; ಅನಂತರದಲ್ಲಿ ಯುದ್ಧದಲ್ಲಿ ಪರಾಜಿತನಾಗಿ ಭ್ರಾತೃವಾದ ರುಕ್ಮಿರಾಯನ ವೈರೂಪ್ಯಕರಣವನ್ನೂ ಅನಿರುದ್ಧನ ವಿವಾಹೋತ್ಸವದಲ್ಲಿ ಆತನ ಸಂಹಾರವನ್ನೂ ನೋಡಿ ಅದರಿಂದುತ್ಪನ್ನವಾದ ಮಹಾ ದುಃಖವನ್ನೂ ಸಹಿಸಿದೆ; ಈಗ ನಾನು ನಿನ್ನನ್ನು ಪರಿತ್ಯಾಗಮಾಡುವೆನೆಂಬ ಭಯದಿಂದ ಏನೂ ಮಾತಾಡದೆ ಸುಮ್ಮನಿದ್ದೆ; ಆದ್ದರಿಂದ ನಿನ್ನ ನಡತೆಯಿಂದಲೇ ನಾವು ನಿನಗೆ ಸ್ವಾಧೀನರು; ಇಷ್ಟು ಮಾತ್ರವೇ ಅಲ್ಲ; ನೀನು ನನ್ನನ್ನು ಪತಿಯಾಗೈದಲೋಸುಗ ಆಲೋಚನೆ ಮಾಡಿ ನಾನು ಬೇಗಬರದೆ ವಿಳಂಬವನ್ನು ಮಾಡಲು ನನ್ನ ಸಮೀಪಕ್ಕೆ ದೂತನನ್ನು ಕಳುಹಿಸಿದೆ! 'ಎಲೈ ಪದ್ಮಾಕ್ಷನೆ, ನಿನ್ನ ಅನುಗ್ರಹವನ್ನು ಪಡೆಯದಪಕ್ಷದಲ್ಲಿ ಅನ್ಯರಿಗೆ ಯೋಗ್ಯವಲ್ಲದ ನನ್ನ ದೇಹವನ್ನು ತ್ಯಾಗಮಾಡುತ್ತೇನೆ' ಎಂದು ದೂತಮುಖದಿಂದ ನನ್ನನ್ನು ಕುರಿತು ಹೇಳಿಕಳುಹಿಸಿದೆ; ಅಪ್ರಕಾರವಾದ ನಿನ್ನ ಉಪಕಾರಕ್ಕೆ ಪ್ರತ್ಯುಪಕಾರವನ್ನು ನಾನು ಏನು ಮಾಡೇನು! ನಾನು ಮಾತುಗಳಿಂದಲೆ ನಿನ್ನನ್ನು ಸಂತೋಷಪಡಿಸಲಾಪೆನು" ಎಂದು ನುಡಿದನು.

ಭಗವಂತನಾದ ಶ್ರೀಕೃಷ್ಣನು ಈ ರೀತಿಯಲ್ಲಿ ಇಷ್ಟಾಲಾಪಗಳಿಂದ ಆತ್ಮಾರಾಮನಾದಾಗ್ಯೂ ರುಕ್ಮಿಣಿಯೊಡನೆ ಗೃಹಸ್ಥನಂತೆ ರಮಿಸುತಿದ್ದನು; ಅದೇರೀತಿಯಲ್ಲಿ ಮಿಕ್ಕ ಪತ್ನಿಯರ ಮನೆಗಳಲ್ಲಿಯೂ ಗೃಹಸ್ಥಾಶ್ರಮವುಳ್ಳವನಾದ ಪುರುಷನಂತೆ ಲೋಕಗುರುವಾಗಿ ಗೃಹಸ್ಥಾಶ್ರಮಧರ್ಮಗಳನ್ನಾಚರಿಸುತ ಸಂತೋಷಪಡಿಸುತಿದ್ದನು!

---

## ೬೧ ನೇ ಅಧ್ಯಾಯ.

## ರುಕ್ಮಿರಾಯನ ವಧೆ.

ಎಲೈ ಪರೀಕ್ಷಿದ್ರಾಯನೆ, ಆ ಬಳಿಕ ಶ್ರೀಕೃಷ್ಣನ ಪತ್ನಿಯರು ಒಬ್ಬೊಬ್ಬರೂ ಸಮಸ್ತವಾದ ಗುಣಸಮೃದ್ಧಿಯಿಂದ ತಂದೆಯಾದ ಶ್ರೀಕೃಷ್ಣದೇವನಿಗಿಂತಲು ನ್ಯೂನತೆಯಿಲ್ಲದ ಹತ್ತುಹತ್ತುಮಂದಿ ಪುತ್ರರನ್ನು ಪಡೆದರು; ಶ್ರೀಕೃಷ್ಣನ ಆತ್ಮಾರಾಮತ್ವವನ್ನರಿಯದ ಆ ಸ್ತ್ರೀಯರು ತಮ್ಮ ಗೃಹದದೆಶೆಯಿಂದ ಹೊರಗೆ ಹೊರಡದಿದ್ದ ಶ್ರೀಕೃಷ್ಣನನ್ನು ಪ್ರತ್ಯೇಕಪ್ರತ್ಯೇಕವಾಗಿ ತಾವೇ ಆತನಿಗೆ ಅತಿ ಪ್ರೀತಿವಿಷಯರೆಂದೆಣಿಸುತಿದ್ದರು; ಆದರೂ ಮನೋಹರವಾದ ಪದ್ಮಕೋಶದಂತಿರುವ ಮುಖದಿಂದಲೂ ದೀರ್ಘವಾದ ಭುಜಗಳಿಂದಲೂ ನೇತ್ರಗಳಿಂದಲೂ ಪ್ರೇಮಯುಕ್ತವಾಗಿ ಹಾಸ್ಯರಸದೊಡಗೂಡಿದ ಸವಿನೋಟಗಳಿಂದಲೂ ಮಧುರವಚನಗಳಿಂದಲೂ ಮೋಹಯುಕ್ತರಾಗಿ ಮಾಡಲ್ಪಟ್ಟ ಆ ಸ್ತ್ರೀಯರು ಸ್ವಕೀಯವಾದ ಅನೇಕ ವಿಲಾಸಗಳಿಂದ ಪರಿಪೂರ್ಣನಾದ ಶ್ರೀಕೃಷ್ಣನ ಮನಸ್ಸನ್ನು ಅಪಹರಿಸಲು ಸಮರ್ಥರಾಗಲಿಲ್ಲ; ಹದಿನಾರುಸಾವಿರಮಂದಿಯಾದಾಗ್ಯೂ ಅವರು ಗೂಢಹಾಸಯುಕ್ತವಾದ ಕಟಾಕ್ಷದಿಂದ ಸೂಚಿಸಲ್ಪಟ್ಟ ಸುರತಸಂಬಂಧಿಗಳಾದ ಮಂತ್ರಗಳಲ್ಲಿ ನಿಪುಣರಾದಾಗ್ಯೂ ಕಾಮಶಾಸ್ತ್ರಪ್ರಸಿದ್ಧಗಳಾದ ಇತರ ಕೇಳೀಸಾಧನಗಳಿಂದಲೂ ಶ್ರೀಕೃಷ್ಣನ ಮನಸ್ಸನ್ನು ವಿಕಾರಯುಕ್ತವಾಗಿ ಮಾಡಲು ಸಮರ್ಥರಾಗಲಿಲ್ಲ; ಬ್ರಹ್ಮಾದಿ ದೇವತೆಗಳೂ ಅರಿಯದಂಥಾ ಲಕ್ಷ್ಮೀಪತಿಯಾದ ಶ್ರೀಕೃಷ್ಣದೇವನನ್ನು ಆ ಸ್ತ್ರೀಯರು ಪತಿಭಾವದಿಂದ ಪಡೆದು ನಿರಂತರದಲ್ಲಿಯೂ ವೃದ್ಧಿಹೊಂದಿರುವ ಪ್ರೀತಿಯಿಂದಲೂ ಅನುರಾಗದಿಂದಲೂ ಹುಟ್ಟಿದ ಮುಗುಳುನಗೆಯೂ ಸವಿನೋಟವೂ ನೂತನಸಂಗಮದಲ್ಲಿ ಅತ್ಯಂತವಾದ ಅಭಿಲಾಷೆಯೂ ಉಳ್ಳ ವಿಲಾಸಸಮೂಹವನ್ನೈದಿದರು; ಅನೇಕಸಂಖ್ಯೆಯುಳ್ಳ ದಾಸಿಯರಿದ್ದಾಗ್ಯೂ ಎದುರುಗೊಳ್ಳುವದರಿಂದ ಅನುಸರಿಸುವದರಿಂದ ರತ್ನಪೀಠಸಮರ್ಪಣದಿಂದಲೂ ಪಾದಪ್ರಕ್ಷಾಳನಗೈವದರಿಂದಲೂ ವ್ಯಜನಾದಿಗಳನ್ನಿಡಿದು ಬೀಸುವದರಿಂದಲೂ ಗಂಧಪುಷ್ಪಾರ್ಚನೆಗಳಿಂದಲೂ ಕೇಶಾ

ಲಂಕಾರವನ್ನು ಮಾಡುವದರಿಂದಲೂ ಉತ್ತಮಶಯನಸಮರ್ಪಣದಿಂದಲೂ ಅಭ್ಯಂಜನಮಾಡುವದರಿಂದಲೂ ಶ್ರೀಕೃಷ್ಣದೇವನಿಗೆ ತಾವೇ ಉಪಚಾರಗೈದರು; ಹತ್ತತ್ತುಮಂದಿ ಪುತ್ರರುಳ್ಳ ಶ್ರೀಕೃಷ್ಣದೇವನ ಸ್ತ್ರೀಯರಲ್ಲಿ ಪೂರ್ವದಲ್ಲಿ ನನ್ನಿಂದ ಹೇಳಲ್ಪಟ್ಟ ರುಕ್ಮಿಣಿ ಮೊದಲಾದ ಅಷ್ಟಮಹಿಷಿಯರಲ್ಲಿ ಶ್ರೀಕೃಷ್ಣನದೆಶೆಯಿಂದ ಜನಿಸಿದ ಪ್ರದ್ಯುಮ್ನನು ಮೊದಲಾದ ಪುತ್ರರನ್ನು ಹೇಳುತ್ತೇನೆ ಕೇಳು: ಚಾರುದೇಷ್ಣನು ಸುದೇಷ್ಣನು ಸಮರ್ಥನಾದ ಚಾರುದೇಹನು ಸುಚಾರುವು ಚಾರುಗುಪ್ತನು ಭದ್ರಚಾರುವು ಚಾರುಚಂದ್ರನು ವಿಚಾರುವು ಚಾರುಮಂತನು ಪ್ರದ್ಯುಮ್ನನು ಎಂಬ ಹತ್ತುಮಂದಿ ಪುತ್ರರು ಶ್ರೀಕೃಷ್ಣದೇವನಿಗೆ ಸಮಾನರಾಗಿ ರುಕ್ಮಿಣೀದೇವಿಯಲ್ಲಿ ಜನಿಸಿದರು; ಭಾನುವು ಸ್ವಭಾನುವು ಸ್ವರ್ಭಾನುವು ಪ್ರಭಾನುವು ಭಾನುಮಂತನು ಚಂದ್ರಭಾನುವು ಬೃಹದ್ಭಾನುವು ಅತಿಭಾನುವು ಶ್ರೀಭಾನುವು ಪ್ರತಿಭಾನುವು ಎಂಬ ಹತ್ತುಮಂದಿಯೂ ಸತ್ಯಭಾಮೆಯ ಪುತ್ರರು; ಸಾಂಬನು ಸುಮಿತ್ರನು ಪುರುಜಿತ್ತು ಶತಜಿತ್ತು ಸಹಸ್ರಜಿತ್ತು ವಿಜಯನು ಚಿತ್ರಕೇತುವು ವಸುಮಂತನು ದ್ರವಿಡನು ಕ್ರತುವು ಸಾಂಬನು ಎಂಬ ಹತ್ತುಮಂದಿಯೂ ಜಾಂಬವತಿಯ ಪುತ್ರರು; ವೀರನು ಚಂದ್ರನು ಅಶ್ವಸೇನನು ಚಿತ್ರಗುಕ್ಕು ವೇಗವಂತನು ವೃಷನು ಆಮನು ಶಂಕುವು ವಸುವು ಶ್ರೀಮಂತನಾದ ಕುಂತಿಯೂ ಎಂಬ ಹತ್ತುಮಂದಿಯೂ ಸತ್ಯಾದೇವಿಯ ಪುತ್ರರು; ಶ್ರುತನು ಕವಿಯೂ ವೃಷನು ವೀರನು ಸುಬಾಹುವು ಭದ್ರನು ಶಾಂತಿಯೂ ದರ್ಶನು ಪೂರ್ಣಮಾಸನು ಸೋಮಕನು ಎಂಬ ಹತ್ತುಮಂದಿಯೂ ಕಾಳಿಂದಿಯ ಪುತ್ರರು; ಪ್ರಘೋಷನು ಗೋತ್ರವಂತನು ಸಿಂಹನು ಬಲನು ಪ್ರಬಲನು ಊರ್ಧ್ವಗನು ಮಹಾಶಕ್ತಿಯೂ ಸಹಸ್ಸು ಓಜಸ್ಸು ಅಪರಾಜಿತ್ತನು ಎಂಬ ಹತ್ತುಮಂದಿಯೂ ಲಕ್ಷಣಾದೇವಿಯ ಪುತ್ರರು; ವೃಕನು ಅರ್ಕನು ಅನಿಲನು ಗೃಧ್ರನು ವರ್ಧಮಾನನು ಅನ್ನಾದನು ಮಹಾಶನು ಪವನನು ವಹ್ನಿಯೂ ಕ್ಷುಧಿಯೂ ಎಂಬ ಹತ್ತುಮಂದಿಯೂ ಮಿತ್ರವಿಂದೆಯ ಪುತ್ರರು; ಸಂಗ್ರಾಮಜಿತ್ತು ಬೃಹತ್ಸೇನನು ಶೂರನಾದ ಪ್ರಹರಣನು ಅರಿಜಿತ್ತು ಜಯನು ಸುಭದ್ರನು ವಾಮನನು ಆಯುಸ್ಸು ಸತ್ಯಕನು ದೀಪ್ತಿಮಂತನು ಎಂಬ ಹತ್ತುಮಂದಿಯೂ ಭದ್ರಾದೇವಿಯ ಮಕ್ಕಳು; ಮತ್ತು ಶ್ರೀಕೃಷ್ಣನಿಗೆ ರೋಹಿಣೀದೇವಿಯಲ್ಲಿ ತಾಮ್ರತಪ್ತನು ಮೊದಲಾದ ಪುತ್ರರು ಜನಿಸಿದರು; ಪ್ರದ್ಯುಮ್ನನದೆಶೆಯಿಂದ ರುಕ್ಮಿರಾಯನ ಪುತ್ರಿಯಾದ ರುಕ್ಮವತಿಯಲ್ಲಿ ಭೋಜಕಟಕವೆಂಬ ಪಟ್ಟಣದಲ್ಲಿ ಮಹಾ ಬಲಶಾಲಿಯಾದ ಅನಿರುದ್ಧನೆಂಬ ಪುತ್ರನು ಜನಿಸಿದನು! ಎಲೈ ಅರಸೇ ಕೇಳು, ಆ ಬಳಿಕ ಕೃಷ್ಣನ ಪುತ್ರರಿಗೆ ಅನೇಕಕೋಟಿ ಪುತ್ರಪೌತ್ರರು ಜನಿಸಿದರು; ಶ್ರೀಕೃಷ್ಣನ ಪುತ್ರರಿಗೆ ಹದಿನಾರುಸಾವಿರಮಂದಿ ತಾಯಿಗಳು!

[ಈ ಪ್ರಕಾರದಲ್ಲಿ ನುಡಿದ ಶುಕಾಚಾರ್ಯನ ವಚನವನ್ನು ಕೇಳಿ ಪರೀಕ್ಷಿದ್ರಾಯನು—ಎಲೈ ಶುಕಮುನಿಯೆ, ಯುದ್ಧದಲ್ಲಿ ಶ್ರೀಕೃಷ್ಣನಿಂದ ಅತ್ಯಂತ ತಿರಸ್ಕರಿಸಲ್ಪಟ್ಟ ಆತನನ್ನು ಸಂಹರಿಸಲೋಸುಗ ರಂಧ್ರವನ್ನು ಹುಡುಕುತಿದ್ದ ರುಕ್ಮಿರಾಯನು ಶತ್ರುಪುತ್ರನಾದ ಪ್ರದ್ಯುಮ್ನನಿಗೆ ಹ್ಯಾಗೆ ತನ್ನ ಪುತ್ರಿಯನ್ನಿತ್ತನು? ಎಲೈ ಸರ್ವಜ್ಞನೆ, ಅನ್ಯೋನ್ಯಶತ್ರುಗಳಾದ ಕೃಷ್ಣ ರುಕ್ಮಿಗಳಿಗೆ ಪರಸ್ಪರ ವಿವಾಹಸಂಬಂಧವುಂಟಾಗುವದಕ್ಕೆ ನಿಮಿತ್ತವೇನು? ಜ್ಞಾನಿಗಳು ಭೂತಭಾವಿಷ್ಯದ್ವರ್ತಮಾನಾರ್ಥಗಳನ್ನೂ ನಮ್ಮಂಥಾವರ ಇಂದ್ರಿಯಗಳಿಗೆ ಗೋಚರವಾಗದ ಅರ್ಥವನ್ನೂ ದೂರದೇಶದಲ್ಲಿರುವ ಅರ್ಥವನ್ನೂ ಕುಡ್ಯ ಮೊದಲಾದವಿಂದ ಮರೆಮಾಡಲ್ಪಟ್ಟಿರುವ ಅರ್ಥವನ್ನೂ ಜ್ಞಾನದೃಷ್ಟಿಯಿಂದ ಚನ್ನಾಗಿ ಕಾಣುವರು—ಅಂದನು.]

ಆ ವಚನವನ್ನು ಕೇಳಿ ಶುಕಮುನಿಯು—ಎಲೈ ಅರಸೆ, ಸ್ವಯಂವರಕಾಲದಲ್ಲಿ ಪ್ರದ್ಯುಮ್ನನು ರುಕ್ಮವತೀದೇವಿಯಿಂದ ವರಿಸಲ್ಪಟ್ಟು ಆ ಕಾಲದಲ್ಲಿ ಗುಂಪುಕೂಡಿದ ಅರಸರನ್ನು ಜಯಿಸಿ ಬಂದೇರಥವುಳ್ಳವನಾಗಿ ರುಕ್ಮವತಿಯನ್ನಪಹರಿಸಿದನು; ರುಕ್ಮಿರಾಯನು ಶ್ರೀಕೃಷ್ಣನಿಂದ ಅತ್ಯಂತ ಅವಮಾನಗೈಯಲ್ಪಟ್ಟವನಾದ್ದರಿಂದ ಆ ವೈರವನ್ನು ಸ್ಮರಿಸುತಿದ್ದಾಗ್ಯೂ ತಂಗಿಯಾದ ರುಕ್ಮಿಣೀದೇವಿಗೆ ಪ್ರಿಯವನ್ನುಂಟುಮಾಡುವದಕ್ಕಾಗಿ ಸೋದರಳಿಯನಾದ ಪ್ರದ್ಯುಮ್ನನಿಗೆ ತನ್ನ ಪುತ್ರಿಯಾದ ರುಕ್ಮವತಿಯನ್ನು ಕೊಡಲು ಸಮ್ಮತಿಸಿದನು! ಸಮಸ್ತರಾದ ಶ್ರೀಕೃಷ್ಣಪತ್ನಿಯರಲ್ಲಿಯು ಒಬ್ಬೊಬ್ಬಳಿಗೆ ಒಬ್ಬೊಬ್ಬ ಪುತ್ರಿಯು ಜನಿಸಿದಳು; ಕೃತವರ್ಮನ ಪುತ್ರನಾಗಿ ಬಲಶಾಲಿಯಾದ

ಒಬ್ಬ ಅರಸನು ರುಕ್ಮಿಣೀದೇವಿಯ ಪ್ರತ್ರಿಯಾಗಿ ವಿಶಾಲನೇತ್ರಯುಕ್ತಳಾದ ಚಾರುಮತಿಯೆಂಬ ಕನ್ಯಕೆಯನ್ನು ವಿವಾಹಮಾಡಿಕೊಂಡನು! ರುಕ್ಮಿರಾಯನು ಶ್ರೀಕೃಷ್ಣನಲ್ಲಿ ವೈರವುಳ್ಳವನಾದಾಗ್ಯೂ ಶತ್ರುಗಳಲ್ಲಿ ತನಗುಂಟಾದ ವಿವಾಹಸಮ್ಬಂಧವನ್ನು ಲೋಕವಿರೋಧದಿಂದಲೂ ಶಾಸ್ತ್ರವಿರೋಧದಿಂದಲೂ ಅಧರ್ಮವೆಂದೆಣಿಸದವನಾದಾಗ್ಯೂ ಸ್ನೇಹಪಾಶದಿಂದ ಬದ್ಧನಾಗಿ ತಂಗಿಯಾದ ರುಕ್ಮಿಣೀದೇವಿಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ದೌಹಿತ್ರನಾದ ಅನಿರುದ್ಧನಿಗೆ ತನ್ನ ಮೊಮ್ಮಗಳಾದ ಲೋಚನಾದೇವಿಯನ್ನು ಕೊಟ್ಟನು! ಎಲೈ ಅರಸೆ, ಅನಿರುದ್ಧನ ವಿವಾಹೋತ್ಸವದಲ್ಲಿ ರಾಮಕೃಷ್ಣರು ರುಕ್ಮಿಣೀದೇವಿಯು ಸಾಂಬ ಪ್ರದ್ಯುಮ್ನರು ಮೊದಲಾದ ಪುತ್ರರ ಸಹಿತವಾಗಿ ಭೋಜಕಟಕವೆಂಬ ಪಟ್ಟಣವನ್ನೈದಿದರು; ಆ ಪಟ್ಟಣದಲ್ಲಿ ಅನಿರುದ್ಧನ ವಿವಾಹೋತ್ಸವವು ನಡೆಯುತ್ತಿರಲು ಗರ್ವಿತರಾಗಿ ಕಳಿಂಗನನ್ನು ಪ್ರಮುಖನಾಗುಳ್ಳ ಕೆಲವು ಅರಸರು ರುಕ್ಮಿರಾಯನನ್ನು ಕುರಿತು "ಎಲೈ ಅರಸೆ, ಬಲರಾಮನು ಪಗಡೇ ಆಟವನ್ನು ತಿಳಿಯದವನಾದಾಗ್ಯೂ ಅವನಿಗೆ ಆ ಆಟದಲ್ಲಿ ಅತ್ಯಂತ ಅಪೇಕ್ಷೆಯಿಧೆಯಾದಕಾರಣ ಆತನನ್ನು ಆ ಆಟದಿಂದ ಜಯಿಸು" ಎಂದು ನುಡಿದರು; ರುಕ್ಮಿರಾಯನು ಬಲರಾಮನನ್ನು ಕರೆಯಿಸಿ ಅವನೊಡನೆ ಪಗಡೆಯನ್ನಾಡಿದನು; ಬಲರಾಮನು ಆ ಆಟದಲ್ಲಿ ನೂರುಸಾವಿರ ಹತ್ತುಸಾವಿರವಾಗಿ ದ್ರವ್ಯವನ್ನು ಪಂತವಾಗಿ ಅಂಗೀಕರಿಸಲು ರುಕ್ಮಿರಾಯನು ಅವೆಲ್ಲವನ್ನು ಗೆದ್ದನು; ಆಗ ಕಳಿಂಗನು ಬಹುಪ್ರಕಾರ ಬಲರಾಮನನ್ನು ನೋಡಿ ಬಹಳವಾಗಿ ನಕ್ಕನು; ಬಲರಾಮನು ಅವನ ಪರಿಹಾಸವನ್ನು ಸಹಿಸದಿರಲು ರುಕ್ಮಿಯು ಲಕ್ಷವರಾಹಗಳನ್ನು ಪಣದ್ರವ್ಯವನ್ನಾಗಿ ಕಲ್ಪಿಸಿದನು; ಆಗ ಬಲರಾಮನು ರುಕ್ಮಿಯನ್ನು ಜಯಿಸಿದನು; ರುಕ್ಮಿಯು ಕಪಟಕೃತ್ಯವನ್ನಾಶ್ರಯಿಸಿ ತಾನೇ ಜಯಿಸಿದನೆಂದು ಹೇಳಿದನು; ಆಗ ಪರ್ವಕಾಲದಲ್ಲಿ ಜಲದಿಂದುಕ್ಕುವ ಸಮುದ್ರದಂತೆ ಕೋಪಾಟೋಪದಿಂದ ವ್ಯಾಕುಲನಾಗಿ ಮಾಡಲ್ಪಟ್ಟ ಮತ್ಸ್ಯನೇತ್ರಗಳಂತೆ ರಕ್ತವರ್ಣಯುಕ್ತವಾದ ನೇತ್ರಗಳುಳ್ಳ ಬಲರಾಮನು ಹತ್ತುಕೋಟಿ ದ್ರವ್ಯವನ್ನು ಪಂತವಾಗಿ ಕಲ್ಪಿಸಿ ತಿರಿಗೂ ಧರ್ಮಮಾರ್ಗದಿಂದ ಆ ಹತ್ತುಕೋಟಿ ದ್ರವ್ಯವನ್ನು ಗೆದ್ದನು; ರುಕ್ಮಿಯು ಪುನಹ ಕಪಟಕೃತ್ಯವನ್ನಾಶ್ರಯಿಸಿ "ಈ ಪಂತವು ನನ್ನಿಂದಲೇ ಜಯಿಸಲ್ಪಟ್ಟಿತು; ಈ ಅರ್ಥವು ಸತ್ಯವೊ ಅಸತ್ಯವೊ ಇಲ್ಲಿರುವ ಮಧ್ಯಸ್ಥರು ಹೇಳಲೀ" ಎಂದು ನುಡಿದನು!

ಆಗ ಆಕಾಶವಾಣಿಯು "ಬಲರಾಮನಿಂದ ಧರ್ಮವಾಗಿ ಈ ಪಣದ್ರವ್ಯವು ಜಯಿಸಲ್ಪಟ್ಟಿತು; ರುಕ್ಮಿಯು ವಚನಮಾತ್ರದಿಂದಲೇ ತಾನು ಜಯಿಸಿದನೆಂದು ಅನೃತವನ್ನು ನುಡಿಯುತ್ತಾನೆ" ಎಂದು ಹೇಳಿದಳು!

ರುಕ್ಮಿರಾಯನು ಆಕಾಶವಾಣಿಯನ್ನು ತಿರಸ್ಕರಿಸಿ ದುಷ್ಟರಾದ ಅರಸುಗಳಿಂದಲೂ ಮೃತ್ಯುವಿನಿಂದಲು ಪ್ರೇರಿಸಲ್ಪಟ್ಟವನಾಗಿ ಬಲರಾಮನನ್ನು ಕುರಿತು "ಎಲೈ ಬಲರಾಮನೆ, ಗೋಪಾಲಕರಾಗಿ ವನಭೂಮಿಯಲ್ಲಿ ಸಂಚರಿಸುವ ನೀವು ಪಗಡೇ ಆಟದಲ್ಲಿ ನಿಪುಣರಲ್ಲ; ಆ ಆಟದಿಂದಲೂ ಬಾಣಗಳಿಂದಲೂ ಅರಸರು ಕ್ರೀಡಿಸುವರೇಹೊರ್ತು ನಿಮ್ಮಂಥಾವರು ಅವುಗಳಿಂದ ಕ್ರೀಡಿಸಲು ಯೋಗ್ಯರಲ್ಲ" ಎಂದು ತಿರಸ್ಕರಿಸಿ ನುಡಿದನು.

ಬಲರಾಮನು ಅತಿ ಕ್ರೋಧಯುಕ್ತನಾಗಿ ಪರಿಘಾಯುಧವನ್ನಿಡಿದು ಆ ವಿವಾಹಸಭೆಯಲ್ಲಿ ರುಕ್ಮಿಯನ್ನು ಸಂಹರಿಸಿ ದಂತಗಳನ್ನು ತೆರೆಕೊಂಡು ತನ್ನನ್ನು ನೋಡಿ ಹಾಸ್ಯಂಗೈದ ಕಳಿಂಗನೆಂಬ ಅರಸನನ್ನು ಹತ್ತುಹೆಜ್ಜೆಗಳು ವೇಗದಿಂದ ನಡೆದು ಹಿಡಿದುಕೊಂಡು ಕೋಪಯುಕ್ತನಾಗಿ ಅವನ ದಂತಗಳನ್ನು ಕಿತ್ತನು; ಮಿಕ್ಕ ಅರಸರು ಬಲರಾಮನ ಪರಿಘಾಯುಧದಿಂದ ಪ್ರಹರಿಸಲ್ಪಟ್ಟವರಾಗಿ ಭಿನ್ನವಾದ ಭುಜಗಳೂ ತೊಡೆಗಳೂ ಶಿರಸ್ಸುಗಳೂ ಉಳ್ಳವರಾಗಿಯೂ ರಕ್ತದಿಂದ ನೆನೆಯಿಸಲ್ಪಟ್ಟ ಶರೀರವುಳ್ಳವರಾಗಿಯೂ ಅತಿ ಭೀತರಾಗಿ ಓಡಿದರು! ಶ್ರೀಕೃಷ್ಣನು ತನಗೆ ಸ್ವಶ್ಯಾಲಕನಾದ ರುಕ್ಮಿಯು ಸಂಹೃತನಾಗುತಿರಲು ರುಕ್ಮಿಣೀ ರಾಮರ ಸ್ನೇಹಕ್ಕೆ ಭಂಗವುಂಟಾಗುವದೆಂಬ ಭಯದಿಂದ ಯಾವ ಮಾತನ್ನೂ ನುಡಿಯದೆ ಸುಮ್ಮನಿದ್ದನು! ಅನಂತರದಲ್ಲಿ ಶ್ರೀಕೃಷ್ಣನನ್ನು ಆಶ್ರಯವಾಗುಳ್ಳ ಯಾದವರು ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ವರನಾದ ಅನಿರುದ್ಧನನ್ನು ಮದವಣಗಿತ್ತಿಯಾದ ಲೋಚನಾದೇವಿಯೊಡನೆ ರಥವನ್ನೇರಿಸಿಕೊಂಡು ಭೋಜಕಟಕವೆಂಬ ಪಟ್ಟಣದೆಡೆಯಿಂದ ದ್ವಾರಕಾಪುರವನ್ನೈದಿದರು!

## ೬೨ನೇ ಅಧ್ಯಾಯ.

### ಅನಿರುದ್ಧನು ಬಾಣಾಸುರನಿಂದ ಬಂಧಿಸಲ್ಪಟ್ಟದ್ದು.

[ಪರೀಕ್ಷಿದ್ರಾಯನು ಶುಕಮುನಿಯನ್ನು ಕುರಿತು—ಎಲೈ ಶ್ರೀಶುಕಾಚಾರ್ಯನೆ, ಅನಿರುದ್ಧನು ಬಾಣಾಸುರನ ಪುತ್ರಿಯಾದ ಉಷಾದೇವಿಯನ್ನು ವಿವಾಹಮಾಡಿಕೊಂಡಾಗ ಕೃಷ್ಣರುದ್ರರಿಗೆ ಪರಸ್ಪರ ಭಯಂಕರವಾಗಿ ಮಹತ್ತಾದ ಯುದ್ಧವುಂಟಾಯಿತೆಂದು ಕೇಳಿದ್ದೇನೆ; ಆ ಅರ್ಥವನ್ನು ಸಮಗ್ರವಾಗಿ ನಿರೂಪಿಸು—ಎಂದು ಕೇಳಿದನು.]

ಶುಕಮುನಿಯು ಆತನನ್ನು ಕುರಿತು—ಎಲೈ ಅರಸೆ ಕೇಳು: ಮಹಾತ್ಮನಾದ ಬಲಿಯ ನೂರುಮಂದಿ ಪುತ್ರರಲ್ಲಿ ಬಾಣಾಸುರನು ಜ್ಯೇಷ್ಠನು; ಸಹಸ್ರಭುಜಗಳುಳ್ಳ ಬಾಣನು ಮಹಾತಾಂಡವಸಮಯದಲ್ಲಿ ವಾದ್ಯದಿಂದ ಪರಮೇಶ್ವರನನ್ನು ಸಂತೋಷಪಡಿಸಲು ಸರ್ವಭೂತನಿಯಾಮಕನಾಗಿ ಶರಣುಹೊಂದಲು ಯೋಗ್ಯನಾಗಿ ಭಕ್ತವತ್ಸಲನಾಗಿ ಭಗವಂತನಾದ ಪರಮೇಶ್ವರನು ಬಾಣನನ್ನು ವರಪ್ರಸಾದದಿಂದ ಸಂತೋಷಪಡಿಸಿದನು; ಬಾಣನು ಪರಮೇಶ್ವರನನ್ನು ತನ್ನ ಪುರಕ್ಕೆ ಪಾಲಕನಾಗಬೇಕೆಂದು ಯಾಚಿಸಿ ಬಂದು ಸಮಯದಲ್ಲಿ ಅತಿ ಪರಾಕ್ರಮದಿಂದ ಮತ್ತನಾಗಿ ತನ್ನ ಪಾರ್ಶ್ವದಲ್ಲಿದ್ದ ಪರಮೇಶ್ವರನನ್ನು ನೋಡಿ ಸುವರ್ಣಕಿರೀಟದಿಂದ ಆತನ ಪಾದಪದ್ಮವನ್ನು ಸ್ಪರ್ಶಿಸುತ ಆತನನ್ನು ಕುರಿತು "ಎಲೈ ಮಹಾದೇವನೆ, ಲೋಕಗಳಿಗೆ ಗುರುವಾಗಿ ಈಶ್ವರನಾಗಿ ಪೂರ್ಣಮನೋರಥರಲ್ಲದ ಪುರುಷರ ಮನೋರಥಗಳನ್ನೂ ಪೂರೈಸುವದರಲ್ಲಿ ಕಲ್ಪವೃಕ್ಷರೂಪನಾಗಿರುವ ನಿನ್ನನ್ನು ನಾನು ನಮಸ್ಕರಿಸುತ್ತೇನೆ; ಮೂರುಲೋಕಗಳಲ್ಲಿಯೂ ನೀನೊಬ್ಬನು ಹೊರ್ತು ನನಗೆ ಸಮಾನನಾಗಿ ನನ್ನ ಎದುರಾಗಿ ನಿಂತು ಯುದ್ಧಂಗೈವ ಮತ್ತೊಬ್ಬ ಪುರುಷನನ್ನು ಕಾಣೆನಾದಕಾರಣ ನಿನ್ನಿಂದ ನನಗೆ ಕೊಡಲ್ಪಟ್ಟ ಭುಜಸಹಸ್ರವು ಭಾರಮಾತ್ರವೇ ಫಲವಾಗುಳ್ಳದ್ದಾಯಿತು; ಕೊಬ್ಬಿನಿಂದುಂಟಾದ ನವೆಯಿಂದ ಪರಿಪೂರ್ಣವಾದ ಈ ಭುಜಗಳಿಂದ ನಾನು ಯುದ್ಧಂಗೈಯಲಿಚ್ಛೆಯುಳ್ಳವನಾಗಿ ಪರ್ವತಗಳನ್ನು ಚೂರ್ಣಂಗೈಯುತ ದಿಗ್ಗಜಗಳನ್ನೈದಲು ಅವು ಭಯಪಟ್ಟು ಓಡಿದವು" ಎಂದು ನುಡಿದನು.

ಆ ವಚನವನ್ನು ಕೇಳಿ ಈಶ್ವರನು ಕೋಪಯುಕ್ತನಾಗಿ "ಎಲೇ ಮೂಢನೆ, ಯಾವಾಗ ನಿನ್ನ ರಥಧ್ವಜವು ಭಗ್ನವಾಗುವದೊ ಆಗ ನಿನಗೆ ಸಮಾನವಾದ ಪುರುಷನೊಡನೆ ನಿನ್ನ ಮದವನ್ನು ಪರಿಹರಿಸುವ ಯುದ್ಧವುಂಟಾಗುವದು" ಎಂದು ಹೇಳಿದನು.

ದುರ್ಬುದ್ಧಿಯುಳ್ಳ ಬಾಣಾಸುರನು ಈರೀತಿ ಶಿವನಿಂದ ನಿರೂಪಿಸಲ್ಪಟ್ಟು ಸಂತೋಷಪಡುತ ತನ್ನ ಗೃಹವನ್ನು ಸೇರಿ ನಿರಂತರದಲ್ಲೂ ತನ್ನ ಮದಕ್ಕೆ ನಾಶಕರವಾದ ರಥಧ್ವಜಭಂಗವನ್ನು ನಿರೀಕ್ಷಿಸುತಿದ್ದನು! ಹೀಗಿರುವಲ್ಲಿ ಕನ್ಯೆಯಾಗಿ ಉಷಾದೇವಿಯೆಂಬ ನಾಮಧೇಯವುಳ್ಳ ಬಾಣಾಸುರನ ಪುತ್ರಿಯು ಮನೋಹರನಾಗಿ ಪೂರ್ವದಲ್ಲೆಲ್ಲಿಯೂ ನೇತ್ರಶ್ರೋತ್ರಗಳಿಗೆ ಗೋಚರನಲ್ಲದಿದ್ದ ಅನಿರುದ್ಧನೊಡನೆ ಸ್ವಪ್ನದಲ್ಲಿ ರತಿಯನ್ನು ಪಡೆದು ಅನಂತರದಲ್ಲಿ ಎಚ್ಚರಗೊಂಡು ತನ್ನ ಸಖಿಯರ ಮಧ್ಯದಲ್ಲಿ ಆತನನ್ನು ಕಾಣದೆ "ಎಲೈ ಕಾಂತನೆ, ಎಲ್ಲಿದ್ದೀ!" ಎಂದು ನುಡಿಯುತ ದೀನಳಾಗಿ ಅತ್ಯಂತ ಲಜ್ಜಾಯುಕ್ತಳಾಗಿ ಮೇಲಕ್ಕೆದ್ದಳು; ಆಗ ಬಾಣನ ಮಂತ್ರಿಯಾದ ಕುಂಭಾಂಡನ ಪುತ್ರಿಯಾದ ಚಿತ್ರಲೇಖೆಯೆಂಬವಳು ಕುತೂಹಲಯುಕ್ತಳಾಗಿ ಉಷೆಯನ್ನು ಕುರಿತು "ಎಲೇ ಸಖಿಯೆ, ಈರೀತಿ ನೀನು ಕಾಂತನನ್ನು ಹುಡುಕುತಿದ್ದೀ; ನಿನ್ನ ಮನೋಗತನಾದ ನಾಯಕನು ಎಂಥಾವನು! ಎಲೈ ರಾಜಪುತ್ರಿಯೆ, ಇದುವರಿಗೂ ನಿನ್ನ ಪತಿಯನ್ನು ನಾನು ಕಾಣೆನು" ಅಂದಳು.

ಉಷೆಯು "ಎಲೇ ಸಖಿಯೆ ಕೇಳು: ಸ್ವಪ್ನದಲ್ಲಿ ಶ್ಯಾಮಲವರ್ಣನಾಗಿ ಕಮಲಗಳಂತಿರುವ ನೇತ್ರಗಳುಳ್ಳವನಾಗಿ ಪೀತಾಂಬರವನ್ನುಟ್ಟವನಾಗಿ ದೀರ್ಘವಾದ ಭುಜಗಳುಳ್ಳವನಾಗಿ ಸೌಂದರ್ಯದಿಂದ ಸ್ತ್ರೀಯರ ಹೃದಯವನ್ನೈದುವಂಥಾ ಒಬ್ಬ ಪುರುಷನು ನನ್ನಿಂದ ಕಾಣಲ್ಪಟ್ಟನು; ಈಗ ನಾನು ಆತನನ್ನು ಹುಡುಕುತಲಿದ್ದೇನೆ; ಆ

ಕಾಂತನು ನನಗೆ ಅಧರಾಮೃತವನ್ನು ಪಾನಗೈಸಿ ಈಗ ತನ್ನನ್ನಪೇಕ್ಷಿಸುತಲಿರುವ ನನ್ನನ್ನು ದುಃಖಸಮುದ್ರದಲ್ಲಿ ಮುಳುಗಿಸಿ ಎಲ್ಲಿಹೋದನೊ ಕಾಣೆನು" ಅಂದಳು.

ಚಿತ್ರಲೇಖೆಯು "ಎಲೇ ಉಷೆಯೆ, ನಿನ್ನ ವ್ಯಸನವನ್ನು ನಾನು ಪರಿಹರಿಸುತ್ತೇನೆ; ಮೂರುಲೋಕಗಳಲ್ಲಿ ಯಾವಸ್ಥಳದಲ್ಲಾದರು ನಿನ್ನ ಕಾಂತನು ನನ್ನ ಬುದ್ಧಿಗೆ ಗೋಚರನಾದರೆ ಆತನನ್ನು ಕರೆತರುವೆನು; ಯಾವನು ನಿನ್ನ ಮನಸ್ಸನ್ನಪಹರಿಸಿದನೊ ಅವನನ್ನು ನನಗೆ ತಿಳಿಸು" ಎಂದು ನುಡಿದು ದೇವಗಂಧರ್ವ ಸಿದ್ಧಚಾರಣ ಸರ್ಪ ದಿಸತಿಗಳನ್ನೂ ದೈತ್ಯವಿದ್ಯಾಧರರನ್ನೂ ಯಕ್ಷರನ್ನೂ ಯಥಾವತ್ತಾಗಿ ಭಾವಚಿತ್ರಪಠದಲ್ಲಿ ಬರೆದಳು; ಮತ್ತು ಮನುಷ್ಯರಲ್ಲಿ ಯಾದವರನ್ನೂ ಶೂರಸೇನನನ್ನೂ ವಸುದೇವನನ್ನೂ ರಾಮಕೃಷ್ಣರನ್ನೂ ಬರೆದು ತೋರಿಸಿದ ಳು; ಆ ಚಿತ್ರಪಠದಲ್ಲಿ ಯಾದವರ ಮಧ್ಯದಲ್ಲಿ ಬರೆಯಲ್ಪಟ್ಟ ಅನಿರುದ್ಧನನ್ನು ಕಂಡು ಉಷೆಯು ಲಜ್ಜೆಯಿಂದ ಮುಖವನ್ನುಬೊಗ್ಗಿಸಿಕೊಂಡು ನಗುತ "ಈತನೇ ಆ ಕಾಂತನು" ಎಂದು ನುಡಿದಳು.

ಅನಂತರದಲ್ಲಿ ಯೋಗನಿಷ್ಟಳಾದ ಚಿತ್ರಲೇಖೆಯು ಅನಿರುದ್ಧನು ಕೃಷ್ಣನ ಮೊಮ್ಮಗನೆಂದು ತಿಳಿದು ಆಕಾ ಶಮಾರ್ಗದಿಂದ ಕೃಷ್ಣಪಾಲಿತವಾದ ದ್ವಾರಕಾಪುರವನ್ನೈದಿ ರಮಣೀಯವಾದ ಮಂಚದಲ್ಲಿ ನಿದ್ರೆಗೈಯುತಿದ್ದ ಅನಿರು ದ್ಧನನ್ನು ತೆಗೆದುಕೊಂಡು ಯೋಗಬಲದಿಂದ ಶೋಣಿತಪುರವನ್ನೈದಿ ತನ್ನ ಸಖಿಯಾದ ಉಷೆಗೆ ಆ ಕಾಂತನನ್ನು ತೋರಿಸಿದಳು; ಉಷೆಯು ಸುಂದರನಾದ ಆ ವರನನ್ನು ನೋಡಿ ಸಂತೋಷಯುಕ್ತವಾದ ಮುಖವುಳ್ಳವಳಾಗಿ ಪು ರುಷರಿಂದ ನೋಡಲಶಕ್ಯವಾದ ತನ್ನ ಗೃಹದಲ್ಲಿ ಅನಿರುದ್ಧನೊಡಗೂಡಿ ರಮಿಸಿದಳು; ಅನಿರುದ್ಧನು ಅಲ್ಲಿ ಅಮೂಲ್ಯ ವಾದ ವಸ್ತ್ರ ಪುಷ್ಪಮಾಲ್ಯ ಗಂಧ ಧೂಪದೀಪ ಪೀಠಾದಿಗಳಿಂದಲೂ ಮತ್ತು ಪಾನ ಭೋಜನ ಭಕ್ಷ್ಯಗಳಿಂದಲೂ ಪ್ರಿಯವಚನಗಳಿಂದಲೂ ಶಿಶ್ರೂಷಣಪೂರ್ವಕವಾಗಿ ಪೂಜಿಸಲ್ಪಡುತ ಗೂಢನಾಗಿದ್ದುಕೊಂಡು ಪ್ರತಿಕ್ಷಣದಲ್ಲಿ ಯೂ ವೃದ್ಧಿಹೊಂದುವ ಸ್ನೇಹವುಳ್ಳ ಉಷಾದೇವಿಯಿಂದ ಅಪಹರಿಸಲ್ಪಟ್ಟ ಇಂದ್ರಿಯಗಳುಳ್ಳವನಾಗಿ ಅತಿಕ್ರಾಂತಗ ಳಾದ ದಿವಸಗಳನ್ನು ಎಣಿಸದಿದ್ದನು; ಈರೀತಿ ಅನಿರುದ್ಧನಿಂದ ಅನುಭವಿಸಲ್ಪಡುತಲಿರುವವಳಾಗಿ ನಷ್ಟವಾದ ಕನ್ಯಾ ವ್ರತವುಳ್ಳವಳಾಗಿ ಅತಿಹರ್ಷಯುಕ್ತಳಾಗಿದ್ದ ಉಷಾದೇವಿಯ ವ್ಯಾಪಾರವನ್ನು ಆ ಗೃಹಪಾಲಕರಾದ ಭೃತ್ಯರು ಮರೆ ಮಾಡಲಶಕ್ಯಗಳಾದ ಚಿಹ್ನೆಗಳಿಂದ ತಿಳಿದು ಬಾಣನ ಸಮೀಪವನ್ನೈದಿ "ಎಲೈ ಅರಸೆ, ಕನ್ಯಕೆಯಾದ ನಿನ್ನ ಮಗಳ ವ್ಯಾಪಾರವನ್ನು ಕುಲದೂಷಕವಾಗಿಯೂ ಶಾಸ್ತ್ರವಿರುದ್ಧವಾಗಿಯೂ ಕಾಣುತ್ತೇವೆ; ಪ್ರಮಾದರಹಿತರಾದ ನಮ್ಮಿಂ ದ ಗೃಹದಲ್ಲಿ ರಕ್ಷಿಸಲ್ಪಡುತ ಅನ್ಯರಿಂದ ನೋಡಲಶಕ್ಯಳಾಗಿ ಕನ್ಯಕೆಯಾದ ಆ ದೇವಿಗೆ ಪುರುಷರಿಂದ ತಿರಸ್ಕಾರವು ಹ್ಯಾಗುಂಟಾಯಿತೋ ನಾವು ತಿಳಿಯೆವು" ಎಂದು ವಿಜ್ಞಾಪಿಸಿದರು; ಬಾಣಾಸುರನು ಮಗಳ ದುರ್ವ್ಯಾಪಾರವನ್ನು ಕೇಳಿ ಅತ್ಯಂತ ವ್ಯಸನಾಯುಕ್ತವಾಗಿ ತ್ವರೆಯಿಂದ ಉಷೆಯಗೃಹವನ್ನೈದಿ ಅಲ್ಲಿ ಲೋಕಗಳಲ್ಲಿರುವ ಸುಂದರರೊ ಳಗೆ ಶ್ರೇಷ್ಠನಾಗಿ ಶಾಮಲವರ್ಣನಾಗಿ ಪೀತಾಂಬರವನ್ನುಟ್ಟಿರುವವನಾಗಿ ಕಮಲಗಳಂತಿರುವ ನೇತ್ರಗಳುಳ್ಳವನಾಗಿ ದೀರ್ಘವಾದ ಭುಜಗಳುಳ್ಳವನಾಗಿ ಕುಂಡಲಕಾಂತಿಯಿಂದಲೂ ಕೇಶಗಳ ಕಾಂತಿಯಿಂದಲೂ ಮುಗುಳುನಗೆಯೊಡನೆ ಯುಕ್ತವಾದ ನೋಟದಿಂದಲೂ ಅಲಂಕರಿಸಲ್ಪಟ್ಟ ಮುಖವುಳ್ಳವನಾಗಿ ಸರ್ವಮಂಗಳಯುಕ್ತವಾದ ಉಷೆಯೊಡನೆ ಪಗಡೆಯನ್ನಾಡುತ ವಸಂತಕಾಲಜನ್ಯವಾದ ಮಲ್ಲಿಕಾಪುಷ್ಪಗಳಿಂದ ಶೋಭಿಸಲ್ಪಟ್ಟ ಉಷೆಯ ಅಂಗಸಂಬಂಧದಿಂದ ಸ್ತನಗಳಲ್ಲಿದ್ದ ಕುಂಕುಮದೊಡನೆ ಯುಕ್ತವಾದ ಮಾಲ್ಯವನ್ನು ವಕ್ಷಸ್ಥಳದಲ್ಲಿ ಧರಿಸಿ ಅವಳ ಮುಂದುಗಡೆಯಲ್ಲಿ ಕುಳಿತಿದ್ದ ಅನಿರುದ್ಧನನ್ನು ಕಂಡು ಆಶ್ಚರ್ಯಯುಕ್ತನಾದನು; ಅನಿರುದ್ಧನು ಆಯುಧಪಾಣಿಗಳಾದ ಅನೇಕಭಟ ರಿಂದ ಸುತ್ತಿಕೊಳ್ಳಲ್ಪಟ್ಟು ತಾನಿರುವ ಗೃಹವನ್ನು ಪ್ರವೇಶಿಸಿದ ಬಾಣಾಸುರನನ್ನು ನೋಡಿ ದಂಡಧರನಾದ ಯಮ ನಂತೆ ಅವನನ್ನು ಸಂಹರಿಸುವ ಇಚ್ಛೆಯಿಂದ ಲೋಹವಿಶೇಷದಿಂದ ಕಲ್ಪಿತವಾದ ಪರಿಘಾಯುಧವನ್ನೆತ್ತಿಕೊಂಡು ನಿಂತು ಯೂಥಪತಿಯಾದ ವರಾಹವು ಶುನಕಗಳನ್ನು ಪ್ರಹರಿಸುವ ರೀತಿಯಲ್ಲಿ ತನ್ನನ್ನು ಹಿಡಿಯಬೇಕೆಂದು ಸುತ್ತ ಲು ಬರುತಿದ್ದ ಆ ಭಟರನ್ನು ಪ್ರಹರಿಸಿದನು; ಅವರು ಆತನಿಂದ ಪ್ರಹರಿಸಲ್ಪಟ್ಟು ಛೇದಿಸಲ್ಪಟ್ಟ ಶಿರಸ್ಸುಗಳೂ

ತೊಡೆಗಳೂ ಭುಜಗಳೂ ಉಳ್ಳವರಾಗಿ ಆ ಗೃಹವದೆಶೆಯಿಂದ ತ್ವರೆಯಾಗಿ ಓಡಿದರು ; ಬಲವಂತನಾದ ಬಾಣನು ಕೋಪಯುಕ್ತನಾಗಿ ತನ್ನ ಸೇನೆಯನ್ನು ಪ್ರಹರಿಸುತ್ತಿದ್ದ ಅನಿರುದ್ಧನನ್ನು ನಾಗಪಾಶಗಳಿಂದ ಬಂಧಿಸಿದನು ; ಉಷಾದೇವಿಯು ನಾಗಪಾಶಗಳಿಂದ ಬದ್ಧನಾದ ತನ್ನ ಕಾಂತನನ್ನು ನೋಡಿ ಶೋಕಸಂತಾಪಗಳಿಂದ ಅತ್ಯಂತ ವಿವಶಳಾಗಿ ಅಶ್ರುಬಿಂದುಗಳೊಡನೆ ಯುಕ್ತವಾದ ನೇತ್ರಗಳುಳ್ಳವಳಾಗಿ ದುಃಖಪಡುತ್ತಿದ್ದಳು.

## ೬೩ನೇ ಅಧ್ಯಾಯ.

### ಕೃಷ್ಣನು ಬಾಣಾಸುರನನ್ನು ಜಯಿಸಿದ್ದು.

ಎಲೈ ಪರೀಕ್ಷಿದ್ರಾಜನೆ, ಅನಂತರದಲ್ಲಿ ಅನಿರುದ್ಧನನ್ನು ಕಾಣದೆ ದುಃಖಿಸುತ್ತಿದ್ದ ಆತನ ಬಂಧುಗಳಿಗೆ ನಾಲ್ಕು ವರುಷಗಳೂ ಮೂರುಮಾಸಗಳೂ ಕಳೆದವು ; ಕೃಷ್ಣನನ್ನೇ ದೇವತೆಯಾಗುಳ್ಳ ಯಾದವರು ನಾರದಮುನಿಯ ದೆಶೆಯಿಂದ ಬಾಣಾಸುರನಿಂದ ಬಂಧಿಸಲ್ಪಟ್ಟ ಅನಿರುದ್ಧನ ವೃತ್ತಾಂತವನ್ನೂ ಅಲ್ಲಿ ನಡೆದ ಯುದ್ಧಾದಿ ವ್ಯಾಪಾರಗಳನ್ನೂ ಕೇಳಿ ಶೋಣಿತಪುರವನ್ನೈದಿದರು ; ಪ್ರದ್ಯುಮ್ನನು ಯುಯುಧಾನನು ಗದನು ಸಾಂಬನು ಸಾರಣನು ಮತ್ತೂ ರಾಮಕೃಷ್ಣರನ್ನನುವರ್ತಿಸಿಕೊಂಡಿದ್ದ ನಂದ ಉಪನಂದ ಭದ್ರಾದಿಗಳೂ ಆ ಬಾಣನ ಪುರವನ್ನೈದಿದರು ; ರಾಮಕೃಷ್ಣರು ಸರ್ವಜ್ಞರಾದ್ದರಿಂದ ಯಾದವರಿಗಿಂತಲು ಮೊದಲೇ ಅನಿರುದ್ಧನ ವೃತ್ತಾಂತವನ್ನು ತಿಳಿದು ಶೋಣಿತಪುರವನ್ನೈದಿದರು ; ಯಾದವಶ್ರೇಷ್ಠರು ಹನ್ನೆರಡು ಅಕ್ಷೋಹಿಣೀಸೇನೆಗಳೊಡಗೂಡಿ ಶೋಣಿತಪುರವನ್ನು ನಾಲ್ಕುಕಡೆಯಲ್ಲಿಯೂ ಸುತ್ತಿಕೊಂಡು ಮುತ್ತಿಗೆಹಾಕಿದರು ; ಆಗ ಬಾಣಾಸುರನು ಭಗ್ನಮಾಡಲ್ಪಟ್ಟ ಪುರೋದ್ಯಾನಗಳನ್ನೂ ಪ್ರಾಕಾರಗಳನ್ನೂ ಅಲಂಗಗಳನ್ನೂ ಪುರದ್ವಾರಗಳನ್ನೂ ನೋಡಿ ಕ್ರೋಧದಿಂದ ವ್ಯಾಪ್ತನಾಗಿ ಆ ಯಾದವಸೇನೆಗೆ ಸಮಾನವಾದ ಸೇನೆಗಳೊಡನೆ ಆ ಪುರದದೆಶೆಯಿಂದ ಹೊರಟನು ; ಅನಂತರದಲ್ಲಿ ಭಗವಂತನಾದ ರುದ್ರನು ಬಾಣನಿಗೆ ಸಹಾಯವಾಗಿ ಕುಮಾರಸ್ವಾಮಿಯೊಡಗೂಡಿ ಪ್ರಮಥಗಣಗಳಿಂದ ಪರಿವೃತನಾಗಿ ಮಹಾವೃಷಭವನ್ನೇರಿ ರಾಮಕೃಷ್ಣರೊಡನೆ ಯುದ್ಧಂಗೈದನು ; ಆಗ ಕೃಷ್ಣರುದ್ರರಿಗೂ ಪ್ರದ್ಯುಮ್ನಸ್ಕಂದರಿಗೂ ಭಯಂಕರವಾಗಿ ಆಶ್ಚರ್ಯಕರವಾಗಿ ರೋಮಾಂಚಕವಾದ ಯುದ್ಧವುಂಟಾಯಿತು ; ಕುಂಭಾಂಡ ಕೂಪಕರ್ಣರೆಂಬ ಬಾಣಾಸುರನ ಮಂತ್ರಿಗಳೊಡನೆ ಸಾತ್ಯಕಿಯು ಯುದ್ಧಂಗೈದನು ; ಆ ಸಮಯದಲ್ಲಿ ಬ್ರಹ್ಮದೇವನು ಮೊದಲಾದ ದೇವಶ್ರೇಷ್ಠರೂ ಮುನಿಗಳೂ ಸಿದ್ಧ ಚಾರಣ ಗಂಧರ್ವರೂ ಅಪ್ಸರಸ್ತ್ರೀಯರೂ ಯಕ್ಷರೂ ಆ ಯುದ್ಧವನ್ನುನೋಡಲೋಸುಗ ವಿಮಾನಗಳಲ್ಲಿ ಆವಿರ್ಭವಿಸಿದರು ! ಶ್ರೀಕೃಷ್ಣನು ಶಿವಕಿಂಕರರಾದ ಭೂತ ಪ್ರಮಥ ಗುಹ್ಯಕರನ್ನೂ ಡಾಕಿಣೀ ಯಾತುಧಾನಿಗಳನ್ನೂ ವಿನಾಯಕನೊಡಗೂಡಿದ್ದ ಬೇತಾಳಗಳನ್ನೂ ಪ್ರೇತ ಪಿಶಾಚ ಕೂಷ್ಮಾಂಡ ಬ್ರಹ್ಮರಾಕ್ಷಸರನ್ನೂ ಶಾರ್ಙ್ಗವೆಂಬ ಧನುಸ್ಸಿಗೆ ಹೆದೆಯನ್ನೇರಿಸಿ ಬಿಡಲ್ಪಟ್ಟ ತೀಕ್ಷ್ಣಾಗ್ರಗಳುಳ್ಳ ಬಾಣಗಳಿಂದ ಪ್ರಹರಿಸಿ ಓಡಿಸಿದನು ; ರುದ್ರನು ಪಿನಾಕವೆಂಬ ತನ್ನ ಧನುಸ್ಸನ್ನು ಧರಿಸಿ ಕೃಷ್ಣನಮೇಲೆ ಪ್ರತ್ಯೇಕಪ್ರತ್ಯೇಕವಾಗಿ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದನು ; ಕೃಷ್ಣನು ಆಶ್ಚರ್ಯಪಡದೆ ಬ್ರಹ್ಮಾಸ್ತ್ರಕ್ಕೆ ಬ್ರಹ್ಮಾಸ್ತ್ರವನ್ನೂ ವಾಯುವ್ಯಾಸ್ತ್ರಕ್ಕೆ ಪರ್ವತಾಸ್ತ್ರವನ್ನೂ ಆಗ್ನೇಯಾಸ್ತ್ರಕ್ಕೆ ಪರ್ಜನ್ಯಾಸ್ತ್ರವನ್ನೂ ಪಾಶುಪತಾಸ್ತ್ರಕ್ಕೆ ನಾರಾಯಣಾಸ್ತ್ರವನ್ನೂ ಈರೀತಿ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ಜೃಂಭಣಾಸ್ತ್ರದಿಂದ ರುದ್ರನನ್ನು ಸ್ತಂಭಿಸಿ ಮೋಹಯುಕ್ತನಾಗಿ ಮಾಡಿ ಖಡ್ಗ ಗದಾ ಬಾಣಗಳಿಂದ ಬಾಣನ ಸೇನೆಯನ್ನು ಪ್ರಹರಿಸಿದನು ; ಸ್ಕಂದನು ಪ್ರದ್ಯುಮ್ನನ ಬಾಣಗಳಿಂದ ಪೀಡಿತನಾಗಿ ಸುತ್ತಲೂ ಅವಯವಗಳಿಂದ ರಕ್ತವನ್ನು ಸೋರಿಸುತ ಮಯೂರವಾಹನವನ್ನೇರಿ ಯುದ್ಧರಂಗದ ದೆಶೆಯಿಂದ ಹಿಂದಕ್ಕೆ ತಿರುಗಿದನು ; ಕುಂಭಾಂಡ ಕೂಪಕರ್ಣರಿಬ್ಬರೂ ಸಾತ್ಯಕಿಯ ಮುಸಲಾಯುಧದಿಂದ ಕೊಲ್ಲಲ್ಪಟ್ಟು ಕೆಳಗೆ ಬೀಳಲು ನಷ್ಟವಾದ ನಾಥರುಳ್ಳ ಅವರ ಸೇನೆಗಳು ನಾಲ್ಕುಕಡೆಯಲ್ಲಿಯೂ ಓಡಿದವು ; ಬಾಣಾಸು

ರನು ಭಗ್ನವಾದ ತನ್ನ ಸೇನೆಯನ್ನು ನೋಡಿ ಸಹಿಸಲಾರದೆ ಸಾತ್ಯಕಿಯನ್ನು ಬಿಟ್ಟು ಕೃಷ್ಣನನ್ನಟ್ಟಿಕೊಂಡು ಹೋಗಿ ಏಕಕಾಲದಲ್ಲಿ ಐನೂರು ಹಸ್ತಗಳಿಂದ ಐನೂರು ಧನುಸ್ಸುಗಳನ್ನು ಸೆಳೆದು ಒಂದೊಂದು ಧನುಸ್ಸಿನಲ್ಲಿ ಎರಡೆರಡು ಬಾಣಗಳನ್ನು ಸಂಧಾನಗೈದು ಪ್ರಯೋಗಿಸಿದನು; ಕೃಷ್ಣನು ಏಕಕಾಲದಲ್ಲಿ ಅವನ ಧನುಸ್ಸುಗಳನ್ನು ಛೇದಿಸಿ ಸಾರಥಿಯನ್ನೂ ರಥವನ್ನೂ ಅಶ್ವಗಳನ್ನೂ ಸಂಹರಿಸಿ ವಿಜಯಶಂಖವನ್ನು ಪೂರಿಸಿದನು! ಆಗ ಕೋಟರೆಯೆಂಬ ನಾಮಧೇಯವುಳ್ಳ ಬಾಣಾಸುರನ ತಾಯಿ ತನ್ನ ಪುತ್ರನ ಪ್ರಾಣಗಳನ್ನು ರಕ್ಷಿಸಬೇಕೆಂದು ದಿಗಂಬರಳಾಗಿ ತಲೆಯ ಕೂದಲುಗಳನ್ನು ಚೆದರಿಸಿಕೊಂಡು ಶ್ರೀಕೃಷ್ಣನ ಮುಂದುಗಡೆಯಲ್ಲಿ ನಿಲ್ಲಲು ಆತನು ದಿಗಂಬರಳಾದ ಕೋಟರೆಯನ್ನು ನೋಡದೆ ಮುಖವನ್ನು ತಿರುಗಿಸಿಕೊಂಡನು; ಅಷ್ಟರೊಳಗೆ ಬಾಣನು ರಥಹೀನನಾಗಿ ಛೇದಿಸಲ್ಪಟ್ಟ ಧನುಸ್ಸುಳ್ಳವನಾಗಿ ಶೋಣಿತಪುರವನ್ನು ಪ್ರವೇಶಿಸಿದನು; ಆಮೇಲೆ ಭೂತಗಳ ಸಮೂಹಗಳು ಓಡಿಹೋಗುತಿರಲು ಮೂರು ಶಿರಸ್ಸುಗಳೂ ಮೂರುಪಾದಗಳೂ ಉಳ್ಳದ್ದಾಗಿ ಭಯಂಕರವಾದ ರೂಪವುಳ್ಳದ್ದಾಗಿ ಅತಿ ಕ್ರೂರವಾದ ಮಹೇಶ್ವರಜ್ವರವು ಪರಮೇಶ್ವರನಿಂದ ಪ್ರೇರಿಸಲ್ಪಟ್ಟು ಶ್ರೀಕೃಷ್ಣನ ಮುಂದುಗಡೆಯಲ್ಲಿ ಆವಿರ್ಭವಿಸಿತು; ಅದನ್ನು ಕಂಡು ಸೀತಜ್ವರವನ್ನು ಸೃಷ್ಟಿಸಿದನು; ಆಗ ಮಹೇಶ್ವರಜ್ವರವು ವೈಷ್ಣವಜ್ವರದಿಂದ ಪೀಡಿಸಲ್ಪಟ್ಟು ರೋದನಗೈಯುತ ಮತ್ತೊಬ್ಬರಿಂದಲೂ ಅಭಯವನ್ನು ಪಡೆಯದೆ ಭಯಪಡುತ ಶರಣಾರ್ತಿಯಾಗಿ ಅಂಜಲಿಬಂಧಗೈದು ಶ್ರೀಕೃಷ್ಣನನ್ನು ಕುರಿತು "ಎಲೈ ಶ್ರೀಹರಿಯೆ, ನೀನು ಅನಂತಶಕ್ತಿಗಳುಳ್ಳವನಾಗಿ ಸಮಸ್ತರಿಗೂ ಆತ್ಮಸ್ವರೂಪನಾಗಿರುವೆ; ಬ್ರಹ್ಮಾದಿಗಳಿಗೂ ನಿಯಾಮಕನಾಗಿ ಶುದ್ಧನಾಗಿ ಜ್ಞಾನಸ್ವರೂಪನಾಗಿ ಪ್ರಪಂಚದ ಉತ್ಪತ್ತಿಸ್ಥಿತಿ ಲಯಗಳಿಗೆ ಕಾರಣನಾಗಿ ವೇದದಿಂದ ಪ್ರಕಾಶಗೈಯಲ್ಪಡುವ ಪರಬ್ರಹ್ಮಸ್ವರೂಪನಾಗಿ ಸರ್ವವಿಕಾರ ರಹಿತನಾಗಿ ವೇದಗಳಿಂದಲೂ ಪ್ರತ್ಯಕ್ಷವಾಗಿ ನಿರೂಪಿಸಲಶಕ್ಯನಾದ ನಿನ್ನನ್ನು ನಮಸ್ಕರಿಸುತ್ತೇನೆ; ಕ್ಷೋಭಕವಾದ ಕಾಲಕ್ಕೆ ನಿಮಿತ್ತವಾದ ಕರ್ಮವು ದೈವವು; ಕರ್ಮವೆಂಬ ಸಂಸಾರವುಳ್ಳ ಜೀವನಿಗೆ ಸೂಕ್ಷ್ಮಭೂತಗಳು ಶರೀರವು; ಸೂತ್ರಾತ್ಮಕವಾದ ಪ್ರಾಣವು ಅಹಂಕಾರವು; ಏಕಾದಶ ಇಂದ್ರಿಯಗಳೂ ಪಂಚಮಹಾಭೂತಗಳೂ ವಿಕಾರಗಳು; ಅವುಗಳ ಸಂಘಾತರೂಪವಾದದ್ದು ದೇಹವು; ದೇಹದದೆಶೆಯಿಂದ ಬೀಜರೂಪವಾದ ಕರ್ಮವೂ ಕರ್ಮದದೆಶೆಯಿಂದ ಅಂಕುರರೂಪವಾದ ದೇಹವೂ ತಿರಿಗಿ ತಿರಿಗಿ ಉಂಟಾಗುವವಾದಕಾರಣ ಬೀಜಾಂಕುರಗಳಂತಿರುವ ಸಂಸಾರಪ್ರವಾಹವೂ ಮಿಕ್ಕ ಸಮಸ್ತವೂ ನಿನ್ನ ಮಾಯೆಯೇಹೊರ್ತು ಮತ್ತೊಂದಲ್ಲ; ಆ ಮಾಯಾನಿಷೇಧಕ್ಕೆ ಅವಧಿಸ್ಥಾನವಾದಂಥಾ ನಿನ್ನನ್ನು ಶರಣುಹೊಂದುತ್ತೇನೆ! ಎಲೈ ಶ್ರೀಹರಿಯೆ, ಲೀಲೆಯಿಂದ ಅಂಗೀಕರಿಸಲ್ಪಟ್ಟ ಅನೇಕಪ್ರಕಾರಗಳಾದ ಮತ್ಸ್ಯಾದ್ಯವತಾರಗಳಿಂದ ನೀನು ದೇವತೆಗಳನ್ನು ಪಾಲಿಸುತ್ತಿದ್ದೀ; ಮತ್ತು ಅವರಿಗೋಸ್ಕರ ವರ್ಣಾಶ್ರಮಧರ್ಮಗಳನ್ನೂ ಅವರನ್ನು ಪಾಲಿಸುವದಕ್ಕೋಸ್ಕರ ಅನುಷ್ಠಾನಪರರಾದ ಸತ್ಪುರುಷರನ್ನೂ ಪಾಲಿಸುತಿದ್ದೀ; ಆ ಸುಜನರಕ್ಷಣಾರ್ಥವಾಗಿ ಹಿಂಸಾವ್ಯಾಪಾರದಲ್ಲಿ ಆಸಕ್ತರಾದ ದುಷ್ಟರನ್ನು ಸಂಹರಿಸುತಿದ್ದೀ; ಆದಕಾರಣ ನಿನ್ನ ಈ ಲೀಲಾವತಾರವು ಭೂಭಾರನಿಮಿತ್ತವಾಗುಂಟಾಯಿತೇ ಹೊರ್ತು ನೀನೊಬ್ಬನಿಗೂ ಪುತ್ರನಲ್ಲ; ನೀನು ಸರ್ವೋಪಾಧಿರಹಿತನೇ ಸರಿ! ಎಲೈ ಸ್ವಾಮಿಯೆ, ನಿನ್ನಿಂದ ನಿರ್ಮಿಸಲ್ಪಟ್ಟ ಸಹಿಸಲಶಕ್ಯವಾದ ಈ ಸೀತಜ್ವರದಿಂದ ನಾನು ಅತ್ಯಂತವಾಗಿ ತಪಿಸಲ್ಪಟ್ಟಿದೇನೆ; ಪ್ರಾಣಿಗಳು ಕಾಮಪಾಶಬದ್ಧರಾಗಿ ನಿನ್ನ ಪಾದಪದ್ಮವನ್ನು ಸೇವಿಸದಿರುವಪರ್ಯಂತವೇ ಅವರಿಗೆ ಸಂತಾಪವುಂಟಾಗುವದು; ನಿನ್ನ ಸೇವೆಯಲ್ಲಿ ಪ್ರವರ್ತಿಸಿದವರಿಗೆ ಸಂತಾಪವುಂಟಾಗುವದುಚಿತವಲ್ಲ" ಎಂದು ಸ್ತುತಿಸಿತು.

ಶ್ರೀಕೃಷ್ಣನು ಅದನ್ನು ಕುರಿತು "ಎಲೇ ಮಹೇಶ್ವರಜ್ವರವೆ, ನಿನಗೆ ನಾನು ಪ್ರಸನ್ನನಾದೆನು; ಈ ವೈಷ್ಣವಜ್ವರದದೆಶೆಯಿಂದ ನಿನಗೆ ಭಯವು ಹೋಗಲಿ; ನಮ್ಮಿಬ್ಬರಿಗುಂಟಾದ ಈ ಪರಸ್ಪರ ಸಂವಾದವನ್ನು ಸ್ಮರಿಸುವ ಪುರುಷನಿಗೆ ನಿನ್ನಿಂದ ಭಯವುಂಟಾಗದಿರಲೀ; ನೀನು ನನ್ನ ಆಜ್ಞೆಯನ್ನು ಪಾಲಿಸುತ ಸುಖವಾಗಿ ಲೋಕದಲ್ಲಿ ಸಂಚರಿಸು" ಎಂದು ನುಡಿದನು.

ಈರೀತಿ ಕೃಷ್ಣನಿಂದ ಆಜ್ಞಾಪಿಸಲ್ಪಟ್ಟ ಆ ಮಹೇಶ್ವರಜ್ವರವು ಆತನಿಗೆ ನಮಸ್ಕರಿಸಿ ಅಲ್ಲಿಂದ ತೆರಳಿಹೋಯಿತು! ಆಗ ಬಾಣಾಸುರನು ಪುನಃ ರಥವನ್ನೇರಿ ಶೋಣಿತಪುರದಿಂದ ಯುದ್ಧಂಗೈಯಲೋಸುಗ ಕೃಷ್ಣನನ್ನು ಕುರಿತು ಬಂದು ತನ್ನ ಸಹಸ್ರಭುಜಗಳಿಂದಲೂ ನಾನಾಪ್ರಕಾರಗಳಾದ ಆಯುಧಗಳನ್ನಿಡಿದು ಅತಿ ಕ್ರೋಧಯುಕ್ತನಾಗಿ ಶ್ರೀಕೃಷ್ಣನಮೇಲೆ ಬಾಣಗಳನ್ನು ಬಿಟ್ಟನು; ಶ್ರೀಕೃಷ್ಣನು ಬಾರಿಬಾರಿಗೂ ಅಸ್ತ್ರಗಳನ್ನು ಪ್ರಯೋಗಿಸುತಿದ್ದ ಬಾಣಾಸುರನ ಭುಜಗಳನ್ನು ಕ್ಷುರದಂತೆ ಅತಿ ತೀಕ್ಷ್ಣವಾದ ಅಂಚುಗಳುಳ್ಳ ಚಕ್ರಾಯುಧದಿಂದ ವೃಕ್ಷದ ಶಾಖೆಗಳನ್ನು ಛೇದಿಸುವಂತೆ ಛೇದಿಸುತಿದ್ದನು! ಈರೀತಿ ಕೃಷ್ಣನಿಂದ ಬಾಣಾಸುರನ ಭುಜಗಳು ಛೇದಿಸಲ್ಪಡುತಲಿರಲು ಭಗವಂತನಾದ ಶ್ರೀ ರುದ್ರನು ಭಕ್ತನಾದ ಬಾಣಾಸುರನಲ್ಲಿ ಅತ್ಯಂತ ದಯೆಯುಳ್ಳವನಾಗಿ ಸಮೀಪಕ್ಕೆ ಬಂದು ಶ್ರೀಕೃಷ್ಣನನ್ನು ಕುರಿತು "ಎಲೈ ಶ್ರೀಕೃಷ್ಣನೆ, ಸೂರ್ಯಾದಿ ಜ್ಯೋತಿಸ್ಸುಗಳಿಗೂ ಪ್ರಕಾಶಕನಾದಕಾರಣ ಪರಂಜ್ಯೋತಿಸ್ವರೂಪನಾಗಿ ವೇದಗಳಿಗೂ ಗೋಚರನಾಗದೆ ಗೂಢನಾಗಿರುವ ಪರಬ್ರಹ್ಮನು ನೀನು; ಶುದ್ಧಚಿತ್ತರಾದ ಪುರುಷರು ಆಕಾಶದಂತೆ ಸಂಗರಹಿತನಾದ ಯಾವನನ್ನು ನೋಡುತ್ತಿರುವರೋ ಅಂಥಾ ನಿನ್ನನ್ನರಿಯದಿರುವ ಬಾಣನು ನಿನ್ನೊಡನೆ ಯುದ್ಧಂಗೈದನೆಂಬದು ಆಶ್ಚರ್ಯವಲ್ಲ; ನಿರ್ಗುಣವಾದ ನಿನ್ನ ಸ್ವರೂಪವು ತಿಳಿಯಲಶಕ್ಯವಲ್ಲ; ಯಾವ ವಿರಾಟ್ಪುರುಷನಿಗೆ ಅಂತರಿಕ್ಷವು ನಾಭಿಯೋ—ಅಗ್ನಿಯು ಮುಖವೋ—ಜಲವು ರೇತಸ್ಸೋ—ಸ್ವರ್ಗವು ಶಿರಸ್ಸೋ—ದಿಕ್ಕುಗಳು ಶ್ರೋತ್ರಗಳೋ—ಭೂಮಿಯು ಪಾದವೋ—ಚಂದ್ರನು ಮನಸ್ಸೋ—ಸೂರ್ಯನು ಚಕ್ಷುಸ್ಸೋ—ನಾನು ಅಹಂಕಾರವೋ—ಸಮುದ್ರವು ಉದರವೋ—ಇಂದ್ರನು ಭುಜವೋ—ಓಷಧಿಗಳು ರೋಮಗಳೋ—ಮೇಘಗಳು ಕೇಶಗಳೋ—ಬ್ರಹ್ಮದೇವನು ಬುದ್ಧಿಯೋ—ಪ್ರಜೇಶ್ವರನು ಮೇಢ್ರವೋ—ಧರ್ಮವು ಹೃದಯವೋ—ಅಂಥಾ ಲೋಕಗಳಿಂದ ಕಲ್ಪಿತನಾದ ವಿರಾಟ್ಪುರುಷನು ನೀನೆ! ಚ್ಯುತಿಯಿಲ್ಲದ ಸ್ವರೂಪವುಳ್ಳ ಎಲೈ ಶ್ರೀಕೃಷ್ಣನೆ, ನಿನ್ನ ಈ ಅವತಾರವು ಧರ್ಮಸಂರಕ್ಷಣಾರ್ಥವಾಗಿಯೂ ಜಗತ್ತಿನ ಅಭ್ಯುದಯಕ್ಕೋಸ್ಕರವಾಗಿಯೂ ಉಂಟಾಯಿತು; ಲೋಕಪಾಲಕರಾದ ನಾವೆಲ್ಲರು ನಿನ್ನಿಂದ ಪಾಲಿಸಲ್ಪಟ್ಟವರಾಗಿ ಸಮಸ್ತಲೋಕಗಳನ್ನೂ ಪಾಲಿಸುತ್ತೇವೆ; ನೀನು ಅವಸ್ಥಾತ್ರಯಯುಕ್ತರಾದ ಸಮಸ್ತಪುರುಷರಿಗೂ ಮೂಲಪ್ರಕೃತಿರೂಪನಾದ್ದರಿಂದ ಈಶ್ವರನಾಗಿ ಸಾಕ್ಷಿಯಾಗಿ ಸ್ವಪ್ರಕಾಶನಾಗಿದ್ದಾಗ್ಯು ಸರ್ವವಿಷಯಗಳನ್ನೂ ಪ್ರಕಾಶಂಗೈಯಲೋಸುಗ ಮಾಯೆಯನ್ನವಲಂಬಿಸಿ ವಿಕಾರಭೇದಗಳಿಂದ ನಾನಾಪ್ರಕಾರವಾಗಿ ತೋರುತಿದ್ದೀ; ಸೂರ್ಯನು ಮೇಘರೂಪವಾದ ತನ್ನ ಛಾಯೆಯಿಂದ ಅನ್ಯದೃಷ್ಟಿಯಿಂದ ಆಚ್ಛಾದನಂಗೈಯಲ್ಪಟ್ಟವನಾದಾಗ್ಯು ಆ ಮೇಘರೂಪವಾದ ಛಾಯೆಯನ್ನೂ ಮೇಘದಿಂದ ಮರೆಮಾಡಲ್ಪಟ್ಟ ಘಟಾದಿಗಳನ್ನು ಪ್ರಕಾಶಂಗೈಯುತಲಿರುವ ರೀತಿಯಲ್ಲಿ ನೀನು ಸ್ವಕಾರ್ಯವಾಗಿ ಜಗತ್ತಿಗೆ ಆವರಣರೂಪವಾದ ಅಹಂಕಾರದಿಂದ ಜೀವಸೃಷ್ಟಿಯಿಂದ ಆಚ್ಛಾದನಂಗೈಯಲ್ಪಟ್ಟವನಾದಾಗ್ಯು ಪ್ರಕಾಶಕನಾಗಿ ಸತ್ವಾದಿ ಉಪಾಧಿಗಳನ್ನೂ ಆ ಉಪಾಧಿಯುಕ್ತರಾದ ಜೀವರನ್ನೂ ಪ್ರಕಾಶಂಗೈಸುತಿದ್ದೀ; ಆದಕಾರಣ ಸರ್ವಸಾಕ್ಷಿಯಾದ ನಿನಗೆ ಸಂಸಾರಬಂಧವಿಲ್ಲ; ನಿನ್ನ ಮಾಯೆಯಿಂದ ಮೋಹಿಸಲ್ಪಟ್ಟ ಬುದ್ಧಿಯುಳ್ಳ ಪುರುಷರು ಪತ್ನಿ ಪುತ್ರ ಗೃಹಾದಿಗಳಲ್ಲಿ ಅತ್ಯಂತಾಸಕ್ತರಾಗಿ ದುಃಖಸಮುದ್ರದಲ್ಲಿ ತೇಲುತಲೂ ಮುಳುಗುತಲೂ ಇರುವರು; ನಿನಗೆ ಸಂಸಾರಬಂಧವುಂಟಾಗದು! ಕರ್ಮಾಧ್ಯಕ್ಷನಾದ ನಿನ್ನಿಂದ ಕೊಡಲ್ಪಟ್ಟ ಮನುಷ್ಯದೇಹವನ್ನು ಪಡೆದವನಾದಾಗ್ಯು ಜಿತೇಂದ್ರಿಯನಲ್ಲದೆ ಯಾವ ಪುರುಷನು ನಿನ್ನ ಪಾದಗಳನ್ನು ಸೇವಿಸದಿರುವನೋ ಆತ್ಮವಂಚಕನಾದ ಆ ಪುರುಷನೇ ದುಃಖಿಸಲು ಯೋಗ್ಯನು; ಅನಾತ್ಮಗಳಾಗಿ ಅಪ್ರಿಯಗಳಾಗಿ ಅಸ್ವತಂತ್ರಗಳಾಗಿ ವಿಪರೀತಗಳಾದ ಪುತ್ರಾದಿ ವಿಷಯಗಳಿಗೋಸ್ಕರ ಆತ್ಮನಾಗಿ ಪ್ರಿಯನಾಗಿ ಸ್ವತಂತ್ರನಾದ ನಿನ್ನನ್ನು ತ್ಯಜಿಸುವ ಪುರುಷನು ಅಮೃತವನ್ನು ಬಿಟ್ಟು ವಿಷವನ್ನು ಪಾನಂಗೈವವನಿಗೆ ಸಮಾನನು; ನಾನೂ ಬ್ರಹ್ಮದೇವನೂ ನಿರ್ಮಲವಾದ ಅಂತಃಕರಣಗಳುಳ್ಳ ದೇವತೆಗಳೂ ಮುನಿಗಳೂ ಆತ್ಮನಾಗಿ ಅತಿ ಪ್ರಿಯನಾಗಿ ಈಶ್ವರನಾಗಿರುವ ನಿನ್ನನ್ನು ಸರ್ವಭಾವದಿಂದಲೂ ಶರಣುಹೊಂದಿದೇವೆ; ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣನಾಗಿ ಉಪಶಾಂತನಾಗಿ ಸರ್ವತ್ರ ಸಮನಾಗಿ ಬುದ್ಧಿಪ್ರೇರಕನಾಗಿ ಮಿತ್ರರೂಪನಾಗಿ ಸರ್ವಾತ್ಮನಾಗಿ ಈಶ್ವರನಾಗಿ ನಿನಗಿಂತಲು ಮತ್ತೊಬ್ಬ ಪೂಜ್ಯನಿಲ್ಲದವನಾಗಿ ಅದ್ವಿತೀಯ

ನಾಗಿ ಲೋಕಗಳಿಗೂ ಜೀವರಿಗೂ ಅಧಿಷ್ಠಾನಭೂತನಾಗಿ ದೇವೋತ್ತಮನಾದ ನಿನ್ನನ್ನು ನಾವು ಸಂಸಾರಮೋಕ್ಷೆಕ್ಕೋಸ್ಕರ ಭಜಿಸುತ್ತೇವೆ! ಎಲೈ ಹರಿಯೆ, ಬಾಣಾಸುರನು ನನ್ನನ್ನನುವರ್ತಿಸಿಕೊಂಡಿರುವವನಾದ್ದರಿಂದ ನನಗೆ ಭಕ್ತನಾಗಿ ಪ್ರಿಯನಾದವನು; ನನ್ನಿಂದ ಇವನಿಗೆ ವರವು ಕೊಡಲ್ಪಟ್ಟಿತು; ಆದಕಾರಣ ಪ್ರಹ್ಲಾದನಲ್ಲಿ ನಿನಗೆ ಪ್ರಸಾದವುಂಟಾದರೀತಿಯಲ್ಲಿ ಇವನಲ್ಲಿ ನಿನಗೆ ಪ್ರಸಾದವುಂಟಾಗಲಿ!" ಎಂದು ಸ್ತುತಿಸಿದನು.

ಆ ವಾಕ್ಯವನ್ನು ಕೇಳಿ ಶ್ರೀಕೃಷ್ಣದೇವನು ಶ್ರೀರುದ್ರದೇವನನ್ನು ಕುರಿತು "ಎಲೈ ಭಗವಂತನಾದ ಶ್ರೀರುದ್ರನೆ, ನೀನು ಯಾವ ಅರ್ಥವನ್ನು ಹೇಳಿದೆಯೊ ನಿನಗೆ ಪ್ರಿಯವಾದ ಆ ಅರ್ಥವನ್ನು ನಾನು ಮಾಡುತ್ತೇನೆ; ನಿನ್ನ ವ್ಯಾಪಾರವು ನನ್ನಿಂದ ಸಮ್ಮತಿಸಲ್ಪಟ್ಟಿತು; ಬಾಣಾಸುರನು ನನ್ನ ಭಕ್ತನಾದ ಬಲಿಗೆ ಪುತ್ರನಾದ್ದರಿಂದಲೂ ಪ್ರಹ್ಲಾದನ ವಂಶವು ವಧಿಸಲು ಯೋಗ್ಯವಾಗದಿರುವದೆಂದು ನನ್ನಿಂದ ವರವು ಕೊಡಲ್ಪಟ್ಟಿರುವದರಿಂದಲೂ ಬಾಣನು ನನ್ನಿಂದ ಸಂಹರಿಸಲು ಯೋಗ್ಯನಲ್ಲ; ಇವನ ಗರ್ವವನ್ನು ಪರಿಹರಿಸಲೋಸುಗ ನನ್ನಿಂದ ಭುಜಗಳು ಛೇದಿಸಲ್ಪಟ್ಟವು; ಮತ್ತು ಭೂಮಿಗೆ ಭಾರವಾಗಿದ್ದ ಇವನ ಅಧಿಕವಾದ ಸೇನೆಯು ಸಂಹರಿಸಲ್ಪಟ್ಟಿತು; ಬಾಣನಿಗೆ ನಾಲ್ಕು ಭುಜಗಳು ಅವಶಿಷ್ಟವಾಗಿ ನಿಲ್ಲುವವು; ಆತನು ಜರಾಮರಣರಹಿತನಾಗಿ ಯಾವದರಿಂದಲೂ ಭಯವಿಲ್ಲದೆ ನಿನ್ನ ಗಣಪಾಲಕರಲ್ಲಿ ಮುಖ್ಯನಾಗಿರಲಿ" ಎಂದು ನುಡಿದನು.

ಎಲೈ ಪರೀಕ್ಷಿದ್ರಾಯನೆ, ಬಾಣಾಸುರನು ಈರೀತಿ ಕೃಷ್ಣನದೆಶೆಯಿಂದ ಅಭಯವನ್ನು ಪಡೆದು ಶ್ರೀಕೃಷ್ಣನನ್ನು ಶಿರಸ್ಸಿನಿಂದ ನಮಸ್ಕರಿಸಿ ಅನಿರುದ್ಧನನ್ನು ಉಷಾದೇವಿಯೊಡನೆ ರಥವನ್ನೇರಿಸಿಕೊಂಡು ಕೃಷ್ಣನ ಸಮೀಪಕ್ಕೆ ಕರತಂದು ಒಪ್ಪಿಸಿದನು; ಶ್ರೀಕೃಷ್ಣನು ತಮ್ಮ ಅಕ್ಷೋಹಿಣೀಸೇನೆಯಿಂದ ಸುತ್ತಲ್ಪಟ್ಟು ದಿವ್ಯವಸ್ತ್ರವನ್ನುಟ್ಟು ಅಲಂಕೃತಳಾದ ಪತ್ನಿಯುಕ್ತನಾದ ಅನಿರುದ್ಧನನ್ನು ಮುಂದುಮಾಡಿಕೊಂಡು ಶ್ರೀ ರುದ್ರನ ಸಮ್ಮತದಿಂದ ಅಲ್ಲಿಂದ ತೆರಳಿ ಧ್ವಜಗಳಿಂದಲೂ ಶುಭಕರಗಳಾದ ತೋರಣಗಳಿಂದಲೂ ಅಲಂಕರಿಸಲ್ಪಟ್ಟು ಗಂಧೋದಕಾದಿಗಳಿಂದ ನೆನಯಿಸಲ್ಪಟ್ಟ ರಾಜಮಾರ್ಗಗಳೂ ಅಂಗಳಗಳೂ ಉಳ್ಳ ದ್ವಾರಕಾಪುರವನ್ನು ಶಂಖ ಪಟಹ ಭೇರಿ ಧ್ವನಿಗಳೊಡನೆ ಆ ಪುರದಲ್ಲಿದ್ದ ಮಿತ್ರರಿಂದಲೂ ಬ್ರಾಹ್ಮಣಾದಿಗಳಿಂದಲೂ ಎದುರುಗೊಂಡು ಪೂಜಿಸಲ್ಪಟ್ಟು ಪ್ರವೇಶಿಸಿದನು! ಯಾವ ಪುರುಷನು ಪ್ರಾತಃಕಾಲದಲ್ಲೆದ್ದು ಈ ಕೃಷ್ಣವಿಜಯವನ್ನೂ ರುದ್ರನೊಡನೆ ಮಾಡಿದ ಯುದ್ಧವನ್ನೂ ಸ್ಮರಿಸುವನೊ ಆ ಪುರುಷನಿಗೆ ಶತ್ರುಗಳಿಂದ ಪರಾಜಯವುಂಟಾಗದು!

---

## ೬೪ ನೇ ಅಧ್ಯಾಯ.

## ನೃಗರಾಯನ ವೃತ್ತಾಂತವು.

ಎಲೈ ಪರೀಕ್ಷಿದ್ರಾಯನೆ, ಒಂದು ಸಮಯದಲ್ಲಿ ಸಾಂಬ ಪ್ರದ್ಯುಮ್ನ ಚಾರುಭಾನು ಗದನು ಮೊದಲಾದ ಯದುಕುಮಾರರು ಕ್ರೀಡಿಸಲೋಸುಗ ಒಂದು ಉದ್ಯಾನವನವನ್ನೈದಿ ಬಹುಕಾಲವು ಕ್ರೀಡಿಸಿ ಬಾಯರಿಕೆಯಿಂದ ಜಲವನ್ನು ಹುಡುಕುತ ನಿರ್ಜಲವಾದ ಒಂದು ಭಾವಿಯಲ್ಲಿ ಆಶ್ಚರ್ಯಕರವಾಗಿ ಒಂದು ಪರ್ವತಕ್ಕೆ ಸಮಾನವಾದ ಒಂದು ಹೆಂಟೆಗೊದ್ದವನ್ನು ನೋಡಿ ಆಶ್ಚರ್ಯಯುಕ್ತರಾಗಿಯೂ ದಯಾಯುಕ್ತರಾಗಿಯೂ ಆ ಪ್ರಾಣಿಯನ್ನು ಆ ಕೂಪದದೆಶೆಯಿಂದೆತ್ತಲು ಪ್ರಯತ್ನಂಗೈದು ಚರ್ಮಮಯಗಳಾದ ಹಗ್ಗಗಳಿಂದಲೂ ತಂತುಮಯಗಳಾದ ಹಗ್ಗಗಳಿಂದಲೂ ಕೃಕಲಾಸವನ್ನು ಕಟ್ಟಿ ಎತ್ತಲೋಸುಗ ಬಹಳವಾಗಿ ಪ್ರಯತ್ನಪಟ್ಟು ಅದನ್ನೆತ್ತಲಾರದೆ ಕುತೂಹಲಯುಕ್ತರಾಗಿ ಆ ಅರ್ಥವನ್ನು ಕೃಷ್ಣನಿಗೆ ವಿಜ್ಞಾಪಿಸಿದರು; ಜಗತ್ಕರ್ತನಾಗಿ ಭಗವಂತನಾದ ಶ್ರೀಕೃಷ್ಣನು ಆ ಪ್ರದೇಶಕ್ಕೆ ಹೋಗಿ ಅದನ್ನು ತನ್ನ ವಾಮಹಸ್ತದಿಂದ ಲೀಲೆಯಿಂದೆತ್ತಿದನು; ಆ ಪ್ರಾಣಿಯು ಶ್ರೀಹರಿಯ ಹಸ್ತದಿಂದ ಸ್ಪರ್ಶಿಸಲ್ಪಟ್ಟ ಕ್ಷಣದಲ್ಲೇ ಕೃಕಲಾಸರೂಪವನ್ನು ಬಿಟ್ಟು ಕುಂದಣದಂತೆ ಮನೋಹರವಾದ ವರ್ಣವುಳ್ಳದ್ದಾಗಿ

ಆಶ್ಚರ್ಯಕರವಾದ ಭೂಷಣಗಳೂ ವಸ್ತ್ರಮಾಲಿಕೆಗಳೂ ಉಳ್ಳ ದೇವರೂಪವನ್ನು ಧರಿಸಿತು; ಶ್ರೀಕೃಷ್ಣನು ಸಕಲ ವೃತ್ತಾಂತವನ್ನೂ ತಿಳಿದವನಾದಾಗ್ಯೂ ಜನರಿಗೆ ಪ್ರಕಾಶಂಗೈಯಲೋಸುಗ ಆ ದಿವ್ಯಪುರುಷನನ್ನು ಕುರಿತು "ಎಲೈ ಮಹಾ ಭಾಗ್ಯವಂತನಾದ ಪುರುಷನೆ, ಶ್ರೇಷ್ಠವಾದ ರೂಪವುಳ್ಳ ನೀನ್ಯಾರು? ನಿನ್ನನ್ನು ನಿಶ್ಚಯವಾಗಿ ದೇವೋತ್ತಮನನ್ನಾಗಿ ತಿಳಿಯುತ್ತೇನೆ! ಎಲೈ ಪುರುಷನೆ, ದುರ್ದಶೆಗೆ ಯೋಗ್ಯನಲ್ಲದ ನೀನು ಯಾವ ಕರ್ಮದಿಂದ ಇಂಥಾ ದುರ್ದಶೆಯನ್ನೈದಿದೆ? ನಿನ್ನ ವೃತ್ತಾಂತವನ್ನು ಕೇಳಲು ನಾವು ಯೋಗ್ಯರೆಂದು ತಿಳಿದರೆ ಅದನ್ನು ತಿಳಿಯಬಯಸುವ ನಮಗೆ ಹೇಳು" ಎಂದು ಕೇಳಿದನು.

ಶುಭಕರವಾದ ಚರಿತ್ರೆಯುಳ್ಳ ಕೃಷ್ಣನಿಂದ ಈರೀತಿ ಪ್ರಶ್ನೆಗೈಯಲ್ಪಟ್ಟ ನೃಗರಾಯನು ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಕಿರೀಟದಿಂದ ನಮಸ್ಕರಿಸಿ ಕೃಷ್ಣನನ್ನು ಕುರಿತು "ಎಲೈ ಪ್ರಭುವಾದ ಶ್ರೀಹರಿಯೆ, ನನ್ನನ್ನು ಇಕ್ಷ್ವಾಕುರಾಯನ ಪುತ್ರನಾದ ನೃಗರಾಯನೆಂದು ತಿಳಿ; ಬಹುತರವಾದ ದಾನಪ್ರಸ್ತಾರಗಳಿಂದ ನಾನು ನಿನ್ನ ಶ್ರೋತ್ರಮಾರ್ಗವನ್ನೈದಿದ್ದೆನು! ಎಲೈ ಸ್ವಾಮಿಯೆ, ಸರ್ವಭೂತಗಳ ಬುದ್ಧಿಗೆ ಸಾಕ್ಷಿಯಾಗಿ ಕಾಲದಿಂದ ನಷ್ಟನಾಗದಿರುವ ಜ್ಞಾನವುಳ್ಳ ನಿನಗೆ ತಿಳಿಯದಿರುವದೇನಿದೆ! ಆದಾಗ್ಯೂ ನಿನ್ನ ಅಜ್ಞೆಯಿಂದ ನನ್ನ ವೃತ್ತಾಂತವನ್ನು ಹೇಳುತ್ತೇನೆ! ಎಲೈ ಸ್ವಾಮಿಯೆ, ನಾನು ಒಂದು ಸಮಯದಲ್ಲಿ ಭೂಮಿಯಲ್ಲಿ ಮಳಲೆಷ್ಟಿವೆಯೋ—ಅಂತರಿಕ್ಷದಲ್ಲಿ ನಕ್ಷತ್ರಗಳೆಷ್ಟಿವೆಯೋ—ವರ್ಷಧಾರೆಗಳೆಷ್ಟುಂಟೊ ಅಷ್ಟು ಸಂಖ್ಯೆಯುಳ್ಳ ಉತ್ತಮವಾಗಿ ಅಧಿಕ ಕ್ಷೀರಯುಕ್ತಗಳಾಗಿ ಯೌವನಶಾಲಿಗಳಾಗಿ ರೂಪಶೀಲಗುಣಯುಕ್ತಗಳಾಗಿ ಕಪಿಲವರ್ಣಗಳಾಗಿ ಸುವರ್ಣಮಯವಾದ ಗೊರಸುಗಳುಳ್ಳವಾಗಿ ನ್ಯಾಯದಿಂದ ಸಂಪಾದಿಸಲ್ಪಟ್ಟವಾಗಿ ಕರುಗಳೊಡನೆ ಯುಕ್ತಗಳಾಗಿ ವಸ್ತ್ರಾಲಂಕಾರಮಾಲಿಕೆಗಳುಳ್ಳಂಥಾ ಗೋವುಗಳನ್ನು ದಾನಂಗೈದೆನು; ಮತ್ತು ಗುಣಶೀಲಯುಕ್ತರಾಗಿ ದಾರಿದ್ರ್ಯದಿಂದ ಕಷ್ಟಪಡುವವರಾಗಿ ಪತ್ನೀಪುತ್ರಾದಿಗಳುಳ್ಳವರಾಗಿ ಡಂಭಯುಕ್ತವಲ್ಲದ ಆಚಾರವುಳ್ಳವರಾಗಿ ತಪಸ್ಸಿನಿಂದ ಪ್ರಖ್ಯಾತರಾದವರಾಗಿ ವೇದಾಧ್ಯಯನಶೀಲರಾಗಿ ಯೌವನಸ್ಥರಾದ ಬ್ರಾಹ್ಮಣರಿಗೆ ಗೋ ಭೂ ಧನ ಗೃಹ ಅಶ್ವ ಗಜಗಳನ್ನೂ ದಾಸಿಯರೊಡನೆ ಯುಕ್ತರಾದ ಕನ್ಯಕೆಯರನ್ನೂ ತಿಲಗಳನ್ನೂ ರಜತವನ್ನೂ ಶಯನಗಳನ್ನೂ ವಸ್ತ್ರಗಳನ್ನೂ ರತ್ನಗಳನ್ನೂ ಗೃಹೋಪಕರಣಗಳನ್ನೂ ರಥಗಳನ್ನೂ ದಾನಂಗೈದೆನು; ಮತ್ತು ನನ್ನಿಂದ ಅನೇಕ ಯಜ್ಞಗಳು ಮಾಡಲ್ಪಟ್ಟವು; ವಾಪೀಕೂಪಾದಿಗಳು ಬಹಳವಾಗಿ ರಚಿಸಲ್ಪಟ್ಟವು! ಈರೀತಿ ಇರಲು ಪರಿಗ್ರಹಪರಾಙ್ಮುಖನಾದ ಒಬ್ಬ ಬ್ರಾಹ್ಮಣನ ಗೋವು ತಪ್ಪಿಸಿಕೊಂಡು ನನ್ನ ಗೋಸಮೂಹದಲ್ಲಿ ಕೂಡಿತು; ಅದನ್ನರಿಯದ ನನ್ನಿಂದ ಆ ಗೋವು ಒಬ್ಬ ಬ್ರಾಹ್ಮಣನಿಗೆ ಕೊಡಲ್ಪಟ್ಟಿತು; ಆ ಬ್ರಾಹ್ಮಣನಿಂದ ಆತನ ಆಶ್ರಮವನ್ನೈದಿಸಲ್ಪಡುತಿದ್ದ ಆ ಗೋವನ್ನು ಸ್ವತ್ತುಕರ್ತೃವಾದ ಬ್ರಾಹ್ಮಣನು ನೋಡಿ ಅದು ತನ್ನದೆಂದು ನುಡಿಯಲು ನನ್ನಿಂದ ಗ್ರಹಿಸಿದ ಬ್ರಾಹ್ಮಣನು ಅದು ನನ್ನಿಂದ ಕೊಡಲ್ಪಟ್ಟದ್ದರಿಂದ ಅದು ತನ್ನದೇ ಸರಿಯೆಂದು ನುಡಿದನು; ಅನಂತರದಲ್ಲಿ ಆ ಬ್ರಾಹ್ಮಣರಿಬ್ಬರೂ ವಿವಾದಂಗೈಯುತ ನನ್ನ ಸಮೀಪವನ್ನೈದಿ ನನ್ನನ್ನು ಕುರಿತು ಆ ಗೋವನ್ನು ನಾನು ದಾನಮಾಡಿದೆನೆಂದು ಪರಿಗ್ರಹಿಸಿದ ಬ್ರಾಹ್ಮಣನೂ ನಾನು ಅಪಹರಿಸಿದವನೆಂದು ಸ್ವತ್ತುಗಾರನಾದ ಬ್ರಾಹ್ಮಣನೂ ನುಡಿದರು; ಅದನ್ನು ಕೇಳಿ ನನಗೆ ಭ್ರಾಂತಿಯುಂಟಾಗಿ ಧರ್ಮಸಂಕಟದಲ್ಲಿ ತಗಲಿಕೊಂಡದ್ದರಿಂದ ಅವರಿಬ್ಬರನ್ನು ಕುರಿತು 'ಎಲೈ ಬ್ರಾಹ್ಮಣರೇ, ಒಂದು ಹೆಗೆಯುಳ್ಳ ಲಕ್ಷಗೋವುಗಳನ್ನು ನಾನು ಕೊಡುತ್ತೇನೆ; ಈ ಗೋವನ್ನು ಪುನಃ ನನಗೆ ಕೊಡೀ; ತಿಳಿಯದವನಾಗಿ ನಿಮ್ಮ ಕಿಂಕರನಾದ ನನ್ನನ್ನು ಅನುಗ್ರಹಿಸೀ; ಅಶುಚಿಯಾದ ನರಕದಲ್ಲಿ ಧರ್ಮಸಂಕಟದಿಂದ ಬೀಳುವ ನನ್ನನ್ನು ಉದ್ಧರಿಸೀ' ಎಂದು ಪ್ರಾರ್ಥಿಸಿದೆನು. ಸ್ವತ್ತುಕರ್ತೃವಾದ ದ್ವಿಜನು ಕೋಪದಿಂದ ತಾನು ಲಕ್ಷಗೋವನ್ನು ಪರಿಗ್ರಹಿಸುವದಿಲ್ಲವೆಂದು ಹೇಳಿ ಅಲ್ಲಿಂದ ತೆರಳಿದನು; ಪರಿಗ್ರಹಕರ್ತೃವಾದ ದ್ವಿಜನು ದುರಾಗ್ರಹವುಳ್ಳವನಾಗಿ ನನ್ನನ್ನು ಕುರಿತು ಆ ಗೋವನ್ನು ಬಿಟ್ಟು ಲಕ್ಷಗೋವುಗಳನ್ನಾದರೂ ಮತ್ತು ಹತ್ತುಸಾವಿರ ಗೋವುಗಳನ್ನಾದರೂ ಇಚ್ಛೈಸುವದಿಲ್ಲವೆಂದು ನುಡಿದು ತೆರಳಿದನು! ಎಲೈ ಜಗತ್ಪತಿಯಾಗಿ ದೇವೋತ್ತಮನಾದ ಶ್ರೀಕೃಷ್ಣ

ನೆ, ಕೆಲವು ಕಾಲದಮೇಲೆ ಯಮದೂತರಿಂದ ನಾನು ಯಮಪುರವನ್ನೈದಿಸಲ್ಪಟ್ಟೆನು ; ಯಮನು ನನ್ನನ್ನು ಕುರಿತು 'ಎಲೈ ಅರಸೆ, ನೀನು ಮೊದಲು ಪಾಪಫಲವನ್ನನುಭವಿಸಬೇಕೋ—ಅಲ್ಲದೆ ಪುಣ್ಯಫಲವನ್ನನುಭವಿಸಬೇಕೋ ಹೇಳು ; ನಾನು ನಿನ್ನ ದಾನಧರ್ಮಗಳಿಂದ ಸಾಧಿಸಲ್ಪಟ್ಟ ಪ್ರಕಾಶಮಾನವಾದ ಲೋಕದ ಅಂತವನ್ನು ಕಾಣೆನು' ಎಂದು ಕೇಳಿದನು ; ನಾನು ಯಮದೇವನನ್ನು ಕುರಿತು ಮೊದಲು ಪಾಪಫಲವನ್ನನುಭವಿಸುತ್ತೇನೆಂದು ನುಡಿಯಲು ಆತನು ನನ್ನನ್ನು ಭೂಮಿಯಲ್ಲಿ ಬೀಳಹೇಳಿದನು ; ಹಾಗೇ ಅಲ್ಲಿಂದ ಬೀಳುತಿದ್ದ ನಾನು ಹೆಂಟೆಗೊದ್ದವಾದೆನು ! ಎಲೈ ಶ್ರೀಹರಿಯೆ, ಬ್ರಾಹ್ಮಣಪ್ರಿಯನಾಗಿ ದಾತೃವಾಗಿ ನಿನ್ನ ದಾಸನಾಗಿ ನಿನ್ನ ದರ್ಶನವನ್ನೇ ಅಪೇಕ್ಷಿಸುತಿರುವ ನನಗೆ ಈಗಲೂ ಆ ಸ್ಮೃತಿಯು ನಷ್ಟವಾಗಲಿಲ್ಲ ! ಎಲೈ ಪ್ರಭುವಾದ ಶ್ರೀಕೃಷ್ಣನೆ, ಪರಮಾತ್ಮನಾಗಿ ಯೋಗೀಶ್ವರರಿಂದ ಉಪನಿಷತ್ತೆಂಬ ಚಕ್ಷುಸ್ಸಿನಿಂದ ನಿರ್ಮಲವಾದ ಹೃದಯದಲ್ಲಿ ಭಾವಿಸಲು ಯೋಗ್ಯನಾಗಿ ಇಂದ್ರಿಯಜನ್ಯವಾದ ಜ್ಞಾನವನ್ನು ಅಧೋಭಾಗವಾಗಿ ಮಾಡುವಂಥಾ ನೀನು ಸಂಸಾರನಿವೃತ್ತಿಯುಂಟಾಗಿರುವವನಿಗೆ ದೃಶ್ಯನಾಗಿರುವೆ ; ಇಂಥಾ ಕೃಕಲಾಸಜನ್ಮದಿಂದುಂಟಾದ ದುಃಖದಿಂದ ಮೂಢವಾದ ಬುದ್ಧಿಯುಳ್ಳ ನನಗೆ ಜಗದೀಶ್ವರನಾದ ನೀನು ಪ್ರತ್ಯಕ್ಷವಾದದ್ದು ಆಶ್ಚರ್ಯವು ! ದೇವೋತ್ತಮನಾಗಿ ಜಗತ್ಪತಿಯಾಗಿ ಗೋವಿಂದನಾಗಿ ಪುರುಷೋತ್ತಮನಾಗಿ ನಾರಾಯಣನಾಗಿ ಹೃಷೀಕೇಶನಾಗಿ ಸಜ್ಜನರಿಂದ ಶ್ಲಾಘಿಸಲ್ಪಡುವ ಅಚ್ಯುತನಾಗಿ ವ್ಯಯರಹಿತನಾದ ಶ್ರೀಕೃಷ್ಣನೆ, ದೇವಲೋಕವನ್ನೈದುವದಕ್ಕೆ ನನ್ನನ್ನಾಜ್ಞಾಪಿಸು ; ಎಲ್ಲಿದ್ದಾಗ್ಯೂ ನನ್ನ ಮನಸ್ಸು ನಿನ್ನ ಪಾದಾರವಿಂದಧ್ಯಾನದಲ್ಲೇ ಆಸಕ್ತವಾಗಿರುವಂತೆ ಅನುಗ್ರಹಿಸು ; ಸರ್ವಪ್ರಪಂಚೋತ್ಪತ್ತಿಗೆ ಕಾರಣನಾಗಿ ಬ್ರಹ್ಮರೂಪನಾಗಿ ಅನಂತಶಕ್ತಿಗಳುಳ್ಳ ವಾಸುದೇವನಾದ ನಿನಗೆ ನಮಸ್ಕಾರವು !" ಎಂದು ಪ್ರಾರ್ಥಿಸಿದನು.

ಎಲೈ ಅರಸೆ ಕೇಳು, ನೃಗರಾಯನು ಈರೀತಿ ಶ್ರೀಕೃಷ್ಣನನ್ನು ಕುರಿತು ವಿಜ್ಞಾಪಿಸಿ ಪ್ರದಕ್ಷಿಣಂಗೈದು ಕಿರೀಟದಿಂದ ಆತನ ಪಾದಪದ್ಮಗಳಿಗೆ ನಮಸ್ಕರಿಸಿ ಆತನಿಂದ ಅಜ್ಞಾಪಿಸಲ್ಪಟ್ಟು ಸಮಸ್ತ ಜನರೂ ನೋಡುತ್ತಿರಲು ಉತ್ತಮವಾದ ವಿಮಾನವನ್ನೇರಿ ಸ್ವರ್ಗಲೋಕವನ್ನೈದಿದನು ; ಆಮೇಲೆ ದೇವಕೀಪುತ್ರನಾಗಿ ಬ್ರಾಹ್ಮಣಪ್ರಿಯನಾಗಿ ದೇವೋತ್ತಮನಾಗಿ ಧರ್ಮಾತ್ಮನಾಗಿ ಭಗವಂತನಾದ ಶ್ರೀಕೃಷ್ಣನು ಲೋಕದಲ್ಲಿರುವ ಅರಸುಗಳನ್ನು ಶಿಕ್ಷಿಸುವದಕ್ಕೆಣಿಸಿ ತನ್ನ ಪರಿಜನವನ್ನು ಕುರಿತು "ಎಲೈ ಪುರುಷರುಗಳಿರಾ, ಬ್ರಹ್ಮಸ್ವತ್ತು ಸ್ವಲ್ಪವಾದರು ಭುಂಜಿಸಲ್ಪಟ್ಟರೆ ಅಗ್ನಿಗೆ ಸಮಾನನಾಗಿ ಅತಿ ತೇಜೋವಂತನಾದ ಪುರುಷನಿಂದಲಾದರೂ ಜೀರ್ಣಿಸಲು ಶಕ್ಯವಾಗುವದಿಲ್ಲ ; ಹೀಗಿರುವಲ್ಲಿ ನಾವೇ ಈಶ್ವರರೆಂದು ದುರಹಂಕಾರಯುಕ್ತರಾದ ಅರಸರಿಗೆ ಅದು ಜೀರ್ಣವಾಗುವದೇ ! ಪ್ರತಿಕ್ರಿಯೆಯುಳ್ಳಂಥಾ ವಿಷವನ್ನು ವಿಷವೆಂದು ತಿಳಿಯಬಾರದು ; ಬ್ರಹ್ಮಸ್ವತ್ತೇ ವಿಷವೆಂದು ಹೇಳಬೇಕು ; ಅದಕ್ಕೆ ಭೂಮಿಯಲ್ಲಿ ಪ್ರತಿಕ್ರಿಯೆಯಿಲ್ಲ ; ಮತ್ತು ವಿಷವು ತನ್ನನ್ನು ಭಕ್ಷಿಸುವ ಒಬ್ಬನನ್ನೇ ಸಂಹರಿಸುವದು ; ಅಗ್ನಿಯು ಜಲದಿಂದ ಶಾಂತವಾಗುವದು ; ಬ್ರಹ್ಮಸ್ವವೆಂಬ ಅರಣಿಯಿಂದ ಹುಟ್ಟಿದ ಅಗ್ನಿಯು ವಂಶವನ್ನು ಸಮೂಲವಾಗಿ ದಹಿಸುವದು ; ಯಥಾವಿಧಿಯಾಗಿ ಬ್ರಾಹ್ಮಣರ ಸಮ್ಮತಿಯಿಲ್ಲದೆ ಭುಂಜಿಸಲ್ಪಟ್ಟ ಬ್ರಹ್ಮಸ್ವತ್ತು ಪುತ್ರಪೌತ್ರರನ್ನೂ ಕೊಲ್ಲುವದು ; ರಾಜಾಶ್ರಯದಿಂದ ಬಲಾತ್ಕರಿಸಿ ಅನುಭವಿಸಲ್ಪಡುವ ಬ್ರಹ್ಮಸ್ವತ್ತು ಆ ಪುರುಷನ ಕುಲದಲ್ಲಿ ಹತ್ತುಮಂದಿ ಪೂರ್ವಪುರುಷರನ್ನೂ ಹತ್ತುಮಂದಿ ಉತ್ತರಪುರುಷರನ್ನೂ ದಹಿಸುವದು ; ಬ್ರಹ್ಮಸ್ವತ್ತನ್ನಪಹರಿಸುವವರು ನರಕವನ್ನು ಅಪೇಕ್ಷಿಸುವರು ; ಅಜ್ಞಾನಿಗಳಾಗಿ ರಾಜ್ಯಲಕ್ಷ್ಮಿಯಿಂದ ಅಂಧಕಪ್ರಾಯರಾಗಿರುವ ಅರಸರು ತಮಗೆ ಬ್ರಹ್ಮದ್ರೋಹದಿಂದುಂಟಾಗುವ ನರಕವನ್ನು ತಿಳಿಯುವದಿಲ್ಲ ; ಅಪಹರಿಸಲ್ಪಟ್ಟ ಜೀವನವೃತ್ತಿಗಳುಳ್ಳವರಾಗಿ ಉದಾರಿಗಳಾಗಿ ಕುಟುಂಬಿಗಳಾದ ಬ್ರಾಹ್ಮಣರು ಮತ್ತೊಂದು ಜೀವನೋಪಾಯವಿಲ್ಲದೆ ದುಃಖಪಟ್ಟರೆ ಅವರ ನೇತ್ರೋದಕಬಿಂದುಗಳು ಭೂಮಿಯಲ್ಲಿ ಎಷ್ಟು ರೇಣುಗಳನ್ನು ಗ್ರಹಿಸುವವೊ ಅಷ್ಟು ಸಂವತ್ಸರಗಳು ಅವರ ವೃತ್ತಿಗಳನ್ನಪಹರಿಸಿದ ಕರ್ಮಭ್ರಷ್ಟರಾದ ಅರಸರು ಕುಂಭೀಪಾಕವೆಂಬ ಮಹಾನರಕದಲ್ಲಿ ಯಮಕಿಂಕರರಿಂದ ಪಾಕಂಗೈಯಲ್ಪಡುವರು ; ಯಾವ ಅರಸನು ತನ್ನಿಂದಲಾದರೂ ಅನ್ಯರಿಂದಲಾದರೂ ಕೊಡಲ್ಪಟ್ಟ ಬ್ರಾಹ್ಮಣವೃತ್ತಿಯನ್ನಪಹರಿಸುವನೋ ಆ ಪು

ರುಷನು ಸಾವಿರ ವರುಷಗಳು ಮಲದಲ್ಲಿ ಕ್ರಿಮಿಯಾಗಿರುವನು; ಯಾವ ಬ್ರಾಹ್ಮಣ ಧನವನ್ನಪೇಕ್ಷಿಸುವ ಅರಸರು ಅಲ್ಪಾಯುಸ್ಸುಳ್ಳವರಾಗಿ ಶತ್ರುಗಳಿಂದ ಪರಾಜಿತರಾಗಿ ರಾಜ್ಯಭ್ರಷ್ಟರಾಗಿ ಕಡೆಯಲ್ಲಿ ಕ್ರೂರವಾದ ಸರ್ಪಗಳಾಗಿ ಹುಟ್ಟುವರೊ ಅಂಥಾ ಬ್ರಹ್ಮಸ್ವತ್ತು ನನಗೆ ಎಂದಿಗೂ ಸಂಭವಿಸದಿರಲಿ! ಎಲೈ ಪರಿಜನರೇ, ಬ್ರಾಹ್ಮಣನು ಅಪರಾಧಿಯಾದಾಗ್ಯೂ ಅವನಿಗೆ ನೀವು ದ್ರೋಹವನ್ನು ಮಾಡಬೇಡಿ; ನಿಮ್ಮನ್ನು ಪ್ರಹರಿಸುತಲೂ ಅತ್ಯಂತವಾಗಿ ಶಪಿಸುತಲೂ ಇರುವ ಬ್ರಾಹ್ಮಣನನ್ನಾದರೂ ನಿರಂತರವೂ ನಮಸ್ಕರಿಸುತ್ತಿರಿ; ಯಾವರೀತಿಯಿಂದ ನಾನು ನಿರಂತರದಲ್ಲಿಯೂ ಏಕಾಗ್ರಚಿತ್ತನಾಗಿ ಬ್ರಾಹ್ಮಣರಿಗೆ ನಮಸ್ಕರಿಸುತ್ತಿದ್ದೇನೆಯೋ ಅದೇರೀತಿಯಲ್ಲಿ ನೀವೂ ಅವರಿಗೆ ನಮಸ್ಕರಿಸುತ್ತಿರಿ! ಹಾಗೆ ಮಾಡುವದರಲ್ಲಿ ತಪ್ಪುವವನು ನನ್ನ ದಂಡನೆಗೆ ಯೋಗ್ಯನಾಗುವನು! ಬ್ರಾಹ್ಮಣನ ಗೋವೆಂದು ತಿಳಿಯದಿದ್ದ ನೃಗರಾಯನನ್ನೂ ನರಕದಲ್ಲಿ ಕೆಡಹಿದ ಬ್ರಹ್ಮಸ್ವತ್ತು ತನ್ನನ್ನಪಹರಿಸುವ ಯಂಥಾವನನ್ನಾದರೂ ನರಕದಲ್ಲಿ ಕೆಡಹುವದು" ಎಂದು ಧರ್ಮಸ್ವರೂಪವನ್ನು ಶ್ರವಣಗೈಸಿ ತನ್ನ ಗೃಹವನ್ನು ಪ್ರವೇಶಿಸಿದನು!

---

## ೬೫ನೇ ಅಧ್ಯಾಯ.

### ಬಲರಾಮನು ಗೋಪಿಯರೊಡನೆ ಕ್ರೀಡಿಸಿದ್ದು.

ಎಲೈ ಅರಸೆ ಕೇಳು, ಅನಂತರದಲ್ಲಿ ಭಗವಂತನಾದ ಬಲರಾಮನು ರಥವನ್ನೇರಿ ಮಿತ್ರರನ್ನು ನೋಡಲಿಚ್ಛೆಯುಳ್ಳವನಾಗಿ ನಂದಗೋಕುಲವನ್ನೈದಿ ಬಹುಕಾಲದಿಂದ ನೋಡಲಪೇಕ್ಷಿಸುತಿದ್ದ ಗೋಪಾಲಕರಿಂದಲೂ ಗೋಪಿಯರಿಂದಲೂ ಆಲಿಂಗನಗೈಯಲ್ಪಟ್ಟು ಯಶೋದಾನಂದರಿಗೆ ಅಭಿವಾದನಗೈದನು; ಅವರು ಸಂತೋಷಯುಕ್ತರಾಗಿ "ಎಲೈ ಜಗದೀಶ್ವರನಾದ ಹರಿಯೆ, ನೀನು ನಿನ್ನ ತಮ್ಮನೊಡನೆ ಕೂಡಿ ಅನೇಕಕಾಲವು ನಮ್ಮನ್ನು ರಕ್ಷಿಸು" ಎಂದು ಆಶೀರ್ವಾದಮಾಡಿ ತೊಡೆಯಲ್ಲಿ ಕುಳ್ಳರಿಸಿಕೊಂಡು ಆಲಿಂಗನಗೈದು ಆನಂದಬಾಷ್ಪಗಳಿಂದ ಅಭಿಷೇಕವನ್ನು ಮಾಡಿದರು; ಆ ಬಳಿಕ ಬಲರಾಮನು ವೃದ್ಧರಾದವರಿಗೆ ಅಭಿವಾದನಗೈದು ಕನಿಷ್ಟರಾದವರಿಂದ ಅಭಿವಾದನಗೈಯಲ್ಪಟ್ಟು ಅವರವರ ವಯಸ್ಸಿಗೂ ಮಿತ್ರತ್ವಕ್ಕೂ ಸಂಬಂಧಕ್ಕೂ ಅನುಗುಣವಾದಂತೆ ಆಯಾ ಗೋಪಾಲಕರನ್ನೈದಿ ಪರಿಹಾಸ ಹಸ್ತಗ್ರಹಣ ಮೊದಲಾದವುಗಳಿಂದ ಬಹುಮಾನಗೈದು ವಿಶ್ರಾಂತನಾಗಿ ಕುಳತಿರಲು ಶ್ರೀಕೃಷ್ಣನ ಪಾದಾರವಿಂದಗಳನ್ನೈದಲೋಸುಗ ತ್ಯಜಿಸಲ್ಪಟ್ಟ ಸಮಸ್ತ ವಿಷಯಗಳುಳ್ಳವರಾಗಿ ಪ್ರೀತಿಯುಕ್ತರಾದ ಗೋಪಾಲಕರು ರಾಮನಲ್ಲಿ ಪ್ರೇಮದಿಂದ ಗದ್ಗದಸ್ವರಯುಕ್ತವಾದ ವಚನಗಳಿಂದ ಆತನ ಆರೋಗ್ಯವನ್ನು ಕೇಳುತ "ಎಲೈ ರಾಮನೆ, ದೈವಯೋಗದಿಂದ ನಿನ್ನನ್ನು ತಿರಿಗೂ ನೋಡುವ ಭಾಗ್ಯವುಂಟಾಯಿತು; ನಮ್ಮ ಬಂಧುಗಳೆಲ್ಲರು ಅಲ್ಲಿ ಕ್ಷೇಮದಿಂದಿರುವರೆಯೋ! ಪತ್ನೀಪುತ್ರರೊಡಗೂಡಿರುವ ನೀವು ನಮ್ಮನ್ನು ಸ್ಮರಿಸುತ್ತಿದ್ದಿರೇ! ಎಲೈ ರಾಮನೆ, ದೈವಯೋಗದಿಂದ ಪಾಪಿಯಾದ ಕಂಸನು ನಿಮ್ಮಿಂದ ಸಂಹರಿಸಲ್ಪಟ್ಟನು; ಮಿತ್ರಜನರು ಬಂಧನದಿಂದ ಬಿಡಿಸಲ್ಪಟ್ಟರು; ದೈವಯೋಗದಿಂದಲೇ ನೀವು ಶತ್ರುಗಳನ್ನು ಸಂಹರಿಸಿ ಅರಸರನ್ನು ಜಯಿಸಿ ದುರ್ಗರೂಪವಾದ ದ್ವಾರಕಾಪುರವನ್ನು ಆಶ್ರಯಿಸಿದಿರಿ" ಎಂದು ನುಡಿದರು.

ಆವೇಳೆ ಬಲರಾಮನ ದರ್ಶನದಿಂದ ಸಂತೋಷಯುಕ್ತರಾಗಿ ಆತನ ಆದರಣೆಯೊಡಗೂಡಿದ ಗೋಪಸ್ತ್ರೀಯರು ನಗುತ ಆತನನ್ನು ಕುರಿತು "ಎಲೈ ಸ್ವಾಮಿಯೆ, ದ್ವಾರಕಾಪುರದಲ್ಲಿರುವ ಸ್ತ್ರೀಯರಿಗೆ ಅತಿಪ್ರಿಯನಾದ ಶ್ರೀಕೃಷ್ಣನು ಸುಖದಿಂದಿರುವನೆಯೋ? ದೀರ್ಘವಾದ ಭುಜಗಳುಳ್ಳ ಶ್ರೀಕೃಷ್ಣನು ಇಲ್ಲಿರುವ ಬಂಧುಗಳನ್ನು ಸ್ಮರಿಸುತ್ತಾನೆಯೋ? ತನ್ನ ಮಾತಪಿತೃಗಳಾದ ಯಶೋದಾನಂದರನ್ನಾದರೂ ಸ್ಮರಿಸುತ್ತಾನೆಯೋ? ನಮ್ಮಿಂದ ಗೈಯಲ್ಪಟ್ಟ ಸೇವೆಯನ್ನು ಸ್ಮರಿಸುತ್ತಾನೆಯೋ? ಎಲೈ ಪ್ರಭುವಾದ ರಾಮನೆ, ಮಾತಾಪಿತೃಗಳನ್ನೂ ಅಣ್ಣತಮ್ಮಂದಿರನ್ನೂ ಪುತ್ರರನ್ನೂ ಪತಿಗಳನ್ನೂ ಅತ್ತೆಮಾವಂದಿರನ್ನೂ ತ್ಯಜಿಸಲಶಕ್ಯವಾದ ಬಂಧುಗಳನ್ನೂ ಯಾವನಿಗೋಸ್ಕರ ತ್ಯಾಗಂ

ಗೈದಿವೊ ಅಂಥಾ ಶ್ರೀಕೃಷ್ಣನು ನಮ್ಮನ್ನು ಒಂದು ಕ್ಷಣದಲ್ಲಿ ಪರಿತ್ಯಾಗಂಗೈದು ತ್ಯಜಿಸಲ್ಪಟ್ಟ ಸ್ನೇಹವುಳ್ಳವನಾಗಿ ಇಲ್ಲಿಂದ ತೆರಳಿಹೋದನು ; ಸ್ತ್ರೀಯರಾದ ನಮ್ಮಿಂದ ಶ್ರೀಕೃಷ್ಣನ ಸವಿಮಾತಿನ ವಚನವು ಪ್ರಮಾಣಿಕವೆಂದು ಹ್ಯಾಗೆ ಅಂಗೀಕರಿಸಲ್ಪಡದೆ ಹೋಗುವದು ! ಆದಕಾರಣ ಆತನಲ್ಲಿ ವಿಶ್ವಾಸಂಗೈದೆವು ! ಎಲೈ ರಾಮನೆ, ಚತುರೆಯರಾದ ದ್ವಾರಕಾಪುರದ ಸ್ತ್ರೀಯರು ಚಪಲಚಿತ್ತರಾಗಿ ಕೃತಘ್ನನಾದ ಕೃಷ್ಣನ ವಚನವನ್ನು ಹ್ಯಾಗೆ ಅಂಗೀಕರಿಸುತ್ತಾರೆ !— —ಎಲೇ ಗೋಪಿಯರಿರಾ, ದ್ವಾರಕಾಪುರದ ಸ್ತ್ರೀಯರು ಸುಂದರವಾಗಿ ಮುಗುಳುನಗೆಯುಳ್ಳ ಅವನ ನೋಟದಿಂದ ವೃದ್ಧಿಹೊಂದಿದ ಮನ್ಮಥನಿಂದ ಪೀಡಿಸಲ್ಪಟ್ಟವರಾಗಿ ಮಧುರವಚನಗಳಲ್ಲಿ ಚತುರನಾದ ಕೃಷ್ಣನ ಸವಿನುಡಿಗಳನ್ನು ಅಂಗೀಕರಿಸುವರು !— — ಎಲೇ ಸಖಿಯರಿರಾ, ಕೃಷ್ಣನ ಕಥೆಯಿಂದ ನಮಗೇನುಫಲವು ! ಇತರ ಕಥೆಗಳನ್ನು ಹೇಳೀ ; ಆತನಿಗೆ ಯಾವರೀತಿ ನಮ್ಮನ್ನು ಹೊರ್ತು ಕಾಲವು ಕಳೆಯುತಲಿಧೆಯೊ ಅದೇರೀತಿ ನಮಗೂ ಅವನನ್ನು ಹೊರ್ತು ಕಾಲವು ಕಳೆಯಲೀ !" ಎಂದು ಒಬ್ಬೊಬ್ಬರೂ ಒಂದೊಂದು ಬಗೆಯಾಗಿ ನುಡಿದರು.

ಈರೀತಿ ಶ್ರೀಕೃಷ್ಣನ ಮುಗುಳುನಗೆಯನ್ನೂ ಮಧುರವಚನವನ್ನೂ ಸವಿನೋಟವನ್ನೂ ವಿಲಾಸಗಮನವನ್ನೂ ಪ್ರೇಮಯುಕ್ತವಾದ ಆಲಿಂಗನವನ್ನೂ ಸ್ಮರಿಸುತ ದುಃಖಿಸುತಿದ್ದ ಆ ಗೋಪಸ್ತ್ರೀಯರನ್ನು ನೋಡಿ ಭಗವಂತನಾಗಿ ನಾನಾಪ್ರಕಾರಗಳಾದ ಮಧುರವಚನಗಳಲ್ಲಿ ನಿಪುಣನಾದ ಬಲಭದ್ರನು ಕೃಷ್ಣನು ಹೇಳಿಕಳುಹಿಸಿದ ಮನೋಹರವಾದ ವಚನಗಳಿಂದ ಅವರನ್ನು ಸಮಾಧಾನಂಗೈಯುತ ಗೋಕುಲದಲ್ಲಿ ಚೈತ್ರವೈಶಾಖಗಳೆಂಬ ಎರಡು ತಿಂಗಳ ಕಾಲವು ವಾಸಮಾಡಿ ಆ ವಸಂತಋತುವಿನ ರಾತ್ರಿಗಳಲ್ಲಿ ಪೂರ್ಣಚಂದ್ರನ ಕಿರಣಗಳಿಂದ ಪ್ರಕಾಶಯುಕ್ತವಾಗಿ ಮಾಡಲ್ಪಟ್ಟ ನೈದಲೇಪುಷ್ಪಗಳ ಪರಿಮಳಯುಕ್ತವಾದ ವಾಯುವಿನಿಂದ ರಮಣೀಯವಾದ ಯಮುನಾತೀರದಲ್ಲಿರುವ ಒಂದು ಉಪವನದಲ್ಲಿ ಆ ಗೋಪಸ್ತ್ರೀಸಮೂಹಗಳಿಂದ ಸುತ್ತಲ್ಪಟ್ಟವನಾಗಿ ಕ್ರೀಡಿಸುತಿದ್ದನು ; ಆ ಸಮಯದಲ್ಲಿ ವಾರುಣೀ ಎಂಬ ಮಧ್ಯದೇವತೆಯು ವರುಣನಿಂದ ಪ್ರೇರಿಸಲ್ಪಟ್ಟವಳಾಗಿ ಒಂದು ವೃಕ್ಷದ ಪೊಟ್ರೆಯಿಂದ ಬೀಳುತ ಆ ಉಪವನವನ್ನು ತನ್ನ ಗಂಧದಿಂದ ಪರಿಮಳಯುಕ್ತವಾಗಿ ಮಾಡಲು ಬಲರಾಮನು ಆ ಮಧ್ಯೆಧಾರೆಯ ಗಂಧವನ್ನಾಘ್ರಾಣಿಸಿ ಅಲ್ಲಿಗೆ ಹೋಗಿ ಗೋಪಿಯರೊಡನೆ ಮದ್ಯಪಾನಂಗೈದು ಅವರೊಡನೆ ತಾನೂ ಗಾನಂಗೈಯುತ ಅನೇಕರಾದ ಆ ಗೋಪಿಯರ ಸಮೂಹದಲ್ಲಿ ಹೆಣ್ಣಾನೆಗಳ ಸಮೂಹದಲ್ಲಿರುವ ಐರಾವತದಂತೆ ಪ್ರಕಾಶಿಸುತ ಅವರಿಂದ ಗಾನಂಗೈಯಲ್ಪಡುವ ಚರಿತ್ರವುಳ್ಳವನಾಗಿ ಮತ್ತನಾಗಿ ಮದದಿಂದ ವ್ಯಾಕುಲವಾದ ನೇತ್ರಗಳುಳ್ಳವನಾಗಿ ಸಂಚರಿಸುತ ಉತ್ತಮವಾದ ರತ್ನಹಾರಗಳುಳ್ಳ ಕುಂಡಲವನ್ನು ಧರಿಸಿ ವೈಜಯಂತೀ ಎಂಬ ವನಮಾಲೆಯಿಂದ ಶೋಭಿತನಾಗಿ ಬೆಮರೆಂಬ ಹಿಮದಿಂದಲಂಕೃತನಾಗಿ ಮಂದಹಾಸಯುಕ್ತವಾದ ಮುಖಪದ್ಮವುಳ್ಳವನಾಗಿ ಜಲಕ್ರೀಡಾರ್ಥವಾಗಿ ಯಮುನಾನದಿಯನ್ನು ಕರೆದು ಆ ನದಿಯು ಬರದಿರಲು ಕೋಪಯುಕ್ತನಾಗಿ ಅದನ್ನು ನೇಗಲಿನ ಕೊನೆಯಿಂದ ಸೆಳೆದು "ಎಲೇ ದುಷ್ಟಳಾದ ಯಮುನೆಯೆ, ನೀನು ನನ್ನಿಂದ ಕರೆಯಲ್ಪಟ್ಟೂ ಯಾವಕಾರಣದಿಂದ ನನ್ನನ್ನು ತಿರಸ್ಕರಿಸಿ ಬರಲಿಲ್ಲವೋ ಆ ಕಾರಣದಿಂದ ಸ್ವತಂತ್ರಳಾದ ನಿನ್ನನ್ನು ನಾನು ನೇಗಲಿನ ಕೊನೆಯಿಂದ ಸಹಸ್ರಪ್ರಕಾರವಾಗಿ ಭೇದಿಸುತ್ತೇನೆ" ಅಂದನು.

ಯಮುನೆಯು ಬಲರಾಮನಿಂದ ಧಿಕ್ಕರಿಸಲ್ಪಟ್ಟವಳಾಗಿ ಭಯಪಟ್ಟು ಕಂಪಿಸುತ ಆತನ ಪಾದಗಳಲ್ಲಿ ಬಿದ್ದು "ಎಲೈ ಜಗತ್ಪತಿಯಾಗಿ ಮಹಾಭುಜನಾದ ರಾಮನೆ, ನಿನ್ನ ಅಂಶಭೂತನಾದ ಶೇಷನಿಂದ ಸಮಸ್ತ ಭೂಮಿಯೂ ಧರಿಸಲ್ಪಟ್ಟದೆ ; ಅಂಥಾ ನಿನ್ನ ಪರಾಕ್ರಮವನ್ನು ನಾನರಿಯದೆ ಹೋದೆನು ! ಎಲೈ ಸರ್ವಾತ್ಮನಾಗಿ ಭಕ್ತವತ್ಸಲನಾದ ಹರಿಯೆ, ಭಗವಂತನಾದ ನಿನ್ನ ಉತ್ಕೃಷ್ಟಪ್ರಭಾವವನ್ನರಿಯದವಳಾಗಿ ನಿನ್ನನ್ನು ಶರಣುಹೊಂದಿರುವ ನನ್ನನ್ನು ಬಿಡು" ಎಂದು ಯಾಚಿಸಿದಳು.

ಅನಂತರದಲ್ಲಿ ಬಲರಾಮನು ಯಮುನೆಯನ್ನು ಬಿಟ್ಟು ಹೆಣ್ಣಾನೆಗಳೊಡನೆ ಕೂಡಿದ ಗಜೇಂದ್ರನಂತೆ ಆ ಗೋಪಿಯರೊಡಗೂಡಿ ಯಮುನಾಜಲವನ್ನು ಪ್ರವೇಶಿಸಿ ಮನಸ್ಸುಬಂದಂತೆ ಜಲಕ್ರೀಡೆಯಂಗೈದು ತೀರವನ್ನೈದಿ ತನ

ಗೋಸ್ಕರ ಲಕ್ಷ್ಮಿಯು ನೀಲದುಕೂಲಗಳನ್ನೂ ಬೆಲೆಯಿಲ್ಲದ ಭೂಷಣಗಳನ್ನೂ ಶುಭಕರವಾದ ಮಾಲೆಯನ್ನೂ ಕೊಡಲು ಅವುಗಳನ್ನು ಧರಿಸಿ ಅಲಂಕೃತನಾಗಿ ಚಂದನಾದಿಗಳಿಂದ ಅನುಲೇಪನಂಗೈಯಲ್ಪಟ್ಟು ಐರಾವತದಂತೆ ಪ್ರಕಾಶಿಸಿದನು! ಎಲೈ ಅರಸೆ, ಯಮುನೆಯು ಈಗಲೂ ಸೆಳೆಯಲ್ಪಟ್ಟ ಮಾರ್ಗದಿಂದ ಅಪಾರವಾದ ವೀರ್ಯವುಳ್ಳ ಬಲರಾಮನ ಪರಾಕ್ರಮವನ್ನು ಸೂಚಿಸುವಂತೆ ಕಾಣಲ್ಪಡುತ್ತಾಳೆ! ಈರೀತಿ ನಂದಗೋಕುಲದಲ್ಲಿ ಗೋಪಿಯರ ವಿಲಾಸಗಳಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವನಾಗಿ ರಮಿಸುತ್ತಿದ್ದ ಬಲರಾಮನಿಗೆ ಅನೇಕ ರಾತ್ರಿಗಳು ಒಂದು ರಾತ್ರಿಯಂತೆ ಕಳೆದವು.

## ೬೬ನೇ ಅಧ್ಯಾಯ.

### ಪೌಂಡ್ರಕಾದಿಗಳ ವಧೆ.

ಎಲೈ ಅರಸೆ ಕೇಳು, ಬಲರಾಮನು ನಂದಗೋಕುಲವನ್ನೈದಲು ಕರೂಶ ದೇಶಾಧಿಪತಿಯಾಗಿ ಅಜ್ಞನಾದ ಪೌಂಡ್ರಕನು ಆತನೇ ವಾಸುದೇವನೂ ಭಗವಂತನೂ ಜಗತ್ಪತಿಯೂ ಲೋಕದಲ್ಲಿ ಲೀಲೆಯಿಂದ ಅವತರಿಸಿದವನೂ ಎಂದು ನುಡಿಯುತ್ತಿದ್ದ ಅಜ್ಞರಾದ ಜನರ ಸ್ತುತಿಯಿಂದ ಪ್ರೋತ್ಸಾಹಿಸಲ್ಪಟ್ಟು ತಾನೇ ಶ್ರೀಹರಿಯೆಂದೆಣಿಸಿ ಬಾಲಕರ ಕ್ರೀಡಾಕಾಲದಲ್ಲಿ ಒಬ್ಬ ಬಾಲಕನು ರಾಜನೆಂದು ಕಲ್ಪಿಸಲ್ಪಡುವ ರೀತಿಯಲ್ಲಿ ಅಜ್ಞರಿಂದ ಹರಿಯೆಂದು ಕಲ್ಪಿಸಲ್ಪಟ್ಟು ದ್ವಾರಕಾಪುರದಲ್ಲಿ ಸ್ಫುಟವಾದ ಗತಿಯುಳ್ಳ ಶ್ರೀಕೃಷ್ಣನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದನು ; ಆ ದೂತನು ದ್ವಾರಕಾಪುರವನ್ನೈದಿ ಮಹಾಸಭೆಯಲ್ಲಿ ಕುಳಿತಿದ್ದ ಪ್ರಭುವಾಗಿ ಪದ್ಮದಳಕ್ಕೆ ಸಮಾನವಾದ ನೇತ್ರಗಳುಳ್ಳ ಶ್ರೀಕೃಷ್ಣನನ್ನು ಕುರಿತು " ಲೋಕಗಳನ್ನನುಗ್ರಹಿಸಲೋಸುಗ ಅವತರಿಸಿರುವ ಶ್ರೀವಾಸುದೇವನು ನಾನೊಬ್ಬನೇ ಹೊರ್ತು ಮತ್ತೊಬ್ಬನಿಲ್ಲ ; ನೀನು ಅನೃತವಾದ ವಾಸುದೇವನೆಂಬ ನಾಮಧೇಯವನ್ನು ಬಿಡು ; ನೀನು ಅಜ್ಞಾನದಿಂದ ಭಯವಿಲ್ಲದೆ ಧರಿಸಿರುವ ನನ್ನ ಶಂಖಚಕ್ರಾದಿ ಚಿಹ್ನೆಗಳನ್ನು ಬಿಟ್ಟು ನನ್ನನ್ನು ಶರಣುಹೊಂದು ; ಇಲ್ಲದಿದ್ದರೆ ಯುದ್ಧವನ್ನು ಕೊಡು " ಎಂದು ಪೌಂಡ್ರಕನು ಹೇಳಿ ಕಳುಹಿಸಿದನೆಂದು ನುಡಿದನು.

ಎಲೈ ಅರಸೆ, ಉಗ್ರಸೇನನು ಮೊದಲಾದ ಸಭಾಜನರು ಅಲ್ಪಬುದ್ಧಿಯುಳ್ಳ ಪೌಂಡ್ರಕನ ಆತ್ಮಸ್ತುತಿರೂಪವಾದ ವಚನವನ್ನು ಕೇಳಿ ಘಟ್ಟಿಯಾಗಿ ನಕ್ಕರು ; ಭಗವಂತನಾದ ಶ್ರೀಕೃಷ್ಣನು ಹಾಸ್ಯಪ್ರಸ್ತಾಪಾನಂತರದಲ್ಲಿ ಆ ದೂತನನ್ನು ಕುರಿತು ಪೌಂಡ್ರಕನಿಗೆ ಹೇಳುವಂತೆ " ಎಲೇ ಮೂಢನೆ, ಯಾವ ಚಕ್ರಾದಿ ಚಿಹ್ನೆಗಳಿಂದ ನೀನು ಆತ್ಮಸ್ತುತಿಯನ್ನು ಗೈಯುತ್ತಿದ್ದೀಯೋ ಆ ಚಿಹ್ನೆಗಳನ್ನು ನಿನ್ನಲ್ಲೇ ತ್ಯಾಗಂಗೈಯುತ್ತೇನೆ! ಎಲೇ ಅಜ್ಞನೆ, ನೀನು ಯುದ್ಧದಲ್ಲಿ ನನ್ನಿಂದ ಸಂಹರಿಸಲ್ಪಟ್ಟು ಆತ್ಮಪ್ರಶಂಸೆಯಂಗೈವ ಮುಖವನ್ನು ಮುಚ್ಚಿಕೊಂಡು ಕಂಕ ಗೃಧ್ರ ವಲಾಹಕಗಳೆಂಬ ಪಕ್ಷಿಗಳಿಂದ ಸುತ್ತಿಕೊಳ್ಳಲ್ಪಟ್ಟು ಭೂಮಿಯಲ್ಲಿ ಮಲಗಿಕೊಂಡು ಶುನಕಗಳಿಗೆ ಆಶ್ರಯನಾಗುವೆ! " ಎಂದು ನುಡಿದು ಆ ಅರ್ಥವನ್ನು ಪೌಂಡ್ರಕನಿಗೆ ಹೇಳಹೇಳಿದನು.

ಅನಂತರದಲ್ಲಿ ಆ ದೂತನು ಅಲ್ಲಿಂದ ಹೋಗಿ ಕೃಷ್ಣನು ಹೇಳಿದ ತಿರಸ್ಕಾರವಚನವನ್ನು ಸಮಗ್ರವಾಗಿ ಪೌಂಡ್ರಕನಿಗೆ ತಿಳಿಸಿದನು ; ಕೃಷ್ಣನು ರಥವನ್ನೇರಿ ಕಾಶೀಪುರವನ್ನೈದಿದನು ; ಮಹಾರಥನಾದ ಪೌಂಡ್ರಕನು ಕೃಷ್ಣನ ಯುದ್ಧಸನ್ನಾಹವನ್ನು ತಿಳಿದು ಎರಡು ಅಕ್ಷೋಹಿಣೀ ಸೇನೆಗಳೊಡನೆ ಕಾಶಿಯಿಂದ ಹೊರಟನು ; ಅವನಿಗೆ ಮಿತ್ರನಾಗಿ ಕಾಶೀಪುರಕ್ಕೆ ಅಧಿಪತಿಯಾದ ಅರಸನು ಸಹಾಯವಾಗಿ ಮೂರುಅಕ್ಷೋಹಿಣೀ ಸೇನೆಗಳೊಡನೆ ಹೊರಟನು ; ಅನಂತರದಲ್ಲಿ ಶ್ರೀಕೃಷ್ಣನು ಶಂಖ ಚಕ್ರ ಗದಾ ಶಾರ್ಙ್ಗ ಶ್ರೀವತ್ಸಗಳು ಮೊದಲಾದ ಚಿಹ್ನೆಗಳೊಡನೆ ಯುಕ್ತನಾಗಿ ಕೌಸ್ತುಭಮಣಿಯನ್ನು ಧರಿಸಿದವನಾಗಿ ವನಮಾಲೆಯಿಂದ ಅಲಂಕೃತನಾಗಿ ಪೀತಾಂಬರಗಳನ್ನುಟ್ಟುಕೊಂಡು ಕೃತ್ರಿಮವಾದ ಗರುಡನನ್ನು ಧ್ವಜದಲ್ಲಿರಿಸಿಕೊಂಡು ಬೆಲೆಯಿಲ್ಲದ ಕಿರೀಟವೂ ಆಭರಣಗಳೂ ಉಳ್ಳವನಾಗಿ ಹೊಳೆಯುವ

ಮಕರಕುಂಡಲಗಳುಳ್ಳವನಾಗಿ ತನಗೆ ಸಮಾನವಾದ ಅಲಂಕಾರವುಳ್ಳವನಾಗಿ ಕೃತ್ರಿಮವಾದ ಗರುಡನನ್ನೇರಿ ನಾಟ್ಯಸ್ಥಾನವನ್ನೈದಿರುವ ನಟನಂತೆ ಯುದ್ಧರಂಗವನ್ನೈದಿದ ಪೌಂಡ್ರಕನನ್ನು ನೋಡಿ ಅತ್ಯಂತವಾಗಿ ನಕ್ಕನು; ಆಗ ಶತ್ರುಭಟರು ಶೂಲಗಳಿಂದಲೂ ಗದೆಗಳಿಂದಲೂ ಶಕ್ತಿಗಳಿಂದಲೂ ಪ್ರಾಸಗಳಿಂದಲೂ ತೋಮರಗಳಿಂದಲೂ ಖಡ್ಗಗಳಿಂದಲೂ ಕಠಾರಿಗಳಿಂದಲೂ ಬಾಣಗಳಿಂದಲೂ ಶ್ರೀಕೃಷ್ಣನನ್ನು ಪ್ರಹರಿಸಿದರು; ಶ್ರೀಕೃಷ್ಣನು ಗಜಾಶ್ವ, ರಥ ಪದಾತಿಗಳೆಂಬ ಚತುರಂಗಬಲಗಳೊಡನೆ ಯುಕ್ತವಾದ ಪೌಂಡ್ರಕ-ಕಾಶೀರಾಯರ ಮಹಾಸೇನೆಯನ್ನು ಗದಾ ಖಡ್ಗ ಚಕ್ರ ಬಾಣಗಳಿಂದ ಯುಗಾಂತರದಲ್ಲಿ ಚತುರ್ವಿಧವಾದ ಭೂತಸಮೂಹವನ್ನು ದಹಿಸುವ ಕಾಲಾಗ್ನಿಯಂತೆ ನಿಶ್ಶೇಷವಾಗಿ ಸಂಹರಿಸಿದನು; ಆಗ ಶ್ರೀಕೃಷ್ಣನ ಚಕ್ರದಿಂದ ಛೇದಿಸಲ್ಪಟ್ಟ ರಥ ಅಶ್ವ ಗಜ ಪದಾತಿಗಳಿಂದಲೂ ಖರ ಉಷ್ಟ್ರಗಳಿಂದಲೂ ವ್ಯಾಪಿಸಲ್ಪಟ್ಟದ್ದಾಗಿ ಮಾನವಂತರಾದ ಶೂರರಿಗೆ ಸಂತೋಷಕರವಾಗಿಯೂ ಆಶ್ಚರ್ಯಕರವಾಗಿಯೂ ಇದ್ದ ಆ ಯುದ್ಧಸ್ಥಾನವು ಕಲ್ಪಾಂತದಲ್ಲಿ ರುದ್ರನ ಕ್ರೀಡಾಸ್ಥಾನದಂತೆ ಪ್ರಕಾಶಿಸಿತು! ಅನಂತರದಲ್ಲಿ ಶ್ರೀಕೃಷ್ಣನು ಪೌಂಡ್ರಕನನ್ನು ಕುರಿತು "ಎಲೇ ಪೌಂಡ್ರಕನೆ, ನೀನು ದೂತಮುಖದಿಂದ ನನ್ನನ್ನು ಕುರಿತು ಯಾವವನ್ನು ಕೇಳಿದೆಯೊ ಆ ಅಸ್ತ್ರಗಳನ್ನು ನಿನಗೋಸ್ಕರ ಬಿಡುತ್ತೇನೆ! ಎಲೇ ಮೂಢನೆ, ನಿನ್ನಿಂದ ಅನೃತವಾಗಿ ಧರಿಸಲ್ಪಟ್ಟ ವಾಸುದೇವನೆಂಬ ನಾಮಧೇಯವನ್ನು ಈಗ ಬಿಡಿಸುತ್ತೇನೆ; ನಾನು ಅಸಮರ್ಥನಾಗಿ ಯುದ್ಧವನ್ನು ಬಿಟ್ಟರೆ ಆಗ ಮೂಢನಾದ ನಿನ್ನನ್ನು ಶರಣುಹೊಂದುತ್ತೇನೆ" ಎಂದು ನುಡಿದು ತೀಕ್ಷ್ಣಗಳಾದ ಬಾಣಗಳಿಂದ ಪೌಂಡ್ರಕನನ್ನು ರಥಹೀನನಾಗಿ ಮಾಡಿ ಇಂದ್ರನು ವಜ್ರಾಯುಧದಿಂದ ಪರ್ವತ ಶಿಖರವನ್ನು ಛೇದಿಸುವ ರೀತಿಯಲ್ಲಿ ಚಕ್ರದಿಂದ ಪೌಂಡ್ರಕನ ಶಿರಸ್ಸನ್ನು ಛೇದಿಸಿ ಅದೇರೀತಿ ಬಾಣಗಳಿಂದ ಕಾಶೀರಾಯನ ಶಿರಸ್ಸನ್ನೂ ಛೇದಿಸಿ ಪದ್ಮಕೋಶವನ್ನು ವಾಯುವು ಮುರಿದಾಕುವಂತೆ ಅವನ ಶಿರಸ್ಸನ್ನು ಕಾಶೀಪುರದಲ್ಲಿ ಕೆಡಹಿ ಸಿದ್ಧರಿಂದ ಗಾನಂಗೈಯಲ್ಪಡುವ ಚರಿತ್ರವುಳ್ಳವನಾಗಿ ದ್ವಾರಕಾಪುರಕ್ಕೆ ತೆರಳಿದನು! ಅರಸಾದ ಎಲೈ ಪರೀಕ್ಷಿದ್ರಾಯನೆ, ನಿರಂತರವಲ್ಲಿಯು ಭಗವಂತನ ಧ್ಯಾನದಿಂದ ಪರಿಹರಿಸಲ್ಪಟ್ಟ ಸಮಸ್ತ ಬಂಧಗಳುಳ್ಳವನಾಗಿ ಶ್ರೀಹರಿಯ ರೂಪವನ್ನು ಧರಿಸಿದ್ದ ಪೌಂಡ್ರಕನು ಕೃಷ್ಣನಿಂದ ಸಂಹೃತನಾಗಿ ಶ್ರೀಹರಿಯ ಸಾಯುಜ್ಯವನ್ನೈದಿದನು!

ಅನಂತರದಲ್ಲಿ ಕಾಶೀಪುರಸ್ತರಾದ ಜನರು ರಾಜದ್ವಾರದಲ್ಲಿ ಬಿದ್ದಿದ್ದ ಕುಂಡಲಯುಕ್ತವಾದ ಶಿರಸ್ಸನ್ನು ನೋಡಿ ಅದು ಯಾರ ಶಿರಸ್ಸೆಂದು ಸಂಶಯಪಡುತ್ತಿರಲು ಕಾಶೀರಾಯನ ಪತ್ನಿಯರೂ ಬಾಂಧವರೂ ಪುರಜನರೂ ತಮ್ಮ ಅರಸನ ವೃತ್ತಾಂತವನ್ನು ಕೇಳಿ ಅನಾಥರಾಗಿ "ಎಲೈ ನಾಥನೆ, ಎಲೈ ಪ್ರಭುವೆ" ಎಂದು ದುಃಖಿಸಿದರು; ಕಾಶೀರಾಯನ ಪುತ್ರನಾಗಿ ಅತಿ ಧಾರ್ತ್ಯವಾದ ಸುದಕ್ಷಿಣನು ತಂದೆಗೆ ಸ್ವರ್ಗಸಾಧಕವಾದ ಕರ್ಮವನ್ನು ಮಾಡಿ ಪಿತೃವೈರಿಯಾದ ಕೃಷ್ಣನನ್ನು ಸಂಹರಿಸಿ ತಂದೆಗೆ ಸಂತೋಷವನ್ನುಂಟುಮಾಡಬೇಕೆಂದು ನಿಶ್ಚಯಿಸಿ ಪುರೋಹಿತನೊಡಗೂಡಿ ಪರಮಸಮಾಧಿಯಿಂದ ಪರಮೇಶ್ವರನನ್ನು ಪೂಜಿಸಿದನು; ಪರಮೇಶ್ವರನು ಸಂತುಷ್ಟನಾಗಿ ಸುದಕ್ಷಿಣನನ್ನು ಕುರಿತು ಆತನಿಗೆ ಇಷ್ಟವಾದ ವರವೇನೆಂದು ಕೇಳಲು ಪಿತೃಸಂಹಾರಕನಾದ ಕೃಷ್ಣವಧೋಪಾಯವನ್ನೆ ಇಷ್ಟವಾದ ವರವಾಗಿ ಅಪೇಕ್ಷಿಸಿದನು; ಈಶ್ವರನು ಆ ವಚನವನ್ನು ಕೇಳಿ "ಎಲೈ ಸುದಕ್ಷಿಣನೆ, ಋತ್ವಿಕ್ಕಿನಂತೆ ನಿನ್ನ ಆಜ್ಞೆಯನ್ನಾಚರಿಸುವ ದಕ್ಷಿಣಾಗ್ನಿಯನ್ನು ಬ್ರಾಹ್ಮಣರೊಡನೆ ಚನ್ನಾಗಿ ಅಭಿಚಾರಕವಿಧಾನದಿಂದ ಪೂಜಿಸು; ಆ ಅಗ್ನಿಯು ಪ್ರಮಥಗಣಗಳಿಂದ ಸುತ್ತಲ್ಪಟ್ಟವನಾಗಿ ಬ್ರಾಹ್ಮಣಪ್ರಿಯನಲ್ಲದ ಪುರುಷನಲ್ಲಿ ನಿನ್ನಿಂದ ಪ್ರಯೋಗಿಸಲ್ಪಟ್ಟವನಾಗಿ ನಿನ್ನ ಇಷ್ಟಾರ್ಥವನ್ನು ಸಾಧಿಸುವನು" ಎಂದು ನುಡಿದನು.

ಈ ರೀತಿ ಶಿವನಿಂದ ಅಜ್ಞಾಪಿಸಲ್ಪಟ್ಟ ಸುದಕ್ಷಿಣನು ನಿಯಮಯುಕ್ತವಾಗಿ ಶ್ರೀಕೃಷ್ಣನಿಗೋಸ್ಕರ ಅಭಿಚಾರಕರ್ಮಸಂಗ್ಯುಕ್ತ ದಕ್ಷಿಣಾಗ್ನಿಯನ್ನು ಪೂಜಿಸಿದನು; ಅನಂತರದಲ್ಲಿ ಆ ಹೋಮಕುಂಡದ ದೆಸೆಯಿಂದ ಅಗ್ನಿಯು ಆಕೃತಿಯುಕ್ತನಾಗಿ ಅತಿ ಭಯಂಕರನಾಗಿ ಅತಿ ತಪ್ತವಾದ ತಾಂಬ್ರದಂತೆ ಕೆಂಪಾದ ಶಿಖೆಯೂ ಗಡ್ಡ ಮೀಸೆಯೂ ಉಳ್ಳವನಾಗಿ ಕೆಂಡಗಳನ್ನುದಿರಿಸುತ್ತಿರುವ ನೇತ್ರಗಳುಳ್ಳವನಾಗಿದ್ದು ಕೋರದಾಡೆಗಳಿಂದಲೂ ಭಯಂಕರವಾದ ಹು

ಬ್ಬಿಗೆಂಟುಗಳಿಂದಲೂ ಕ್ರೂರವಾದ ಮುಖವುಳ್ಳವನಾಗಿ ನಾಲಿಗೆಯಿಂದ ಕಟಬಾಯಿಗಳನ್ನು ನೆಕ್ಕುತ ದಿಗಂಬರನಾಗಿ ತ್ರಿಶೂಲವನ್ನು ತಿರುಗಿಸುತ ತಾಳವೃಕ್ಷಪ್ರಮಾಣವಾದ ಪಾದಗಳಿಂದ ಭೂಮಿಯನ್ನು ಕಂಪಿಸುವಂತೆ ಮಾಡುತ ಭೂತಗಣಗಳಿಂದ ಸುತ್ತಲ್ಪಟ್ಟವನಾಗಿ ದಿಕ್ಕುಗಳನ್ನು ದಹಿಸುತ ದ್ವಾರಕಾಪುರವನ್ನು ಕುರಿತು ಓಡಿದನು ; ಆ ಪುರದಲ್ಲಿದ್ದ ಜನರು ಅಭಿಚಾರಕ ಕರ್ಮಪ್ರಯುಕ್ತವಾದ ಆ ಅಗ್ನಿಯನ್ನು ಕಂಡು ಮೃಗಗಳು ವನದಹನದಲ್ಲಿ ಭಯಪಟ್ಟು ಓಡುವ ರೀತಿಯಲ್ಲಿ ಭಯಪಟ್ಟು ಓಡಿ ರಾಜಸಭೆಯಲ್ಲಿ ಪಗಡೆಯಾಡುತಿದ್ದ ಶ್ರೀಕೃಷ್ಣನನ್ನು ಕುರಿತು "ಎಲೈ ತ್ರಿಲೋಕೇಶ್ವರನೆ, ದಹಿಸುತಲಿರುವ ಅಗ್ನಿಯ ದೆಶೆಯಿಂದ ದ್ವಾರಕಾಪುರವನ್ನು ರಕ್ಷಿಸು" ಎಂದು ವಿಜ್ಞಾಪಿಸಿದರು.

ಅನಂತರದಲ್ಲಿ ರಕ್ಷಕನಾದ ಶ್ರೀಕೃಷ್ಣನು ಆ ಜನರ ದೀನವಚನವನ್ನು ಕೇಳಿಯೂ ಬಂಧುಗಳ ಭಯವನ್ನು ನೋಡಿಯೂ ನಗುತ "ಎಲೈ ಜನರುಗಳಿರಾ, ಭಯಪಡಬೇಡಿ ; ನಾನು ರಕ್ಷಿಸುತ್ತೇನೆ" ಎಂದು ಅಭಯವನ್ನಿತ್ತನು ; ಸಮಸ್ತ ಪ್ರಪಂಚದ ಒಳಗೂ ಹೊರಗೂ ಸಾಕ್ಷಿರೂಪನಾಗಿರುವ ಶ್ರೀಕೃಷ್ಣನು ಈಶ್ವರಪ್ರಯುಕ್ತವಾದ ಆ ಅಗ್ನಿಯನ್ನು ತಿಳಿದು ಅದನ್ನು ಪರಿಹರಿಸಲೋಸುಗ ಪಾರ್ಶ್ವದಲ್ಲಿದ್ದ ಚಕ್ರಕ್ಕೆ ಅಜ್ಞಾಪಿಸಿದನು ; ಕೋಟಿಸೂರ್ಯ ಸಮಾನವಾದ ಆ ಚಕ್ರವು ಶ್ರೀಕೃಷ್ಣನ ಆಜ್ಞೆಯಿಂದ ಜ್ವಲಿಸುತಿರುವ ಪ್ರಳಯಾಗ್ನಿ ಸಮಾನವಾದ ಕಾಂತಿಯುಳ್ಳದ್ದಾಗಿ ತನ್ನ ತೇಜಸ್ಸಿನಿಂದ ಆಕಾಶವನ್ನೂ ದಿಕ್ಕುಗಳನ್ನೂ ಭೂಲೋಕ ಸ್ವರ್ಗಲೋಕಗಳನ್ನೂ ಪ್ರಕಾಶಗೈಸುತ ಆ ಅಗ್ನಿಯನ್ನು ಪೀಡಿಸಲು ಅಭಿಚಾರ ಕರ್ಮಸಾಧಕವಾಗಿ ಬಿಡಲ್ಪಟ್ಟ ಆ ಅಗ್ನಿಯು ಶ್ರೀಕೃಷ್ಣನ ಚಕ್ರಾಯುಧದ ತೇಜಸ್ಸಿನಿಂದ ಪೀಡಿಸಲ್ಪಟ್ಟು ಭಗ್ನವಾದ ಮುಖವುಳ್ಳದ್ದಾಗಿ ಹಿಂದಿರುಗಿ ಕಾಶೀಪುರವನ್ನೈದಿ ಋತ್ವಿಕ್ಕುಗಳೊಡನೆ ಕೂಡಿದ್ದ ಸುದಕ್ಷಿಣನನ್ನೇ ದಹಿಸಿತು ; ಶ್ರೀಕೃಷ್ಣನ ಚಕ್ರಾಯುಧವು ಆ ಅಗ್ನಿಯೊಡನೆ ಕಾಶೀಪುರವನ್ನು ಪ್ರವೇಶಿಸಿ ಕೋಟೆಯಿಂದಲೂ ಸಭಾಸ್ಥಾನಗಳಿಂದಲೂ ಅಂಗಡೀಬೀದಿಗಳಿಂದಲೂ ಗೃಹಗಳಿಂದಲೂ ಪುರದ್ವಾರಗಳಿಂದಲೂ ಕೊತ್ತಲಗಳಿಂದಲೂ ಗಜ ಅಶ್ವ ಆಯುಧ ರಥಶಾಲೆಗಳಿಂದಲೂ ಕೂಡಿದ ಆ ಕಾಶೀಪುರವನ್ನು ಸಮಗ್ರವಾಗಿ ದಹಿಸಿ ಅಲ್ಲಿಂದ ತಿರಿಗಿ ಮನೋಹರವಾದ ಚರಿತ್ರವುಳ್ಳ ಶ್ರೀಕೃಷ್ಣನ ಪಾರ್ಶ್ವದಲ್ಲಿತ್ತು ! ಯಾವ ಪುರುಷನು ಕೃಷ್ಣನ ಪರಾಕ್ರಮವನ್ನು ಏಕಾಗ್ರಚಿತ್ತನಾಗಿ ಶ್ರವಣಂಗೈವನೊ—ಮತ್ತೊಬ್ಬರಿಗೆ ಶ್ರವಣಂಗೈಸುವನೊ ಆ ಪುರುಷನು ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು.

---

## ೬೭ನೇ ಅಧ್ಯಾಯ.

## ದ್ವಿವಿದನ ವಧೆ.

[ಪರೀಕ್ಷಿದ್ರಾಯನು ಶುಕಮುನಿಯನ್ನು ಕುರಿತು—ಎಲೈ ಶುಕಮುನಿಯೆ, ಬಲರಾಮನು ಯಾವ್ಯಾವ ವ್ಯಾಪಾರವಂಗೈದನು ? ಆಶ್ಚರ್ಯಕರವಾದ ಚರಿತ್ರವುಳ್ಳವನಾಗಿ ಅನಂತನಾಗಿ ಅಪ್ರಮೇಯನಾದ ಆ ರಾಮನ ಚರಿತ್ರಗಳನ್ನು ಕೇಳಲಿಚ್ಛೈಸುತ್ತೇನೆ—ಎಂದು ಕೇಳಿದನು.]

ಆ ವಚನವನ್ನು ಕೇಳಿ ಶುಕಮುನಿಯು—ಎಲೈ ಅರಸೇ ಕೇಳು, ನರಕಾಸುರನಿಗೆ ಮಿತ್ರನಾಗಿ ಸುಗ್ರೀವನಿಗೆ ಮಂತ್ರಿಯಾದ ಮೈಂದನಿಗೆ ತಮ್ಮನಾಗಿ ಪರಾಕ್ರಮವಂತನಾದ ದ್ವಿವಿದನೆಂಬ ಒಬ್ಬ ವಾನರನಿದ್ದನು ; ಆತನು ತನ್ನ ಮಿತ್ರನಾದ ನರಕಾಸುರನ ಋಣವನ್ನು ಕಳೆಯಲೋಸುಗ ದೇಶೋಪದ್ರವವುಂಟಾಗುವ ರೀತಿಯಲ್ಲಿ ಪುರಗಳನ್ನೂ ಗ್ರಾಮಗಳನ್ನೂ ಆಕರಗಳನ್ನೂ ಹಳ್ಳಿಗಳನ್ನೂ ಅಗ್ನಿಯನ್ನಿಟ್ಟು ದಹಿಸುತಲೂ ಪರ್ವತಗಳನ್ನು ಕಿತ್ತು ಅವುಗಳಿಂದ ದೇಶಗಳನ್ನು ಚೂರ್ಣಂಗೈಯುತಲೂ ತನ್ನ ಮಿತ್ರನಾದ ನರಕನನ್ನು ಸಂಹರಿಸಿದ ಶ್ರೀಕೃಷ್ಣನ ದೇಶಗಳನ್ನೈದಿ ಅತ್ಯಂತವಾಗಿ ಆ ದೇಶಗಳನ್ನು ಉಪದ್ರವಪಡಿಸುತಿದ್ದನು ; ಹತ್ತುಸಾವಿರ ಗಜಗಳ ಬಲವುಳ್ಳ ಆ ದ್ವಿವಿದನು ಬಾದು ಸಮಯದಲ್ಲಿ ಸಮುದ್ರಮಧ್ಯದಲ್ಲಿ ನಿಂತು ಭುಜಗಳಿಂದ ಜಲವನ್ನೆರಚಿ ಸಮುದ್ರತೀರದಲ್ಲಿದ್ದ ದೇಶಗ

ಳನ್ನು ಮುಳುಗಿಸಿದನು; ಮತ್ತು ದುಷ್ಟನಾದ ದ್ವಿವಿದನು ಋಷಿಶ್ರೇಷ್ಠರ ಆಶ್ರಮಗಳಲ್ಲಿದ್ದ ವೃಕ್ಷಗಳನ್ನು ಮುರಿದು ಆಹವನೀಯಾದಿ ಅಗ್ನಿಗಳಲ್ಲಿ ಮಲಮೂತ್ರವಿಸರ್ಜನಂಗೈಯುತ ಕ್ರಿಮಿಯಂತೆಯೂ ತುಂಬಿಯಂತೆಯೂ ಸ್ತ್ರೀಪುರುಷರನ್ನು ಪರ್ವತ ಕಮರಿಗಳಲ್ಲಿರುವ ಗುಹೆಗಳಲ್ಲಿ ಕೂಡಿಸಿ ಆ ಗುಹೆಗಳನ್ನು ಪರ್ವತಶಿಖರಗಳಿಂದ ಮುಚ್ಚುತ್ತಿದ್ದನು; ಈರೀತಿ ದೇಶಗಳನ್ನು ಪೀಡಿಸುತಲೂ ಕುಲಸ್ತ್ರೀಯರ ಮಾನಭಂಗವನ್ನು ಮಾಡುತಲೂ ದ್ವಿವಿದನು ಒಂದು ಸಮಯದಲ್ಲಿ ಮನೋಹರವಾದ ಗಾನಮಂ ಕೇಳಿ ರೈವತಪರ್ವತವನ್ನೈದಿ ಅಲ್ಲಿ ಕಮಲಮಾಲೆಯನ್ನು ಧರಿಸಿ ನೋಡಲು ಯೋಗ್ಯವಾದ ಸಮಸ್ತ ಅವಯವಗಳುಳ್ಳ ಸಹಸ್ರಸ್ತ್ರೀಯರ ಮಧ್ಯದಲ್ಲಿ ಕುಳಿತು ಮದ್ಯಪಾನಂಗೈದು ಗಾನವನ್ನು ಮಾಡುತ ಮದದಿಂದ ಜಲಡಗಳಾದ ನೇತ್ರಗಳುಳ್ಳ ಶರೀರದಿಂದ ಹೊಳೆಯುತ ಮದ್ದಾನೆಯಂತೆ ಮತ್ತನಾಗಿದ್ದ ಯಾದವಶ್ರೇಷ್ಠನಾದ ಬಲರಾಮನನ್ನು ಕಂಡು ವೃಕ್ಷಗಳನ್ನೇರಿ ವೃಕ್ಷಗಳನ್ನು ಕಂಪಿಸುವಂತೆ ಮಾಡುತಲೂ ತನ್ನನ್ನು ಪ್ರಕಾಶಂಗೈಯುತಲೂ ಕಿಲಕಿಲಶಬ್ದವನ್ನು ಮಾಡಿದನು; ಸ್ವಭಾವದಿಂದ ಚಪಲರಾಗಿ ಹಾಸ್ಯಪ್ರಿಯರಾಗಿ ಬಲಭದ್ರನಿಂದ ಪರಿಗ್ರಹಿಸಲ್ಪಟ್ಟಿದ್ದ ಆ ಸ್ತ್ರೀಯರು ಆ ಕಪಿಯ ಧೈರ್ಯವನ್ನು ನೋಡಿ ನಕ್ಕರು; ದ್ವಿವಿದನು ತನ್ನನ್ನು ನೋಡುತಿದ್ದ ಬಲರಾಮನನ್ನು ಗಣನೆಮಾಡದೆ ಆ ಸ್ತ್ರೀಯರಿಗೆ ತನ್ನ ಗುದಸ್ಥಾನವನ್ನು ತೋರಿಸುತ ಭ್ರೂವಿಕ್ಷೇಪಗಳಿಂದಲೂ ಮುಖಾದಿಗಳಿಂದಲೂ ಆ ಸ್ತ್ರೀಯರನ್ನವಮಾನಂಗೈದನು; ಅನಂತರದಲ್ಲಿ ಶೂರರೊಳಗೆ ಶ್ರೇಷ್ಠನಾದ ಬಲರಾಮನು ಅತಿ ಕೋಪಯುಕ್ತನಾಗಿ ಒಂದು ಪಾಷಾಣದಿಂದ ಪ್ರಹರಿಸಲು ಧೂರ್ತನಾದ ದ್ವಿವಿದನು ಆ ಶಿಲಾಪ್ರಹಾರವನ್ನು ತಪ್ಪಿಸಿಕೊಂಡು ಮದ್ಯಕಲಶವನ್ನು ಗ್ರಹಿಸಿ ಬಲರಾಮನಿಗೆ ಕೋಪವನ್ನುಂಟುಮಾಡುತಲೂ ನಗುತಲೂ ನಿಂದಿಸುತಲೂ ಆ ಘಟವನ್ನೊಡೆದು ಆ ಸ್ತ್ರೀಯರ ವಸ್ತ್ರಗಳನ್ನು ಸೆಳೆದು ಹರಿದು ಮದೋದ್ಧತನಾಗಿ ರಾಮನನ್ನು ತೃಣೀಕರಿಸಿ ತಿರಸ್ಕಾರಂಗೈದನು; ಅನಂತರದಲ್ಲಿ ಬಲರಾಮನು ಆ ಕಪಿಯ ದುಷ್ಟತ್ವವನ್ನೂ ಅವನಿಂದ ಪೀಡಿತಗಳಾದ ದೇಶಗಳನ್ನೂ ನೋಡಿ ಕೋಪಯುಕ್ತನಾಗಿ ದ್ವಿವಿದನನ್ನು ಸಂಹರಿಸಲೆಣಿಸಿ ಮುಸಲವನ್ನೂ ಹಲಾಯುಧವನ್ನೂ ಹಿಡಿದನು; ಮಹಾ ಪರಾಕ್ರಮವಂತನಾದ ದ್ವಿವಿದನು ಒಂದು ಸಾಲವೃಕ್ಷವನ್ನು ಕಿತ್ತಿಕೊಂಡು ವೇಗದಿಂದ ಎದುರಾಗಿ ಹೋಗಿ ರಾಮನ ಶಿರಸ್ಸಿನಲ್ಲಿ ಕಡಹಿದನು; ಬಲರಾಮನು ತನ್ನ ಶಿರಸ್ಸಿನ ಮೇಲೆ ಬೀಳುತಿದ್ದ ಪರ್ವತಸಮಾನವಾದ ಆ ವೃಕ್ಷವನ್ನು ಪರಿಗ್ರಹಿಸಿ ಮುಸಲದಿಂದ ದ್ವಿವಿದನನ್ನು ಹೊಡೆದನು; ಮುಸಲಾಯುಧದಿಂದ ಹೊಡೆಯಲ್ಪಟ್ಟ ಶಿರೋಮಧ್ಯವುಳ್ಳವನಾಗಿ ದ್ವಿವಿದನು ಆ ಪ್ರಹಾರವನ್ನು ಗಣನೆಮಾಡದೆ ಕೆಂಪಾದ ಗೈರಿಕಾಧಾತುವಿನಿಂದ ಮೆರೆಯುವ ಪರ್ವತದಂತೆ ರಕ್ತಧಾರೆಯಿಂದ ಒಪ್ಪುತ ಮತ್ತೊಂದು ವೃಕ್ಷವನ್ನು ಕಿತ್ತು ಪರಾಕ್ರಮದಿಂದ ಪತ್ರರಹಿತವಾಗಿಮಾಡಿ ಅದರಿಂದ ರಾಮನನ್ನು ಹೊಡೆದನು; ಬಲರಾಮನು ಕ್ರೋಧಯುಕ್ತನಾಗಿ ಆ ವೃಕ್ಷವನ್ನು ಸಹಸ್ರಪ್ರಕಾರವಾಗಿ ಛೇದಿಸಿದನು; ದ್ವಿವಿದನು ಮತ್ತೊಂದು ವೃಕ್ಷವನ್ನು ಕಿತ್ತು ಅದರಿಂದ ಆತನನ್ನು ಪ್ರಹರಿಸಿ ಈರೀತಿ ಭಗವಂತನಾದ ರಾಮನೊಡನೆ ಯುದ್ಧಂಗೈಯುತ ಅನೇಕ ವೃಕ್ಷಗಳು ಭಗ್ನವಾಗಲು ನಾಲ್ಕುಕಡೆಯಲ್ಲಿಯೂ ಇರುವ ವೃಕ್ಷಗಳನ್ನು ಕಿತ್ತು ಆ ವನವನ್ನು ವೃಕ್ಷರಹಿತವಾಗಿ ಮಾಡಿ ಅನಂತರದಲ್ಲಿ ಕೋಪಯುಕ್ತನಾಗಿ ಬಲರಾಮನಮೇಲೆ ಶಿಲಾವರ್ಷವನ್ನು ಕರೆದನು; ಬಲರಾಮನು ಮುಸಲಾಯುಧವನ್ನು ಧರಿಸಿ ಲೀಲೆಯಿಂದ ಆ ಶಿಲೆಗಳನ್ನು ಚೂರ್ಣವಾಗಿ ಮಾಡಿದನು; ದ್ವಿವಿದನು ತಾಳವೃಕ್ಷಕ್ಕೆ ಸಮಾನವಾದ ತನ್ನ ಭುಜಗಳನ್ನು ನೀಡಿ ಮುಷ್ಟಿಗಳನ್ನು ಧರಿಸಿಕೊಂಡು ಬಲರಾಮನ ಸಮೀಪವನ್ನೈದಿ ಮುಷ್ಟಿಗಳಿಂದ ಆತನ ವಕ್ಷಸ್ಥಳದಲ್ಲಿ ಪ್ರಹರಿಸಿದನು; ಬಲರಾಮನು ಮುಸಲಾಯುಧವನ್ನೂ ಹಲಾಯುಧವನ್ನೂ ಬಿಟ್ಟು ಕೋಪಯುಕ್ತನಾಗಿ ತನ್ನ ಬಾಹುಗಳಿಂದ ದ್ವಿವಿದನ ಕಂಠಭುಜಗಳ ಮೂಲಪ್ರದೇಶದಲ್ಲಿ ಬಲದಿಂದ ಪ್ರಹರಿಸಲು ದ್ವಿವಿದನು ರಕ್ತವನ್ನು ವಮನಂಗೈಯುತ ಭೂಮಿಯಲ್ಲಿ ಬಿದ್ದನು! ಎಲೈ ಅರಸೆ, ಆ ಸಮಯದಲ್ಲಿ ಕೆಳಗೆಬಿದ್ದ ದ್ವಿವಿದನ ಶರೀರದಿಂದ ರೈವತಕ ಪರ್ವತವು ಜಲಯುಕ್ತಗಳಾದ ರಂಧ್ರಗಳುಳ್ಳದ್ದಾಗಿಯೂ ವೃಕ್ಷಗಳೊಡನೆ ಯುಕ್ತವಾಗಿಯೂ ಮಹಾ ವಾಯುವಿನಿಂದ ಜಲದಲ್ಲಿ ಚಲಿಸುವ ಓಡೆಯಂತೆ ಕಂಪಿಸಿತು! ಆಗ ಅಂತರಿಕ್ಷದಲ್ಲಿ ಪುಷ್ಪವರ್ಷವನ್ನು ವರ್ಷಿಸುತಿದ್ದ ಸಿದ್ಧ ಚಾರಣ ಮುನಿಶ್ರೇಷ್ಠರ ಜಯಶಬ್ದವೂ ನಮಃಶಬ್ದವೂ ಆ ದುಷ್ಟನ ಸಂಹಾರವೂ ಬಹು ಚನ್ನಾ

ಮಿತೆಂಬ ಶಬ್ದವೂ ಆವಿರ್ಭವಿಸಿದವು! ಭಗವಂತನಾದ ಬಲರಾಮನು ಲೋಕವನ್ನು ನಾಶಗೈಯುತ್ತಿದ್ದ ದ್ವಿವಿದನನ್ನು ಈರೀತಿ ಸಂಹರಿಸಿ ಸಮಸ್ತ ಜನರಿಂದಲೂ ಸ್ತೋತ್ರಗೈಯಲ್ಪಡುತ ದ್ವಾರಕಾಪುರವನ್ನೈದಿದನು!

---

## ೬೮ ನೇ ಅಧ್ಯಾಯ.

### ಬಲರಾಮನು ಹಸ್ತಿನಾಪುರವನ್ನು ಕೆಳೆದದ್ದು.

ಎಲೈ ಅರಸೆ, ಯುದ್ಧದಲ್ಲಿ ಜಯಶೀಲನಾಗಿ ಜಾಂಬವತೀಪುತ್ರನಾದ ಸಾಂಬನು ಸ್ವಯಂವರಮಹೋತ್ಸವದಲ್ಲಿ ದುರ್ಯೋಧನನ ಪುತ್ರಿಯಾದ ಲಕ್ಷಣಾದೇವಿಯನ್ನಪಹರಿಸಿದನು; ಕೌರವರು ಕೋಪಯುಕ್ತರಾಗಿ "ದುಷ್ಟನಾದ ಸಾಂಬನು ನಮ್ಮನ್ನು ತೃಣೀಕರಿಸಿ ತನ್ನಲ್ಲಿ ಅಪೇಕ್ಷೆಯಿಲ್ಲದ ನಮ್ಮ ಕನ್ಯಕೆಯನ್ನು ಬಲಾತ್ಕಾರದಿಂದ ಅಪಹರಿಸಿದ್ದರಿಂದ ಆತನನ್ನು ಬಂಧಿಸಬೇಕು; ನಮ್ಮಿಂದ ಸಂಪಾದಿಸಿ ಕೊಡಲ್ಪಟ್ಟ ಭೂಮಿಯನ್ನಾಳುವಂಥಾ ಯಾದವರು ನಮ್ಮನ್ನೇನುಮಾಡ್ಯಾರು? ಯಾದವರು ನಮ್ಮಿಂದ ಬಂಧಿಸಲ್ಪಟ್ಟ ಪುತ್ರನಾದ ಸಾಂಬನ ವೃತ್ತಾಂತವನ್ನು ಕೇಳಿ ಇಲ್ಲಿಗೆ ಬಂದರೆ ಆಕ್ಷಣದಲ್ಲೇ ನಷ್ಟವಾದ ದರ್ಪವುಳ್ಳವರಾಗಿ ಪ್ರಾಣಾಯಾಮಾದಿಗಳಿಂದ ನಿಗ್ರಹಿಸಲ್ಪಟ್ಟ ಇಂದ್ರಿಯಗಳಂತೆ ಉಪಶಾಂತಿಯನ್ನೈದುವರು" ಎಂದು ನಿಶ್ಚಯಿಸಿ ಕರ್ಣನು ಶಲನು ಭೂರಿಯು ಯಜ್ಞಕೇತುವು ದುರ್ಯೋಧನನು ಭೀಷ್ಮನು ಇವರಾರುಮಂದಿ ವೀರರು ಧೃತರಾಷ್ಟ್ರನ ಸಮ್ಮತಿಯಿಂದ ಸಾಂಬನನ್ನು ಬಂಧಿಸಲೋಸುಗ ಪ್ರಯತ್ನಗೈದರು; ಮಹಾರಥಿಕನಾದ ಸಾಂಬನು ತನ್ನನ್ನಟ್ಟಿಕೊಂಡು ಬರುತ್ತಿದ್ದ ಕೌರವರನ್ನು ನೋಡಿ ಮನೋಹರವಾದ ಧನುಸ್ಸನ್ನಿಡಿದು ಹುಲ್ಲೆಗಳೆದುರಲ್ಲಿರುವ ಸಿಂಹದಂತೆ ಅವರಿಗೆದುರಾಗಿ ನಿಂತನು; ಆಗ ಕರ್ಣನು ಮೊದಲಾದವರಾರುಮಂದಿ ವೀರರು ಸಾಂಬನನ್ನಿಡಿಯಬೇಕೆಂದು ಕೋಪಯುಕ್ತರಾಗಿ ನಿಲ್ಲುನಿಲ್ಲೆಂದು ಕೂಗುತ ಧನುರ್ಧಾರಿಗಳಾಗಿ ಸಾಂಬನನ್ನೈದಿ ಬಾಣಗಳಿಂದ ಪ್ರಹರಿಸಿದರು! ಎಲೈ ಅರಸೇ ಕೇಳು: ಆಗ ಕೋಪಯುಕ್ತನಾದ ಸಾಂಬನು ಸಿಂಹವು ನೀಚಮೃಗಗಳಿಂದ ಮಾಡಲ್ಪಟ್ಟ ಅವಮಾನವನ್ನು ಸಹಿಸದರೀತಿಯಲ್ಲಿ ಕೌರವರಿಂದ ಮಾಡಲ್ಪಟ್ಟ ಅವಮಾನವನ್ನು ಸಹಿಸದೆ ಧನುಷ್ಟಾಂಕಾರವನ್ನು ಮಾಡಿ ಕರ್ಣಾದಿಗಳಾದ ಅವರಾರುಮಂದಿಯನ್ನು ಆರು ಬಾಣಗಳಿಂದ ಪ್ರತ್ಯೇಕಪ್ರತ್ಯೇಕವಾಗಿ ಏಕಕಾಲದಲ್ಲಿ ಪ್ರಹರಿಸಿ ನಾಲ್ಕುನಾಲ್ಕು ಬಾಣಗಳಿಂದ ಅವರವರ ರಥಕ್ಕೆ ಕಟ್ಟಿದ ನಾಲ್ಕು ನಾಲ್ಕು ಅಶ್ವಗಳನ್ನೂ ಒಂದೊಂದು ಬಾಣದಿಂದ ಒಬ್ಬೊಬ್ಬ ಸಾರಥಿಯನ್ನೂ ಮಹಾವೀರರಾದ ಆ ರಥಿಕರನ್ನೂ ಪ್ರಹರಿಸಿದನು; ಕರ್ಣಾದಿಗಳು ಸಾಂಬನ ಯುದ್ಧವ್ಯಾಪಾರವನ್ನು ನೋಡಿ ಸನ್ಮಾನಗೈದು ನಾಲ್ಕುಮಂದಿ ಕೂಡಿ ಸಾಂಬನ ನಾಲ್ಕು ರಥಾಶ್ವಗಳನ್ನೂ ಕೊಂದು ಅವನನ್ನು ರಥರಹಿತನನ್ನಾಗಿ ಮಾಡಿದರು; ಐದನೇ ರಥಿಕನು ಅವನ ಸಾರಥಿಯನ್ನು ಕೊಂದನು; ಮತ್ತೊಬ್ಬನು ಅವನ ಧನುಸ್ಸನ್ನು ಛೇದಿಸಿದನು; ಈರೀತಿ ಯುದ್ಧದಲ್ಲಿ ಸಾಂಬನನ್ನು ಬಲರಹಿತನಾಗಿ ಮಾಡಿ ಅತಿ ಪ್ರಯಾಸದಿಂದ ಅವನನ್ನು ಬಂಧಿಸಿ ಜಯವುಳ್ಳವರಾಗಿ ಸಾಂಬನನ್ನೂ ದುರ್ಯೋಧನನ ಪುತ್ರಿಯಾದ ಲಕ್ಷಣಾದೇವಿಯನ್ನೂ ಕರೆದುಕೊಂಡು ಹಸ್ತಿನಾಪುರವನ್ನು ಪ್ರವೇಶಿಸಿದರು!

ಎಲೈ ಅರಸೆ, ಅನಂತರದಲ್ಲಿ ಯಾದವರು ನಾರದಮುನಿಯಿಂದ ಸಾಂಬನ ವೃತ್ತಾಂತವನ್ನು ಕೇಳಿ ಕ್ರೋಧಯುಕ್ತರಾಗಿ ಉಗ್ರಸೇನರಾಯನಿಂದ ಪ್ರೇರಿಸಲ್ಪಟ್ಟವರಾಗಿ ಕೌರವರನ್ನು ಜಯಿಸಲು ಪ್ರಯತ್ನಗೈದರು; ಕಲಿಕಲ್ಮಷವನ್ನು ಪರಿಹರಿಸುವ ಬಲರಾಮನು ಕೌರವರಿಗೂ ಯಾದವರಿಗೂ ಪರಸ್ಪರವಾಗಿ ಸಂಭವಿಸುವ ಯುದ್ಧವನ್ನು ಸಮ್ಮತಿಸದೆ ಯುದ್ಧಸನ್ನದ್ಧರಾದ ಯಾದವರನ್ನು ಸಮಾಧಾನಗೈದು ಗ್ರಹಗಳಿಂದ ಕೂಡಿದ ಸೂರ್ಯನಂತೆ ಬ್ರಾಹ್ಮಣರಿಂದಲೂ ಕುಲವೃದ್ಧರಿಂದಲೂ ಸುತ್ತಲ್ಪಟ್ಟವನಾಗಿ ಸೂರ್ಯತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ ರಥದಿಂದ ಹಸ್ತಿನಾಪುರವನ್ನೈದಿ ಆ ಪುರದ ಹೊರಗಿದ್ದ ಒಂದು ಉದ್ಯಾನವನದಲ್ಲಿ ನಿಂತು ಧೃತರಾಷ್ಟ್ರರಾಯನ ತಾತ್ಪರ್ಯವನ್ನು ತಿಳಿಯುವ ಇಚ್ಛೆಯಿಂದ ಉದ್ಧವನನ್ನು ಕಳುಹಿಸಿದನು; ಉದ್ಧವನು ಹಸ್ತಿನಾಪುರವನ್ನೈದಿ ಧೃತರಾಷ್ಟ್ರ

ಭೀಷ್ಮ ಬಾಹ್ಲಿಕ ದ್ರೋಣ ದುರ್ಯೋಧನರನ್ನು ಕುರಿತು ಯಥಾವಿಧಿಯಾಗಿ ಅಭಿವಾದನಗೈದು ಬಲರಾಮನು ಬಂದಿರುವದನ್ನು ನುಡಿದನು ; ಧೃತರಾಷ್ಟ್ರಾದಿಗಳು ಅತ್ಯಂತ ಇಷ್ಟನಾದ ಬಲರಾಮನು ಬಂದಿರುವದನ್ನು ಕೇಳಿ ಅತಿ ಸಂತೋಷಯುಕ್ತರಾಗಿ ಉದ್ಧವನನ್ನು ಯಥಾವಿಧಿಯಿಂದ ಪೂಜಿಸಿ ಉಪಚಾರದ್ರವ್ಯಗಳನ್ನು ತೆಗೆಸಿಕೊಂಡು ನ್ಯಾಯಪೂರ್ವಕವಾಗಿ ಬಲರಾಮನನ್ನೆದುರುಗೊಂಡು ಕುಶಲಪ್ರಶ್ನೆಮಾಡಿ ಅರ್ಘ್ಯಾದಿಗಳನ್ನು ಸಮರ್ಪಿಸಿ ಧೃತರಾಷ್ಟ್ರಾದಿಗಳು ವೃದ್ಧರಾದಾಗ್ಯು ಆ ರಾಮನ ಪ್ರಭಾವವನ್ನು ತಿಳಿದವರಾದಕಾರಣ ಆತನಿಗೆ ನಮಸ್ಕರಿಸಿದರು ; ಬಲರಾಮನು ಅನ್ಯೋನ್ಯವಾಗಿ ಯೋಗಕ್ಷೇಮ ಪ್ರಶ್ನೆಯಂಗೈದು ಅವರಿಂದ ಹೇಳಲ್ಪಟ್ಟ ಬಂಧುಗಳ ಯೋಗಕ್ಷೇಮವನ್ನು ಕೇಳಿ ಧೈರ್ಯಯುಕ್ತವಾದ ವಚನಗಳಿಂದ "ಎಲೈ ಕೌರವರುಗಳಿರಾ, ಬಹುಮಂದಿಯಾದ ನೀವು ಧಾರ್ಮಿಕನಾಗಿ ಒಬ್ಬನಾದ ಸಾಂಬನನ್ನು ಅಧರ್ಮದಿಂದ ಜಯಿಸಿ ಬಂಧಿಸಿದಿರಿ ; ಅದನ್ನು ನಾನು ಬಂಧುಗಳು ಒಂದಾಗಿರಬೇಕೆಂಬ ಇಚ್ಛೆಯಿಂದ ಸಹಿಸಿಧೇನೆ ; "ಈಗ ಶೀಘ್ರವಾಗಿ ಸಾಂಬನನ್ನು ಕರತಂದು ನನಗೆ ಒಪ್ಪಿಸೀ" ಎಂದು ಉಗ್ರಸೇನ ರಾಯನು ಹೇಳಿದಂತೆ ನುಡಿದನು.

ಕೌರವರು ಪ್ರಭಾವ ಉತ್ಸಾಹಬಲದಿಂದ ಉದ್ಧತವಾದ ತನ್ನ ಶಕ್ತಿಗೆ ಅನುಗುಣವಾದ ಬಲರಾಮನ ವಚನವನ್ನು ಕೇಳಿ ಅತಿ ಕೋಪಯುಕ್ತರಾಗಿ "ಎಲೈ ನೋಡಿದಿರೇ, ಪಾದರಕ್ಷೆಯು ಕಿರೀಟದಿಂದ ಸೇವಿಸಲ್ಪಡುವ ಶಿರಸ್ಸನ್ನಾರೋಹಣಂಗೈಯಲಿಚ್ಛೈಸುವಂತಾಯಿತು ; ಕಾಲಗತಿಯಿಂದ ಅತಿಕ್ರಮಿಸಲಶಕ್ಯವಾದ ಈ ವ್ಯಾಪಾರವು ಅತ್ಯಾಶ್ಚರ್ಯವಲ್ಲವೆ ! ನಮ್ಮ ಆಜ್ಞಾನುಸಾರಿಗಳಾದ ಯಾದವರು ನಮಗೆ ಆಜ್ಞಾಪಿಸುವವರಾದರು ; ಅವರು ತಮ್ಮ ಕುಲದಲ್ಲಿ ಜನಿಸಿದ ಒಬ್ಬ ಕುಂತಿಯನ್ನು ಕೊಟ್ಟು ನಮ್ಮ ಸಂಬಂಧವನ್ನು ಮಾಡಿದಕಾರಣ ನಮ್ಮೊಡನೆ ಸಹಶಯನವೂ ಸಮಪೀಠವೂ ಸಹಭೋಜನವೂ ಉಳ್ಳವರಾಗಿ ನಮ್ಮಿಂದ ಕೊಡಲ್ಪಟ್ಟ ಸಿಂಹಾಸನವುಳ್ಳವರಾಗಿ ನಮ್ಮ ಸಮಾನತ್ವವನ್ನೈದಿದರು ; ನಮಗೆ ಆಗ್ರಹವಿಲ್ಲದ್ದರಿಂದ ಚಾಮರ ವ್ಯಜನ ಜಯಶಂಖ ಶ್ವೇತಛತ್ರ, ಕಿರೀಟ ಸಿಂಹಾಸನಾದಿಗಳನ್ನು ಅನುಭವಿಸುತಿರ್ಧಾರೆ ; ನಮ್ಮ ಪ್ರಸಾದದಿಂದ ವೃದ್ಧಿಹೊಂದಿ ಈಗ ಲಜ್ಜೆಯಿಲ್ಲದವರಾಗಿ—ಕಟಕಟಾ—ನಮ್ಮನ್ನೇ ಆಜ್ಞಾಪಿಸುತ್ತಾರೆ ; ಯಾದವರಿಗೆ ನಮ್ಮಿಂದ ಕೊಡಲ್ಪಟ್ಟ ಚಾಮರಾದಿ ರಾಜಚಿಹ್ನೆಗಳು ಸರ್ಪಗಳಿಗೆ ಕೊಡಲ್ಪಟ್ಟ ಅಮೃತದಂತೆ ಕೊಟ್ಟವರಿಗೇ ಪ್ರತಿಕೂಲಗಳಾದವು ; ಆದಕಾರಣ ಇನ್ನುಮೇಲೆ ಚಾಮರಾದಿ ರಾಜಚಿಹ್ನೆಗಳು ಸಾಕು ; ಕುರಿಯು ಸಿಂಹದಿಂದ ಗ್ರಾಸಂಗೈಯಲ್ಪಟ್ಟ ವಸ್ತುವನ್ನು ಸ್ವೀಕರಿಸಲು ಸಮರ್ಥವಾಗಲಾರದ ರೀತಿಯಲ್ಲಿ ಇಂದ್ರನಾದರೂ ಭೀಷ್ಮ ದ್ರೋಣಾರ್ಜುನರು ಮೊದಲಾದವರುಳ್ಳ ಕೌರವರಿಂದ ಕೊಡಲ್ಪಡದೆ ಸಾಂಬನನ್ನು ಕರೆದುಕೊಂಡು ಹೋಗಲು ಸಮರ್ಥರಾದಾರೇ ! " ಎಂದು ಜನ್ಮದಿಂದಲೂ ಬಂಧುಗಳಿಂದಲೂ ಕೂಡಿರುವ ಮಹಾಸಂಪತ್ತಿನಿಂದ ಅಮಿತವಾದ ಮದವುಳ್ಳವರಾಗಿ ಬಲರಾಮನನ್ನು ಕುರಿತು ಈರೀತಿ ಕಠಿಣವಾದ ವಾಕ್ಯವನ್ನು ನುಡಿದು ಹಸ್ತಿನಾಪುರವನ್ನು ಪ್ರವೇಶಿಸಿದರು.

ಅನಂತರದಲ್ಲಿ ಬಲರಾಮನು ಕೌರವರ ದುಷ್ಟತ್ವವನ್ನು ತಿಳಿದು ಅವರ ದುರ್ವಾಕ್ಯಗಳನ್ನು ಕೇಳಿ ಕೋಪದಿಂದ ವ್ಯಾಪ್ತನಾಗಿ ಪರಾಕ್ರಮದಿಂದ ನೋಡಲಶಕ್ಯನಾಗಿ ಬಾರಿಬಾರಿಗು ನಗುತ "ಧನಕುಲಾದಿಗಳಿಂದುಂಟಾದ ನಾನಾವಿಧವಾದ ಮದದಿಂದುದ್ಧತರಾದ ದುಷ್ಟರು ಶಾಂತಿಯನ್ನಿಚ್ಛೈಸರು ; ಆದಕಾರಣ ಪಶುಗಳಿಗೆ ದಂಡದಂತೆ ದುಷ್ಟರಿಗೆ ನಿಗ್ರಹವು ನಿಶ್ಚಯವಾಗಿ ಉಪಶಾಂತಿಯನ್ನು ಕಲ್ಪಿಸುವದು ! ಎಲೈ ನೋಡಿದಿರೆ, ನಾನು ಯುದ್ಧಸನ್ನದ್ಧರಾದ ಯಾದವರನ್ನೂ ಕೋಪಯುಕ್ತನಾದ ಕೃಷ್ಣನನ್ನೂ ಉಪಾಯದಿಂದ ಸಮಾಧಾನಂಗೈದು ಕೌರವರ ಸಂಧಿಯನ್ನಪೇಕ್ಷಿಸಿ ಇಲ್ಲಿಗೆ ಬಂದೆನು ; ಇವರು ಮೂಢಬುದ್ಧಿಯುಳ್ಳವರಾಗಿ ಕಲಹದಲ್ಲಿ ಆಸಕ್ತರಾಗಿ ಗರ್ವಿತರಾಗಿ ನನ್ನನ್ನು ತಿರಸ್ಕರಿಸಿ ಬಾರಿಬಾರಿಗು ದುರ್ವಚನಗಳನ್ನು ನುಡಿದರು ; ಇಂದ್ರಾದಿ ಲೋಕಪಾಲಕರೂ ಯಾವನ ಆಜ್ಞಾಪಾಲಕರಾಗಿರ್ಧಾರೊ ಭೋಜರಿಗೂ ವೃಷ್ಣಿಗಳಿಗೂ ಅಂಧಕರಿಗೂ ನಿಯಾಮಕನಾದ ಅಂಥಾ ಉಗ್ರಸೇನರಾಯನು ಇವರಿಗೆ

ಆಜ್ಞಾಪಿಸುವದಕ್ಕೆ ಸಮರ್ಥನಲ್ಲವಂತೆ; ಸರ್ವೇಶ್ವರಿಯಾದ ಸಾಕ್ಷಾತ್ ಲಕ್ಷ್ಮೀದೇವಿಯು ಯಾವನ ಪಾದಯುಗ್ಮವನ್ನು ಸೇವಿಸುತ್ತಿರುವಳೋ ಅಂಥಾ ಶ್ರೀಕೃಷ್ಣನು ಛತ್ರ, ಚಾಮರಾದಿ ಚಿಹ್ನೆಗಳಿಗೆ ಯೋಗ್ಯನಲ್ಲನಂತೆ! ಕಟಕಟಾ ನೋಡಿದಿರೇ! ಇಂದ್ರಾದಿ ಸಮಸ್ತ ಲೋಕಪಾಲಕರ ಕಿರೀಟಯುಕ್ತಗಳಾದ ಶಿರಸ್ಸುಗಳಿಂದ ಧರಿಸಲ್ಪಟ್ಟದ್ದಾಗಿ ಸಮಸ್ತರಿಂದಲೂ ಸೇವಿಸಲ್ಪಡುವ ಗಂಗಾನದಿಗೂ ತೀರ್ಥತ್ವಕ್ಕೆ ಕಾರಣನಾದ ಯಾವನ ಪಾದಪದ್ಮ ರಜಸ್ಸನ್ನು ಆತನ ಅಂಶಾಂತಭೂತರಾದ ಬ್ರಹ್ಮ ರುದ್ರ, ಲಕ್ಷ್ಮಿಗಳೂ ನಾನೂ ಬಹುಕಾಲದಿಂದ ವಹಿಸುತಲಿದ್ದೇವೋ ಅಂಥಾ ಶ್ರೀಕೃಷ್ಣನಿಗೆ ಸಿಂಹಾಸನವು ಎಲ್ಲಿಂದ ಬರುವದು! ಕೌರವರಿಂದ ಕೊಡಲ್ಪಟ್ಟ ಭೂಖಂಡವನ್ನು ಯಾದವರಾಳುತ್ತಿದ್ದಾರೆಯಂತೆ; ನಾವು ಪಾದರಕ್ಷೆಗಳಂತೆ; ಕೌರವರು ಶಿರಸ್ಸುಗಳಂತೆ! ಕೇಳಿದಿರೇ! ಮದ್ಯಾದಿಗಳಿಂದ ಮದಿಸಿರುವವರಂತೆ ಐಶ್ವರ್ಯದಿಂದ ಮತ್ತರಾಗಿ ಗರ್ವಿತರಾದ ಕೌರವರ ಕಠಿನವಾಗಿ ಅಸಂಬದ್ಧವಾದ ವಚನಗಳನ್ನು ಯಾವ ಪುರುಷನು ಕೇಳಿ ತಾನು ಶಿಕ್ಷಕನಾಗಿಯೂ ಸಹಿಸುವನು! ಕಟಕಟಾ! ಈಗ ಭೂಮಿಯನ್ನು ಕೌರವರಹಿತವಾಗಿ ಮಾಡುತ್ತೇನೆ" ಎಂದು ನುಡಿಯುತ ಅತ್ಯಂತ ಕೋಪಯುಕ್ತನಾಗಿ ಮೂರು ಲೋಕಗಳನ್ನೂ ದಹಿಸುವವನಂತೆ ಹಲಾಯುಧವನ್ನಿಡಿದು ಮೇಲಕ್ಕೆ ಎದ್ದು ಹಸ್ತಿನಾಪುರವನ್ನು ಗಂಗೆಯಲ್ಲಿ ಕೆಡಹುವದಕ್ಕಾಗಿ ದಕ್ಷಿಣಭಾಗದ ಕೋಟೆಯ ಬುಡದಲ್ಲಿ ನೆಡಲ್ಪಟ್ಟ ನೇಗಲಿನ ಅಗ್ರದಿಂದ ಮೀಟಿ ಸೆಳೆದನು.

ಅನಂತರದಲ್ಲಿ ಕೌರವರು ಬಲರಾಮನಿಂದ ಸೆಳೆಯಲ್ಪಡುತ ಓಡೆಯಂತೆ ಗಂಗೆಯಲ್ಲಿ ವ್ಯಾಕುಲವಾಗಿ ಬೀಳುತ್ತಿದ್ದ ಹಸ್ತಿನಾಪುರವನ್ನು ನೋಡಿ ಅತ್ಯಂತ ಭಯವುಳ್ಳವರಾಗಿ ಕುಟುಂಬಯುಕ್ತರಾಗಿ ಜೀವಿಸಲಿಚ್ಛೆಯುಳ್ಳವರಾಗಿ ಲಕ್ಷಣಾದೇವಿಯೊಡನೆ ಯುಕ್ತನಾದ ಸಾಂಬನನ್ನು ಮುಂದುಮಾಡಿಕೊಂಡು ಅಂಜಲಿಬಂಧಯುಕ್ತರಾಗಿ ಪ್ರಭುವಾದ ಆ ರಾಮನನ್ನು ಶರಣುಹೊಂದಿ ಆತನನ್ನು ಕುರಿತು "ಸಕಲ ಲೋಕಗಳಿಗೂ ಆಧಾರಭೂತನಾದ ಎಲೈ ರಾಮನೆ, ನಿನ್ನ ಪ್ರಭಾವವನ್ನು ತಿಳಿಯದೆ ನಿಂದಿತವಾದ ಬುದ್ಧಿಯುಳ್ಳ ಮೂಢರಾದ ನಮ್ಮ ಅಪರಾಧವನ್ನು ಕ್ಷಮಿಸು! ಎಲೈ ಈಶ್ವರನೆ, ನೀನೊಬ್ಬನೆ ಆಶ್ರಯರಹಿತವಾದ ಜಗತ್ತಿನ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣಭೂತನು; ಕ್ರೀಡಿಸುತಲಿರುವ ನಿನಗೆ ಈ ಲೋಕಗಳು ಕ್ರೀಡಾಸ್ಥಾನಗಳೆಂದು ಋಷಿಗಳು ಹೇಳುತ್ತಾರೆ; ಸಹಸ್ರ ಶಿರಸ್ಸುಗಳುಳ್ಳ ಎಲೈ ಅನಂತನೆ, ನೀನು ಲೀಲೆಯಿಂದ ಒಂದು ಶಿರಸ್ಸಿನಲ್ಲಿ ಈ ಭೂಮಂಡಲವನ್ನು ಧರಿಸಿದ್ದೀ; ಪ್ರಳಯಕಾಲದಲ್ಲಿ ಯಾವನು ತನ್ನಲ್ಲಿ ಉಪಸಂಹಾರಗೈಯಲ್ಪಡುವ ಸಮಸ್ತ ಲೋಕಗಳುಳ್ಳವನಾಗಿ ಅದ್ವಿತೀಯನಾಗಿ ಶೇಷಶಯನದಲ್ಲಿ ಒಬ್ಬನೇ ಅವಶಿಷ್ಟನಾಗಿ ನಿಲ್ಲುವನೊ ಆ ಆದಿನಾರಾಯಣನು ನೀನೇ; ಸತ್ವಗುಣವನ್ನು ಧರಿಸಿ ಲೋಕಗಳ ಸ್ಥಿತಿಪಾಲನಗಳಲ್ಲಿ ತಾತ್ಪರ್ಯವುಳ್ಳ ನಿನ್ನ ಕೋಪವು ದುಷ್ಟನಿಗ್ರಹಾರ್ಥವಾಗಿಯೇ ಹೊರ್ತು ದೋಷಪ್ರಯುಕ್ತವಲ್ಲ; ಸರ್ವಭೂತಗಳಿಗು ಆತ್ಮನಾಗಿ ಸಮಸ್ತ ಶಕ್ತಿಗಳನ್ನೂ ಧರಿಸಿದವನಾಗಿ ವ್ಯಯರಹಿತನಾಗಿ ಪ್ರಪಂಚವೆಂಬ ವ್ಯಾಪಾರವುಳ್ಳವನಾಗಿರುವ ಎಲೈ ಹರಿಯೆ, ನಿನಗೆ ನಮಸ್ಕಾರವು; ನಾವು ನಿನ್ನನ್ನು ಶರಣುಹೊಂದಿದೆವು" ಎಂದು ಸ್ತುತಿಸಿದರು!

ಈರೀತಿ ಶರಣುಹೊಂದಿ ಅತಿ ಭೀತರಾಗಿ ಕಂಪಿಸುತ್ತಿದ್ದ ಪಟ್ಟಣವುಳ್ಳ ಕೌರವರಿಂದ ಸ್ತುತಿಸಲ್ಪಟ್ಟ ಬಲರಾಮನು ಪ್ರಸನ್ನನಾಗಿ ಭಯಪಡದಿರುವಹಾಗೆ ಅವರಿಗೆ ಅಭಯವನ್ನಿತ್ತು ಆ ಪಟ್ಟಣವನ್ನು ಯಥಾಪ್ರಕಾರದಲ್ಲಿ ನಿಲ್ಲಿಸಿದನು; ಆಗಮಗಳಲ್ಲಿ ಅತಿ ವಾತ್ಸಲ್ಯವುಳ್ಳ ದುರ್ಯೋಧನನು ಅರವತ್ತು ವರುಷಗಳ ವಯಸ್ಸುಳ್ಳ ಸಾವಿರದಿನ್ನೂರು ಗಜಗಳನ್ನೂ ಲಕ್ಷವೂ ಇಪ್ಪತ್ತುಸಾವಿರ ಅಶ್ವಗಳನ್ನೂ ಸುವರ್ಣಮಯವಾಗಿ ಸೂರ್ಯತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ ಆರುಸಾವರ ರಥಗಳನ್ನೂ ಕಂಠಗಳಲ್ಲಿ ಉತ್ತಮಹಾರಗಳನ್ನು ಧರಿಸಿದ ಸಾವರಮಂದಿ ದಾಸಿಯರನ್ನೂ ಮತ್ತೂ ಅನೇಕ ವಸ್ತುಗಳನ್ನೂ ಮಗಳಿಗೆ ಕೊಟ್ಟನು; ಯಾದವಶ್ರೇಷ್ಠನಾದ ಬಲರಾಮನು ಅವುಗಳನ್ನು ಪರಿಗ್ರಹಿಸಿ ಕೌರವರಿಂದ ಶ್ಲಾಘಿಸಲ್ಪಟ್ಟವನಾಗಿ ಸೊಸೆಯೊಡನೆಯೂ ಪುತ್ರನೊಡನೆಯೂ ಯುಕ್ತನಾಗಿ ಹಸ್ತಿನಾಪುರದ ದೆಸೆಯಿಂದ ತೆರಳಿ ದ್ವಾರಕಾಪುರವನ್ನು ಪ್ರವೇಶಿಸಿ ಅನುರಾಗಯುಕ್ತವಾದ ಮನಸ್ಸುಳ್ಳ ಬಂಧುಗಳನ್ನೈದಿ ಯಾದವ

ಶ್ರೇಷ್ಠರ ಸಭಾಮಧ್ಯದಲ್ಲಿ ತನ್ನ ಸಮಸ್ತ ವ್ಯಾಪಾರವನ್ನೂ ಹೇಳಿದನು! ಎಲೈ ಅರಸೇ ಕೇಳು: ಈಗಲೂ ನಿಮ್ಮ ಹಸ್ತಿನಾಪುರವು ಬಲರಾಮನ ಪರಾಕ್ರಮವನ್ನು ಸೂಚಿಸುತ ದಕ್ಷಿಣಭಾಗದಲ್ಲಿ ಉನ್ನತವಾಗಿ ಗಂಗಾತೀರದಲ್ಲಿ ಕಾಣಲ್ಪಡುತ್ತಿದೆ.

---

## ೬೯ ನೇ ಅಧ್ಯಾಯ.

### ನಾರದನು ಕೃಷ್ಣನನ್ನು ಏಕಕಾಲದಲ್ಲಿ ಅನೇಕ ಗೃಹಗಳಲ್ಲಿ ನೋಡಿದ್ದು.

ಎಲೈ ಪರೀಕ್ಷಿದ್ರಾಯನೆ ಕೇಳು; ನಾರದಮುನಿಯು ನರಕಾಸುರನು ಕೃಷ್ಣನಿಂದ ಸಂಹರಿಸಲ್ಪಟ್ಟದ್ದನ್ನೂ ಆ ಅಸುರನ ಮನೆಯಲ್ಲಿದ್ದ ಹದಿನಾರುಸಾವಿರಮಂದಿ ಸ್ತ್ರೀಯರಿಗೂ ಕೃಷ್ಣನಿಗೂ ವಿವಾಹವಾದ್ದನ್ನೂ ಕೇಳಿ ಶ್ರೀಕೃಷ್ಣನು ಒಂದೇಶರೀರದಿಂದ ಅನೇಕ ಗೃಹಗಳಲ್ಲಿ ಏಕಕಾಲದಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ಆ ಹದಿನಾರುಸಾವಿರಮಂದಿ ಸ್ತ್ರೀಯರನ್ನು ವಿವಾಹಮಾಡಿಕೊಂಡದ್ದು ಪರಮಾಶ್ಚರ್ಯವೆಂದೆಣಿಸಿ ಅದನ್ನು ತಿಳಿಯಬೇಕೆಂಬ ಕುತೂಹಲಯುಕ್ತನಾಗಿ ಪುಷ್ಪಯುಕ್ತವಾದ ಉಪವನಗಳಲ್ಲಿಯೂ ಉದ್ಯಾನವನಗಳಲ್ಲಿಯೂ ಪಕ್ಷಿಸಮೂಹಗಳ ಧ್ವನಿಯುಳ್ಳದ್ದಾಗಿ ವಿಕಾಸಯುಕ್ತವಾದ ಕನ್ನೈದಿಲೆ ಕಮಲ ಕಲ್ಹಾರ ಬಿಳೀನೈದಿಲೆಗಳಿಂದ ವ್ಯಾಪ್ತವಾದ ಸರಸ್ಸುಗಳಲ್ಲಿ ಹಂಸ ಸಾರಸ ಪಕ್ಷಿಗಳ ನಾದವುಳ್ಳದ್ದಾಗಿ ಸ್ಫಟಿಕಮಯವಾಗಿಯೂ ರಜತಮಯವಾಗಿಯೂ ಉತ್ತಮವಾದ ಮರಕತಮಣಿಮಯವಾಗಿಯೂ ಸುವರ್ಣರತ್ನಮಯವಾಗಿಯೂ ಇರುವ ಉಪಕರಣಗಳುಳ್ಳ ಒಂಭತ್ತುಲಕ್ಷ ಅರಮನೆಗಳಿಂದ ಶೋಭಿತವಾದ್ದಾಗಿ ವಿಂಗಡಿಸಲ್ಪಟ್ಟ ರಾಜಮಾರ್ಗಗಳಿಂದಲೂ ಅಂಗಳಗಳಿಂದಲೂ ಅಂಗಡೀಬೀದಿಗಳಿಂದಲೂ ಗಜಾಶ್ವಶಾಲೆಗಳಿಂದಲೂ ಸಭಾಸ್ಥಾನಗಳಿಂದಲೂ ದೇವಾಲಯಗಳಿಂದಲೂ ಶೋಭಿತವಾದ್ದಾಗಿ ಪರಿಮಳಯುಕ್ತವಾದ ಜಲದಿಂದ ನೆನೆಯಿಸಲ್ಪಟ್ಟ ರಾಜಮಾರ್ಗಗಳೂ ಅಂಗಳಗಳೂ ಬೀದಿಗಳೂ ಹೊಸ್ತಿಲುಗಳೂ ಉಳ್ಳದ್ದಾಗಿ ಚಲಿಸುತಲಿರುವ ಧ್ವಜಪತಾಕೆಗಳಿಂದ ಮರೆಮಾಡಲ್ಪಟ್ಟ ಬಿಸಿಲುಳ್ಳದ್ದಾಗಿದ್ದ ದ್ವಾರಕಾಪುರಕ್ಕೆ ಬಂದು ವಿಶ್ವಕರ್ಮನ ಶಿಲ್ಪಚಾತುರ್ಯವು ಸಮಗ್ರವಾಗಿ ತೋರಿಸಲ್ಪಟ್ಟದ್ದಾಗಿ ರಮಣೀಯವಾಗಿ ಕಾಂತಿಯುಕ್ತವಾಗಿ ಇಂದ್ರಾದಿ ಲೋಕಪಾಲಕರಿಂದ ಸೇವಿಸಲ್ಪಡುವದಾಗಿ ಹದಿನಾರುಸಾವಿರ ಗೃಹಗಳಿಂದ ಅಲಂಕರಿಸಲ್ಪಟ್ಟದ್ದ ಶ್ರೀಕೃಷ್ಣನ ಅಂತಃಪುರವನ್ನು ಸೇರಿ ಶ್ರೀಕೃಷ್ಣನ ಪತ್ನಿಯರ ಹದಿನಾರುಸಾವಿರ ಗೃಹಗಳಲ್ಲಿ ಹವಳಗಳಿಂದ ರಚಿಸಲ್ಪಟ್ಟ ಸ್ತಂಭಗಳಿಂದ ಧರಿಸಲ್ಪಟ್ಟ ವೈಡೂರ್ಯಮಯಗಳಾಗಿ ಉತ್ತಮವಾದ ಜೋಡಿಗೇಹಲಿಗೆಗಳಿಂದಲೂ ಇಂದ್ರನೀಲಮಯವಾದ ಗೋಡೆಗಳಿಂದಲೂ ಪ್ರಕಾಶಮಾನವಾದ ಭೂಮಿಯಿಂದಲೂ ಶೋಭಿತವಾಗಿ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟದ್ದಾಗಿ ನಾನಾಪ್ರಕಾರವಾಗಿ ಜೋಲುತಲಿರುವ ಮುತ್ತುಹಾರಗಳುಳ್ಳ ಮೇಲುಕಟ್ಟುಗಳಿಂದಲೂ ಉತ್ಕೃಷ್ಟವಾದ ರತ್ನಗಳಿಂದ ಕೆತ್ತಲ್ಪಟ್ಟ ದಂತಮಯಗಳಾದ ಮಣಿಗಳಿಂದಲೂ ಮಂಚಗಳಿಂದಲೂ ಶೋಭಿತವಾಗಿ ಕಂಠಗಳಲ್ಲಿ ಉತ್ತಮಹಾರಗಳನ್ನು ಧರಿಸಿ ದಿವ್ಯವಸ್ತ್ರಗಳನ್ನುಟ್ಟಿರುವ ದಾಸೀಜನಗಳಿಂದ ಅಲಂಕರಿಸಲ್ಪಟ್ಟದ್ದಾಗಿ ರಮಣೀಯವಾದ ಅಂಗಿ ಪಾಗುಗಳುಳ್ಳವರಾಗಿ ದಿವ್ಯ ವಸ್ತ್ರಗಳನ್ನೂ ರತ್ನಕುಂಡಲಗಳನ್ನೂ ಧರಿಸಿರುವ ಪುರುಷರಿಂದ ನಿಬಿಡವಾಗಿ ದಿವ್ಯ ಮಾಣಿಕ್ಯ ದೀಪಗಳ ಸಮೂಹಗಳ ಕಾಂತಿಯಿಂದ ಪರಿಹರಿಸಲ್ಪಟ್ಟ ಅಂಧಕಾರವುಳ್ಳದ್ದಾಗಿ ನವಿಲುಗಳು ಗವಾಕ್ಷಿಗಳಿಂದ ಬರುವ ಅಗರುಧೂಪವನ್ನು ನೋಡಿ ಮೇಘವೆಂಬ ಬುದ್ಧಿಯಿಂದ ಧ್ವನಿಗೈಯುತ ನರ್ತನಗೈಯುತಲಿರುವ ವಿಚಿತ್ರವಾದ ಲೋವೆಗಳುಳ್ಳದ್ದಾಗಿ ಮಹತ್ತಾದ ಒಂದು ಗೃಹವನ್ನು ಪ್ರವೇಶಿಸಿ ಆ ಗೃಹದಲ್ಲಿ ಸಮಾನವಾದ ಗುಣರೂಪವಯಸ್ಸುಗಳೂ ದಿವ್ಯವಾದ ಅಲಂಕಾರವೂ ಉಳ್ಳ ಸಾವಿರ ದಾಸೀಜನರೊಡನೆ ಯುಕ್ತಗಳಾಗಿ ಸುವರ್ಣದಂಡವುಳ್ಳ ಚಾಮರದಿಂದ ನಿರಂತರವು ಬೀಸುತಲಿರುವ ರುಕ್ಮಿಣಿಯೊಡನೆ ಯುಕ್ತನಾಗಿ ಕುಳಿತಿದ್ದ ಶ್ರೀಕೃಷ್ಣನನ್ನು ಕಂಡನು; ಸಮಸ್ತ ಧರ್ಮಪಾಲಕರಲ್ಲಿ ಶ್ರೇಷ್ಠನಾದ ಶ್ರೀಕೃಷ್ಣನು ನಾರದಮುನಿಯನ್ನು ಕಂಡು ರುಕ್ಮಿಣಿಯ ಮಂಚದಡೆಶೆಯಿಂದ ಶೀಘ್ರದಿಂದೆದ್ದು

ಅಂಜಲೀಬಂಧಯುಕ್ತನಾಗಿ ಕಿರೀಟಸಹಿತವಾದ ಶಿರಸ್ಸಿನಿಂದ ಆತನ ಪಾದಪದ್ಮವನ್ನು ನಮಸ್ಕರಿಸಿ ಆ ಮುನಿಯನ್ನು ತನ್ನ ದಿವ್ಯಪೀಠದಲ್ಲಿ ಕುಳ್ಳಿರಿಸಿ ಸಮಸ್ತ ತೀರ್ಥರೂಪವಾದ ಗಂಗೆಯೇ ತನ್ನ ಪಾದಪ್ರಕ್ಷಾಳನ ಜಲರೂಪವಾಗಿ ದ್ದಾಗ್ಯೂ ತಾನು ಜಗದ್ಗುರುವಾದಾಗ್ಯೂ ಧರ್ಮಪಾಲಕರಿಗೆ ಅಧಿಪತಿಯಾದ್ದರಿಂದಲೂ ಉತ್ತಮಗುಣಗಳಿಂದ ಕಲ್ಪಿತವಾದ ಬ್ರಾಹ್ಮಣ್ಯವೇ ದೇವನೆಂಬ ಆ ನಾಮಧೇಯವು ಆತನಿಗೆ ಉಚಿತವಾದ್ದರಿಂದಲೂ ನಾರದಮುನಿಯ ಪಾದಗಳನ್ನು ಪ್ರಕ್ಷಾಳನಂಗೈದು ಆ ಪಾದೋದಕಗಳನ್ನು ತನ್ನ ಶಿರಸ್ಸಿನಲ್ಲಿ ಧರಿಸಿದನು; ಆ ಬಳಿಕ ಪುರಾಣಪುರುಷನಾಗಿ ಆದಿಮುನಿಯಾದ ನರನೆಂಬ ಋಷಿಗೆ ಮಿತ್ರನಾಗಿ ನಾರಾಯಣನಾದ ಶ್ರೀಕೃಷ್ಣನು ಯುಕ್ತವಿಧಿಯಿಂದ ನಾರದಮುನಿಯನ್ನು ಪೂಜಿಸಿ ಅಮೃತಭರಿತವಾದ ಮಿತ್ರವಾಕ್ಯದಿಂದ ದೈವಯೋಗದಿಂದ ಆತನ ಆಗಮನವುಂಟಾಯಿತೆಂದು ಪ್ರಿಯವಚನವನ್ನು ಹೇಳಿ ಆತನನ್ನು ಕುರಿತು "ಎಲೈ ಸಮರ್ಥನಾದ ಮುನಿಯೆ, ಪೂಜ್ಯನಾದ ನಿನಗೆ ನಾವು ಯಾವ ಕಾರ್ಯವನ್ನು ಮಾಡಬೇಕು" ಎಂದು ಕೇಳಿದನು.

ನಾರದಮುನಿಯು ಆತನನ್ನು ಕುರಿತು "ಎಲೈ ಶ್ರೀಕೃಷ್ಣನೆ, ಸ್ಥಿತಿರಕ್ಷಣಗಳಿಂದ ಜಗತ್ತಿನ ಶ್ರೇಯಸ್ಸಿಗೋಸ್ಕರ ನಿನ್ನ ಈ ಲೀಲಾವತಾರವುಂಟಾಯಿತೆಂದು ನಾವು ಚನ್ನಾಗಿ ತಿಳಿದಿದ್ದೇವೆ; ಸಕಲಲೋಕ ನಾಥನಾದ ನಿನ್ನಲ್ಲಿ ಸಕಲಜನ ಮಿತ್ರತ್ವವೂ ದುಷ್ಟನಿಗ್ರಹವೂ ಇರುವದು ಆಶ್ಚರ್ಯವಲ್ಲ! ಎಲೈ ಹರಿಯೆ, ಜನಸಮೂಹಕ್ಕೆ ಮೋಕ್ಷಕರರೂಪನಾಗಿ ಅಮಿತಜ್ಞಾನವುಳ್ಳ ಬ್ರಹ್ಮಾದಿಗಳಿಂದಲೂ ಹೃದಯದಲ್ಲಿ ಭಾವಿಸಲು ಯೋಗ್ಯವಾಗಿ ಸಂಸಾರವೆಂಬ ಕೂಪದಲ್ಲಿ ಬಿದ್ದಿರುವ ಪ್ರಾಣಿಗಳು ಅಲ್ಲಿಂದ ದಾಟುವದಕ್ಕೆ ಆಶ್ರಯವಾದ ನಿನ್ನ ಪಾದಯುಗ್ಮವು ನನ್ನಿಂದ ಕಾಣಲ್ಪಟ್ಟಿತು; ಅದರಿಂದ ನಾನು ಕೃತಾರ್ಥನಾದೆನು; ಆದಾಗ್ಯೂ ಆ ಪಾದಸ್ಮೃತಿಯು ನನಗೆ ನಿರಂತರವೂ ಇರುವರೀತಿ ಅನುಗ್ರಹಿಸು; ಆ ಪಾದಯುಗ್ಮವನ್ನು ನಿರಂತರವೂ ಧ್ಯಾನಂಗೈಯುತ ಸಂಚರಿಸುತ್ತೇನೆ" ಎಂದು ವಿಜ್ಞಾಪಿಸಿದನು.

ಎಲೈ ಪರೀಕ್ಷಿದ್ರಾಯನೆ ಕೇಳು: ಅನಂತರದಲ್ಲಿ ನಾರದನು ಯೋಗೀಶ್ವರನಾದ ಶ್ರೀಹರಿಯ ಯೋಗಮಾಯೆಯನ್ನು ತಿಳಿಯುವ ಇಚ್ಛೆಯಿಂದ ಶ್ರೀಕೃಷ್ಣನ ಪತ್ನಿಯಾದ ಮತ್ತೊಬ್ಬಳ ಗೃಹವನ್ನು ಪ್ರವೇಶಿಸಿ ಆ ಗೃಹದಲ್ಲಿ ಪತ್ನಿಯೊಡನೆಯೂ ಉದ್ಧವನೊಡನೆಯೂ ಕೂಡಿ ಪಗಡೆಯನ್ನಾಡುತಿದ್ದ ಶ್ರೀಕೃಷ್ಣನನ್ನು ನೋಡಿ ಪ್ರತ್ಯುತ್ಥಾನ ಪೀಠಗಳಿಂದ ಪರಮಭಕ್ತಿಯಿಂದ ಪೂಜಿಸಲ್ಪಟ್ಟು ಏನೂ ತಿಳಿಯದವನಂತಿದ್ದ ಶ್ರೀಕೃಷ್ಣನಿಂದ "ನೀನು ಯಾವಾಗ ಬಂದೆ? ಪೂರ್ಣರಾದ ನಿಮ್ಮಂಥಾವರಿಗೆ ಅಪೂರ್ಣರಾದ ನಮ್ಮಂಥಾವರಿಂದ ಏನುಮಾಡಲ್ಪಡುವದು! ಎಲೈ ಮುನಿಯೆ, ಆದಾಗ್ಯೂ ಬಂದ ಕಾರ್ಯವನ್ನು ನನಗೆ ನಿರೂಪಿಸಿ ನನ್ನ ಈ ಜನ್ಮವನ್ನು ಸಫಲಮಾಡು" ಎಂದು ಪ್ರಶ್ನೆಗೈಯಲ್ಪಟ್ಟನು.

ನಾರದಮುನಿಯು ಕೃಷ್ಣನ ವಚನವನ್ನು ಕೇಳಿ ಆಶ್ಚರ್ಯಯುಕ್ತನಾಗಿ ಮೌನದಿಂದೆದ್ದು ಮತ್ತೊಂದು ಗೃಹವನ್ನೈದಿ ಆ ಗೃಹದಲ್ಲಿ ಕೃಷ್ಣನು ಶಿಶುಗಳಾದ ಪುತ್ರರನ್ನು ಲಾಲಿಸುತಿದ್ದದ್ದನ್ನು ಕಂಡನು; ಆವೇಳೆ ಮತ್ತೊಂದು ಗೃಹವನ್ನೈದಿ ಕೃಷ್ಣನು ಸ್ನಾನಕ್ಕೆ ಪ್ರಯತ್ನಂಗೈಯುತಲಿರುವದನ್ನು ಕಂಡನು; ಮತ್ತೊಂದು ಮನೆಯಲ್ಲಿ ಕೃಷ್ಣನು ಆಹವನೀಯಾದಿ ಅಗ್ನಿಗಳಲ್ಲಿ ಹೋಮಂಗೈಯುತಿದ್ದದ್ದನ್ನೂ ಒಂದು ಮನೆಯಲ್ಲಿ ಪಂಚಮಹಾಯಜ್ಞಗಳನ್ನು ಮಾಡುತಿದ್ದದ್ದನ್ನೂ ಒಂದು ಮನೆಯಲ್ಲಿ ಬ್ರಾಹ್ಮಣರನ್ನು ಭೋಜನಂಗೈಸುತಿದ್ದದ್ದನ್ನೂ ಒಂದು ಮನೆಯಲ್ಲಿ ಬ್ರಾಹ್ಮಣಭೋಜನ ಶೇಷವನ್ನು ಭೋಜನಂಗೈಯುತಿದ್ದದ್ದನ್ನೂ ಒಂದು ಗೃಹದಲ್ಲಿ ಸಂಧ್ಯಾವಂದನಂಗೈದು ಮೌನದಿಂದ ಗಾಯತ್ರಿಯನ್ನು ಜಪಿಸುತಿದ್ದದ್ದನ್ನೂ ಒಂದು ಗೃಹದಲ್ಲಿ ಖಡ್ಗಖೇಟಗಳಿಂದ ಖಡ್ಗಮಾರ್ಗಗಳಲ್ಲಿ ಸಂಚರಿಸುತಿದ್ದದ್ದನ್ನೂ ಒಂದು ಗೃಹದಲ್ಲಿ ಅಶ್ವಗಳಿಂದಲೂ ರಥಗಜಗಳಿಂದಲೂ ಸಂಚರಿಸುತಿದ್ದದ್ದನ್ನೂ ಒಂದು ಗೃಹದಲ್ಲಿ ಮಂಚದಲ್ಲಿ ಪವಳಿಸಿದ್ದದ್ದನ್ನೂ ಒಂದು ಗೃಹದಲ್ಲಿ ಸ್ತುತಿಪಾಠಕರಿಂದ ಸ್ತೋತ್ರಂಗೈಯಲ್ಪಡುತಿದ್ದದ್ದನ್ನೂ

ಒಂದು ಗೃಹದಲ್ಲಿ ಉದ್ಧವನು ಮೊದಲಾದ ಮಂತ್ರಿಗಳೊಡನೆ ಮಂತ್ರಾಲೋಚನಂಗೈಯುತಿದ್ದದ್ದನ್ನೂ ಒಂದು ಗೃಹದಲ್ಲಿ ಉತ್ತಮರಾದ ವೇಶ್ಯಾಸ್ತ್ರೀಯರಿಂದ ಸುತ್ತಿಕೊಳ್ಳಲ್ಪಟ್ಟು ಜಲಕ್ರೀಡೆಯಲ್ಲಿ ಆಸಕ್ತನಾಗಿದ್ದದ್ದನ್ನೂ ಒಂದು ಗೃಹದಲ್ಲಿ ಅಲಂಕರಿಸಲ್ಪಟ್ಟ ಗೋವುಗಳನ್ನು ಬ್ರಾಹ್ಮಣರಿಗೆ ದಾನಂಗೈಯುತಿದ್ದದ್ದನ್ನೂ ಒಂದು ಮನೆಯಲ್ಲಿ ಶುಭಕರಗಳಾದ ಇತಿಹಾಸ ಪುರಾಣಗಳನ್ನು ಶ್ರವಣಂಗೈಯುತಿದ್ದದ್ದನ್ನೂ ಒಂದು ಗೃಹದಲ್ಲಿ ತನ್ನ ಕಾಂತೆಯೊಡನೆ ಹಾಸ್ಯರಸಯುಕ್ತವಾದ ಕಥೆಯಿಂದ ನಗುತಿದ್ದದ್ದನ್ನೂ ಒಂದು ಮನೆಯಲ್ಲಿ ಗೃಹಧರ್ಮವನ್ನಾಚರಿಸುತಿದ್ದದ್ದನ್ನೂ ಒಂದು ಮನೆಯಲ್ಲಿ ಅರ್ಥಕಾಮಗಳನ್ನಾಚರಿಸುತಿದ್ದದ್ದನ್ನೂ ಒಂದು ಮನೆಯಲ್ಲಿ ಪ್ರಕೃತಿಗೆ ಪರನಾದ ಪರಮಪುರುಷನನ್ನು ಧ್ಯಾನಂಗೈಯುತಿದ್ದದ್ದನ್ನೂ ಒಂದು ಗೃಹದಲ್ಲಿ ಇಷ್ಟಾರ್ಥಗಳಿಂದಲೂ ಸೇವೆಯಿಂದಲೂ ಗುರುಗಳಿಗೆ ಶುಶ್ರೂಷೆಯನ್ನು ಮಾಡುತಿದ್ದದ್ದನ್ನೂ ಒಂದು ಮನೆಯಲ್ಲಿ ಬಲರಾಮನೊಡನೆ ಸಜ್ಜನರ ಕ್ಷೇಮವನ್ನು ವಿಚಾರಿಸುತಿದ್ದದ್ದನ್ನೂ ಒಂದು ಮನೆಯಲ್ಲಿ ಪುತ್ರರಿಗೂ ಪುತ್ರಿಯರಿಗೂ ಉಚಿತವಾದ ಕಾಲಗಳಲ್ಲಿ ಅವರವರಿಗೆ ಅನುಗುಣರಾದ ಕನ್ಯಕೆಯರೊಡನೆಯೂ ವರರೊಡನೆಯೂ ವಿಭವಗಳಿಂದ ವಿವಾಹವನ್ನು ಘಟನೆಮಾಡುತಿದ್ದದ್ದನ್ನೂ ಕಂಡನು; ಕೆಲವು ಗೃಹಗಳಲ್ಲಿ ಯೋಗೀಶ್ವರನಾದ ಶ್ರೀಕೃಷ್ಣನು ಹೆಣ್ಣುಮಕ್ಕಳು ಅಳಿಯಂದಿರು ಮೊದಲಾದವರನ್ನು ತನ್ನ ಗೃಹದಿಂದ ಅವರವರ ಗೃಹಗಳಿಗೆ ಕಳುಹಿಸೋಣವು ಅವರವರ ಗೃಹಗಳಿಂದ ಕರತರೋಣವು ಮೊದಲಾದ ಮಹೋತ್ಸವಗಳನ್ನು ಕಲ್ಪಿಸುತಿದ್ದದ್ದನ್ನೂ ಒಂದು ಗೃಹದಲ್ಲಿ ಉತ್ಕೃಷ್ಟಗಳಾದ ಕ್ರತುಗಳಿಂದ ಸಕಲ ದೇವತೆಗಳನ್ನೂ ಸಂತೋಷಪಡಿಸುತಿದ್ದದ್ದನ್ನೂ ಒಂದು ಮನೆಯಲ್ಲಿ ಕೂಪ ಉದ್ಯಾನ ದೇವಾಲಯಾದಿ ಪ್ರತಿಷ್ಠಾಪನಾರೂಪವಾದ ಪೂರ್ತವೆಂಬ ಧರ್ಮವನ್ನಾಚರಿಸುತಿದ್ದದ್ದನ್ನೂ ಒಂದು ಕಡೆಯಲ್ಲಿ ಸಿಂಧುದೇಶೋತ್ಪನ್ನವಾದ ಅಶ್ವವನ್ನೇರಿ ಬೇಟೆಯನ್ನಾಚರಿಸುತ ಯಾದವಶ್ರೇಷ್ಠರಿಂದ ಸುತ್ತಿಕೊಳ್ಳಲ್ಪಟ್ಟು ಪರಿಶುದ್ಧವಾದ ಮೃಗಗಳನ್ನು ಸಂಹರಿಸುತಿದ್ದದ್ದನ್ನೂ ಮಂತ್ರಿಗಳು ಮೊದಲಾದ ರಾಜ್ಯಾಂಗಗಳಲ್ಲಿಯೂ ಅಂತಃಪುರ ಗೃಹಾದಿಗಳಲ್ಲಿಯೂ ಅವರವರ ನಡತೆಗಳನ್ನು ತಿಳಿಯಲೋಸುಗ ಮತ್ತೊಂದು ವೇಷವನ್ನು ಆಚ್ಛಾದನಂಗೈದು ಸಂಚರಿಸುತಿದ್ದದ್ದನ್ನೂ ಕಂಡು ನಾರದಮುನಿಯು ಮನುಷ್ಯಲೀಲೆಯನ್ನೈದಿದ ಶ್ರೀಹರಿಯ ಯೋಗಮಾಯಾಪ್ರಭಾವವನ್ನು ನೋಡಿ ನಗುತ ಶ್ರೀಕೃಷ್ಣನನ್ನು ಕುರಿತು "ಎಲೈ ಯೋಗೀಶ್ವರನಾದ ಶ್ರೀಕೃಷ್ಣನೆ, ಯೋಗಿಗಳಿಗೂ ನೋಡಲಶಕ್ಯವಾಗಿ ನಿನ್ನ ಪಾದಸೇವೆಯಿಂದ ಮನಸ್ಸಿನಲ್ಲಿ ವ್ಯಕ್ತವಾದ ನಿನ್ನ ಯೋಗಮಾಯೆಯನ್ನು ಮಾತ್ರವೇ ನಾವು ತಿಳಿದವೇಹೊರ್ತು ನಿನ್ನ ತತ್ವವನ್ನರಿಯೆವು! ಎಲೈ ಕೃಷ್ಣನೆ, ನನಗೆ ಆಜ್ಞಾಪಿಸು; ನಾನು ಲೋಕಪಾವನವಾದ ನಿನ್ನ ಲೀಲೆಯನ್ನು ಗಾನಂಗೈಯುತ ನಿನ್ನ ಯಶಸ್ಸಿನಿಂದ ವ್ಯಾಪ್ತಗಳಾದ ಲೋಕಗಳಲ್ಲಿ ಸಂಚರಿಸುತ್ತೇನೆ" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಭಗವಂತನು "ಎಲೈ ಮುನಿಯೆ, ಧರ್ಮವನ್ನುಪದೇಶಂಗೈವವನೂ ಅದನ್ನು ನೋಡಿ ಸಂತೋಷಪಡುವವನೂ ಅದನ್ನು ಅನುಷ್ಠಾನಂಗೈವವನೂ ನಾನೇ ಆದ್ದರಿಂದ ಲೋಕಶಿಕ್ಷಣಾರ್ಥವಾಗಿ ಲೋಕಧರ್ಮದಲ್ಲಿರ್ಪೆನೆಯೇ ಹೊರ್ತು ಪರಮಾರ್ಥವಲ್ಲ! ಎಲೈ ಪುತ್ರನೆ, ಆದಕಾರಣ ನೀನು ಮೋಹವನ್ನೈದಬೇಡ" ಅಂದನು.

ಎಲೈ ಪರೀಕ್ಷಿದ್ರಾಯನೆ, ಭಗವಂತನಿಂದ ಈರೀತಿ ಅನುಗ್ರಹಿಸಲ್ಪಟ್ಟ ನಾರದಮುನಿಯು ಸಮಸ್ತ ಗೃಹಗಳಲ್ಲಿಯೂ ಗೃಹಸ್ಥರಿಗೆ ಉಚಿತಗಳಾದ ಸದ್ಧರ್ಮಗಳನ್ನು ಆಚರಿಸುತ ಭಾವಿಸಲಶಕ್ಯವಾದ ಮಹತ್ವವುಳ್ಳ ಶ್ರೀಕೃಷ್ಣನ ಯೋಗಮಾಯಾಪ್ರಭಾವವನ್ನು ಬಾರಿಬಾರಿಗೂ ಸ್ಮರಿಸುತ ಕುತೂಹಲಯುಕ್ತನಾಗಿ ಆಶ್ಚರ್ಯಪಟ್ಟನು! ಎಲೈ ಅರಸೆ ಕೇಳು: ಸಮಸ್ತ ಪ್ರಪಂಚದ ಉತ್ಪತ್ತಿಗೋಸ್ಕರ ಪರಿಗ್ರಹಿಸಲ್ಪಟ್ಟ ನಾನಾವಿಧ ಮೂರ್ತಿಗಳುಳ್ಳವನಾಗಿ ಮನುಷ್ಯರ ಲೀಲೆಯನ್ನನುವರ್ತಿಸಿಕೊಂಡಿರುವ ಶ್ರೀನಾರಾಯಣನು ಈ ಪ್ರಕಾರವಾಗಿ ಉತ್ತಮರಾದ ಹದಿನಾರು ಸಾವಿರಮಂದಿ ಸ್ತ್ರೀಯರಿಂದ ಲಜ್ಜೆಯೊಡನೆ ಕೂಡಿರುವ ಸ್ನೇಹದಿಂದುಂಟಾದ ಸವಿನೋಟಗಳಿಂದಲೂ ಮುಗುಳುನಗೆಯಿಂದಲೂ ಸೇವಿಸಲ್ಪಟ್ಟವನಾಗಿದ್ದನು! ಎಲೈ ಅರಸೆ, ಪ್ರಪಂಚದ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣನಾದ

ಶ್ರೀಹರಿಯು ಈ ಪ್ರಪಂಚದಲ್ಲಿ ಅಸಾಧಾರಣಗಳಾದ ಯಾವ ವ್ಯಾಪಾರಗಳನ್ನಾಚರಿಸಿದನೊ ಆ ಚರಿತ್ರೆಗಳನ್ನು ಯಾವ ಪುರುಷನು ಗಾನಗೈವನೋ—ಯಾವನು ಶ್ರವಣಗೈವನೋ—ಯಾವನು ಶ್ಲಾಘಿಸುವನೋ—ಆ ಪುರುಷನಿಗೆ ಮೋಕ್ಷಪ್ರದನಾದ ಆ ಭಗವಂತನಲ್ಲಿ ಭಕ್ತಿಯುಂಟಾಗುವದು.

---

## ೭೦ನೇ ಅಧ್ಯಾಯ.

### ಕೃಷ್ಣನು ಧರ್ಮರಾಯನಿಂದ ರಾಜಸೂಯಯಾಗವನ್ನು ಮಾಡಿಸಲು ಪ್ರೇರಿಸಲ್ಪಟ್ಟದ್ದು.

ಎಲೈ ಪರೀಕ್ಷಿದ್ರಾಯನೆ ಕೇಳು: ಅನಂತರದಲ್ಲಿ ತಮ್ಮ ಗೃಹಗಳಲ್ಲಿ ಪತಿರೂಪದಿಂದ ತಮ್ಮೊಡನೆ ರಮಿಸುತಿದ್ದ ಅನೇಕರೂಪನಾದ ಕೃಷ್ಣನಿಂದ ಆಲಿಂಗನಗೈಯಲ್ಪಟ್ಟ ಕಂಠಗಳುಳ್ಳ ಶ್ರೀಕೃಷ್ಣನ ಪತ್ನಿಯರು ಉಷಃಕಾಲ ಪ್ರಾಪ್ತವಾಗುತ್ತಿರಲು ಕುಕ್ಕುಟಗಳ ಧ್ವನಿಯನ್ನು ಕೇಳಿ ವಿರಹದಿಂದ ಪೀಡಿಸಲ್ಪಟ್ಟವರಾಗಿ ಆ ಕುಕ್ಕುಟಗಳನ್ನು ಶಪಿಸುತಿದ್ದರು; ಮಂದಾರವನಗಳ ವಾಯುವಿನಿಂದ ತುಂಬಿಗಳು ಗಾನಗೈಯುತ್ತಿರಲು ಪಕ್ಷಿಗಳು ಎಚ್ಚರಗೊಂಡು ಸ್ತುತಿಪಾಠಕರಂತೆ ಶ್ರೀಕೃಷ್ಣನನ್ನೆಬ್ಬಿಸುತ ಅತಿಶಯದಿಂದ ಧ್ವನಿಗೈದವು; ಆಗ ಶ್ರೀಕೃಷ್ಣನ ವಕ್ಷಸ್ಥಳವನ್ನೈದಿರುವ ರುಕ್ಮಿಣೀದೇವಿಯು ಆ ಬ್ರಹ್ಮಮುಹೂರ್ತವು ಅತಿ ಶುಭಕರವಾದಾಗ್ಯೂ ಅದರಲ್ಲಿ ಶ್ರೀಕೃಷ್ಣನ ಆಲಿಂಗನಕ್ಕುಂಟಾಗುವ ವಿಘ್ನವನ್ನಾಲೋಚಿಸಿ ಅಂಥಾ ಮುಹೂರ್ತದಲ್ಲಿ ರೋಷಯುಕ್ತಳಾಗಿದ್ದಳು; ಶ್ರೀಕೃಷ್ಣನು ಆ ಬ್ರಹ್ಮಮುಹೂರ್ತದಲ್ಲಿ ಹಾಸಿಗೆಯಿಂದೆದ್ದು ಹಸ್ತ ಪಾದಪ್ರಕ್ಷಾಳನಪೂರ್ವಕವಾಗಿ ಶುದ್ಧಾಚಮನಗೈದು ಪ್ರಸನ್ನವಾದ ಮನಸ್ಸುಳ್ಳವನಾಗಿ ಮಾಯಾತೀತನಾಗಿ ಉಪಾಧಿರಹಿತನಾಗಿ ಅಖಂಡರೂಪನಾಗಿ ನಿತ್ಯನಾಗಿ ಚಿಚ್ಛಕ್ತಿಯಿಂದ ನಿರಂತರದಲ್ಲಿಯು ಪರಿವೃತವಾದ ಅವಿದ್ಯೆಯುಳ್ಳವನಾಗಿ ಸ್ವಯಂಪ್ರಕಾಶನಾಗಿ ಪ್ರಪಂಚದ ಉತ್ಪತ್ತಿ ನಾಶಗಳಿಗೆ ಕಾರಣವಾದ ಶಕ್ತಿಯಿಂದ ಕಾಣಲ್ಪಡುವವನಾಗಿ ಆನಂದಸ್ವರೂಪನಾಗಿ ಬ್ರಹ್ಮನೆಂಬ ನಾಮಧೇಯವುಳ್ಳವನಾದ ಪರಮಾತ್ಮನನ್ನು ಧ್ಯಾನಗೈದು ವಿಧಿಪೂರ್ವಕವಾಗಿ ಜಲದಲ್ಲಿ ಸ್ನಾನಗೈದು ದಿವ್ಯವಸ್ತ್ರಗಳನ್ನುಟ್ಟು ಸಂಧ್ಯಾವಂದನ ಮೊದಲಾದ ನಿತ್ಯಕರ್ಮಕಲಾಪಗೈದು ಅಗ್ನಿಯಲ್ಲಿ ಹೋಮವನ್ನಾಚರಿಸಿ ಮೌನದಿಂದ ಗಾಯತ್ರಿಯನ್ನು ಜಪಿಸಿ ಜಪಾನಂತರದಲ್ಲಿ ಉದಯಿಸುತಿದ್ದ ಸೂರ್ಯನನ್ನು ಉಪಾಸನಗೈದು ತನ್ನ ಅಂಶಭೂತರಾದ ದೇವರ್ಷಿ ಪಿತೃಗಳಿಗೆ ತರ್ಪಣಗೈದು ಬ್ರಾಹ್ಮಣರನ್ನು ಪೂಜಿಸಿ ಸುವರ್ಣಮಯವಾದ ಶೃಂಗಗಳುಳ್ಳವಾಗಿ ಸಾಧುಗಳಾಗಿ ಮುಕ್ತಾಹಾರಗಳಿಂದ ಶೋಭಿತವಾಗಿ ಅಧಿಕ ಕ್ಷೀರಗಳುಳ್ಳವಾಗಿ ಒಂದೇ ಹೆರಿಗೆಯುಳ್ಳ ಕರುಗಳೊಡನೆ ಯುಕ್ತವಾಗಿ ಉತ್ತಮ ವಸ್ತ್ರಗಳಿಂದ ಅಲಂಕೃತವಾಗಿ ರಜತಮಯವಾದ ಗೊರಸುಗಳೂ ಅಗ್ರಗಳೂ ಉಳ್ಳ ಹದಿಮೂರುಸಾವಿರದ ಎಂಭತ್ತುನಾಲ್ಕು ಗೋವುಗಳನ್ನೂ ವಸ್ತ್ರ ಅಜಿನ ತಿಲಗಳನ್ನೂ ಬ್ರಾಹ್ಮಣರಿಗೆ ಪ್ರತಿ ಗೃಹದಲ್ಲಿಯೂ ಕೊಟ್ಟನು; ಅನಂತರದಲ್ಲಿ ಕೃಷ್ಣನು ಗೋವುಗಳನ್ನೂ ದ್ವಿಜರನ್ನೂ ದೇವತೆಗಳನ್ನೂ ನಮಸ್ಕರಿಸಿ ಕಪಿಲಗೋವು ಮೊದಲಾದವನ್ನು ಸ್ಪೃಶಿಸಿದನು; ಅನಂತರದಲ್ಲಿ ಭೂಲೋಕಕ್ಕೆ ಭೂಷಣರೂಪವಾಗಿ ತನ್ನ ಸ್ವಕೀಯಗಳಾದ ಪೀತಾಂಬರ ಕೌಸ್ತುಭ ಮೊದಲಾದ ಭೂಷಣಗಳಿಂದಲೂ ದಿವ್ಯಮಾಲ್ಯಗಳಿಂದಲೂ ದಿವ್ಯಾನುಲೇಪನಗಳಿಂದಲೂ ಅಲಂಕರಿಸಿಕೊಂಡು ಆಜ್ಯದಲ್ಲಿ ತನ್ನ ಮುಖವನ್ನು ನೋಡಿ ಆಮೇಲೆ ದರ್ಪಣವನ್ನೂ ಗೋ ವೃಷಭಧ್ವಜ ದೇವತೆಗಳನ್ನೂ ದ್ವಿಜರನ್ನೂ ನೋಡಿ ಸರ್ವವರ್ಣಸ್ಥರಿಗೂ ಪಟ್ಟಣದಲ್ಲಿರುವ ಜನರಿಗೂ ಅಂತಃಪುರದಲ್ಲಿರುವ ಜನರಿಗೂ ಮಂತ್ರಿ, ಮೊದಲಾದ ಸಾಮಾಜಿಕರಿಗೂ ಇಷ್ಟಾರ್ಥಗಳನ್ನು ಕೊಟ್ಟು ಅವರನ್ನು ಸಂತೋಷಪಡಿಸಿ ತಾನೂ ಸಂತೋಷಪಡುತ ಪುಷ್ಪ ಮಾಲ್ಯ ತಾಂಬೂಲ ಅನುಲೇಪನಗಳನ್ನು ಮೊದಲು ಬ್ರಾಹ್ಮಣರಿಗೂ ಅನಂತರದಲ್ಲಿ ಮಿತ್ರರು ಮಂತ್ರಿಗಳು ಮೊದಲಾದ ಸಾಮಾಜಿಕರಿಗೂ ಪತ್ನಿಯರಿಗೂ ಕೊಟ್ಟು ತಾನೂ ಅನುಭವಿಸಿ ಅಷ್ಟರೊಳಗೆ ದಾರುಕನೆಂಬ ಸಾರಥಿಯು ಸುಗ್ರೀವ ಮೊದಲಾದ ಅಶ್ವಗಳೊಡನೆ ಯುಕ್ತವಾಗಿ ಪರಮಾಶ್ಚರ್ಯಕರವಾದ ರಥವನ್ನು ಸಮೀಪದಲ್ಲಿ ನಿಲ್ಲಿಸಿ ನಮ

ಸ್ಕಾರಂಗೈದು ಮುಂದುಗಡೆಯಲ್ಲಿ ನಿಂತಿರಲು ತನ್ನ ಹಸ್ತದಿಂದ ಸಾರಥಿಯು ಹಸ್ತಗಳನ್ನವಲಂಬಿಸಿಕೊಂಡು ಉದ್ಧವ ಸಾತ್ಯಕಿಗಳೊಡನೆ ಉದಯಪರ್ವತವನ್ನೇರುವ ಸೂರ್ಯನಂತೆ ಆ ದಿವ್ಯರಥವನ್ನೇರಿ ಅಂತಃಪುರದಲ್ಲಿರುವ ಸ್ತ್ರೀಯರಿಂದ ಲಜ್ಜೆಯೊಡನೆಯೂ ಪ್ರೇಮದೊಡನೆಯೂ ಕೂಡಿದ ಸವಿನೋಟಗಳಿಂದ ನೋಡಲ್ಪಡುತ ಒಂದು ಕ್ಷಣ ನಿಂತು ಆ ಸ್ತ್ರೀಯರ ದೃಷ್ಟಿಗಳಿಂದ ಅತಿ ಪ್ರಯಾಸದಿಂದ ಬಿಡಲ್ಪಟ್ಟವನಾಗಿ ನಗುತ ಅವರ ಮನಸ್ಸನ್ನಪಹರಿಸುತ ತೆರಳಿದನು ; ಭಗವಂತನಾಗಿ ಸರ್ವವ್ಯಾಪಕನಾದ ಕೃಷ್ಣನು ಪ್ರತಿದಿವಸದಲ್ಲಿಯೂ ಈ ರೀತಿಯಿಂದ ಸಮಸ್ತ ಪತ್ನಿಯರ ಗೃಹಗಳದೆಶೆಯಿಂದಲೂ ಪ್ರತ್ಯೇಕಪ್ರತ್ಯೇಕವಾಗಿ ಅನೇಕ ರೂಪವುಳ್ಳವನಾಗಿ ಹೊರಟು ಆಮೇಲೆ ಒಂದೇ ರೂಪವುಳ್ಳವನಾಗಿ ಆಸ್ಥಾನವನ್ನೈದುತಿದ್ದನು ; ಯಾವ ಸಭೆಯಲ್ಲಿ ಪ್ರವೇಶಿಸಿದವರಿಗೆ ಕ್ಷುತ್ತು ತೃಷ್ಣೆಗಳು ಶೋಕಮೋಹಗಳು ಜನ್ಮಮರಣಗಳು ಎಂಬ ಷಡೂರ್ಮಿಗಳಿಲ್ಲವೋ ಸುಧರ್ಮೆಯೆಂಬ ನಾಮಧೇಯವುಳ್ಳ ದಿವ್ಯವಾದ ಆ ಸಭೆಯನ್ನು ಶ್ರೀಕೃಷ್ಣನು ಪ್ರವೇಶಿಸಿ ಸಿಂಹಾಸನದಲ್ಲಿ ಕುಳಿತು ತನ್ನ ಕಾಂತಿಯಿಂದ ದಿಕ್ಕುಗಳನ್ನು ಪ್ರಕಾಶಂಗೈಯುತ ಪುರುಷಶ್ರೇಷ್ಠರಾದ ಯಾದವರಿಂದ ಸುತ್ತಲ್ಪಟ್ಟು ಅಂತರಿಕ್ಷದಲ್ಲಿ ನಕ್ಷತ್ರಸಮೂಹಗಳಿಂದ ಸುತ್ತಲ್ಪಟ್ಟ ಚಂದ್ರನಂತೆ ಪ್ರಕಾಶಿಸುತಿದ್ದನು ! ಎಲೈ ಅರಸೆ ಕೇಳು : ಅಲ್ಲಿ ಪರಿಹಾಸಕಜನರು ನಾನಾವಿಧಗಳಾದ ಹಾಸ್ಯರಸಗಳಿಂದಲೂ ನಾಟ್ಯಾಚಾರ್ಯರೂ ನರ್ತಕರೂ ತಮ್ಮ ಸಮೂಹಗಳೊಡನೆ ನಾಟ್ಯಗಳಿಂದಲೂ ಶ್ರೀಕೃಷ್ಣನನ್ನು ಸಂತೋಷಪಡಿಸಿದರು ; ಸೂತರು ಮಾಗಧರು ಸ್ತುತಿಪಾಠಕರು ಮೊದಲಾದವರು ಮೃದಂಗ ವೀಣಾ ಮುರಜ ವೇಣು ಶಂಖ ತಾಳನಾದಗಳಿಂದ ಕೆಲವರು ನರ್ತನಂಗೈದರು ; ಕೆಲವರು ಗಾನಂಗೈದರು ; ಕೆಲವರು ಸ್ತೋತ್ರಂಗೈದರು ; ಬ್ರಾಹ್ಮಣರು ವೇದಮಂತ್ರಗಳನ್ನು ಪಠಿಸುತಿದ್ದರು ; ಮಾತಾಡುವದರಲ್ಲಿ ನಿಪುಣರಾದ ಬ್ರಾಹ್ಮಣರು ಪುಣ್ಯಕರವಾದ ಕೀರ್ತಿಯುಳ್ಳ ಪೂರ್ವೀಕರಾದ ಅರಸರ ಕಥೆಗಳನ್ನು ಹೇಳಿದರು !

ಎಲೈ ಅರಸೇ ಕೇಳು, ಒಂದುದಿವಸ ಈಪ್ರಕಾರವಾಗಿ ಕೃಷ್ಣನು ಒಡ್ಡೋಲಗದಲ್ಲಿರುವ ಸಮಯದಲ್ಲಿ ಅಪೆ ರೂಪವಾದ ದರ್ಶನವುಳ್ಳ ಒಬ್ಬ ಪುರುಷನು ಬಂದು ದ್ವಾರಪಾಲಕರಿಂದ ಕೃಷ್ಣನಿಗೆ ವಿಜ್ಞಾಪಿಸಿ ಅಲ್ಲಿ ಪ್ರವೇಶಂಗೈದು ಅಂಜಲಿಯುಕ್ತನಾಗಿ ಪರಮೇಶ್ವರನಾದ ಶ್ರೀಕೃಷ್ಣನಿಗೆ ನಮಸ್ಕರಿಸಿ ಜರಾಸಂಧನ ನಿರ್ಬಂಧದಿಂದುಂಟಾದ ಅರಸರ ದುಃಖವನ್ನು ತಿಳಿಸುತ "ಎಲೈ ಸ್ವಾಮಿಯೆ, ದಿಗ್ವಿಜಯಕಾಲದಲ್ಲಿ ಜರಾಸಂಧನಿಗೆ ನಮ್ರಭಾವವನ್ನೈದದ ಇಪ್ಪತ್ತು ಸಾವಿರಮಂದಿ ಅರಸರು ಆತನಿಂದ ಬಲಾತ್ಕಾರವಾಗಿ ಗಿರಿವ್ರಜವೆಂಬ ದುರ್ಗದಲ್ಲಿ ಸೆರೆಹಾಕಲ್ಪಟ್ಟಿಧಾರೆ ; ಅವರು ನಿನ್ನನ್ನು ಕುರಿತು ' ಅಪ್ರಮೇಯನಾಗಿ ಆತ್ಮನಾಗಿ ಭಕ್ತರ ಭಯವನ್ನು ಪರಿಹರಿಸುವ ಎಲೈ ಶ್ರೀಕೃಷ್ಣನೆ, ಭೇದಬುದ್ಧಿಯುಳ್ಳವರಾದ್ದರಿಂದ ಸಂಸಾರದದೆಶೆಯಿಂದ ಭೀತರಾದ ನಾವು ನಿನ್ನನ್ನು ಶರಣುಹೊಂದುತ್ತೇವೆ ! ಎಲೈ ಹರಿಯೆ, ಈ ಜನ್ಮವು ಎಷ್ಟುಪರ್ಯಂತವು ನಿಷಿದ್ಧಕಾಮ್ಯಕರ್ಮಗಳಲ್ಲಿ ಅತ್ಯಂತಾಸಕ್ತಿಯುಳ್ಳದ್ದಾಗಿ ಕ್ಷೇಮಕರವಾದ ಸ್ವಧರ್ಮದಲ್ಲಿಯೂ ಪಾಂಚರಾತ್ರಾದಿ ಆಗಮಗಳಲ್ಲಿಯೂ ನಿನ್ನಿಂದ ನಿರೂಪಿಸಲ್ಪಟ್ಟ ನಿನ್ನ ಪೂಜೆಯಲ್ಲಿಯೂ ಏಕಾಗ್ರಚಿತ್ತವುಳ್ಳದ್ದಾಗಿರದೊ ಅಷ್ಟುಪರ್ಯಂತವೂ ಬಲವಂತವಾದ ಕಾಲವು ಜೀವಿಸಬೇಕೆಂಬ ಆಶೆಯನ್ನು ಛೇದಿಸುವದು ; ಅಂಥಾ ಕಾಲರೂಪನಾದ ನಿನಗೆ ನಮಸ್ಕಾರವು ! ಎಲೈ ಈಶ್ವರನೆ, ಲೋಕನಾಥನಾದ ನೀನು ಸುಜನರಕ್ಷಣಾರ್ಥವಾಗಿಯೂ ದುಷ್ಟನಿಗ್ರಹಾರ್ಥವಾಗಿಯೂ ಈ ಲೋಕದಲ್ಲಿ ಅವತರಿಸಿದವನಾದರೆ ನಮ್ಮ ದುಃಖಪರಿಹಾರವಾಗುವದು ; ನಾವು ದುಃಖಿಸುತಿಧೇವೆ ; ಜರಾಸಂಧನು ಮೊದಲಾದ ಕೆಲವು ದುಷ್ಟರು ನಿನ್ನ ಆಜ್ಞೆಯನ್ನು ಅತಿಕ್ರಮಿಸುತಿಧಾರೆ ; ನಿನ್ನಿಂದ ರಕ್ಷಿಸಲ್ಪಟ್ಟವರಾದಾಗ್ಯೂ ಮನುಷ್ಯರು ಸ್ವಕರ್ಮಜನ್ಯವಾದ ದುಃಖವನ್ನೈದುವರೇ ! ಆ ಅರ್ಥವನ್ನು ನಾವರಿಯೆವು ! ಎಲೈ ಈಶ್ವರನೆ, ರಾಜಭೋಗವು ವಿಷಯಸಾಧ್ಯವಾದ್ದರಿಂದ ನಮಗೆ ಸ್ವಪ್ನಪ್ರಾಯವಾಯಿತು ; ನಾವು ಪ್ರತಿಕ್ಷಣವಲ್ಲಿಯು ಭಯಯುಕ್ತವಾಗಿ ಮೃತಪ್ರಾಯವಾದ ಶರೀರದಿಂದ ಪತ್ನೀಪುತ್ರಾದಿ ವಿಷಯವಾದ ಚಿಂತೆಯನ್ನು ಮಾತ್ರವೇ ವಹಿಸುತಿಧೇವೆ ; ನಿನ್ನದೆಶೆಯಿಂದ ನಿಷ್ಕಾಮರಾಗಿ ಪಡೆಯತಕ್ಕದ್ದಾಗಿ ನಿನ್ನಲ್ಲೇ ಸ್ವತಸಿದ್ಧವಾಗಿ ಮುಕ್ತಿರೂಪವಾದ ಸುಖವನ್ನುಪೇಕ್ಷಿಸಿ ನಿನ್ನ ಮಾಯೆಯಿಂದ ಅತಿ ದೀನರಾಗಿ ದುಃಖಿಸುತಿಧೇವೆ ! ಎಲೈ ಹರಿಯೆ, ಹತ್ತುಸಾವಿರ ಗಜಗಳ ಬಲವುಳ್ಳವನಾಗಿ ತನ್ನ ಗೃಹದಲ್ಲಿ ಅರಸರಾದ ನಮ್ಮನ್ನು ಕುರಿಗಳನ್ನು

ನಿರೋಧಿಸುವ ಸಿಹ್ಮದಂತೆ ನಿರೋಧನಂಗೈದು ಬಂಧಿಸಿದಂಥಾ ಜರಾಸಂಧನೆಂಬ ನಾಮಧೇಯವು ಕರ್ಮಪಾಶದಿಂದ ಕಟ್ಟಲ್ಪಟ್ಟ ನಮ್ಮನ್ನು ಭಕ್ತರ ಶೋಕವನ್ನು ಪರಿಹರಿಸುವ ಪಾದಯುಗ್ಮವುಳ್ಳ ನೀನು ಬಂಧದಿಂದ ಬಿಡಿಸು! ಎಲೈ ಚಕ್ರಪಾಣಿಯಾದ ಶ್ರೀಕೃಷ್ಣನೆ, ನಿನ್ನೊಡನೆ ಹದಿನೆಂಟುಸರ್ತಿ ಯುದ್ಧವು ಪ್ರಸಕ್ತವಾಗಲು ಹದಿನೇಳು ಸರ್ತಿ ನಿನ್ನಿಂದ ಪರಾಜಿತನಾಗಿ ಅನಂತರದಲ್ಲಿ ಅಪರಿಮಿತ ಸಾಮರ್ಥ್ಯವುಳ್ಳವನಾದಾಗ್ಯು ಮನುಷ್ಯಶರೀರದಲ್ಲಿ ವಿಹರಿಸುವ ನಿನ್ನನ್ನು ಒಂದಾವರ್ತಿ ಜಯಿಸಿ ಅದರಿಂದ ಪ್ರಾಪ್ತವಾದ ಗರ್ವವುಳ್ಳವನಾಗಿ ನಿನ್ನ ಪ್ರಜೆಗಳಾದ ನಮ್ಮನ್ನು ಪೀಡಿಸುತಲಿರುವ ಜರಾಸಂಧನ ವಿಷಯದಲ್ಲಿ ಯಾವದು ಯುಕ್ತವೊ ಅದನ್ನು ಮಾಡು' ಎಂದು ವಿಜ್ಞಾಪಿಸಿದರು. ಎಲೈ ಶ್ರೀಕೃಷ್ಣನೆ, ಜರಾಸಂಧನಿಂದ ನಿರೋಧನಂಗೈಯಲ್ಪಟ್ಟವರಾಗಿ ನಿನ್ನ ದರ್ಶನವನ್ನಪೇಕ್ಷಿಸುತಿರುವ ಅರಸರು ನಿನ್ನ ಪಾದಯುಗ್ಮವನ್ನು ಶರಣುಹೊಂದಿಧಾರೆ; ದೀನರಾದ ಆ ಅರಸರಿಗೆ ನಿನ್ನಿಂದ ಸುಖವು ಕಲ್ಪಿಸಲ್ಪಡಲಿ'' ಎಂದು ನುಡಿದನು.

ಎಲೈ ಪರೀಕ್ಷಿದ್ರಾಯನೆ, ಕೇಳು: ಆ ರಾಜದೂತನು ಶ್ರೀಕೃಷ್ಣನಿಗೆ ಈರೀತಿ ಹೇಳುತ್ತಿರುವ ಸಮಯದಲ್ಲಿ ಹೊಂಬಣ್ಣನಾದ ಜಡೆಗಳ ಸಮೂಹವನ್ನು ಧರಿಸಿ ಅಮಿತಕಾಂತಿಯುಕ್ತನಾದ ನಾರದಮುನಿಯು ಸೂರ್ಯನಂತೆ ಅಲ್ಲಿಗೆ ಆವಿರ್ಭವಿಸಿದನು; ಸಮಸ್ತ ಲೋಕಗಳಿಗೂ ಈಶ್ವರನಾಗಿ ಬ್ರಹ್ಮಾದಿಗಳಿಗೂ ನಿಯಾಮಕನಾಗಿ ಭಗವಂತನಾದ ಶ್ರೀಕೃಷ್ಣನು ಆ ಮುನಿಯನ್ನು ಕಂಡು ಸಾಮಾಜಿಕರೊಡನೆಯೂ ಪರಿಜನರೊಡನೆಯೂ ಯುಕ್ತನಾಗಿ ಸಂತೋಷದಿಂದ ಪ್ರತ್ಯುತ್ಥಾನಂಗೈದು ಆ ಮುನಿಗೆ ಶಿರಸ್ಸಿನಿಂದ ನಮಸ್ಕರಿಸಿ ಪೀಠದಲ್ಲಿ ಕುಳ್ಳಿರಿಸಿ ವಿಧಿಯುಕ್ತವಾಗಿ ಪೂಜಿಸಿ ಶ್ರದ್ಧೆಯಿಂದ ಸಂತೋಷಪಡಿಸುತ ಸತ್ಯವಚನಗಳಿಂದ ಆತನನ್ನು ಕುರಿತು '' ಎಲೈ ಮುನಿಯೆ, ಈಶ್ವರನನ್ನೇ ಕರ್ತೃವಾಗುಳ್ಳ ಲೋಕಗಳಲ್ಲಿ ಸ್ವಲ್ಪವಾದರು ನಿನಗೆ ಅವಿದಿತವಾದ ವ್ಯಾಪಾರವಿಲ್ಲನಾದಕಾರಣ ಪಾಂಡವರ ವೃತ್ತಾಂತವನ್ನು ಹೇಳು'' ಎಂದು ಪ್ರಶ್ನೆಗೈದನು.

ನಾರದನು ಆತನನ್ನು ಕುರಿತು '' ಸರ್ವವ್ಯಾಪಕನಾದ ಎಲೈ ಶ್ರೀಕೃಷ್ಣನೆ, ಬ್ರಹ್ಮದೇವನಿಗೂ ಮೋಹವನ್ನುಂಟುಮಾಡುವವನಾಗಿ ಸ್ವಕೀಯಗಳಾದ ಅವಿದ್ಯಾಶಕ್ತಿಗಳಿಂದ ಲೋಕಗಳಲ್ಲಿ ಅಂತರ್ಯಾಮಿರೂಪದಿಂದಿರುವವನಾಗಿ ಸರ್ವಭೂತಗಳಲ್ಲಿಯು ಅಗ್ನಿಯಂತೆ ಸ್ವಶಕ್ತಿಯಿಂದ ಆಚ್ಛಾದನಂಗೈಯಲ್ಪಟ್ಟ ಪ್ರಕಾಶವುಳ್ಳವನಾಗಿರುವ ನಿನ್ನ ಅತಿಕ್ರಮಿಸಲಶಕ್ಯವಾದ ಮಾಯೆಯು ನನ್ನಿಂದ ಬಹುಪ್ರಕಾರವಾಗಿ ಕಾಣಲ್ಪಟ್ಟಿತು; ಆದಕಾರಣ ಪಾಂಡವರ ಕ್ಷೇಮವೃತ್ತಾಂತಪ್ರಶ್ನಾದಿಗಳು ಆಶ್ಚರ್ಯಕರಗಳಲ್ಲ; ಮಾಯೆಯಿಂದ ಜಗತ್ತನ್ನು ಸೃಜಿಸುತಲೂ ಸಂಹರಿಸುತಲೂ ಇರುವ ನಿನ್ನ ವ್ಯಾಪಾರವನ್ನು ಯಾವನು ತಿಳಿಯಲು ಯೋಗ್ಯನಾದಾನು! ನೀನು ನಿಜಸ್ವರೂಪದಿಂದ ಚಿಂತಿಸಲಶಕ್ಯನಾದ್ದರಿಂದ ನಿನಗೋಸ್ಕರ ನಾವು ನಮಸ್ಕಾರಮಾತ್ರವಂಗೈಯುತ್ತೇವೆ; ಅವಿದ್ಯೆಯೆಂಬ ಅಂಧಕಾರದಿಂದ ಆಚ್ಛಾದನಂಗೈದು ಅನರ್ಥಸಾಧಕವಾದ ಶರೀರದಡೆಶೆಯಿಂದ ಸಂಸಾರವಂಗೈಯುತ ಆ ಅವಿದ್ಯಾತಮಸ್ಸಿನಿಂದಲೇ ಶರೀರದ ದಶೆಯಿಂದ ಮುಕ್ತನಾಗುವ ಉಪಾಯವನ್ನರಿಯದವನಾಗಿ ಜೀವನ್ಮುಕ್ತಿಗೋಸ್ಕರ ಲೀಲಾವತಾರಗಳಿಂದ ತನ್ನ ಚರಿತ್ರವೆಂಬ ದೀಪವನ್ನು ಪ್ರಕಾಶಂಗೈವಂಥಾ ನಿನ್ನನ್ನು ನಾನು ಶರಣುಹೊಂದುತ್ತೇನೆ! ಎಲೈ ಪರಮಾತ್ಮನಾದ ಶ್ರೀಕೃಷ್ಣನೆ, ಆದಾಗ್ಯು ಮನುಷ್ಯಲೋಕವ್ಯಾಪಾರವನ್ನನುಕರಿಸುತಲಿರುವ ನಿನಗೆ ನಿನ್ನ ಸೋದರತ್ತೆಯ ಮಗನಾಗಿ ಭಕ್ತನಾದ ಧರ್ಮರಾಯನ ವೃತ್ತಾಂತವನ್ನು ತಿಳಿಸುತ್ತೇನೆ! ಎಲೈ ಸ್ವಾಮಿಯೆ, ಧರ್ಮರಾಯನು ಬ್ರಹ್ಮಲೋಕವನ್ನು ಪಡೆಯಲಿಚ್ಛೆಯುಳ್ಳವನಾಗಿ ಕ್ರತುಶ್ರೇಷ್ಠವಾದ ರಾಜಸೂಯಯಾಗದಿಂದ ನಿನ್ನನ್ನು ಪೂಜಿಸುವನು; ಅವನ್ನು ನೀನು ನೋಡಿ ಶ್ಲಾಘಿಸುವವನಾಗು! ಎಲೈ ಹರಿಯೆ, ಆ ರಾಜಸೂಯಯಾಗದಲ್ಲಿ ದೇವಾದಿಗಳೂ ಕೀರ್ತಿವಂತರಾದ ಅರಸುಗಳೂ ನಿನ್ನನ್ನು ನೋಡಲಿಚ್ಛೆಯುಳ್ಳವರಾಗಿ ಬರುವರು! ಎಲೈ ಶ್ರೀಹರಿಯೆ, ಅಂತ್ಯಜರು ನಿನ್ನ ನಾಮಸ್ಮರಣ ಸಂಕೀರ್ತನದಿಂದಲೂ ಧ್ಯಾನದಿಂದಲೂ ಪರಿಶುದ್ಧರಾಗುತಲಿರುವಲ್ಲಿ ಸಾಕ್ಷಾತ್ ಬ್ರಹ್ಮರೂಪನಾದ ನಿನ್ನ ದರ್ಶನವೂ ಅಂಗಸ್ಪರ್ಶವೂ ಉಳ್ಳ ಪುರುಷರು ಕೃತಾರ್ಥರಾಗುವರೆಂದು ಹೇಳತಕ್ಕದ್ದೇನು! ಸಕಲ ಲೋ

ಕಗಳಿಗೂ ಮಂಗಳರೂಪನಾದ ಎಲೈ ಶ್ರೀಕೃಷ್ಣನೆ, ಸ್ವರ್ಗದಲ್ಲಿಯೂ ಪಾತಾಳದಲ್ಲಿಯೂ ಸಹ ಪ್ರಸಿದ್ಧವಾಗಿ ದಿಕ್ಪಾಲಕ ಲೋಕಂಗಳಿಗೆ ಮೇಲುಗಟ್ಟೆನಂತೆ ಅಲಂಕಾರಭೂತನಾಗಿ ನಿರ್ಮಲನಾಗಿರುವ ನಿನ್ನ ಯಶಸ್ಸೂ ಸ್ವರ್ಗದಲ್ಲಿ ಮಂದಾಕಿನಿಯೆಂದೂ ಪಾತಾಳದಲ್ಲಿ ಭೋಗವತಿಯೆಂದೂ ಭೂಲೋಕದಲ್ಲಿ ಗಂಗೆಯೆಂದೂ ಪ್ರಸಿದ್ಧವಾದ ನಿನ್ನ ಪಾದೋದಕವೂ ಪ್ರಪಂಚವನ್ನು ಪಾವನಂಗೈಯುತಲಿರುವದರಿಂದ ನಿನ್ನ ಆಗಮನದಿಂದ ಜನರಿಗೆ ಸಮಸ್ತ ಶುಭವೂ ಉಂಟಾಗುವದು" ಎಂದು ನುಡಿದನು.

ಈ ಪ್ರಕಾರವಾಗಿ ನುಡಿದ ನಾರದನ ವಾಕ್ಯವನ್ನು ಕೇಳಿ ಅಲ್ಲಿದ್ದ ಯಾದವರು ಜರಾಸಂಧನನ್ನು ಜಯಿಸುವ ಇಚ್ಛೆಯಿಂದ ತ್ವರೆಪಡುತಿರಲು ಕೃಷ್ಣನು ನಗುತ ಭೃತ್ಯನಾದ ಉದ್ಧವನನ್ನು ಕುರಿತು ಮೃದುವಚನಗಳಿಂದ "ಎಲೈ ಉದ್ಧವನೆ, ನೀನು ಮಂತ್ರಸಾಧ್ಯಗಳಾದ ಅರ್ಥಗಳನ್ನೂ ಪರಿಪಾಕವನ್ನೂ ತಿಳಿದವನಾಗಿ ನಮಗೆ ಉತ್ಕೃಷ್ಟನಾದ ನೇತ್ರಸ್ವರೂಪನೂ ಆಪ್ತನೂ ಆದಕಾರಣ ನಮ್ಮಿಂದ ಮಾಡತಕ್ಕ ವ್ಯಾಪಾರವನ್ನು ಹೇಳು; ನಾವು ಶ್ರದ್ಧೆಯಿಂದ ಆ ಕಾರ್ಯವನ್ನಾಚರಿಸುವೆವು" ಅಂದನು.

ಎಲೈ ಪರೀಕ್ಷಿದ್ರಾಯನೆ, ಸರ್ವಜ್ಞನಾದಾಗ್ಯೂ ಮೂಢನಂತೆ ಇರುವ ತನ್ನ ಸ್ವಾಮಿಯಾದ ಶ್ರೀಕೃಷ್ಣನಿಂದ ಈರೀತಿ ಪ್ರಶ್ನೆಗೈಯಲ್ಪಟ್ಟವನಾಗಿ ಉದ್ಧವನು ಶ್ರೀಕೃಷ್ಣನ ಆಜ್ಞೆಯನ್ನು ಶಿರಸ್ಸಿನಿಂದ ವಹಿಸಿದನು.

## ೭೧ನೇ ಅಧ್ಯಾಯ.

### ಕೃಷ್ಣನು ಇಂದ್ರಪ್ರಸ್ಥಕ್ಕೆ ಹೋದದ್ದು.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ಮಹಾ ಬುದ್ಧಿವಂತನಾದ ಉದ್ಧವನು ಕೃಷ್ಣಸಭೆಯಲ್ಲಿ ನಾರದಮುನಿಯಿಂದ ಹೇಳಲ್ಪಟ್ಟ ವಚನವನ್ನು ಕೇಳಿ ಸಮಾಜಿಕರ ತಾತ್ಪರ್ಯವನ್ನೂ ಶ್ರೀಕೃಷ್ಣನ ತಾತ್ಪರ್ಯವನ್ನೂ ತಿಳಿದು "ಎಲೈ ಶ್ರೀಕೃಷ್ಣನೆ ಕೇಳು, ಮಹಾ ಯಾಗಂಗೈವ ನಿನ್ನ ಸೋದರತ್ತೆಯ ಮಗನಾದ ಧರ್ಮರಾಯನಿಗೆ ನಿನ್ನಿಂದ ಸಹಾಯವು ಮಾಡತಕ್ಕದ್ದೆಂದು ನಾರದಮುನಿಯಿಂದ ಯಾವ ಅರ್ಥವು ನಿರೂಪಿಸಲ್ಪಟ್ಟಿತೋ ಅದು ಅಗತ್ಯವಾಗಿ ಮಾಡತಕ್ಕದ್ದು; ಜರಾಸಂಧನಿಂದ ಪೀಡಿತರಾಗಿ ಶರಣಾಗತರಾದ ಅರಸರ ರಕ್ಷಣವೂ ಮಾಡತಕ್ಕದ್ದು! ಎಲೈ ಹರಿಯೆ, ದಿಗ್ಮಂಡಲವನ್ನು ಜಯಿಸುವ ಮಹಾ ವೀರನಾದ ಅರಸನಿಂದ ರಾಜಸೂಯಯಾಗವು ಮಾಡತಕ್ಕದ್ದಾದಕಾರಣ ದಿಗ್ವಿಜಯವೆಂಬ ನಿಮಿತ್ತದಿಂದ ಜರಾಸಂಧನು ಜಯಿಸಲ್ಪಟ್ಟು ರಾಜಸೂಯಯಾಗವೂ ಶರಣಾಗತರಕ್ಷಣವೂ ಎಂಬ ಉಭಯಾರ್ಥವೂ ಸಿದ್ಧಿಸುವದೆಂದು ನನಗೆ ತೋರುತ್ತದೆ; ನಮಗೂ ಜರಾಸಂಧನನ್ನು ಜಯಿಸುವದರಿಂದ ಮಹತ್ತಾದ ಫಲವುಂಟಾಗುತಿದೆ; ಗಿರಿವ್ರಜವೆಂಬ ದುರ್ಗದಲ್ಲಿ ಬಂಧಿಸಲ್ಪಟ್ಟಿರುವ ಅರಸರನ್ನು ಆ ಬಂಧನದ ದಶೆಯಿಂದ ಬಿಡಿಸಿದರೆ ನಿನಗೆ ಕೀರ್ತಿಯುಂಟಾಗುವದು; ಬಲದಲ್ಲಿ ಹತ್ತುಸಾವಿರ ಆನೆಗಳಿಗೆ ಸಮಾನನಾದ ಜರಾಸಂಧನೂ ಅವನಿಗಿಂತಲೂ ಬಲಶಾಲಿಗಳಾದ ಜನರಿದ್ದಾಗ್ಯೂ ಆತನಿಗೆ ಸಮಬಲನಾದ ಭೀಮನನ್ನು ಹೊರ್ತು ಅನ್ಯರಿಂದ ಆತನನ್ನು ಜಯಿಸಲಶಕ್ಯವು; ದ್ವಂದ್ವಯುದ್ಧದಿಂದ ಜರಾಸಂಧನು ಜಯಿಸಲ್ಪಡುವನೇ ಹೊರ್ತು ಯುದ್ಧದಲ್ಲಿ ಆತನೊಬ್ಬನೇ ಬರದೆ ನೂರು ಅಕ್ಷೋಹಿಣೀ ಸೇನೆಗಳಿಂದ ಸುತ್ತಿಕೊಳ್ಳಲ್ಪಟ್ಟು ಬಂದರೆ ಯಾರಿಂದಲೂ ಜಯಿಸಲು ಶಕ್ಯವಲ್ಲ; ಇದಕ್ಕೆ ಉಪಾಯವೇನಂದರೆ; ಬ್ರಾಹ್ಮಣಪ್ರಿಯನಾದ ಜರಾಸಂಧನು ಬ್ರಾಹ್ಮಣರಿಂದ ಯಾಚಿಸಲ್ಪಟ್ಟವನಾದಲ್ಲಿ ಯಾವ ಸಮಯದಲ್ಲಿಯಾದರೂ ಅವರನ್ನು ತಿರಸ್ಕರಿಸುವದಿಲ್ಲ; ಆದಕಾರಣ ಭೀಮನು ಬ್ರಾಹ್ಮಣವೇಷವನ್ನು ಧರಿಸಿ ಅವನನ್ನೈದಿ ದ್ವಂದ್ವಯುದ್ಧವನ್ನು ಯಾಚಿಸಿದರೆ ಆ ದ್ವಂದ್ವಯುದ್ಧದಲ್ಲಿ ನಿನ್ನ ಸನ್ನಿಧಾನಬಲದಿಂದ ಜರಾಸಂಧನನ್ನು ಜಯಿಸುವನು; ಈ ಅರ್ಥದಲ್ಲಿ ಸಂದೇಹವಿಲ್ಲ! ರೂಪರಹಿತನಾಗಿಯೂ ಕಾಲಸ್ವರೂಪನಾಗಿಯೂ ಇರುವ ಈಶ್ವರನಾದ ನಿನಗೆ ಪ್ರಪಂಚದ ಸೃಷ್ಟಿಯಲ್ಲಿ ಬ್ರಹ್ಮದೇವನೂ ಸಂಹಾರದಲ್ಲಿ ರುದ್ರನೂ ನಿಮಿತ್ತ

ಮಾತ್ರರಾಗಿರುವ ರೀತಿಯಲ್ಲಿ ನಿನ್ನ ಸನ್ನಿಧಾನಬಲದಿಂದ ಭೀಮನು ನಿಮಿತ್ತಮಾತ್ರನಾಗಿ ಅವನನ್ನು ಜಯಿಸುವನು! ಎಲೈ ಹರಿಯೆ, ಜರಾಸಂಧನಿಂದ ನಿರೋಧನಗೈಯಲ್ಪಟ್ಟ ಅರಸರ ಪತ್ನಿಯರು (ಗೋಪಿಯರು ಶಂಖಚೂಡನಿಂದ ಅಪಹರಿಸಲ್ಪಟ್ಟ ಕಾಲದಲ್ಲಿ ನಿನ್ನಿಂದ ಆ ಯಕ್ಷನ ವಧೆಯನ್ನೂ ತಮ್ಮ ವಿಮೋಚನವನ್ನೂ ಅಪೇಕ್ಷಿಸುತ ನಿನ್ನನ್ನು ಕುರಿತು ಗಾನಗೈವರೀತಿಯಲ್ಲಿ) ತಮ್ಮ ತಮ್ಮ ಗೃಹಗಳಲ್ಲಿ ಪುತ್ರಲಾಲನಾದಿ ವ್ಯಾಪಾರಗಳಲ್ಲಿ 'ಎಲೈ ಪುತ್ರನೆ, ದುಃಖಿಸಬೇಡ; ಶ್ರೀಕೃಷ್ಣನು ನಮಗೆ ಶತ್ರುವಾದ ಜರಾಸಂಧನನ್ನು ಸಂಹರಿಸಿ ನಮ್ಮ ಪತಿಗಳನ್ನು ಬಿಡಿಸುವನು' ಎಂದು ರಮಣೀಯವಾದ ನಿನ್ನ ಚರಿತ್ರವನ್ನು ಗಾನಗೈಯುತಲಿಹಾರೆ; ಮತ್ತು ಅಸುರರ ಭಯದಿಂದ ಶರಣಾಗತರಾದ ಋಷಿಗಳನ್ನೂ ಮೊಸಳೆಯಬಂಧನದಿಂದ ಗಜೇಂದ್ರನನ್ನೂ ರಾವಣನಸೆರೆಯಿಂದ ಸೀತಾದೇವಿಯನ್ನೂ ಕಂಸನಸೆರೆಯಿಂದ ದೇವಕೀ ವಸುದೇವರನ್ನೂ ಬಿಡಿಸಿದ ನಿನ್ನಚರಿತ್ರವನ್ನು ಅವರು ಗಾನಗೈಯುತಲಿಹಾರೆ; ಆದಕಾರಣ ಆ ರಾಜಪತ್ನಿಯರ ಸಂಕಲ್ಪವನ್ನು ದಯೆಯಿಂದ ನೀನು ಪೂರಿಸುವನಾಗು! ಎಲೈ ಕೃಷ್ಣನೆ, ಜರಾಸಂಧನ ವಧೆಯು ಅನೇಕ ಕಾರ್ಯಗಳಿಗೆ ಸಾಧಕವಾಗುವದು; ಅರಸುಗಳ ಪುಣ್ಯಪರಿಪಾಕದಿಂದಲೂ ಜರಾಸಂಧಾದಿಗಳ ಪಾಪಪರಿಪಾಕದಿಂದಲೂ ಧರ್ಮರಾಯನ ರಾಜಸೂಯಯಾಗವು ನಿನಗೂ ಬಹುತರ ಸಮ್ಮತವಾಗುವದು" ಎಂದು ನುಡಿದನು.

ಈರೀತಿ ಉದ್ಧವನಿಂದ ಹೇಳಲ್ಪಟ್ಟ ಸರ್ವಪ್ರಕಾರದಿಂದಲೂ ಶುಭಕರವಾಗಿ ವೃದ್ಧಿಕರವಾದ ವಚನವನ್ನು ಕೇಳಿ ನಾರದನೂ ವೃದ್ಧರಾದ ಯಾದವರೂ ಶ್ರೀಕೃಷ್ಣನೂ ಬಹು ಚನ್ನಾಯಿತೆಂದು ಶ್ಲಾಘಿಸಿದರು; ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ತಂದೆತಾಯಿಗಳು ಮೊದಲಾದವರಿಗೂ ಗುರುಜನರಿಗೂ ವಿಜ್ಞಾಪನಗೈದು ಪ್ರಯಾಣಕ್ಕೋಸ್ಕರ ದಾರುಕನನ್ನೂ ಚಕ್ರಾದಿಗಳನ್ನೂ ಆಜ್ಞಾಪಿಸಿ ಪುತ್ರಪರಿವಾರಯುಕ್ತರಾದ ತನ್ನಪತ್ನಿಯರಿಗೆ ಪ್ರಯಾಣಮಾಡಿಸಿ ಬಲರಾಮನನ್ನೂ ಉಗ್ರಸೇನನನ್ನೂ ಅನುಜ್ಞೆಯಂ ಕೇಳಿ ಸಾರಥಿಯಿಂದ ತರಲ್ಪಟ್ಟ ಗರುಡಧ್ವಜವುಳ್ಳ ರಥವನ್ನೇರಿ ಅನೇಕಗಳಾದ ರಥ ಗಜ ತುರಗ ಪದಾತಿಗಳಿಂದಲೂ ಸಾರಥಿಗಳಿಂದಲೂ ರಥಿಕರಿಂದಲೂ ಭಯಂಕರವಾದ ತನ್ನ ಸೇನೆಯಿಂದ ಸುತ್ತಲ್ಪಟ್ಟವನಾಗಿ ಮೃದಂಗ ಭೇರಿ ಆನಕ ಶಂಖ ಗೋಮುಖಗಳೆಂಬ ವಾದ್ಯಗಳ ಘೋಷದಿಂದ ಧ್ವನಿಗೈಯಲ್ಪಡುತ ಆ ದಿಕ್ಕಿನ ದೆಶೆಯಿಂದ ಹೊರಟನು; ಅನಂತರದಲ್ಲಿ ಪತಿವ್ರತೆಯರಾದ ಶ್ರೀಕೃಷ್ಣಪತ್ನಿಯರು ತಮ್ಮ ಪುತ್ರರೊಡನೆ ಯುಕ್ತರಾಗಿ ಉತ್ತಮಗಳಾದ ವಸ್ತ್ರಾಭರಣ ಲೇಪನ ಮಾಲ್ಯಗಳುಳ್ಳವರಾಗಿ ಖಡ್ಗ ಖೇಟಕಗಳನ್ನು ಧರಿಸಿರುವ ಪುರುಷರಿಂದ ನಾಲ್ಕುಕಡೆಯಲ್ಲಿಯೂ ಸುತ್ತಲ್ಪಟ್ಟವರಾಗಿ ನಡೆಯಾನೆಗಳಿಂದಲೂ ಅಶ್ವಗಳಿಂದಲೂ ಸುವರ್ಣಮಯಗಳಾದ ಪಾಲಕಿಗಳಿಂದಲೂ ಪತಿಯಾದ ಕೃಷ್ಣನ ಹಿಂದುಗಡೆಯಲ್ಲಿ ತೆರಳಿದರು; ಭೃತ್ಯಸ್ತ್ರೀ ವೇಶ್ಯಾಸ್ತ್ರೀಯರು ಅಲಂಕಾರಯುಕ್ತರಾಗಿ ಲಾವಂಚ ಮೊದಲಾದವುಗಳಿಂದ ರಚಿಸಲ್ಪಟ್ಟ ಗೃಹಗಳು ವಸ್ತ್ರಗಳು ಕಂಬಳಿಗಳು ಸರವತ್ತಿಗೆಗಳು ಮೊದಲಾದ ಸಾಮಾನುಗಳನ್ನು ಎತ್ತು ಮೊದಲಾದ ಪಶುಗಳಲ್ಲಿ ದೃಢವಾಗಿ ಕಟ್ಟಿಕೊಂಡು ನಡೆಯಾನೆಗಳಿಂದಲೂ ಒಂಟೆಗಳಿಂದಲೂ ಎತ್ತುಗಳಿಂದಲೂ ಮಹಿಷಗಳಿಂದಲೂ ಖರಗಳಿಂದಲೂ ಹೇಸರಗಳಿಂದಲೂ ಬಂಡಿಗಳಿಂದಲೂ ಹೆಣ್ಣಾನೆಗಳಿಂದಲೂ ಕೂಡಿ ತೆರಳಿದರು; ಆಗ ದಿಕ್ಕುಗಳಲ್ಲಿ ಸರ್ವತ್ರ ವ್ಯಾಪ್ತವಾದ ಧ್ವನಿಯುಳ್ಳದ್ದಾಗಿ ಮಹತ್ತಾದ ಕೃಷ್ಣನ ಸೇನೆಯು ಸಮುದ್ರವು ವ್ಯಾಕುಲಗಳಾದ ಮಹಾ ಮತ್ಸ್ಯಗಳಿಂದಲೂ ತರಂಗಮಗಳಿಂದಲೂ ಪ್ರಕಾಶಿಸುವ ರೀತಿಯಲ್ಲಿ ಧ್ವಜ ಪತಾಕ ಛತ್ರಚಾಮರಗಳಿಂದಲೂ ಉತ್ತಮಗಳಾದ ಆಯುಧಾಭರಣ ಕಿರೀಟ ಕವಚಗಳಿಂದಲೂ ಹಗಲಸೂರ್ಯನ ಕಿರಣಗಳಿಂದಲೂ ಪ್ರಕಾಶಿಸಿತು! ಅನಂತರದಲ್ಲಿ ನಾರದಮುನಿಯು ಶ್ರೀಕೃಷ್ಣನಿಂದ ಪೂಜಿಸಲ್ಪಟ್ಟವನಾಗಿ ಆತನನ್ನು ಹೃದಯದಲ್ಲಿ ಭಾವಿಸುತ ನಮಸ್ಕರಿಸಿ ಆತನಿಂದ ನಿಶ್ಚಯಿಸಲ್ಪಟ್ಟ ಅರ್ಥವನ್ನು ಕೇಳಿ ಸಂತೋಷಪಟ್ಟು ಕೃಷ್ಣನ ದರ್ಶನದಿಂದ ಸುಖಯುಕ್ತವಾದ ಇಂದ್ರಿಯಗಳುಳ್ಳವನಾಗಿ ಆಕಾಶಮಾರ್ಗದಿಂದ ತೆರಳಿದನು; ಶ್ರೀಕೃಷ್ಣನು ಆ ರಾಜದೂತನನ್ನು ಕುರಿತು ಮಧುರವಚನದಿಂದ ಸಂತೋಷಪಡಿಸುತ "ಎಲೈ ದೂತನೆ, ನಿಮಗೆ ಕ್ಷೇಮವುಂಟಾಗಲಿ; ನಾನು ಜರಾಸಂಧನನ್ನು ಸಂಹರಿಸುತ್ತೇನೆ" ಎಂದು ನುಡಿದನು.

ಆ ರಾಜದೂತನು ಈರೀತಿ ಕೃಷ್ಣನಿಂದ ನಿರೂಪಿಸಲ್ಪಟ್ಟು ಆ ಅರಸರಿಗೆ ಶ್ರೀಕೃಷ್ಣನಿಂದ ನಿರೂಪಿಸಲ್ಪಟ್ಟ ಅರ್ಥವನ್ನು ವಿಸ್ತರಿಸಿದನು; ಅವರು ಆ ದೂತನ ವಚನವನ್ನು ಕೇಳಿ ಸಂತೋಷಪಟ್ಟು ತಮಗೆ ಬಂಧವಿಮೋಚನವನ್ನು ಅಪೇಕ್ಷಿಸುತ ಕೃಷ್ಣನ ಆಗಮನವನ್ನು ನಿರೀಕ್ಷಿಸಿದರು! ಅನಂತರದಲ್ಲಿ ಕೃಷ್ಣನು ಆನರ್ತದೇಶಗಳ ಪರ್ವತಗಳನ್ನೂ ನದಿಗಳನ್ನೂ ಪಟ್ಟಣಗಳನ್ನೂ ಪ್ರಸಿದ್ಧವಾದ ಗ್ರಾಮಗಳನ್ನೂ ಹಳ್ಳಿಗಳನ್ನೂ ಸುವರ್ಣಾದಿ ಉತ್ಪತ್ತಿಸ್ಥಾನಗಳನ್ನೂ ದಾಟಿ ಕುರುಕ್ಷೇತ್ರವನ್ನತಿಕ್ರಮಿಸಿ ದೃಷದ್ವತಿಯೆಂಬ ನದಿಯನ್ನೂ ಸರಸ್ವತೀನದಿಯನ್ನೂ ಪಾಂಚಾಲದೇಶಗಳನ್ನೂ ಮತ್ಸ್ಯದೇಶಗಳನ್ನೂ ದಾಟಿ ಇಂದ್ರಪ್ರಸ್ಥವೆಂಬ ಪಟ್ಟಣವನ್ನೈದಿದನು; ಆಗ ಧರ್ಮರಾಯನು ಮನುಷ್ಯರಿಂದ ನೋಡಲಶಕ್ಯನಾದ ಶ್ರೀಕೃಷ್ಣನು ತಮ್ಮ ಪಟ್ಟಣಕ್ಕೆ ಬಂದನೆಂಬ ವೃತ್ತಾಂತವನ್ನು ಕೇಳಿ ಸಂತೋಷಯುಕ್ತನಾಗಿ ಪುರೋಹಿತರೊಡನೆಯೂ ಮಿತ್ರರೊಡನೆಯೂ ಕೂಡಿ ಪಟ್ಟಣದಿಂದ ಹೊರಟು ಗೀತವಾದ್ಯಘೋಷದಿಂದಲೂ ಅತ್ಯಂತವಾದ ವೇದಘೋಷದಿಂದಲೂ ಮುಖ್ಯವಾದ ಪ್ರಾಣವನ್ನೆದಿರುಗೊಳ್ಳುವ ಇಂದ್ರಿಯಗಳಂತೆ ಶ್ರೀಕೃಷ್ಣನನ್ನು ಆದರಣೆಯಿಂದ ಎದುರುಗೊಂಡು ಬಹುಕಾಲದಿಂದ ದೃಷ್ಟಿವಿಷಯನಾಗಿ ಅತ್ಯಂತ ಪ್ರಿಯನಾದ ಶ್ರೀಕೃಷ್ಣನನ್ನು ಕಂಡು ಸ್ನೇಹದಿಂದ ದ್ರವಿಸಿದ ಹೃದಯವುಳ್ಳವನಾಗಿ ಬಾರಿಬಾರಿಗೂ ಆಲಿಂಗನಂಗೈದು ಲಕ್ಷ್ಮೀದೇವಿಗೆ ಉತ್ತಮಗೃಹಸ್ವರೂಪವಾದ ಶ್ರೀಕೃಷ್ಣನ ಶರೀರವನ್ನು ತನ್ನ ಭುಜಗಳಿಂದ ಆಲಿಂಗನಂಗೈದು ಪಾಪರಹಿತನಾಗಿ ಆನಂದಬಾಷ್ಪಯುಕ್ತವಾದ ನೇತ್ರಗಳುಳ್ಳವನಾಗಿ ರೋಮಾಂಚಯುಕ್ತನಾಗಿ ಲೋಕವ್ಯವಹಾರವನ್ನು ಮರೆತನು; ಅನಂತರದಲ್ಲಿ ಭೀಮನು ಸೋದರಮಾವನ ಪುತ್ರನಾದ ಶ್ರೀಕೃಷ್ಣನನ್ನು ಪ್ರೇಮದಿಂದ ವ್ಯಾಕುಲಗಳಾದ ಇಂದ್ರಿಯಗಳುಳ್ಳವನಾಗಿ ಆಲಿಂಗನಂಗೈದು ಆನಂದವನ್ನು ಪಡೆದನು; ಅರ್ಜುನನು ಅತಿ ಮಿತ್ರನಾದ ಶ್ರೀಕೃಷ್ಣನನ್ನು ಸಂತೋಷದಿಂದೈದಿದನು; ಈರೀತಿ ಎಲ್ಲರು ಆನಂದಬಾಷ್ಪಗಳಿಂದ ಪೂರ್ಣಗಳಾದ ನೇತ್ರಗಳುಳ್ಳವರಾಗಿ ಶ್ರೀಕೃಷ್ಣನನ್ನು ಆಲಿಂಗನಂಗೈಯಲು ಆತನು ಅರ್ಜುನನಿಂದ ಆಲಿಂಗನಂಗೈಯಲ್ಪಟ್ಟವನಾಗಿ ನಕುಲ ಸಹದೇವರಿಂದ ಅಭಿವಾದನಂಗೈಯಲ್ಪಟ್ಟು ಬ್ರಾಹ್ಮಣರಿಗೆ ನಮಸ್ಕಾರಂಗೈದು ಯಥೋಚಿತವಾಗಿ ವೃದ್ಧರನ್ನು ನಮಸ್ಕರಿಸಿ ಅವರಿಂದ ಬಹುಮಾನಂಗೈಯಲ್ಪಟ್ಟವನಾಗಿ ಕೌರವ ಸೃಂಜಯ ಕೇಕಯ ದೇಶಾಧಿಪತಿಗಳಾದ ಅರಸರನ್ನು ಬಹುಮಾನಂಗೈದನು; ಆಗ ಸೂತ ಮಾಗಧ ಗಾಯಕರು ಸ್ತೋತ್ರಪಾಠಕರು ಪರಿಹಾಸಕರು ಮೊದಲಾದವರು ಮೃದಂಗ ಶಂಖ ಪಟಹ ವೀಣಾ ಪಣಹ ವೇಣು ವಾದ್ಯಗಳಿಂದ ಕೃಷ್ಣನನ್ನು ಸ್ತುತಿಸಿ ನರ್ತನಂಗೈಯುತ ಗಾನಂಗೈದರು; ಬ್ರಾಹ್ಮಣರು ಶ್ರೀಕೃಷ್ಣನನ್ನು ಸ್ತುತಿಸಿದರು! ಭಗವಂತನಾದ ಶ್ರೀಕೃಷ್ಣನು ಈರೀತಿ ಮಿತ್ರರಿಂದ ಬಹುಮಾನಂಗೈಯಲ್ಪಟ್ಟವನಾಗಿ ಸ್ತುತಿಸಲ್ಪಡುತ ಗಜಗಳ ಪರಿಮಳಯುಕ್ತವಾದ ಮದೋದಕದಿಂದ ನೆನೆಯಿಸಲ್ಪಟ್ಟ ರಾಜಮಾರ್ಗಗಳುಳ್ಳದ್ದಾಗಿ ವಿಚಿತ್ರವಾದ ಧ್ವಜಗಳಿಂದಲೂ ಸುವರ್ಣಮಯವಾದ ತೋರಣಗಳಿಂದಲೂ ಪೂರ್ಣಕುಂಭಗಳಿಂದಲೂ ಸ್ನಾನದಿಂದ ನಿರ್ಮಲಗಳಾದ ಶರೀರಗಳುಳ್ಳವರಾಗಿ ನೂತನ ವಸ್ತ್ರಭೂಷಣ ಗಂಧಮಾಲ್ಯಗಳುಳ್ಳ ಪುರುಷರಿಂದಲೂ ಸ್ತ್ರೀಯರಿಂದಲೂ ಹೊಳೆಯುವಂಥಾದ್ದಾಗಿ ಪ್ರಕಾಶಯುಕ್ತವಾದ ದೀಪಗಳಿಂದಲೂ ಪುಷ್ಪಾದಿ ತೋರಣಸಮೂಹಗಳಿಂದಲೂ ಮನೋಹರವಾಗಿ ಪ್ರತಿಗೃಹದಲ್ಲಿಯೂ ಗವಾಕ್ಷಗಳ ದೆಸೆಯಿಂದ ಬರುವ ಧೂಪಗಳಿಂದ ರಮಣೀಯವಾಗಿ ಹೊಳೆಯುವ ಪತಾಕಗಳುಳ್ಳದ್ದಾಗಿ ಉಪರಿಭಾಗದಲ್ಲಿ ಪ್ರಕಾಶಿಸುವ ಸುವರ್ಣಶಿಖರಗಳುಳ್ಳದ್ದಾಗಿ ರಜತಮಯಗಳಾಗಿ ಸ್ಥೂಲಗಳಾದ ಆ ಶಿಖರಗಳ ಕೆಳಗೆ ಅನೇಕ ಗೃಹಗಳುಳ್ಳ ಇಂದ್ರಪ್ರಸ್ಥಪುರವನ್ನು ಪ್ರವೇಶಿಸಿದನು; ಆ ಪುರಸ್ತ್ರೀಯರು ಪುರುಷರಿಂದಲೂ ಆದರಣೆಯೊಡಗೂಡಿದ ನೇತ್ರಗಳಿಂದ ನೋಡಲು ಯೋಗ್ಯನಾದ ಶ್ರೀಕೃಷ್ಣನು ಬಂದನೆಂಬ ವೃತ್ತಾಂತವನ್ನು ಕೇಳಿ ಕಂಪದಿಂದ ಸಡಲಿದ ಕೇಶಬಂಧವೂ ಉಡಿಗಟ್ಟೂ ಉಳ್ಳವರಾಗಿ ಗೃಹವ್ಯಾಪಾರಗಳನ್ನೂ ಹಾಸಿಗೆಯಲ್ಲಿದ್ದ ಪತಿಗಳನ್ನೂ ಬಿಟ್ಟು ಆ ಕೃಷ್ಣನನ್ನು ನೋಡಲೋಸುಗ ರಾಜಮಾರ್ಗವನ್ನೈದಿ ಉಪ್ಪರಿಗೆಗಳನ್ನೇರಿ ಅತಿ ನಿಬಿಡವಾದ ಗಜಾಶ್ವ ರಥ ಪದಾತಿಗಳೊಡನೆಯೂ ಪತ್ನಿಯರೊಡನೆಯೂ ಯುಕ್ತನಾಗಿದ್ದ ಶ್ರೀಕೃಷ್ಣನನ್ನು ಕಂಡು ಆತನಮೇಲೆ ಪುಷ್ಪಗಳನ್ನೆರಚಿ ಮನಸ್ಸಿನಿಂದ ಆಲಿಂಗನಂಗೈದು ತಮ್ಮ ಮಂದಹಾಸಯುಕ್ತವಾದ ಸವಿನೋಟದಿಂದ ಕುಶಲಪ್ರಶ್ನೆ ಮೊದಲಾದ ಪ್ರಿಯವನ್ನಾಚರಿಸಿ ನಕ್ಷತ್ರಗಳಂತೆ ಹೊಳೆಯುತಿದ್ದ ಕೃಷ್ಣನ ಪತ್ನಿ

ಯರನ್ನು ನೋಡಿ ಮನೋಹರವಾದ ಮಂದಹಾಸ ಲಜ್ಜೆಯೊಡನೆ ಕೂಡಿರುವ ತನ್ನ ಸವಿನೋಟದ ಸೊಬಗಿನಿಂದ ನಿರಂತರವಲ್ಲಿಯೂ ನೇತ್ರಗಳಿಗೆ ಉತ್ಸವವನ್ನುಂಟುಮಾಡುವಂಥಾ ಶ್ರೀಕೃಷ್ಣನ ಪತ್ನಿಯರಿಂದ ಎಂಥಾ ಪುಣ್ಯವು ಮಾಡಲ್ಪಟ್ಟಿತೊ ತಿಳಿಯಲಿಲ್ಲವೆಂದು ಹೇಳುತಿದ್ದರು; ಆ ಪಟ್ಟಣದ ಆಯಾಯ ಜಾತಿ ಪಣಗಳಲ್ಲಿ ಮುಖ್ಯರಾದ ಪುರುಷರು ಫಲಪುಷ್ಪಾದಿ ಮಂಗಳದ್ರವ್ಯಗಳನ್ನು ಹಸ್ತಗಳಲ್ಲಿರಿಸಿಕೊಂಡು ಸಮೀಪಕ್ಕೆ ಬಂದು ಕೃಷ್ಣನಿಗೆ ಪೂಜೆಯಂಗೈದು ಪಾಪರಹಿತರಾದರು; ಆಮೇಲೆ ಶ್ರೀಕೃಷ್ಣನು ವಿಕಸಿತಗಳಾದ ನೇತ್ರಗಳುಳ್ಳವನಾಗಿ ತ್ವರೆಯೊಡಗೂಡಿರುವ ಧರ್ಮರಾಯನ ಅಂತಃಪುರದ ಜನರಿಂದ ಅತ್ಯಂತ ಪ್ರೀತಿಯಿಂದ ಎದುರುಗೊಳ್ಳಲ್ಪಟ್ಟವನಾಗಿ ಆ ರಾಜಗೃಹವನ್ನು ಪ್ರವೇಶಿಸಿದನು; ಆಗ ದ್ರೌಪದಿಯೊಡಗೂಡಿ ಕುಂತಿಯು ತ್ರಿಲೋಕನಾಥನಾಗಿ ತನ್ನ ಸೋದರಳಿಯನಾದ ಶ್ರೀಕೃಷ್ಣನನ್ನು ಕಂಡು ಸಂತೋಷಯುಕ್ತವಾದ ಮನಸ್ಸುಳ್ಳವಳಾಗಿ ಮಂಚದದೆಶೆಯಿಂದೆದ್ದು ಪ್ರೀತಿಯಿಂದ ಆತನನ್ನಾಲಿಂಗನಂಗೈದಳು; ಧರ್ಮರಾಯನು ಬ್ರಹ್ಮಾದಿಗಳಿಗೂ ಈಶ್ವರನಾದ ಶ್ರೀಕೃಷ್ಣನನ್ನು ಗೃಹವನ್ನೈದಿಸಿ ಆದರಣದಿಂದ ಪೂಜಿಸುತ ಆನಂದಪರವಶನಾಗಿ ಆ ಪೂಜಾಪ್ರಕಾರವಿಶೇಷವನ್ನರಿಯದಿದ್ದನು; ಶ್ರೀಕೃಷ್ಣನು ತನ್ನ ಸೋದರತ್ತೆಯಾದ ಕುಂತಿದೇವಿಗೂ ಗುರುಪತ್ನಿಯರಿಗೂ ಅಭಿವಾದನಂಗೈದು ದ್ರೌಪದಿಯಿಂದಲೂ ತನ್ನ ತಂಗಿಯಾದ ಸುಭದ್ರೆಯಿಂದಲೂ ಅಭಿವಾದನಂಗೈಯಲ್ಪಟ್ಟನು; ಅನಂತರದಲ್ಲಿ ದ್ರೌಪದಿಯು ಕುಂತಿಯಿಂದ ಪ್ರೇರಿಸಲ್ಪಟ್ಟವಳಾಗಿ ರುಕ್ಮಿಣಿಯನ್ನೂ ಸತ್ಯಭಾಮೆಯನ್ನೂ ಭದ್ರೆಯನ್ನೂ ಜಾಂಬವತಿಯನ್ನೂ ಪತಿವ್ರತೆಯಾದ ಕಾಳಿಂದಿಯನ್ನೂ ಮಿತ್ರವಿಂದೆಯನ್ನೂ ಶೈಬ್ಯೆಯನ್ನೂ ಸತ್ಯಾದೇವಿಯನ್ನೂ ಮಿಕ್ಕ ಶ್ರೀಕೃಷ್ಣಪತ್ನಿಯರನ್ನೂ ವಸ್ತ್ರಮಾಲ್ಯ ಗಂಧಾದಿಗಳಿಂದ ಪೂಜಿಸಿದಳು; ಧರ್ಮರಾಯನು ಸೇನೆಗಳೊಡನೆಯೂ ಪರಿಜನರೊಡನೆಯೂ ಮಂತ್ರಿಗಳೊಡನೆಯೂ ಪತ್ನಿಯರೊಡನೆಯೂ ಯುಕ್ತನಾದ ಶ್ರೀಕೃಷ್ಣನನ್ನು ಪ್ರತಿದಿನದಲ್ಲಿಯೂ ನೂತನನೂತನವಾಗಿ ಉಪಚರಿಸುತ ಸುಖದಿಂದಿರಿಸಿಕೊಂಡಿದ್ದನು! ಯಾವನು ಪ್ರೇಮದಿಂದ ನಿರಂತರವೂ ಅರ್ಜುನನೊಡಗೂಡಿದ್ದನೊ—ಯಾವನು ಆ ಅರ್ಜುನನಿಗೆ ಸಹಾಯವಾಗಿ ಖಾಂಡವವನ ದಹನದಿಂದ ಅಗ್ನಿಯನ್ನು ಸಂತೋಷಪಡಿಸಿ ಆ ಸಮಯದಲ್ಲಿ ಮಯನನ್ನು ವಿಪತ್ತಿನಿಂದ ಬಿಡಿಸಿ ಆತನನ್ನು ಪ್ರೇರಿಸಿ ಅವನಿಂದ ಧರ್ಮರಾಯನಿಗೆ ದಿವ್ಯವಾದ ಸಭಾಸ್ಥಾನವನ್ನು ಮಾಡಿಸಿದನೋ ಅಂಥಾ ಶ್ರೀಕೃಷ್ಣನನ್ನು ಧರ್ಮರಾಯನು ಸುಖದಿಂದ ತನ್ನ ಅರಮನೆಯಲ್ಲಿ ವಾಸಂಗೈಸಿರಲು ಶ್ರೀಕೃಷ್ಣನು ಆತನಿಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ಅರ್ಜುನನೊಡಗೂಡಿ ರಥವನ್ನೇರಿ ಭಟರಿಂದ ಸುತ್ತಿಕೊಳ್ಳಲ್ಪಟ್ಟವನಾಗಿ ವಿಹಾರಂಗೈಯುತ ಕೆಲವು ಮಾಸಗಳು ವಾಸಂಗೈದನು!

---

## ೭೦ನೇ ಅಧ್ಯಾಯ.

## ಜರಾಸಂಧನ ವಧೆ.

ಎಲೈ ಪರೀಕ್ಷಿದ್ರಾಯನೆ, ಒಂದು ಸಮಯದಲ್ಲಿ ಆಸ್ಥಾನಮಧ್ಯದಲ್ಲಿ ಧರ್ಮರಾಯನು ಮುನಿಗಳಿಂದಲೂ ಬ್ರಾಹ್ಮಣರಿಂದಲೂ ಕ್ಷತ್ರಿಯರಿಂದಲೂ ವೈಶ್ಯರಿಂದಲೂ ತಮ್ಮಂದಿರಿಂದಲೂ ಆಚಾರ್ಯರಿಂದಲೂ ಕುಲವೃದ್ಧರಿಂದಲೂ ಜ್ಞಾತಿಗಳಿಂದಲೂ ಸಂಬಂಧಿಗಳಿಂದಲೂ ಬಂಧುಜನರಿಂದಲೂ ಆಶ್ರಯಿಸಲ್ಪಟ್ಟವನಾಗಿ ಸಿಂಹಾಸನದಲ್ಲಿ ಕುಳಿತು ಕೃಷ್ಣನನ್ನು ಹೊರ್ತು ಮತ್ತೊಬ್ಬರಿಂದ ತನಗೆ ಇಷ್ಟವಾದ ಕಾರ್ಯವು ಸಾಧಿಸಲಶಕ್ಯವೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಅಲ್ಲಿದ್ದ ಪುರುಷರನ್ನು ಗಣನೆಮಾಡದೆ ಭಕ್ತವತ್ಸಲನಾದ ಶ್ರೀಕೃಷ್ಣನನ್ನೇ ಸಂಬೋಧನಂಗೈಯುತ ಆತನನ್ನು ಕುರಿತು "ಎಲೈ ಗೋವಿಂದನೆ, ನಾನು ಕ್ರತುಶ್ರೇಷ್ಠವಾದ ರಾಜಸೂಯಯಾಗದಿಂದ ಪಾವನವಾಗಿ ಇಂದ್ರಾದಿರೂಪಗಳಾದ ನಿನ್ನ ಅಂಶಮೂರ್ತಿಗಳನ್ನು ಪೂಜಿಸಬೇಕೆಂದು ಸಂಕಲ್ಪಿಸಿಧೇನೆ; ನನ್ನ ಮನೋರಥವನ್ನು ನೀನು ಪೂರೈಸು! ಎಲೈ ಪದ್ಮನಾಭನೆ, ಅಶುಭಪರಿಹಾರಕಗಳಾದ ನಿನ್ನ ಪಾದಗಳನ್ನು ನಿರಂತರದಲ್ಲಿಯು ಕಾಯದಿಂದ

ಸೇವಿಸುತಲೂ ವಾಕ್ಕಿನಿಂದ ಸ್ತುತಿಸುತಲೂ ಇರುವ ಪುರುಷರು ಮುಕ್ತಿಯನ್ನೂ ಇಷ್ಟಾರ್ಥಗಳನ್ನೂ ಪಡೆಯುವರೇ ಹೊರ್ತು ಚಕ್ರವರ್ತಿಗಳಾದಾಗ್ಯೂ ಅನ್ಯರು ಪಡೆಯಲಾರರು! ಎಲೈ ದೇವೋತ್ತಮನೆ, ಆದಕಾರಣ ಈ ಲೋಕವು ಈಗ ನಿನ್ನ ಪಾದಾರವಿಂದಗಳ ಸೇವಾಪ್ರಭಾವವನ್ನು ಪ್ರತ್ಯಕ್ಷವಾಗಿ ನೋಡಲಿ; ನಿನ್ನ ಸೇವೆಯೆ ಸರ್ವಾರ್ಥಸಾಧಕವೆಂದು ನಿಶ್ಚಯಿಸಲ್ಪಟ್ಟಿದೆ; ಆದಾಗ್ಯೂ ಕರ್ಮದಲ್ಲಿ ಆಸಕ್ತರಾದ ಕುರು ಸೃಂಜಯ ದೇಶಸ್ಥರಾದ ಕೆಲವು ಅರಸರು ನಿನ್ನ ಭಕ್ತಿಯನ್ನು ಪರಮಪುರುಷಾರ್ಥಕ್ಕೆ ಮುಖ್ಯ ಸಾಧನವೆಂದು ತಿಳಿಯುವದಿಲ್ಲ; ಅವರಿಗೂ ಮತ್ತು ಅಜ್ಞಾನ ನಿವೃತ್ತಿಗೋಸ್ಕರ ನಿನ್ನನ್ನು ಸೇವಿಸುವವರಿಗೂ ಸೇವಿಸದವರಿಗೂ ನಿನ್ನ ಮಹಿಮೆಯನ್ನು ತೋರಿಸು! ಎಲೈ ಹರಿಯೆ, ನಿರುಪಾಧಿಕನಾಗಿ ಸಮಸ್ತ ಪ್ರಪಂಚಕ್ಕೂ ಆತ್ಮರೂಪನಾಗಿ ಸಮದೃಷ್ಟಿಯುಳ್ಳವನಾಗಿ ನಿಜಾನಂದವನ್ನನುಭವಿಸುವವನಾಗಿರುವ ನಿನಗೆ ಸ್ವಕೀಯನು ಪರಕೀಯನು ಎಂಬ ಭೇದಬುದ್ಧಿಯಿಲ್ಲ; ಆದಾಗ್ಯೂ ರಾಗಾದಿಗಳಿಲ್ಲದಿರುವ ಕಲ್ಪವೃಕ್ಷಕ್ಕೆ ತನ್ನ ಸೇವಕರಲ್ಲೇ ಹೊರ್ತು ಅನ್ಯರಲ್ಲಿ ಫಲದಾತೃತ್ವವಿಲ್ಲದರೀತಿಯಲ್ಲಿ ಸೇವಕರಿಗೆಮಾತ್ರವೆ ನಿನ್ನ ಪ್ರಸಾದವುಂಟಾಗುವದೇ ಹೊರ್ತು ಅನ್ಯರಿಗುಂಟಾಗದು; ನಿನ್ನ ಸೇವಕರಲ್ಲಿಯೂ ಅವರವರ ಸೇವೆಗೆ ಅನುಗುಣವಾಗಿಯೇ ಫಲಪ್ರಾಪ್ತಿಯುಂಟಾಗುವದು; ಆದಕಾರಣ ಈ ಅರ್ಥದಲ್ಲಿ ನಿನಗೆ ವೈಷಮ್ಯವಿಲ್ಲದಿರಲಿ'' ಎಂದು ನುಡಿದನು.

ಈರೀತಿ ಧರ್ಮರಾಯನಿಂದ ಮಾಡಲ್ಪಟ್ಟ ವಿಜ್ಞಾಪನೆಯನ್ನು ಕೇಳಿ ಶ್ರೀಕೃಷ್ಣನು ಆತನನ್ನು ಕುರಿತು "ಎಲೈ ಶತ್ರುಸಂಹಾರಕನಾದ ಧರ್ಮರಾಯನೆ, ಯಾವ ಯಾಗಸಂಕಲ್ಪದಿಂದ ನಿನ್ನ ಶುಭಕರವಾದ ಕೀರ್ತಿಯು ಸಮಸ್ತ ಲೋಕಗಳನ್ನೂ ವ್ಯಾಪಿಸುವದೊ ಆ ಪ್ರಕಾರವಾದ ಯಾಗಸಂಕಲ್ಪವನ್ನು ಮಾಡುವದು ಚನ್ನಾಗಿದೆ! ಎಲೈ ಅರಸೆ, ಋಷಿಗಳಿಗೂ ದೇವತೆಗಳಿಗೂ ಆಪ್ತರಾದ ನಮಗೂ ಸಮಸ್ತ ಭೂತಗಳಿಗೂ ರಾಜಸೂಯಯಾಗವು ಇಷ್ಟವಾದಂಥಾದ್ದು; ನೀನು ಸಮಸ್ತ ಭೂಪತಿಗಳನ್ನೂ ಜಯಿಸಿ ಭೂಮಿಯನ್ನು ಸ್ವಾಧೀನಂಗೈದು ಸಮಸ್ತವಾದ ಯಜ್ಞಸಾಮಗ್ರಿಗಳನ್ನು ಸಂಪಾದಿಸಿ ಆ ಮಹಾಕ್ರತುವನ್ನಾಚರಿಸು; ನಿನ್ನ ತಮ್ಮಂದಿರು ಇಂದ್ರಾದಿ ಲೋಕಪಾಲಕರ ಅಂಶಗಳಿಂದ ಜನಿಸಿದವರು; ಜಿತೇಂದ್ರಿಯರಲ್ಲದ ಪುರುಷರಿಂದ ಜಯಿಸಲಶಕ್ಯನಾದಂಥಾ ನಾನು ಜಿತೇಂದ್ರಿಯನಾದ ನಿನ್ನಿಂದ ಜಯಿಸಲ್ಪಟ್ಟಿದ್ದೇನೆ; ಲೋಕಪಾಲಕನಾದಾಗ್ಯೂ ನನ್ನ ಭಕ್ತನಾದ ಪುರುಷನನ್ನು ಪ್ರಭಾವದಿಂದಾದರೂ ಕೀರ್ತಿಯಿಂದಾದರೂ ಐಶ್ವರ್ಯದಿಂದಾದರೂ ಸೈನ್ಯಾದಿ ಸಾಮಗ್ರಿಗಳಿಂದಾದರೂ ತಿರಸ್ಕರಿಸಲಾರನು; ಇನ್ನು ನನ್ನ ಭಕ್ತನನ್ನು ಮನುಷ್ಯಮಾತ್ರರಾದ ಅರಸರು ತಿರಸ್ಕರಿಸಲಾರರೆಂದು ಹೇಳತಕ್ಕದ್ದೇನಿದೆ!'' ಎಂದು ನುಡಿದನು.

ಭಗವಂತನಿಂದ ಈರೀತಿಯಲ್ಲಿ ನಿರೂಪಿಸಲ್ಪಟ್ಟ ವಚನವನ್ನು ಕೇಳಿ ಧರ್ಮರಾಯನು ಸಂತೋಷಪಟ್ಟು ವಿಕಸಿತವಾದ ಮುಖಪದ್ಮಗಳುಳ್ಳವನಾಗಿ ವಿಷ್ಣು ತೇಜಸ್ಸಿನಿಂದ ವೃದ್ಧಿಹೊಂದಿಸಲ್ಪಟ್ಟ ತನ್ನ ತಮ್ಮಂದಿರನ್ನು ದಿಗ್ವಿಜಯಕ್ಕೋಸ್ಕರ ಆಜ್ಞಾಪಿಸಿದನು; ಸಹದೇವನನ್ನು ಸೃಂಜಯ ದೇಶಸ್ಥರಾದ ಅರಸರೊಡಗೂಡಿಸಿ ದಕ್ಷಿಣ ದಿಕ್ಕಿಗೂ ನಕುಲನನ್ನು ಮತ್ಸ್ಯದೇಶಸ್ಥರಾದ ಅರಸರೊಡಗೂಡಿ ಪಶ್ಚಿಮದಿಕ್ಕಿಗೂ ಅರ್ಜುನನನ್ನು ಕೇಕಯ ದೇಶಸ್ಥರಾದ ಅರಸುಗಳೊಡಗೂಡಿಸಿ ಉತ್ತರದಿಕ್ಕಿಗೂ ಭೀಮನನ್ನು ಮದ್ರಕದೇಶಸ್ಥರೊಡಗೂಡಿಸಿ ಪೂರ್ವದಿಕ್ಕಿಗೂ ಕಳುಹಿದನು! ಎಲೈ ಅರಸೆ, ಅನಂತರದಲ್ಲಿ ವೀರರಾದ ಭೀಮಾದಿಗಳು ಪರಾಕ್ರಮದಿಂದ ಅಲ್ಲಲ್ಲಿರುವ ಭೂಪತಿಗಳನ್ನು ಜಯಿಸಿ ಆಯಾ ದಿಕ್ಕುಗಳ ದೆಸೆಯಿಂದ ಯಾಗಂಗೈವ ಧರ್ಮರಾಯನಿಗೋಸ್ಕರ ಅಧಿಕವಾದ ಧನವನ್ನು ತಂದು ಒಪ್ಪಿಸಿದರು; ಅನಂತರದಲ್ಲಿ ಧರ್ಮರಾಯನು ಜರಾಸಂಧನು ಜಯಿಸಲ್ಪಡಲಿಲ್ಲವೆಂಬ ಅರ್ಥವನ್ನು ಭೀಮಾದಿಗಳ ದೆಸೆಯಿಂದ ಕೇಳಿ ಚಿಂತಿಸುತಿರಲು ಆದಿಪುರುಷನಾದ ಶ್ರೀಕೃಷ್ಣನು ಪೂರ್ವದಲ್ಲಿ ಜರಾಸಂಧನ ವಧೆಗೋಸ್ಕರ ಉದ್ಧವನು ಹೇಳಿದ ಉಪಾಯವನ್ನು ಧರ್ಮರಾಯನಿಗೆ ನಿರೂಪಿಸಿ ಭೀಮಾರ್ಜುನರೊಡಗೂಡಿ ಬ್ರಾಹ್ಮಣವೇಷವನ್ನು ಧರಿಸಿ ಜರಾಸಂಧನಿರುವ ಗಿರಿವ್ರಜವೆಂಬ ಪಟ್ಟಣವನ್ನೈದಿ ಆತಿಥ್ಯ ಸಮಯದಲ್ಲಿ ತನ್ನ ಗೃಹದಲ್ಲಿದ್ದ ಬ್ರಾಹ್ಮಣಪ್ರಿಯ

ನಾದ ಜರಾಸಂಧನನ್ನೈದಿ "ಎಲೈ ಅರಸೆ, ಅತಿಥಿಗಳಾದ ನಮ್ಮನ್ನು ದೂರದೇಶದ ದೆಸೆಯಿಂದ ಬಂದಿರುವ ಯಾಚಕರೆಂದು ತಿಳಿ; ನಿನಗೆ ಶುಭವುಂಟಾಗಲಿ; ಯಾವುದನ್ನು ನಾವು ಇಚ್ಛೈಸುತ್ತೇವೋ ಆ ಇಷ್ಟಾರ್ಥವನ್ನು ನಮಗೆ ಕೊಡು! ಎಲೈ ಜರಾಸಂಧನೆ, ಯಾವರೀತಿ ದುರ್ಜನರಿಗೆ ಒಂದು ಕಾರ್ಯವು ಅಕಾರ್ಯವೆಂದು ನಿಷಿದ್ಧವಾಗದ ರೀತಿಯಲ್ಲಿ ಕ್ಷಮಾವಂತರಿಗೆ ಸಹಿಸಲಶಕ್ಯವಾದ್ದಿಲ್ಲ! ದಾತೃಗಳಿಗೆ ಕೊಡಲಶಕ್ಯವಾದ್ದಿಲ್ಲ; ಸಮದೃಷ್ಟಿಯುಳ್ಳ ಪುರುಷನಿಗೆ ಪರನಾದವನಿಲ್ಲ; ತಾನು ಸಮರ್ಥನಾದಾಗ್ಯೂ ಅನಿತ್ಯವಾದ ಶರೀರದಿಂದ ಶಾಶ್ವತವಾದ ಸತ್ಪುರುಷರಿಂದ ಶ್ಲಾಘಿಸಲು ಯೋಗ್ಯವಾದ ಕೀರ್ತಿಯನ್ನು ಸಂಪಾದಿಸದವನನ್ನು ನಿಂದಿಸಬೇಕು; ಅವನನ್ನು ಕುರಿತು ದುಃಖಪಡಬೇಕು! ಎಲೈ ಜರಾಸಂಧನೆ, ಪೂರ್ವದಲ್ಲಿ ಹರಿಶ್ಚಂದ್ರನು ವಿಶ್ವಾಮಿತ್ರನ ಋಣನಿವೃತ್ತಿಗೋಸ್ಕರ ಪತ್ನೀಪುತ್ರಾದಿ ಸಮಸ್ತವಸ್ತುಗಳನ್ನು ವಿಕ್ರಯಂಗೈದು ತಾನು ಚಂಡಾಲತ್ವವನ್ನೈದಿದವನಾದಾಗ್ಯೂ ದೈನ್ಯಪಡದೆ ಅಯೋಧ್ಯಾಪುರವಾಸಿಗಳಾದ ಜನರೊಡಗೂಡಿ ಸ್ವರ್ಗವನ್ನೈದಿದನು; ಪೂರ್ವದಲ್ಲಿ ರಂತಿದೇವನೆಂಬ ಅರಸನು ತನ್ನ ಪತ್ನೀಪುತ್ರಾದಿಗಳೊಡಗೂಡಿ ನಲವತ್ತೆಂಟು ದಿವಸಗಳು ಜೀವನಾರ್ಥವಾಗಿ ಜಲವನ್ನೂ ಪಡೆಯದಿದ್ದು ಅನಂತರದಲ್ಲಿ ಅತಿಪ್ರಯಾಸದಿಂದ ಪಡೆಯಲ್ಪಟ್ಟ ಜಲವನ್ನು ಆ ಕಾಲದಲ್ಲಿ ಜಲಾರ್ಥಿಗಳಾಗಿ ಬಂದ ಬ್ರಾಹ್ಮಣರಿಗಿತ್ತು ಕುಟುಂಬಸಹಿತವಾಗಿ ಉಪವಾಸಂಗೈದು ಬ್ರಹ್ಮಲೋಕವನ್ನೈದಿದನು; ಮುದ್ಗಲನೆಂಬ ಋಷಿಯು ಆರುತಿಂಗಳು ಅನ್ನೋದಕಾದಿಗಳಿಲ್ಲದೆ ಕ್ಷೀಣರಾದ ಪತ್ನೀಪುತ್ರರುಳ್ಳವನಾದಾಗ್ಯೂ ಅತಿಥಿಗಳಿಗೆ ಆತಿಥ್ಯವಂಗೈದು ಬ್ರಹ್ಮಲೋಕವನ್ನೈದಿದನು; ಶಿಬಿಯೆಂಬ ಅರಸನು ಶರಣುಹೊಂದಿದ ಕಪೋತಪಕ್ಷಿಯನ್ನು ರಕ್ಷಿಸಲೋಸುಗ ತನ್ನ ಮಾಂಸವನ್ನು ಗಿಡಗನಿಗಿತ್ತು ಸ್ವರ್ಗವನ್ನೈದಿದನು; ಬಲಿಯು ಬ್ರಾಹ್ಮಣರೂಪವನ್ನು ಧರಿಸಿದ ಹರಿಗೆ ಸರ್ವಸ್ವವನ್ನಿತ್ತು ಆತನನ್ನೇ ತನ್ನ ಸ್ವಾಧೀನಂಗೈದನು; ಒಂದು ಕಪೋತಪಕ್ಷಿಯು ಅತಿಥಿಯಾಗಿ ಬಂದ ಕಿರಾತನಿಗೆ ಸ್ತ್ರೀಪಕ್ಷಿಯೊಡಗೂಡಿ ತನ್ನ ಮಾಂಸವನ್ನಿತ್ತು ಆ ಕ್ಷಣದಲ್ಲೇ ವಿಮಾನದೊಡಗೂಡಿ ಸ್ವರ್ಗವನ್ನೈದಿತು; ಆ ಕಿರಾತನು ಆ ಸ್ತ್ರೀಪುರುಷ ಕಪೋತಗಳ ಸತ್ವಗುಣವನ್ನು ನೋಡಿ ಅತ್ಯಂತ ಪಶ್ಚಾತ್ತಪ್ತನಾಗಿ ಮಹಾಪ್ರಸ್ಥಾನವನ್ನೈದಿ ಅಗ್ನಿಯಿಂದ ದಹಿಸಲ್ಪಟ್ಟ ದೇಹವುಳ್ಳವನಾಗಿ ಪಾಪರಹಿತನಾಗಿ ಸ್ವರ್ಗವನ್ನೈದಿದನು; ಇನ್ನು ಬಹುಮಂದಿ ಮಹಾಪುರುಷರು ಅಶಾಶ್ವತವಾದ ಶರೀರವನ್ನು ಬಿಟ್ಟು ಶಾಶ್ವತವಾದ ಲೋಕವನ್ನೈದಿದರು!" ಎಂದು ನುಡಿದನು.

ಎಲೈ ಪರೀಕ್ಷಿದ್ರಾಯನೆ, ಈರೀತಿ ಭೀಮಾದಿಗಳು ಧರ್ಮಸ್ವರೂಪವನ್ನು ಹೇಳುತ್ತಿರಲು ಜರಾಸಂಧನು ಸ್ವರಗಳಿಂದಲೂ ಆಕೃತಿಗಳಿಂದಲೂ ಹೆದೆಯನ್ನು ಸೆಳೆಯುವದರಿಂದ ಜಡ್ಡುಗಟ್ಟಿರುವ ಹಸ್ತಗಳಿಂದಲೂ ಭೀಮಾದಿಗಳನ್ನು ಪೂರ್ವದಲ್ಲಿ ನೋಡಲ್ಪಟ್ಟ ಅರಸರೆಂದು ತಿಳಿದು "ಕ್ಷತ್ರಿಯರಾದ ಈ ಮೂವರೂ ಬ್ರಾಹ್ಮಣವೇಷವನ್ನು ಧರಿಸಿಕೊಂಡು ಬಂದಿದ್ದಾರೆ; ಈಗ ತ್ಯಾಗಂಗೈಯಲಶಕ್ಯವಾದ ನನ್ನ ಪ್ರಾಣವು ಇವರಿಂದ ಯಾಚಿಸಲ್ಪಟ್ಟಾಗ್ಯೂ ಅದನ್ನು ಕೊಡುತ್ತೇನೆ; ಪೂರ್ವದಲ್ಲಿ ಕಪಟಬ್ರಾಹ್ಮಣವೇಷವನ್ನು ಧರಿಸಿದ ಶ್ರೀಹರಿಯಿಂದ ಬಲಿಯು ತ್ರಿಲೋಕದ ಸಾಂಬ್ರಾಜ್ಯಭ್ರಷ್ಟನಾಗಿ ಮಾಡಲ್ಪಟ್ಟಾಗ್ಯೂ ಆತನ ದೋಷರಹಿತವಾದ ಕೀರ್ತಿಯು ಈಗ್ಯೂ ದಿಕ್ಕುಗಳಲ್ಲಿ ಅತಿವಿಸ್ತಾರವಾಗಿ ಕೇಳಲ್ಪಡುತಲಿದೆ; ಇಂದ್ರನ ತ್ರಿಲೋಕಸಾಂಬ್ರಾಜ್ಯವನ್ನು ಪುನಹ ಸಾಧಿಸಲಿಚ್ಛೈಸಿ ಬ್ರಾಹ್ಮಣವೇಷವನ್ನು ಧರಿಸಿದ ಶ್ರೀಹರಿಗೆ ಬಲಿಯು ಶುಕ್ರನಿಂದ ಅಡ್ಡಗೈಯಲ್ಪಟ್ಟವನಾಗಿ ಆತನು ಶ್ರೀವಿಷ್ಣುವೆಂದು ತಿಳಿದವನಾದಾಗ್ಯೂ ಭೂಮಿಯನ್ನಿತ್ತನು; ಅನಿತ್ಯವಾದ ಶರೀರದಿಂದ ಬ್ರಾಹ್ಮಣರಿಗೆ ಇಷ್ಟಾರ್ಥಗಳನ್ನಿತ್ತು ವಿಸ್ತಾರವಾದ ಯಶಸ್ಸನ್ನು ಸಂಪಾದಿಸುವವನಾಗದೆ ಜೀವಿಸುವ ಕ್ಷತ್ರಿಯಾಧಮನಿಂದ ಯಾವ ಪುರುಷಾರ್ಥವು ಸಾಧಿಸಲ್ಪಟ್ಟೀತು!" ಎಂದು ಉತ್ಕೃಷ್ಟವಾದ ಬುದ್ಧಿಯಿಂದ ಮನಸ್ಸಿನಲ್ಲಿ ನಿಶ್ಚಯಿಸಿ ಕೃಷ್ಣಭೀಮಾರ್ಜುನರನ್ನು ಕುರಿತು "ಎಲೈ ಬ್ರಾಹ್ಮಣರೆ, ನೀವು ಇಷ್ಟವಾದ ಅರ್ಥವನ್ನು ಯಾಚಿಸುವವರಾಗಿ; ನನ್ನ ಶಿರಸ್ಸನ್ನಾದಾಗ್ಯೂ ನಿಮಗೆ ಕೊಡುತ್ತೇನೆ" ಎಂದು ಹೇಳಿದನು.

ಆ ಮಾತನ್ನು ಕೇಳಿ ಕೃಷ್ಣನು, "ಎಲೈ ರಾಜಶ್ರೇಷ್ಠನೆ, ನೀನು ನಮ್ಮ ಇಷ್ಟಾರ್ಥವನ್ನು ಕೊಡಲಿಚ್ಛೈಸಿದರೆ ಈಗ ನಮಗೆ ದ್ವಂದ್ವಯುದ್ಧವನ್ನು ಕೊಡು; ಕ್ಷತ್ರಿಯರಾದಕಾರಣ ನಾವು ಯುದ್ಧಾಪೇಕ್ಷಿಗಳಾಗಿ

ಬಂದಿರ್ದೇವೇ ಹೊರ್ತು ಅನ್ನಾಪೇಕ್ಷಿಗಳಾಗಿ ಬರಲಿಲ್ಲಾ ! ಎಲೈ ಅರಸೆ ಕೇಳು ; ಇವನು ಕುಂತೀದೇವಿಗೆ ಪುತ್ರನಾದ ಭೀಮನು ; ಇವನು ಅವನ ತಮ್ಮನಾದ ಅರ್ಜುನನು ; ಇವರಿಬ್ಬರಿಗು ಸೋದರಮಾವನ ಮಗನಾದ ನನ್ನನ್ನು ನಿನಗೆ ವೈರಿಯಾದ ಕೃಷ್ಣನೆಂದು ತಿಳಿ '' ಎಂದು ಹೇಳಿದನು.

ಜರಾಸಂಧನು ಘಟ್ಟ್ಯಾಗಿ ನಕ್ಕು ಕೋಪಯುಕ್ತನಾಗಿ " ಎಲೇ ಮೂಢರೆ, ನಿಮಗೆ ದ್ವಂದ್ವಯುದ್ಧವನ್ನು ಕೊಡುತ್ತೇನೆ ! ಎಲೈ ಕೃಷ್ಣನೆ, ನೀನು ನನ್ನ ಭಯದದೆಶೆಯಿಂದ ನಿನ್ನ ಸ್ವಕೀಯವಾದ ಮಧುರಾಪಟ್ಟಣವನ್ನು ಬಿಟ್ಟು ಸಮುದ್ರವನ್ನು ಶರಣುಹೊಂದಿದೆಯಾದಕಾರಣ ಯುದ್ಧದಲ್ಲಿ ಧೈರ್ಯರಹಿತವಾದ ಹೃದಯವುಳ್ಳವನಾಗಿ ಭಯಶೀಲನಾದ ನಿನ್ನೊಡನೆ ನಾನು ಯುದ್ಧಂಗೈವದಿಲ್ಲ ; ಅರ್ಜುನನು ಸಮಾನ ವಯುಸ್ಸುಳ್ಳವನಾದಾಗ್ಯು ಅತ್ಯಂತ ಬಲಶಾಲಿಯುಲ್ಲ ; ಮತ್ತು ಈತನು ದೇಹದಿಂದಲೂ ನನಗೆ ಸಮಾನನಲ್ಲವಾದಕಾರಣ ನನ್ನೊಡನೆ ಯುದ್ಧಂಗೈವವನಲ್ಲ ; ಭೀಮನು ನನಗೆ ಸಮಾನವಾದ ಬಲವುಳ್ಳವನಾದಕಾರಣ ಈತನು ನನ್ನೊಡನೆ ಯುದ್ಧಂಗೈವವನಾಗಲಿ '' ಎಂದು ಹೇಳಿ ಭೀಮನಿಗೆ ಮಹತ್ತಾದ ಒಂದು ಗದೆಯನ್ನಿತ್ತು ತಾನು ಮತ್ತೊಂದು ಗದೆಯನ್ನಿಡಿದು ಪಟ್ಟಣದದೆಶೆಯಿಂದ ಹೊರಟನು ; ಆಮೇಲೆ ಯುದ್ಧಭೂಮಿಯಲ್ಲಿ ಪರಸ್ಪರ ಕೂಡಿ ಯುದ್ಧದಲ್ಲಿ ಸಹಿಸಲಶಕ್ಯವಾದ ಮದವುಳ್ಳವರಾದ ಭೀಮಜರಾಸಂಧರು ವಜ್ರಾಯುಧಸಮಾನಗಳಾದ ಗದೆಗಳಿಂದ ದ್ವಂದ್ವಯುದ್ಧಂಗೈದರು ; ಆಗ ಬಲಗಡೆಯಾಗಿಯೂ ಎಡಗಡೆಯಾಗಿಯೂ ಹಾಯುತ ವಿಚಿತ್ರವಿಚಿತ್ರಗಳಾದ ಯುದ್ಧಗತಿಭೇದಗಳನ್ನು ತೋರಿಸುತಲೂ ಸುತ್ತುತಲೂ ಇರಲು ಅವರ ಯುದ್ಧವು ರಂಗಸ್ಥಾನವನ್ನೈದಿರುವ ನಟರ ಯುದ್ಧದಂತೆ ಪ್ರಕಾಶಿಸಿತು ; ಮತ್ತು ಭೀಮಜರಾಸಂಧರಿಂದ ಪರಸ್ಪರ ಪ್ರಯೋಗಿಸಲ್ಪಟ್ಟ ಗದೆಗಳ ಅನ್ಯೋನ್ಯ ಘಾತಗಳಿಂದ ಹುಟ್ಟಿದ ಶಿಡಿಲಿಗೆ ಸಮಾನವಾದ ಚಟಚಟಾತ್ಕಾರಶಬ್ದವು ಪರಸ್ಪರ ಯುದ್ಧಂಗೈವ ಎರಡು ಮದ್ದಾನೆಗಳ ದಂತತಾಡನಶಬ್ದದಂತೆ ವೃದ್ಧಿಯನ್ನೈದಿರಲು ಜ್ವಲಿಸುತಿರುವ ಕೋಪವುಳ್ಳಂಥಾವಾಗಿ ಅರ್ಕಶಾಖೆಗಳಿಂದ ಯುದ್ಧಂಗೈವ ಎರಡು ಗಜಗಳ ಆ ಅರ್ಕಶಾಖೆಗಳೆರಡೂ ಚೂರ್ಣಗಳಾಗುವರೀತಿಯಲ್ಲಿ ಭುಜವೇಗದಿಂದೆಶೆಯಲ್ಪಟ್ಟ ಅವರಿಬ್ಬರ ಗದೆಗಳು ಅವರ ಹೆಗಲುಗಳನ್ನೂ ಕಟಿ ಪಾದ ಹಸ್ತಗಳನ್ನೂ ತೊಡೆಗಳನ್ನೂ ಕಂಠಮೂಲಗಳನ್ನೂ ಐದಿ ಚೂರ್ಣಗಳಾದವು ; ಗದೆಗಳು ಅನ್ಯೋನ್ಯ ಭಗ್ನಗಳಾಗಲು ಅತಿ ಕೋಪಯುಕ್ತರಾಗಿ ಭೀಮ ಜರಾಸಂಧರು ಉಕ್ಕಿನಂತೆ ಕಠಿನಸ್ಪರ್ಶವುಳ್ಳ ತಮ್ಮ ಮುಷ್ಟಿಗಳಿಂದ ಅನ್ಯೋನ್ಯ ಪ್ರಹರಿಸುತ ಮದ್ದಾನೆಗಳಂತೆ ಯುದ್ಧಂಗೈಯುತಿರಲು ಅವರ ಮುಷ್ಟಿತಾಡನಗಳಿಂದ ಶಿಡಿಲಿನಂತೆ ಅತಿ ಭಯಂಕರವಾದ ಶಬ್ದವು ಹುಟ್ಟಿತು ! ಎಲೈ ಅರಸೆ ಕೇಳು, ಈರೀತಿ ಅನ್ಯೋನ್ಯವಾಗಿ ಪ್ರಹರಿಸುತ ಸಮಾನವಾದ ಯುದ್ಧವಿದ್ಯಾಭ್ಯಾಸ ಬಲಪ್ರಭಾವವುಳ್ಳವರಾಗಿ ತಗ್ಗದಿರುವ ಭುಜವೇಗವುಳ್ಳಂಥಾ ಭೀಮ ಜರಾಸಂಧರ ಯುದ್ಧವು ಪರಸ್ಪರ ವಿಶೇಷವಿಲ್ಲದೆ ಸಮವಾಗಿ ಬೆಳೆಯುತಿರಲು ಯುದ್ಧಭೂಮಿಯಲ್ಲಿ ಇಪ್ಪತ್ತೇಳು ದಿವಸಗಳು ಕಳೆದವು ; ಅನಂತರದಲ್ಲಿ ಜರಾಸಂಧನ ಜನ್ಮವು ಖಂಡದ್ವಯಸಂಯೋಗರೂಪವಾದ್ದೆಂಬ ಅರ್ಥವನ್ನೂ ಆ ದೇಹವು ಖಂಡವಾಗೋಣವೆ ಆತನಿಗೆ ಮೃತ್ಯುವೆಂಬ ಅರ್ಥವನ್ನೂ ತಿಳಿದಿದ್ದ ಶ್ರೀಕೃಷ್ಣನು ತನ್ನಪ್ರಭಾವದಿಂದ ಭೀಮನಿಗೆ ಶಕ್ತಿಯನ್ನುಂಟುಮಾಡುತ ಜರೆಯೆಂಬ ರಾಕ್ಷಸಿಯಿಂದ ಅವನು ಜೀವಿಸಿಧಾನೆಂಬ ಅರ್ಥವನ್ನು ತಿಳಿದು ಆತನು ಹ್ಯಾಗೆ ಶೀಳಲ್ಪಡುವನೆಂದು ಚಿಂತಿಸಿ ಒಂದು ಶಾಖೆಯನ್ನು ಹಸ್ತದಲ್ಲಿ ತೆಗೆದುಕ್ಕೊಂಡು ಭೀಮನನ್ನು ಕುರಿತು " ಎಲೈ ಭೀಮನೆ, ನಾನು ಯಾವರೀತಿ ಈ ಶಾಖೆಯನ್ನು ಶೀಳುತ್ತೇನೊ ಅದೇರೀತಿ ನೀನು ಈ ಶತ್ರುವನ್ನು ಶೀಳು '' ಎಂದು ಸಜ್ಞೆಯಿಂದ ಆ ಶಾಖೆಯನ್ನು ಶೀಳುತ ಭೀಮನಿಗೆ ಶತ್ರುಸಂಹಾರ ಉಪಾಯವನ್ನು ತೋರಿಸಿದನು ; ಮಹಾ ಬಲವಂತನಾಗಿ ಯುದ್ಧದಲ್ಲಿ ಶ್ರೇಷ್ಠನಾದ ಭೀಮನು ಕೃಷ್ಣನ ಸಜ್ಞೆಯನ್ನು ತಿಳಿದು ಜರಾಸಂಧನ ಪಾದಗಳನ್ನಿಡಿದು ಭೂಮಿಯಲ್ಲಿ ಕೆಡೆಹಿ ಒಂದು ಪಾದವನ್ನು ತನ್ನ ಪಾದದಿಂದ ಮೆಟ್ಟಿಕ್ಕೊಂಡು ತನ್ನ ಭುಜಗಳಿಂದ ಮತ್ತೊಂದು ಪಾದವನ್ನು ಹಿಡಿದು ಗಜವು ಶಾಖೆಯನ್ನು ಶೀಳುವರೀತಿ ಗುದಸ್ಥಾನದ ದೆಶೆಯಿಂದ ಅವನನ್ನು ಶೀಳಿದನು ; ಆಗ ಅಲ್ಲಿದ್ದ ಜನರು ಒಂದೊಂದು ಪಾದವು ತೊಡೆಯು ವೃಷಣವು ಕಟಿಯು ಪೃಷ್ಟವು ಸ್ತನವು ಹೆಗಲು ಭುಜವು ನೇತ್ರವು ಹುಬ್ಬು

ಶ್ರೋತ್ರವು ಮೊದಲಾದವುಗಳುಳ್ಳಂಥಾದಾಗಿದ್ದ ಜರಾಸಂಧನ ದೇಹದ ಎರಡು ಖಂಡಗಳನ್ನು ನೋಡಿ ಹಾಹಾಕಾರವನ್ನು ಮಾಡಿದರು. ಈರೀತಿ ಜರಾಸಂಧನು ಭೀಮನಿಂದ ಸಂಹರಿಸಲ್ಪಡಲು ಕೃಷ್ಣಾರ್ಜುನರು ಭೀಮನನ್ನಾಲಿಂಗನಂಗೈದು ಉಪಚರಿಸಿದರು ; ಭೀಮನು ಶ್ರೀಕೃಷ್ಣನಿಂದ ಆಲಿಂಗನಂಗೈಯಲ್ಪಟ್ಟು ಯುದ್ಧಶ್ರಮೆಯನ್ನು ಪರಿಹರಿಸಿಕೊಂಡನು ! ಆ ಬಳಿಕ ಸಕಲ ಭೂತಗಳಿಗೂ ಕಾರಣನಾಗಿ ಅಪರಿಚ್ಛಿನ್ನವಾದ ಸ್ವರೂಪವುಳ್ಳವನಾಗಿ ಪ್ರಭುವಾದ ಶ್ರೀಕೃಷ್ಣನು ಪ್ರೀತಿಯಿಂದ ಜರಾಸಂಧನ ಪುತ್ರನಾಗಿ ಮಗಧದೇಶಕ್ಕಧಿಪತಿಯಾದ ಸಹದೇವನಿಗೆ ಪಟ್ಟಾಭಿಷೇಕಂಗೈದನು !

## ೭೩ನೇ ಅಧ್ಯಾಯ.

### ಕೃಷ್ಣನು ಅರಸರನ್ನು ಜರಾಸಂಧನ ಶೆರೆಯಿಂದ ಬಿಡಿಸಿದ್ದು.

ಎಲೈ ಪರೀಕ್ಷಿದ್ರಾಯನೆ, ಅನಂತರದಲ್ಲಿ ಜರಾಸಂಧನಿಂದ ಯುದ್ಧದಲ್ಲಿ ಲೀಲಾಮಾತ್ರದಿಂದ ಜಯಿಸಲ್ಪಟ್ಟವರಾಗಿ ದುರ್ಗದಲ್ಲಿ ನಿರೋಧನಂಗೈಯಲ್ಪಟ್ಟದ್ದ ಇಪ್ಪತ್ತು ಸಾವಿರದ ಎಂಟುನೂರು ಮಂದಿಯಾದ ಅರಸರು ಅತ್ಯಂತ ಮಲಿನ ವಸ್ತ್ರಗಳನ್ನು ಧರಿಸಿದವರಾಗಿ ಕ್ಷುತ್ತಿನಿಂದ ಅತಿ ಕೃಶರಾಗಿ ಬಣಗಿದ ಮುಖಗಳುಳ್ಳವರಾಗಿ ನಿರ್ಬಂಧದಿಂದ ಕ್ಲೇಶಯುಕ್ತರಾಗಿ ಪರ್ವತದ ಗುಹೆಯ ದೆಶೆಯಿಂದ ಹೊರಟು ಮೇಘದಂತೆ ಶ್ಯಾಮಲವರ್ಣಯುಕ್ತನಾಗಿ ಪೀತಾಂಬರವನ್ನುಟ್ಟವನಾಗಿ ಶ್ರೀವತ್ಸವೆಂಬ ಚಿನ್ಹೆಯುಳ್ಳವನಾಗಿ ಚತುರ್ಭುಜಯುಕ್ತನಾಗಿ ಕಮಲಮಧ್ಯದಂತೆ ರಕ್ತವರ್ಣವಾದ ನೇತ್ರಗಳುಳ್ಳವನಾಗಿ ಮನೋಹರವಾಗಿ ಪ್ರಸನ್ನವಾದ ಮುಖವುಳ್ಳವನಾಗಿ ಹೊಳೆಯುತಲಿರುವ ಮಕರಕುಂಡಲಗಳುಳ್ಳವನಾಗಿ ಹಸ್ತದಿಂದ ಪದ್ಮವನ್ನಿಡಿದಿರುವವನಾಗಿ ಗದಾ ಶಂಖ ಚಕ್ರಗಳಿಂದ ಶೋಭಿತನಾಗಿ ಕಿರೀಟ ಹಾರ ಹಸ್ತಕಡಗ ಕಟಿಸೂತ್ರ ತೋಳುಬಂದಿಗಳೊಡನೆ ಯುಕ್ತನಾಗಿ ಪ್ರಕಾಶಿಸುತಲಿರುವ ಕೌಸ್ತುಭರತ್ನವನ್ನು ಕಂಠದಲ್ಲಿ ಧರಿಸಿದವನಾಗಿ ವನಮಾಲೆಯಿಂದ ಭೂಷಿತನಾದಂಥಾ ಕೃಷ್ಣನನ್ನು ಕಂಡು ಆತನನ್ನು ನೇತ್ರಗಳಿಂದ ಪಾನಂಗೈವವರಂತೆಯೂ ಜಿಹ್ವೆಯಿಂದ ಆಸ್ವಾದನಂಗೈವವರಂತೆಯೂ ನಾಶಿಕಗಳಿಂದ ಆಘ್ರಾಣಂಗೈವವರಂತೆಯೂ ಭುಜಗಳಿಂದ ಆಲಿಂಗನಂಗೈವವರಂತೆಯೂ ಭಾವಿಸುತ ಪಾಪರಹಿತರಾಗಿ ಆತನ ಪಾದಗಳಿಗೆ ಶಿರಸ್ಸುಗಳಿಂದ ನಮಸ್ಕರಿಸಿ ಶ್ರೀಕೃಷ್ಣನ ದರ್ಶನದಿಂದುಟ್ಟಿದ ಆನಂದ ವಿಶೇಷದಿಂದ ನಿರ್ಬಂಧಜನ್ಯವಾದ ಮಹಾ ಶ್ರಮೆಯು ಪರಿಹರಿಸಲ್ಪಟ್ಟವರಾಗಿ ಅಂಜಲೀಬಂಧನಂಗೈದು ಆತನನ್ನು ಸ್ತುತಿಸುತ “ ಎಲೈ ದೇವದೇವನಾಗಿ ಭಕ್ತರ ಆರ್ತಿಯನ್ನು ಪರಿಹರಿಸುವ ನಿತ್ಯನಾದ ಶ್ರೀಕೃಷ್ಣನೆ, ನಿನಗೆ ನಮಸ್ಕಾರವು ; ಶರಣಾಗತರಾಗಿ ಅತ್ಯಂತ ಖಿನ್ನರಾಗಿ ಶೆರೆಯಿಂದ ಬಿಡಿಸಲ್ಪಟ್ಟ ನಮ್ಮನ್ನು ಭಯಂಕರವಾದ ಸಂಸಾರದ ದೆಶೆಯಿಂದ ಬಿಡಿಸು ! ಎಲೈ ಲೋಕನಾಥನಾದ ಶ್ರೀಕೃಷ್ಣನೆ, ಅರಸುಗಳಾದ ನಮಗೆ ಈ ರಾಜ್ಯಭ್ರಂಶವು ಅನುಗ್ರಹರೂಪವೇ ಆಯಿತಾದಕಾರಣ ಜರಾಸಂಧನಲ್ಲಿ ನಾವು ದೋಷವನ್ನೆಣಿಸುವದಿಲ್ಲ ; ರಾಜ್ಯದಿಂದಲೂ ಐಶ್ವರ್ಯದಿಂದಲೂ ಹುಟ್ಟಿದ ಮದದಿಂದ ಧರ್ಮಮರ್ಯಾದೆಯನ್ನತಿಕ್ರಮಿಸಿ ನಡೆಯುವ ಅರಸನು ಶ್ರೇಯಸ್ಸನ್ನೈದುವದಿಲ್ಲ ; ಅವನು ನಿನ್ನ ಮಾಯೆಯಿಂದ ಮೋಹಯುಕ್ತನಾಗಿ ಅತಿ ಚಪಲವಾದ ಸಂಪತ್ತುಗಳನ್ನು ಶಾಶ್ವಿತವಾಗಿ ತಿಳಿಯುವನು ; ಬಾಲಕರು ಬಿಸಲುದೊರೆಯನ್ನು ನೋಡಿ ತಟಾಕವೆಂದೆಣಿಸುವ ರೀತಿಯಲ್ಲಿ ಅವಿವೇಕಿಗಳು ಸೃಷ್ಟ್ಯಾದಿ ವಿಕಾರವನ್ನೈದಿರುವ ನಿನ್ನ ಮಾಯೆಯನ್ನು ಪರತತ್ವವೆಂದು ಹೇಳುವರು ! ಎಲೈ ಶ್ರೀಕೃಷ್ಣನೆ, ಪೂರ್ವದಲ್ಲಿ ಐಶ್ವರ್ಯಮದದಿಂದ ನಷ್ಟವಾದ ಬುದ್ಧಿಯುಳ್ಳವರಾದ ನಾವು ಈ ಭೂಮಿಯನ್ನು ಜಯಿಸುವ ಇಚ್ಛೆಯಿಂದ ಒಬ್ಬರೊಡನೊಬ್ಬರು ಕಲಹಂಗೈಯುತ ಅತ್ಯಂತ ನಿರ್ದಯರಾಗಿ ಪ್ರಜೆಗಳನ್ನು ಹಿಂಸೆಪಡಿಸುತ ಮುಂದುಗಡೆಯಲ್ಲಿರುವ ನಿನ್ನನ್ನು ಗಣನೆಮಾಡದೆ ಅತ್ಯಂತ ಮತ್ತರಾಗಿದ್ದೆವು ; ಈಗ ನಿನ್ನ ಮೂರ್ತಿಯಾಗಿ ಅತ್ಯಂತ ವೇಗವುಳ್ಳದ್ದಾಗಿ ಪಾರವಿಲ್ಲದ ಪ್ರಭಾವವುಳ್ಳ ಕಾಲದಿಂದ ಐಶ್ವರ್ಯಭ್ರಷ್ಟರಾಗಿ ನಷ್ಟವಾದ

ಗರ್ವವುಳ್ಳವರಾಗಿ ನಿನ್ನ ದಯೆಯಿಂದ ನಿನ್ನ ಪಾದಗಳನ್ನು ಸ್ಮರಿಸಲಿಚ್ಛೈಸುತ್ತೇವೆ! ಎಲೈ ಸ್ವಾಮಿಯೆ, ಪ್ರತಿಕ್ಷಣದಲ್ಲಿಯು ಕ್ಷೀಣವಾಗುವಂಥಾದ್ದಾಗಿ ರೋಗಗಳಿಗೆ ಉತ್ಪತ್ತಿಸ್ಥಾನವಾದ ಈ ದೇಹವನ್ನೂ ಈ ಲೋಕದಲ್ಲಿ ಅನುಭವಿಸಲು ಯೋಗ್ಯವಲ್ಲದ್ದಾಗಿ ಬಿಸಲುದೊರೆಗೆ ಸಮಾನವಾದ ರಾಜ್ಯವನ್ನೂ ಪರಲೋಕದಲ್ಲಿ ಶ್ರೋತ್ರಗಳಿಗೆ ಅಭಿರುಚಿಯನ್ನುಂಟುಮಾಡುವದಾಗಿ ಅನುಭವಿಸತಕ್ಕದ್ದಾಗಿರುವ ಸ್ವರ್ಗಾದಿ ಭೋಗಗಳನ್ನೂ ನಾವು ಅಪೇಕ್ಷಿಸುವದಿಲ್ಲ! ಎಲೈ ಹರಿಯೆ, ಈ ಲೋಕದಲ್ಲಿ ಸಂಸಾರಯುಕ್ತರಾದಾಗ್ಯು ನಮಗೆ ನಿನ್ನ ಪಾದಾರವಿಂದ ವಿಷಯಕವಾದ ಸ್ಮೃತಿಯು ವಿಚ್ಛೇದವಿಲ್ಲದಿರುವಹಾಗೆ ಅನುಗ್ರಹಿಸು! ಎಲೈ ಶ್ರೀಕೃಷ್ಣನೆ, ವಾಸುದೇವನೆ, ಹರಿಯೇ, ಪರಮಾತ್ಮನೆ, ಭಕ್ತರ ದುಃಖವನ್ನು ಪರಿಹರಿಸುವವನೆ, ಗೋವಿಂದನೆ, ನಿನಗೆ ನಮಸ್ಕಾರವು!'' ಎಂದು ನುಡಿದರು.

ಎಲೈ ಪರೀಕ್ಷಿದ್ರಾಯನೆ, ಬಂಧನದಿಂದ ಮುಕ್ತರಾದ ಅರಸರಿಂದ ಈರೀತಿ ಸ್ತೋತ್ರಂಗೈಯಲ್ಪಟ್ಟ ಮಾಯಾಶೀಲನಾಗಿ ರಕ್ಷಕನಾದ ಶ್ರೀಕೃಷ್ಣನು ಮನೋಹರವಾದ ವಾಕ್ಯದಿಂದ ಅವರನ್ನು ಕುರಿತು "ಎಲೈ ಅರಸುಗಳಿರಾ, ನಿಮ್ಮಿಂದ ಅಪೇಕ್ಷಿಸಲ್ಪಟ್ಟ ರೀತಿಯಲ್ಲಿ ನಿಶ್ಚಯವಾಗಿ ಇದುಮೊದಲುಗೊಂಡು ಸರ್ವೇಶ್ವರನಾಗಿ ಈಶ್ವರನಾಗಿ ಆತ್ಮರೂಪನಾದ ನನ್ನಲ್ಲಿ ನಿಮಗೆ ದೃಢವಾದ ಭಕ್ತಿಯುಂಟಾಗಲಿ! ಎಲೈ ಅರಸುಗಳಿರಾ, ನನ್ನ ಸೇವೆಯೇ ಮಾಡತಕ್ಕದ್ದೆಂದು ನಿಮ್ಮಿಂದ ಸಂಕಲ್ಪಿಸಲ್ಪಟ್ಟದ್ದು ಬಹು ಶುಭಕರವಾಯಿತು; ನೀವು ಯಥಾರ್ಥವಾದಿಗಳು; ನಾನು ಪುರುಷರಿಗೆ ಪ್ರಭುತ್ವ ಸಂಪತ್ತುಗಳ ಮದದಿಂದುಂಟಾಗುವ ಸಂಚಾರಕ್ಕೆ ಮೋಹವು ಕಾರಣವೆಂದು ತಿಳಿಯುತ್ತೇನೆ; ಚಕ್ರವರ್ತಿಯಾದ ಕಾರ್ತವೀರ್ಯನು ಪೂರ್ವದಲ್ಲಿ ಬಲಾತ್ಕಾರದಿಂದ ಪರಶುರಾಮನ ತಂದೆಯಾದ ಜಮದಗ್ನಿಮುನಿಯ ಕಾಮಧೇನುವನ್ನಪಹರಿಸಿ ಪರಶುರಾಮನಿಂದ ಪುತ್ರಸಹಿತನಾಗಿ ಸಂಹರಿಸಲ್ಪಟ್ಟನು; ನಹುಷರಾಯನು ಇಂದ್ರಪದವನ್ನೈದಿ ಶಚೀದೇವಿಯಲ್ಲಿ ಆಸಕ್ತನಾಗಿ ಋಷಿಗಳಿಂದ ತನ್ನ ಪಾಲಕಿಯನ್ನು ಹೊರಿಸಿ ಅವರ ಶಾಪದಿಂದ ಐಶ್ವರ್ಯಭ್ರಷ್ಟನಾಗಿ ಅಜಗರಭಾವವನ್ನೈದಿದನು; ವ್ಯನನೆಂಬ ಅರಸನು ಅತ್ಯಂತ ಮತ್ತನಾಗಿ ಋಷಿಗಳನ್ನು ತಿರಸ್ಕರಿಸಿ ಅವರ ಹೂಂಕಾರಮಾತ್ರದಿಂದಲೇ ಸಂಹರಿಸಲ್ಪಟ್ಟನು; ರಾವಣನು ಸೀತಾದೇವಿಯನ್ನು ಕಾಮಿಸಿ ಶ್ರೀರಾಮನಿಂದ ಸಂಹರಿಸಲ್ಪಟ್ಟನು; ನರಕಾಸುರನು ಅದಿತಿದೇವಿಯ ಕರ್ಣಾಭರಣ ಮೊದಲಾದ ವಸ್ತುಗಳನ್ನಪಹರಿಸಿ ನನ್ನಿಂದ ಸಂಹರಿಸಲ್ಪಟ್ಟನು; ಮತ್ತು ಅನೇಕ ದೇವ ದೈತ್ಯರೂ ಭೂಪತಿಗಳೂ ಅದೇರೀತಿ ಐಶ್ವರ್ಯಮದದಿಂದ ಸ್ಥಾನಭ್ರಷ್ಟರಾಗಿ ನಾಶವನ್ನೈದಿದರು! ಎಲೈ ಅರಸುಗಳಿರಾ, ಆದಕಾರಣ ನೀವು ಜನ್ಮವುಳ್ಳ ದೇಹಾದಿ ಪದಾರ್ಥಗಳನ್ನು ನಾಶವುಳ್ಳಂಥಾವೆಂದು ತಿಳಿದು ಪ್ರಮತ್ತರಾಗದೆ ಯಜ್ಞಗಳಿಂದ ನನ್ನನ್ನು ಪೂಜಿಸುತಲೂ ಧರ್ಮದಿಂದ ಪ್ರಜೆಗಳನ್ನು ರಕ್ಷಿಸುತಲೂ ಪುತ್ರಾದಿ ಸಂತತಿಗಳನ್ನು ವೃದ್ಧಿಹೊಂದಿಸುತಲೂ ಪ್ರಾಪ್ತಗಳಾದ ಸುಖದುಃಖಗಳನ್ನು ಜನ್ಮಮೃತಿಗಳನ್ನೂ ಸಮಬುದ್ಧಿಯಿಂದ ಅನುಭವಿಸುತ ನನ್ನಲ್ಲಿ ಚಿತ್ತವನ್ನರ್ಪಿಸಿ ಸಂಚರಿಸುತ ಗೇಹಾದಿಗಳಲ್ಲಿ ಉದಾಸೀನರಾಗಿ ಆತ್ಮಾರಾಮರಾಗಿ ವ್ರತನಿಷ್ಠರಾಗಿ ನನ್ನಲ್ಲಿ ಮನಸ್ಸನ್ನು ನಿಲ್ಲಿಸಿ ಅಂತ್ಯಕಾಲದಲ್ಲಿ ಬ್ರಹ್ಮರೂಪನಾದ ನನ್ನನ್ನೈದೀ!'' ಅಂದನು.

ಎಲೈ ಪರೀಕ್ಷಿದ್ರಾಯನೆ, ಈರೀತಿ ಲೋಕನಾಥನಾಗಿ ಭಗವಂತನಾದ ಶ್ರೀಕೃಷ್ಣನು ತತ್ವೋಪದೇಶದಿಂದ ಆ ಭೂಪತಿಗಳನ್ನನುಗ್ರಹಿಸಿ ಅವರಿಗೆ ಅಭ್ಯಂಗಸ್ನಾನಾದಿಗಳನ್ನುಮಾಡಿಸುವದಕ್ಕೆ ಆಜ್ಞಾಪಿಸಿ ಸಹದೇವನಿಂದ ರಾಜಯೋಗ್ಯವಾದ ವಸ್ತ್ರ ಭೂಷಣ ಪುಷ್ಪ ಮಾಲ್ಯ ವಿಲೇಪನಗಳಿಂದ ಪೂಜೆಗೈಸಿ ಅಭ್ಯಂಗಸ್ನಾನಂಗೈದು ಅಲಂಕೃತರಾಗಿ ನಾನಾವಿಧ ರಾಜಭೋಗಗಳೊಡನೆ ಯುಕ್ತರಾದ ಆ ಅರಸರಿಗೆ ಮೃಷ್ಟಾನ್ನಭೋಜನವನ್ನು ಮಾಡಿಸಿ ಸಹದೇವನಿಂದ ರಾಜಯೋಗ್ಯವಾದ ತಾಂಬೂಲಾದಿಗಳಿಂದ ಅವರಿಗೆ ಪೂಜೆಯಂಗೈಸಿದನು. ಈರೀತಿ ಕೃಷ್ಣನಿಂದ ಸನ್ಮಾನಂಗೈಯಲ್ಪಟ್ಟವರಾಗಿ ಅತಿ ಪ್ರಕಾಶಯುಕ್ತವಾದ ಕುಂಡಲಗಳುಳ್ಳವರಾಗಿ ಕ್ಲೇಶದೆಸೆಯಿಂದ ಬಿಡಿಸಲ್ಪಟ್ಟ ಆ ಅರಸರು ಶರತ್ಕಾಲದಲ್ಲಿರುವ ಚಂದ್ರಾದಿ ಗ್ರಹಗಳಂತೆ ಪ್ರಕಾಶಿಸಿದರು; ಆಮೇಲೆ ಶ್ರೀಕೃಷ್ಣನು ಅವರನ್ನು ಉತ್ತಮವಾದ ಅಶ್ವಗಳೊಡನೆ ಯುಕ್ತವಾಗಿ ಮಣಿಗಳಿಂದಲೂ ಸುವರ್ಣಾದಿಗಳಲೂ ಅಲಂಕರಿಸಲ್ಪಟ್ಟ ರಥಗಳನ್ನೇ

ರಿಸಿ ಪ್ರಿಯವಾಗಿ ಸತ್ಯವಾದ ವಚನಗಳಿಂದ ಸಂತೋಷಪಡಿಸಿ ಅವರವರ ದೇಶಗಳಿಗೆ ಕಳುಹಿಸಿದನು. ಆ ಭೂಪತಿಗಳು ಮಹಾತ್ಮನಾದ ಶ್ರೀಕೃಷ್ಣನಿಂದ ಕಷ್ಟದಶೆಯಿಂದ ಬಿಡಿಸಲ್ಪಟ್ಟವರಾಗಿ ಲೋಕನಾಥನಾದ ಆತನ ಚರಿತ್ರಗಳನ್ನು ಧ್ಯಾನಂಗೈಯುತ ತಮ್ಮ ತಮ್ಮ ದೇಶಗಳನ್ನೈದಿ ಮಂತ್ರಿ ಮೊದಲಾದ ತಮ್ಮ ಸಮಾಜಿಕರಿಗೆ ಕೃಷ್ಣನ ವ್ಯಾಪಾರವನ್ನು ಹೇಳಿ ಆ ಬಳಿಕ ಆತನು ತಮಗೆ ಧರ್ಮೋಪದೇಶಂಗೈದರೀತಿಯಲ್ಲಿ ಆಲಸ್ಯವನ್ನು ಬಿಟ್ಟು ಧರ್ಮವನ್ನಾಚರಿಸುತಿದ್ದರು!

ಶ್ರೀಕೃಷ್ಣನು ಈರೀತಿ ಭೀಮಸೇನನಿಂದ ಜರಾಸಂಧನನ್ನು ಸಂಹಾರಂಗೈಸಿ ಆತನ ಪುತ್ರನಾದ ಸಹದೇವನಿಂದ ಪೂಜಿಸಲ್ಪಟ್ಟು ಗಿರಿವ್ರಜದಿಂದ ಭೀಮಾರ್ಜುನರೊಡಗೂಡಿ ಇಂದ್ರಪ್ರಸ್ಥಪುರವನ್ನೈದಿ ತಮ್ಮ ಮಿತ್ರರನ್ನು ಸಂತೋಷಪಡಿಸುತಲೂ ಶತ್ರುಗಳಿಗೆ ದುಃಖವನ್ನುಂಟುಮಾಡುತಲೂ ಜಯಕರವಾದ ಪಾಂಚಜನ್ಯ ಪೌಂಡ್ರ, ದೇವದತ್ತಾದಿ ಶಂಖಗಳನ್ನು ಪೂರಿಸಿದರು! ಆಗ ಇಂದ್ರಪ್ರಸ್ಥ ಪುರವಾಸಿಗಳಾದ ಜನರು ಆ ಜಯಶಂಖಘೋಷಗಳನ್ನು ಕೇಳಿ ಸಂತುಷ್ಟಚಿತ್ತರಾಗಿ ಜರಾಸಂಧನು ಸಂಹರಿಸಲ್ಪಟ್ಟನೆಂದು ತಿಳಿದರು; ಧರ್ಮರಾಯನು ಮನೋರಥವನ್ನು ಪಡೆದು ಸಂತೋಷವುಳ್ಳವನಾದನು; ಅನಂತರದಲ್ಲಿ ಶ್ರೀಕೃಷ್ಣ ಭೀಮಾರ್ಜುನರು ಧರ್ಮರಾಯನಿಗೆ ಅಭಿವಾದನಂಗೈದು ತಮ್ಮಿಂದ ಮಾಡಲ್ಪಟ್ಟ ಸಮಸ್ತ ವ್ಯಾಪಾರವನ್ನು ತಿಳಿಸಿದರು; ಆಗ ಧರ್ಮರಾಯನು ಶ್ರೀಕೃಷ್ಣನಿಂದ ಹೇಳಲ್ಪಟ್ಟ ವೃತ್ತಾಂತವನ್ನು ಕೇಳಿ ಆನಂದಬಾಷ್ಪಬಿಂದುಗಳನ್ನು ಬಿಡುತ ಪ್ರೇಮಾತಿಶಯದಿಂದ ಮೌನದಲ್ಲಿದ್ದನು.

---

## ೭೪ನೇ ಅಧ್ಯಾಯ.

### ಧರ್ಮರಾಯನ ರಾಜಸೂಯಯಾಗವು — ಶಿಶುಪಾಲನ ವಧೆಯು.

ಎಲೈ ಪರೀಕ್ಷಿದ್ರಾಯನೆ ಕೇಳು; ಅನಂತರದಲ್ಲಿ ಧರ್ಮರಾಯನು ಜರಾಸಂಧನು ವಧೆಯಾದ ವೃತ್ತಾಂತವನ್ನೂ ಸರ್ವವ್ಯಾಪಕನಾದ ಶ್ರೀಕೃಷ್ಣನ ಪ್ರಭಾವವನ್ನೂ ಕೇಳಿ ಅಂಥಾ ಶ್ರೀಕೃಷ್ಣನು ತನ್ನ ಆಜ್ಞಾಧಾರಕನಾಗಿರುವದನ್ನು ನೋಡಿ ಅತ್ಯಂತ ಸಂತೋಷಪಟ್ಟು ಶ್ರೀಕೃಷ್ಣನನ್ನು ಕುರಿತು "ಎಲೈ ಶ್ರೀಕೃಷ್ಣನೆ, ಮೂರುಲೋಕಗಳಿಗೂ ಗುರುಗಳಾಗಿರುವ ಸನಕಾದಿಗಳೂ ಸಮಸ್ತ ಲೋಕಗಳೂ ಲೋಕಪಾಲಕರೂ ಯಾವನ ಆಜ್ಞೆಯನ್ನು ತಮ್ಮ ಭಾಗ್ಯದಿಂದ ಪಡೆಯಲ್ಪಟ್ಟಿತೆಂದು ಬಹುಮಾನದಿಂದ ಶಿರಸ್ಸಿನಿಂದ ವಹಿಸುವರೋ—ಎಲೈ ಶ್ರೀಕೃಷ್ಣನೆ, ಅಂಥಾ ಪರಮೇಶ್ವರನಾದ ನೀನು ನಮ್ಮಂಥಾವರ ಆಜ್ಞೆಯನ್ನು ವಹಿಸುವದು ನಿನಗೆ ಅನುಗುಣವಾದ್ದಲ್ಲ; ಒಬ್ಬನಾಗಿ ಸಮಾನರಹಿತನಾಗಿ ಸಮಸ್ತ ಜೀವರಿಗೂ ನಿಯಾಮಕನಾಗಿ ಬ್ರಹ್ಮನಾಗಿರುವ ನಿನಗೆ ಅನ್ಯರ ಆಜ್ಞಾಕರತ್ವವು ಮಾಯಾಕಲ್ಪಿತವೆ ಹೊರ್ತು ವಸ್ತುತವಾಗಿಲ್ಲ; ಸೂರ್ಯನಿಗೆ ಉದಯಾಸ್ತಾದಿ ಕರ್ಮಗಳಿಂದ ತೇಜಸ್ಸು ವೃದ್ಧಿಯೂ ಕ್ಷಯವೂ ಇದಿರುವ ರೀತಿಯಲ್ಲಿ ಅನ್ಯರನ್ನನುಗ್ರಹಿಸೋಣವೇ ಫಲವಾಗುಳ್ಳ ಕರ್ಮಗಳಿಂದ ನಿನಗೆ ತೇಜಸ್ಸು ವೃದ್ಧಿಹೊಂದುವದೂ ಕ್ಷಯಿಸುವದೂ ಇಲ್ಲ! ಎಲೈ ಶ್ರೀಕೃಷ್ಣನೆ, ಅಜ್ಞರಿಗೆ ಭೇದಬುದ್ಧಿಯುಂಟಾಗುವ ರೀತಿಯಲ್ಲಿ ಅಹಂಕಾರ ಮಮಕಾರಗಳಿಂದ ತಾನು ತನ್ನದು ಎಂದು ಶರೀರವಿಷಯಕವಾದ ಭೇದಬುದ್ಧಿಯು ನಿನ್ನ ಭಕ್ತರಿಗುಂಟಾಗುವದಿಲ್ಲ; ಈರೀತಿಯಾಗಿರುವಲ್ಲಿ ನಿನಗೆ ಭೇದಬುದ್ಧಿಯಿಲ್ಲವೆಂದು ಹೇಳತಕ್ಕದ್ದೇನು!" ಎಂದು ವಿಜ್ಞಾಪಿಸಿ ಕೃಷ್ಣನಿಂದ ಶ್ಲಾಘಿಸಲ್ಪಟ್ಟವನಾಗಿ ಯಜ್ಞಕ್ಕುಚಿತವಾದ ಕಾಲಗಳಲ್ಲಿ ಜ್ಞಾನಿಗಳಾಗಿ ವೇದಾಧ್ಯಯನಶೀಲರಾದ ಬ್ರಾಹ್ಮಣರನ್ನೂ ವ್ಯಾಸನು ಭರದ್ವಾಜನು ಸುಮಂತುವು ಗೌತಮನು ಅಸಿತನು ವಶಿಷ್ಠನು ಚವನನು ಕಣ್ವನು ಮೈತ್ರೇಯನು ಕವಷನು ತ್ರಿತನು ವಿಶ್ವಾಮಿತ್ರನು ವಾಮದೇವನು ಸುಮತಿಯು ಜೈಮಿನಿಯು ಕ್ರತುವು ಪೈಲವನು ಪರಾಶರನು ಅಗಸ್ತ್ಯನು ವೈಶಂಪಾಯನನು ಅಥರ್ವನು ಕಾಶ್ಯಪನು ಧೌಮ್ಯನು ಪರಶುರಾಮನು ಆಸುರಿಯು ವೀತಿಹೋತ್ರನು ಮಧುಚ್ಛಂದನು ವೀರಸೇನನು ಅಕೃತವ್ರಣನು ಮೊದಲಾದ ಋಷಿಗಳನ್ನು ಋತ್ವಿಕ್ಕುಗಳಾಗಿ ವರಿಸಿದನು; ದ್ರೋ-

ಣ ಭೀಷ್ಮ ಕೃಪಾದಿಗಳು ಪುತ್ರಯುಕ್ತನಾದ ಧೃತರಾಷ್ಟ್ರನು ಮಹಾ ಬುದ್ಧಿಶಾಲಿಯಾದ ವಿದುರನು ಮೊದಲಾದ ಬಂಧುಗಳು ಧರ್ಮರಾಯನಿಂದ ಕರೆಸಲ್ಪಟ್ಟು ಆ ಯಜ್ಞವನ್ನು ನೋಡಬೇಕೆಂಬ ಇಚ್ಛೆಯಿಂದ ರಥ ಗಜ ತುರಗ ಪದಾತಿಗಳೊಡಗೂಡಿ ಸಂತೋಷದಿಂದ ಇಂದ್ರಪ್ರಸ್ಥ ಪಟ್ಟಣವನ್ನೈದಿದರು ; ಮತ್ತು ಬ್ರಾಹ್ಮಣರು ಕ್ಷತ್ರಿಯರು ವೈಶ್ಯರು ಶೂದ್ರರು ಭೂಪತಿಗಳು ಅವರ ಮಂತ್ರಿಗಳು ಮೊದಲಾದ ಸಾಮಾಜಿಕರೂ ಆ ರಾಜಸೂಯ ಯಾಗವನ್ನು ನೋಡಬೇಕೆಂದು ಆ ಪುರವನ್ನೈದಿದರು ; ಅನಂತರದಲ್ಲಿ ಬ್ರಾಹ್ಮಣರು ಯಜ್ಞಭೂಮಿಯನ್ನು ಸುವರ್ಣಮಯವಾದ ನೇಗಲುಗಳಿಂದ ಶೋಧಿಸಿ ಆ ಭೂಮಿಯಲ್ಲಿ ರಚಿಸಲ್ಪಟ್ಟ ಯಜ್ಞಶಾಲೆಯಲ್ಲಿ ಧರ್ಮರಾಯನಿಗೆ ಶಾಸ್ತ್ರೋಕ್ತವಾಗಿ ದೀಕ್ಷೆಯಂಗೈದರು ; ವರುಣನ ರಾಜಸೂಯದಲ್ಲಿ ಯಾವರೀತಿ ಸುವರ್ಣಮಯಗಳಾಗಿ ಯಾಗೋಪಕರಣಗಳು ಕಲ್ಪಿಸಲ್ಪಟ್ಟವೊ ಆ ರೀತಿಯಲ್ಲಿ ಧರ್ಮರಾಯನ ರಾಜಸೂಯದಲ್ಲಿ ಸಮಸ್ತವಾದ ಯಜ್ಞೋಪಕರಣಗಳೂ ಸುವರ್ಣದಿಂದ ರಚಿಸಲ್ಪಟ್ಟವು; ಆಗ ಇಂದ್ರಾದಿ ಲೋಕಪಾಲಕರೂ ಬ್ರಹ್ಮಾದಿ ದೇವಸಮೂಹಗಳೂ ತಮ್ಮ ತಮ್ಮ ಗಣಗಳೊಡನೆಯೂ ಸಿದ್ಧ ಗಂಧರ್ವ ವಿದ್ಯಾಧರರೂ ಸರ್ಪಾಧಿಪತಿಗಳೂ ಮುನಿಗಳೂ ಯಕ್ಷರಾಕ್ಷಸರೂ ಖಗ ಕಿನ್ನರ ಚಾರಣರೂ ಕರೆಸಲ್ಪಟ್ಟ ಸಮಸ್ತ ಭೂಪತಿಗಳೂ ರಾಜಪತ್ನಿಯರೂ ತಮ್ಮತಮ್ಮ ಪರಿವಾರಗಳೊಡಗೂಡಿಯೂ ಬಂದು ಶ್ರೀಕೃಷ್ಣ ಭಕ್ತನಾದ ಧರ್ಮರಾಯನ ಯಜ್ಞವಿಧಾನವನ್ನು ನೋಡಿ ಆಶ್ಚರ್ಯಪಡದೆ ಆತನಿಗೆ ಆ ಕ್ರತುವು ಯುಕ್ತವಾದ್ದೆಂದು ನುಡಿದರು ! ಅನಂತರದಲ್ಲಿ ದೇವತೆಗಳಂತೆ ತೇಜೋವಂತರಾದ ಋತ್ವಿಕ್ಕರು ಪೂರ್ವದಲ್ಲಿ ದೇವತೆಗಳು ವರುಣನಿಂದ ಯಾವರೀತಿ ರಾಜಸೂಯವನ್ನು ಮಾಡಿಸಿದರೊ ಅದೇರೀತಿ ಧರ್ಮರಾಯನಿಂದ ವಿಧಿಯುಕ್ತವಾಗಿ ರಾಜಸೂಯ ಯಾಗವನ್ನು ಮಾಡಿಸಿದರು ; ಧರ್ಮರಾಯನು ಸುತ್ಯಾಹಸ್ಸಿನಲ್ಲಿ ಏಕಾಗ್ರಚಿತ್ತನಾಗಿದ್ದುಕೊಂಡು ಯಾಗಪೂರ್ತಿಯಾದ ಬಳಿಕ ಉಚಿತಪ್ರಕಾರದಲ್ಲಿ ಋತ್ವಿಕ್ಕುಗಳನ್ನೂ ಆ ಯಜ್ಞಸಭೆಯಲ್ಲಿದ್ದ ಮಹಾತ್ಮರನ್ನೂ ನಾನಾದೇಶಗಳ ಅರಸರನ್ನೂ ಅವರವರ ಯೋಗ್ಯತಾನುಸಾರವಾಗಿ ಪೂಜಿಸಲುದ್ಯೋಗಿಸಲು ಅಲ್ಲಿದ್ದ ಮುನಿಗಳು ಅಗ್ರಪೂಜೆಗೆ ಯೋಗ್ಯನಾರೆಂದು ಚಿಂತಿಸುತಿದ್ದಾಗ್ಯೂ ಬಹುಮಂದಿ ಯೋಗ್ಯರಿದ್ದಕಾರಣ ಅಗ್ರಪೂಜಾಯೋಗ್ಯನೆಂದು ಒಬ್ಬನನ್ನು ನಿಶ್ಚಯಿಸಲಿಲ್ಲ ; ಆಗ ಶ್ರೀಕೃಷ್ಣನ ಪ್ರಭಾವವನ್ನು ತಿಳಿದ ಸಹದೇವನು ಆ ಯಾಗಸಭೆಯಲ್ಲಿ ನಿಂತು " ಎಲೈ ಸಭಾಜನರೇ ಕೇಳಿ : ಯಾದವಶ್ರೇಷ್ಠನಾದ ಶ್ರೀಕೃಷ್ಣನು ಸಕಲ ದೇವತಾಸ್ವರೂಪನು ; ದೇಶ ಕಾಲ ಧನಸ್ವರೂಪನು ; ಆದ್ದರಿಂದ ಆತನೇ ಅಗ್ರಪೂಜೆಗೆ ಯೋಗ್ಯನು ; ಈ ಪ್ರಪಂಚವು ಯಾವನ ಸ್ವರೂಪವೊ—ಕ್ರತುಗಳು ಯಾವನ ಸ್ವರೂಪಗಳೊ—ಅಗ್ನಿಯೂ ಆಹುತಿಯೂ ಮಂತ್ರಗಳೂ ಯಾವನ ಸ್ವರೂಪಗಳೊ—ಜ್ಞಾನಶಾಸ್ತ್ರವೂ ಉಪಾಸನಶಾಸ್ತ್ರವೂ ಯಾವನ ತತ್ವವನ್ನು ತಿಳಿಯುವದಕ್ಕೆ ಸಾಧನಗಳೊ ಅಂಥಾ ಶ್ರೀಕೃಷ್ಣನೇ ಅಗ್ರಪೂಜೆಗೆ ಯೋಗ್ಯನು ! ಎಲೈ ಸಭಾಜನರೆ ಕೇಳಿ : ಈ ಜಗತ್ತು ಏಕರೂಪನಾಗಿ ಅದ್ವಿತೀಯನಾಗಿರುವ ಕೃಷ್ಣನನ್ನೇ ಆತ್ಮನಾಗುಳ್ಳಂಥಾದ್ದು ; ಈತನು ಪರಾಪೇಕ್ಷೆಯಿಲ್ಲದವನಾಗಿ ಜನ್ಮರಹಿತನಾಗಿ ಈ ಜಗತ್ತನ್ನು ಸೃಜಿಸುತ ಪಾಲಿಸುತ ಸಂಹರಿಸುತಲಿರ್ಧಾನೆ ; ಸಮಸ್ತ ಜನರೂ ಯಾವನ ಅನುಗ್ರಹದಿಂದ ಈ ಲೋಕದಲ್ಲಿ ಅನೇಕ ವಿಧಗಳಾದ ತಪೋಯೋಗಾದಿ ಕರ್ಮಗಳನ್ನು ಅನುಷ್ಠಾನಂಗೈಯುತ ಧರ್ಮಾದಿ ರೂಪಗಳಿಂದ ಶ್ರೇಯಸ್ಸನ್ನು ಸಂಪಾದಿಸುತಲಿರ್ಧಾರೆಯೋ ಅಂಥಾ ಮಹಾತ್ಮನಾದ ಶ್ರೀಕೃಷ್ಣನಿಗೋಸ್ಕರ ಅಗ್ರಪೂಜೆಯು ಗೈಯಲು ಯೋಗ್ಯವು ; ಒಬ್ಬ ಶ್ರೀಕೃಷ್ಣನಿಗೆ ಅಗ್ರಪೂಜೆಯು ಮಾಡಲ್ಪಟ್ಟರೆ ಆತ್ಮನೂ ಸಕಲ ಭೂತಗಳೂ ಪೂಜಿಸಲ್ಪಟ್ಟವರಾಗುವರು ; ತನ್ನಿಂದ ಕೊಡಲ್ಪಟ್ಟ ದ್ರವ್ಯವು ಅಪರಿಮಿತವಾಗಬೇಕೆಂದು ಇಚ್ಛೈಸುವ ಪುರುಷನಿಂದ ಸರ್ವ ಭೂತಗಳಿಗೂ ಆತ್ಮರೂಪನಾಗಿ ನಿರಾಕರಿಸಲ್ಪಟ್ಟ ಭೇದವುಳ್ಳವನಾಗಿ ಶಾಂತನಾಗಿ ಪೂರ್ಣನಾಗಿರುವ ಶ್ರೀಕೃಷ್ಣನ ಪೂಜೆಯು ಮಾಡಲ್ಪಡತಕ್ಕದ್ದು " ಎಂದು ನುಡಿದನು.

ಎಲೈ ಅರಸೇ ಕೇಳು : ಶ್ರೀಕೃಷ್ಣನ ಪ್ರಭಾವವನ್ನು ತಿಳಿದಿದ್ದ ಸಹದೇವನು ಈರೀತಿ ಸಭಾಜನರನ್ನು ಕುರಿತು ಹೇಳಿ ಸುಮ್ಮನಿರಲು ಅಲ್ಲಿದ್ದ ಸಜ್ಜನರು ಆತನ ವಾಕ್ಯವನ್ನು ಕೇಳಿ ಚೆನ್ನಾಯಿತೆಂದು ಆ ವಚನವನ್ನು

ಶ್ಲಾಘಿಸಿದರು; ಧರ್ಮರಾಯನು ಬ್ರಾಹ್ಮಣರಿಂದ ಹೇಳಲ್ಪಟ್ಟ ಆ ಶ್ಲಾಘೆವಚನವನ್ನು ಕೇಳಿ ಆ ಸಭಾಜನರ ಅಭಿಪ್ರಾಯವನ್ನೂ ತಿಳಿದು ಸ್ನೇಹದಿಂದ ಪರವಶನಾಗಿ ಮೊದಲು ಶ್ರೀಕೃಷ್ಣನನ್ನು ಪೂಜಿಸುತ ಶ್ರೀಕೃಷ್ಣನ ಪಾದಪದ್ಮಗಳನ್ನು ಪ್ರಕ್ಷಾಳನಂಗೈದು ಲೋಕಪಾವನವಾದ ಆ ಪಾದೋದಕವನ್ನು ಪತ್ನಿಯರೊಡನೆಯೂ ತಮ್ಮಂದಿರೊಡನೆಯೂ ಮಂತ್ರಿಗಳೊಡನೆಯೂ ಬಂಧುಗಳೊಡನೆಯೂ ಶಿರಸ್ಸಿನಲ್ಲಿ ಸಂತೋಷವಾಗಿ ಧರಿಸಿ ಪೀತಾಂಬರಗಳಿಂದಲೂ ಬೆಲೆಯಿಲ್ಲದ ಭೂಷಣಗಳಿಂದಲೂ ಶ್ರೀಕೃಷ್ಣನನ್ನಲಂಕರಿಸಿ ಆನಂದಬಾಷ್ಪಗಳಿಂದ ಪರಿಪೂರ್ಣಗಳಾದ ನೇತ್ರಗಳುಳ್ಳವನಾಗಿ ಶ್ರೀಕೃಷ್ಣನನ್ನು ನೋಡಲು ಸಮರ್ಥನಾಗದಿದ್ದನು; ಅಲ್ಲಿದ್ದ ಸಮಸ್ತ ಜನರೂ ಧರ್ಮರಾಯನಿಂದ ಪೂಜಿಸಲ್ಪಟ್ಟ ಶ್ರೀಕೃಷ್ಣನನ್ನು ನೋಡಿ ಅಂಜಲೀಬಂಧಯುಕ್ತರಾಗಿ "ನಮೊ—ಜಯಜಯ" ಎಂದು ನಮಸ್ಕರಿಸಿದರು; ಆಗ ದಿವ್ಯವಾದ ಪುಷ್ಪವರ್ಷಗಳು ಸುರಿದವು!

ಎಲೈ ಪರೀಕ್ಷಿದ್ರಾಯನೇ, ಆ ಸಮಯದಲ್ಲಿ ಶಿಶುಪಾಲನು ಸಭಾಜನರು ಮಾಡಿದ ಸ್ತೋತ್ರ ಮೊದಲಾದ್ದನ್ನು ಕೇಳಿ ಶ್ರೀಕೃಷ್ಣನ ಗುಣವರ್ಣನದಿಂದ ಹುಟ್ಟಿದ ಕೋಪವುಳ್ಳವನಾಗಿ ಸಹಿಸಲಾರದೆ ತನ್ನ ಪೀಠದಿಂದೆದ್ದು ಭುಜವನ್ನೆತ್ತಿ ಆ ಸಭೆಯಲ್ಲಿ ಭಯವಿಲ್ಲದೆ "ಎಲೈ ಸಭಾನಾಯಕರೆ ಕೇಳಿ: ದೊಡ್ಡವರ ಬುದ್ಧಿಯೂ ಬಾಲಕನ ವಚನಗಳಿಂದ ಭೇದಿಸಲ್ಪಡುವಕಾರಣ ಕಾಲವೇ ಸ್ವತಂತ್ರವಾಗಿ ಅತಿಕ್ರಮಿಸಲಶಕ್ಯನಾಗಿದ್ದಾನೆಂದು ಹೇಳುವ ಶ್ರುತಿಯು ಸತ್ಯವೇ ಸರಿ! ಎಲೈ ಸಭಾಪತಿಗಳೆ ಕೇಳಿ: ಪಾತ್ರಸ್ವರೂಪವನ್ನು ತಿಳಿದವರಲ್ಲಿ ಉತ್ತಮರಾದ ನೀವೆಲ್ಲರು ಕೃಷ್ಣನೇ ಅಗ್ರಪೂಜೆಗೆ ಯೋಗ್ಯನಾದವನೆಂದು ಬಾಲಕನಾದ ಸಹದೇವನಿಂದ ಹೇಳಲ್ಪಟ್ಟ ವಚನವನ್ನು ಸಮ್ಮತಿಸಬೇಡಿ; ತಪೋವಿದ್ಯಾವ್ರತಗಳನ್ನು ಧನವಾಗುಳ್ಳವರಾಗಿ ಜ್ಞಾನದಿಂದ ನಿರಾಕರಿಸಲ್ಪಟ್ಟ ಪಾಪವುಳ್ಳವರಾಗಿ ಬ್ರಹ್ಮನಿಷ್ಠರಾಗಿ ಇಂದ್ರಾದಿ ಲೋಕಪಾಲಕರಿಂದ ಪೂಜಿಸಲ್ಪಡುವವರಾಗಿರುವ ಬ್ರಹ್ಮರ್ಷಿಗಳನ್ನು ಉಲ್ಲಂಘಿಸಿ ಕುಲದೂಷಕನಾದ ಬಬ್ಬ ಗೋಪಾಲಕನನ್ನು ಪುರೋಡಾಶಕ್ಕೆ ಯೋಗ್ಯವಲ್ಲದ ವಾಯಸನಂತೆ ಅಗ್ರಪೂಜೆಗೆ ಯೋಗ್ಯನಾಗಿಮಾಡಿಧಿರಿ! ವರ್ಣಾಶ್ರಮಕುಲರಹಿತನಾಗಿ ಸಮಸ್ತ ಧರ್ಮಭ್ರಷ್ಟನಾಗಿ ಮನಸ್ಸುಬಂದಂತೆ ನಡೆಯುವವನಾಗಿ ಸಮಸ್ತ ಗುಣಹೀನನಾಗಿರುವ ಕೃಷ್ಣನು ಪೂಜೆಗೆ ಯೋಗ್ಯನೇ! ಈತನ ಕುಲವು ಯಯಾತಿರಾಯನಿಂದ ಸಿಂಹಾಸನಾಧಿಪತ್ಯವಿಲ್ಲದಂತೆ ಶಪಿಸಲ್ಪಟ್ಟಿದ್ದು; ಸತ್ಪುರುಷರಿಂದ ನಿಂದಿಸಲ್ಪಟ್ಟಿದ್ದು; ನಿರಂತರದಲ್ಲಿಯೂ ವ್ಯರ್ಥವಾಗಿ ಮದ್ಯಪಾನದಲ್ಲಿ ಆಸಕ್ತವಾಗಿರುವಂಥಾದ್ದು; ಹೀಗಿರುವಲ್ಲಿ ಕೃಷ್ಣನು ಹ್ಯಾಗೆ ಪೂಜಾಯೋಗ್ಯನಾದಾನು! ಯಾದವರು ಬ್ರಹ್ಮರ್ಷಿಗಳಿಂದ ಸೇವಿಸಲ್ಪಟ್ಟ ದೇಶಗಳನ್ನು ಬಿಟ್ಟು ಬ್ರಹ್ಮಪುಣ್ಯಕ್ಕೆ ಯೋಗ್ಯವಲ್ಲದ ಸಮುದ್ರ ದುರ್ಗವನ್ನಾಶ್ರಯಿಸಿ ಚೋರರಾಗಿ ಪ್ರಜೆಗಳನ್ನು ಬಾಧಿಸುತಲಿಧಾರೆ!" ಎಂದು ನುಡಿದನು.

ಎಲೈ ಪರೀಕ್ಷಿದ್ರಾಯನೆ, ನಷ್ಟವಾದ ಶುಭವುಳ್ಳ ಶಿಶುಪಾಲನು ಆ ಸಭೆಯಲ್ಲಿ ಇವು ಮೊದಲಾದ ದುರ್ವಚನಗಳನ್ನು ಹೇಳುತಿರಲು ಸಿಂಹವು ನರಿಯ ಶಬ್ದವನ್ನು ಕೇಳಿ ಸುಮ್ಮನಿರುವ ರೀತಿಯಲ್ಲಿ ಭಗವಂತನಾದ ಶ್ರೀಕೃಷ್ಣನು ಸ್ವಲ್ಪವಾದರು ಮಾತಾಡದೆ ಸುಮ್ಮನಿದ್ದನು; ಆ ಸಭೆಯಲ್ಲಿದ್ದ ಮಹಾತ್ಮರು ಸಹಿಸಲಶಕ್ಯವಾದ ಭಗವಂತನ ನಿಂದೆಯನ್ನು ಕೇಳಿ ಕೋಪದಿಂದ ಶಿಶುಪಾಲನನ್ನು ಶಪಿಸುತ ಶ್ರೋತ್ರಗಳನ್ನು ಮುಚ್ಚಿಕೊಂಡು ಆ ಯಜ್ಞಶಾಲೆಯ ದೆಶೆಯಿಂದ ಹೊರಕ್ಕೆ ತೆರಳಿದರು! ಎಲೈ ಅರಸೆ, ಯಾವ ಪುರುಷನು ಭಗವಂತನ ನಿಂದೆಯನ್ನೂ ಭಗವದ್ಭಕ್ತರ ನಿಂದೆಯನ್ನೂ ಕೇಳಿ ಅಲ್ಲಿಂದ ಹೊರಕ್ಕೆ ಹೋಗದಿರುವನೊ ಆ ಪುರುಷನು ಸುಕೃತಭ್ರಷ್ಟನಾಗಿ ನರಕವನ್ನೈದುವನು! ಆದಕಾರಣ ಧರ್ಮಜ್ಞರಾದವರು ಆ ಸಭೆಯಿಂದ ಹೊರಕ್ಕೆ ಹೋದರು; ಅನಂತರದಲ್ಲಿ ಪಾಂಡವರೂ ಮತ್ಸ್ಯ ಸೃಂಜಯ ಕೇಕಯ ದೇಶಾಧಿಪತಿಗಳಾದ ಅರಸುಗಳೂ ಅತಿ ಕೋಪಯುಕ್ತರಾಗಿ ಶಿಶುಪಾಲನನ್ನು ಸಂಹರಿಸುವ ಇಚ್ಛೆಯಿಂದ ಆಯುಧಗಳನ್ನಿಡಿದೆದ್ದರು; ಶಿಶುಪಾಲನು ಭಯಪಡದೆ ಧರ್ಮರಾಯನ ಸಭೆಯಲ್ಲಿ ಕೃಷ್ಣನಲ್ಲಿ ಪಕ್ಷಪಾತವುಳ್ಳ ಜನರನ್ನು ಭಯಪಡಿಸುತ ಖಡ್ಗಚರ್ಮಗಳನ್ನು ಧರಿಸಿದನು; ಅಷ್ಟರಲ್ಲಿ ಶ್ರೀಕೃಷ್ಣನು ತನ್ನ ಮನಸ್ಸಿನಲ್ಲಿ ತನ್ನ ದ್ವಾರಪಾಲಕನಾದ ಶಿಶುಪಾಲನು ತನಗೆ ಸಮಾನವಾದ ಬಲವುಳ್ಳವನಾದ್ದರಿಂದ ತನ್ನ ಭಕ್ತ

ರಾದ ಪಾಂಡವಾದಿಗಳನ್ನು ಸಂಹರಿಸುವನೆಂದೂ ಶೀಘ್ರವಾಗಿ ಅವನನ್ನು ತಾನೇ ಸಂಹರಿಸಬೇಕೆಂದೂ ಆಲೋಚಿಸಿ ಯುದ್ಧಸನ್ನದ್ಧರಾದ ಪಾಂಡವಾದಿಗಳನ್ನಡ್ಡಗೈದು ಅತಿ ಕೋಪದಿಂದ ಅತಿ ತೀಕ್ಷ್ಣಗಳಾದ ಅಗ್ರಗಳುಳ್ಳ ಚಕ್ರಾಯುಧದಿಂದ ಎದುರಾಗಿ ಬರುತಿದ್ದ ಶಿಶುಪಾಲನ ಶಿರಸ್ಸನ್ನು ಛೇದಿಸಿದನು ; ಶ್ರೀಕೃಷ್ಣನಿಂದ ಈರೀತಿ ಶಿಶುಪಾಲನು ಸಂಹೃತನಾಗಿ ಮಹತ್ತಾದ ಕೋಲಾಹಲಶಬ್ದವುಂಟಾಗಲು ಶಿಶುಪಾಲನ ಸಂಗಡ ಬಂದು ಆತನಿಗೆ ಜಯವನ್ನಪೇಕ್ಷಿಸುತಿದ್ದ ಭೂಪತಿಗಳು ಭಯದಿಂದ ಓಡಿದರು ! ಆ ಬಳಿಕ ಶಿಶುಪಾಲನ ದೇಹದದೆಶೆಯಿಂದೆದ್ದ ಬಂದು ತೇಜಸ್ಸು ಅಂತರಿಕ್ಷದಿಂದ ಬೀಳುವ ಕೊಳ್ಳಿಯಂತೆ ಪ್ರಕಾಶಿಸುತ ಸಮಸ್ತ ಭೂತಗಳೂ ನೋಡುತಿರಲು ಶ್ರೀಕೃಷ್ಣನಲ್ಲಿ ಪ್ರವೇಶಿಸಿತು ! ಎಲೈ ಅರಸೆ, ಶಿಶುಪಾಲನು ಮೂರುಜನ್ಮಗಳಲ್ಲಿ ವೃದ್ಧಿಹೊಂದಿದ ವೈರದಿಂದ ಪರಿಪೂರ್ಣವಾದ ಬುದ್ಧಿಯಿಂದ ಶ್ರೀಕೃಷ್ಣನನ್ನು ಧ್ಯಾನಂಗೈಯುತ ಆ ಭಗವಂತನ ಸ್ವರೂಪವನ್ನೈದಿದನು ; ಲೋಕದಲ್ಲಿ ಭಾವನೆಯು ಭಾವನಾವಿಷಯವಾದ ವಸ್ತುವಾಗಿ ಜನಿಸುವದಕ್ಕೆ ಕಾರಣವಲ್ಲವಾದಕಾರಣ ಶಿಶುಪಾಲನು ಜನ್ಮಪ್ರಭೃತಿಯಾಗಿ ವೈರದಿಂದ ಶ್ರೀಕೃಷ್ಣನನ್ನೇ ಭಾವಿಸುತಿದ್ದು ದುಷ್ಟನಾದರೂ ಆತನ ಭಾವನಾಸಾಮರ್ಥ್ಯದಿಂದ ಕೃಷ್ಣನಲ್ಲೇ ಐಕ್ಯವನ್ನೈದಿ ದ್ವಾರಪಾಲಕತ್ವವನ್ನೈದಿದನು !

ಅನಂತರದಲ್ಲಿ ಸಾರ್ವಭೌಮನಾದ ಧರ್ಮರಾಯನು ಋತ್ವಿಕ್ಕುಗಳಿಗೂ ಆ ಸಭೆಯಲ್ಲಿದ್ದ ಬ್ರಾಹ್ಮಣರಿಗೂ ಅಮಿತವಾದ ದಕ್ಷಿಣೆಯನ್ನಿತ್ತು ವಿಧಿಯುಕ್ತವಾಗಿ ಸಮಸ್ತರನ್ನೂ ಪೂಜಿಸಿ ಅವಭೃತಸ್ನಾನವನ್ನಾಚರಿಸಿದನು ; ಯೋಗೀಶ್ವರನಾದ ಶ್ರೀಕೃಷ್ಣನು ಧರ್ಮರಾಯನ ರಾಜಸೂಯಯಾಗವನ್ನು ಪೂರ್ತಿಗೈದು ಮಿತ್ರರಿಂದ ಪ್ರಾರ್ಥಿಸಲ್ಪಟ್ಟು ಕೆಲವು ಮಾಸಗಳು ಇಂದ್ರಪ್ರಸ್ಥಪುರದಲ್ಲಿ ವಾಸಂಗೈದು ಅನಂತರದಲ್ಲಿ ಧರ್ಮರಾಯನಿಗೆ ತಾನು ತೆರಳಿಪೋಗುವದು ಅಸಮ್ಮತವಾದಾಗ್ಯು ಧರ್ಮರಾಯನನ್ನು ಕೇಳಿ ಪತ್ನಿಯರೊಡನೆಯೂ ಮಂತ್ರಿಗಳೊಡನೆಯೂ ಕೂಡಿ ದ್ವಾರಕಾಪುರವನ್ನೈದಿದನು ! ಎಲೈ ಅರಸೆ ಕೇಳು : ಅತ್ಯಂತ ವಿಸ್ತಾರವಾದ ಶ್ರೀಕೃಷ್ಣನ ಉಪಾಖ್ಯಾನವೂ ವೈಕುಂಠವಾಸಿಗಳಾದ ಜಯವಿಜಯರಿಗೆ ಭೃಗುಶಾಪದಿಂದುಂಟಾದ ಮೂರುಜನ್ಮಗಳ ವೃತ್ತಾಂತವೂ ನನ್ನಿಂದ ನಿನಗೆ ನಿರೂಪಿಸಲ್ಪಟ್ಟವು! ಎಲೈ ಅರಸೇ ಕೇಳು, ಧರ್ಮರಾಯನು ರಾಜಸೂಯಯಾಗವು ಪರಿಪೂರ್ತಿಯಾದಬಳಿಕ ಅವಭೃತಸ್ನಾನಂಗೈದು ಬ್ರಾಹ್ಮಣ ಕ್ಷತ್ರಿಯರ ಸಭಾಮಧ್ಯದಲ್ಲಿ ದೇವೇಂದ್ರನಂತೆ ಪ್ರಕಾಶಿಸಿದನು ; ದೇವತೆಗಳು ಮಾನವರು ಪ್ರಥಮರು ಮೊದಲಾದವರು ಧರ್ಮರಾಯನಿಂದ ಪೂಜಿಸಲ್ಪಟ್ಟು ಶ್ರೀಕೃಷ್ಣನನ್ನೂ ಆ ಯಾಗವನ್ನೂ ಶ್ಲಾಘಿಸುತ ತಮ್ಮ ತಮ್ಮ ಸ್ಥಾನಗಳನ್ನು ಸಂತೋಷದಿಂದೈದಿದರು ! ಆಗ ಧರ್ಮರಾಯನ ಸಂಪತ್ತನ್ನು ನೋಡಿ ಸಹಿಸದವನಾಗಿ ಪಾಪಿಷ್ಟನಾಗಿ ಕುರುವಂಶಕ್ಕೆ ನಾಶಕರನಾಗಿ ಕಲಿಸ್ವರೂಪನಾದ ದುರ್ಯೋಧನನೊಬ್ಬನು ಶ್ರೀಕೃಷ್ಣನನ್ನೂ ಆ ಯಾಗವನ್ನೂ ಶ್ಲಾಘಿಸಲಿಲ್ಲ; ಮಿಕ್ಕವರೆಲ್ಲರು ಶ್ಲಾಘಿಸಿದರು ! ಎಲೈ ಪರೀಕ್ಷಿದ್ರಾಯನೆ, ಯಾವ ಪುರುಷನು ಶಿಶುಪಾಲನ ವಧೆ ಮೊದಲಾದ ಶ್ರೀಕೃಷ್ಣನ ಚರಿತ್ರೆಯನ್ನೂ ಅನೇಕ ಅರಸರ ಬಂಧವಿಮೋಚನವನ್ನೂ ರಾಜಸೂಯಪ್ರಸ್ತಾಪವನ್ನೂ ಕೀರ್ತನಂಗೈವನೊ ಆತನು ಸಮಸ್ತ ಪಾಪಗಳಿಂದ ವಿಮುಕ್ತನಾಗುವನು.

---

## ೭೫ ನೇ ಅಧ್ಯಾಯ.

### ದುರ್ಯೋಧನನು ಧರ್ಮರಾಯನಲ್ಲಿ ಅಸೂಯೆಪಟ್ಟದ್ದು.

[ಪರೀಕ್ಷಿದ್ರಾಯನು ಶುಕಮುನಿಯನ್ನು ಕುರಿತು—ಎಲೈ ಮುನಿಯೆ, ಅರಸರೂ ಋಷಿಗಳೂ ದೇವತೆಗಳೂ ಧರ್ಮರಾಯನ ರಾಜಸೂಯ ಮಹೋತ್ಸವವನ್ನೂ ನೋಡಿ ಸಂತೋಷಪಟ್ಟರೆಂದೂ ಬಟ್ಟ ದುರ್ಯೋಧನನು ಮಾತ್ರವೆ ಸಂತೋಷಪಡಲಿಲ್ಲವೆಂದೂ ನಿರೂಪಿಸಿದೆ ; ದುರ್ಯೋಧನನಿಗೆ ಧರ್ಮರಾಯನಲ್ಲಿ ದುಃಖವುಂಟಾಗುವದಕ್ಕೆ ಕಾರಣವನ್ನು ನಿರೂಪಿಸು— ಎಂದು ಕೇಳಿದನು.]

ಶುಕಮುನಿಯು ಆತನನ್ನು ಕುರಿತು—ಎಲೈ ಪರೀಕ್ಷಿದ್ರಾಯನೆ, ನಿನ್ನ ಪಿತೃಪ್ರನಾಗಿ ಮಹಾತ್ಮನಾದ ಧರ್ಮರಾಯನ ರಾಜಸೂಯ ಯಾಗದಲ್ಲಿ ಬಂಧುಗಳಾದ ಅರಸರು ಪ್ರೇಮಬದ್ಧರಾಗಿ ಆತನ ಸೇವೆಯಲ್ಲಿ ಉದ್ಯುಕ್ತರಾದರು ; ಭೀಮನು ಪಾಕಶಾಲೆಗೆ ಅಧಿಪತಿಯಾದನು ; ದುರ್ಯೋಧನನು ಧನಕ್ಕೆ ಅಧಿಪತಿಯಾದನು ; ಸಹದೇವನು ಯಾಗಕ್ಕೆ ಬಂದವರನ್ನು ಬಹುಮಾನಂಗೈವದರಲ್ಲಿ ಉದ್ಯುಕ್ತನಾದನು ; ನಕುಲನು ಸಮಸ್ತ ಪದಾರ್ಥಗಳನ್ನು ಸಂಪಾದಿಸುವದರಲ್ಲಿ ಉದ್ಯುಕ್ತನಾದನು ; ಅರ್ಜುನನು ಬಂದ ಮಹಾತ್ಮರಿಗೆ ಗಂಧಲೇಪನಾದಿಗಳನ್ನು ಮಾಡುವದರಲ್ಲಿಯೂ ಶ್ರೀಕೃಷ್ಣನು ಅವರ ಪಾದಪ್ರಕ್ಷಾಳನಂಗೈವದರಲ್ಲಿಯೂ ದ್ರುಪದರಾಯನು ಭಕ್ಷ್ಯಭೋಜ್ಯಾದಿಗಳನ್ನು ಬಡಿಸುವದರಲ್ಲಿಯೂ ಕರ್ಣನು ಮಹಾತ್ಮರಿಗೆ ಇಷ್ಟಾರ್ಥಗಳನ್ನು ದಾನಂಗೈವದರಲ್ಲಿಯೂ ಉದ್ಯುಕ್ತರಾದರು ; ಯುಯುಧಾನನು ವಿಕರ್ಣನು ಹಾರ್ದಿಕ್ಯನು ವಿದುರನು ಭೂರಿಯು ಬಾಹ್ಲೀಕ ದೇಶಾಧಿಪತಿಯ ಪುತ್ರರು ಸಂತರ್ದನಾದಿಗಳೂ ಆ ಮಹಾಯಾಗದಲ್ಲಿ ಆಜ್ಞಾಪಿಸಲ್ಪಟ್ಟವರಾಗಿ ಅರಸನಿಗೆ ಪ್ರಿಯವನ್ನಾಚರಿಸುವ ಇಚ್ಛೆಯಿಂದ ನಿರಂತರವೂ ನಾನಾಪ್ರಕಾರವಾದ ಕೆಲಸಗಳಲ್ಲಿ ಪ್ರವರ್ತಿಸಿದರು ; ಆ ಬಳಿಕ ಧರ್ಮರಾಯನಿಂದ ಋತ್ವಿಕ್ಕುಗಳೂ ಸಭಾಜನರೂ ಸರ್ವಜ್ಞರಾದ ಮುನಿಗಳೂ ಪ್ರಿಯವಚನಗಳಿಂದಲೂ ಭೂಷಣಾದಿಗಳಿಂದಲೂ ದಕ್ಷಿಣೆಗಳಿಂದಲೂ ಪೂಜಿಸಲ್ಪಟ್ಟರು; ಶಿಶುಪಾಲನು ಕೃಷ್ಣನ ಚರಣದಲ್ಲಿ ಐಕ್ಯವಾದನು ; ಆಮೇಲೆ ಗಂಗಾನದಿಯಲ್ಲಿ ಧರ್ಮರಾಯನು ಮೊದಲಾದವರು ಅವಭೃತಸ್ನಾನಂಗೈದರು ; ಆ ಅವಭೃತಸ್ನಾನ ಮಹೋತ್ಸವದಲ್ಲಿ ಮೃದಂಗ ಶಂಖ ಪಣವ ಭೇರಿ ಆನಕ ಗೋಮುಖ ಮೊದಲಾದ ವಿಚಿತ್ರ ವಾದ್ಯಗಳು ಧ್ವನಿಗೈಯಲ್ಪಟ್ಟವು ; ನರ್ತಕರು ಸಂತೋಷಯುಕ್ತರಾಗಿ ನರ್ತನಂಗೈದರು ; ಗಾಯಕರು ಗುಂಪುಗುಂಪಾಗಿ ನಿಂತು ಗಾನಂಗೈದರು ; ಆ ಸಮಯಲ್ಲಿ ಗಾಯಕರ ವೀಣಾಗಾನ ವೇಣುಗಾನಗಳ ಧ್ವನಿಯೂ ತಾಳಧ್ವನಿಯೂ ಸ್ವರ್ಗವನ್ನೈದಿದವು; ಧರ್ಮರಾಯನು ಮೊದಲಾದವರು ವಿಚಿತ್ರವಾದ ಧ್ವಜಪತಾಕೆಗಳುಳ್ಳ ಗಜಶ್ರೇಷ್ಠಗಳು ರಥಗಳು ಅಶ್ವಗಳು ಅಲಂಕಾರಯುಕ್ತಗಳಾದ ಸೇನೆಗಳು ಮೊದಲಾದವುಗಳೊಡಗೂಡಿ ಸುವರ್ಣಮಯವಾದ ಹಾರಗಳುಳ್ಳವರಾಗಿ ಅವಭೃತಸ್ನಾನಕ್ಕೋಸ್ಕರ ಯಾಗಶಾಲೆಯಿಂದ ಹೊರಟಾಗ ಯಾದವರೂ ಸೃಂಜಯ ಕಾಂಭೋಜರೂ ಕೇಕಯ ಕೋಸಲದೇಶಾಧಿಪತಿಗಳೂ ಯಾಗಕರ್ತೃವಾದ ಧರ್ಮರಾಯನನ್ನು ಮುಂದುಗಡೆಯಲ್ಲಿಟ್ಟುಕೊಂಡು ಸೇನೆಗಳಿಂದ ಭೂಮಿಯನ್ನು ಕಂಪಿಸುತ ತೆರಳಿದರು ; ಮತ್ತು ಸಭಾಜನರು ಋತ್ವಿಕ್ಕುಗಳು ಮೊದಲಾದ ಬ್ರಾಹ್ಮಣಶ್ರೇಷ್ಠರು ಅಧಿಕವಾದ ವೇದಘೋಷದೊಡನೆ ತೆರಳಿದರು ; ಆಗ ದೇವರ್ಷಿ ಪಿತೃಗಂಧರ್ವರು ಪುಷ್ಪವರ್ಷಗಳನ್ನು ಕರೆಯುತ ಧರ್ಮರಾಯನನ್ನು ಸ್ತೋತ್ರಂಗೈದರು ! ಆ ಬಳಿಕ ಅವರೆಲ್ಲರು ಗಂಗಾನದಿಯನ್ನು ಸೇರಿ ಗಂಧಪುಷ್ಪ ಮಾಲ್ಯಭೂಷಣ ದಿವ್ಯ ವಸ್ತ್ರಗಳಿಂದಲಂಕರಿಸಲ್ಪಟ್ಟವರಾಗಿ ಪುರುಷರೂ ಸ್ತ್ರೀಯರೂ ಪರಸ್ಪರವಾಗಿ ಗಂಧಾದಿ ಲೇಪನಂಗೈಯುತಲೂ ಜಲಗಳಿಂದ ಪರಸ್ಪರ ಅಭಿಷೇಕಂಗೈಯುತಲೂ ನಾನಾವಿಧವಾದ ರಸಗಳಿಂದ ಕ್ರೀಡಿಸಿದರು ; ವೇಶ್ಯಾಸ್ತ್ರೀಯರು ತೈಲ ಕ್ಷೀರ ಗಂಧೋದಕಗಳಿಂದಲೂ ಹರಿದ್ರೆಯಿಂದಲೂ ನಿಬಿಡವಾದ ಕುಂಕುಮಗಳಿಂದಲೂ ಪುರುಷರಿಂದ ಲೇಪನಂಗೈಯಲ್ಪಟ್ಟು ಆ ತೈಲಾದಿಗಳಿಂದ ಪುರುಷರಿಗೆ ಲೇಪನಂಗೈಯುತ ಕ್ರೀಡಿಸಿದರು ; ದೇವತಾಸ್ತ್ರೀಯರು ಆ ಅವಭೃತಸ್ನಾನಮಹೋತ್ಸವವನ್ನು ನೋಡುವದಕ್ಕೋಸ್ಕರ ಅಂತರಿಕ್ಷದಲ್ಲಿ ಉತ್ತಮವಿಮಾನಗಳಿಂದ ತೆರಳಿಬಂದರು ; ಅದೇರೀತಿಯಲ್ಲಿ ಪುರುಷರಿಂದ ಸುತ್ತಲೂ ರಕ್ಷಿಸಲ್ಪಟ್ಟವರಾಗಿ ರಾಜಪತ್ನಿಯರು ರಥಾದಿ ವಾಹನಗಳಿಂದ ತೆರಳಿಬಂದು ಸೋದರಮಾವಂದಿರ ಮಕ್ಕಳಿಂದಲೂ ಸಖಿಯರಿಂದಲೂ ಸುತ್ತಲ್ಪಟ್ಟು ಜಲಾದಿಗಳಿಂದ ಅಭಿಷೇಕಂಗೈಯಲ್ಪಡುತ ಲಜ್ಜೆಯೊಡಗೂಡಿದ ನಗುವಿನಿಂದ ವಿಕಾಸಯುಕ್ತಗಳಾದ ಮುಖಗಳುಳ್ಳವರಾಗಿ ಪ್ರಕಾಶಿಸುತ ನನೆದಿರುವ ವಸ್ತ್ರಗಳುಳ್ಳವರಾಗಿ ವ್ಯಕ್ತವಾಗಿ ಕಾಣಲ್ಪಡುವ ಶರೀರವೂ ಕುಚಗಳೂ ತೊಡೆಗಳೂ ಮಧ್ಯಪ್ರದೇಶವೂ ಉಳ್ಳವರಾಗಿ ಉತ್ಸಾಹದಿಂದ ಸಡಲಿದ ತುರುಬುಗಳಿಂದ ಜಾರಿಬೀಳುವ ಪುಷ್ಪಮಾಲೆಗಳುಳ್ಳವರಾಗಿ ಭಾವವೈದರನ್ನೂ ಸಖಿಯರನ್ನೂ ಚರ್ಮಮಯಗಳಾಗಿ ಜಲವನ್ನೆರಚಲು ಯೋಗ್ಯವಾದ ಯಂತ್ರವಿಶೇಷಗಳಿಂದ ಅಭಿಷೇಕಂಗೈಯುತ ಮನೋಹರಗಳಾದ ತಮ್ಮ ಕ್ರೀಡೆಗಳಿಂದ ಕಾಮುಕರಿಗೆ ಚಿತ್ತವಿಕಾರವನ್ನುಂಟುಮಾಡುತಿದ್ದರು ! ಧರ್ಮರಾಯನು ಉತ್ತಮಾಶ್ವಗಳೊಡನೆ ಯುಕ್ತವಾಗಿ ಸುವರ್ಣಮಯವಾದ

ಹಾರಗಳಿಂದ ಅಲಂಕೃತವಾದ ರಥವನ್ನೇರಿ ತನ್ನ ಪತ್ನಿಯರೊಡಗೂಡಿ ರಾಜಸೂಯಯಾಗ ಅಂಗಭೂತಗಳಾದ ಕರ್ಮಗಳುಳ್ಳ ಶರೀರಯುಕ್ತನಾಗಿ ಪ್ರಕಾಶಿಸಿದನು ; ಅನಂತರದಲ್ಲಿ ಋತ್ವಿಕ್ಕರು ಪತ್ನಿಸಂಯಾಜಕವೆಂಬ ಯಾಗವಿಶೇಷವನ್ನೂ ಅವಭೃತಸಮ್ಬಂಧವಾದ ಕರ್ಮಗಳನ್ನೂ ಸಮಗ್ರವಾಗಿ ಅನುಷ್ಠಾನಂಗೈದು ಆಚಮನಂಗೈದಿರುವ ಧರ್ಮರಾಯನಿಗೆ ದ್ರೌಪದಿಯೊಡನೆ ಗಂಗೆಯಲ್ಲಿ ಅವಭೃತಸ್ನಾನಂಗೈಸಿದರು ; ಆ ಸಮಯದಲ್ಲಿ ಮನುಷ್ಯಲೋಕಕ್ಕೆ ಯೋಗ್ಯವಾದ ಭೇರಿಗಳೊಡನೆ ದೇವಲೋಕಭೇರಿಗಳು ಧ್ವನಿಗೈದವು; ದೇವರ್ಷಿ ಪಿತೃಗಳೂ ನರರೂ ಪುಷ್ಪವರ್ಷಗಳನ್ನು ಕರೆದರು ; ಅನಂತರದಲ್ಲಿ ಯಾವ ಅವಭೃತಸ್ನಾನದಿಂದ ಮಹಾ ಪಾಪಯುಕ್ತನಾದ ಪುರುಷನೂ ಕ್ಷಣದಲ್ಲೇ ಪಾಪದದೆಶೆಯಿಂದ ವಿಮುಕ್ತನಾಗುವನೋ ಅಂಥಾ ಅವಭೃತತೀರ್ಥದಲ್ಲಿ ವರ್ಣಾಶ್ರಮನಿಷ್ಠರಾದ ಜನರೆಲ್ಲರು ಸ್ನಾನಂಗೈದರು ; ಆಮೇಲೆ ಧರ್ಮರಾಯನು ನೂತನವಸ್ತ್ರಗಳನ್ನುಟ್ಟು ಸರ್ವಾಲಂಕಾರಯುಕ್ತನಾಗಿ ಭೂಷಣಗಳಿಂದಲೂ ವಸ್ತ್ರಗಳಿಂದಲೂ ಋತ್ವಿಕ್ಕರನ್ನೂ ಸಭಾಜನರನ್ನೂ ಬ್ರಾಹ್ಮಣಾದಿಗಳನ್ನೂ ಪೂಜಿಸಿದನು ; ಆಗ ಸಮಸ್ತ ಜನರೂ ದೇವತೆಗಳಂತೆ ಕಾಂತಿಯುಳ್ಳವರಾಗಿ ರತ್ನಮಯವಾದ ಕುಂಡಲಗಳೂ ಮಾಲೆಗಳೂ ಪಾಗುಗಳೂ ಅಂಗಿಗಳೂ ಸೂಕ್ಷ್ಮವಸ್ತ್ರಗಳೂ ಅಮೂಲ್ಯವಾದ ಹಾರಗಳೂ ಉಳ್ಳವರಾಗಿ ಪ್ರಕಾಶಿಸಿದರು ; ಸ್ತ್ರೀಯರು ಆ ಉತ್ಸವದಲ್ಲಿ ಓಲೆ ಜೋಡುಗಳಿಂದಲೂ ಮುಂಗುರುಳುಗಳ ಸಮೂಹದಿಂದಲೂ ಶೋಭಿತವಾದ ಮುಖಕಾಂತಿಯಿಂದಲೂ ಸುವರ್ಣಮಯವಾದ ಒಡ್ಯಾಣದಿಂದಲೂ ಪ್ರಕಾಶಿಸಿದರು ; ಅನಂತರದಲ್ಲಿ ವೇದಾಧ್ಯಯನನಿಷ್ಠರಾಗಿ ಜ್ಞಾನಿಗಳಾದ ಋತ್ವಿಕ್ಕರು ಸಭಾಜನರು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ದೇಶಾಂತರಗಳಿಂದ ಬಂದ ಅರಸರು ದೇವರ್ಷಿ ಪಿತೃ ಭೂತಾದಿ ಲೋಕಪಾಲಕರು ಮೊದಲಾದವರೆಲ್ಲರು ಅವರವರ ಪರಿಜನರೊಡಗೂಡಿ ಧರ್ಮರಾಯನಿಂದ ಪೂಜಿಸಲ್ಪಟ್ಟು ಆತನ ಅಪ್ಪಣೆಯನ್ನು ತೆಗೆದುಕೊಂಡು ತಮ್ಮ ತಮ್ಮ ಸ್ಥಾನಗಳನ್ನೈದಿದರು ! ಎಲೈ ರಾಯನೇ ಕೇಳು : ಅಮೃತವನ್ನುಪಾನಂಗೈವ ಪುರುಷನು ತೃಪ್ತಿಯನ್ನೈದದ ರೀತಿಯಲ್ಲಿ ಸಮಸ್ತ ಜನರೂ ಶ್ರೀಹರಿಭಕ್ತನಾಗಿ ರಾಜಶ್ರೇಷ್ಠನಾದ ಧರ್ಮರಾಯನ ರಾಜಸೂಯ ಮಹೋತ್ಸವವನ್ನು ಶ್ಲಾಘಿಸುತ ತೃಪ್ತಿಯನ್ನೈದದಿದ್ದರು ; ಅನಂತರದಲ್ಲಿ ಧರ್ಮರಾಯನು ಮಿತ್ರರನ್ನೂ ಸಂಬಂಧಿಗಳನ್ನೂ ಜ್ಞಾತಿಗಳನ್ನೂ ಶ್ರೀಕೃಷ್ಣನನ್ನೂ ಬಿಡಲಾರದೆ ಪ್ರೇಮದಿಂದ ಅವರನ್ನು ಇಂದ್ರಪ್ರಸ್ಥ ಪಟ್ಟಣದಲ್ಲಿ ಕೆಲವು ದಿನಗಳಿರಿಸಿಕೊಂಡಿದ್ದನು; ಶ್ರೀಕೃಷ್ಣನು ಧರ್ಮರಾಯನಿಗೆ ಪ್ರಿಯವನ್ನು ಮಾಡುತ ಸಾಂಬನು ಮೊದಲಾದ ಯಾದವಶ್ರೇಷ್ಠರನ್ನು ದ್ವಾರಕಾಪುರಕ್ಕೆ ಕಳುಹಿಸಿ ತಾನು ಇಂದ್ರಪ್ರಸ್ಥಪಟ್ಟಣದಲ್ಲಿ ಕೆಲವು ದಿವಸಗಳಿದ್ದನು ! ಎಲೈ ಅರಸೇ ಕೇಳು : ಈರೀತಿ ಧರ್ಮರಾಯನು ದಾಟಲಶಕ್ಯವಾದ ತನ್ನ ಮನೋರಥವೆಂಬ ಮಹಾ ಸಮುದ್ರವನ್ನು ಶ್ರೀಕೃಷ್ಣನ ಅನುಗ್ರಹದಿಂದ ದಾಟಿ ಚಿಂತಾರಹಿತನಾದನು ! ದುರ್ಯೋಧನನು ಶ್ರೀಹರಿಯಲ್ಲಿ ಮನಸ್ಸುಳ್ಳ ಧರ್ಮರಾಯನ ಅಂತಃಪುರದಲ್ಲಿರುವ ಸಂಪತ್ತನ್ನೂ ರಾಜಸೂಯಯಾಗದ ಪ್ರಭಾವವನ್ನೂ ನೋಡಿ ಸಂತಾಪಪಟ್ಟನು ; ಯಾವ ಸಭೆಯಲ್ಲಿ ನರಾಧಿಪತಿಗಳು ದೈತ್ಯಾಧಿಪತಿಗಳು ಇಂದ್ರಾದಿ ದೇವಾಧಿಪತಿಗಳು ಮೊದಲಾದವರ ನಾನಾವಿಧವಾದ ಸಂಪತ್ತುಗಳಿಂದ ಶಿಲ್ಪಚಾತುರ್ಯ ಪೂರ್ವಕವಾಗಿ ಮಯನಿಂದ ರಚಿಸಲ್ಪಟ್ಟು ಹೊಳೆಯುತಲಿರುವ ಸಕಲ ಸಂಪತ್ತುಗಳೊಡನೆ ಕೂಡಿ ದ್ರೌಪದಿಯು ತನ್ನ ಪತಿಯಾದ ಧರ್ಮರಾಯನನ್ನು ಸೇವಿಸುತಿದ್ದಳೋ—ದುರ್ಯೋಧನನು ಯಾವ ಸಭಾಸ್ಥಾನದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ಸಂತಾಪಪಟ್ಟನೋ—ಮತ್ತು ಯಾವ ಸಭಾಸ್ಥಾನದಲ್ಲಿ ಕಟಿಪಶ್ಚಾದ್ಭಾಗಗಳ ಭಾರದಿಂದ ಮೆಲ್ಲಮೆಲ್ಲನೆ ಧ್ವನಿಗೈಯುತಲಿರುವ ಪಾದಗಳಿಂದ ಶೋಭಿತವಾಗಿ ಮನೋಹರವಾದ ಮಧ್ಯಪ್ರದೇಶವುಳ್ಳವರಾಗಿ ಸ್ತನಗಳಲ್ಲಿರುವ ಕುಂಕುಮದಿಂದ ಕೆಂಪಾಗಿರುವ ಹಾರಗಳುಳ್ಳವರಾಗಿ ಕಾಂತಿಯುಕ್ತಗಳಾದ ಮುಖಗಳುಳ್ಳವರಾಗಿ ಚಲಿಸುತಿರುವ ಓಲೆಗಳೊಡನೆಯೂ ಮುಂಗುರುಳುಗಳೊಡನೆಯೂ ಶೋಭಿತವಾಗಿರುವ ಅನೇಕಸಹಸ್ರ ಸಂಖ್ಯೆಯುಳ್ಳ ಶ್ರೀಕೃಷ್ಣನ ಪತ್ನಿಯರು ಆ ರಾಜಸೂಯಯಾಗೋತ್ಸವಕಾಲದಲ್ಲಿ ಪ್ರಕಾಶಿಸುತಿದ್ದರೊ ಅಂಥಾ ಮಯನಿರ್ಮಿತವಾದ ಸಭಾಸ್ಥಾನದಲ್ಲಿ ಧರ್ಮರಾಯನು ಒಂದು ಸಮಯದಲ್ಲಿ ತನ್ನ ತಮ್ಮಂದಿರಿಂದಲೂ ಬಂಧುಗಳಿಂದಲೂ ತನಗೆ ಹಿತವನ್ನೂ ಅಹಿತವನ್ನೂ ತಿಳಿಸುವ ಶ್ರೀಕೃಷ್ಣನಿಂದಲೂ ಸುತ್ತಲ್ಪಟ್ಟವನಾಗಿ ಸಾಕ್ಷಾತ್ ದೇವೇಂದ್ರನಂತೆ ಸುವರ್ಣಮಯ

ವಾದ ಸಿಂಹಾಸನದಲ್ಲಿ ಕುಳಿತು ಸಾರ್ವಭೌಮ ಸಾಂಬ್ರಾಜ್ಯಲಕ್ಷ್ಮಿಯಿಂದ ಸೇವಿಸಲ್ಪಟ್ಟವನಾಗಿ ಸ್ತುತಿಪಾಠಕರಿಂದ ಸ್ತುತಿಸಲ್ಪಡುತ ಪ್ರಕಾಶಿಸುತಿದ್ದನು; ಆಗ ತನ್ನ ತಮ್ಮಂದಿರಿಂದ ಪರಿವೃತನಾಗಿ ಕಿರೀಟವನ್ನೂ ಮಾಲೆಗಳನ್ನೂ ಧರಿಸಿ ಅಹಂಕಾರಯುಕ್ತನಾದ ದುರ್ಯೋಧನನು ಖಡ್ಗಹಸ್ತನಾಗಿ ಕೋಪದಿಂದ ದ್ವಾರಪಾಲಕರನ್ನು ಧಿಕ್ಕರಿಸಿ ಆ ಸಭಾಸ್ಥಾನವನ್ನು ಪ್ರವೇಶಿಸಿ ಮಯನ ಮಾಯೆಯಿಂದ ಮೋಹಿಸಲ್ಪಟ್ಟು ಒಂದು ಸ್ಥಳವನ್ನು ನೋಡಿ ಅದು ಜಲವೆಂಬ ಭ್ರಾಂತಿಯಿಂದ ಹೊದ್ದಿರುವ ವಸ್ತ್ರದ ಶರಗನ್ನು ಮುದುರಿಕೊಂಡನು; ಜಲವನ್ನು ನೋಡಿ ಅದು ಸ್ಥಳವೆಂಬ ಭ್ರಾಂತಿಯಿಂದ ಅದರಲ್ಲಿ ಬಿದ್ದನು; ಆಗ ಭೀಮನೂ ಸ್ತ್ರೀಯರೂ ಅರಸರೂ ಧರ್ಮರಾಯನಿಂದ ಅಡ್ಡಿಗೈಯಲ್ಪಟ್ಟವರಾದಾಗ್ಯೂ ಶ್ರೀಕೃಷ್ಣನಿಂದ ಪ್ರೇರಿತರಾಗಿ ದುರ್ಯೋಧನನನ್ನು ನೋಡಿ ನಕ್ಕರು; ದುರ್ಯೋಧನನು ಲಜ್ಜಾಯುಕ್ತನಾಗಿ ಮನವನ್ನು ಬೊಗ್ಗಿಸಿಕೊಂಡು ಕೋಪದಿಂದ ಜ್ವಲಿಸುತ ಮೌನದಿಂದ ಹೊರಟು ಹಸ್ತಿನಾಪುರವನ್ನೈದಿದನು; ಅಲ್ಲಿದ್ದ ಸಜ್ಜನರು ಹಾಹಾಯೆಂದು ಮಹತ್ತಾದ ಶಬ್ದಂಗೈದರು; ಧರ್ಮರಾಯನು ಚಿಂತಾಯುಕ್ತನಾದನು; ಯಾವನ ದೃಷ್ಟಿಯಿಂದ ದುರ್ಯೋಧನನು ಆಗ ಭ್ರಾಂತಿಯನ್ನೈದಿದನೊ ಅಂಥಾ ಭೂಭಾರವನ್ನು ಪರಿಹರಿಸುವ ಇಚ್ಛೆಯುಳ್ಳ ಶ್ರೀಕೃಷ್ಣನು ಆಗ ಸಂಪಾದಿಸಲ್ಪಟ್ಟ ಆ ಕಲಹಬೀಜದಿಂದ ಕೌರವರನ್ನು ಸಂಹಾರಗೈವವನಾಗುವನೆಂದು ಸುಮ್ಮನಿದ್ದನು! ಎಲೈ ಪರೀಕ್ಷಿದ್ರಾಯನೆ, ನಾನು ನಿನ್ನಿಂದ ಯಾವ ಅರ್ಥವನ್ನು ಪ್ರಶ್ನೆಗೈಯಲ್ಪಟ್ಟೆನೋ— ದುರ್ಯೋಧನನಿಗೆ ಆ ಮಹತ್ತಾದ ರಾಜಸೂಯಯಾಗದಲ್ಲಿ ಹ್ಯಾಗೆ ಅಸೂಯೆಯುಂಟಾಯಿತೋ ಆ ವೃತ್ತಾಂತವು ನನ್ನಿಂದ ನಿನಗೆ ನಿರೂಪಿಸಲ್ಪಟ್ಟಿತು.

## ೭೬ನೇ ಅಧ್ಯಾಯ.

## ಸಾಲ್ವ ಪ್ರದ್ಯುಮ್ನರ ಯುದ್ಧ.

ಎಲೈ ಅರಸೆ, ಕ್ರೀಡಾರ್ಥವಾಗಿ ಮನುಷ್ಯ ಶರೀರವನ್ನು ಧರಿಸಿದ ಶ್ರೀಕೃಷ್ಣನ ಆಶ್ಚರ್ಯಕರವಾದ ಮತ್ತೊಂದು ಚರಿತ್ರವುಂಟು; ಸಾಲ್ವನೆಂಬ ಅರಸನು ಶ್ರೀಕೃಷ್ಣನಿಂದ ಸಂಹರಿಸಲ್ಪಟ್ಟ ಪ್ರಕಾರವನ್ನು ನಿರೂಪಿಸುವೆನು ಕೇಳು: ಪೂರ್ವದಲ್ಲಿ ಶಿಶುಪಾಲನಿಗೆ ಮಿತ್ರನಾದ ಸಾಲ್ವನು ರುಕ್ಮಿಣೀದೇವಿಯ ವಿವಾಹ ಕಾಲದಲ್ಲಿ ಯಾದವರಿಂದ ಯುದ್ಧದಲ್ಲಿ ಜಯಿಸಲ್ಪಟ್ಟನು; ಆ ಸಮಯದಲ್ಲಿ ಸಕಲ ಭೂಪತಿಗಳೂ ಕೇಳುತಲಿರಲು ಭೂಮಿಯನ್ನು ಯಾದವರಹಿತವಾಗಿ ಮಾಡುವದಾಗಿ ಪ್ರತಿಜ್ಞೆಯನ್ನು ಮಾಡಿ ಪ್ರತಿದಿನದಲ್ಲಿಯೂ ಒಂದುಬಾರಿ ಮುಷ್ಟಿಯುತವಾದ ಧೂಳಿಯನ್ನು ಭಕ್ಷಿಸುತ ಪಶುಪತಿಯಾದ ಪರಮೇಶ್ವರನನ್ನು ಪೂಜಿಸುತಿದ್ದನು; ಭಗವಂತನಾದ ಪರಮೇಶ್ವರನು ಶೀಘ್ರವಾಗಿ ಸಂತೋಷಪಡುವವನಾದಾಗ್ಯೂ ಶ್ರೀಕೃಷ್ಣ ವಿರೋಧಿಯಾದ ಸಾಲ್ವನಲ್ಲಿ ಶೀಘ್ರವಾಗಿ ಪ್ರಸಾದಂಗೈಯದೆ ಒಂದು ಸಂವತ್ಸರಾನಂತರದಲ್ಲಿ ಪ್ರತ್ಯಕ್ಷವಾಗಿ ಶರಣಾಗತನಾದ ಸಾಲ್ವನನ್ನು ಕುರಿತು ವರವನ್ನು ಯಾಚಿಸಲು ಕಟ್ಟುಮಾಡಿದನು; ಸಾಲ್ವನು ಪರಮೇಶ್ವರನನ್ನು ಕುರಿತು ದೇವ ದೈತ್ಯ ಮನುಷ್ಯರಿಂದಲೂ ಗಂಧರ್ವ ಸರ್ಪರಾಕ್ಷಸರಿಂದಲೂ ಭೇದಿಸಲಶಕ್ಯವಾಗಿ ಇಚ್ಛೆಬಂದಂತೆ ಸಂಚರಿಸುವದಕ್ಕೆ ಯೋಗ್ಯವಾಗಿ ಯಾದವರಿಗೆ ಭಯಂಕರವಾಗಿರುವ ಒಂದು ವಿಮಾನವನ್ನು ವರಿಸಿದನು; ಪರಮೇಶ್ವರನು ಹಾಗೇ ಆಗಲೆಂದು ವರವನ್ನು ಕೊಡಲು ಮಯನು ಶ್ರೀಪರಮೇಶ್ವರನಿಂದ ಆಜ್ಞಾಪಿಸಲ್ಪಟ್ಟವನಾಗಿ ಶತ್ರುಪುರವನ್ನು ಜಯಿಸುವ ಸೌಭವೆಂಬ ನಾಮವುಳ್ಳ ಲೋಹಮಯವಾದ ವಿಮಾನವನ್ನು ಸೃಷ್ಟಿಸಿ ಸಾಲ್ವನಿಗಿತ್ತನು; ಸಾಲ್ವನು ಕಾಮಚಾರಿಯಾಗಿ ಅಂಧಕಾರಕ್ಕೆ ಆಶ್ರಯವಾಗಿ ಅನ್ಯರಿಂದ ಹೊಂದಲಶಕ್ಯವಾದ ಆ ವಿಮಾನವನ್ನು ಪಡೆದು ಯಾದವರಿಂದಗೈಯಲ್ಪಟ್ಟ ವೈರವನ್ನು ಸ್ಮರಿಸುತ ಮಹತ್ತಾದ ಸೇನೆಯಿಂದ ಕೂಡಿ ದ್ವಾರಕಾಪುರವನ್ನು ನಿರೋಧಿಸಿ ಆ ಪುರವನ್ನೂ ಸುತ್ತಲಿದ್ದ ಪ್ರದೇಶಗಳನ್ನೂ ಉದ್ಯಾನವನಗಳನ್ನೂ ಪುರದ್ವಾರಗಳನ್ನೂ ಹೊರದ್ವಾರಗಳನ್ನೂ ರಾಜಗೃಹಗಳನ್ನೂ ಚಂದ್ರಶಾಲೆಗಳನ್ನೂ ಗೋಡೆಗ

ಳನ್ನೂ ಕ್ರೀಡಾಸ್ಥಾನಗಳನ್ನೂ ಮುರಿದನು; ಆಗ ವರಲಬ್ಧವಾದ ಆ ವಿಮಾನದ ದೆಶೆಯಿಂದ ಶಸ್ತ್ರವರ್ಷಗಳೂ ಪಾಷಾಣಗಳೂ ವೃಕ್ಷಗಳೂ ಶಿಡಿಲುಗಳೂ ಸರ್ಪಗಳೂ ಆನೆಕಲ್ಲುಗಳೂ ಜಲಧಾರೆಗಳು ಬೀಳುವಂತೆ ಸುರಿದವು; ಪ್ರಚಂಡವಾದ ಸುಂಟುರುಘಾಳಿಯು ಬೀಸಿತು; ದಿಕ್ಕುಗಳು ಧೂಳಿಯಿಂದ ಆಚ್ಛಾದನಂಗೈಯಲ್ಪಟ್ಟವು; ಮೊದಲು ಯಾವರೀತಿಯಿಂದ ಭೂಮಿಯು ತ್ರಿಪುರಗಳಿಂದ ಸುಖವನ್ನೈದಲಿಲ್ಲವೊ ಆ ರೀತಿ ಆಗ ಸಾಲ್ವನ ವಿಮಾನದಿಂದ ಅತ್ಯಂತ ಭಗ್ನವಾಗಿ ಮಾಡಲ್ಪಟ್ಟ ದ್ವಾರಕಾಪುರವು ಸುಖವನ್ನೈದಲಿಲ್ಲ; ಆಗ ಭಗವಂತನಾಗಿ ಮಹಾ ರಥಿಕನಾದ ಪ್ರದ್ಯುಮ್ನನು ಸಂಹಾರಂಗೈಯಲ್ಪಡುತಿದ್ದ ಸ್ವಕೀಯರಾದ ಪ್ರಜೆಗಳನ್ನು ನೋಡಿ ಭಯಪಡದಿರುವಹಾಗೆ ಅಭಯವನ್ನಿತ್ತು ರಥವನ್ನೇರಿ ತೆರಳಿದನು; ಸಾತ್ಯಕಿಯು ಚಾರುದೇಷ್ಣನು ಸುದೇಷ್ಣನು ಅಕ್ರೂರನು ಅಕ್ರೂರನ ತಮ್ಮನಾದ ಹಾರ್ದಿಕ್ಯನು ಭಾನುವಿಂದನು ನದನು ಶುಕನು ಸಾರಣನು ಮತ್ತು ಮಹತ್ತಾದ ಧನುಸ್ಸನ್ನು ಧರಿಸಿ ರಥಸಮೂಹಗಳಿಗೆ ಅಧಿಪತಿಗಳಾಗಿ ಶೂರರಿಗೆ ನಿಯಾಮಕರಾಗಿ ಕವಚಧಾರಿಗಳಾದ ಕೆಲವು ಅರಸರೂ ರಥಗಜಾಶ್ವ ಪದಾತಿಗಳಿಂದ ರಕ್ಷಿಸಲ್ಪಡುತ ಯುದ್ಧಕ್ಕೋಸ್ಕರ ತೆರಳಲು ದೇವತೆಗಳೊಡನೆ ದೈತ್ಯರಿಗೆ ಯುದ್ಧವುಂಟಾದ ರೀತಿಯಲ್ಲಿ ಸಾಲ್ವದೇಶಸ್ಥರಾದ ಅರಸುಗಳಿಗೆ ಯಾದವರೊಡನೆ ವ್ಯಾಕುಲವಾಗಿ ಭಯಂಕರವಾದ ಯುದ್ಧವುಂಟಾಯಿತು; ಪ್ರದ್ಯುಮ್ನನು ದಿವ್ಯಾಸ್ತ್ರಗಳಿಂದ ಕ್ಷಣಮಾತ್ರದಲ್ಲಿ ಸಾಲ್ವನ ಮಾಯೆಯನ್ನು ಸೂರ್ಯನು ಅಂಧಕಾರವನ್ನು ನಾಶಮಾಡುವಂತೆ ನಾಶಂಗೈದು ಸುವರ್ಣಮಯವಾದ ಮೂಲಗಳುಳ್ಳವಾಗಿ ಉಕ್ಕಿನಿಂದರಚಿಸಲ್ಪಟ್ಟ ಅಲಗುಗಳುಳ್ಳವಾಗಿ ತಗ್ಗಿರುವ ಗಿಣ್ಣುಗಳುಳ್ಳ ಇಪ್ಪತ್ತೈದು ಬಾಣಗಳಿಂದ ಸಾಲ್ವನ ಸೇನಾಧಿಪತಿಯನ್ನೂ ಅನೇಕ ಬಾಣಗಳಿಂದ ಸಾಲ್ವನನ್ನೂ ಪ್ರಹರಿಸಿ ಒಂದೊಂದು ಬಾಣದಿಂದ ಭಟರನ್ನೂ ಹತ್ತತ್ತು ಬಾಣಗಳಿಂದ ಸೇನಾಧಿಪತಿಗಳನ್ನೂ ಮೂರು ಮೂರು ಬಾಣಗಳಿಂದ ವಾಹನಗಳನ್ನೂ ಪ್ರಹರಿಸಿದನು; ಆಗ ಆ ಉಭಯ ಸೇನೆಯಲ್ಲಿದ್ದ ಶೂರರು ಮಹಾತ್ಮನಾದ ಪ್ರದ್ಯುಮ್ನನ ಆಶ್ಚರ್ಯಕರವಾದ ಯುದ್ಧವ್ಯಾಪಾರವನ್ನು ನೋಡಿ ಆತನನ್ನು ಸನ್ಮಾನಂಗೈದರು! ಆಗ ಮಯನಿಂದ ನಿರ್ಮಿತವಾಗಿ ಮಾಯಾಮಯವಾದ ಸಾಲ್ವನ ವಿಮಾನವು ಒಂದು ವೇಳೆಯಲ್ಲಿ ಅನೇಕ ರೂಪವಾಗಿಯೂ ಒಂದು ವೇಳೆಯಲ್ಲಿ ಏಕರೂಪವಾಗಿಯೂ ಒಂದು ಕಡೆಯಲ್ಲಿ ಕಾಣಲ್ಪಡುತಲೂ ಒಂದು ಕಡೆಯಲ್ಲಿ ಕಾಣಲ್ಪಡದೆಯೂ ಅನ್ಯರಿಂದ ಊಹಿಸಲಶಕ್ಯವಾಗಿ ಒಂದುವೇಳೆ ಭೂಮಿಯಲ್ಲಿಯೂ ಒಂದುವೇಳೆ ಆಕಾಶದಲ್ಲಿಯೂ ಒಂದುವೇಳೆ ಪರ್ವತ ಶಿಖರದಲ್ಲಿಯೂ ಒಂದುವೇಳೆ ಜಲದಲ್ಲಿಯೂ ಅಲಾತಚಕ್ರದಂತೆ ಒಂದು ಕಡೆಯಲ್ಲಿ ನಿಲ್ಲದೆ ತಿರುಗುತಿತ್ತು; ಆ ವಿಮಾನದಲ್ಲಿ ಸೇನಾಜನದೊಡಗೂಡಿದ ಸಾಲ್ವನು ಎಲ್ಲೆಲ್ಲಿ ಕಾಣಿಸಿಕೊಂಡರೂ ಅಲ್ಲಲ್ಲಿ ಯಾದವರು ಬಾಣಗಳನ್ನು ಪ್ರಯೋಗಿಸಿದರು; ಆಗ ಸಾಲ್ವನು ಅಗ್ನಿಯಂತೆ ದಹಿಸುವಂಥಾವಾಗಿ ಸೂರ್ಯನಂತೆ ಏಕಕಾಲದಲ್ಲಿ ಸರ್ವತ್ರ ಸ್ಪರ್ಶವುಳ್ಳವಾಗಿ ಶತ್ರುಗಳನ್ನು ಸಂಹರಿಸುವಂಥಾವಾಗಿ ಸಹಿಸಲಶಕ್ಯವಾದ ಆ ಯಾದವರಿಂದ ಬಿಡಲ್ಪಟ್ಟ ಬಾಣಗಳಿಂದ ಶೀಳಲ್ಪಡುತಿದ್ದ ವಿಮಾನವೂ ಸೇನೆಗಳೂ ಉಳ್ಳವನಾಗಿ ಮೋಹವನ್ನೈದಿದನು; ಶೂರರಾದ ಯಾದವರು ಸಾಲ್ವನ ಸೇನಾಧಿಪತಿಗಳಿಂದ ಬಿಡಲ್ಪಟ್ಟ ಶಸ್ತ್ರಸಮೂಹಗಳಿಂದ ಅತ್ಯಂತವಾಗಿ ಕೊಲ್ಲಲ್ಪಟ್ಟರೂ ಇಹಲೋಕ ಪರಲೋಕಗಳನ್ನು ಜಯಿಸುವ ಇಚ್ಛೆಯುಳ್ಳವರಾಗಿ ಯುದ್ಧಭೂಮಿಯನ್ನು ಬಿಟ್ಟು ಹೋಗದಿದ್ದರು; ಪೂರ್ವದಲ್ಲಿ ಪ್ರದ್ಯುಮ್ನನಿಂದ ಪೀಡಿಸಲ್ಪಟ್ಟ ದ್ಯುಮಂತನೆಂಬ ಸಾಲ್ವನ ಮಂತ್ರಿಯು ಒಂದು ಉಕ್ಕಿನಿಂದ ರಚಿಸಲ್ಪಟ್ಟ ಗದೆಯಿಂದ ಪ್ರದ್ಯುಮ್ನನನ್ನು ಪ್ರಹರಿಸಿ ಸಿಂಹನಾದಂಗೈದನು; ಧರ್ಮಜ್ಞನಾಗಿ ದಾರುಕ ಪುತ್ರನಾದ ಸಾರಥಿಯು ದ್ಯುಮಂತನ ಗದೆಯಿಂದ ಶೀಳಲ್ಪಟ್ಟ ವಕ್ಷಸ್ಥಳವುಳ್ಳ ಪ್ರದ್ಯುಮ್ನನನ್ನು ಯುದ್ಧದ ದೆಸೆಯಿಂದ ಆಚೆಗೆ ಕರೆದುಕೊಂಡು ಹೋದನು; ಪ್ರದ್ಯುಮ್ನನು ಒಂದು ಮುಹೂರ್ತದಲ್ಲಿ ಪ್ರಜ್ಞೆಯನ್ನೈದಿ ಸಾರಥಿಯನ್ನು ಕುರಿತು "ಎಲೈ ಸಾರಥಿಯೆ, ಯುದ್ಧಸ್ಥಾನದ ದೆಶೆಯಿಂದ ಹಿಂದಕ್ಕೆ ಹೋಗುವದು ನಮಗೆ ಉಚಿತವಲ್ಲ; ಅಧೈರ್ಯಯುಕ್ತವಾದ ಮನಸ್ಸುಳ್ಳ ಸಾರಥಿಯಾದ ನಿನ್ನಿಂದ ಪಾಪವನ್ನೈದಿರುವ ನಾನೊಬ್ಬನು ಹೊರತು ಯಾದವ ಕುಲದಲ್ಲಿ ಜನಿಸಿರುವ ಪುರುಷನೊಬ್ಬನು ಯುದ್ಧದಲ್ಲಿ ಪಲಾಯನಾದನೆಂದು ಕೇಳಲ್ಪಡಲಿಲ್ಲ; ಯುದ್ಧ ಧರ್ಮದಲ್ಲಿ ಭ್ರಷ್ಟನಾದ ನಾನು ತಂದೆಗಳಾದ ರಾಮಕೃಷ್ಣರ ಪಾರ್ಶ್ವವನ್ನೈದಿ ಅವರಿಂದ ಪ್ರಶ್ನೆಗೈಯಲ್ಪಟ್ಟರೆ ಅವರಿಗೆ ಯೋಗ್ಯವಾದ ಯಾವ ವಚನವನ್ನು ಹೇಳಲಿ! ಅಣ್ಣಾ ತಮ್ಮಂದಿರ ಪತ್ನಿಯರು

ಯುದ್ಧದಲ್ಲಿ ಶತ್ರುಗಳಿಂದ ನನಗುಂಟಾದ ದೈನ್ಯವನ್ನು ಕೇಳಿ ಹಾಸ್ಯಂಗೈಯುತ 'ಎಲೈ ವೀರನೆ, ಆತ್ಮಪೌರುಷವನ್ನು ಬಹಳವಾಗಿ ಹೇಳಿಕೊಳ್ಳುವ ನಿನಗೆ ಯುದ್ಧದಲ್ಲಿ ಶತ್ರುಗಳಿಂದ ಪರಾಜಯವೆಂತುಂಟಾಯಿತು!' ಎಂದು ನಿಶ್ಚಯವಾಗಿ ಹೇಳುವರು" ಎಂದು ನುಡಿದನು.

ಸಾರಥಿಯು ಆತನನ್ನು ಕುರಿತು "ಎಲೈ ಆಯುಷ್ಮಂತನಾದ ಪ್ರದ್ಯುಮ್ನನೆ, ರಥದಲ್ಲಿರುವ ಸಾರಥಿಯು ಕಷ್ಟವನ್ನೈದಿರುವ ಸ್ವಾಮಿಯನ್ನು ರಥದೊಡನೆ ಕೂಡ ರಕ್ಷಿಸಬೇಕೆಂಬ ಧರ್ಮವನ್ನು ತಿಳಿದಿರುವ ನನ್ನಿಂದ ಈ ಕಾರ್ಯವು ಮಾಡಲ್ಪಟ್ಟತಾದಕಾರಣ ಇದು ಅನುಚಿತವಲ್ಲ; ನೀನು ಶತ್ರುವಿನ ಗದೆಯಿಂದ ಪ್ರಹರಿಸಲ್ಪಟ್ಟು ಮೂರ್ಛಿತನಾಗಿ ವ್ಯಥೆಯನ್ನೈದಿದ್ದನ್ನು ತಿಳಿದು ನಾನು ಯುದ್ಧರಂಗದ ದೆಸೆಯಿಂದ ಹಿಂದಕ್ಕೆ ನಿನ್ನನ್ನು ಕರೆದುಕೊಂಡು ಹೋದೆನು" ಎಂದು ನುಡಿದನು.

---

## ೭೭ ನೇ ಅಧ್ಯಾಯ.

## ಸಾಲ್ವನ ವಧೆ.

ಎಲೈ ಪರೀಕ್ಷಿದ್ರಾಯನೆ ಕೇಳು: ಅನಂತರದಲ್ಲಿ ಪ್ರದ್ಯುಮ್ನನು ಆಚಮನಂಗೈದು ಪುನಃ ಯುದ್ಧಸನ್ನದ್ಧನಾಗಿ ಧನುಸ್ಸನ್ನಿಡಿದು ವೀರನಾದ ದ್ಯುಮಂತನ ಪಾರ್ಶ್ವವನ್ನೈದಿಸಲು ಸಾರಥಿಗೆ ಆಜ್ಞಾಪಿಸಿ ತನ್ನ ಸೇನೆಗಳನ್ನು ಕಂಪಿಸುತ್ತಿದ್ದ ದ್ಯುಮಂತನನ್ನು ತಡೆದು ಗರ್ವಿತನಾಗಿ ಎಂಟು ಬಾಣಗಳನ್ನು ಹೂಡಿ ನಾಲ್ಕು ಬಾಣಗಳಿಂದ ನಾಲ್ಕು ಅಶ್ವಗಳನ್ನೂ ಒಂದು ಬಾಣದಿಂದ ಸಾರಥಿಯನ್ನೂ ಎರಡು ಬಾಣಗಳಿಂದ ಧನುಸ್ಸನ್ನೂ ಧ್ವಜವನ್ನೂ ಮತ್ತೊಂದು ಬಾಣದಿಂದ ಆತನ ಶಿರಸ್ಸನ್ನೂ ಛೇದಿಸಿದನು; ಆಗ ಗದ ಸಾತ್ಯಕಿ ಸಾಂಬ ಮೊದಲಾದ ಯಾದವರು ನಾನಾ ಶಸ್ತ್ರಗಳಿಂದ ಸಾಲ್ವನ ಸೇನೆಯನ್ನು ಪ್ರಹರಿಸಿದರು; ಆ ಸಮಯದಲ್ಲಿ ಮಯನಿರ್ಮಿತವಾದ ಆ ವಿಮಾನದಲ್ಲಿದ್ದ ಸಮಸ್ತ ಜನರೂ ಛೇದಿಸಲ್ಪಟ್ಟ ಕಂಠಗಳುಳ್ಳವರಾಗಿ ಸಮುದ್ರದಲ್ಲಿ ಬಿದ್ದರು! ಎಲೈ ಅರಸೆ ಕೇಳು: ಈ ರೀತಿ ಒಬ್ಬರನ್ನೊಬ್ಬರು ಪ್ರಹರಿಸುತಲಿರುವ ಯಾದವರಿಗೂ ಸಾಲ್ವದೇಶಸ್ಥರಿಗೂ ಇಪ್ಪತ್ತೇಳು ದಿವಸಗಳು ವ್ಯಾಕುಲವಾಗಿ ಭಯಂಕರವಾದ ಯುದ್ಧವು ಬೆಳೆಯಿತು!

ಅತ್ತಲ ಧರ್ಮರಾಯನಿಂದ ಯಾಗಾರ್ಥವಾಗಿ ಕರೆಯಲ್ಪಟ್ಟ ಶ್ರೀಕೃಷ್ಣನು ಇಂದ್ರಪ್ರಸ್ಥ ಪುರವನ್ನೈದಿ ಆ ರಾಜಸೂಯ ಯಾಗವು ಪೂರ್ತಿಯಾಗಿ ಶಿಶುಪಾಲನು ತನ್ನ ಚರಣದಲ್ಲಿ ಐಕ್ಯವಾದ ನಂತರದಲ್ಲಿ ಭೀಷ್ಮಾದಿಗಳನ್ನೂ ಮುನಿಗಳನ್ನೂ ಪುತ್ರಸಹಿತಳಾದ ಕುಂತಿದೇವಿಯನ್ನೂ ಅಪ್ಪಣೆಕೇಳಿ ಅತಿ ಭಯಂಕರವಾದ ಶಕುನಗಳನ್ನೋಡುತ ದ್ವಾರಕಾಪುರವನ್ನೈದುವ ಮಾರ್ಗದಲ್ಲಿ ದುರ್ನಿಮಿತ್ತಗಳ ದರ್ಶನದಿಂದ ವ್ಯಾಕುಲವಾದ ಮನಸ್ಸುಳ್ಳವನಾಗಿ ತನ್ನ ಮನಸ್ಸಿನಲ್ಲಿ ಶಿಶುಪಾಲನ ಸಂಬಂಧಿಗಳಾದ ಅರಸರು ತಮ್ಮ ಪಟ್ಟಣವನ್ನು ಧ್ವಂಸಮಾಡುತ್ತಾರೆಂದು ಚಿಂತಿಸುತ ದ್ವಾರಕಾಪುರವನ್ನೈದಿ ಯಾದವರ ಯುದ್ಧವನ್ನೂ ಸೌಭವೆಂಬ ಆ ವಿಮಾನವನ್ನೂ ಸಾಲ್ವನನ್ನೂ ನೋಡಿ ಪುರರಕ್ಷಣಾರ್ಥವಾಗಿ ಬಲರಾಮನನ್ನಿರಿಸಿ ಸಾರಥಿಯಾದ ದಾರುಕನನ್ನು ಕುರಿತು ಶೀಘ್ರವಾಗಿ ತನ್ನ ರಥವನ್ನು ಸಾಲ್ವನ ಸಮೀಪವನ್ನೈದಿಸುವಹಾಗೂ ಸಾಲ್ವನು ಮಾಯಾವಂತನೆಂದು ಹೆದರದಿರುವಹಾಗೂ ಆಜ್ಞಾಪಿಸಿದನು; ಅದನ್ನು ಕೇಳಿ ದಾರುಕನು ರಥದಲ್ಲಿ ಚನ್ನಾಗಿ ಕುಳಿತುಕೊಂಡು ರಥವನ್ನು ನಡಿಸಲು ಎಲ್ಲರು ಆ ರಥಧ್ವಜದಲ್ಲಿದ್ದ ಗರುಡನನ್ನು ಕಂಡರು; ಆಗ ಯುದ್ಧದಲ್ಲಿ ಬಹಳವಾಗಿ ನಷ್ಟವಾದ ಸೇನೆಗೆ ನಿಯಾಮಕನಾದ ಸಾಲ್ವನು ಕೃಷ್ಣನನ್ನು ನೋಡಿ ಸಾರಥಿಯಾದ ದಾರುಕನಮೇಲೆ ಭಯಂಕರವಾದ ಶಬ್ದವುಳ್ಳ ಒಂದು ಶಕ್ತಿಯನ್ನು ಪ್ರಯೋಗಿಸಿದನು; ಶ್ರೀಕೃಷ್ಣನು ಮಹತ್ತಾದ ಕೊಳ್ಳಿಯಂತೆ ದಿಕ್ಕುಗಳನ್ನು ಪ್ರಕಾಶಂಗೈಯುತ ವೇಗದಿಂದ ಅಂತರಿಕ್ಷದಲ್ಲಿ ಬರುತ್ತಿದ್ದ

ಆ ಶಕ್ತಿಯನ್ನೂ ಸಾಲ್ವನನ್ನೂ ಬಾಣಗಳಿಂದ ಪ್ರಹರಿಸಿ ಸೂರ್ಯನು ಕಿರಣಗಳಿಂದ ಆಕಾಶವನ್ನು ವ್ಯಾಪಿಸುವರೀತಿ ಅಂತರಿಕ್ಷದಲ್ಲಿ ಸುತ್ತುತ್ತಿದ್ದ ಸೌಭವೆಂಬ ಆ ವಿಮಾನವನ್ನು ಅನೇಕ ಬಾಣಸಮೂಹಗಳಿಂದ ಭೇದಿಸಿದನು; ಸಾಲ್ವನು ಯುದ್ಧದಲ್ಲಿ ಶಾರ್ಙ್ಗಪಾಣಿಯಾದ ಶ್ರೀಕೃಷ್ಣನ ಶಾರ್ಙ್ಗವೆಂಬ ಧನುಸ್ಸಿನೊಡನೆ ಯುಕ್ತವಾದ ಭುಜವನ್ನು ಬಾಣಗಳಿಂದ ಛೇದಿಸಲು ಆತನ ಕೆಯಿಂದ ಶಾರ್ಙ್ಗ ಧನುಸ್ಸು ಕೆಳಕ್ಕೆ ಬಿತ್ತು; ಆ ವ್ಯಾಪಾರವು ಅತ್ಯಾಶ್ಚರ್ಯಕರವಾಯಿತು; ಆ ಯುದ್ಧವನ್ನು ನೋಡುತಿದ್ದ ದೇವಾದಿಗಳು ಹಾಹಾಕಾರವನ್ನು ಮಾಡಿದರು; ಅನಂತರದಲ್ಲಿ ಸಾಲ್ವನು ಘಟ್ಟಿಯಾಗಿ ಸಿಂಹನಾದಂಗೈದು ಶ್ರೀಕೃಷ್ಣನನ್ನು ಕುರಿತು "ಎಲೇ ಮೂಢನೆ, ನನ್ನ ಮಿತ್ರನಾದ ಶಿಶುಪಾಲನಿಗೆ ವಿವಾಹವಾಗತಕ್ಕ ರುಕ್ಮಿಣಿಯನ್ನು ನೋಡುತಿದ್ದ ನಮ್ಮನ್ನು ತೃಣೀಕರಿಸಿ ಅಪಹರಿಸಿದವನಾಗಿಯೂ ರಾಜಸೂಯ ಯಾಗ ಸಭಾಮಧ್ಯದಲ್ಲಿ ಪ್ರಮತ್ತನಾಗಿದ್ದ ನನ್ನ ಮಿತ್ರನಾದ ಶಿಶುಪಾಲನನ್ನು ಸಂಹರಿಸಿದವನಾಗಿಯೂ ಇರುವ ನೀನು ಈಗ ನನ್ನ ಎದುರಾಗಿ ನಿಂತರೆ ತೀಕ್ಷ್ಣಗಳಾದ ನನ್ನ ಬಾಣಗಳಿಂದ ಎಲ್ಲೂ ಪರಾಜಿತನಾಗಲಿಲ್ಲವೆಂಬ ದುರಾಭಿಮಾನವುಳ್ಳ ನಿನ್ನನ್ನು ಮೃತ್ಯುವನ್ನೈದಿಸುತ್ತೇನೆ" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಶ್ರೀಕೃಷ್ಣನು "ಎಲೇ ಮೂಢನೆ, ನೀನು ವ್ಯರ್ಥವಾಗಿ ಆತ್ಮಪ್ರಶಂಸೆಯನ್ನು ಗೈಯುತ್ತಿಯೇಹೊರತು ಸಮೀಪದಲ್ಲಿರುವ ಯಮನನ್ನು ನೋಡದಿದ್ದೀ; ಲೋಕದಲ್ಲಿ ಶೂರರು ತಮ್ಮ ಪರಾಕ್ರಮವನ್ನು ತೋರಿಸುವರೇ ಹೊರತು ಈರೀತಿ ಬಹು ಮಾತುಗಳನ್ನಾಡರು" ಎಂದು ಹೇಳಿ ಕೋಪಯುಕ್ತನಾಗಿ ಭಯಂಕರವಾದ ಗದೆಯಿಂದ ಸಾಲ್ವನನ್ನು ಪ್ರಹರಿಸಲು ಆತನು ರಕ್ತವನ್ನು ಕಾರುತ ಕಂಪಿಸಿದನು; ಆ ಗದಾಯುಧವು ಪುನಹ ಶ್ರೀಕೃಷ್ಣನ ಸಮೀಪವನ್ನೈದಿತು; ಆಗ ಸಾಲ್ವನು ಅಂತರ್ಧಾನವನ್ನೈದಿದನು; ಒಂದು ಮುಹೂರ್ತಾನಂತರದಲ್ಲಿ ಒಬ್ಬ ಪುರುಷನು ಬಂದು ಶಿರಸ್ಸಿನಿಂದ ಶ್ರೀಕೃಷ್ಣನಿಗೆ ನಮಸ್ಕರಿಸಿ ದೇವಕೀದೇವಿಯಿಂದ ಕಳುಹಿಸಲ್ಪಟ್ಟವನೆಂದು ದುಃಖದಿಂದ ತಿಳಿಸಿ ಆತನನ್ನು ಕುರಿತು "ಮಹಾ ಯೋಗಿಯಾಗಿ ತಂದೆಯಲ್ಲಿ ಅತಿ ಭಕ್ತಿಯುಕ್ತನಾಗಿರುವ ಎಲೈ ಶ್ರೀಕೃಷ್ಣನೆ, ನಿನ್ನ ತಂದೆಯಾದ ವಸುದೇವನನ್ನು ಸಾಲ್ವನು ಕಟುಕನು ಕುರಿಯನ್ನು ಬಂಧಿಸಿ ಅಪಹರಿಸುವ ರೀತಿ ಬಂಧಿಸಿ ಅಪಹರಿಸಿದನು" ಎಂದು ನುಡಿದನು.

ಅಪ್ರಿಯವಾದ ಆ ಪುರುಷನ ವಚನವನ್ನು ಕೇಳಿ ಮನುಷ್ಯಭಾವವನ್ನೈದಿದ್ದ ಶ್ರೀಕೃಷ್ಣನು ದಯಾಶೀಲನಾದ್ದರಿಂದ ಖಿನ್ನನಾಗಿ ಸ್ನೇಹದಿಂದ ಪಾಮರನಂತೆ ನುಡಿಯುತ "ಎಲೈ ಮಹಾ ಬಲಶಾಲಿಯಾಗಿ ದೇವತೆಗಳಿಂದಲೂ ದೈತ್ಯರಿಂದಲೂ ಜಯಿಸಲಶಕ್ಯನಾದ ಬಲರಾಮನನ್ನು ಜಯಿಸಿ ಅಲ್ಪಬಲನಾದ ಸಾಲ್ವನು ನಮ್ಮ ತಂದೆಯನ್ನೆಂತು ಅಪಹರಿಸಿದನು! ಕಟಕಟಾ—ದೈವವು ಬಲವಂತವಾದದ್ದು!" ಎಂದು ಹೇಳುತ್ತಿದ್ದನು.

ಆ ಸಮಯದಲ್ಲಿ ಸಾಲ್ವನು ವಸುದೇವನನ್ನು ಕರದುಕೊಂಡು ಬಂದು ಶ್ರೀಕೃಷ್ಣನಿಗೆದುರಾಗಿ ನಿಂತು "ಎಲೈ ಶ್ರೀಕೃಷ್ಣನೆ, ನೀನು ಯಾವನಿಗೋಸ್ಕರ ಈ ಲೋಕದಲ್ಲಿ ಜೀವಿಸುತಿದ್ದೀಯೋ ಅಂಥಾ ನಿನ್ನ ತಂದೆಯಾದ ವಸುದೇವನನ್ನು ನಾನು ಅಪಹರಿಸಿದೆನು! ಎಲೇ ಮೂರ್ಖನೆ, ನೀನು ನೋಡುತಿರುವಾಗಲೇ ಇವನನ್ನು ಸಂಹರಿಸುತ್ತೇನೆ; ನೀನು ಸಮರ್ಥನಾದರೆ ಇವನನ್ನು ಸಂರಕ್ಷಿಸು" ಅಂದನು.

ಮಾಯಾವಿಯಾದ ಸಾಲ್ವನು ಈರೀತಿ ಭಯಪಡಿಸಿ ಖಡ್ಗದಿಂದ ಆ ವಸುದೇವನ ಶಿರಸ್ಸನ್ನು ಛೇದಿಸಿ ಆ ಶಿರಸ್ಸನ್ನು ತೆಗೆದುಕೊಂಡು ಅಂತರಿಕ್ಷದಲ್ಲಿದ್ದ ತನ್ನ ವಿಮಾನವನ್ನು ಪ್ರವೇಶಿಸಿದನು; ಶ್ರೀಕೃಷ್ಣನು ಸ್ವತಸಿದ್ಧವಾದ ದಿವ್ಯಜ್ಞಾನವುಳ್ಳವನಾದಾಗ್ಯೂ ಒಂದು ಮುಹೂರ್ತಪರ್ಯಂತವು ಸ್ವಜನಸ್ನೇಹದಿಂದ ಮಾನುಷಸ್ವಭಾವದಲ್ಲಿ ಮಗ್ನನಾಗಿದ್ದು ಅಮೇಲೆ ಮಹಾನುಭಾವನಾದ್ದರಿಂದ ಆ ಸಮಸ್ತ ವ್ಯಾಪಾರವೂ ಮಯನ ಉಪದೇಶದಿಂದ ಸಾಲ್ವನಿಂದ ಪ್ರಯೋಗಿಸಲ್ಪಟ್ಟ ಅಸುರಮಾಯೆಯೇ ಹೊರತು ಆ ದೂತನು ದ್ವಾರಕಾಪಟ್ಟಣದಿಂದ ಬಂದವನಲ್ಲವೆಂದೂ ಸಾಲ್ವನು ತನ್ನ ತಂದೆಯಾದ ವಸುದೇವನನ್ನು ಯಥಾರ್ಥವಾಗಿ ಸಂಹರಿಸಲಿಲ್ಲವೆಂದೂ ತಿಳಿದು ಪುರುಷನು ಸ್ವಪ್ನದಲ್ಲಿ ಕಂಡ ಪ್ರಪಂಚವನ್ನು ಜಾಗ್ರದವಸ್ಥೆಯಲ್ಲಿ ಕಾಣದರೀತಿಯಲ್ಲಿ ಜ್ಞಾನಯುಕ್ತನಾಗಿ ಆ ಯುದ್ಧದಲ್ಲಿ ಕಾಣಲ್ಪಟ್ಟ ಆ ದೂತ

ನನ್ನೂ ಮಾಯಾ ವಸುದೇವನ ಆ ಕಳೇಬರವನ್ನೂ ಕಾಣದೆ ಸೌಭವೆಂಬ ವಿಮಾನದಲ್ಲಿದ್ದ ದೇವಶತ್ರುವಾದ ಸಾಲ್ವನನ್ನು ನೋಡಿ ಅವನನ್ನು ಸಂಹರಿಸಲು ಸನ್ನದ್ಧನಾದನು.

[ಈ ವೃತ್ತಾಂತವನ್ನು ಕೇಳಿ ಪರೀಕ್ಷಿದ್ರಾಯನು ರಾಜಸೂಯಯಾಗಕ್ಕೆ ಹೋಗುವಾಗ ದ್ವಾರಕಾಪುರರಕ್ಷಣಾರ್ಥವಾಗಿ ಬಲರಾಮನನ್ನಿರಿಸಿ ಇಂದ್ರಪ್ರಸ್ಥಪುರವನ್ನೈದಿದನೆಂದು ಮೊದಲು ಹೇಳಿದ್ದರಿಂದ ಕೃಷ್ಣನು ಬಲರಾಮನೊಡನೆ ರಾಜಸೂಯಯಾಗಕ್ಕೋಸ್ಕರ ತೆರಳಿದನೆಂಬ ಅರ್ಥವೂ ಶ್ರೀಕೃಷ್ಣನು ಕಾಮ್ಯಕವನದಲ್ಲಿರುವ ಪಾಂಡವರನ್ನು ಕುರಿತು ತಾನು ಸಾಲ್ವನೊಡನೆ ಯುದ್ಧಗೈವದರಲ್ಲಿ ಆಸಕ್ತನಾಗಿದ್ದದ್ದರಿಂದ ಅವರ ದ್ಯೂತಪ್ರಚಾರವು ತಿಳಿಯಲ್ಪಡಲಿಲ್ಲವೆಂದು ಪಾಂಡವರನ್ನು ಸಮಾಧಾನಗೈದನೆಂದೂ ವ್ಯಾಸವಚನವಿರುವದರಿಂದ ಶ್ರೀಕೃಷ್ಣನು ಇಂದ್ರಪ್ರಸ್ಥಪುರದಲ್ಲಿರುವಾಗ ಸಾಲ್ವನು ದ್ವಾರಕಾಪುರಕ್ಕೆ ಬಂದನೆಂಬ ಅರ್ಥವೂ ಅಸಂಗತಗಳೆಂದು ಶಂಕಿಸಲು ಶುಕಮುನಿಯು ಆತನನ್ನು ಕುರಿತು—ಎಲೈ ಅರಸೆ, ಕೆಲವು ಋಷಿಗಳು ಯಾವ ಯಾವ ಅರ್ಥದಲ್ಲಿ ತಮ್ಮ ವಾಕ್ಯಗಳು ವಿರೋಧವಾಗಿರುವವೋ ಆ ಅರ್ಥಗಳನ್ನು ಸಂಗಡಲೇ ಸ್ಮರಿಸುವದಿಲ್ಲವಾದಕಾರಣ ಪೂರ್ವೋತ್ತರ ಸಂದರ್ಭಾನುಸಂಧಾನರಹಿತರಾಗಿ ಅಸಂಗತವಾದ ಅರ್ಥವನ್ನು ಹೇಳುವರೇಹೊರತು ಮತ್ತೊಂದಲ್ಲ; ಕೃಷ್ಣನಲ್ಲಿ ಶೋಕಮೋಹಾದಿಗಳು ಸಂಭವಿಸಲಾರವು; ಅಜ್ಞರಲ್ಲಿ ಹುಟ್ಟುವ ಶೋಕಮೋಹಗಳು ಸ್ನೇಹವು ದುರ್ನಿಮಿತ್ತದಿಂದ ಹುಟ್ಟುವ ಭಯವು ಇತ್ಯಾದಿಗಳು ಪರಿಪೂರ್ಣವಾದ ಸ್ವರೂಪ ಜ್ಞಾನ ಬಾಹ್ಯವಿಷಯ ಜ್ಞಾನಾದಿ ಐಶ್ವರ್ಯಗಳುಳ್ಳವನಾಗಿ ಈಶ್ವರನಾಗಿರುವ ಶ್ರೀಕೃಷ್ಣನಲ್ಲಿಲ್ಲ; ಆದಕಾರಣ ಶ್ರೀಕೃಷ್ಣನಲ್ಲಿ ಶೋಕ ಭಯಾದಿಗಳು ಅಜ್ಞಾನದಿಂದ ಕಲ್ಪಿತಗಳಾಗಿ ತೋರುವವೇ ಹೊರತು ವಸ್ತುತಃ ಇಲ್ಲ; ಋಷಿಗಳು ಯಾವನ ಪಾದಸೇವೆಯಿಂದ ಸಂಪೂರ್ಣವಾದ ಆತ್ಮವಿದ್ಯೆಯಿಂದ ಅನಾದಿಯಾಗಿ ತಾವು ಕೃಶರು—ಸುಖಿಗಳು—ದುಃಖಿತರು ಎಂದು ದೇಹವನ್ನು ತಾವೆಂಬದಾಗಿರುವ ಅಭಿಮಾನವನ್ನು ನಾಶಗೈದು ನಿಜವಾಗಿ ನಾಶರಹಿತವಾದ ಈಶ್ವರಸ್ಥಾನವನ್ನು ಪಡೆಯುತಲಿರ್ಧಾರೆಯೋ ಅಂಥಾ ಸತ್ಪುರುಷರಿಗೆ ಪರಮಗತಿರೂಪನಾದ ಶ್ರೀಕೃಷ್ಣನಿಗೆ ಮೋಹವುಂಟಾಗದು; ಆದಕಾರಣ ಶ್ರೀಕೃಷ್ಣನಲ್ಲಿ ಮೋಹವುಂಟಾಯಿತೆಂಬ ವಚನವು ಅಸತ್ಯವು!]

ಅನಂತರದಲ್ಲಿ ಅಮೋಘವಾದ ಪರಾಕ್ರಮವುಳ್ಳ ಶ್ರೀಕೃಷ್ಣನು ಶೌರ್ಯದಿಂದಲೂ ಶಸ್ತ್ರಸಮೂಹಗಳಿಂದಲೂ ತನ್ನ ಸೇನೆಯನ್ನು ಪ್ರಹರಿಸುತಿದ್ದ ಸಾಲ್ವನನ್ನು ತನ್ನ ಬಾಣಗಳಿಂದ ಪ್ರಹರಿಸಿ ಅವನ ಕವಚವನ್ನೂ ಧನುಸ್ಸನ್ನೂ ಶಿರೋಮಾಣಿಕ್ಯವನ್ನೂ ಛೇದಿಸಿ ಗದೆಯಿಂದ ಸಾಲ್ವನ ಸೌಭವೆಂಬ ವಿಮಾನವನ್ನು ಮುರಿದನು; ಆ ವಿಮಾನವು ಶ್ರೀಕೃಷ್ಣನ ಹಸ್ತದಿಂದೆಸೆಯಲ್ಪಟ್ಟ ಗದೆಯಿಂದ ಸಹಸ್ರಭಾಗಗಳಾಗಿ ಚೂರ್ಣೀಕರಿಸಲ್ಪಟ್ಟು ಸಮುದ್ರದಲ್ಲಿ ಬಿತ್ತು; ಸಾಲ್ವನು ವಿಮಾನವನ್ನು ಬಿಟ್ಟು ಭೂಮಿಯಲ್ಲಿ ನಿಂತು ಗದೆಯನ್ನಿಡಿದು ಶೀಘ್ರವಾಗಿ ಶ್ರೀಕೃಷ್ಣನಿಗೆದುರಾಗಿ ನಡೆದನು; ಶ್ರೀಕೃಷ್ಣನು ಗದೆಯನ್ನಿಡಿದು ಎದುರಾಗಿ ಬರುತಿದ್ದ ಸಾಲ್ವನ ಭುಜವನ್ನು ಭಲ್ಲಾಯುಧದಿಂದ ಛೇದಿಸಿ ಪ್ರಳಯಕಾಲದ ಸೂರ್ಯನಿಗೆ ಸಮಾನವಾಗಿ ಆಶ್ಚರ್ಯಕರವಾದ ಚಕ್ರಾಯುಧವನ್ನು ಧರಿಸಿ ಸೂರ್ಯನೊಡಗೂಡಿರುವ ಉದಯಪರ್ವತದಂತೆ ಪ್ರಕಾಶಿಸುತ ಇಂದ್ರನು ವಜ್ರಾಯುಧದಿಂದ ವೃತ್ರಾಸುರನ ಶಿರಸ್ಸನ್ನು ಛೇದಿಸಿದಂತೆ ಚಕ್ರಾಯುಧದಿಂದ ಮಾಯಾವಂತನಾದ ಸಾಲ್ವನ ಕಿರೀಟಕುಂಡಲಯುಕ್ತವಾದ ಶಿರಸ್ಸನ್ನು ಛೇದಿಸಿದನು; ಆಗ ಸಮಸ್ತರು ಹಾಹಾಕಾರಗೈದರು! ಈ ಪ್ರಕಾರದಲ್ಲಿ ಪಾಪಿಯಾದ ಸಾಲ್ವನು ಭೂಮಿಯಲ್ಲಿ ಬಿದ್ದು ಸೌಭವೆಂಬ ಆ ವಿಮಾನವು ಗದೆಯಿಂದ ಭಗ್ನವಾಗಲು ಅಂತರಿಕ್ಷದಲ್ಲಿ ದೇವಸಮೂಹಗಳಿಂದ ವಾದಿಸಲ್ಪಟ್ಟ ಭೇರಿಗಳು ಅತ್ಯಂತವಾಗಿ ಧ್ವನಿಗೈದವು.

## ೭೮ ನೇ ಅಧ್ಯಾಯ.

### ದಂತವಕ್ರನ ವಧೆ—ಬಲರಾಮನಿಗೆ ಬ್ರಹ್ಮಹತ್ಯವು ಸಂಭವಿಸಿದ್ದು.

ಎಲೈ ಅರಸೆ, ಆ ಸಮಯದಲ್ಲಿ ಶಿಶುಪಾಲನಿಗೂ ಸಾಲ್ವನಿಗೂ ದುರ್ಬುದ್ಧಿಯುಳ್ಳ ಪೌಂಡ್ರಕನಿಗೂ ಮಿತ್ರನಾಗಿ ಮಹಾ ಬಲಶಾಲಿಯಾದ ದಂತವಕ್ರನು ಸ್ವರ್ಗವನ್ನೈದಿರುವ ಆ ಮೂವರಿಗೂ ಪರೋಕ್ಷದಲ್ಲಿ ಮಾಡತಕ್ಕ ಮಿತ್ರಕಾರ್ಯವಂಗೈಯುವದಕ್ಕಾಗಿ ಒಬ್ಬನೇ ಪಾದಚಾರಿಯಾಗಿ ಅತ್ಯಂತ ಕೋಪಯುಕ್ತನಾಗಿ ಗದೆಯನ್ನಿಡಿದು ಪಾದವಿನ್ಯಾಸಗಳಿಂದ ಭೂಮಿಯನ್ನು ಕಂಪಿಸುವಂತೆ ಮಾಡುತ ಕಾಣಲ್ಪಟ್ಟನು; ಶ್ರೀಕೃಷ್ಣನು ಆತನನ್ನು ನೋಡಿ ಅತಿ ತ್ವರೆಯಿಂದ ಗದೆಯನ್ನಿಡಿದು ರಥದ ದೆಸೆಯಿಂದಿಳಿದು ಸಮುದ್ರವನ್ನು ತಡೆಯುವ ತಟದಂತೆ ಅವನನ್ನು ತಡೆದನು; ಕರೂಶ ದೇಶಾಧಿಪತಿಯಾದ ದಂತವಕ್ರನು ಅತ್ಯಂತ ಮತ್ತನಾಗಿ ಗದೆಯನ್ನೆತ್ತಿಕೊಂಡು ಶ್ರೀಕೃಷ್ಣನನ್ನು ಕುರಿತು "ಎಲೈ ಕೃಷ್ಣನೆ, ಈಗ ನೀನು ನನ್ನ ದೃಷ್ಟಿಮಾರ್ಗಕ್ಕೆ ಗೋಚರನಾದದ್ದು ಬಹು ಚನ್ನಾಯಿತು; ನೀನು ನನಗೆ ಬಂಧುವಾದಾಗ್ಯೂ ನನ್ನ ಮಿತ್ರರಾದ ಶಿಶುಪಾಲಾದಿಗಳನ್ನು ಸಂಹರಿಸಿ ನನ್ನನ್ನೂ ಸಂಹರಿಸಲಿಚ್ಛೈಸುತ್ತೀ! ಎಲೋ ಮೂಢನೆ, ಆದಕಾರಣ ಮಿತ್ರರಲ್ಲಿ ವಾತ್ಸಲ್ಯವುಳ್ಳ ನಾನು ವಜ್ರಾಯುಧ ಸಮಾನವಾದ ಈ ಗದೆಯಿಂದ ದೇಹದಲ್ಲಿ ಸಂಚರಿಸುವ ವ್ಯಾಧಿಯನ್ನೋಪಾದಿಯಲ್ಲಿ ಬಂಧುರೂಪವಾಗಿ ಶತ್ರುವಾಗಿರುವ ನಿನ್ನನ್ನು ಸಂಹರಿಸಿ ಶಿಶುಪಾಲನು ಸಾಲ್ವನು ಮೊದಲಾದ ಮಿತ್ರರ ಋಣದಿಂದ ವಿಮುಕ್ತನಾಗುತ್ತೇನೆ" ಎಂದು ತೀಕ್ಷ್ಣವಾದ ವಾಕ್ಯಗಳಿಂದ ಅಂಕುಶಗಳಿಂದ ಆನೆಯನ್ನು ಪೀಡಿಸುವಂತೆ ಶ್ರೀಕೃಷ್ಣನನ್ನು ಪೀಡಿಸುತ ತನ್ನ ಗದೆಯಿಂದ ಆತನ ಶಿರಸ್ಸನ್ನು ಪ್ರಹರಿಸಿ ಸಿಂಹನಾದಂಗೈದನು; ಕೃಷ್ಣನು ಚಲಿಸದೆ ಕೌಮೋದಕಿಯೆಂಬ ತನ್ನ ಮಹತ್ತಾದ ಗದೆಯಿಂದ ದಂತವಕ್ರನ ವಕ್ಷಸ್ಥಳವನ್ನು ಪ್ರಹರಿಸಿದನು; ಆತನು ಆ ಗದೆಯಿಂದ ಅತ್ಯಂತವಾಗಿ ಭೇದಿಸಲ್ಪಟ್ಟ ವಕ್ಷಸ್ಥಳವುಳ್ಳವನಾಗಿ ಮುಖದಿಂದ ರಕ್ತವನ್ನು ಕಾರುತ ಕೇಶಗಳನ್ನೂ ಭುಜಗಳನ್ನೂ ಪಾದಗಳನ್ನೂ ಹರಡಿಕೊಂಡು ಪ್ರಾಣರಹಿತನಾಗಿ ಭೂಮಿಯಲ್ಲಿ ಬಿದ್ದನು! ಆ ಸಮಯದಲ್ಲಿ ಅವನ ಶರೀರದ ದೆಸೆಯಿಂದ ಅತಿ ಸೂಕ್ಷ್ಮವಾಗಿ ಆಶ್ಚರ್ಯಕರವಾದ ಒಂದು ತೇಜಸ್ಸು ಹೊರಟು ಶಿಶುಪಾಲನ ವಧೆಯ ಕಾಲದಲ್ಲಿ ಅವನ ದೇಹದಿಂದ ಬಂದು ತೇಜಸ್ಸು ಶ್ರೀಕೃಷ್ಣನಲ್ಲಿ ಐಕ್ಯವಾದ ರೀತಿಯಲ್ಲಿ ಸಕಲ ಭೂತಗಳೂ ನೋಡುತಿರಲು ಶ್ರೀಕೃಷ್ಣನಲ್ಲಿ ಐಕ್ಯವಾಯಿತು!

ಅನಂತರದಲ್ಲಿ ದಂತವಕ್ರನಿಗೆ ತಮ್ಮನಾದ ವಿಡೂರಥನು ಭ್ರಾತೃಶೋಕದಿಂದ ಪೀಡಿತನಾಗಿ ನಿಟ್ಟುಸುರನ್ನು ಬಿಡುತ ಖಡ್ಗಚರ್ಮಗಳನ್ನಿಡಿದು ಶ್ರೀಕೃಷ್ಣನನ್ನು ಸಂಹರಿಸುವದಕ್ಕೆ ಬಂದನು; ಶ್ರೀಕೃಷ್ಣನು ಕ್ಷುರದಂತೆ ತೀಕ್ಷ್ಣಗಳಾದ ಅಂಚುಗಳುಳ್ಳ ಚಕ್ರದಿಂದ ವಿಡೂರಥನ ಕಿರೀಟ ಕುಂಡಲಗಳೊಡನೆ ಹೊಳೆಯುತಿದ್ದ ಶಿರಸ್ಸನ್ನು ಭೇದಿಸಿದನು!

ಎಲೈ ಅರಸೆ, ಶ್ರೀಕೃಷ್ಣನು ಈರೀತಿ ಸೌಭವೆಂಬ ವಿಮಾನವನ್ನೂ ದಂತವಕ್ರನನ್ನೂ ಸಾಲ್ವನನ್ನೂ ದಂತವಕ್ರನ ತಮ್ಮನಾದ ವಿಡೂರಥನನ್ನೂ ಮತ್ತು ಅನೇಕ ದುಷ್ಟರನ್ನೂ ಸಂಹರಿಸಿ ದೇವತೆಗಳಿಂದಲೂ ಮನುಷ್ಯರಿಂದಲೂ ಮುನಿಗಳಿಂದಲೂ ಸಿದ್ಧ ಗಂಧರ್ವ ವಿದ್ಯಾಧರ ಸರ್ಪಾಧಿಪತಿಗಳಿಂದಲೂ ಅಪ್ಸರಸ್ಸುಗಳಿಂದಲೂ ಪಿತೃದೇವತಾ ಸಮೂಹಗಳಿಂದಲೂ ಯಕ್ಷ ಕಿನ್ನರ ಚಾರಣರಿಂದಲೂ ಸ್ತುತಿಸಲ್ಪಡುತ ಅವರಿಂದ ಗಾನಂಗೈಯಲ್ಪಡುವ ವಿಜಯಪ್ರಸ್ತಾಪವುಳ್ಳವನಾಗಿ ದಿವ್ಯಪುಷ್ಪಗಳಿಂದ ವರ್ಷಿಸಲ್ಪಡುತ ಯಾದವಶ್ರೇಷ್ಠರೊಡಗೂಡಿ ಅಲಂಕರಿಸಲ್ಪಟ್ಟ ದ್ವಾರಕಾಪುರವನ್ನು ಪ್ರವೇಶಿಸಿದನು! ಎಲೈ ಅರಸೆ, ಯೋಗೀಶ್ವರನಾಗಿ ಭಗವಂತನಾಗಿ ಜಗದೀಶ್ವರನಾದ ಶ್ರೀಕೃಷ್ಣನು ಈರೀತಿ ಬಲವಂತನಾಗಿ ನಿತ್ಯವಾದ ಜಯವುಳ್ಳವನಾದಾಗ್ಯೂ ಪಶುದೃಷ್ಟಿಯುಳ್ಳ ಮೂಢರಿಗೆ ಒಂದು ವೇಳೆ ಅನ್ಯರನ್ನು ಜಯಿಸುವವನಂತೆಯೂ ಒಂದುವೇಳೆ ಅನ್ಯರಿಂದ ಜಯಿಸಲ್ಪಟ್ಟವನಂತೆಯೂ ತೋರುವನೇಹೊರ್ತು ವಸ್ತುತಃ ಆ ದೇವನಿಗೆ ಜಯಪರಾಜಯಾದಿಗಳಿಲ್ಲ!

ಎಲೈ ಅರಸೇ ಕೇಳು, ಅನಂತರದಲ್ಲಿ ಬಲರಾಮನು ಪಾಂಡವರೊಡನೆ ಕೌರವರು ಯುದ್ಧಸನ್ನದ್ಧರಾಗುತ್ತಿರುವ ವೃತ್ತಾಂತವನ್ನು ಕೇಳಿ ಆ ಉಭಯಪಕ್ಷಗಳಲ್ಲಿಯೂ ಸಮಾನನಾಗಿರುವವನಾದ್ದರಿಂದ ಬ್ಬರಿಗೂ ಸಹಾಯವಾಗದೆ ತೀರ್ಥಯಾತ್ರೆಯೆಂಬ ವ್ಯಾಜದಿಂದ ದಿವ್ಯಕ್ಷೇತ್ರಗಳನ್ನು ಕುರಿತು ತೆರಳಿ ಪ್ರಭಾಸವೆಂಬ ತೀರ್ಥದಲ್ಲಿ ಸ್ನಾನಂಗೈದು ದೇವರ್ಷಿ ಪಿತೃ ತರ್ಪಣವನ್ನು ಮಾಡಿ ಬ್ರಾಹ್ಮಣರೊಡನೆ ಯುಕ್ತನಾಗಿ ಪಶ್ಚಿಮವಾಹಿನಿಯಾದ ಸರಸ್ವತೀ ನದಿಯನ್ನೈದಿ ಯಥಾವಿಧಿಯಾಗಿ ಸ್ನಾನಾದಿ ಕರ್ಮಗಳನ್ನಾಚರಿಸಿ ಪೃಥೂದಕತೀರ್ಥವು ಬಿಂದುಸರಸ್ಸು ತ್ರಿತಕೂಪವು ಸುದರ್ಶನತೀರ್ಥವು ವಿಶಾಲತೀರ್ಥವು ಬ್ರಹ್ಮತೀರ್ಥವು ಚಕ್ರತೀರ್ಥವು ಪೂರ್ವವಾಹಿನಿಯಾದ ಸರಸ್ವತೀನದಿಯು ಯಮುನಾತೀರದಲ್ಲಿಯೂ ಗಂಗಾತೀರದಲ್ಲಿಯೂ ಇರುವ ತೀರ್ಥಗಳು ಮೊದಲಾದ ತೀರ್ಥಗಳನ್ನೈದಿ ಅಲ್ಲಲ್ಲಿ ಸ್ನಾನಾದಿಗಳನ್ನು ಮಾಡಿ ಅನಂತರದಲ್ಲಿ ಶೌನಕಾದಿ ಋಷಿಗಳು ಸತ್ರಯಾಗದಲ್ಲಿ ದೀಕ್ಷಿತರಾಗಿದ್ದ ನೈಮಿಶಾರಣ್ಯವನ್ನೈದಿದನು; ಆಗ ದೀರ್ಘಕಾಲದಿಂದ ಸಾಧಿಸತಕ್ಕ ಸತ್ರಯಾಗದಲ್ಲಿ ಸಂಕಲ್ಪಿಸಿದ್ದ ಆ ಋಷಿಗಳು ಬಲರಾಮನು ಬಂದನೆಂದು ಸಂತೋಷದಿಂದೆದ್ದು ಯಥಾಯೋಗ್ಯವಾಗಿ ಆತನಿಗೆ ಪ್ರತ್ಯುತ್ಥಾನಂಗೈದು ನಮಸ್ಕರಿಸಿ ಅರ್ಘ್ಯಾದಿಗಳಿಂದ ಪೂಜಿಸಿದರು; ಆಗ ಬಲರಾಮನು ವ್ಯಾಸಶಿಷ್ಯನಾದ ರೋಮಹರ್ಷಣನೆಂಬ ಪೌರಾಣಿಕನು ಕ್ಷತ್ರಿಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನಾದಾಗ್ಯೂ ತನಗೆ ಪ್ರತ್ಯುತ್ಥಾನವನ್ನಾದರೂ ನಮಸ್ಕಾರವನ್ನಾದರೂ ಅಂಜಲೀಬಂಧವನ್ನಾದರೂ ಮಾಡದೆ ಶೌನಕಾದಿ ಋಷಿಗಳಗಿಂತಲೂ ಉನ್ನತವಾದ ಪೀಠವಲ್ಲಿ ಕುಳಿತಿದ್ದದ್ದನ್ನು ನೋಡಿ ಕೋಪಯುಕ್ತನಾಗಿ "ಸೂತಜಾತಿಯವನಾದ ರೋಮಹರ್ಷಣನು ಯಾವಕಾರಣದಿಂದ ಈ ಋಷಿಗಳಗಿಂತಲೂ ಉನ್ನತವಾದ ಪೀಠದಲ್ಲಿ ಕುಳಿತು ಧರ್ಮಪಾಲಕರಾದ ನಮ್ಮನ್ನು ಪ್ರತ್ಯುತ್ಥಾನಾದಿಗಳಂಗೈಯದೆ ತಿರಸ್ಕರಿಸಿದನೋ ಆ ಕಾರಣದಿಂದ ದುರ್ಬುದ್ಧಿಯುಳ್ಳ ಸೂತಪೌರಾಣಿಕನು ನಮ್ಮಿಂದ ಸಂಹರಿಸಲು ಯೋಗ್ಯನು; ಇವನು ನನ್ನನ್ನು ತಿಳಿಯದೆ ತಿರಸ್ಕರಿಸಿದವನಲ್ಲ; ಪೂಜ್ಯನಾದ ವ್ಯಾಸಮುನಿಗೆ ಶಿಷ್ಯನಾಗಿ ಇತಿಹಾಸ ಪುರಾಣಗಳೊಡನೆ ಕೂಡಿ ಅನೇಕವಿಧವಾದ ಸಮಸ್ತ ಶಾಸ್ತ್ರಗಳನ್ನೂ ಅಧ್ಯಯನಂಗೈದವನು; ಜಿತೇಂದ್ರಿಯನಲ್ಲದೆ ವಿನಯರಹಿತನಾಗಿ ವ್ಯರ್ಥವಾಗಿ ತಾನೇ ಪಂಡಿತನೆಂಬ ಅಹಂಕಾರವುಳ್ಳವನಾಗಿರುವ ಈ ಸೂತನ ಶಾಸ್ತ್ರಾಧ್ಯಯನಾದಿಗಳು ವಿಷಯಸೂಕ್ತನಾದ ನಟನ ವಿದ್ಯೆಯಂತೆ ಗುಣರೂಪದಿಂದ ಪರಿಣಮಿಸುವದಿಲ್ಲ; ಲೋಕದಲ್ಲಿ ಮಹಾತ್ಮರ ಚಿನ್ಹೆಗಳನ್ನು ಧರಿಸಿರುವ ದುಷ್ಟರು ಮಹಾಪಾತಕಿಗಳಗಿಂತಲೂ ಅಧಿಕ ಪಾಪಿಗಳಾದಕಾರಣ ಅವರು ನನ್ನಿಂದ ಸಂಹರಿಸಲು ಯೋಗ್ಯರು; ಇಂಥಾ ದುಷ್ಟರನ್ನು ಸಂಹರಿಸಲೋಸುಗವೇ ನಾನು ಅವತರಿಸಿದೆನು" ಎಂದು ಹೇಳಿ ತಾನು ಸಂಹಾರ ಪರಾಙ್ಮುಖನಾದಾಗ್ಯೂ ಭಾವಿಕಾರ್ಯಾನುಸ್ಮರಣೆಯಿಂದ ತನ್ನ ಹಸ್ತದಲ್ಲಿದ್ದ ದರ್ಭೆಯಗ್ರದಿಂದ ಆ ಸೂತನನ್ನು ಸಂಹರಿಸಿದನು.

ಅನಂತರದಲ್ಲಿ ಆ ಋಷಿಗಳೆಲ್ಲರು ದುಃಖಿತವಾದ ಮನಸ್ಸುಳ್ಳವರಾಗಿ ಹಾಹಾಕಾರವನ್ನು ಮಾಡುತ ಬಲರಾಮನನ್ನು ಕುರಿತು "ಎಲೈ ಶ್ರೀರಾಮನೆ, ನೀನು ಈಗ ಅಧರ್ಮವನ್ನಾಚರಿಸಿದೆ; ಈ ಸತ್ರಯಾಗವು ಪೂರ್ತಿಯಾಗುವ ಪರ್ಯಂತವು ಪುರಾಣವನ್ನು ಹೇಳುವದಕ್ಕೋಸ್ಕರ ಈ ಸೂತಪೌರಾಣೀಕನಿಗೆ ನಾವು ಬ್ರಹ್ಮಾಸನವನ್ನೂ ಶರೀರಶ್ರಮೆಯಿಲ್ಲದಂತೆ ಆಯುಸ್ಸನ್ನೂ ಕೊಟ್ಟೆವು; ನೀನು ಈ ಅರ್ಥವನ್ನರಿಯದೆ ಬ್ರಾಹ್ಮಣವಧೆಯನ್ನು ಮಾಡಿದೆ! ಎಲೈ ಲೋಕಪಾವನನೇ, ಯೋಗೀಶ್ವರನಾದ ನಿನಗೆ ಬ್ರಾಹ್ಮಣನು ಸಂಹರಿಸಲು ಯೋಗ್ಯನಲ್ಲವೆಂದು ಹೇಳುವ ಶೃತಿಯು ನಿಯಾಮಕವಲ್ಲವಾದಾಗ್ಯೂ ಈ ಬ್ರಹ್ಮಹತ್ಯಕ್ಕೆ ಪ್ರಾಯಶ್ಚಿತ್ತವನ್ನು ಅನ್ಯರಿಂದ ಪ್ರೇರಿಸಲ್ಪಟ್ಟವನಾಗದೆ ನೀನೆ ಆಚರಿಸಿದರೆ ಲೋಕದಲ್ಲಿರುವ ಜನರು ಭೀತರಾಗಿ ಬ್ರಹ್ಮಹತ್ಯಾದಿಗಳಿಗೆ ಪ್ರಾಯಶ್ಚಿತ್ತವಂಗೈವರು; ಇಲ್ಲದಿದ್ದರೆ ಮನಸ್ಸು ಬಂದಂತೆ ನಡೆಯುತ ಭ್ರಷ್ಟರಾಗುವರು" ಎಂದು ನುಡಿದರು.

ಆ ವಚನವನ್ನು ಕೇಳಿ ಬಲರಾಮನು ಅವರನ್ನು ಕುರಿತು "ಎಲೈ ಋಷಿಗಳಿರಾ, ಲೋಕಾನುಗ್ರಹ ಇಚ್ಛೆಯಿಂದ ಸೂತಮುನಿಯ ಸಂಹಾರಕ್ಕೆ ಪ್ರಾಯಶ್ಚಿತ್ತವನ್ನು ನಾನು ಆಚರಿಸುತ್ತೇನೆ; ಪ್ರಾಯಶ್ಚಿತ್ತಕ್ಕೆ ಮುಖ್ಯವಾದ ನಿಯಮಗಳನ್ನು ನನಗೆ ನಿರೂಪಿಸೀ; ಆ ಪ್ರಾಯಶ್ಚಿತ್ತವನ್ನು ನಾನು ಆಚರಿಸುತ್ತೇನೆ! ಎಲೈ ಬ್ರಾಹ್ಮಣರೆ, ಈ

ಸೂತನಿಗೆ ದೀರ್ಘವಾದ ಆಯುಸ್ಸು ಬಲವು ಇಂದ್ರಿಯವು ಇಂದ್ರಿಯ ಶಕ್ತಿಯು ಮತ್ತು ಯಾವ್ಯಾವದು ನಿಮ್ಮಿಂದ ಅಪೇಕ್ಷಿಸಲ್ಪಡುವವೋ ಅವುಗಳನ್ನು ಹೇಳೀ; ನಾನು ಯೋಗಮಾಯೆಯಿಂದ ಅವೆಲ್ಲವನ್ನು ಸಾಧಿಸಿ ಕೊಡುತ್ತೇನೆ!" ಅಂದನು.

ಆ ವಾಕ್ಯವನ್ನು ಕೇಳಿ ಆ ಋಷಿಗಳು "ಎಲೈ ಶ್ರೀರಾಮನೆ, ನಿನ್ನ ಅಸ್ತ್ರವೂ ಸಾಮರ್ಥ್ಯವೂ ಅವುಗಳಿಂದುಂಟಾದ ಮೃತ್ಯುವೂ ನಮ್ಮ ವಚನವೂ ಸತ್ಯವಾಗುವ ರೀತಿ ಮಾಡು" ಅಂದರು.

ಬಲರಾಮನು "ಎಲೈ ಋಷಿಗಳಿರಾ ಕೇಳಿ: ಪುರುಷನು ತಾನೇ ಪುತ್ರರೂಪನಾಗಿ ಜನಿಸುವನೆಂದು ಶೃತಿಯು ಹೇಳುವದಾದ್ದರಿಂದ ಈ ರೋಮಹರ್ಷಣನಿಗೆ ಉತ್ಕೃಷ್ಟವಾದ ಆಯುಸ್ಸೂ ಬಲವೂ ಸಾಮರ್ಥ್ಯವೂ ಉಳ್ಳ ಉಗ್ರಶ್ರವಸ್ಸೆಂಬ ಪುತ್ರನು ಹುಟ್ಟಿ ನಿಮಗೆ ಪುರಾಣಗಳನ್ನು ಹೇಳುವನು! ಎಲೈ ಜ್ಞಾನಿಗಳಿರಾ, ಮತ್ತು ನಿಮಗೆ ಏನು ಇಷ್ಟಾರ್ಥವಿದೆಯೊ ಅದನ್ನು ಹೇಳೀ; ಆ ಇಷ್ಟಾರ್ಥವನ್ನು ಪೂರಿಸುತ್ತೇನೆ; ನಿಮ್ಮ ಇಷ್ಟಾರ್ಥವೆಂಬ ಬ್ರಹ್ಮದಂಡವನ್ನು ಪರಿಗ್ರಹಿಸಿ ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವನ್ನರಿಯದಿರುವ ನನಗೆ ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವನ್ನು ವಿಧಿಸೀ" ಎಂದು ಕೇಳಿದನು.

ಆ ವಚನವನ್ನು ಕೇಳಿ ಆ ಋಷಿಗಳು "ಎಲೈ ಶ್ರೀರಾಮನೆ, ಇಲ್ವಲನೆಂಬ ದಾನವನಿಗೆ ಪುತ್ರನಾಗಿ ಭಯಂಕರನಾದ ಪಲ್ವಲನೆಂಬ ದಾನವನು ಪ್ರತಿ ಪರ್ವಕಾಲದಲ್ಲಿಯೂ ಬಂದು ನಮ್ಮ ಸತ್ರಯಾಗವನ್ನು ಬಾಧಿಸುತ್ತಾನೆ; ಆದಕಾರಣ ಈ ಯಜ್ಞಭೂಮಿಯಲ್ಲಿ ಕೀವು ರಕ್ತ ಮಲ ಮೂತ್ರ ಮದ್ಯ ಮಾಂಸಾದಿಗಳನ್ನು ವರ್ಷಿಸುತಲಿರುವ ಪಾಪಿಷ್ಠನಾದ ಪಲ್ವಲನನ್ನು ಸಂಹರಿಸು; ಅದೇ ನಮಗೆ ಪರಮ ಇಷ್ಟಾರ್ಥವು; ಅದನ್ನು ನೀನು ಸಾಧಿಸು; ಅನಂತರದಲ್ಲಿ ನೀನು ಕಾಮಕ್ರೋಧ ರಹಿತನಾಗಿ ಬಂದು ಸಂವತ್ಸರವು ಈ ಭರತವರ್ಷವನ್ನು ಪ್ರದಕ್ಷಿಣಂಗೈದು ತೀರ್ಥಗಳಲ್ಲಿ ಸ್ನಾನಂಗೈದು ಕುಚ್ಛ್ರಂಗಳನ್ನಾಚರಿಸಿದರೆ ಪರಿಶುದ್ಧನಾಗುತ್ತೀ" ಎಂದು ಹೇಳಿದರು.

---

## ೭೯ನೇ ಅಧ್ಯಾಯ.

### ಬಲರಾಮನು ಪಲ್ವಲನನ್ನು ಸಂಹರಿಸಿದ್ದೂ ದೇಶಸಂಚಾರಮಾಡಿದ್ದು.

ಎಲೈ ಪರೀಕ್ಷಿದ್ರಾಯನೆ, ಈರೀತಿ ಋಷಿಗಳು ಬಲರಾಮನಿಗೆ ಪ್ರಾಯಶ್ಚಿತ್ತವನ್ನು ವಿಧಿಸಿ ಸತ್ರಯಾಗನಿಷ್ಠರಾಗಿರುವ ಸಮಯದಲ್ಲಿ ಪರ್ವಕಾಲವು ಪ್ರಾಪ್ತವಾಯಿತು; ಆಗ ಧೂಳಿಗಳನ್ನು ವರ್ಷಿಸುತ ಭಯಂಕರವಾಗಿ ನಾಲ್ಕುಕಡೆಯಲ್ಲೂ ದುರ್ಗಂಧಯುಕ್ತವಾಗಿ ಪ್ರಚಂಡವಾಯುವು ಬೀಸಿತು; ಅನಂತರದಲ್ಲಿ ಪಲ್ವಲನಿಂದ ಯಜ್ಞಶಾಲೆಯಲ್ಲಿ ಅಶುದ್ಧಪದಾರ್ಥವರ್ಷವು ಕಲ್ಪಿಸಲ್ಪಟ್ಟಿತು; ಆಮೇಲೆ ಶೂಲವನ್ನು ಧರಿಸಿದ ಪಲ್ವಲನು ಅಲ್ಲಿ ಕಾಣಲ್ಪಟ್ಟನು; ಮಹತ್ತಾದ ಶರೀರವುಳ್ಳವನಾಗಿ ಶೀಳಲ್ಪಟ್ಟ ಅಂಜನಸಮೂಹವಂತೆ ನೀಲವರ್ಣಯುಕ್ತನಾಗಿ ತಪಿಸಲ್ಪಟ್ಟ ತಾಂಬ್ರದಂತೆ ಕೆಂಪಾಗಿರುವ ಶಿಖೆಯೂ ಗಡ್ಡಮೀಶೆಗಳೂ ಉಳ್ಳವನಾಗಿ ಕೋರೆದಾಡೆಗಳಿಂದಲೂ ಭಯಂಕರವಾದ ಹುಬ್ಬುಗಂಟುಗಳೊಡನೆಯೂ ಯುಕ್ತವಾದ ಮುಖವುಳ್ಳವನಾದ ಪಲ್ವಲನನ್ನು ನೋಡಿ ಬಲರಾಮನು ಶತ್ರುಸಂಹಾರಕವಾದ ಮುಸಲಾಯುಧವನ್ನೂ ದೈತ್ಯಸಂಹಾರಕವಾದ ಹಲಾಯುಧವನ್ನೂ ಸ್ಮರಿಸಿ ಆ ಎರಡಾಯುಧಗಳೂ ಶೀಘ್ರದಿಂದ ಬಂದು ಆತನ ಸಮೀಪದಲ್ಲಿ ನಿಲ್ಲಲು ಹಲಾಯುಧದ ಅಗ್ರದಿಂದ ಅಂತರಿಕ್ಷದಲ್ಲಿ ಸಂಚರಿಸುತಿದ್ದ ಬ್ರಾಹ್ಮಣಶತ್ರುವಾದ ಪಲ್ವಲನನ್ನು ಶೆಳೆದು ಮುಸಲಾಯುಧದಿಂದ ಅತಿ ಕೋಪಯುಕ್ತನಾಗಿ ಶಿರಸ್ಸಿನಲ್ಲಿ ತಾಡಿಸಿದನು; ಪಲ್ವಲನು ಮುಸಲಾಯುಧದಿಂದ ಭೇದಿಸಲ್ಪಟ್ಟ ಲಲಾಟವುಳ್ಳವನಾಗಿ ರಕ್ತವನ್ನು ಸೋರಿಸುತ ಆ ರಕ್ತದಿಂದ ಕೆಂಪಾದ ಶರೀರವುಳ್ಳವನಾಗಿ ಗೈರಿಕಾದಿ ಧಾತುಗಳಿಂದ ಕೆಂಪಾದ ಪರ್ವತವು ವಜ್ರಾಯುಧದಿಂದ ಪ್ರಹರಿಸಲ್ಪಟ್ಟು ಕೆಳಕ್ಕೆ ಬೀಳುವ ರೀತಿಯಲ್ಲಿ ಆರ್ತಸ್ವರವನ್ನು ಮಾಡುತ ಭೂಮಿಯಲ್ಲಿ ಬಿದ್ದನು! ಅದನ್ನು ನೋಡಿ ಆ ಋಷಿಗಳು ಬಲರಾಮನನ್ನು

ಸ್ತೋತ್ರಂಗೈದು ಯಥಾರ್ಥವಾದ ಆಶೀರ್ವಾದಗಳನ್ನು ಪ್ರಯೋಗಿಸಿ ವೃತ್ರಸಂಹಾರಕನಾದ ಇಂದ್ರನಿಗೆ ದೇವತೆಗಳು ಅಭಿಷೇಕಂಗೈದ ರೀತಿಯಲ್ಲಿ ಬಲ್ವಲಸಂಹಾರಕನಾದ ಬಲರಾಮನಿಗೆ ಅಭಿಷೇಕಂಗೈದು ಲಕ್ಷ್ಮಿಗೆ ಆವಾಸಸ್ಥಾನವಾಗಿ ಎಂದಿಗೂ ಕಂದದಿರುವ ಕಮಲಗಳುಳ್ಳ ವೈಜಯಂತೀ ಮಾಲೆಯನ್ನೂ ದಿವ್ಯವಸ್ತ್ರಗಳನ್ನೂ ದಿವ್ಯಾಭರಣಗಳನ್ನೂ ಕೊಟ್ಟರು; ಅನಂತರದಲ್ಲಿ ಬಲರಾಮನು ಆ ಮುನಿಗಳಿಂದ ಆಜ್ಞಾಪಿಸಲ್ಪಟ್ಟವನಾಗಿ ಬ್ರಾಹ್ಮಣರೊಡಗೂಡಿ ಕೌಸಿಕಿಯೆಂಬ ನದಿಯನ್ನೈದಿ ಆ ನದಿಯಲ್ಲಿ ಸ್ನಾನಂಗೈದು ಆಮೇಲೆ ಯಾವ ಸರಸ್ಸಿನಿಂದ ಸರಯೂ ಎಂಬ ನದಿಯು ಹುಟ್ಟಿ ಪ್ರವಹಿಸುತಿದೆಯೋ ಅಂಥಾ ಮಾನಸಸರಸ್ಸನ್ನೈದಿ ಅನಂತರದಲ್ಲಿ ಸರಯೂನದಿಯನ್ನನುಸರಿಸಿಕೊಂಡು ಪ್ರಯಾಗಕ್ಷೇತ್ರವನ್ನೈದಿ ತ್ರಿವೇಣಿಯಲ್ಲಿ ಸ್ನಾನಂಗೈದು ದೇವರ್ಷಿ ಪಿತೃತರ್ಪಣವನ್ನು ಮಾಡಿ ಪುಲಹಮುನಿಯ ಆಶ್ರಮವನ್ನೈದಿ ಗೋಮತಿಯಲ್ಲಿಯೂ ಗಂಡಕಿಯಲ್ಲಿಯೂ ವಿಪಾಶೆಯೆಂಬ ನದಿಯಲ್ಲಿಯೂ ಶೋಣಭದ್ರೆಯಲ್ಲಿಯೂ ಸ್ನಾನಂಗೈದು ಗಯಾಕ್ಷೇತ್ರವನ್ನೈದಿ ಅಲ್ಲಿ ಪಿತೃಗಳಿಗೆ ಮೋಕ್ಷಸಾಧಕವಾದ ಕರ್ಮವನ್ನು ಮಾಡಿ ಅಲ್ಲಿಂದ ಗಂಗಾ ಸಮುದ್ರಸಂಗಮವನ್ನೈದಿ ಆ ಸಂಗಮತೀರ್ಥದಲ್ಲಿ ಸ್ನಾನಂಗೈದು ಸಮುದ್ರತೀರದಲ್ಲಿರುವ ಮಹೇಂದ್ರಪರ್ವತದಲ್ಲಿ ಪರಶುರಾಮನನ್ನು ಕಂಡು ಅಭಿವಾದನಂಗೈದು ಅಲ್ಲಿಂದ ಏಳುಪ್ರಕಾರವಾಗಿ ಪ್ರವಹಿಸುವ ಗೋದಾವರಿಯನ್ನೂ ಪಿನಾಕಿನಿಯನ್ನೂ ಪಂಪಾಸರಸ್ಸನ್ನೂ ಭೀಮರತಿಯನ್ನೂ ಐದಿ ಆ ಮಹಾನದಿಗಳಲ್ಲಿ ಸ್ನಾನಾದಿಗಳನ್ನು ಮಾಡಿ ಅನಂತರದಲ್ಲಿ ಸ್ಕಂದಪರ್ವತವನ್ನೈದಿ ಅಲ್ಲಿ ಕುಮಾರಸ್ವಾಮಿಯ ದರ್ಶನಂಗೈದು ಅಲ್ಲಿಂದ ಪರಮೇಶ್ವರನಿಗೆ ಆವಾಸಸ್ಥಾನವಾದ ಶ್ರೀಶೈಲಪರ್ವತವನ್ನೈದಿ ಅಲ್ಲಿಂದ ದ್ರಾವಿಡದೇಶಗಳಲ್ಲಿ ಮಹಾ ಪುಣ್ಯಕರವಾದ ವೆಂಕಟಾದ್ರಿಯನ್ನು ನೋಡಿ ಅಲ್ಲಿಂದ ಕಾಮಗೋಷ್ಠಿಯೆಂಬ ಪುರವನ್ನೂ ಕಾಂಚೀಪುರವನ್ನೂ ಐದಿ ಅಲ್ಲಿಂದ ಸರ್ವಶ್ರೇಷ್ಠವಾದ ಕಾವೇರಿಯನ್ನೈಧಿ ಯಾವ ಕ್ಷೇತ್ರದಲ್ಲಿ ಶ್ರೀಹರಿಯು ಪ್ರತ್ಯಕ್ಷನಾಗಿರುವನೋ ಅಂಥಾ ಪುಣ್ಯಕರವಾದ ಶ್ರೀರಂಗವನ್ನೈದಿ ಅಲ್ಲಿಂದ ವಿಷ್ಣುಕ್ಷೇತ್ರವಾದ ವೃಷಭಾದ್ರಿಯನ್ನೂ ದಕ್ಷಿಣದೇಶದಲ್ಲಿರುವ ಮಧುರಾಪುರವನ್ನೂ ಸಹಾ ಐದಿ ಅಲ್ಲಿಂದ ಮಹಾ ಪಾತಕಗಳನ್ನು ಪರಿಹರಿಸುವ ರಾಮಸೇತುವನ್ನೈದಿ ಆ ಸೇತುಕ್ಷೇತ್ರದಲ್ಲಿ ಬ್ರಾಹ್ಮಣರಿಗೆ ಹತ್ತು ಸಾವಿರ ಗೋವುಗಳನ್ನಿತ್ತು ಅಲ್ಲಿಂದ ಕೃತಮಾಲಾ ನದಿಯನ್ನೂ ತಾಮ್ರಪರ್ಣಿಯನ್ನೂ ಮಲಯವೆಂಬ ಕುಲಪರ್ವತವನ್ನೂ ಐದಿ ಮಲಯಪರ್ವತದಲ್ಲಿರುವ ಅಗಸ್ತ್ಯಮುನಿಗೆ ಅಭಿವಾದನಪೂರ್ವಕವಾಗಿ ನಮಸ್ಕಾರಂಗೈದು ಅಗಸ್ತ್ಯಮುನಿಯಿಂದ ಪ್ರಯೋಗಿಸಲ್ಪಟ್ಟ ಆಶೀರ್ವಾದಗಳನ್ನು ಪರಿಗ್ರಹಿಸಿ ಆ ಮುನಿಯಿಂದ ಆಜ್ಞಾಪಿಸಲ್ಪಟ್ಟವನಾಗಿ ದಕ್ಷಿಣಸಮುದ್ರವನ್ನೈದಿ ಆ ಪ್ರದೇಶದಲ್ಲಿರುವ ಕನ್ಯೆಯೆಂಬ ನಾಮಧೇಯವುಳ್ಳ ದುರ್ಗಾದೇವಿಯ ದರ್ಶನಂಗೈದು ಅಲ್ಲಿಂದ ಯಾವ ಕ್ಷೇತ್ರದಲ್ಲಿ ಶ್ರೀವಿಷ್ಣುವು ಪ್ರತ್ಯಕ್ಷನಾಗಿರುವನೊ ಅಂಥಾ ಅನಂತಶಯನವನ್ನೈದಿ ಅಲ್ಲಿರುವ ಉತ್ತಮವಾದ ಪಂಚಾಪ್ಸರಸ್ಸೆಂಬ ತೀರ್ಥದಲ್ಲಿ ಸ್ನಾನಂಗೈದು ಬ್ರಾಹ್ಮಣರಿಗೆ ಹತ್ತು ಸಾವಿರ ಗೋವುಗಳನ್ನಿತ್ತು ಅಲ್ಲಿಂದ ಕೇರಳದೇಶಗಳನ್ನೂ ತ್ರಿಗರ್ತದೇಶಗಳನ್ನೂ ದಾಟಿ ಯಾವ ಕ್ಷೇತ್ರದಲ್ಲಿ ಶ್ರೀಪರಮೇಶ್ವರನು ಪ್ರತ್ಯಕ್ಷನಾಗಿರುವನೋ ಅಂಥಾ ಗೋಕರ್ಣವೆಂಬ ಶಿವಕ್ಷೇತ್ರವನ್ನೈದಿ ಅಲ್ಲಿ ಗೋಕರ್ಣೇಶ್ವರನನ್ನೂ ದ್ವೈಪಾಯನಿಯೆಂಬ ಪಾರ್ವತಿಯನ್ನೂ ದರ್ಶನಂಗೈದು ಶೂರ್ಪಾರಕವೆಂಬ ಸ್ಥಾನವನ್ನೈದಿ ಅಲ್ಲಿಂದ ತಾಪೀ ಪಯೋಷ್ಣೀ ನಿರ್ವಿಂದೆಗಳೆಂಬ ನದಿಗಳಲ್ಲಿ ಆಚಮನಂಗೈದು ಅನಂತರದಲ್ಲಿ ದಂಡಕಾರಣ್ಯವನ್ನು ಪ್ರವೇಶಿಸಿ ಅಲ್ಲಿಂದ ಯಾವ ನದೀತೀರದಲ್ಲಿ ಮಾಹಿಷ್ಮತೀ ಎಂಬ ಪಟ್ಟಣವಿರುವದೊ ಅಂಥಾ ನರ್ಮದಾನದಿಯನ್ನೈದಿ ಮನುತೀರ್ಥದಲ್ಲಿ ಆಚಮನಂಗೈದು ಪುನಃ ಪ್ರಭಾಸತೀರ್ಥವನ್ನೈದಿ ಆ ಕ್ಷೇತ್ರದಲ್ಲಿ ಕೌರವ ಪಾಂಡವರ ಯುದ್ಧದಲ್ಲಿ ಸಮಸ್ತ ಭೂಪತಿಗಳೂ ಹತರಾದರೆಂದು ಬ್ರಾಹ್ಮಣರಿಂದ ಹೇಳಲ್ಪಟ್ಟ ವೃತ್ತಾಂತವನ್ನುಕೇಳಿ ಭೂಭಾರವು ಪರಿಹರಿಸಲ್ಪಟ್ಟಿತೆಂದು ತಿಳಿದು ಆಗ ರಣದಲ್ಲಿ ಗದೆಗಳಿಂದ ಪರಸ್ಪರವಾಗಿ ಯುದ್ಧಂಗೈಯುತಲಿದ್ದ ಭೀಮ ದುರ್ಯೋಧನರನ್ನು ಯುದ್ಧವು ಸಾಕೆಂದು ತಡೆಯಲೋಸುಗ ಕುರುಕ್ಷೇತ್ರವನ್ನೈದಿದನು; ಆಗ ಧರ್ಮರಾಯನೂ ನಕುಲ ಸಹದೇವರೂ ಶ್ರೀಕೃಷ್ಣಾರ್ಜುನರೂ ಬಲರಾಮನನ್ನು ನೋಡಿ ಅಭಿವಾದನಂಗೈದು ಆತನು ಯಾವ ಅರ್ಥವನ್ನು ಹೇಳುವನೊ ಎಂಬ ಭಯದಿಂದ ಸುಮ್ಮನಿದ್ದರು;

ಬಲರಾಮನು ಗದೆಗಳನ್ನಿಡಿದು ಯುದ್ಧಸನ್ನದ್ಧರಾಗಿ ಜಯವನ್ನಪೇಕ್ಷಿಸುತ ವಿಚಿತ್ರಗಳಾದ ಮಂಡಲಗತಿಗಳಿಂದ ರಣದಲ್ಲಿ ಸಂಚರಿಸುತಿದ್ದ ಭೀಮ ದುರ್ಯೋಧನರನ್ನು ನೋಡಿ "ಎಲೈ ಅರಸಾದ ದುರ್ಯೋಧನನೆ, ಎಲೈ ಭೀಮನೆ ಕೇಳಿ: ನೀವಿಬ್ಬರು ಸಮವಾದ ಬಲವುಳ್ಳವರು ; ಮತ್ತು ವೀರರಾದವರು ; ನಿಮ್ಮಿಬ್ಬರಲ್ಲಿ ಭೀಮನು ನನ್ನ ಪ್ರಾಣಕ್ಕಿಂತಲು ಪ್ರಿಯನಾದವನು ; ದುರ್ಯೋಧನನು ನನ್ನ ಶಿಷ್ಯರಲ್ಲಿ ಅತಿ ಇಷ್ಟನಾದವನು ; ಸಮವಾದ ಪರಾಕ್ರಮವುಳ್ಳ ನಿಮ್ಮಿಬ್ಬರಲ್ಲಿ ಒಬ್ಬನಿಗೆ ಈ ಯುದ್ಧದಲ್ಲಿ ಜಯವಾದರೂ ಪರಾಜಯವಾದರೂ ಕಾಣಲ್ಪಡುವದಿಲ್ಲ ; ಆದಕಾರಣ ನಿಷ್ಫಲವಾದ ಈ ಯುದ್ಧವು ಸಾಕು" ಎಂದು ನುಡಿದನು.

ಈರೀತಿ ಬಲರಾಮನಿಂದ ನಿರೂಪಿಸಲ್ಪಟ್ಟ ಇಷ್ಟವಾಕ್ಯವನ್ನು ಕೇಳಿ ಭೀಮ ದುರ್ಯೋಧನರು ಪರಸ್ಪರವಾಗಿ ಹೇಳಲ್ಪಟ್ಟ ದುರ್ವಾಕ್ಯಗಳನ್ನೂ ಪೂರ್ವದಲ್ಲಿ ಮಾಡಲ್ಪಟ್ಟ ದುಷ್ಕೃತ್ಯಗಳನ್ನೂ ಸ್ಮರಿಸುತ ವೈರದಿಂದ ಬದ್ಧರಾಗಿ ಆತನ ವಚನವನ್ನಂಗೀಕರಿಸದಿರಲು ಬಲರಾಮನು ಅವರು ತನ್ನ ವಚನವನ್ನಂಗೀಕರಿಸದೆ ಯುದ್ಧಸನ್ನದ್ಧರಾದದ್ದು ಅವರ ಪ್ರಾಚೀನಕರ್ಮವೆಂದು ತಿಳಿದು ದ್ವಾರಕಾಪುರವನ್ನೈದಿ ಸಂತುಷ್ಟರಾದ ಉಗ್ರಸೇನನು ಮೊದಲಾದ ಬಂಧುಗಳೊಡನೆ ಕೂಡಿದ್ದು ತಿರಿಗೂ ನೈಮಿಶಾರಣ್ಯವನ್ನೈದಿ ಯಜ್ಞಮೂರ್ತಿಯಾಗಿ ಸಮಸ್ತ ಯುದ್ಧವ್ಯಾಪಾರವನ್ನು ಬಿಟ್ಟಿದ್ದ ತನ್ನಿಂದ ನೈಮಿಶಾರಣ್ಯವಾಸಿಗಳಾದ ಋಷಿಗಳು ಸಮಸ್ತ ಕ್ರತುಗಳನ್ನು ಮಾಡಿಸಲು ಅಧಿಷ್ಠಾನರೂಪನಾದ ಆತ್ಮನಲ್ಲಿ ಪ್ರಪಂಚವನ್ನೂ ಪ್ರಪಂಚದಲ್ಲಿ ಸರ್ವತ್ರ ಅನುವರ್ತಿಸಿಕ್ಕೊಂಡಿರುವ ಆತ್ಮನನ್ನೂ ನೋಡುವಂಥಾ ಪರಿಶುದ್ಧವಾದ ತತ್ವಜ್ಞಾನವನ್ನು ಅವರಿಗೆ ಉಪದೇಶಂಗೈದು ಅನಂತರದಲ್ಲಿ ಜ್ಞಾತಿ ಬಂಧು ಮಿತ್ರರಿಂದ ಸುತ್ತಿಕೊಳ್ಳಲ್ಪಟ್ಟವನಾಗಿ ತನ್ನ ಪತ್ನಿಯೊಡನೆ ಅವಭೃತಸ್ನಾನಂಗೈದು ದಿವ್ಯವಸ್ತ್ರಗಳನ್ನುಟ್ಟು ದಿವ್ಯಾಲಂಕಾರಭೂಷಿತನಾಗಿ ಚಂದ್ರಿಕೆಯೊಡನೆ ಚಂದ್ರನಂತೆ ತನ್ನ ಪತ್ನಿಯೊಡನೆ ಪ್ರಕಾಶಿಸಿದನು ! ಎಲೈ ಅರಸೇ ಕೇಳು : ಬಲವಂತನಾಗಿ ಅನಂತನಾಗಿ ಅಪ್ರಮೇಯನಾಗಿ ಮಾಯೆಯಿಂದ ಮನುಷ್ಯರೂಪವನ್ನು ತಾಳಿದ ಬಲರಾಮನ ಸಂಖ್ಯೆಯಿಲ್ಲದ ದಿವ್ಯಚರಿತ್ರೆಗಳು ಅನೇಕವಾಗಿರುವವು ; ಯಾವ ಪುರುಷನು ಆಶ್ಚರ್ಯಕರವಾದ ವ್ಯಾಪಾರಗಳುಳ್ಳ ಶ್ರೀರಾಮನ ದಿವ್ಯಚರಿತ್ರೆಗಳನ್ನು ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಸ್ಮರಿಸುವನೋ ಆ ಪುರುಷನು ಶ್ರೀಹರಿಗೆ ಅತ್ಯಂತ ಪ್ರೀತಿಪಾತ್ರನಾಗುವನು.

---

## ೮೦ನೇ ಅಧ್ಯಾಯ.

### ಕುಚೇಲೋಪಾಖ್ಯಾನ.

[ಈ ಪ್ರಕಾರವಾಗಿ ನುಡಿದ ಶುಕಮುನಿಯ ವಾಕ್ಯವನ್ನು ಕೇಳಿ ಪರೀಕ್ಷಿದ್ರಾಯನು ಆತನನ್ನು ಕುರಿತು—ಎಲೈ ಸಮರ್ಥನಾದ ಶುಕಮುನಿಯೆ, ಮಹಾತ್ಮನಾಗಿ ಅಮಿತ ಸಾಮರ್ಥ್ಯವುಳ್ಳ ಶ್ರೀಕೃಷ್ಣನ ಚರಿತ್ರಗಳನ್ಯಾವವುಂಟೋ ಅವುಗಳನ್ನು ನಾನು ಶ್ರವಣಂಗೈಯಲಿಚ್ಛೈಸುತ್ತೇನೆ! ಎಲೈ ಶುಕಮುನಿಯೆ, ಮನ್ಮಥನ ಬಾಣಗಳಿಂದ ಅತ್ಯಂತ ದುಃಖವನ್ನೈದಿ ಪಶ್ಚಾತಪ್ತನಾಗಿಯೂ ಸಂಸಾರಜ್ಞನಾಗಿಯೂ ಇರುವ ಪುರುಷನು ಶ್ರೀಹರಿಯ ಮನೋಹರಗಳಾಗಿ ವಿಷಯವೈರಾಗ್ಯಗಳಿಗೆ ಸಾಧನಗಳಾದ ಕಥೆಗಳನ್ನು ಬಂದುಬಾರಿ ಶ್ರವಣಂಗೈದು ಸಾಕೆಂದು ತೃಪ್ತಿಯನ್ನು ಪಡೆಯನು ; ಶ್ರೀಹರಿಯ ಗುಣಗಳನ್ನು ಸ್ತುತಿಸುವದೇ ಉತ್ಕೃಷ್ಟವಾದ ವಾಕ್ಕು ; ಶ್ರೀಹರಿ ಪೂಜೆಯಂಗೈವಂಥಾವೇ ಉತ್ತಮವಾದ ಹಸ್ತಗಳು ; ಸ್ಥಾವರಜಂಗಮರೂಪಗಳಾದ ಸಮಸ್ತ ಭೂತಗಳಿಗೆಲ್ಲಯೂ ಅಂತರ್ಯಾಮಿ ರೂಪದಿಂದಿರುವ ಶ್ರೀಹರಿಯನ್ನು ಸ್ಮರಿಸುವದೇ ಶ್ರೇಷ್ಠವಾದ ಮನಸ್ಸು ; ವಾಸುದೇವನ ಪುಣ್ಯಕರಗಳಾದ ಕಥೆಗಳನ್ನು ಕೇಳುವದೇ ಧನ್ಯವಾದ ಶ್ರೋತ್ರವು ; ಸ್ಥಾವರಗಳೆಂದೂ ಜಂಗಮಗಳೆಂದೂ ಉಭಯರೂಪವಾಗಿರುವ ಜಗತ್ತೇ ಶ್ರೀಹರಿಯ ಮೂರ್ತಿಯೆಂದು ತಿಳಿದು ನಮಸ್ಕರಿಸುವದೇ ಉತ್ತಮವಾದ ಶಿರಸ್ಸು ; ಜಗತ್ತೇ ಶ್ರೀಹರಿಯ ಮೂರ್ತಿ

ಯೆಂದು ನೋಡುವದೇ ಉತ್ತಮವಾದ ನೇತ್ರವು; ಶ್ರೀಹರಿ ಭಕ್ತರ ಪಾದೋದಕವನ್ನು ಧರಿಸುವಂಥಾವೇ ಉತ್ತಮಂಗಳಾದ ಅಂಗಗಳು—ಎಂದು ನುಡಿದನು.]

ಈ ರೀತಿ ಪರೀಕ್ಷಿದ್ರಾಯನಿಂದ ಪ್ರಶ್ನೆಗೈಯಲ್ಪಟ್ಟವನಾಗಿ ಸರ್ವಜ್ಞನಾದ ಶುಕಮುನಿಯು ಭಗವಂತನಾದ ಶ್ರೀವಾಸುದೇವನಲ್ಲಿ ಮನಸ್ಸನ್ನು ಸಮರ್ಪಿಸಿ ಆ ರಾಯನನ್ನು ಕುರಿತು—ಎಲೈ ಪರೀಕ್ಷಿದ್ರಾಯನೆ, ಪೂರ್ವದಲ್ಲಿ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾಗಿ ವಿಷಯಭೋಗಗಳಲ್ಲಿ ವಿರಕ್ತನಾಗಿ ಉಪಶಾಂತಿಯುಕ್ತವಾದ ಮನಸ್ಸುಳ್ಳವನಾಗಿ ಜಿತೇಂದ್ರಿಯನಾಗಿ ಗೃಹಸ್ಥಾಶ್ರಮ ಧರ್ಮದಲ್ಲಿರುವವನಾದಾಗ್ಯೂ ದೈವಯೋಗದಿಂದ ಪ್ರಾಪ್ತವಾದ ಪದಾರ್ಥದಿಂದ ಜೀವಿಸುವವನಾಗಿ ಶ್ರೀಕೃಷ್ಣನಿಗೆ ಮಿತ್ರನಾಗಿದ್ದ ಶ್ರೀರಾಮನೆಂಬ ಒಬ್ಬ ಬ್ರಾಹ್ಮಣನಿದ್ದನು ; ಕುಚೇಲನೆಂಬ ನಾಮಧೇಯಾಂತರವುಳ್ಳ ಆತನಿಗೆ ಅದೇರೀತಿ ವೈರಾಗ್ಯಾದಿ ಸುಗುಣಗಳುಳ್ಳ ಒಬ್ಬ ಪತ್ನಿ ಇದ್ದಳು ; ಒಂದು ಸಮಯದಲ್ಲಿ ಪತಿವ್ರತೆಯಾದ ಆ ಕುಚೇಲನ ಪತ್ನಿಯು ದೈವಯೋಗದಿಂದ ಪ್ರಾಪ್ತವಾದ ಸ್ವಲ್ಪವಾದ ಭೋಜನದ್ರವ್ಯವನ್ನು ಪತಿಯ ಎಲೆಯಲ್ಲಿ ಬಡಿಸಿ ತಾನು ಕ್ಷುತ್ತಿನಿಂದ ಜೀರ್ಣಳಾಗಿರುವದರಿಂದ ಪತಿಯನ್ನು ಭೋಗಪಡಿಸುವದಕ್ಕೆ ಅಸಮರ್ಥಳಾಗಿ ಭಯದಿಂದ ಕಂಪಿಸುತ ದರಿದ್ರನಾದ ಆ ಕುಚೇಲನನ್ನೈದಿ ಬಣಗಿದ ಮುಖದಿಂದ ಆತನನ್ನು ಕುರಿತು “ ಎಲೈ ಬ್ರಾಹ್ಮಣೋತ್ತಮನೆ, ಸಾಕ್ಷಾತ್ ಲಕ್ಷ್ಮೀಪತಿಯಾಗಿ ಬ್ರಾಹ್ಮಣಪ್ರಿಯನಾಗಿ ಶರಣುಹೊಂದಲು ಯೋಗ್ಯನಾಗಿ ಯಾದವರಿಗೆ ಅಧಿಪತಿಯಾದ ಶ್ರೀಕೃಷ್ಣನು ಪೂಜ್ಯನಾದ ನಿನಗೆ ಮಿತ್ರನಾಗಿಧಾನೆ ! ಎಲೈ ಮಹಾತ್ಮನೆ, ಸಜ್ಜನರಿಗೆ ಪರಮಗತಿ ರೂಪನಾದ ಶ್ರೀಕೃಷ್ಣನನ್ನೈದು ; ಆತನು ಕುಟುಂಬಯುಕ್ತನಾಗಿ ದೀನನಾಗಿರುವ ನಿನಗೆ ಬಹು ದ್ರವ್ಯವನ್ನು ಕೊಡುವನು ; ಭೋಜ ವೃಷ್ಣಿ ಅಂಧಕರೆಲ್ಲರಿಗು ನಿಯಾಮಕನಾದ ಶ್ರೀಕೃಷ್ಣನು ಈಗ ದ್ವಾರಕಾಪುರದಲ್ಲಿಧಾನೆ ; ಆತನ ಬಳಿಗೆ ಹೋಗು ; ಆತನು ತನ್ನ ಪಾದಾರವಿಂದವನ್ನು ಸ್ಮರಿಸುವ ಪುರುಷನಿಗೆ ತನ್ನನ್ನೇ ಕೊಡುವನು ; ಈರೀತಿ ಇರುವಲ್ಲಿ ಲೋಕಗುರುವಾದ ಶ್ರೀಕೃಷ್ಣನು ತನ್ನನ್ನು ಭಜಿಸುವ ಪುರುಷರಿಗೆ ಪರಿಣಾಮಕಾಲದಲ್ಲಿ ನಿಸ್ಸಾರಗಳಾಗಿ ಅತ್ಯಂತ ಇಷ್ಟಗಳಾಗದಿರುವ ಅರ್ಥ ಕಾಮಗಳನ್ನು ಕೊಡುವನೆಂದು ಹೇಳತಕ್ಕದ್ದೇನು ! ” ಎಂದು ನುಡಿದನು.

ಎಲೈ ಅರಸೆ, ಕೇಳು : ಕುಚೇಲನು ಈರೀತಿ ಪತ್ನಿಯಿಂದ ಮೃದುವಾಗಿ ಬಹು ಪ್ರಕಾರಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ಪುರುಷೋತ್ತಮನಾದ ಶ್ರೀಕೃಷ್ಣನ ದರ್ಶನಂಗೈವದೇ ತನಗೆ ಉತ್ಕೃಷ್ಟವಾದ ಲಾಭವೆಂದು ಮನಸ್ಸಿನಲ್ಲಿ ಚಿಂತಿಸಿ ದ್ವಾರಕಾಪುರವನ್ನೈದಲು ಸಮ್ಮತಿಸಿ ತನ್ನ ಪತ್ನಿಯನ್ನು ಕುರಿತು “ ಎಲೇ ಭಾಗ್ಯವತಿಯೆ, ಗೃಹದಲ್ಲಿ ಶ್ರೀಕೃಷ್ಣನಿಗೆ ಉಪಹಾರವಾಗುವ ವಸ್ತುವು ಯಾವದಾದರೂ ಇದ್ದರೆ ಕೊಡು ” ಎಂದು ಕೇಳಿದನು.

ಆ ಬ್ರಾಹ್ಮಣಪತ್ನಿಯು ಆತನ ವಚನವನ್ನು ಕೇಳಿ ಗೃಹದಲ್ಲಿ ಯಾವದೂ ಇಲ್ಲದಕಾರಣ ಒಬ್ಬ ಬ್ರಾಹ್ಮಣನ ಬಳಿಯಿಂದ ನಾಲ್ಕು ಹಿಡಿ ಅವಲಕ್ಕಿಯನ್ನು ಯಾಚಿಸಿ ತಂದು ಒಂದು ಜೀರ್ಣವಸ್ತ್ರದಲ್ಲಿ ಕಟ್ಟಿ ಅದನ್ನು ಶ್ರೀಕೃಷ್ಣನಿಗೆ ಸಮರ್ಪಿಸಲು ಪತಿಗೆ ಕೊಟ್ಟಳು ; ಕುಚೇಲನು ಆ ಅವಲಕ್ಕಿಯನ್ನು ತೆಗೆದುಕೊಂಡು ದ್ವಾರಕಾಪುರವನ್ನೈದಿ ಬ್ರಾಹ್ಮಣರ ಯುಕ್ತನಾಗಿ ತನಗೆ ಶ್ರೀಕೃಷ್ಣನ ದರ್ಶನವು ಎಂತುಂಟಾಗುವದೆಂದು ಚಿಂತಿಸುತ ನಗರರಕ್ಷಣಾರ್ಥವಾಗಿದ್ದ ಮೂರು ಸೇನಾಸಮೂಹಗಳನ್ನೂ ಮೂರು ತೊಟ್ಟಿಗಳನ್ನೂ ಅತಿಕ್ರಮಿಸಿ ನಡೆದು ವಿಚ್ಛೇದವಿಲ್ಲದಂತೆ ಧರ್ಮನಿರತರಾಗಿರುವ ಯಾದವರೂ ಪ್ರವೇಶಿಸಲಶಕ್ಯವಾದ ಗೃಹಗಳಲ್ಲಿ ಶ್ರೀಕೃಷ್ಣನ ಹದಿನಾರು ಸಾವಿರ ಮಂದಿ ಪತ್ನಿಯರ ಗೃಹಗಳಲ್ಲಿ ಕಾಂತಿಯುಕ್ತವಾದ ಒಂದು ಗೃಹವನ್ನು ಪ್ರವೇಶಿಸಿ ಬ್ರಹ್ಮಾನಂದವನ್ನೈದಿದನು ; ಆಗ ಶ್ರೀ ರುಕ್ಮಿಣೀದೇವಿಯೊಡನೆ ಮಂಚದಲ್ಲಿ ಕುಳಿತಿದ್ದ ಶ್ರೀಕೃಷ್ಣನು ದೂರದಿಂದಲೇ ಕುಚೇಲನನ್ನು ನೋಡಿ ಶೀಘ್ರದಿಂದೆದ್ದು ಪ್ರತ್ಯುತ್ಥಾನಂಗೈದು ಸಂತೋಷದಿಂದ ಭುಜಗಳಿಂದ ಆ ಬ್ರಾಹ್ಮಣನನ್ನಾಲಿಂಗನಂಗೈದು ಮಿತ್ರನಾಗಿ ಅತಿ ಪ್ರಿಯನಾದ ಕುಚೇಲನ ಅಂಗಸ್ಪರ್ಶದಿಂದ ಪರಮಾನಂದಭರಿತನಾಗಿ ಸಂತೋಷಪಡುತ ನೇತ್ರಗಳಿಂದ ಆನಂದಬಾಷ್ಪಗಳನ್ನು ಬಿಡುತ ಕುಚೇಲನನ್ನು ತನ್ನ ಮಂಚದಲ್ಲಿ ಕುಳ್ಳಿರಿಸಿ ಮಿತ್ರನಾದ ಆ ದ್ವಿಜನಿಗೆ ಉಪಹಾರವನ್ನು ಸಮ

ರ್ಪಿಸಿ ತಾನು ಜಗತ್ಪಾವನನಾದಾಗ್ಯೂ ಅವನಿಗೆ ಪಾದಪ್ರಕ್ಷಾಳನಗೈದು ಆ ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಿ ಚಂದನ ಅಗರು ಕುಂಕುಮಗಳೊಡನೆ ಮಿಶ್ರವಾದ ದಿವ್ಯ ಗಂಧದಿಂದ ಆತನಿಗೆ ಅನುಲೇಪನಗೈದು ಘಮಘಮಿಸುತಲಿರುವ ದಿವ್ಯ ಧೂಪಗಳಿಂದಲೂ ಉತ್ಕೃಷ್ಟಗಳಾದ ದೀಪಗಳಿಂದಲೂ ಸಂತೋಷದಿಂದ ಪೂಜೆಯನ್ನು ಮಾಡಿ ತಾಂಬೂಲವನ್ನೂ ಬಂದು ಗೋವನ್ನೂ ಸಮರ್ಪಿಸಿ ಕುಶಲಪ್ರಶ್ನೆಯಗೈದನು ; ಆ ಸಮಯದಲ್ಲಿ ರುಕ್ಮಿಣೀದೇವಿಯು ಮಲಿನನಾಗಿ ಕೃಶನಾಗಿ ನರಗಳಿಂದ ವ್ಯಾಪಿಸಲ್ಪಟ್ಟವನಾಗಿದ್ದ ಕುಚೇಲನನ್ನು ಚಾಮರಗಳಿಂದಲೂ ಬೀಸಣಿಗೆಯಿಂದಲೂ ಬೀಸುತ ಉಪಚಾರಗೈದಳು ; ಆ ಅಂತಃಪುರದಲ್ಲಿದ್ದ ಜನರು ನಿರ್ಮಲವಾದ ಕೀರ್ತಿಯುಳ್ಳ ಶ್ರೀಕೃಷ್ಣನಿಂದ ಅತಿ ಪ್ರೀತಿಯಿಂದ ಪೂಜಿಸಲ್ಪಟ್ಟವನಾಗಿ ಮಲಿನನಾಗಿದ್ದ ಆ ಬ್ರಾಹ್ಮಣನನ್ನು ನೋಡಿ ಆಶ್ಚರ್ಯಪಡುತ ಯಾವ ಕಾರಣದಿಂದ ಆ ಬ್ರಾಹ್ಮಣನು ತ್ರಿಲೋಕಗುರುವಾದ ಶ್ರೀನಿವಾಸನಿಂದ ಆ ರೀತಿ ಪೂಜಿಸಲ್ಪಟ್ಟನೊ ಎಂದೂ ಯಾವ ಕಾರಣ ಆ ಬ್ರಾಹ್ಮಣನು ಶ್ರೀಕೃಷ್ಣನಿಂದ ಮಂಚದಲ್ಲಿ ಕುಳಿತಿದ್ದ ರುಕ್ಮಿಣೀದೇವಿಯನ್ನು ಬಿಟ್ಟು ಅಣ್ಣನಂತೆ ಆಲಿಂಗನಗೈಯಲ್ಪಟ್ಟನೊ ಎಂದೂ ಮಲಿನನಾಗಿ ಭಿಕ್ಷುಕನಾಗಿ ಭಾಗ್ಯಹೀನನಾಗಿ ಲೋಕನಿಂದಿತನಾಗಿ ಅಧಮನಾದ ಆ ಬ್ರಾಹ್ಮಣನು ಏನು ಪುಣ್ಯವನ್ನು ಮಾಡಿದನೊ ಎಂದೂ ಆಶ್ಚರ್ಯಪಟ್ಟರು ; ಅನಂತರದಲ್ಲಿ ಶ್ರೀಕೃಷ್ಣನೂ ಕುಚೇಲನೂ ಪರಸ್ಪರವಾಗಿ ಕೋಮಲಗಳಾದ ಹಸ್ತಗಳನ್ನಿಡಿದು ಪೂರ್ವದಲ್ಲಿ ಗುರುಗೃಹದಲ್ಲಿ ವಾಸಗೈದ ತಮ್ಮ ವೃತ್ತಾಂತಗಳನ್ನು ಪ್ರಸ್ತಾಪಗೈದರು ; ಶ್ರೀಕೃಷ್ಣನು ಕುಚೇಲನನ್ನು ಕುರಿತು “ ಎಲೈ ಧರ್ಮಜ್ಞನಾದ ಬ್ರಾಹ್ಮಣನೆ, ನೀನು ಸಾಂಗವಾಗಿ ವೇದಾಧ್ಯಯನವಾದಮೇಲೆ ಗುರುವಿಗೆ ದಕ್ಷಿಣೆಯನ್ನು ಕೊಟ್ಟು ಆ ಗುರುಗೃಹದಿಂದ ಬಂದು ಸಮಾವರ್ತನವೆಂಬ ಕರ್ಮವನ್ನಾಚರಿಸಿ ಅನುರೂಪಳಾದ ಕನ್ಯೆಯನ್ನು ವಿವಾಹವನ್ನು ಮಾಡಿಕೊಂಡೆಯೋ ? ಎಲೈ ವಿದ್ವಾಂಸನೆ, ನೀನು ಧನವಸ್ತ್ರಾದಿಗಳಲ್ಲಿ ಅತ್ಯಂತ ವಿಶ್ವಾಸಯುಕ್ತನಾಗದಿದ್ದೀಯಾದಕಾರಣ ಗೃಹಗಳಲ್ಲಿಯೂ ಅದೇರೀತಿ ನಿನ್ನ ಚಿತ್ತವು ಕಾಮಗಳಿಂದ ತಿರಸ್ಕರಿಸಲ್ಪಡುವದಿಲ್ಲವೆಂದು ನಾನು ತಿಳಿಯುತ್ತೇನೆ ; ಜ್ಞಾನಿಯಾದ ನಿನಗೆ ಈ ವೈರಾಗ್ಯವು ಯುಕ್ತವೇ ಸರಿ ; ಲೋಕದಲ್ಲಿ ಕೆಲವರು ಮಹಾತ್ಮರು ಕಾಮಗಳಿಂದ ತಿರಸ್ಕರಿಸಲ್ಪಡದ ಮನಸ್ಸುಳ್ಳವರಾದ್ದರಿಂದ ಈಶ್ವರ ಮಾಯಾಕಲ್ಪಿತಗಳಾದ ವಿಷಯ ವಾಸನೆಗಳನ್ನು ತ್ಯಜಿಸುತಿದ್ದಾಗ್ಯೂ ನನ್ನಂತೆ ಲೋಕಸಂಗ್ರಹಾರ್ಥವಾಗಿ ವಿಹಿತ ಕರ್ಮಗಳನ್ನಾಚರಿಸುತಿಧಾರೆ ! ಎಲೈ ಮಿತ್ರನೆ, ಬ್ರಾಹ್ಮಣನು ಯಾವ ಗುರುವಿನ ದೆಶೆಯಿಂದ ತತ್ವಾರ್ಥವನ್ನು ತಿಳಿದು ಮುಕ್ತಿಯನ್ನು ಪಡೆಯುವನೊ ಅಂಥಾ ಗುರುವಿನ ಗೃಹದಲ್ಲಿ ನಾವಿಬ್ಬರೂ ವಾಸಗೈದ ವೃತ್ತಾಂತವನ್ನು ಸ್ಮರಿಸುತಿದ್ದೀಯೊ ! ಲೋಕದಲ್ಲಿ ಪುರುಷನಿಗೆ ಮೂವರು ಗುರುಗಳೆಂದು ನಿರೂಪಿಸುವರು ; ಈ ಸಂಸಾರದಲ್ಲಿ ತನಗೆ ಯಾವನದೆಶೆಯಿಂದ ಜನ್ಮವುಂಟಾಯಿತೊ ಅಂಥಾ ತಂದೆಯು ಪ್ರಥಮ ಗುರುವು ; ಅವನು ಪೂಜಿಸಲು ಯೋಗ್ಯನು ; ಮತ್ತು ಬ್ರಾಹ್ಮಣನಾದ ಪುರುಷನಿಗೆ ಉಪನಯನ ವೇದಾಧ್ಯಯನ ಪೂರ್ವಕವಾಗಿ ಯಾವನದೆಶೆಯಿಂದ ಸತ್ಕರ್ಮಾಧಿಕಾರವುಂಟಾಗುವದೊ ಅಂಥಾ ಕರ್ಮವಿದ್ಯೆಯನ್ನುಪದೇಶಗೈವವನು ದ್ವಿತಿಯಗುರುವು ; ಅವನು ತಂದೆಗಿಂತಲೂ ಪೂಜ್ಯನು ; ಸಮಸ್ತಾಶ್ರಮಗಳಲ್ಲಿರುವ ಪುರುಷರಿಗೂ ಯಾವನು ತತ್ವೋಪದೇಶಗೈವನೊ ಅಂಥಾ ಬ್ರಹ್ಮವಿದ್ಯಾಪ್ರದನಾದವನು ತ್ರಿತಿಯ ಗುರುವು ; ಅವನಿಗಿಂತಲು ಅಧಿಕನಿಲ್ಲ ! ಎಲೈ ಮಿತ್ರನೆ, ವರ್ಣಾಶ್ರಮಧರ್ಮವಂತರಾದ ಪುರುಷರಲ್ಲಿ ಪರಮಾರ್ಥವನ್ನು ತಿಳಿದ ಮಹಾತ್ಮರು ಈ ಮನುಷ್ಯಜನ್ಮದಲ್ಲಿ ಗುರುರೂಪದಿಂದ ತತ್ವಾರ್ಥವನ್ನು ಬೋಧಿಸುವ ನನ್ನ ಉಪದೇಶಮಾತ್ರದಿಂದ ಆಯಾಸವಿಲ್ಲದೆ ಸುಖವಾಗಿ ಸಂಸಾರಸಮುದ್ರವನ್ನು ದಾಟುವವರೆ ಜ್ಞಾನಿಗಳು ; ಪರಮೇಶ್ವರನಾದ ನಾನು ಸಮಸ್ತ ಭೂತಗಳಿಗೂ ಆತ್ಮರೂಪನಾಗಿದ್ದಾಗ್ಯೂ ಯಾವರೀತಿಯಿಂದ ಜ್ಞಾನಪ್ರದಾನನಾದ ಗುರುವಿನ ಸೇವೆಯಿಂದ ಸಂತೋಷಪಡುವೆನೊ ಆರೀತಿ ಗೃಹಸ್ಥಾಶ್ರಮಧರ್ಮದಿಂದಲೂ ಉಪನಯನದಿಂದಲೂ ಬ್ರಹ್ಮಚರ್ಯದಿಂದಲೂ ವಾನಪ್ರಸ್ಥಧರ್ಮದಿಂದಲೂ ಯತಿಧರ್ಮದಿಂದಲೂ ಸಂತುಷ್ಟನಾಗುವದಿಲ್ಲವಾದಕಾರಣ ಅಂಥಾ ಗುರುವಿನ ಪಾದಸೇವೆಗಿಂತಲೂ ಅಧಿಕವಾದ ಧರ್ಮವಿಲ್ಲ ! ಎಲೈ ಮಿತ್ರನೆ, ಪೂರ್ವದಲ್ಲಿ ಗುರುಗೃಹದಲ್ಲಿ ನಾವು ವಾಸಗೈವಾಗ ಬಂದು ವೇಳೆಯಲ್ಲಿ ಕಾಷ್ಠಗಳನ್ನು ತರುವದಕ್ಕಾಗಿ ಗುರುಪತ್ನಿಯಿಂದ ಆಜ್ಞಾಪಿಸಲ್ಪಟ್ಟು ಬಂದು ಮಹತ್ತಾದ ಅರಣ್ಯವನ್ನು ಪ್ರವೇಶಿಸಿದ ನಮ್ಮ ವೃತ್ತಾಂ

ತವನ್ನು ಸ್ಮರಿಸುತ್ತಿದ್ದೀಯೋ? ನಾವು ಆ ಮಹಾ ಅರಣ್ಯವನ್ನು ಪ್ರವೇಶಿಸಿದಾಗ ಭಯಂಕರಗಳಾದ ವಾಯುವರ್ಷಗಳೂ ಅತಿ ಕಠಿಣಗಳಾದ ಮೇಘಗರ್ಜನಗಳೂ ಉಂಟಾದವು; ಅಷ್ಟರಲ್ಲೇ ಸೂರ್ಯನು ಅಸ್ತವನ್ನೈದಿದನು; ಅಂಧಕಾರದಿಂದ ದಿಕ್ಕುಗಳು ಆಚ್ಛಾದನಂಗೈಯಲ್ಪಟ್ಟವು; ಆಗ ವರ್ಷದಿಂದ ಸಮಸ್ತ ಪ್ರದೇಶವೂ ಜಲಮಯವಾದ್ದರಿಂದ ಹಳ್ಳ ತಿಟ್ಟುಗಳನ್ನು ತಿಳಿಯದೆ ಆ ಮಹತ್ತಾದ ವಾಯುವಿಂದಲೂ ವರ್ಷೋದಕದಿಂದಲೂ ಬಾರಿಬಾರಿಗು ಒಡಿಯಲ್ಪಡುತ ದಿಕ್ಕುಗಳನ್ನರಿಯದೆ ನಾಲ್ಕುಕಡೆಯಲ್ಲಿಯೂ ಜಲಮಯವಾಗಿದ್ದ ಆ ಮಹಾರಣ್ಯದಲ್ಲಿ ಅತ್ಯಂತ ಪೀಡಿತರಾಗಿ ಒಬ್ಬರ ಹಸ್ತವನ್ನೊಬ್ಬರು ಹಿಡಿದುಕೊಂಡು ಕಾಷ್ಠಭಾರವನ್ನು ವಹಿಸಿದೆವು; ಆಗ ಸಾಂದೀಪಿನಿ ಎಂಬ ನಮ್ಮ ಗುರುವು ಸೂರ್ಯೋದಯವಾಗಲೂ ನಮ್ಮ ವೃತ್ತಾಂತವನ್ನು ತಿಳಿದು ನಮ್ಮನ್ನು ಹುಡುಕುತ ವಾಯುವರ್ಷಗಳಿಂದ ಅತ್ಯಂತ ಪೀಡಿತರಾಗಿ ಶಿಷ್ಯರಾದ ನಮ್ಮನ್ನು ಕಂಡು ದಯೆಯಿಂದ 'ಎಲೈ ನನ್ನ ಪುತ್ರರೇ, ನೀವು ನಮಗೋಸ್ಕರವಾಗಿ ಬಹಳ ಶ್ರಮೆಪಟ್ಟಿರಿ; ಲೋಕದಲ್ಲಿ ಪ್ರಾಣಿಗಳಿಗೆ ದೇಹವೇ ಅತ್ಯಂತ ಪ್ರಿಯವಾದದ್ದು; ಅಂಥಾ ದೇಹವನ್ನು ಗಣನೆ ಮಾಡದೆ ಗುರುಕಾರ್ಯದಲ್ಲಿ ನೀವು ಉದ್ಯುಕ್ತರಾದಿರೆಂಬದೇ ಉತ್ತಮರಾದ ಶಿಷ್ಯರಿಂದ ಗುರುವಿಗೆ ಮಾಡತಕ್ಕ ಪ್ರತ್ಯುಪಕಾರವು; ನಿಮ್ಮಿಂದ ಪರಿಶುದ್ಧವಾದ ಮನಸ್ಸಿನಿಂದ ಸರ್ವಾರ್ಥಸಾಧಕವಾದ ದೇಹವು ಗುರುವಿಗೋಸ್ಕರ ಸಮರ್ಪಿಸಲ್ಪಟ್ಟ ಕಾರಣ, ಎಲೈ ಶಿಷ್ಯರಿರಾ, ನಾನು ಪ್ರಸನ್ನನಾದೆನು; ನಿಮ್ಮ ಮನೋರಥಗಳು ಯಥಾರ್ಥವಾಗಲಿ; ನನ್ನ ದೆಸೆಯಿಂದ ಅಧ್ಯಯನಂಗೈಯಲ್ಪಟ್ಟಿರುವ ವೇದಗಳು ಇಹಲೋಕದಲ್ಲಿಯೂ ಪರಲೋಕಗಳಲ್ಲಿಯೂ ಸಫಲಗಳಾಗಲಿ' ಎಂದು ನಮಗೆ ಆಶೀರ್ವಾದಂಗೈದ ವೃತ್ತಾಂತವನ್ನು ಸ್ಮರಿಸುತ್ತಿಯೋ? ಎಲೈ ಮಿತ್ರನೆ, ಮತ್ತು ಗುರುಗೃಹಂಗಳಲ್ಲಿ ವಾಸಂಗೈಯುತ್ತಿದ್ದ ನಮ್ಮ ಅನೇಕವಾದ ವೃತ್ತಾಂತಗಳನ್ನು ಅಥವ ಕೆಲವು ವೃತ್ತಾಂತಗಳನ್ನಾದರೂ ಸ್ಮರಿಸುತ್ತಿದ್ದೀಯೋ? ಗುರುವಿನ ಅನುಗ್ರಹದಿಂದಲೆ ಪುರುಷನು ಪೂರ್ಣನಾಗಿ ಉಪಶಾಂತಿಯನ್ನೈದುವನು" ಎಂದು ಪ್ರಶ್ನೆಗೈದನು.

ಕುಚೇಲನು ಶ್ರೀಕೃಷ್ಣನನ್ನು ಕುರಿತು "ಎಲೈ ದೇವೋತ್ತಮನಾಗಿ ಜಗದ್ಗುರುವಾದ ಶ್ರೀಕೃಷ್ಣನೆ, ಸತ್ಯಸಂಕಲ್ಪನಾದ ನಿನ್ನೊಡನೆ ಗುರುಗೃಹದಲ್ಲಿ ವಾಸವುಂಟಾದಂಥಾ ನಾವು ಯಾವ ಇಷ್ಟಾರ್ಥವು ಪಡೆಯೆವು! ನಾವು ಸಮಸ್ತ ಇಷ್ಟಾರ್ಥವನ್ನೂ ಪಡೆದೆವು! ಎಲೈ ಶ್ರೀಕೃಷ್ಣನೆ, ಸಮಸ್ತ ಶ್ರೇಯಸ್ಸುಗಳಿಗೂ ಉತ್ಪತ್ತಿಸ್ಥಾನವಾದ ವೇದವೇ ದೇಹವಾಗಿರುವ ವೇದಮೂರ್ತಿಯಾದ ನಿನಗೆ ಗುರುಗೃಹದಲ್ಲಿ ವಾಸವುಂಟಾಯಿತೆಂಬದು ಅತ್ಯಂತ ವಿಡಂಬವೇ ಹೊರ್ತು ಯಥಾರ್ಥವಲ್ಲ" ಎಂದು ವಿಜ್ಞಾಪಿಸಿದನು.

---

## ೮೧ನೇ ಅಧ್ಯಾಯ.

## ಕುಚೇಲೋಪಾಖ್ಯಾನವು.

ಕೇಳೈ ಅರಸೆ, ಈ ಪ್ರಕಾರವಾಗಿ ಶ್ರೀದಾಮನೊಡನೆ ಸಲ್ಲಾಪಂಗೈಯುತ್ತಿದ್ದ ಸರ್ವ ಪ್ರಾಣಿಗಳ ಮನೋಗತಾಭಿಲಾಷೆಗಳನ್ನು ಅರಿತಿರುವ ಶ್ರೀಹರಿಯು ತನಗೋಸ್ಕರ ಅವಲಕ್ಕಿಯನ್ನು ಕೊಡಲು ನಾಚುವನೆಂದು ತಿಳಿದು ಮುಗುಳುನಗೆಯುಳ್ಳವನಾಗಿ "ಎಲೈ ಸಖನೆ, ನೀನು ಮನೆಯಿಂದ ನನಗೋಸ್ಕರ ಏನನ್ನು ತಂದೆ? ಭಕ್ತರಿಂದ ಪ್ರೀತಿಪೂರ್ವಕವಾಗಿ ತರಲ್ಪಟ್ಟದ್ದು ಸ್ವಲ್ಪವಾದಾಗ್ಯು ನನಗೆ ಬಹಳವಾದೀತು; ಭಕ್ತರಲ್ಲದವರಿಂದ ತರಲ್ಪಡುವದು ಬಹಳವಾದರೂ ನನಗೆ ಸಂತೋಷವಾಡಲಾರದು; ಪತ್ರವನ್ನಾದರೂ ಪುಷ್ಪವನ್ನಾದರೂ ಫಲವನ್ನಾದರೂ ಜಲವನ್ನಾದರೂ ಯಾವನು ದೃಢಮನಸ್ಕನಾಗಿ ನನಗೋಸ್ಕರ ಸಮರ್ಪಿಸುವನೊ ಅಂಥಾವನ ಭಕ್ತಿಯಿಂದ ಸಮರ್ಪಿತವಾದ ವಸ್ತುವನ್ನು ನಾನು ಪರಮ ಭೋಗ್ಯವಾಗಿ ಅಂಗೀಕರಿಸುವೆನು" ಎಂದು ನುಡಿದನು.

ಬ್ರಾಹ್ಮಣೋತ್ತಮನಾದ ಕುಚೇಲನು ಲಜ್ಜೆಯಿಂದ ತಲೆಯನ್ನು ತಗ್ಗಿಸಿ ಲಕ್ಷ್ಮೀಪತಿಯಾದ ಶ್ರೀಕೃಷ್ಣನಿಗೆ ಒಂದುಸಾರೆ ಅವಲಕ್ಕಿಯನ್ನಾದರೂ ಕೊಡಲಿಲ್ಲ; ಸರ್ವಪ್ರಾಣಿಗಳ ಅಂತಃಕರಣಕ್ಕೆ ಸಾಕ್ಷಿಯಾದ ಶ್ರೀಕೃಷ್ಣನು ಆತನ ಆಗಮನಕ್ಕೆ ಕಾರಣವನ್ನು ತಿಳಿದು ಆಲೋಚಿಸಿ ಆ ದ್ವಿಜನು ಪೂರ್ವದಲ್ಲಿ ಐಶ್ವರ್ಯಾಭಿಲಾಷೆಯುಳ್ಳವನಾಗಿ ತನ್ನನ್ನು ಭಜಿಸಿದನೆಂದೂ ಆ ಜನ್ಮದಲ್ಲಿ ತನಗೆ ಸಖನಾಗಿ ಪತಿವ್ರತೆಯಾದ ಪತ್ನಿಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ತನ್ನ ಸಮೀಪಕ್ಕೆ ಬಂದನೆಂದೂ ಆದಕಾರಣ ಆತನಿಗೆ ಮನುಷ್ಯರಿಂದ ಪಡೆಯಲಶಕ್ಯವಾದ ಭಾಗ್ಯವನ್ನು ಕೊಡಬೇಕೆಂದೂ ನಿಶ್ಚಯಿಸಿ ಆ ದ್ವಿಜನ ಅತಿ ಜೀರ್ಣವಾದ ವಸ್ತ್ರದಲ್ಲಿ ಬಹಳಹೊತ್ತು ಕಟ್ಟಲ್ಪಟ್ಟಿದ್ದ ಅವಲಕ್ಕಿಯನ್ನು ಅದೇನೆಂದು ತಾನೇ ತೆಗೆದುಕೊಂಡು "ಎಲೈ ಸಖನೆ, ನಿನ್ನಿಂದ ತರಲ್ಪಟ್ಟ ಈ ಉಪಹಾರದ್ರವ್ಯವು ನನಗೆ ಅತ್ಯಂತ ತೃಪ್ತಿಕರವು; ಮತ್ತು ಈ ಅವಲಕ್ಕಿಯು ವಿಶ್ವಮೂರ್ತಿಯಾದ ನನಗೆ ಹಸಿವಿಲ್ಲದಂತೆ ಸಂತುಷ್ಟಿಯನ್ನು ಮಾಡುವದು" ಎಂದು ಒಂದು ಮುಷ್ಟಿ ಅವಲಕ್ಕಿಯನ್ನು ಭಕ್ಷಣಂಗೈದು ಎರಡನೇ ಮುಷ್ಟಿ ಅವಲಕ್ಕಿಯನ್ನಾರೋಗಣೆಗೈಯಲೋಸುಗ ಯತ್ನಂಗೈಯಲು ಸಾಕ್ಷಾತ್ ಲಕ್ಷ್ಮಿಯಾದ ರುಕ್ಮಿಣಿಯು ಸರ್ವೇಶ್ವರನಾದ ಶ್ರೀಕೃಷ್ಣನ ಹಸ್ತವನ್ನು ತಡೆದು "ಕೇಳೈ ವಿಶ್ವಾತ್ಮಕನಾದ ಶ್ರೀಹರಿಯೆ, ಒಂದುಮುಷ್ಟಿ ಅವಲಕ್ಕಿಯು ಭಕ್ಷಣಮಾತ್ರದಿಂದಲೆ ಪುರುಷನಿಗೆ ಇಹಪರಗಳಲ್ಲಿ ನನ್ನ ಕಟಾಕ್ಷವಿಲಾಸಸ್ವರೂಪಗಳಾದ ಸಮಸ್ತ ಸಂಪತ್ಸಮೃದ್ಧಿಯನ್ನು ನೋಡಿ ನೀನು ಸಂತೋಷವನ್ನೈದುವೆ; ಅಂಥಾ ಸಂಪತ್ಸಮೃದ್ಧಿಗೋಸ್ಕರ ಇಷ್ಟೇ ಸಾಕು" ಎಂದು ನುಡಿದಳು.

ಅನಂತರದಲ್ಲಿ ಆ ಬ್ರಾಹ್ಮಣನು ಶ್ರೀಕೃಷ್ಣನ ಮಂದಿರದಲ್ಲಿ ಆ ರಾತ್ರಿ ವಾಸಂಗೈದು ಮೃಷ್ಟಾನ್ನವನ್ನುಂಡು ಶೈತ್ಯ ಸೌರಭ್ಯ ಸಹಿತವಾದ ಉದಕ ಮೊದಲಾದವನ್ನು ಪಾನಂಗೈದು ಸುಖವಾಗಿ ನಿದ್ರೆಮಾಡಿ ಸ್ವರ್ಗದಲ್ಲಿ ವಾಸಂಗೈದನೆಂದು ತಿಳಿದನು! ಕೇಳೈ ಅರಸೆ, ಆ ರಾತ್ರಿ ಕಳೆದು ಸೂರ್ಯೋದಯವಾದ ಸಮಯದಲ್ಲಿ ಇಂದ್ರನಿಂದಲೂ ಪಡೆಯಲಶಕ್ಯವಾದ ಐಶ್ವರ್ಯವನ್ನು ಆತನಿಗೆ ಕೊಡಬೇಕೆಂದು ಆಲೋಚಿಸುವ ಸ್ವಾನಂದಪರಿಪೂರ್ಣನಾದ ಶ್ರೀಕೃಷ್ಣನು ಬಹುದೂರ ಸಂಗಡ ಹೋಗಿ ವಿನಯೋಕ್ತಿಗಳಿಂದ ಶ್ಲಾಘಿಸಿ ಕಳುಹಿಸಲು ಕುಚೇಲನು ತನ್ನ ಸಖನಾದ ಶ್ರೀಹರಿಯಡೆಯಿಂದ ಸ್ವಲ್ಪ ಧನವನ್ನಾದರು ಪಡೆಯದಿದ್ದಾಗ್ಯು ಲಜ್ಜೆಯಿಂದ ತಾನಾಗಿ ಯಾಚಿಸದೆ ಮಹಾತ್ಮನಾದ ಶ್ರೀಕೃಷ್ಣನ ದರ್ಶನಮಾತ್ರದಿಂದಲೇ ಸಂತುಷ್ಟನಾಗಿ ತನ್ನ ಮನೆಯನ್ನು ಕುರಿತು ತೆರಳಿ ತನ್ನ ಮನಸ್ಸಿನಲ್ಲಿ "ಲಕ್ಷ್ಮಿಯನ್ನು ವಕ್ಷಸ್ಥಳದಲ್ಲಿ ಧರಿಸಿರುವ ಶ್ರೀಹರಿಯಿಂದ ಅತ್ಯಂತ ದರಿದ್ರನಾದ ನಾನು ಆಲಿಂಗಿಸಲ್ಪಟ್ಟೆನಾದಕಾರಣ ಬ್ರಾಹ್ಮಣ್ಯಕ್ಕೆ ರಕ್ಷಕನಾದ ಶ್ರೀಕೃಷ್ಣನ ಬ್ರಾಹ್ಮಣರಕ್ಷಕತ್ವವು ನನ್ನಿಂದ ನೋಡಲ್ಪಟ್ಟಿತು; ದರಿದ್ರನಾಗಿ ಪಾಪಿಷ್ಠನಾದ ನಾನೆಷ್ಟು—ಲಕ್ಷ್ಮಿಗೆ ವಾಸಗೃಹವಾದ ವಿಶಾಲವಕ್ಷಸ್ಥಳವುಳ್ಳ ಕೃಷ್ಣನೆಷ್ಟು! ಆದಾಗ್ಯು ನಾನು ಬ್ರಾಹ್ಮಣರಲ್ಲಿ ಪರಮಕೃಪಣನಾದ ಹರಿ ಭುಜಗಳಿಂದ ಆಲಿಂಗನಗೈಯಲ್ಪಟ್ಟು ಚಂದನಲೇಪಾದಿಗಳಿಂದ ಪೂಜಿಸಲ್ಪಟ್ಟವನಾದೆನು; ಬಳಲಿದಂಥಾ ನಾನು ಶ್ರೀಕೃಷ್ಣನ ಪ್ರಿಯಳಾದ ಲಕ್ಷ್ಮೀದೇವಿಯಿಂದ ಸೇವಿಸಲ್ಪಟ್ಟ ಮಂಚದಲ್ಲಿ ಒಡಹುಟ್ಟಿದವನಂತೆ ಕುಳ್ಳಿರಿಸಲ್ಪಟ್ಟವನಾಗಿ ಆತನ ಪಟ್ಟಮಹಿಷಿಯಾದ ರುಕ್ಮಿಣೀದೇವಿಯಿಂದ ಬೀಸಣಿಗೆಯಿಂದ ಬೀಸಲ್ಪಟ್ಟೆನು; ಇದಲ್ಲದೆ ಬ್ರಹ್ಮಾದಿಗಳಿಂದ ಸೇವ್ಯನಾಗಿ ಬ್ರಾಹ್ಮಣರಿಗೆ ಪೋಷಕನಾಗಿರುವ ಶ್ರೀಹರಿಯಿಂದ ನಾನು ದೇವತೆಯಂತೆ ಉತ್ತಮವಾದ ಶುಶ್ರೂಷೆಯಿಂದ ಕಾಲೊತ್ತುವದು ಮೊದಲಾದ ಉಪಚಾರಗಳಿಂದ ಪೂಜಿಸಲ್ಪಟ್ಟೆನು; ಭೂಮಿಯಲ್ಲಿಯೂ ರಸಾತಳದಲ್ಲಿಯೂ ಇರುವ ಐಶ್ವರ್ಯಾದಿ ಸಮಸ್ತ ಸಿದ್ಧಿಗಳಿಗೂ ಸ್ವರ್ಗಮೋಕ್ಷಗಳಿಗೂ ಕೃಷ್ಣನ ಚರಣಾರಾಧನೆಯೇ ಕಾರಣವು; ದರಿದ್ರನಾದ ತನ್ನ ಭಕ್ತನು ಧನವಂತನಾದರೆ ಅತ್ಯಂತ ಮದವುಳ್ಳವನಾಗಿ ತನ್ನನ್ನು ಸ್ಮರಿಸದಿರುವನೆಂದು ದಯಾನಿಧಿಯಾದ ಶ್ರೀಕೃಷ್ಣನು ನನಗೆ ಧನವನ್ನು ಕೊಡಲಿಲ್ಲ; ಈ ಅರ್ಥವು ನಿಶ್ಚಯವು!" ಎಂದು ಮನಸ್ಸಿನಲ್ಲಿ ಚಿಂತಿಸುತ ಸೂರ್ಯಚಂದ್ರರಂತೆ ಹೊಳೆಯುವ ವಿಮಾನಗಳಿಂದ ಅಲ್ಲಲ್ಲಿ ವ್ಯಾಪ್ತವಾಗಿ ಧ್ವನಿಗೈವ ಪಕ್ಷಿಸಮೂಹಗಳುಳ್ಳವಾಗಿ ಅರಳಿದ ನೈದಿಲೆ ತಾವರೆ ಕನ್ನೈದಿಲೆಗಳುಳ್ಳ ತಿಳಿನೀರುಕೊಳಗಳಿಂದ ಶೋಭಿತಗಳಾಗಿ ವಿಚಿತ್ರಗಳಾದ ಕೈತೋಟಗಳಿಂದಲೂ ಅರಸುಗಳಿಗೆ ವಿಹಾರಯೋಗ್ಯಗಳಾದ ಉದ್ಯಾನಗಳಿಂದಲೂ

ನಿಬಿಡವಾಗಿ ಅಲಂಕೃತರಾದ ಪುರುಷರಿಂದಲೂ ಹೆಣ್ಣೆರಳೆಯ ಕಣ್ಣುಗಳನ್ನು ಹೋಲುವ ಕಣ್ಣುಗಳುಳ್ಳ ಸ್ತ್ರೀಯರಿಂದಲೂ ಆಶ್ರಯಿಸಲ್ಪಟ್ಟಿದ್ದ ತನ್ನ ಮಂದಿರದ ಸಮೀಪವನ್ನೈದಿ ಆ ಸಂಪತ್ತನ್ನು ಕಂಡು ಬೆಚ್ಚಿ ಬೆರಗಾಗಿ ಆಶ್ಚರ್ಯಕರವಾಗಿ ತೇಜೋಮಯವಾಗಿ ತನ್ನ ಮುಂದೆ ಕಾಣಿಸಿದ್ದು ಮತ್ತೊಬ್ಬರ ಗೃಹವೋ— ಅಲ್ಲ ತನ್ನ ಗೃಹವು ಈಶ್ವರಾನುಗ್ರಹದಿಂದ ಸಮಸ್ತ ವಿಭವಯುಕ್ತವಾಗಿ ತೇಜೋಮಯವಾಗಿ ಅರೀತಿಯಾಗಾಯಿತೊ ಎಂದು ಮನಸ್ಸಿನಲ್ಲಿ ಚಿಂತಿಸುತ್ತಿರಲು ದೇವತೆಗಳಂತೆ ಹೊಳೆಯುತ್ತಿದ್ದ ಪುರುಷರೂ ಸ್ತ್ರೀಯರೂ ಅಮಿತವಾದ ಗೀತವಾದ್ಯಗಳ ಧ್ವನಿಯೊಡನೆಯೂ ಉತ್ತಮವಾದ ಉಪಹಾರಗಳೊಡನೆಯೂ ಯುಕ್ತರಾಗಿ ಆತನನ್ನೆದುರುಗೊಂಡರು; ಪತಿಯು ಬಂದ ವೃತ್ತಾಂತವನ್ನು ಕೇಳಿ ಅತ್ಯಂತ ಸಂತೋಷವುಳ್ಳವಳಾಗಿ ಕಮಲವನದ ದೆಸೆಯಿಂದ ಬರುವ ರೂಪಧಾರಿಣಿಯಾದ ಲಕ್ಷ್ಮಿಯಂತೆ ಶ್ರೀಹರಿಯ ಕೃಪೆಯಿಂದ ದೇವತಾಕೃಪೆಯನ್ನೈದಿದ ಕುಚೇಲನ ಪತ್ನಿಯು ಆದರದಿಂದ ಆತನನ್ನೆದುರುಗೊಂಡು ಆತನನ್ನು ನೋಡಿ ಅಧಿಕವಾದ ಪ್ರೇಮದಿಂದ ಆನಂದಬಾಷ್ಪವುಳ್ಳವಳಾಗಿ ಆತನೇ ನಮಸ್ಕರಿಸಲು ಯೋಗ್ಯನೆಂದು ನಿಶ್ಚಯಿಸಿ ಆನಂದದಿಂದ ಕಣ್ಣುಗಳನ್ನು ಮುಚ್ಚಿಕೊಂಡು ಮನಸ್ಸಿನಿಂದ ಆಲಿಂಗನಗೈದಳು; ಕುಚೇಲನು ದಿವ್ಯರತ್ನಗಳಿಂದ ಯುಕ್ತವಾದ ಹಾರ ಕಂಕಣ ಮುಂತಾದ ದಿವ್ಯಾಭರಣಗಳಿಂದ ಹೊಳೆಯುವ ಸುರಸುಂದರಿಯರಿಗೆ ಸಮಾನರಾದ ಅನೇಕ ಸಹಸ್ರ ದಾಸಿಯರ ಮಧ್ಯದಲ್ಲಿ ಶಚಿಯಂತೆ ಪ್ರಕಾಶಿಸುತ್ತಿದ್ದ ತನ್ನ ಪತ್ನಿಯನ್ನು ನೋಡಿ ಆಶ್ಚರ್ಯಯುಕ್ತನೂ ಸಂತುಷ್ಟನೂ ಆಗಿ ಆಕೆಯೊಡಗೂಡಿ ಸಹಸ್ರ ರತ್ನಸ್ತಂಭಗಳುಳ್ಳ ಇಂದ್ರಭವನಸದೃಶವಾದ ತನ್ನ ಮನೆಯನ್ನು ವೈಭವದಿಂದ ಹೊಕ್ಕು ಹಾಲಿನ ನೊರೆಯಂತೆ ಹೊಳೆಯುವ ಸುಪ್ಪತ್ತಿಗೆ ಮೊದಲಾದ ಹಾಸಿಗೆಗಳು ಆನೆದಂತ ಹಲಿಗೆಗಳಿಂದಲೂ ಕುಂದಣದಿಂದಲೂ ವಿಚಿತ್ರಗಳಾದ ಮಂಚಗಳು ಚಿನ್ನದ ಕಾವುಗಳಿಂದ ಶೋಭಿಸುವ ಚಾಮರ ವ್ಯಜನಗಳು ಸುವರ್ಣಮಯಗಳಾಗಿ ಮೆತ್ತಗಿರುವ ಮೇಲುಹಾಸಿಗೆಗಳಿಂದ ಕೂಡಿದ್ದ ಕಾಲ್ಮಣಿಗಳು ಜೋಲುವ ಮುತ್ತುಕುಚ್ಚುಗಳುಳ್ಳವಾಗಿ ಥಳಥಳಿಪ ಮೇಲ್ಕಟ್ಟುಗಳುಳ್ಳ ಸಭಾಮಂಟಪಗಳು ನಿರ್ಮಲವಾದ ಸ್ಫಟಿಕಮಣಿಗಳಿಂದ ರಚಿಸಲ್ಪಟ್ಟ ಭಿತ್ತಿಗಳು ಮರಕತಮಣಿಮಯಗಳಾದ ಗೃಹಗಳಲ್ಲಿ ಶ್ರೇಷ್ಠರಾದ ಸ್ತ್ರೀಯರೊಡನೆ ಯುಕ್ತವಾಗಿ ಪ್ರಕಾಶಿಸುವ ರತ್ನದೀಪಗಳು ಮೊದಲಾಗಿ ಅಲ್ಲಿ ಆಕಸ್ಮಿಕವಾಗಿ ಬಂದಿದ್ದ ಸಂಪತ್ಸಮೃದ್ಧಿಗಳನ್ನು ನೋಡಿ ಸ್ಥಿರಚಿತ್ತನಾಗಿ ತನ್ನ ಮನಸ್ಸಿನಲ್ಲಿ "ಭಾಗ್ಯಹೀನನಾಗಿ ಜನ್ಮಜನ್ಮದಲ್ಲಿಯು ದರಿದ್ರನಾದ ನನಗೆ ಇಂಥಾ ಸಂಪತ್ಸಮೃದ್ಧಿಯು ಬರುವದಕ್ಕೆ ಕಾರಣವಾಗಿ ಮಹದೈಶ್ವರ್ಯವುಳ್ಳವನಾಗಿ ವಿಚಿತ್ರಶಕ್ತಿಯುಳ್ಳವನಾಗಿ ಯದುಪತಿಯಾದ ಶ್ರೀಕೃಷ್ಣನ ಸಂದರ್ಶನವೇ ಹೊರ್ತು ಮತ್ತೊಂದಲ್ಲ; ಪರ್ಜನ್ಯನು ವರ್ಷಾಕಾಲದ ರಾತ್ರಿಯಲ್ಲಿ ಕರ್ಷಕನು ನಿದ್ರೆಗೈಯುತ್ತಿದ್ದರೂ ಅವನ ಹೊಲವನ್ನು ಮಳೆಯಿಂದ ನೆನಸಿ ಉತ್ತು ಬಿತ್ತುವದಕ್ಕೆ ಯೋಗ್ಯವಾಗಿ ಮಾಡುವ ರೀತಿಯಲ್ಲಿ ಶ್ರೀಕೃಷ್ಣನು ತಾನು ಪೂರ್ಣಕಾಮನಾಗಿ ಲಕ್ಷ್ಮೀಪತಿಯಾದ್ದರಿಂದ ತನ್ನ ಭಕ್ತನಿಗೆ ಇಂದ್ರಪದವಿಯನ್ನು ಕೊಟ್ಟಾಗ್ಯು ಅದು ಸ್ವಲ್ಪವೇ ಎಂದು ತಿಳಿದು ಭಕ್ತನಾದ ನನ್ನಿಂದ ಭಕ್ತಿಯಿಂದ ಕೊಡಲ್ಪಟ್ಟ ಅವಲಕ್ಕಿಯನ್ನೆ ಅಧಿಕವಾಗಿ ತಿಳಿದು ನನ್ನ ಸಂಗಡ ಹೇಳದೆ ನಾನರಿಯದಂತೆ ಈ ಅಧಿಕವಾದ ಐಶ್ವರ್ಯವನ್ನಿತ್ತನು; ಮಹಾತ್ಮನಾದ ಶ್ರೀಹರಿಯು ತನ್ನಿಂದ ಕೊಡಲ್ಪಟ್ಟದ್ದು ಅಧಿಕವಾದಾಗ್ಯು ಅದನ್ನು ಅತಿ ತುಚ್ಛವಾಗಿಯೂ ತನ್ನ ಭಕ್ತನಿಂದ ಕೊಡಲ್ಪಟ್ಟದ್ದು ಅಲ್ಪವಾದಾಗ್ಯು ಅತ್ಯಧಿಕವಾಗಿಯೂ ತಿಳಿಯುವನಾದ್ದರಿಂದ ನನ್ನಿಂದ ಕೊಡಲ್ಪಟ್ಟ ಒಂದು ಹಿಡಿ ಅವಲಕ್ಕಿಯನ್ನು ಪ್ರೀತಿಯಿಂದ ತಾನೇ ಗ್ರಹಿಸಿದನು; ನನಗೆ ನಿರಂತರವು ಶ್ರೀಹರಿಯಲ್ಲಿ ಪ್ರೇಮವೂ ಹಿತವೂ ಪ್ರಾರ್ಥನೆಯೂ ಸೇವಕತ್ವವೂ ಉಂಟಾಗಲಿ; ನಾನು ಐಶ್ವರ್ಯವನ್ನಪೇಕ್ಷಿಸಲೊಲ್ಲೆನು; ಮಹಾನುಭಾವನಾಗಿ ಸದ್ಗುಣನಿಧಿಯಾದ ಶ್ರೀಹರಿಯೊಡನೆ ವಿಶೇಷವಾಗಿ ಸಂಗವನ್ನೈದಿದ ನನಗೆ ಜನ್ಮಜನ್ಮದಲ್ಲಿಯು ಆತನ ಭಕ್ತರ ಸಂಗವುಂಟಾಗಲಿ; ಧನವಂತರಿಗೆ ಧನಮದದಿಂದುಂಟಾಗುವ ಅಧಃಪತನವನ್ನಾಲೋಚಿಸಿ ಶ್ರೀಕೃಷ್ಣನು ತನ್ನ ಭಕ್ತನು ವಿವೇಕರಹಿತನಾದಾಗ್ಯು ಅವನಿಗೆ ಬೊಕ್ಕಸ ಮೊದಲಾದ ಸಂಪತ್ತುಗಳನ್ನೂ ರಾಜ್ಯವನ್ನೂ ಪುತ್ರ ಕಳತ್ರಾದಿಗಳನ್ನೂ ಕೊಡದೆ ದೃಢವಾದ ಭಕ್ತಿಯನ್ನು ಕೊಡುವನು; ಜನ್ಮರಹಿತನಾಗಿ ಸರ್ವಜ್ಞನಾದ ಭಗವಂ

ತನು ನನಗೆ ಭಕ್ತಿಯನ್ನು ಕೊಡದೆ ಮಹತ್ತಾದ ಈ ಐಶ್ವರ್ಯವನ್ನು ಕೊಟ್ಟನು ; ಆದರೂ ನನಗೆ ಹರಿಭಕ್ತಿಯೇ ಯಾವಾಗ್ಯೂ ಉಂಟಾಗಲಿ!" ಎಂದು ಸ್ವಬುದ್ಧಿಯಿಂದ ನಿಶ್ಚಯಿಸಿ ವಿಷಯಾಸಕ್ತನಾಗದೆ ವಿಷಯಪರಿತ್ಯಾಗವನ್ನ ಭ್ಯಾಸಂಗೈಯುತ ನಿಸ್ಪೃಹನಾಗಿ ತನ್ನ ಪತ್ನಿಯೊಡಗೂಡಿ ಭೋಗಗಳನ್ನನುಭವಿಸುತಿದ್ದನು !

ಎಲೈ ಅರಸೇ, ಯಜ್ಞಗಳಿಗೆ ಸ್ವಾಮಿಯಾಗಿ ಸಮರ್ಥನಾಗಿ ಬ್ರಹ್ಮಾದಿಗಳಿಗೂ ನಿಯಾಮಕನಾದ ಶ್ರೀಕೃಷ್ಣನಿಗೆ ಬ್ರಾಹ್ಮಣರೇ ಸೇವ್ಯರು ; ಬ್ರಾಹ್ಮಣರೇ ಭಾಗ್ಯವು ; ಅವರಿಗಿಂತಲು ಅಧಿಕವಾದ ವಸ್ತುವು ಮತ್ತೊಂದಿಲ್ಲ! ಈರೀತಿಯಿಂದ ಪೂಜ್ಯನಾದ ಆ ಬ್ರಾಹ್ಮಣನು ಶೋಭನವಾದ ಮನಸ್ಸುಳ್ಳವನಾಗಿ ಅನ್ಯರಿಂದ ಜಯಿಸಲ್ಪಡುವನಾದರೂ ಭಕ್ತಾಧೀನನಾದ ನಾರಾಯಣನನ್ನು ಕಂಡು ಆತನ ಧ್ಯಾನದಿಂದ ಬಿಡಲ್ಪಟ್ಟ ಅಹಂಕಾರವುಳ್ಳವನಾಗಿ ಬ್ರಹ್ಮವೇತೃಗಳಿಂದ ಪಡೆಯಲು ಯೋಗ್ಯವಾದ ಪರಮಪದವನ್ನೈದಿದನು ! ಲೋಕದಲ್ಲಿ ಬ್ರಾಹ್ಮಣ್ಯಕ್ಕೆ ಸ್ವಾಮಿಯಾದ ಶ್ರೀಕೃಷ್ಣನು ಅವಲಕ್ಕಿಯನ್ನಾರೋಗಣಂಗೈದು ತನ್ನ ಭಕ್ತನನ್ನು ರಕ್ಷಿಸಿದನೆಂಬ ಈ ಕಥೆಯನ್ನೂ ಬ್ರಾಹ್ಮಣರಲ್ಲಿ ಆ ಭಗವಂತನಿಗಿರುವ ವಾತ್ಸಲ್ಯವನ್ನೂ ಕೇಳುವ ಪುರುಷನು ಕೃಷ್ಣನಲ್ಲಿ ಭಕ್ತಿಯುಳ್ಳವನಾಗಿ ಕರ್ಮಬಂಧದ ದೆಶೆಯಿಂದ ಬಿಡಲ್ಪಡುವನು.

---

## ೮೨ನೇ ಅಧ್ಯಾಯ.

### ಶ್ರೀಕೃಷ್ಣನ ಮಡದಿಯರು ಆತನ ಚರಿತ್ರವನ್ನು ವರ್ಣಿಸಿದ್ದು.

ಕೇಳೈ ಅರಸೆ, ಒಂದು ಸಮಯದಲ್ಲಿ ರಾಮಕೃಷ್ಣರು ದ್ವಾರಕೆಯಲ್ಲಿರುವಾಗ ಪ್ರಳಯಕಾಲದಲ್ಲಿ ಸರ್ವಗ್ರಾಸವಾಗುವ ತೆರದಿಂದ ಸೂರ್ಯಗ್ರಹಣವು ಪ್ರಾಪ್ತವಾಯಿತು ; ಆಗ ಸಮಸ್ತರೂ ತಮಗೆ ಶ್ರೇಯಸ್ಸನ್ನು ಸಂಪಾದಿಸಬೇಕೆಂಬ ಇಚ್ಛೆಯಿಂದ ಮುಂಚಿತವಾಗಿಯೇ ಸ್ಯಮಂತಪಂಚಕವೆಂಬ ಕ್ಷೇತ್ರವನ್ನೈದಿದರು ; ಶಸ್ತ್ರಧಾರಿಗಳೊಳಗೆ ಶ್ರೇಷ್ಠನಾದ ಪರಶುರಾಮನು ಭೂಮಿಯನ್ನು ಕ್ಷತ್ರಿಯರಿಲ್ಲದಂತೆ ಮಾಡುತ ಅರಸುಗಳ ರಕ್ತದಿಂದ ಅಗಾಧವಾಗಿ ವಿಸ್ತಾರವಾದ ಮಡುಗಳನ್ನು ನಿರ್ಮಿಸಿ ತಾನು ಸ್ವತಂತ್ರನಾಗಿ ಕರ್ಮದಿಂದ ಲೇಪಿಸಲ್ಪಡದವನಾದಾಗ್ಯೂ ಪ್ರಾಕೃತ ಮನುಷ್ಯನಂತೆ ಲೋಕಸಂಗ್ರಹಾರ್ಥ ಪಾಪ ಪರಿಹಾರಕ್ಕೋಸ್ಕರ ಯಜ್ಞವನ್ನು ಮಾಡಿದಂಥಾ ಕ್ಷೇತ್ರದಲ್ಲಿರುವ ಮಹತ್ತಾದ ಆ ತೀರ್ಥಯಾತ್ರೆಗಾಗಿ ಭರತಖಂಡದಲ್ಲಿದ್ದ ಪ್ರಜೆಗಳು ಯಾದವರು ಅಕ್ರೂರನು ವಸುದೇವನು ಆಹುಕನು ಗದ ಪ್ರದ್ಯುಮ್ನ ಸಾಂಬರು ಮೊದಲಾದವರು ತಮ್ಮ ಪಾಪಪರಿಹಾರಕ್ಕೋಸ್ಕರ ಬಂದರು ; ಅನಿರುದ್ಧನೂ ಯೂಥಪತಿಯಾದ ಕೃತವರ್ಮನೂ ಸುಚಂದ್ರ ಶುಕ ಸಾರಣರೊಡನೆ ದ್ವಾರಕಾನಗರವನ್ನು ಸಂರಕ್ಷಿಸಲೋಸುಗ ಅಲ್ಲೇ ಇದ್ದರು ; ವಿಮಾನಗಳಿಗೆ ಸಮಾನಗಳಾದ ರಥಗಳಿಂದಲೂ ತೆರೆಗಳಂತೆ ವೇಗವುಳ್ಳ ಕುದುರೆಗಳಿಂದಲೂ ನೀಲಮೇಘಗಳಂತೆ ಪ್ರಕಾಶಿಸುವ ಗಜಗಳಿಂದಲೂ ವಿದ್ಯಾಧರರ ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ ಜನರಿಂದಲೂ ಪ್ರಕಾಶಮಾನರಾಗಿ ಕಾಂಚನಮಯವಾದ ಹಾರಾದ್ಯಾಭರಣಗಳುಳ್ಳವರಾಗಿ ದಿವ್ಯ ವಸ್ತ್ರಗಳಿಂದಲೂ ಪುಷ್ಪಮಾಲಿಕೆಗಳಿಂದಲೂ ಅಲಂಕೃತರಾಗಿ ತಮ್ಮತಮ್ಮ ಪತ್ನಿಗಳೊಡನೆ ವಿಮಾನಗಳಲ್ಲಿ ಸಂಚರಿಸುವ ದೇವತೆಗಳಂತೆ ಯಾದವರು ಮೊದಲಾದ ಅರಸರು ಆ ತೀರ್ಥಕ್ಕೆ ಬಂದು ಅಲ್ಲಿ ಸ್ನಾನಂಗೈದು ಉಪವಾಸವನ್ನು ಮಾಡಿ ಶುಚಿಗಳಾಗಿ ಸುವರ್ಣದಿಂದಲೂ ವಸ್ತ್ರಗಳಿಂದಲೂ ಪುಷ್ಪಮಾಲಿಕೆಗಳಿಂದಲೂ ಅಲಂಕೃತವಾಗಿ ಎಳೇ ಕರುಗಳಿಂದ ಯುಕ್ತವಾದ ಗೋವುಗಳನ್ನು ಬ್ರಾಹ್ಮಣರಿಗೆ ಕೊಟ್ಟರು ; ಯಾದವರು ಆ ಮಡುಗಳಲ್ಲಿ ಮೋಕ್ಷಸ್ನಾನವನ್ನು ಮಾಡಿ ತಮಗೆ ಯಾವಾಗಲು ಶ್ರೀಕೃಷ್ಣನಲ್ಲಿ ಭಕ್ತಿಯಿರಬೇಕೆಂದು ಬ್ರಾಹ್ಮಣರಿಗೆ ಸುವರ್ಣ ಮೊದಲಾದವನ್ನು ಕೊಟ್ಟು ಷಡ್ರಸೋಪೇತವಾದ ಮೃಷ್ಟಾನ್ನವನ್ನು ಭೋಜನಂಗೈಸಿ ಅವರ ಅಪ್ಪಣೆಯಿಂದ ತಾವೂ ಭೋಜನವನ್ನು ಮಾಡಿ ಸಂತೋಷದಿಂದ ಶೀತಳವಾದ ವೃಕ್ಷಗಳನ್ನಾಶ್ರಯಿಸಿ ವಿಶ್ರಮಿಸಿಕೊಂಡರು ; ಅಲ್ಲಿ ಸ್ನಾನಾರ್ಥವಾಗಿ ಬಂದ ಸ್ನೇಹಿತರಾಗಿ ದೇಹ ಸಂಬಂಧಿಗ

ಳಾದ ಮತ್ಸ್ಯದೇಶದವರು ಉಶೀನರಾಧಿಪತಿಗಳು ಕೋಸಲ ರಾಜ್ಯದ ಅರಸರು ವಿದರ್ಭದೇಶವಾಸಿಗಳು ಕುರುದೇಶದಲ್ಲಿರುವವರು ಸೃಂಜಯರು ಕಾಂಭೋಜರು ಕೇಕಯ ದೇಶದವರು ಮದ್ರರಾಜರು ಕುಂತೀ ರಾಜ್ಯದವರು ಸೌರಾಷ್ಟ್ರದವರು ಕೇರಳದೇಶದವರು ಮತ್ತು ಅನೇಕ ಬಾಂಧವರು ಅನ್ಯರಾದ ನೂರಾರುಮಂದಿ ಅರಸುಗಳು ನಂದನು ಮೊದಲಾದ ಸುಹೃತ್ತುಗಳಾದ ಗೋಪಾಲರು ಮೊದಲಾದವರು ಪರಸ್ಪರ ದರ್ಶನದಿಂದುಂಟಾದ ಸಂತೋಷಾತಿಶಯದಿಂದ ವಿಕಶಿತವಾದ ಹೃದಯ ಮುಖಪದ್ಮಗಳ ಕಾಂತಿಯುಳ್ಳವರಾಗಿ ಗಾಢಾಲಿಂಗನಂಗೈದು ಆನಂದ ಬಾಷ್ಪಗಳುಳ್ಳ ನೇತ್ರಂಗಳಿಂದಲೂ ರೋಮಾಂಚದಿಂದಲೂ ಕಲೆಬಿಗಿದು ಬರುವ ಕೊರಳಿನಿಂದಲೂ ತಡೆಯಲ್ಪಟ್ಟ ವಾಕ್ಯದಿಂದ ಸಂತೋಷವನ್ನೈದಿದರು; ಸ್ತ್ರೀಯರು ಅತ್ಯಂತ ಸ್ನೇಹವುಳ್ಳವರಾದಕಾರಣ ಪರಸ್ಪರ ದರ್ಶನದಿಂದುಂಟಾದ ಮುಗುಳುನಗೆಯಿಂದ ನಿರ್ಮಲವಾದ ಕಡೆಗಣ್ಣೋಟವುಳ್ಳವರಾಗಿ ಒಬ್ಬರನ್ನೊಬ್ಬರು ಕುಂಕುಮಕೇಸರಿಯಿಂದ ಲೇಪಿಸಲ್ಪಟ್ಟ ಸ್ತನಗಳಿಂದ ಸ್ತನಗಳನ್ನೊತ್ತುತ ಸ್ನೇಹಾಧಿಕ್ಯದಿಂದುಂಟಾದ ಆನಂದ ಬಾಷ್ಪವುಳ್ಳವರಾಗಿ ತಮ್ಮ ಭುಜಗಳಿಂದ ಆಲಿಂಗನಂಗೈದರು; ಅನಂತರದಲ್ಲಿ ಅವರೆಲ್ಲರು ವೃದ್ಧರನ್ನಭಿವಾದನಂಗೈದು ಚಿಕ್ಕವರಿಂದ ನಮಸ್ಕರಿಸಲ್ಪಟ್ಟು ಸ್ವಾಗತಪೂರ್ವಕವಾಗಿ ಕುಶಲಪ್ರಶ್ನೆಯನ್ನು ಮಾಡಿ ಅನ್ಯೋನ್ಯವಾಗಿ ಶ್ರೀಕೃಷ್ಣಲೀಲೆಗಳನ್ನು ಹೊಗಳುತಿದ್ದರು; ಆಗ ಕುಂತಿಯು ಅಣ್ಣತಮ್ಮಂದಿರನ್ನೂ ಅಕ್ಕತಂಗಿಯರನ್ನೂ ಸೋದರಳಿಯಂದಿರನ್ನೂ ಸೊಸೆಗಳನ್ನೂ ತಾಯಿ ತಂದೆಗಳನ್ನೂ ಅತ್ತಿಗೆ ನಾದಿನಿಯರನ್ನೂ ಶ್ರೀಕೃಷ್ಣನನ್ನೂ ನೋಡಿ ಪರಸ್ಪರ ಪ್ರೇಮಸಂವಾದದಿಂದ ಮನಃಕ್ಲೇಶಗಳನ್ನು ಬಿಟ್ಟು ತನ್ನ ಅಣ್ಣನಾದ ವಸುದೇವನನ್ನು ಕುರಿತು "ಎಲೈ ಪೂಜ್ಯನಾದ ಅಣ್ಣನೆ, ಸಾತ್ವಿಕರಲ್ಲಿ ಶ್ರೇಷ್ಠರಾದ ನೀವು ವಿಪತ್ತುಗಳುಂಟಾದಾಗಲೂ ನನ್ನ ವೃತ್ತಾಂತವನ್ನು ಸ್ಮರಿಸದಿದ್ದಕಾರಣ ನಾನು ಅಭಾಗ್ಯಳೆಂದು ತಿಳಿಯುತ್ತೇನೆ! ಎಲೈ ಅಣ್ಣನೆ, ಲೋಕದಲ್ಲಿ ಯಾವನಿಗೆ ದೈವವು ಅನುಕೂಲವಾಗಿರುವದಿಲ್ಲವೊ ಆ ಪುರುಷನು ಸ್ವಜನನಾದಾಗ್ಯೂ ಅವನನ್ನು ಮಿತ್ರರು ಜ್ಞಾತಿಗಳು ಪುತ್ರರು ಅಣ್ಣತಮ್ಮಂದಿರು ತಾಯಿತಂದೆಗಳು ಸಹಾ ಸ್ಮರಿಸುವದಿಲ್ಲ; ನನಗೆ ದೈವವೇ ಪ್ರತಿಕೂಲವಾಯಿತೇ ಹೊರ್ತು ನಿಮ್ಮ ಅಪರಾಧವೇನೂ ಇಲ್ಲ" ಎಂದು ನುಡಿದಳು.

ಅದನ್ನು ಕೇಳಿ ವಸುದೇವನು "ಎಲೌ ತಾಯೆ, ದೈವಕ್ಕೆ ಪಗಡೆ ಚದುರಂಗಗಳ ಕಾಯಿಗಳಂತೆ ಕ್ರೀಡಾಸಾಧನರೂಪರಾಗಿ ಮನುಷ್ಯರಾಗಿರುವ ನಮ್ಮನ್ನು ಕುರಿತು ಅಸೂಯೆಯನ್ನು ಪಡಬೇಡ; ಈಶ್ವರನ ವಶವರ್ತಿಯಾದ ಜನ್ಮವು ಅವನ ಪ್ರೇರಣೆಯಿಂದ ಯಾವದನ್ನಾದರು ಮಾಡುತ ಅವನಿಂದಲೆ ಮಾಡಿಸಲ್ಪಡುತಲೂ ಇದೆಯೇ ಹೊರ್ತು ತಾನು ಸ್ವತಂತ್ರವಾದದ್ದಲ್ಲ! ಎಲೇ ತಂಗಿಯೇ, ಕಂಸನಿಂದ ಬಾಧಿತರಾಗಿ ನಾವೆಲ್ಲರು ದಿಕ್ಕು ದಿಕ್ಕುಗಳಿಗೂ ಓಡಿಹೋಗಿದ್ದು ಈಗಲೇ ದೈವಕೃಪೆಯಿಂದ ಬಂದು ಸ್ವಸ್ಥಾನವನ್ನು ಶೇರಿದೆವು" ಎಂದು ಹೇಳಿದನು; ಆಗ ವಸುದೇವ ಉಗ್ರಸೇನರು ಮೊದಲಾದ ಯಾದವರಿಂದ ಅನೇಕ ವಿಧಗಳಾದ ರಾಜೋಪಚಾರಗಳಿಂದ ಪೂಜಿಸಲ್ಪಟ್ಟವರಾಗಿ ಅಲ್ಲಿ ಬಂದಿದ್ದ ಅರಸರೆಲ್ಲರು ಶ್ರೀಕೃಷ್ಣನ ದರ್ಶನದಿಂದುಂಟಾದ ಪರಮಾನಂದವನ್ನನುಭವಿಸುತ್ತಿದ್ದರು; ಭೀಷ್ಮನು ದ್ರೋಣನು ಧೃತರಾಷ್ಟ್ರನು ಮಕ್ಕಳ ಸಹಿತಳಾದ ಗಾಂಧಾರಿಯು ಪತ್ನಿಗಳೊಡಗೂಡಿದ ಪಾಂಡವರು ಕುಂತಿಯು ಸಂಜಯನು ವಿದುರನು ಕೃಪನು ಕುಂತಿಭೋಜನು ವಿರಾಟನು ಭೀಷ್ಮಕನು ಮಹಾತ್ಮಕನಾದ ನಗ್ನಜಿತ್ತುವು ಪುರುಜಿತ್ತುವು ದ್ರುಪದನು ಶೈಬ್ಯನು ಧೃಷ್ಟಕೇತುವು ಕಾಸೀರಾಜನು ವಿಶಾಲಾಕ್ಷನು ದಮಘೋಷನು ಮಿಥಿಲಾಧಿಪತಿಯು ಮದ್ರರಾಜನು ಕೇಕಯ ದೇಶಾಧಿಪತಿಯು ಯುಧಾಮನ್ಯುವು ಸುಶರ್ಮನು ಪುತ್ರಸಹಿತರಾದ ಬಾಹ್ಲೀಕರು ಧರ್ಮಪುತ್ರನನ್ನು ಆಶ್ರಯಿಸಿದವರು ಮೊದಲಾದವರೆಲ್ಲರು ತಮ್ಮ ತಮ್ಮ ಪತ್ನೀ ಪುತ್ರಾದಿಗಳಿಂದ ಯುಕ್ತರಾಗಿ ಲಕ್ಷ್ಮಿಗೆ ಆವಾಸಸ್ಥಾನವಾಗಿ ಸೌಂದರ್ಯಯುಕ್ತವಾದ ಶ್ರೀಕೃಷ್ಣನ ಶರೀರವನ್ನು ನೋಡಿ ಆಶ್ಚರ್ಯಯುಕ್ತರಾಗಿ ರಾಮಕೃಷ್ಣರಿಂದ ಪೂಜಿತರಾಗಿ ಸಂತೋಷದಿಂದ ಶ್ರೀಕೃಷ್ಣನ ಕೃಪೆಗೆ ಸರ್ವದಾ ಪಾತ್ರರಾದ ಯಾದವರನ್ನು ಕುರಿತು "ಎಲೈ ಭೋಜಪತಿಯಾದ ಉಗ್ರಸೇನನೆ, ಯೋಗಿಗಳಿಗೂ ನೋಡಲಶಕ್ಯನಾದ ಶ್ರೀಕೃಷ್ಣನನ್ನು ನೀವು ಬಾರಿಬಾರಿಗೂ ನೋಡುತ್ತಿರುವ ಕಾರಣ ಈ ಲೋಕದಲ್ಲಿ ಮನುಷ್ಯರೊಳಗೆ ನೀವೇ ಸಫಲವಾದ ಜನ್ಮವುಳ್ಳವರು;

ಯಾವ ಶ್ರೀಹರಿಯ ಕೃತಿಗತಿಗಳಿಂದ ಕೊಂಡಾಡಲ್ಪಟ್ಟ ಕೀರ್ತಿಯು ವಿಶ್ವವನ್ನೂ ಅಧಿಕವಾಗಿ ಪಾವನಗೈವದೊ— ಯಾವ ಹರಿಯ ಪಾದಪ್ರಕ್ಷಾಳನೋದಕವಾದ ಗಂಗೆಯೂ ಯಾವಾತನ ವೇದಶಾಸ್ತ್ರರೂಪವಾದ ವಾಕ್ಯೂ ವಿಶ್ವವನ್ನು ಪಾವನಗೈವವೊ—ಕಾಲದಿಂದ ದಗ್ಧವಾದ ಮಹಾತ್ಮ್ಯವುಳ್ಳ ಭೂಮಿಯು ಯಾವಾತನ ಪಾದಸ್ಪರ್ಶದಿಂದುಂಟಾದ ಶಕ್ತಿಯುಳ್ಳದ್ದಾಗಿ ನಮಗೆ ಸಕಲ ಮನೋರಥಗಳನ್ನು ಕೊಡುವದೋ ಅಂಥಾ ಶ್ರೀಹರಿಯ ದರ್ಶನವು ಸ್ಪರ್ಶವು ಅವನನ್ನನುಸರಿಸಿ ನಡೆಯುವದು ಸಲ್ಲಾಪವು ಸಹಶಯನವು ಏಕಾಸನಸ್ಥಿತಿಯು ಸಹಭೋಜನವು ವಿವಾಹಾದಿ ಸಂಬಂಧವು ಮೊದಲಾದವು ನಿಮಗುಂಟಾಗಿವೆ; ಸಂಸಾರಕ್ಕೆ ಕಾರಣವಾದ ಗೃಹಾಶ್ರಮದಲ್ಲಿರುವ ನಿಮ್ಮ ಗೃಹಗಳಲ್ಲಿ ಪರಮ ಸುಖಪ್ರದನಾದ ವಿಷ್ಣುವು ತಾನೇ ನೆಲಸಿರುವ ಕಾರಣ ನೀವೇ ಧನ್ಯರು" ಎಂದು ಸ್ತೋತ್ರಗೈದರು.

ಅನಂತರದಲ್ಲಿ ನಂದಗೋಪನು ಸ್ನಾನಾರ್ಥವಾಗಿ ಆ ಕ್ಷೇತ್ರಕ್ಕೆ ಶ್ರೀಕೃಷ್ಣನೆ ಮೊದಲಾದ ಯಾದವರು ಬಂದಿರುವದನ್ನು ಕೇಳಿ ಬಂಡಿಗಳಲ್ಲಿ ಹೇರಿದ್ದ ಸಮಸ್ತ ವಸ್ತುಗಳುಳ್ಳ ಗೋಪರಿಂದ ಪರಿವೃತನಾಗಿ ಕೃಷ್ಣಾದಿಗಳನ್ನು ನೋಡುವ ಇಚ್ಛೆಯಿಂದ ಅಲ್ಲಿಗೆ ಬರಲು ಯಾದವರು ಆತನನ್ನು ನೋಡಿ ತೆರಳಿದ ಪ್ರಾಣಗಳನ್ನು ಶರೀರಗಳು ಸೇರುವಂತೆ ಬಹಳ ದಿವಸಗಳಿಂದ ಕಾಣದಿದ್ದ ಕಾರಣ ಎದ್ದು ಗಾಢಾಲಿಂಗನಗೈದರು; ವಸುದೇವನು ಪ್ರೇಮದಿಂದ ವಿಹ್ವಲನಾಗಿ ... ಮರತು ಆನಂದಭರಿತನಾಗಿ ಆತನನ್ನಾಲಿಂಗಿಸಿ ಕಂಸನಿಂದ ಪಡೆದ ಕ್ಲೇಶಗಳನ್ನೂ ತಾನು ಪುತ್ರನನ್ನು ನಂದಗೋಕುಲದಲ್ಲಿ ತಂದಿಟ್ಟದ್ದನ್ನೂ ಸ್ಮರಿಸಿದನು! ಕೇಳೈ ಕುರುಶ್ರೇಷ್ಠನೆ, ಶ್ರೀಕೃಷ್ಣರಾಮರಿಬ್ಬರು ತಾಯಿತಂದೆಗಳಾದ ಯಶೋದಾನಂದರನ್ನು ನಮಸ್ಕರಿಸಿ ಅಭಿವಾದನಗೈದು ಪ್ರೇಮದಿಂದ ಆನಂದಬಾಷ್ಪಗಳುಳ್ಳವರಾಗಿ ಏನನ್ನೂ ಹೇಳಲಾರದೆ ಸುಮ್ಮನಿದ್ದರು; ಮಹಾನುಭಾವಳಾದ ಯಶೋದಾದೇವಿಯೂ ಆನಂದಯುಕ್ತನಾದ ನಂದನೂ ಪುತ್ರರನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಭುಜಗಳಿಂದ ಬಿಗಿದಪ್ಪಿ ಸಮಸ್ತ ಶೋಕಗಳನ್ನೂ ಬಿಟ್ಟರು; ಅನಂತರದಲ್ಲಿ ರೋಹಿಣೀ ದೇವಕೀದೇವಿಯರು ಗೋಕುಲಕ್ಕೆ ಈಶ್ವರಿಯಾದ ಯಶೋದಾದೇವಿಯನ್ನಾಲಿಂಗನಗೈದು ಆ ದೇವಿಯಿಂದ ಮಾಡಲ್ಪಟ್ಟ ಮೈತ್ರಿಯನ್ನು ಸ್ಮರಿಸುತ ಆನಂದ ಬಾಷ್ಪದೊಡಗೂಡಿ "ಎಲೌ ಯಶೋದಾದೇವಿಯೆ, ನಿಮ್ಮಿಂದ ಮಾಡಲ್ಪಟ್ಟ ಅತಿಶಯವಾದ ಮಿತ್ರತ್ವವನ್ನು ಯಾವಳೂ ಮರೆಯಳು; ಇಂದ್ರಸಂಬಂಧಿಯಾದ ಐಶ್ವರ್ಯವನ್ನು ಪಡೆದವರಿಂದಲೂ ಯಾವ ಉಪಕಾರಕ್ಕೆ ಪ್ರತ್ಯುಪಕಾರವು ಮಾಡಲಶಕ್ಯವೊ ಅಂಥಾ ಉಪಕಾರವನ್ನು ನೀವು ಮಾಡಿದಿರಿ! ಎಲೌ ಯಶೋದಾದೇವಿಯೆ, ತಾಯಿತಂದೆಗಳನ್ನರಿಯದಿದ್ದ ರಾಮಕೃಷ್ಣರು ಮಾತಾಪಿತೃಗಳಾದ ನಿಮ್ಮಲ್ಲಿರಿಸಲ್ಪಟ್ಟವರಾಗಿ ನೇತ್ರಗಳು ರೆಪ್ಪೆಗಳಿಂದ ರಕ್ಷಿಸಲ್ಪಡುವಂತೆ ಸಂರಕ್ಷಕರಾಗಿ ನಿಮ್ಮಿಬ್ಬರಿಂದ ಕೊಡಲ್ಪಟ್ಟ ಇಷ್ಟವಾದ ವಸ್ತುಗಳಿಂದ ಸಂತೋಷವನ್ನೂ ಜನ್ಮೋತ್ಸವ ಮೊದಲಾದ ಅಭ್ಯುದಯಗಳನ್ನೂ ಕಾಲಕಾಲದಲ್ಲಿ ಅಭ್ಯಂಜನ ಭೋಜನಗಳನ್ನೂ ನೂತನ ದುಕೂಲಗಳನ್ನೂ ಪಡೆದು ಯಾತರಿಂದಲು ಭಯವಿಲ್ಲದೆ ಸುಖವಿಂದಿದ್ದರು; ಲೋಕದಲ್ಲಿ ಸುಜನರಿಗೆ ಸ್ವಕೀಯ ಪರಕೀಯವೆಂಬ ಭೇದವಿಲ್ಲವಾದಕಾರಣ ನೀವು ಆ ರೀತಿ ಅವರನ್ನು ಪೋಷಿಸಿದಿರಿ" ಎಂದು ಹೇಳಿದರು!

ಆ ಸಮಯದಲ್ಲಿ ಗೋಪಸ್ತ್ರೀಯರು ಸರ್ವಪ್ರಕಾರದಿಂದಲೂ ಇಷ್ಟನಾದ ಶ್ರೀಕೃಷ್ಣನನ್ನು ಬಹುಕಾಲಕ್ಕೆ ಕಲವಾಗಿ ಕಂಡು ನೇತ್ರಗಳಿಗೆ ತೃಪ್ತಿಯಾಗುವಂತೆ ನೋಡುವದಕ್ಕೆ ವಿಘ್ನರೂಪಗಳಾದ ರೆಪ್ಪೆಗಳನ್ನು ಸೃಷ್ಟಿಸಿದ ಬ್ರಹ್ಮನನ್ನು ನಿಂದಿಸುತ ಕಣ್ಣುಗಳೆಂಬ ಬಾಗಲುಗಳಿಂದ ಹೃದಯಕಮಲವೆಂಬ ಮನೆಯಲ್ಲಿ ಪ್ರವೇಶಗೈಯಲ್ಪಟ್ಟ ಶ್ರೀಕೃಷ್ಣನನ್ನು ಸರ್ವಭಾವದಿಂದ ಆಲಿಂಗನಗೈದು ಯೋಗಿಗಳಿಗೂ ದುರ್ಲಭವಾದ ಕೃಷ್ಣಸ್ವರೂಪವನ್ನೈದಿದರು; ಶ್ರೀಕೃಷ್ಣನು ಅಧಿಕವಾದ ಭಕ್ತಿಪ್ರೇಮಗಳಿಂದ ಶ್ರೀಕೃಷ್ಣತಾದಾತ್ಮ್ಯವನ್ನೈದಿರುವ ಆ ಗೋಪಸ್ತ್ರೀಯರನ್ನೈದಿ ಏಕಾಂತದಲ್ಲಿ ಆಲಿಂಗನಗೈದು ಮುಗುಳುನಗೆಯುಳ್ಳ ಮುಖದಿಂದ ಕುಶಲಪ್ರಶ್ನೆ ಪೂರ್ವಕವಾಗಿ "ಎಲೇ ಸಖಿಯರಾದ ಗೋಪಸ್ತ್ರೀಯರುಗಳಿರಾ, ನಮ್ಮ ಮಾತಾಪಿತೃಗಳಾದ ದೇವಕೀ ವಸುದೇವರು ಮೊದಲಾದ ಸ್ವಜನರ ಕ್ಲೇಶವನ್ನು ಪರಿಹರಿಸುವದಕ್ಕೋಸ್ಕರವೂ ನಮ್ಮ ಶತ್ರುಗಳಾದ ಕಂಸಾದಿಗಳ ಸಂಹಾರಕ್ಕೋಸ್ಕರವೂ ಉ

ದ್ಯುಕ್ತನಾದ ಮನಸುಳ್ಳವನಾಗಿ ನಿಮ್ಮನ್ನು ಬಿಟ್ಟು ಮಥುರಾಪುರವನ್ನೈದಿ ಕಾರ್ಯಾಸಕ್ತನಾಗಿ ನಿಮ್ಮನ್ನು ನೋಡುವದಕ್ಕೆ ಬಾರದಿದ್ದ ನನ್ನನ್ನು ಸ್ಮರಿಸುತ್ತಿದ್ದಿರೆ! ಇವನು ನಾನು ಕೃತಜ್ಞನಲ್ಲವೆಂದು ಮನಸ್ಸಿನಲ್ಲಿ ಶಂಕಿಸಿ ನಿಂದೆಯನ್ನು ಮಾಡುತ್ತಿದ್ದೀರೊ! ವಾಯುವು ಆಕಾಶದಲ್ಲಿ ಮೇಘಗಳನ್ನು ಕೂಡಿಸುವ ರೀತಿಯಲ್ಲಿ ದೈವವು ಪ್ರಾಣಿಗಳನ್ನಗಲಿಸಿ ಕೂಡಿಸುತಲಿರುವದು ನಿಶ್ಚಯವು; ನನ್ನಲ್ಲಿ ಭಕ್ತಿಯು ಪ್ರಾಣಿಗಳಿಗೆ ಮೋಕ್ಷಪ್ರದವಾಗುವದು; ದೈವವಶದಿಂದ ನಿಮಗೆ ನನ್ನಲ್ಲುಂಟಾದ ಸ್ನೇಹವು ನನ್ನನ್ನೈದಿಸುವದು! ಎಲೈ ಗೋಪಸ್ತ್ರೀಯರುಗಳಿರಾ, ಘಟಲವಣ ಮುಂತಾದ ವಸ್ತುಗಳಿಗೆ ಪೃಥಿವ್ಯಪ್ತೇಜೋವಾಯ್ವಾಕಾಶಗಳು ಮೂಲಕಾರಣಗಳಾಗಿ ಒಳಗೂ ಹೊರಗೂ ಇರುವ ಹಾಗೆ ಜರಾಯುಜ ಅಂಡಜ ಸ್ವೇದಜ ಉದ್ಭಿಜ್ಜಗಳಾದ ಚತುರ್ವಿಧ ಪ್ರಾಣಿಸಮೂಹಗಳಿಗೂ ನಾನೇ ಒಳಗೂ ಹೊರಗೂ ಆದ್ಯಂತನಾದಕಾರಣ ನನ್ನನ್ನು ನೀವು ಅರಿಯಿರಿ; ಘಟಾದಿ ಭೌತಿಕ ಪದಾರ್ಥಗಳಿಗೆ ಪಂಚಮಹಾಭೂತಗಳು ಆದ್ಯಂತರೂಪಗಳಾಗಿರುವ ರೀತಿಯಲ್ಲಿ ಚತುರ್ವಿಧ ಪ್ರಾಣಿಗಳು ಭೂತಜನ್ಯಗಳಾದ ಕಾರಣ ತಮಗೆ ಕಾರಣಗಳಾದ ಪೃಥಿವ್ಯಾದಿಗಳಲ್ಲಿರುವವೇ ಹೊರ್ತು ಭೋಕ್ತೃವಾದ ಆತ್ಮನಲ್ಲಿಲ್ಲ; ಆತ್ಮನು ಭೂತಗಳಲ್ಲಿ ಭೋಕ್ತೃರೂಪದಿಂದಿರುವನಾದ್ದರಿಂದ ಆ ಭೂತಗಳೂ ಭೂತಸಂಬಂಧಿಗಳಾದ ವಸ್ತುಗಳೂ ಭೋಕ್ತೃವಾದ ಜೀವನೂ ಅಕ್ಷರನಾಗಿ ಪರಿಪೂರ್ಣನಾಗಿ ಪರಬ್ರಹ್ಮನಾದ ನನ್ನಲ್ಲಿರುವವು; ಈ ಅರ್ಥವನ್ನು ನೀವು ಮನಸ್ಸಿನಲ್ಲಿ ಭಾವನೆ ಮಾಡಿರಿ" ಎಂದು ನುಡಿದನು.

ಈ ಪ್ರಕಾರದಲ್ಲಿ ಶ್ರೀಕೃಷ್ಣನಿಂದ ಆಧ್ಯಾತ್ಮ ವಿದ್ಯೋಪದೇಶಗೈದು ಶಿಕ್ಷಿಸಲ್ಪಟ್ಟ ಆ ಗೋಪಸ್ತ್ರೀಯರು ಕೃಷ್ಣಾನುಸ್ಮರಣದಿಂದ ನಷ್ಟವಾದ ಲಿಂಗಶರೀರವುಳ್ಳವರಾಗಿ ಕೃಷ್ಣನನ್ನೈದಿ "ಎಲೈ ಪದ್ಮನಾಭನಾದ ಶ್ರೀಕೃಷ್ಣನೆ, ಅತಿಶಯವಾದ ಜ್ಞಾನವುಳ್ಳ ಯೋಗೀಶ್ವರರಿಂದ ಹೃದಯಕಮಲದಲ್ಲಿ ಧ್ಯಾನಿಸುವದಕ್ಕೆ ಯೋಗ್ಯನಾಗಿ ಸಂಸಾರವೆಂಬ ಕೂಪದಲ್ಲಿ ಬಿದ್ದಂಥಾವರನ್ನುದ್ಧರಿಸುವದಕ್ಕೆ ಆಧಾರವಾದ ನಿನ್ನ ಪಾದಪದ್ಮವು ಗೃಹವ್ಯಾಪಾರಗಳಲ್ಲಿರುವ ನಮಗೆ ಸರ್ವಥಾ ತೋರುತಲಿರಲಿ" ಎಂದು ಪ್ರಾರ್ಥಿಸಿದರು.

---

## ೮೩ನೇ ಅಧ್ಯಾಯ.

### ಶ್ರೀಕೃಷ್ಣನ ಮಡದಿಯರು ಆತನ ಚರಿತ್ರವನ್ನು ವರ್ಣಿಸಿದ್ದು.

ಎಲೈ ಅರಸೆ, ಅನಂತರದಲ್ಲಿ ಅವ್ಯಾಹತಷಡ್ಗುಣೈಶ್ವರ್ಯಸಂಪನ್ನನಾಗಿ ಜಗದ್ಗುರುವಾದ ಶ್ರೀಕೃಷ್ಣನು ಆ ಗೋಪಸ್ತ್ರೀಯರಿಗೆ ಸದ್ಗತಿರೂಪವಾದ ವೇದಾಂತಜ್ಞಾನವನ್ನನುಗ್ರಹಿಸಿ ಆಮೇಲೆ ಯುಧಿಷ್ಠಿರನು ಮೊದಲಾದ ಸರ್ವಸುಹೃತ್ತುಗಳನ್ನು ಕುರಿತು ಕುಶಲಪ್ರಶ್ನೆಯಂಗೈದನು; ಸರ್ವೇಶ್ವರನಾದ ಶ್ರೀಕೃಷ್ಣನಿಂದ ಕುಶಲಪ್ರಶ್ನೆಪೂರ್ವಕವಾಗಿ ಸತ್ಕರಿಸಲ್ಪಟ್ಟ ಯುಧಿಷ್ಠಿರನು ಮೊದಲಾದ ಮಿತ್ರರು ಸಂತುಷ್ಟಮನಸ್ಕರಾಗಿ ಆ ಭಗವಂತನ ಚರಣದರ್ಶನದಿಂದ ಪರಿಹರಿಸಲ್ಪಟ್ಟ ಪಾಪವುಳ್ಳವರಾಗಿ ಪ್ರತ್ಯುತ್ತರವನ್ನು ವಿಜ್ಞಾಪಿಸುತ "ಎಲೈ ಜಗದ್ಗುರುವಾದ ಶ್ರೀಕೃಷ್ಣನೆ, ಮಹಾತ್ಮರ ಹೃದಯದಲ್ಲಿದ್ದು ಅವರ ಮುಖಪದ್ಮದ ದೆಸೆಯಿಂದ ಹೊರಟುಬಂದಂಥಾದ್ದಾಗಿ ಪ್ರಾಣಿಗಳಿಗೆ ತಿರಿಗಿ ತಿರಿಗಿ ದೇಹವನ್ನುಂಟುಮಾಡುವ ಅಜ್ಞಾನವನ್ನು ಪರಿಹರಿಸುವ ನಿನ್ನ ಪಾದಾರವಿಂದ ಕಥಾಮೃತವನ್ನು ಯಾರು ಶ್ರೋತ್ರಗಳಿಂದ ಮನಸ್ಸಿಗೆ ತೃಪ್ತಿಯಾಗುವ ಪರ್ಯಂತವು ಪಾನಂಗೈಯುವಂಥಾ ನಮಗೆ ಅಶುಭಪ್ರಸಕ್ತಿ ಹ್ಯಾಗೆವುಂಟಾದೀತು! ಸ್ವಸ್ವರೂಪಪ್ರಕಾಶದಿಂದ ಪರಿಹರಿಸಲ್ಪಟ್ಟ ಬುದ್ಧಿಕೃತವಾದ ಅವಸ್ಥಾತ್ರಯವುಳ್ಳವನಾದಕಾರಣ ಆನಂದಸ್ವರೂಪನಾಗಿ ಅಪರಿಚ್ಛಿನ್ನನಾಗಿ ಅಕುಂಠಿತಬೋಧಶಕ್ತಿ ವಿಶಿಷ್ಟನಾಗಿ ಕಾಲವಶದಿಂದ ಮಲಿನಗಳಾದ ವೇದಗಳ ರಕ್ಷಣೆಗೋಸ್ಕರ ಮಾಯಾಕಲ್ಪಿತವಾದ ಮಾನುಷಾವತಾರವನ್ನು ಧರಿಸಿರುವ ನಿನ್ನನ್ನು ಕುರಿತು ನಮಸ್ಕರಿಸುತ್ತೇವೆ" ಎಂದು ನುಡಿದರು.

ಈ ಪ್ರಕಾರವಾಗಿ ಯುಧಿಷ್ಠಿರನು ಮೊದಲಾದ ಸರ್ವಜನರು ಉತ್ತಮಶ್ಲೋಕ ಶಿಖಾಮಣಿಯಾಗಿ ಭಕ್ತ ಚಿಂತಾಮಣಿಯಾಗಿ ಸಮಸ್ತ ಕಲ್ಯಾಣಗುಣಗಳಿಗೂ ಗಣಿಯಾಗಿ ಸಮಸ್ತ ಲೋಕಗಳಿಗೂ ದಣಿಯಾದ ಶ್ರೀಕೃಷ್ಣನನ್ನು ಸ್ತುತಿಸುತಲಿರಲು ಯಾದವ ಕೌರವ ಸ್ತ್ರೀಯರೂ ಇತರ ರಾಜಸ್ತ್ರೀಯರೂ ಬಂದು ಕಡೆಯಲ್ಲಿ ಕುಳಿತುಕೊಂಡು ತ್ರಿಲೋಕಗಳಲ್ಲಿಯೂ ಗಾನಂಗೈಯಲ್ಪಡುತಲಿರುವ ಶ್ರೀಕೃಷ್ಣನ ಕಥಾಮೃತಗಳನ್ನು ಬಾರಿಬಾರಿಗೂ ಗಾನಂಗೈದರು. ಎಲೈ ಅರಸೆ, ಆ ಅರ್ಥವನ್ನು ನಿನಗೋಸ್ಕರ ನಿರೂಪಿಸುತ್ತೇನೆ ಕೇಳು :- ದ್ರೌಪದಿಯು ರುಕ್ಮಿಣಿ ಮೊದಲಾದ ಶ್ರೀಕೃಷ್ಣನ ಪತ್ನಿಯರನ್ನು ಕುರಿತು "ಮಂಗಳಕರಳಾಗಿ ವಿದರ್ಭರಾಜ ಪುತ್ರಿಯಾದ ರುಕ್ಮಿಣಿಯೆ—ಜಾಂಬವತಿಯೆ—ಕೋಸಲರಾಜ ಪುತ್ರಿಯಾದ ಸತ್ಯಾದೇವಿಯೆ—ಸತ್ಯಭಾಮೆಯೆ—ಕಾಳಿಂದಿಯೆ—ಮಿತ್ರವಿಂದೆಯೆ—ಲಕ್ಷಣೆಯೆ—ಭದ್ರೆಯೇ ಮಿಕ್ಕ ಶ್ರೀಕೃಷ್ಣನ ಪತ್ನಿಯರುಗಳಿರಾ, ಭಗವಂತನಾದ ಶ್ರೀಕೃಷ್ಣನು ತನ್ನ ಮಾಯೆಯಿಂದ ಲೋಕವನ್ನನುಸರಿಸಿ ನಿಮ್ಮನ್ನೆಂತು ಮದುವೆಮಾಡಿಕೊಂಡನು? ಆ ಅರ್ಥವನ್ನು ನನಗೆ ಹೇಳೀ" ಎಂದು ಪ್ರಶ್ನೆಗೈದಳು.

ರುಕ್ಮಿಣಿಯು ಆಕೆಯನ್ನು ಕುರಿತು "ಕೇಳು ದ್ರೌಪದಿಯೆ, ಜರಾಸಂಧನು ಮೊದಲಾದ ಅರಸರು ಶಿಶುಪಾಲನಿಗೆ ನನ್ನನ್ನು ಕೊಡಿಸಬೇಕೆಂದು ನಿಶ್ಚಯಿಸಿ ಧನುರ್ಧಾರಿಗಳಾಗಿ ಕಾದಿರಲು ಮೃಗಾಧಿಪತಿಯಾದ ಸಿಂಹವು ಕುರಿಗಳ ಗುಂಪಿನ ದೆಶೆಯಿಂದ ತನಗೆ ಸಲ್ಲತಕ್ಕ ವಸ್ತುವನ್ನು ಅಪಹರಿಸುವ ಪ್ರಕಾರವಾಗಿ ಆ ಅರಸುಗಳ ಶಿರಸ್ಸಿನಲ್ಲಿ ತನ್ನ ಪಾದವನ್ನಿಟ್ಟು ನನ್ನನ್ನಪಹರಿಸಿಕೊಂಡು ಬಂದು ಪಾಣಿಗ್ರಹಣಮಾಡಿಕೊಂಡಂಥಾ ಶ್ರೀಕೃಷ್ಣನು ನಿರಂತರವು ನನ್ನಿಂದ ಪೂಜಿಸಲ್ಪಡಲಿ" ಅಂದಳು.

ಸತ್ಯಭಾಮೆಯು "ಕೇಳು ಪಾಂಚಾಲರಾಜ ಪುತ್ರಿಯಾದ ದ್ರೌಪದಿಯೆ, ಸಹೋದರನಾದ ಪ್ರಸೇನನು ಮಣಿಸಮೇತನಾಗಿ ಅರಣ್ಯವನ್ನು ಪ್ರವೇಶಿಸಿ ಸಿಂಹದಿಂದ ಸಂಹರಿಸಲ್ಪಡಲು ಆ ವ್ಯಸನದಿಂದ ತಪ್ತವಾದ ಮನಸ್ಸುಳ್ಳ ನನ್ನ ತಂದೆಯಾದ ಸತ್ರಾಜಿತ್ ರಾಯನು ಶ್ರೀಕೃಷ್ಣನಮೇಲೆ ಮಿಥ್ಯಾಪವಾದವನ್ನು ಹೇಳಿದನು; ಆ ಅಪವಾದವನ್ನು ಪರಿಹರಿಸಲೋಸುಗ ಶ್ರೀಕೃಷ್ಣನು ಅರಣ್ಯವನ್ನೈದಿ ಜಾಂಬವಂತನನ್ನು ಜಯಿಸಿ ಶ್ಯಾಮಂತಮಣಿಯನ್ನು ತಂದು ನಮ್ಮ ತಂದೆಯಾದ ಸತ್ರಾಜಿತ್ ರಾಯನಿಗೆ ಕೊಟ್ಟನು; ನಮ್ಮ ತಂದೆಯು ತನ್ನ ಅಪರಾಧವನ್ನು ಪರಿಹರಿಸಿಕೊಳ್ಳುವದಕ್ಕೋಸ್ಕರ ಆ ಮಣಿಯೊಡನೆ ನನ್ನನ್ನು ಶ್ರೀಕೃಷ್ಣನಿಗೆ ಸಮರ್ಪಿಸಿದನು" ಅಂದಳು.

ಜಾಂಬವತಿಯು "ಕೇಳು ಪಾಂಡವರಿಗೆ ಪಟ್ಟಮಹಿಷಿಯಾದ ದ್ರೌಪದಿಯೆ, ನಮ್ಮ ತಂದೆಯಾದ ಜಾಂಬವಂತನು ಆದಿಯಲ್ಲಿ ಭಗವಂತನ ಮಹಿಮೆಯನ್ನರಿಯದೆ ಶ್ಯಾಮಂತಕಮಣಿಯನ್ನರಸಿಕೊಂಡು ಬಂದ ವಾಸುದೇವನೊಡನೆ ಇಪ್ಪತ್ತೇಳು ದಿವಸಗಳ ಪರ್ಯಂತವು ಯುದ್ಧವನ್ನು ಮಾಡಿ ಪರೀಕ್ಷಿಸಿ ಅನಂತರದಲ್ಲಿ ಶ್ರೀಕೃಷ್ಣನನ್ನು ತನಗೆ ಸ್ವಾಮಿಯಾದ ಸಾಕ್ಷಾತ್ ಸೀತಾಪತಿಯೆಂದು ತಿಳಿದು ಪಾದಗಳಲ್ಲಿ ಪ್ರಣಾಮಂಗೈದು ನನ್ನನ್ನೂ ಆ ಮಣಿಯನ್ನೂ ಆತನಿಗೆ ಸಮರ್ಪಿಸಿದನು; ಅದರಿಂದ ನಾನು ಶ್ರೀಕೃಷ್ಣನಿಗೆ ದಾಸಿಯಾದೆನು" ಅಂದಳು.

ಕಾಳಿಂದಿಯು "ಎಲೇ ದ್ರೌಪದಿಯೆ, ನಾನು ಶ್ರೀಕೃಷ್ಣಪಾದಸ್ಪರ್ಶವನ್ನಪೇಕ್ಷಿಸಿ ಯಮುನಾತೀರದಲ್ಲಿ ತಪಸ್ಸನ್ನು ಮಾಡುತಿದ್ದೆನು; ಶ್ರೀಕೃಷ್ಣನು ತನ್ನ ಮಿತ್ರನಾದ ಅರ್ಜುನನೊಡಗೂಡಿ ಬಂದು ನನ್ನನ್ನು ಪಾಣಿಗ್ರಹಣಮಾಡಿಕೊಂಡನಾದ್ದರಿಂದ ಆತನ ಮನೆಯಲ್ಲಿ ಸಮ್ಮಾರ್ಜನಂಗೈವ ದಾಸಿಯಾದೆನು" ಅಂದಳು.

ಭದ್ರೆಯು "ಎಲೇ ದ್ರೌಪದಿಯೆ, ಲಕ್ಷ್ಮೀನಿವಾಸನಾದ ಕೃಷ್ಣನು ನನ್ನ ಸ್ವಯಂವರವನ್ನೈದಿ ಅರಸರನ್ನೂ ಅಪಕಾರಿಗಳಾದ ನನ್ನ ಸಹೋದರರನ್ನೂ ಯುದ್ಧದಲ್ಲಿ ಜಯಿಸಿ ನನ್ನನ್ನಪಹರಿಸಿಕೊಂಡು ತನ್ನ ಪುರವನ್ನೈದಿಸಿದನು; ಆತನ ಪಾದಪ್ರಕ್ಷಾಳನೆ ಮೊದಲಾದ ಸೇವೆಯು ನನಗೆ ಜನ್ಮಜನ್ಮದಲ್ಲಿಯೂ ದೊರೆಯಲಿ" ಅಂದಳು.

ಸತ್ಯಾದೇವಿಯು "ಎಲೇ ದ್ರೌಪದಿಯೆ, ಮಹಾ ಪುರುಷನಾದ ಶ್ರೀಕೃಷ್ಣನು ಅತಿಶಯವಾದ ಬಲವೂ ಪ್ರಭಾವವೂ ತೀಕ್ಷ್ಣಗಳಾದ ಕೊಂಬುಗಳೂ ಉಳ್ಳವಾಗಿ ಶೂರರಾದ ಕ್ಷತ್ರಿಯರ ಬಲವನ್ನು ಪರೀಕ್ಷಾರ್ಥವಾಗಿ ನಮ್ಮ

ತುಂಬಿಯಾದ ನಗ್ನಜಿದ್ರಾಯನಿಂದ ಪೋಷಿತಗಳಾದ ಏಳು ಮಹಾ ವೃಷಭಗಳನ್ನು ಲೀಲೆಯಿಂದ ಕಟ್ಟಿ ಕ್ಷತ್ರಿಯರನ್ನು ಜಯಿಸಿ ಶೌರ್ಯಶುಲ್ಕಳಾದ ನನ್ನನ್ನು ಅನೇಕ ಗಜಾಶ್ವರಥಪದಾತಿಗಳೊಡನೆಯೂ ಅನೇಕ ದಾಸಿಯರೊಡನೆಯೂ ತನ್ನ ಪುರಕ್ಕೆ ಕರೆದುಕೊಂಡು ಹೋದಂಥಾ ಶ್ರೀಕೃಷ್ಣನ ದಾಸಿಯನ್ನಾಗಿ ನನ್ನನ್ನು ತಿಳೀ" ಅಂದಳು.

ಮಿತ್ರವಿಂದೆಯು "ಕೇಳು ದ್ರೌಪದಿಯೆ, ನನ್ನ ತಂದೆಯು ಸೋದರಮಾವನ ಮಗನಾದ ಶ್ರೀಕೃಷ್ಣನನ್ನು ತಾನೇ ಕರೆಸಿ ಚತುರಂಗಬಲಗಳೊಡನೆಯೂ ದಾಸೀಜನರಿಂದಲೂ ಶ್ರೀಕೃಷ್ಣನ ಪಾದಾರವಿಂದ ಭಕ್ತಳಾದ ನನ್ನನ್ನು ಆತನಿಗೆ ಸಮರ್ಪಿಸಿದನು; ಕರ್ಮವಶದಿಂದ ನಾನಾಜನ್ಮಗಳಲ್ಲಿ ಸುತ್ತಿ ಬಳಲುವ ನನಗೆ ಇದೇ ಅಧಿಕವಾದ ಶ್ರೇಯೋಪ್ರಾಪ್ತಿಯು" ಅಂದಳು.

ಲಕ್ಷಣಾದೇವಿಯು "ಕೇಳು ದ್ರೌಪದಿಯೆ, ನಾರದನ ಮುಖದಿಂದ ಗಾನಂಗೈಯಲ್ಪಟ್ಟ ಶ್ರೀಕೃಷ್ಣನ ಆವಿರ್ಭಾವವನ್ನೂ ಆತನ ಲೀಲೆಗಳನ್ನೂ ಕೇಳಿ ವಿಚಾರಿಸಿ ಲೋಕಪಾಲಕರನ್ನು ಬಿಟ್ಟು ಸಾಕ್ಷಾತ್ ಲಕ್ಷ್ಮಿಯಿಂದ ಅಪೇಕ್ಷಿಸಲ್ಪಟ್ಟ ಶ್ರೀಕೃಷ್ಣನಲ್ಲಿ ಮಿತ್ರವಿಂದೆಯ ಮನಸ್ಸಿನಂತೆ ನನ್ನ ಮನಸ್ಸೂ ಆಸಕ್ತವಾಯಿತು; ಅನಂತರದಲ್ಲಿ ಬೃಹತ್ಸೇನನೆಂಬ ನಾಮಧೇಯವುಳ್ಳ ನನ್ನ ತಂದೆಯು ನನ್ನ ಅಭಿಪ್ರಾಯವನ್ನು ತಿಳಿದು ಪುತ್ರೀವಾತ್ಸಲ್ಯದಿಂದ ನನಗೆ ಆತನು ಪ್ರಾಪ್ತಿಯಾಗುವದರಲ್ಲಿ ಉಪಾಯವನ್ನು ಕಲ್ಪಿಸಿದನು; ನಿನ್ನ ತಂದೆಯಾದ ದ್ರುಪದರಾಯನು ಅರ್ಜುನನನ್ನು ನಿನಗೆ ಪತಿಯಾಗಿ ಮಾಡುವ ಇಚ್ಛೆಯಿಂದ ಮತ್ಸ್ಯಯಂತ್ರವನ್ನು ಮಾಡಿಸಿದ ರೀತಿಯಲ್ಲಿ ನನ್ನ ತಂದೆಯೂ ಒಂದು ಮತ್ಸ್ಯಯಂತ್ರವನ್ನು ಮಾಡಿಸಿದನು; ನಿಮ್ಮ ಯಂತ್ರವು ಹೊರಗೆ ಮುಚ್ಚಲ್ಪಟ್ಟಿದ್ದು; ನಮ್ಮದು ಹೊರಗೂ ಒಳಗೂ ಮುಚ್ಚಲ್ಪಟ್ಟು ಕೆಳಗಿದ್ದ ಕುಂಭದ ಜಲದಲ್ಲಿ ಕಾಣಲ್ಪಟ್ಟ ಮತ್ಸ್ಯದ ಪ್ರತಿಬಿಂಬವನ್ನು ನೋಡಿ ಮೇಲಣ ಮತ್ಸ್ಯವನ್ನು ಕೆಡಹತಕ್ಕದ್ದಾದಕಾರಣ ಆ ಸಾಹಸವು ಶ್ರೀಕೃಷ್ಣನನ್ನು ಹೊರ್ತು ಅನ್ಯರಿಗೆ ಸಾಧ್ಯವಾದ್ದಲ್ಲ; ಆ ಯಂತ್ರವೃತ್ತಾಂತವನ್ನು ಕೇಳಿ ಸಮಸ್ತ ಶಸ್ತ್ರಾಸ್ತ್ರವಿದ್ಯಾಪಾರಂಗತರಾಗಿ ಸಹಸ್ರಸಂಖ್ಯಾತರಾದ ಅರಸರು ತಮ್ಮ ತಮ್ಮ ಪುರೋಹಿತಾದಿಗಳ ಸಹಿತರಾಗಿ ನಮ್ಮ ತಂದೆಯ ಪಟ್ಟಣಕ್ಕೆ ಬಂದು ಅವರವರ ವಯೋವಿದ್ಯಾನುಸಾರವಾಗಿ ನಮ್ಮ ತಂದೆಯಿಂದ ಪೂಜಿಸಲ್ಪಟ್ಟು ನನ್ನಲ್ಲಿ ಆಸಕ್ತವಾದ ಚಿತ್ತವುಳ್ಳವರಾಗಿ ಆ ಮತ್ಸ್ಯವನ್ನು ಕೆಡಹಲೋಸುಗ ಧನುರ್ಬಾಣಗಳನ್ನು ಧರಿಸಿದರು; ಕೆಲವರು ಆ ಧನುಸ್ಸನ್ನು ಕೈಯಲ್ಲಿಡಿದು ಹೆದೆಯನ್ನೇರಿಸುವದಕ್ಕೆ ಅಸಮರ್ಥರಾಗಿ ಬಿಟ್ಟುಬಿಟ್ಟರು; ಜರಾಸಂಧ ಅಂಬಷ್ಟ ಶಿಶುಪಾಲರು ಧನುಸ್ಸಿನ ಕೊನೆಯ ಪರ್ಯಂತವು ಹೆದೆಯನ್ನು ಸೆಳೆದು ಬೊಗ್ಗಿಸಿ ಆ ಧನುಸ್ಸಿನಿಂದ ಚಿಮ್ಮಲ್ಪಟ್ಟವರಾಗಿ ಭೂಮಿಯಲ್ಲಿ ಬಿದ್ದರು; ಭೀಮನೂ ದುರ್ಯೋಧನನೂ ಕರ್ಣನೂ ಆ ಧನುಸ್ಸಿಗೆ ಹೆದೆಯನ್ನೇರಿಸಿ ಗುರಿಯನ್ನು ಕಾಣಲಾರದೆ ಹೋದರು; ಅರ್ಜುನನು ಜಲದಲ್ಲಿ ಮತ್ಸ್ಯದ ಬಿಂಬವನ್ನು ನೋಡಿ ಬಾಣಪ್ರಯೋಗವನ್ನು ಮಾಡಲು ಆ ಬಾಣಗಳು ಲಕ್ಷ್ಯವನ್ನು ಸೋಕಿ ಅದನ್ನು ಕೆಡಹಲಾರದೇ ಹೋದವು; ಈ ರೀತಿಯಿಂದ ಸಮಸ್ತ ಅರಸರು ಆ ಸಾಹಸವನ್ನು ಮಾಡಲಾರದೆ ಅವಮಾನವನ್ನೈದಿ ಹಿಂದಕ್ಕೆ ತಿರುಗಿ ಹೋಗಲು ಭಗವಂತನಾದ ಶ್ರೀಕೃಷ್ಣನು ಆ ಧನುಸ್ಸನ್ನು ತೆಗೆದುಕೊಂಡು ಲೀಲೆಯಿಂದ ಹೆದೆಯನ್ನೇರಿಸಿ ಒಂದು ಬಾಣವನ್ನು ತೊಟ್ಟು ಜಲದಲ್ಲಿದ್ದ ಆ ಮತ್ಸ್ಯವನ್ನು ನೋಡಿ ಸೂರ್ಯನು ಅಭಿಜಿನ್ನಾಮಕನಾಗಿ ಸರ್ವಾರ್ಥ ಸಾಧಕವಾದ ಮುಹೂರ್ತದಲ್ಲಿರಲು ಆ ಬಾಣದಿಂದ ಲಕ್ಷ್ಯವನ್ನು ಕತ್ತರಿಸಿ ಕೆಡಹಿದನು; ಆಗ ಜಯಶಬ್ದದೊಡಗೂಡಿದ ದೇವದುಂದುಭಿಗಳು ಧ್ವನಿಗೈದವು; ಸಂತೋಷಭರಿತರಾದ ದೇವತೆಗಳು ಪುಷ್ಪವರ್ಷವನ್ನು ಕರೆದರು; ಆ ಸಮಯದಲ್ಲಿ ನಾನು ಪುಷ್ಪಮಾಲೆಗಳಿಂದ ಅಲಂಕೃತವಾದ ತುರುಬುಳ್ಳವಳಾಗಿ ಲಜ್ಜೆಯಿಂದ ಕೂಡಿದ ಮುಗುಳುನಗೆಯಿಂದ ಶೋಭಿಸುವ ಮುಖಪದ್ಮವುಳ್ಳವಳಾಗಿ ನೂತನ ದಿವ್ಯದುಕೂಲಗಳನ್ನುಟ್ಟುಕೊಂಡು ಅವ್ಯಕ್ತ ಮಧುರವಾಗಿ ಧ್ವನಿಗೈವ ಕಾಲಂದಿಗೆಗಳಿಂದ ಮೆಲ್ಲಮೆಲ್ಲಗೆ ಅಡಿಗಳನ್ನಿಡುತ ಸುವರ್ಣಮಯವಾದ ರತ್ನಮಾಲೆಯನ್ನು ಕೈಗಳಲ್ಲಿ ಧರಿಸಿ ಆ ಸ್ವಯಂವರ ಮಂಟಪವನ್ನು ಪ್ರವೇಶಿಸಿ ಮನೋಹರಗಳಾದ ಓಲೆಗಳಿಂದ ಶೋಭಿಸುವ ಮುಖದಲ್ಲಿ ಚಿತ್ತಸಂತಾಪವನ್ನು ಪರಿಹರಿಸುವ ಕಡೆಗಣ್ನೋಟಗಳಿಂದ ಎಲ್ಲಾ ಕಡೆಯಲ್ಲಿಯೂ ಇದ್ದ ಅರಸ

ರನ್ನು ನೋಡುತ ಮೆಲ್ಲಗೆ ಬಂದು ಪ್ರೇಮದಿಂದ ಪೂರ್ಣವಾದ ಮನಸ್ಸುಳ್ಳವಳಾಗಿ ಶ್ರೀಕೃಷ್ಣನ ಕಂಠದಲ್ಲಿ ಆ ಮಾಲೆಯನ್ನು ಸಮರ್ಪಿಸಿದೆನು; ಆ ಸಮಯದಲ್ಲಿ ಮೃದಂಗಗಳು ಶಂಖಗಳು ಭೇರಿಗಳು ಮೊದಲಾದ ವಾದ್ಯಗಳು ಧ್ವನಿಗೈಯುತಿರಲು ನಟ ನರ್ತಕಿಯರು ನರ್ತನಗೈದರು; ಗಾಯಕರು ಗಾನಗೈದರು! ಕೇಳು ದ್ರೌಪದಿಯೆ, ಈ ರೀತಿಯಲ್ಲಿ ಸರ್ವಲೋಕೇಶ್ವರನಾದ ಶ್ರೀಕೃಷ್ಣನನ್ನು ನಾನು ವರಿಸಲು ಸಮಸ್ತ ಅರಸರೂ ಕಾಮಪೀಡಿತರಾಗಿ ಸಹಿಸಲಾರದೆ ಕೋಪದಿಂದಿದ್ದರು; ಆಗ ಶ್ರೀಕೃಷ್ಣನು ಯುದ್ಧಸನ್ನದ್ಧನಾಗಿ ಅತಿ ವೇಗಶಾಲಿಗಳಾದ ನಾಲ್ಕು ಕುದುರೆಗಳಿಂದ ಅಲಂಕೃತವಾದ ರಥದಲ್ಲಿ ನನ್ನನ್ನು ಕುಳ್ಳಿರಿಸಿ ಶಾರ್ಙ್ಗ ಧನುಸ್ಸನ್ನು ಹೆದೆಯೇರಿಸಿಕೊಂಡು ನಿಂತನು; ಅನಂತರದಲ್ಲಿ ಅರಣ್ಯದಲ್ಲಿ ಸಮಸ್ತ ಮೃಗಗಳ ಮಧ್ಯದಲ್ಲಿ ಮಹಾ ಸಿಂಹದಂತೆ ಪರಾಕ್ರಮಗೈಯುತ ನನ್ನನ್ನು ಎರಡು ಭುಜಗಳಿಂದಲೂ ಧನುರ್ಬಾಣಗಳನ್ನು ಎರಡು ಹಸ್ತಗಳಿಂದಲೂ ಧರಿಸಿ ಯುದ್ಧಸನ್ನದ್ಧನಾಗಿ ಸಾರಥಿಯಾದ ದಾರುಕನು ಸುವರ್ಣಮಯವಾದ ರಥಕ್ಕೆ ಕಟ್ಟಿರುವ ಅಶ್ವಗಳನ್ನು ನಡೆಯಿಸಲು ಸಮಸ್ತ ಅರಸರು ನೋಡುತ್ತಿರಲು ಅಲ್ಪಮೃಗಗಳನ್ನು ಜಯಿಸಲೋಸುಗ ತೆರಳುವ ಸಿಂಹದಂತೆ ತೆರಳಿದನು; ಆಗ ಕೆಲವು ಅರಸರು ಧನುಸ್ಸುಗಳನ್ನು ಧರಿಸಿ ಯುದ್ಧಾರ್ಥವಾಗಿ ಗ್ರಾಮಸಿಂಹಗಳು ಸಿಂಹವನ್ನಟ್ಟಿದಂತೆ ಶ್ರೀಕೃಷ್ಣನನ್ನಟ್ಟಿ ಬಂದು ಆತನ ಶಾರ್ಙ್ಗ ಧನುಸ್ಸಿನ ದೆಸೆಯಿಂದ ಪರಂಪರೆಯಾಗಿ ಹೊರಡುವ ಬಾಣಸಮೂಹಗಳಿಂದ ಕತ್ತರಿಸಲ್ಪಟ್ಟ ಕಂಠಗಳೂ ಭುಜಗಳೂ ತೊಡೆಗಳೂ ಪಾದಗಳೂ ಉಳ್ಳವರಾಗಿ ಭೂಮಿಯಲ್ಲಿ ಒರಗಿದರು; ಕೆಲವರು ದಿಕ್ಕುದಿಕ್ಕುಗಳಿಗೂ ಪಲಾಯನಗೈದರು! ಅನಂತರದಲ್ಲಿ ಯದುವೀರನಾದ ಶ್ರೀಕೃಷ್ಣನು ಸೂರ್ಯನನ್ನು ಮರೆಗೈವ ಧ್ವಜಪಟಗಳಿಂದಲೂ ನಾನಾ ವಿಚಿತ್ರ ತೋರಣಗಳಿಂದಲೂ ಭೂಪ್ರದೇಶದಲ್ಲಿಯೂ ಊರ್ಧ್ವಪ್ರದೇಶದಲ್ಲಿಯೂ ಅಲಂಕರಿಸಲ್ಪಟ್ಟ ಕುಶಸ್ಥಲೀ ಎಂಬ ನಾಮಧೇಯವುಳ್ಳ ದ್ವಾರಕಾಪುರವನ್ನು ಸಾಕ್ಷಾತ್ ಸೂರ್ಯನಂತೆ ಪ್ರವೇಶಿಸಿದನು.

ಆ ಬಳಿಕ ನನ್ನ ತಂದೆಯು ನಮ್ಮ ಸುಹೃತ್ತುಗಳನ್ನೂ ಸಂಬಂಧಿಗಳನ್ನೂ ಉತ್ತಮಗಳಾದ ವಸ್ತ್ರಾಲಂಕಾರ ಶಯನಪೀಠ ರತ್ನಗಳಿಂದ ಪೂಜಿಸಿ ಅನೇಕ ದಾಸೀಜನರನ್ನೂ ಸಮಸ್ತ ಸಂಪತ್ತುಗಳನ್ನೂ ಚತುರಂಗಬಲಗಳನ್ನೂ ಶ್ರೇಷ್ಠಗಳಾದ ಆಯುಧಗಳನ್ನೂ ಪೂರ್ಣಕಾಮನಾದ ಶ್ರೀಕೃಷ್ಣನಿಗೆ ಸಮರ್ಪಿಸಿದನು! ಎಲೇ ದ್ರೌಪದಿಯೇ, ಈ ಪ್ರಕಾರವಾಗಿ ನಾನು ಸಮಸ್ತ ವಿಷಯಭೋಗ ಪರಾಙ್ಮುಖಳಾಗಿ ಅನೇಕ ಜನ್ಮಗಳಲ್ಲಿ ಆಚರಿಸಲ್ಪಟ್ಟ ತಪಸ್ಸುಗಳಿಂದಲೂ ಸ್ವಧರ್ಮಾಚರಣೆಯಿಂದಲೂ ಶ್ರೀಕೃಷ್ಣನ ದಾಸಿಯಾದೆನು" ಅಂದಳು.

ಈ ಪ್ರಕಾರವಾಗಿ ಆ ಅಷ್ಟಮಹಿಷಿಯರು ನುಡಿದಾನಂತರದಲ್ಲಿ ಹದಿನಾರುಸಾವಿರ ಸಂಖ್ಯಾಕರಾದ ಶ್ರೀಕೃಷ್ಣಪತ್ನಿಯರು ದ್ರೌಪದಿಯನ್ನು ಕುರಿತು "ಎಲೇ ದ್ರೌಪದಿಯೆ, ಪೂರ್ಣಕಾಮನಾದ ಶ್ರೀಕೃಷ್ಣನು ಯುದ್ಧದಲ್ಲಿ ನರಕಾಸುರನನ್ನು ಸಂಹರಿಸಿ ಆತನು ಮೊದಲು ದಿಗ್ವಿಜಯಕಾಲದಲ್ಲಿ ಸಮಸ್ತ ಅರಸರನ್ನೂ ಜಯಿಸಿ ಬಲಾತ್ಕಾರದಿಂದ ಅರಸರ ಪುತ್ರಿಯರಾದ ನಮ್ಮನ್ನಪಹರಿಸಿ ಬಂಧನಾಗಾರದಲ್ಲಿ ಬಂಧಿಸಲು ಶ್ರೀಕೃಷ್ಣನನ್ನೇ ಸರ್ವಥಾ ಧ್ಯಾನಗೈಯುತಿದ್ದ ನಮ್ಮನ್ನು ತಿಳಿದು ಪಾಣಿಗ್ರಹಣಮಾಡಿಕೊಂಡನಾದಕಾರಣ ನಾವೆಲ್ಲರೂ ಆತನ ಗೃಹದಾಸಿಯರು! ಎಲೇ ದ್ರೌಪದಿಯೇ, ನಾವು ಸಾರ್ವಭೌಮಪದವು ಇಂದ್ರಪದವು ಲೋಕತ್ರಯ ಭೋಗಗಳು ಅಣಿಮಾದ್ಯಷ್ಟಸಿದ್ಧಿಗಳು ಬ್ರಹ್ಮಪದವು ಸಾಲೋಕ್ಯಾದಿಗಳು ಪರಮಪುರುಷಾರ್ಥವಾದ ಮೋಕ್ಷವು ಮೊದಲಾದವುಗಳನ್ನು ಅಪೇಕ್ಷಿಸುವದಿಲ್ಲ; ಸಕಲೈಶ್ವರ್ಯಪ್ರದಾನಳಾದ ಮಹಾಲಕ್ಷ್ಮಿಯ ಕುಚಕುಂಭ ಕುಂಕುಮದಿಂದ ಮಿಶ್ರವಾದ ಗಂಧಧಾರಿಯಾದ ಶ್ರೀಕೃಷ್ಣನ ಪಾದಪದ್ಮ ಧೂಳಿಯನ್ನು ನಿರಂತರದಲ್ಲಿಯೂ ಶಿರಸ್ಸುಗಳಲ್ಲಿ ಧರಿಸಲಿಚ್ಛೈಸುತ್ತೇವೆ; ಗೋವುಗಳನ್ನು ಮೇಯಿಸುತ ವನದಲ್ಲಿ ಸಂಚರಿಸುತಿದ್ದ ಮಹಾತ್ಮನಾದ ಶ್ರೀಕೃಷ್ಣನ ಪಾದಸ್ಪರ್ಶವನ್ನು ಗೋಪರೂ ಗೋಪಸ್ತ್ರೀಯರೂ ಕಿರಾತಸ್ತ್ರೀಯರೂ ವೃಕ್ಷಗಳೂ ಲತೆಗಳೂ ತೃಣಗಳೂ ಅಪೇಕ್ಷಿಸುವ ರೀತಿಯಲ್ಲಿ ನಾವು ಆತನ ಪಾದಸ್ಪರ್ಶವನ್ನೇ ಅಪೇಕ್ಷಿಸುತ್ತೇವೆ" ಎಂದು ಹೇಳಿದರು.

## ೮೪ನೇ ಅಧ್ಯಾಯ.

### ವಸುದೇವನು ಯಾಗಗಳನ್ನು ಮಾಡಿದ್ದು.

ಎಲೈ ಅರಸೆ, ಕುಂತಿಯು ಗಾಂಧಾರಿಯು ದ್ರೌಪದಿಯು ಸುಭದ್ರೆಯು ಮೊದಲಾದ ಸಮಸ್ತ ಕ್ಷತ್ರಿಯರ ಪತ್ನಿಯರೂ ಶ್ರೀಕೃಷ್ಣನ ದಾಸಿಯರಾದ ಗೋಪಸ್ತ್ರೀಯರೂ ರುಕ್ಮಿಣೀದೇವಿ ಮೊದಲಾದ ಶ್ರೀಕೃಷ್ಣಪತ್ನಿಯರಿಗೆ ಸರ್ವಾತ್ಮನಾದ ಶ್ರೀಕೃಷ್ಣನಲ್ಲಿರುವ ಪ್ರೇಮಾತಿಶಯವನ್ನು ಕೇಳಿ ಆನಂದಬಾಷ್ಪಪೂರ್ಣನೇತ್ರರಾಗಿ ಆಶ್ಚರ್ಯಯುಕ್ತರಾದರು; ಈ ಪ್ರಕಾರವಾಗಿ ಸ್ತ್ರೀಯರೊಡನೆ ಸ್ತ್ರೀಯರೂ ಪುರುಷರೊಡನೆ ಪುರುಷರೂ ಪರಸ್ಪರವಾಗಿ ಮಾತುಗಳನ್ನಾಡುತ್ತಿರಲು ಶ್ರೀಕೃಷ್ಣರಾಮರನ್ನು ನೋಡುವ ಇಚ್ಛೆಯಿಂದ ಸಮಸ್ತ ಋಷಿಗಳೂ ಆ ಕ್ಷೇತ್ರಕ್ಕೆ ಬಂದರು; ವೇದವ್ಯಾಸನು ನಾರದನು ಚ್ಯವನನು ದೇವಲನು ಅಸಿತನು ವಿಶ್ವಾಮಿತ್ರನು ಶತಾನಂದನು ಭರದ್ವಾಜನು ಗೌತಮನು ಜ್ಞಾನಸಂಪನ್ನನಾಗಿ ಶಿಷ್ಯರಸಮೇತನಾದ ಪರಶುರಾಮನು ವಶಿಷ್ಠನು ಗಾಲವನು ಭೃಗುವು ಪುಲಹನು ಅತ್ರಿಯು ಮಾರ್ಕಂಡೇಯನು ಬೃಹಸ್ಪತಿಯು ಏಕತನು ದ್ವಿತನು ತ್ರಿತನು ಬ್ರಹ್ಮಪುತ್ರನಾದ ಅಂಗೀರಸ್ಸು ಅಗಸ್ತ್ಯನು ಯಾಜ್ಞವಲ್ಕ್ಯನು ವಾಮದೇವನು ಮೊದಲಾದ ಋಷಿಗಳು ಅಲ್ಲಿ ಬಂದದ್ದನ್ನು ನೋಡಿ ಮೊದಲು ಬಂದಿದ್ದ ಅರಸರು ಮೊದಲಾದವರೂ ಪಾಂಡವರೂ ಜಗದ್ವಂದ್ಯರಾದ ಆ ಮಹರ್ಷಿಗಳನ್ನು ಕುರಿತು ನಮಸ್ಕರಿಸಿದರು; ಅದೇ ಪ್ರಕಾರವಾಗಿ ಬಲಭದ್ರಸಮೇತನಾದ ಶ್ರೀಕೃಷ್ಣನು ಕುಶಲಪ್ರಶ್ನೆ ಪೀಠಪ್ರದಾನ ಪಾದ್ಯಾರ್ಘ್ಯ ಪುಷ್ಪಮಾಲಿಕಾರ್ಪಣ ಧೂಪ ದೀಪಾನುಲೇಪನಗಳಿಂದ ಪೂಜಿಸಿ ಧರ್ಮಸಂರಕ್ಷಕವಾದ ಮಾನುಷದೇಹವುಳ್ಳವನಾಗಿ ಮೌನದಿಂದ ಆ ಮಹತ್ತಾದ ಸಭೆಯವರು ಕೇಳುತ್ತಿರಲು ಸುಖವಾಗಿ ಕುಳಿತಿದ್ದ ಆ ಮುನಿಗಳನ್ನು ಕುರಿತು "ಎಲೈ ಮಹರ್ಷಿಗಳಿರಾ, ದೇವತೆಗಳಿಗೂ ಅಲಭ್ಯವಾದ ನಿಮ್ಮಂಥಾ ಯೋಗೀಶ್ವರರ ದರ್ಶನವು ನಮಗೆ ದೊರೆಯಿತಾದಕಾರಣ ನಮ್ಮ ಜನ್ಮವೇ ಸಫಲವಾದದ್ದು; ಸ್ನಾನಮಾತ್ರದಿಂದಲೇ ತಪಸ್ವಿಗಳೆಂಬ ಬುದ್ಧಿಯುಳ್ಳವರಾಗಿ ಶಿಲಾಪ್ರತಿಮೆಗಳಲ್ಲಿ ದೇವತಾಬುದ್ಧಿಯುಳ್ಳ ಅಜ್ಞಾನಿಗಳಾದ ನಮಗೆ ನಿಮ್ಮ ದರ್ಶನವು ಸ್ಪರ್ಶನವು ಕುಶಲಪ್ರಶ್ನೆಗಳು ಪಾದಾಭಿವಂದನವು ಮೊದಲಾದವು ದೊರೆಯುವದು ಮಹಾ ಭಾಗ್ಯವು; ಲೋಕದಲ್ಲಿ ಜಲರೂಪಗಳಾದ ತೀರ್ಥಗಳೂ ಮೃಣ್ಮಯಗಳೂ ಶಿಲಾಮಯಗಳೂ ಆದ ದೇವತೆಗಳೂ ಬಹುಕಾಲಸೇವನೆಯಿಂದ ಪಾಪವನ್ನು ಪರಿಹರಿಸುವವು; ಆದರೆ ತಮ್ಮಂಥಾ ಸಾಧುಗಳು ತಮ್ಮ ದರ್ಶನಮಾತ್ರದಿಂದಲೇ ಪಾಪವನ್ನು ಪರಿಹರಿಸುವರು; ಅಗ್ನಿಯು ಸೂರ್ಯನು ಚಂದ್ರನು ನಕ್ಷತ್ರಗಳು ಭೂಮಿಯು ಜಲವು ಆಕಾಶವು ವಾಯುವು ವಾಕ್ಕು ಮನಸ್ಸು ಮೊದಲಾದವು ಭೇದಬುದ್ಧಿಗಳಾದವರಿಗಾದರೂ ಮುಹೂರ್ತಮಾತ್ರ ಸೇವೆಯಿಂದ ಪಾಪವನ್ನು ಪರಿಹರಿಸಿ ದಿವ್ಯಜ್ಞಾನವನ್ನು ಕೊಡುವವು; ವಾತ ಪಿತ್ಥ ಶ್ಲೇಷ್ಮಮಯವಾದ ಶರೀರದಲ್ಲಿ ಅಹಂಬುದ್ಧಿಯು ಕಳತ್ರಾದಿಗಳಲ್ಲಿ ತನ್ನವರೆಂಬ ಬುದ್ಧಿಯು ಭೂವಿಕಾರಗಳಾದ ಶಿಲಾದಿಗಳಲ್ಲಿ ಪೂಜ್ಯತಾಬುದ್ಧಿಯು ಜಲಮಾತ್ರದಲ್ಲಿ ತೀರ್ಥಬುದ್ಧಿಯು ಮೊದಲಾದವುಂಟಾಗಿ ಜ್ಞಾನಿಗಳಲ್ಲಿ ಪೂಜ್ಯತಾಬುದ್ಧಿಯೂ ಭಕ್ತಿಯೂ ಇಲ್ಲದ ಪುರುಷನು ಗೋರೂಪವುಳ್ಳ ಗರ್ದಭವೆಂದು ತಿಳಿಯಬೇಕು" ಎಂದು ನುಡಿದನು.

ಈ ಪ್ರಕಾರವಾದ ಲೋಕವಿಲಕ್ಷಣ ಬುದ್ಧಿಯುಳ್ಳ ಶ್ರೀಕೃಷ್ಣನ ಅನುರೂಪವಲ್ಲದ ವಚನವನ್ನು ಕೇಳಿ ಆ ಋಷಿಗಳು ಸ್ತಬ್ಧಚಿತ್ತರಾಗಿ ಸುಮ್ಮನಿರುತ ಬಹುಕಾಲವು ಆಲೋಚಿಸಿ ಆಶ್ಚರ್ಯಯುಕ್ತರಾಗಿ ಆತನನ್ನು ಕುರಿತು "ಎಲೈ ಈಶ್ವರನಾದ ಶ್ರೀಕೃಷ್ಣನೆ, ನಿನ್ನ ಕಪಟಮಾನುಷ ವೇಷಕ್ಕೆ ಉಪಯುಕ್ತವಾದ ಈ ವಾಕ್ಕು ಲೋಕಸಂಗ್ರಹಾರ್ಥವಾಗಿಯೇ ಹೊರ್ತು ಪರಮಾರ್ಥವಲ್ಲ; ತತ್ವವನ್ನು ತಿಳಿದವರೊಳಗೆ ಉತ್ತಮರಾದ ನಾವು ಪ್ರಜೇಶ್ವರರಿಗೂ ಅಧಿಕರಾದಾಗ್ಯೂ ನಿನ್ನ ಮಾಯೆಯಿಂದ ಮೋಹಿತರಾಗುತ್ತೇವೆ; ನೀನು ನಿನ್ನ ಸ್ವಸ್ವರೂಪವನ್ನು ಮರೆಮಾಡಿಕೊಂಡು ಕಪಟಮಾನುಷನಾಗಿ ಜಗದ್ರಕ್ಷಣೆಯನ್ನು ಮಾಡುತಿದ್ದೀ; ಭಗವಂತನಾದ ನಿನ್ನ ಲೀಲೆಯು ಆಶ್ಚರ್ಯಕರವಾದದ್ದು; ಭೂದೇವಿಯು ಘಟಶರಾದ್ಯನೇಕ ರೂಪಗಳಿಂದ ಅನೇಕ ನಾಮಗಳುಳ್ಳವಳಾಗಿರುವ ಪ್ರಕಾರದಲ್ಲಿ ಅಕ್ರಿಯನಾದ ನೀನು ಸ್ವರೂಪಮಾತ್ರದಿಂದ ಬಹುಪ್ರಕಾರವಾಗಿ ಜಗತ್ತನ್ನು ಸೃಷ್ಟಿಸಿ ಪಾಲಸಂಗೈದು ಲಯವ

ನ್ನೈದಿಸಿ ಈ ಜಗತ್ತಿನಲ್ಲಿ ತಗಲದವನಾದಕಾರಣ ಪರಿಪೂರ್ಣನಾದ ನಿನ್ನ ಚರಿತ್ರೆಯು ಲೋಕವಿಡಂಬನಾರ್ಥವೇ ಹೊರ್ತು ತತ್ವವಲ್ಲವು; ವರ್ಣಾಶ್ರಮಸ್ವರೂಪನಾಗಿ ಪರಮಪುರುಷನಾದ ನೀನು ಕಾಲವಿಶೇಷದಲ್ಲಿ ಸ್ವಜನರಕ್ಷಣಾರ್ಥವಾಗಿಯೂ ದುಷ್ಟನಿಗ್ರಹಾರ್ಥವಾಗಿಯೂ ಶುದ್ಧಸತ್ವರೂಪವನ್ನು ಧರಿಸಿ ಸದಾಚಾರದಿಂದ ವೇದಮಾರ್ಗವನ್ನು ರಕ್ಷಿಸುತ್ತೀ; ಪರಿಶುದ್ಧವಾದ ವೇದವೇ ನಿನ್ನ ಅಂತರಂಗರೂಪವು; ಯಾವ ವೇದದಿಂದ ಕಾರ್ಯರೂಪವಾದ ಪ್ರಪಂಚಕ್ಕೂ ಕಾರಣರೂಪವಾದ ಪ್ರಕೃತಿಗೂ ಅನ್ಯವಾದ ಬ್ರಹ್ಮವು ತಪಸ್ಸಿನಿಂದಲೂ ಪಠನದಿಂದಲೂ ಮನೋನಿಗ್ರಹದಿಂದಲೂ ತಿಳಿಯಲ್ಪಡುವದೋ ಅಂಥಾ ವೇದವೇ ನಿನ್ನ ಹೃದಯವು; ಆದಕಾರಣ ವೇದಪ್ರವರ್ತಕವಾದ ಬ್ರಾಹ್ಮಣಕುಲವು ವೇದಪ್ರಮಾಣಕನಾದ ನಿನಗೆ ಶ್ರೇಷ್ಠವಾದ ಪೂಜಾಸ್ಥಾನವು; ಆ ಬ್ರಾಹ್ಮಣಕುಲವನ್ನು ಪೂಜಿಸುತ್ತೀಯಾದ್ದರಿಂದ ನೀನು ಬ್ರಾಹ್ಮಣಪ್ರಿಯರೊಳಗೆ ಅಗ್ರೇಸರನಾದವನು; ಈಗ ನಿನ್ನ ದರ್ಶನದಿಂದ ನಮ್ಮ ಜನ್ಮವೂ ವಿದ್ಯವೂ ತಪಸ್ಸೂ ನೇತ್ರಗಳೂ ಸಫಲಗಳಾದವು; ನೀನು ಸಮಸ್ತ ಶ್ರೇಯಸ್ಸುಗಳಿಗೂ ನಿಧಿಯಾದಕಾರಣ ಸಜ್ಜನರಿಗೆ ಗತಿಯಾದ ನಿನ್ನ ಸಂಗವನ್ನು ಪಡೆದು ಸಲ್ಲಾಪಮಾಡಿ ಧನ್ಯರಾದೆವು; ಅವ್ಯಾಹತವಾದ ಬುದ್ಧಿಯುಳ್ಳವನಾಗಿ ಸ್ವಕೀಯವಾದ ಯೋಗಮಾಯೆಯಿಂದ ಮರೆಮಾಡಲ್ಪಟ್ಟ ನಿಜಮಹಿಮೆಯುಳ್ಳವನಾಗಿ ಪರಮಾತ್ಮನಾಗಿ ಭಗವಂತನಾಗಿ ಸರ್ವಲೋಕಪ್ರಸಿದ್ಧನಾಗಿ ಶ್ರೀಕೃಷ್ಣನಾದ ನಿನಗೆ ನಮಸ್ಕಾರ! ಈ ಅರಸರು ಒಂದೇಸ್ಥಾನದಲ್ಲಿ ನಿನ್ನ ಸಹವಾಸದಲ್ಲಿದ್ದಾಗ್ಯೂ ಮಾಯೆಯೆಂಬ ತೆರೆಯಿಂದ ತಿರೋಹಿತನಾಗಿ ಅಂತರ್ಯಾಮಿಯಾಗಿ ಸೃಷ್ಟ್ಯಾದಿ ಕಾರಣನಾಗಿ ಸರ್ವ ನಿಯಾಮಕನಾದ ನಿನ್ನನ್ನರಿಯರು; ಇವರು ಸ್ವಪ್ನಗಳನ್ನನುಭವಿಸುವ ಪುರುಷನು ಸ್ವಪ್ನದಲ್ಲಿ ತೋರುವ ವಸ್ತುಗಳಲ್ಲಿ ಯಥಾರ್ಥವೆಂಬ ಬುದ್ಧಿಯುಳ್ಳವನಾಗಿ ನಾಮಮಾತ್ರವಾಗಿ ಮನಸ್ಸಿನಿಂದ ತೋರಲ್ಪಟ್ಟ ಸಿಂಹ ವ್ಯಾಘ್ರಾದಿರೂಪವಾಗಿ ತನ್ನನ್ನು ತಿಳಿಯುತ ಅನ್ಯವಾಗಿ ಸ್ವಕೀಯವಾಗಿ ದೇವದತ್ತಾದ ರೂಪವನ್ನು ತಿಳಿಯದ ಹಾಗೆ ಸರ್ವಾಂತರ್ಯಾಮಿಯಾದ ನಿನ್ನನ್ನರಿಯರು! ಎಲೈ ಪರಬ್ರಹ್ಮನಾದ ಶ್ರೀಕೃಷ್ಣನೆ, ಈ ಜನಗಳು ಸ್ವಪ್ನವಸ್ತುಗಳಂತೆ ತೋರುವಿಕೆಮಾತ್ರವುಳ್ಳ ಮಿಥ್ಯಾ ವಿಷಯಗಳಲ್ಲಿ ಇಂದ್ರಿಯಪ್ರವರ್ತಿಯೆಂಬ ಮಾಯೆಯಿಂದ ಭ್ರಾಂತಿಯನ್ನೈದಿದ ಚಿತ್ತವುಳ್ಳವರಾಗಿ ವಿವೇಕವಿಲ್ಲದೆ ಮಿಥ್ಯಾನಾಮರೂಪಗಳಿಂದ ರಹಿತನಾದ ನಿನ್ನನ್ನು ತಿಳಿಯುವದಿಲ್ಲ; ಪಾಪಸಮೂಹವನ್ನು ಪರಿಹರಿಸುವ ಗಂಗಾನಾಮಕವಾದ ತೀರ್ಥಕ್ಕೆ ಆಶ್ರಯವಾಗಿ ಪರಿಪೂರ್ಣವಾದ ಯೋಗವುಳ್ಳವರಿಂದಲೂ ಹೃದಯಕಮಲದಲ್ಲಿ ಧ್ಯಾನಿಸಲ್ಪಡುವ ನಿನ್ನ ಪಾದಪದ್ಮವನ್ನು ಬಹು ಪುಣ್ಯಾತಿಶಯದಿಂದ ನೋಡಿದೆವು; ಅಧಿಕವಾದ ಭಕ್ತಿಯಿಂದ ಪರಿಹರಿಸಲ್ಪಟ್ಟ ಜೀವಕೋಶಗಳುಳ್ಳವರು ನಿನ್ನ ಪದವನ್ನೈದುವರು" ಎಂದು ನುಡಿದರು.

ಮುನಿಗಳು ಈ ರೀತಿ ಶ್ರೀಕೃಷ್ಣನನ್ನು ಸ್ತುತಿಸಿ ಆತನ ಅಪ್ಪಣೆಯನ್ನು ತೆಗೆದುಕೊಂಡು ಧೃತರಾಷ್ಟ್ರನನ್ನೂ ಧರ್ಮರಾಯನನ್ನೂ ಅಪ್ಪಣೆ ಕೇಳಿ ತಮ್ಮ ಆಶ್ರಮಗಳನ್ನು ಕುರಿತು ತೆರಳುವ ಸಮಯದಲ್ಲಿ ವಸುದೇವನು ಆ ಮುನಿಗಳನ್ನು ಕಳುಹಿಸುವದಕ್ಕಾಗಿ ಸಂಗಡ ನಡೆದು ನಮಸ್ಕರಿಸಿ ಎರಡು ಕೈಗಳಿಂದಲೂ ಆ ಋಷಿಗಳ ಪಾದಗಳನ್ನಿಡಿದುಕೊಂಡು ಅವರನ್ನು ಕುರಿತು "ಎಲೈ ಋಷಿಗಳಿರಾ, ಸರ್ವ ದೇವತೆಗಳೂ ಯಾರಲ್ಲಿ ವಾಸಿಸುವರೊ ಅಂಥಾ ನಿಮಗೆ ನಮಸ್ಕಾರ; ನನ್ನ ವಾಕ್ಯವನ್ನು ಲಾಲಿಸಿ ಯಾವದರಿಂದ ಕರ್ಮ ವಿರಕ್ತಿಯುಂಟಾಗುವದೋ ಅದನ್ನು ತಿಳಿಯಿಸೀ" ಎಂದು ಪ್ರಾರ್ಥಿಸಿದನು.

ಅವರು ಆತನು ಶ್ರೀಕೃಷ್ಣನನ್ನು ಬಿಟ್ಟು ತಮ್ಮನ್ನು ಕೇಳುವದಕ್ಕೆ ನಿಮಿತ್ತವೇನೆಂದು ಆಶ್ಚರ್ಯಪಡುತಿರಲು ನಾರದನು ಅವರನ್ನು ಕುರಿತು "ಎಲೈ ಬ್ರಾಹ್ಮಣರಿರಾ, ವಸುದೇವನು ಶಾಸ್ತ್ರಾರ್ಥವನ್ನು ತಿಳಿಯುವ ಇಚ್ಛೆಯಿಂದ ಕೃಷ್ಣನನ್ನು ಬಿಟ್ಟು ನಮ್ಮನ್ನು ಪ್ರಶ್ನೆಗೈದದ್ದು ಆಶ್ಚರ್ಯವಲ್ಲ; ಈತನು ಸರ್ವಥಾ ಆತನ ಸಮೀಪದಲ್ಲಿರುವದೇ ಕಾರಣವು; ಮನುಷ್ಯರು ಸಮೀಪದಲ್ಲಿರುವ ಸಂಜೀವಿನಿಯನ್ನಾದರೂ ಸಾಧಾರಣ ತೃಣದಂತೆ ಅನಾದರಣೆಗೈವರು; ಗಂಗಾತೀರದಲ್ಲಿ ವಾಸಿಸುವ ಮನುಷ್ಯನು ಆ ತೀರ್ಥವನ್ನು ಬಿಟ್ಟು ತನ್ನ ಶುದ್ಧಿಗೋಸ್ಕರ ಇತರ ಜಲವನ್ನಪೇಕ್ಷಿಸು

ವರಿಗೆ ಸಮೀಪಸ್ಥಾನ ಪದಾರ್ಥಗಳಲ್ಲಿ ಜನರಿಗೆ ಆದರಣೆ ಇರುವದಿಲ್ಲ; ಯಾವ ಪರಮಾತ್ಮನ ಸ್ವರೂಪಭೂತವಾದ ಜ್ಞಾನಕ್ಕೆ ಕಾಲದಿಂದಲೂ ಉಪಹತಿಯಿಲ್ಲವೋ—ಯಾವನಿಗೆ ತನ್ನಿಂದಲೂ ಅನ್ಯವಸ್ತುವಿನಿಂದಲೂ ಸರ್ವಪ್ರಪಂಚದ ಸೃಷ್ಟಿ, ಸ್ಥಿತಿ ಲಯಾದಿಗಳಿಂದಲೂ ಗುಣಗಳಿಂದಲೂ ಉಪಹತಿಯಿಲ್ಲವೋ—ಯಾವನು ತನ್ನಿಂದಲೇ ಕಲ್ಪಿತಗಳಾದ ಮೇಘ ಹಿಮ ರಾಹುಬಿಂಬಾದಿಗಳಿಂದ ಆಚ್ಛಾದಿತನಾದ ಸೂರ್ಯನಂತೆ ಮಾಯಾಕಲ್ಪಿತಗಳಾದ ಕ್ಲೇಶಗಳಿಂದಲೂ ತಜ್ಜನ್ಯಗಳಾದ ಕರ್ಮಗಳಿಂದಲೂ ತತ್ಫಲಗಳಾದ ಸುಖದುಃಖಗಳಿಂದಲೂ ಸತ್ವಾದಿ ಗುಣಪ್ರವಾಹಗಳಿಂದಲೂ ಪ್ರಾಣಾದಿಗಳಿಂದಲೂ ಆಚ್ಛಾದಿತವಾಗಿರುವ ಯಾತರಿಂದಲೂ ಅಪ್ರತಿಹರವಾದ ಅನುಭವಸ್ವರೂಪನಾಗಿ ದ್ವಿತೀಯವಸ್ತುರಹಿತನಾದ ಪರಮೇಶ್ವರನೋ—ಅಂಥಾ ಕೃಷ್ಣನನ್ನು ಮೂಢಜನರು ಸಾಧಾರಣಮನುಷ್ಯನೆಂದು ತಿಳಿಯುವರು" ಎಂದು ನುಡಿದನು.

ಅನಂತರದಲ್ಲಿ ಆ ಋಷಿಗಳು ವಸುದೇವನನ್ನು ಕುರಿತು ಸಮಸ್ತ ಅರಸರೂ ರಾಮಕೃಷ್ಣರೂ ಕೇಳುತ್ತಿರಲು "ಕೇಳೈ ವಸುದೇವನೆ, ಸರ್ವಯಜ್ಞೇಶ್ವರನಾದ ವಿಷ್ಣುವನ್ನು ಭಕ್ತಿಪೂರ್ವಕವಾಗಿ ಯಜ್ಞಗಳಿಂದ ಪೂಜಿಸುವದೇ ಕರ್ಮವಿರಕ್ತಿಗೆ ಸಾಧನವಾದದ್ದೆಂದು ಶಾಸ್ತ್ರಗಳಲ್ಲಿ ನಿರೂಪಿಸಲ್ಪಟ್ಟದೆ; ಚಿತ್ತದ ಉಪಶಾಂತಿಗೆ ಕಾರಣವಾದ ಮೋಕ್ಷೋಪಾಯವು ಅದೇ; ಆತ್ಮಸಂತೋಷವನ್ನುಂಟುಮಾಡುವ ಆ ಧರ್ಮವೇ ಸುಲಭೋಪಾಯವು; ಸ್ವಶಕ್ತ್ಯನುರೂಪವಾಗಿ ಸಂಪಾದಿಸಲ್ಪಟ್ಟ ಪರಿಶುದ್ಧವಾದ ದ್ರವ್ಯದಿಂದ ಭಕ್ತಿಶ್ರದ್ಧಾಪೂರ್ವಕವಾಗಿ ಪರಮಪುರುಷನನ್ನು ಪೂಜಿಸುವದೇ ಗೃಹಸ್ಥಾಶ್ರಮಿಯಾದ ಸತ್ಪುರುಷನಿಗೆ ಶ್ರೇಯಸ್ಕರವಾದ ಮಾರ್ಗವು; ನ್ಯಾಯಾರ್ಜಿತಧನದಿಂದ ಯಜ್ಞಗಳನ್ನೂ ದಾನಗಳನ್ನೂ ಮಾಡಿದನಂತರದಲ್ಲಿ ವಿತ್ತೇಷಣವನ್ನು ಬಿಡಬೇಕು; ಭೋಗಗಳನ್ನನುಭವಿಸಿ ಅದರ ಸ್ವರೂಪವನ್ನು ತಿಳಿದನಂತರದಲ್ಲಿ ಪತ್ನೀಪುತ್ರರಲ್ಲಿ ಆಸಕ್ತಿಯನ್ನು ಬಿಡಬೇಕು; ಅಶಾಶ್ವಿತಗಳೆಂಬ ಅನುಸಂಧಾನದಿಂದ ಸ್ವರ್ಗಾದಿ ಲೋಕಗಳಲ್ಲಿ ಇಚ್ಛೆಯನ್ನು ಬಿಡಬೇಕು! ಎಲೈ ಸಮರ್ಥನಾದ ವಸುದೇವನೆ, ವಿದ್ವಾಂಸರಾದವರು ಗ್ರಾಮವಾಸದಲ್ಲಿಚ್ಛೆಯನ್ನು ಬಿಟ್ಟು ವನವನ್ನೈದುವರು; ಗೃಹಸ್ಥಾಶ್ರಮವುಳ್ಳ ಬ್ರಾಹ್ಮಣನು ದೇವರ್ಷಿಪಿತೃಗಳ ಮೂರು ಋಣಗಳ ಸಮೇತನಾಗಿ ಹುಟ್ಟುವನು; ಆದಕಾರಣ ಯಜ್ಞಗಳಿಂದ ದೇವಋಣವನ್ನು ಪರಿಹರಿಸಿಕೊಂಡು ಬ್ರಹ್ಮಚರ್ಯದಿಂದ ಋಷಿಋಣವನ್ನು ಪರಿಹರಿಸಿಕೊಂಡು ಪುತ್ರೋತ್ಪಾದನೆಯಿಂದ ಪಿತೃಋಣವನ್ನು ಪರಿಹರಿಸಿಕೊಂಡು ಋಣತ್ರಯಮುಕ್ತನಾದವನು ಧನ್ಯನು! ಕೇಳು ಬುದ್ಧಿಶಾಲಿಯಾದ ವಸುದೇವನೆ, ನೀನು ಋಷಿಋಣದಿಂದಲೂ ಪಿತೃಋಣದಿಂದಲೂ ಮುಕ್ತನಾಗಿದ್ದೀ; ಯಜ್ಞಗಳಿಂದ ದೇವಋಣವನ್ನು ತೀರಿಸಿಕೊಂಡು ವಾನಪ್ರಸ್ಥಾಶ್ರಮವನ್ನು ಕೈಕೊಂಡು ಮೋಕ್ಷದಲ್ಲಿ ದೃಷ್ಟಿಯನ್ನಿಡು; ಈಗ ನಮ್ಮಿಂದ ಹೇಳಲ್ಪಟ್ಟ ಈ ಕ್ರಮವು ಸಾಧಾರಣರಾದ ಬ್ರಾಹ್ಮಣರಿಗೆ ಉಚಿತವಾದ ಮಾರ್ಗವು; ನೀನು ಪೂರ್ವಜನ್ಮಗಳಲ್ಲಿ ಜಗದೀಶ್ವರನಾದ ಶ್ರೀಹರಿಯನ್ನು ಪರಮಭಕ್ತಿಯಿಂದ ಆರಾಧನಂಗೈದವನಾದ್ದರಿಂದ ಆ ಭಗವಂತನೇ ನಿನಗೆ ಪುತ್ರನಾಗಿ ಅವತರಿಸಿದ್ದಾನೆ; ಆದಕಾರಣ ನೀನು ಧನ್ಯನು" ಎಂದು ನುಡಿದರು.

ಈ ಪ್ರಕಾರವಾದ ಆ ಋಷಿಗಳ ವಚನವನ್ನು ಕೇಳಿ ಮಹಾ ಯಶಸ್ವಿಯಾದ ವಸುದೇವನು ಅವರನ್ನು ನಮಸ್ಕರಿಸಿ ತನ್ನಿಂದ ಮಾಡಲ್ಪಡುವ ಯಜ್ಞದಲ್ಲಿ ಅವರೆಲ್ಲರು ಋತ್ವಿಕ್ಕುಗಳಾಗಬೇಕೆಂದು ಪ್ರಾರ್ಥಿಸಿದನು; ಆ ಋಷಿಗಳು ವಸುದೇವನಿಂದ ಪ್ರಾರ್ಥಿತರಾಗಿ ಆ ಕ್ಷೇತ್ರದಲ್ಲಿ ಉತ್ತಮವಾದ ಕಲ್ಪದಿಂದ ಆತನಿಗೆ ಅನೇಕ ಕ್ರತುಗಳನ್ನು ಮಾಡಿಸಿದರು; ಆ ಯಜ್ಞದೀಕ್ಷೆಯು ಉಪಕ್ರಾಂತವಾಗುತ್ತಿರಲು ಸಮಸ್ತ ಯಾದವರೂ ಕ್ಷತ್ರಿಯರೂ ಸ್ನಾನಮಾಡಿ ಉತ್ತಮವಸ್ತ್ರಗಳನ್ನು ಧರಿಸಿ ಪದ್ಮಮಾಲಿಕೆಗಳಿಂದಲಂಕೃತರಾಗಿ ಕೈಗಾಣಿಕೆಗಳನ್ನು ತೆಗೆದುಕೊಂಡು ಯಜ್ಞಶಾಲೆಯನ್ನು ಪ್ರವೇಶಿಸಿದರು; ಅವರ ಪತ್ನಿಯರು ಸರ್ವಾಭರಣಭೂಷಿತರಾಗಿ ಉತ್ತಮವಾದ ದುಕೂಲಗಳನ್ನುಟ್ಟುಕೊಂಡು ದಿವ್ಯಗಂಧಗಳಿಂದ ಲೇಪಿಸಲ್ಪಟ್ಟವರಾಗಿ ಸಂತೋಷಯುಕ್ತರಾಗಿ ಫಲಪುಷ್ಪ ಮೊದಲಾದ ಕೈಗಾಣಿಕೆದ್ರವ್ಯಗಳನ್ನು ತೆಗೆದುಕೊಂಡು ಯಜ್ಞಶಾಲೆಯನ್ನೈದಿದರು; ಆಗ ಅನೇಕವಾದ ಮದ್ದಳೆಗಳು ತಪಟೆಗಳು ಭೇರಿಗಳು ನಗಾರಿಗಳು ಮೊದಲಾದವು ಧ್ವನಿಗೈದವು; ನಟನರ್ತಕರು ನರ್ತನಂಗೈದರು; ಸೂತ ಮಾಗಧರು ಸ್ತು

ತಿಸಿದರು; ಗಂಧರ್ವದಂಪತಿಗಳು ಸಂತೋಷದಿಂದ ಗಾನಂಗೈಯುತ್ತಿದ್ದರು! ಆ ಬಳಿಕ ಋತ್ವಿಕ್ಕುಗಳಾದ ಋಷಿಗಳು ಸುಮುಹೂರ್ತದಲ್ಲಿ ವಸುದೇವನ ನೇತ್ರಗಳಿಗೆ ಕಾಡಿಗೆಯನ್ನಚ್ಚಿ ಸರ್ವಾಂಗಗಳಿಗೂ ಬೆಣ್ಣೆಯನ್ನು ಲೇಪಿಸಿ ಮಂಗಳಸ್ನಾನವನ್ನು ಮಾಡಿಸಿ ಆತನ ಪತ್ನಿಯರದಿನೆಂಟುಮಂದಿಗೂ ಅಭ್ಯಂಜನಸ್ನಾನವನ್ನು ಮಾಡಿಸಲು ದಿವ್ಯ ದುಕೂಲಗಳಿಂದಲೂ ಕಂಕಣ ಹಾರ ಮೊದಲಾದ ಸರ್ವಾಭರಣಗಳಿಂದಲೂ ಅಲಂಕೃತರಾದ ಆ ಹದಿನೆಂಟುಮಂದಿ ಪತ್ನಿಯರೊಡಗೂಡಿ ತನ್ನ ಪರಿಜನರಿಂದ ಪರಿವೃತನಾಗಿ ದೀಕ್ಷಿತನಾದ ಆ ವಸುದೇವನು ಆ ಸಭೆಯಲ್ಲಿ ಪ್ರಕಾಶಿಸಿದನು! ಎಲೈ ಅರಸೆ, ಆಗ ಋತ್ವಿಕ್ಕುಗಳಾದ ಮಹರ್ಷಿಗಳು ನಾನಾವಿಧಗಳಾದ ಪಟ್ಟೇ ಪೀತಾಂಬರಗಳನ್ನು ಧರಿಸಿ ಸಭಾಜನರ ಸಮೇತರಾಗಿ ದೇವೇಂದ್ರನ ಯಜ್ಞದಲ್ಲಿ ಪ್ರಕಾಶಿಸುವ ದೇವರ್ಷಿಗಳಂತೆ ಪ್ರಕಾಶಿಸಿದರು; ಸಮಸ್ತ ಜೀವರಿಗೂ ಈಶ್ವರರಾದ ರಾಮಕೃಷ್ಣರು ತಮ್ಮ ಬಂಧುಗಳಿಂದ ಪರಿವೃತರಾಗಿ ಪತ್ನೀ ಪುತ್ರರಸಹಿತವಾಗಿ ಮಹಾ ವಿಭವದಿಂದ ಪ್ರಕಾಶಿಸಿದರು!

ಅನಂತರದಲ್ಲಿ ವಸುದೇವನು ಯಥಾಶಾಸ್ತ್ರವಾಗಿ ಅಗ್ನಿಹೋತ್ರಾದಿ ಲಕ್ಷಣಗಳುಳ್ಳ ಪ್ರಕೃತಿ ವಿಕೃತಿ ಯಜ್ಞಗಳಿಂದ ದಿವ್ಯಜ್ಞಾನ ಕ್ರಿಯೇಶ್ವರನಾಗಿ ಯಜ್ಞರೂಪನಾದ ಪರಮೇಶ್ವರನನ್ನು ಪೂಜಿಸಿ ಋತ್ವಿಕ್ಕುಗಳಿಗೆ ಯಥೇಚ್ಛವಾಗಿ ದಕ್ಷಿಣೆ ದ್ರವ್ಯ ಗೋ ಭೂ ಧಾನ್ಯಗಳು ಮೊದಲಾದ ವಸ್ತುಗಳನ್ನು ಕೊಟ್ಟು ತನ್ನ ಪತ್ನಿಯರು ಋತ್ವಿಕ್ಕುಗಳು ಅಲ್ಲಿದ್ದ ಅರಸರು ಅವರ ಪತ್ನಿಯರು ಮೊದಲಾದವರೊಡಗೂಡಿ ಸ್ಯಮಂತಪಂಚಕದಲ್ಲಿ ಅವಭೃತಸ್ನಾನವನ್ನು ಮಾಡಿದ ಬಳಿಕ ವಂದಿ ಮಾಗಧರು ಮೊದಲಾದ ಸಮಸ್ತ ಪರಿವಾರ ಜನರಿಗೂ ವಸ್ತ್ರಾಭರಣ ಸುವರ್ಣಾದಿಗಳನ್ನು ಕೊಟ್ಟು ಶ್ವಾನಗಳು ಮೊದಲುಗೊಂಡು ಸಮಸ್ತ ಪ್ರಾಣಿಗಳಿಗೂ ಯಥಾಯೋಗ್ಯವಾಗಿ ಮೃಷ್ಟಾನ್ನವನ್ನು ಬಡಿಸಿ ಬಂಧುಗಳನ್ನೂ ಅವರ ಪತ್ನೀ ಪುತ್ರರನ್ನೂ ವಿದರ್ಭರು ಕೋಸಲರು ಕಾಶೀರಾಜರು ಕೇಕಯರು ಸೃಂಜಯರು ಮೊದಲಾದ ಅರಸರನ್ನೂ ಆ ಸಭೆಯಲ್ಲಿ ಕೂಡಿದ್ದ ಜನರನ್ನೂ ಋತ್ವಿಕ್ಕುಗಳನ್ನೂ ಬ್ರಾಹ್ಮಣ ಸಮೂಹಗಳನ್ನೂ ಇತರ ಮನುಷ್ಯರನ್ನೂ ಭೂತಗಣಗಳನ್ನೂ ಪಿತೃದೇವತೆಗಳನ್ನೂ ಚಾರಣರನ್ನೂ ಪ್ರೀತಿದಾನ ರೂಪಗಳಾದ ಉಡುಗರೆಗಳಿಂದ ಸಂತೋಷಪಡಿಸಿದನು! ಈ ರೀತಿಯಲ್ಲಿ ಸತ್ಕರಿಸಲ್ಪಟ್ಟ ಅರಸುಗಳು ಮೊದಲಾದವರೆಲ್ಲರು ಆ ಯಜ್ಞವನ್ನು ಶ್ಲಾಘಿಸುತ ರಾಮಕೃಷ್ಣರಿಂದ ಅನುಜ್ಞಾತರಾಗಿ ತಮ್ಮ ತಮ್ಮ ದೇಶಗಳಿಗೆ ತೆರಳಿದರು; ಅನಂತರದಲ್ಲಿ ಧೃತರಾಷ್ಟ್ರನು ವಿದುರನು ಯುಧಿಷ್ಠಿರ ಭೀಮಾರ್ಜುನರು ಭೀಷ್ಮದ್ರೋಣರು ಕುಂತಿಯು ನಕುಲ ಸಹದೇವರು ನಾರದನು ಪೂಜ್ಯನಾದ ವೇದವ್ಯಾಸ ಮುನಿಯು ಸುಹೃತ್ತುಗಳು ಬೀಗರು ಬಂಧುಗಳು ಮೊದಲಾದವರೆಲ್ಲರು ಯಾದವರನ್ನಾಲಿಂಗಿಸಿ ಸ್ನೇಹದಿಂದ ಆರ್ದ್ರವಾದ ಹೃದಯವುಳ್ಳವರಾಗಿ ಕೃಷ್ಣಾದಿಗಳನ್ನು ಬಿಟ್ಟು ಹೋಗಲಾರದೆ ವ್ಯಸನಪಡುತ ತಮ್ಮ ತಮ್ಮ ದೇಶಗಳನ್ನೈದಿದರು; ಬಂಧುವತ್ಸಲನಾದ ನಂದನು ವಸುದೇವಾದಿಗಳ ಶ್ರೇಷ್ಠವಾದ ಪೂಜೆಯಿಂದ ಉಪಚರಿಸಲ್ಪಟ್ಟವನಾಗಿ ಗೋಪಾಲಕರ ಸಮೇತನಾಗಿ ಶ್ರೀಕೃಷ್ಣನಿಂದಲೂ ಬಲರಾಮನಿಂದಲೂ ಉಗ್ರಸೇನನಿಂದಲೂ ಲಾಲಿತನಾಗಿ ಅಲ್ಲೇ ವಾಸಂಗೈದನು; ಆಗ ತನ್ನ ತೇಜಸ್ಸಿಂದ ಮನೋರಥವೆಂಬ ಸಮುದ್ರವನ್ನು ದಾಟಿ ಸುಹೃತ್ಪರಿವೃತನಾಗಿ ಪೂರ್ಣಕಾಮನಾದ ವಸುದೇವನು ನಂದಗೋಪನ ಕರವನ್ನಿಡಿದುಕೊಂಡು “ಎಲೈ ಅಣ್ಣನಾದ ನಂದಗೋಪನೆ, ಸ್ನೇಹವೆಂಬುದು ಮನುಷ್ಯರಿಗೆ ಈಶ್ವರನಿಂದ ಮಾಡಲ್ಪಟ್ಟ ಪಾಶವು; ಆ ಪಾಶವು ಮಹಾ ಶೂರರಾದವರಿಗೂ ಮಹಾ ಯೋಗಿಗಳಿಗೂ ಬಿಡಿಸಿಕೊಳ್ಳಲಶಕ್ಯವೆಂದು ತಿಳಿಯುತ್ತೇನೆ; ನಿಮ್ಮಿಂದ ಮಾಡಲ್ಪಟ್ಟ ಉಪಕಾರವನ್ನು ಮರೆತಿರುವ ಅಜ್ಞರಾದ ನಮ್ಮಲ್ಲಿ ಸಾಧುಗಳಾದ ನಿಮ್ಮಿಂದ ಮಾಡಲ್ಪಟ್ಟ ಅತ್ಯುತ್ತಮವಾದ ಮಿತ್ರತ್ವವು ಪ್ರತ್ಯುಪಕಾರ ರಹಿತವಾಗಿ ನಿಷ್ಫಲವಾದಾಗ್ಯೂ ಸರ್ವಥಾ ಸ್ಥಿರವಾಗಿದೆಯಾದಕಾರಣ ಈ ಸುಕೃತಪಾಶವು ತ್ಯಜಿಸಲಶಕ್ಯವು; ಪೂರ್ವದಲ್ಲಿ ನಾವು ಕಂಸನ ಉಪದ್ರವದಿಂದ ಅಸಮರ್ಥರಾದ ಕಾರಣ ನಿಮಗೆ ಪ್ರಿಯವನ್ನು ಮಾಡದೆ ಹೋದೆವು; ಈಗ ಐಶ್ವರ್ಯಮದದಿಂದ ಅಂಧರಾಗಿ ಮುಂದೆ ನಿಂತಿರುವವರನ್ನು ಕಾಣದಿದ್ದೇವೆ! ಎಲೈ ನಂದಗೋಪನೆ, ಶ್ರೇಯಸ್ಸನ್ನಪೇಕ್ಷಿಸುವ ಜನರಿಗೆ ಐಶ್ವರ್ಯವುಂಟಾಗಬಾರದು; ಐಶ್ವರ್ಯದಿಂದ ಅಂಧವಾದ ನೇತ್ರವುಳ್ಳ ಪುರುಷನು ಸ್ವಜನರನ್ನೂ ಬಂಧುಗಳನ್ನೂ ಮಿತ್ರರನ್ನೂ ಸಹಾ ನೋಡುವದಿಲ್ಲ” ಎಂದು ನುಡಿದನು.

ಈ ಪ್ರಕಾರವಾಗಿ ವಸುದೇವನು ಸ್ನೇಹಶೈಥಿಲ್ಯವನ್ನು ಸ್ಮರಿಸಿಕೊಂಡು ಪಶ್ಚಾತ್ತಾಪವುಳ್ಳವನಾಗಿ ಬಾಷ್ಪಪೂರಿತ ನೇತ್ರನಾಗಿ ನಂದಗೋಪನಿಂದ ಮಾಡಲ್ಪಟ್ಟ ಮಿತ್ರಭಾವವನ್ನು ಸ್ಮರಿಸುತ ರೋದನಂಗೈದನು; ನಂದಗೋಪನು ವಸುದೇವನಿಂದ ಈ ರೀತಿ ಉಪಚರಿಸಲ್ಪಡುತ ಶ್ರೀಕೃಷ್ಣರಾಮರಲ್ಲಿ ಪ್ರೇಮೆಯಿಂದ ಇಂದೂ ನಾಳೇ ಎಂದು ಅಡ್ಡಿಮಾಡಲ್ಪಟ್ಟ ಪ್ರಯಾಣವುಳ್ಳವನಾಗಿ ಮೂರು ತಿಂಗಳು ಯಾದವರೊಡನೆ ವಾಸಂಗೈದು ಅನಂತರದಲ್ಲಿ ಪೂರ್ಣಮನೋರಥನಾಗಿ ಗೋಪಾಲಕರ ಸಮೇತನಾಗಿಯೂ ತನ್ನ ಬಂಧುಗಳೊಡನೆಯೂ ಶ್ರೇಷ್ಠಗಳಾದ ಆಭರಣಗಳಿಂದಲೂ ಉತ್ತಮಗಳಾದ ಪಟ್ಟೇವಸ್ತ್ರಗಳಿಂದಲೂ ಅಮೂಲ್ಯಗಳಾದ ರತ್ನಾದಿ ವಸ್ತುಗಳಿಂದಲೂ ಸನ್ಮಾನಿತನಾಗಿ ವಸುದೇವನಿಂದಲೂ ಉಗ್ರಸೇನನಿಂದಲೂ ಬಲಭದ್ರನಿಂದಲೂ ಶ್ರೀಕೃಷ್ಣನಿಂದಲೂ ಕೊಡಲ್ಪಟ್ಟ ಆ ಪ್ರೀತಿದಾನಗಳನ್ನು ಗ್ರಹಿಸಿ ಯಾದವರಿಂದ ಕಳುಹಿಸಲ್ಪಟ್ಟು ಅಲ್ಲಿಂದ ತೆರಳಲು ಗೋಪಸ್ತ್ರೀಯರೂ ಗೋಪಾಲಕರೂ ಶ್ರೀಕೃಷ್ಣನಲ್ಲಿರಿಸಲ್ಪಟ್ಟ ತಮ್ಮ ಮನಸ್ಸನ್ನು ಹಿಂದಕ್ಕೆ ತಿರುಗಿಸುವದಕ್ಕೆ ಅಸಮರ್ಥರಾಗಿ ವ್ರಜವನ್ನೈದಿದರು; ಅಮೇಲೆ ಶ್ರೀಕೃಷ್ಣನನ್ನೇ ಇಷ್ಟದೇವತೆಯಾಗುಳ್ಳ ವೃಷ್ಣಿಗಳು ವರ್ಷಾಕಾಲವು ಪ್ರಾಪ್ತವಾಗುತಿದ್ದದ್ದನ್ನು ನೋಡಿ ದ್ವಾರಕೆಗೆ ಬಂದು ತಮ್ಮ ಸ್ವಜನರಿಗೆ ವಸುದೇವನ ಯಜ್ಞಮಹೋತ್ಸವವನ್ನೂ ಬಂಧುಜನರ ದರ್ಶನ ಮುಂತಾದ ವೃತ್ತಾಂತಗಳನ್ನೂ ಹೇಳಿದರು!

---

## ೮೫ನೇ ಅಧ್ಯಾಯ.

### ಕೃಷ್ಣನು ಕಂಸನಿಂದ ಹತರಾದ ಆರು ಮಕ್ಕಳನ್ನು ದೇವಕೀದೇವಿಗೆ ಕೊಟ್ಟದ್ದು.

ಕೇಳೈ ಅರಸೆ, ಬಂದಾನೊಂದು ದಿವಸದಲ್ಲಿ ಮಾತಾಪಿತೃಗಳಿಗೆ ಅಭಿವಂದಿಸಿ ಸಮೀಪದಲ್ಲಿ ನಿಂತಿದ್ದ ರಾಮಕೃಷ್ಣರನ್ನು ನೋಡಿ ಶ್ಲಾಘಿಸುತ ವಸುದೇವನು ಪ್ರೀತಿಯಿಂದ ಅವರ ಪ್ರಭಾವವನ್ನು ವಿಸ್ತಾರವಾಗಿ ವರ್ಣಿಸಿದ ಮುನಿಗಳ ವಚನವನ್ನು ಸ್ಮರಿಸಿ ಅವರ ಪರಾಕ್ರಮಗಳಲ್ಲಿ ವಿಶ್ವಾಸವುಳ್ಳವನಾಗಿ ಅವರನ್ನು ಕುರಿತು "ಎಲೈ ಮಹಾ ಯೋಗಿಯಾದ ಕೃಷ್ಣನೆ, ಎಲೈ ಪುರಾಣಪುರುಷನಾದ ರಾಮನೆ, ನಿಮ್ಮನ್ನು ನಾನು ಈ ಪ್ರಪಂಚಕ್ಕೆ ಕಾರಣರೆಂದು ತಿಳಿಯುತ್ತೇನೆ; ಈ ಪ್ರಪಂಚಕ್ಕೆ ಅಧಿಕರಣ ಸ್ವರೂಪರು ನೀವೇ—ಕರ್ತೃರೂಪರು ನೀವೇ—ಕರಣರೂಪರು—ಕಾರಣಭೂತರು ಅಪಾದಾನರೂಪರು—ಉದ್ದೇಶ್ಯ ಸ್ವರೂಪರು—ಕರ್ಮಸ್ವರೂಪರೂ ನೀವೇ; ಸರ್ವಕಾಲದಲ್ಲಿಯೂ ಸರ್ವಪ್ರಕಾರವಾದ ಭೋಗ್ಯ ಭೋಕ್ತೃರೂಪರಾಗಿ ಅವುಗಳಿಗೆ ಈಶ್ವರರಾಗಿರುವವರೂ ನೀವೆ! ಎಲೈ ಅಧೋಕ್ಷಜನಾದ ಶ್ರೀಕೃಷ್ಣನೆ, ಈ ಪ್ರಕಾರವಾಗಿ ನಾನಾವಿಧ ಪ್ರಪಂಚವೂ ನಿನ್ನಿಂದ ಸೃಷ್ಟಿಸಲ್ಪಟ್ಟದ್ದಾದ ಕಾರಣ ಅದರಲ್ಲಿ ನೀನೇ ಪ್ರವೇಶಿಸಿ ಕ್ರಿಯಾಶಕ್ತಿರೂಪನಾಗಿ ನೀನೇ ಧರಿಸುತಿದ್ದೀ; ಚಂದ್ರನು ಅಗ್ನಿಯು ಸೂರ್ಯನು ನಕ್ಷತ್ರಗಳು ಮಿಂಚು ಮೊದಲಾದ ವಸ್ತುಗಳ ಕಾಂತಿಯೂ ತೇಜಸ್ಸೂ ಪ್ರಭೆಯೂ ನಿನ್ನ ಅಧೀನಗಳು; ಪರ್ವತಗಳ ಸ್ಥಿರಭಾವವು ಭೂಮಿಯು ಸಮಸ್ತ ಪ್ರಾಣಿಸಮೂಹಾಧಾರಭಾವವು ಗಂಧವು ಜಲದ ತೃಪ್ತಿಜನಕತ್ವವು ಜೀವರಸಂಪಾದಕತ್ವವು ಜಲವು ಜಲಸಮ್ಮಂಧವಾದ ಅವ್ಯಕ್ತ ಮಧುರರಸವು ವಾಯುವಿನ ಚಲನವೇಗವು ಬಲವು ಮೊದಲಾದವೆಲ್ಲವು ನಿನ್ನ ಶಕ್ತಿಯೇ; ದಿಕ್ಕುಗಳ ಅವಕಾಶವು ದಿಕ್ಕುಗಳ ಮಧ್ಯಸ್ತವಾದ ಆಕಾಶವು ಸ್ಫೋಟವು ನಾದವು ಅಕಾರಾದಿ ವರ್ಣಗಳು ಪದಾರ್ಥಗಳು ನಾಮರೂಪಾದಿಗಳು ಪರಾಪಶ್ಯಂತಿ ಮಧ್ಯವೈಖರಿಗಳೆಂಬ ವಾಗ್ಭೇದಗಳೂ ನೀನೇ; ಇಂದ್ರಿಯಗಳಲ್ಲಿರುವ ವಿಷಯ ಗ್ರಾಹಕಶಕ್ತಿಯು ಇಂದ್ರಿಯಾಭಿಮಾನಿ ದೇವತೆಗಳು ಇಂದ್ರಿಯಗ್ರಾಹಕಶಕ್ತಿಯು ಬುದ್ಧಿಯು ಬೋಧಶಕ್ತಿಯು ಜೀವಗಳ ಬ್ರಹ್ಮಾನುಸಂಧಾನಶಕ್ತಿಯು ಸಹಾ ನೀನೆ; ಭೂತಗಳಿಗೆ ಕಾರಣವಾದ ತಾಮಸಾಹಂಕಾರವು ಇಂದ್ರಿಯಗಳ ಸಂಬಂಧವಾದ ರಾಜಸಾಹಂಕಾರವು ಅಧಿದೈವಾದಿ ಭೇದದಿಂದ ವಿಕಲ್ಪಿಸಲ್ಪಡುವ ದೇವತೆಗಳ ಸಾತ್ವಿಕಾಹಂಕಾರವು ಜೀವಗಳಿಗೆ ಕಾರಣವಾದ ಪ್ರಧಾನಶಕ್ತಿಯೂ ನೀನೆ; ನಶ್ವರಗಳಾದ

ಭಾವಗಳಲ್ಲಿ ಅನಶ್ವರವಾದ ವಸ್ತುವೂ ನೀನೆ; ಮೃತ್ಸುವರ್ಣಾದಿಗಳಿಂದ ಹುಟ್ಟಿದ ನಾಮರೂಪಗಳನ್ನು ಧರಿಸಿರುವ ಘಟಕುಂಡಲಾದಿಗಳು ನಾಶವನ್ನೈದಿದ ಮೇಲೆ ಆ ಮೃತ್ಸುವರ್ಣಗಳು ಉಳಿಯುವ ಹಾಗೇ ದೃಶ್ಯಗಳಾದ ವಸ್ತುಗಳು ನಾಶವಾದಾಗ್ಯೂ ನೀನೊಬ್ಬನೇ ಉಳಿಯುತ್ತೀ ; ಸತ್ವರಜಸ್ತಮೋರೂಪಗಳಾದ ಗುಣಗಳು ಮಹದಾದಿಗಳು ಸಾಕ್ಷಾತ್ ಪರಬ್ರಹ್ಮನಾದ ನಿನ್ನಲ್ಲಿ ಕಲ್ಪಿತಗಳು ; ಭಾವಗಳು ನಿನ್ನ ಯೋಗಮಾಯಾ ವಿಲಾಸಗಳಾದ ಕಾರಣ ಅನಿತ್ಯಗಳು ; ಅಖಿಲಾತ್ಮನಾದ ನಿನ್ನ ಗುಣಪ್ರವಾಹದಲ್ಲಿ ತಗಲಿಕೊಂಡಿರುವ ಜನರು ಸೂಕ್ಷ್ಮವಾದ ಆ ಮಾರ್ಗದಿಂದ ನಿನ್ನ ಸ್ವರೂಪವನ್ನು ತಿಳಿಯಲಾರದೆ ಸಂಸಾರದಲ್ಲಿ ತೊಳಲಿ ಬಳಲುವರು ; ಸಂಸಾರದಲ್ಲಿ ದೈವಗತಿಯಿಂದ ದುರ್ಲಭವಾದ ಮನುಷ್ಯಭಾವವನ್ನು ಪಡೆದಾಗ್ಯೂ ಸ್ವಪ್ರಯೋಜನವನ್ನು ತಿಳಿಯದೆ ನಿನ್ನ ಮಾಯೆಯಿಂದ ಮೋಹಿತನಾಗಿ ಪ್ರಮತ್ತನಾದ ಪುರುಷನ ಆಯುಸ್ಸು ವ್ಯರ್ಥವು ; ದೇಹದಲ್ಲಿ ತಾನೆಂಬ ಬುದ್ಧಿಯೂ ಬಂಧುಗಳಲ್ಲಿ ತನ್ನವರೆಂಬ ಬುದ್ಧಿಯೂ ಅಜ್ಞಾನಪಾಶಗಳು !— —ನೀವಿಬ್ಬರೂ ನಮ್ಮ ಪುತ್ರರಲ್ಲಾ ; ಸಾಕ್ಷಾತ್ ಪ್ರಧಾನಪುರುಷರು ; ಭೂಮಿಗೆ ಭಾರರೂಪರಾದ ಕ್ಷತ್ರಿಯ ಸಂಹಾರಕ್ಕೋಸ್ಕರ ಕಪಟಮಾನುಷವನ್ನು ಧರಿಸಿದವರು !— —ಎಲೈ ಆರ್ತರಾದ ಭಕ್ತಜನರಿಗೆ ಬಂಧುವಾದ ಶ್ರೀಕೃಷ್ಣನೆ, ಶರಣಾಗತರಾದವರ ಸಂಸಾರಭಯವನ್ನು ಪರಿಹರಿಸುವ ನಿನ್ನ ಪಾದಪದ್ಮವನ್ನು ಶರಣುಹೊಂದಿಧೇನೆ ; ನನಗೆ ಈ ಇಂದ್ರಿಯಾರ್ಥಗಳಲ್ಲಿ ಭೋಗಾಪೇಕ್ಷೆಯನ್ನು ಸಾಕುಮಾಡು ; ನಶ್ವರವಾದ ಈ ಶರೀರದಲ್ಲಿ ತಾನೆಂಬ ಬುದ್ಧಿಯುಳ್ಳ ನಾನು ಸರ್ವೇಶ್ವರನಾದ ನಿನ್ನಲ್ಲಿ ಪುತ್ರನೆಂಬ ಬುದ್ಧಿಯನ್ನು ಮಾಡಿದ್ದೆನು ; ನೀನು ಆದಿಯಲ್ಲಿ ದೇವಕೀ ಗರ್ಭದಿಂದ ಆವಿರ್ಭವಿಸಿದ ಕಾಲದಲ್ಲಿ ನಿಜರೂಪದಿಂದ ನಮಗೆ ಪ್ರತ್ಯಕ್ಷವಾಗಿ ನಮ್ಮನ್ನು ಕುರಿತು 'ಎಲೈ ದೇವಕೀ ವಸುದೇವರಿರಾ, ನೀವು ಪೂರ್ವದಲ್ಲಿ ಪೃಶ್ನಿದೇವಿ ಸುತಪರು ಎಂದಿರುವಾಗ ನಾನು ನಿಮ್ಮಲ್ಲಿ ಅವತರಿಸಿದ್ದೆನು ; ಅನಂತರದಲ್ಲಿ ಅದಿತಿ ಕಶ್ಯಪರು ಎಂದು ಪ್ರಸಿದ್ಧರಾದ ನಿಮ್ಮಲ್ಲಿ ವಾಮನರೂಪನಾಗಿ ಅವತರಿಸಿದೆನು; ಈಗ ದೇವಕೀ ವಸುದೇವರೆಂದು ಪ್ರಸಿದ್ಧರಾದ ನಿಮ್ಮಲ್ಲಿ ಜಗದ್ರಕ್ಷಣೆ ಮಾಡುವದಕ್ಕೋಸ್ಕರ ಉತ್ಪತ್ತಿರಹಿತನಾದ ನಾನು ಆವಿರ್ಭವಿಸಿದೆನು' ಎಂದು ಸೂತಿಕಾಗೃಹದಲ್ಲಿ ಹೇಳಿದೆ ; ಈರೀತಿ ಯೋಗಮಾಯಾಬಲದಿಂದ ನಾನಾವಿಧ ಶರೀರಗಳನ್ನು ಧರಿಸುತ್ತೀ ! ಎಲೈ ಲೋಕಪಾವನವಾದ ಕೀರ್ತಿಯುಳ್ಳ ಶ್ರೀಹರಿಯೆ, ನಿನ್ನ ಮಾಯೆಯನ್ನಾರು ಬಲ್ಲರು !" ಎಂದು ವಿಜ್ಞಾಪನಂಗೈದನು.

ಯಾದವಶ್ರೇಷ್ಠನಾದ ಶ್ರೀ ಭಗವಂತನು ತನ್ನ ತಂದೆಯಾದ ವಸುದೇವನ ವಚನವನ್ನು ಕೇಳಿ ಭಕ್ತಿಯಿಂದ ನಮ್ರನಾಗಿ ನಗುತ ಆತನನ್ನು ಕುರಿತು "ಎಲೈ ತಂದೆಯಾದ ವಸುದೇವನೆ, ನೀನು ಪುತ್ರರಾದ ನಮ್ಮನ್ನು ಕುರಿತು ತತ್ವಸ್ವರೂಪ ವಿಚಾರವನ್ನು ವಿಸ್ತರಿಸಿ ಹೇಳಿದೆ ; ಆ ಅರ್ಥವು ಯುಕ್ತವೇ ಸರಿ ! ಎಲೈ ತಂದೆಯೆ, ನಾನು ಅಗ್ರಜನಾದ ಬಲರಾಮನು ದ್ವಾರಕಾವಾಸಿಗಳಾದ ಸರ್ವಜನರು ಯಾದವಶ್ರೇಷ್ಠರು ಇನ್ನೂ ಈ ಚರಾಚರ ಪ್ರಪಂಚವು ಸಹ ಬ್ರಹ್ಮವ್ಯತಿರಿಕ್ತವಲ್ಲವೆಂದು ತಿಳಿಯಬೇಕು ; ಒಬ್ಬನಾಗಿ ಸ್ವಯಂಪ್ರಕಾಶನಾಗಿ ನಿರ್ಗುಣನಾಗಿ ಜಗದ್ವಿಲಕ್ಷಣನಾದ ಆತ್ಮನು ತನ್ನಿಂದ ರಚಿಸಲ್ಪಟ್ಟ ಗುಣಗಳಿಂದ ಗುಣಕೃತಗಳಾದ ಭೂತಗಳಲ್ಲಿ ಅನೇಕಪ್ರಕಾರವಾಗಿ ತೋರುವನು ; ಆಕಾಶವುವಾಯುವು ಜ್ಯೋತಿಸ್ಸು ಜಲವು ಭೂಮಿಯು ಎಂಬ ಪಂಚಭೂತಗಳು ತಮ್ಮಿಂದ ಜನಿಸಿದ ಘಟಾದಿ ವಸ್ತುಗಳಲ್ಲಿ ಆವಿರ್ಭಾವ ತಿರೋಭಾವಗಳನ್ನೈದಿ ಹ್ಯಾಗಿರುವವೋ ಹಾಗೆ ಪರಮಾತ್ಮನೂ ಸ್ವಮಾಯಾಜನ್ಯಗಳಾದ ನಾನಾ ವಸ್ತುಗಳಲ್ಲಿ ಆವಿರ್ಭಾವ ತಿರೋಭಾವಗಳನ್ನೈದಿರುವವನು " ಎಂದು ನುಡಿದನು.

ಕೇಳೈ ಅರಸೆ, ಈ ಪ್ರಕಾರವಾಗಿ ಭಗವಂತನಿಂದ ಹೇಳಲ್ಪಟ್ಟ ತತ್ವರಹಸ್ಯವನ್ನು ಕೇಳಿ ವಸುದೇವನು ನಾನಾವಿಧ ಮನಃಕ್ಲೇಶಗಳನ್ನು ಬಿಟ್ಟು ಸಂತುಷ್ಟಚಿತ್ತನಾಗಿ ಸುಮ್ಮನಿದ್ದನು.

ಅನಂತರದಲ್ಲಿ ಸರ್ವದೇವಾಶ್ರಯಳಾದ ದೇವಕೀದೇವಿಯು ಮುಗುಳುನಗೆಯುಳ್ಳವಳಾಗಿ ಪೂರ್ವದಲ್ಲಿ ವಿದ್ಯಾಗುರುವಾದ ಸಾಂದೀಪನಿ ಋಷೀಶ್ವರನ ಪುತ್ರನು ಮೃತನಾಗಿರಲು ಗುರುವಾಕ್ಯದಿಂದ ಯಮಲೋಕವನ್ನೈದಿ ಅಲ್ಲಿದ್ದ ಆ ಗುರುಪುತ್ರನನ್ನು ಕರೆದುಕೊಂಡು ಬಂದು ಗುರುವಿಗೆ ಶ್ರೀಕೃಷ್ಣನು ಒಪ್ಪಿಸಿದನೆಂಬ ವೃತ್ತಾಂತವನ್ನೂ ಕಂಸ

ಸಿಂದ ಸಂಸ್ಕೃತರಾದ ತನ್ನ ಆರುಮಂದಿ ಪುತ್ರರನ್ನೂ ಸ್ಮರಿಸುತ ಪುತ್ರವಾತ್ಸಲ್ಯದಿಂದ ಕಣ್ಣೀರು ತುಂಬಿಕೊಂಡು ರಾಮಕೃಷ್ಣರನ್ನು ಕುರಿತು "ಎಲೈ ತಿಳಿಯಲಶಕ್ಯವಾದ ಮಹಿಮೆಯುಳ್ಳ ರಾಮನೆ—ಯೋಗೀಶ್ವರೇಶ್ವರನಾದ ಶ್ರೀಕೃಷ್ಣನೆ; ನಾನು ನಿಮ್ಮನ್ನು ಬ್ರಹ್ಮಾದಿಗಳಿಗೂ ಈಶ್ವರರಾದ ಪುರಾಣಪುರುಷರೆಂದು ತಿಳಿಯುತ್ತೇನೆ; ಕಾಲಸ್ವಭಾವದಿಂದ ನಷ್ಟವಾದ ಸತ್ವಗುಣವುಳ್ಳಂಥಾವರಾಗಿ ಶಾಸ್ತ್ರಮಾರ್ಗವನ್ನತಿಕ್ರಮಿಸಿ ದುರ್ಮಾರ್ಗಪ್ರವೃತ್ತರಾಗಿ ಭೂಭಾರರೂಪರಾದ ದುಷ್ಟಕ್ಷತ್ರಿಯರನ್ನು ಸಂಹರಿಸುವದಕ್ಕೋಸ್ಕರ ನನ್ನಲ್ಲಿ ಅವತಾರಮಾಡಿದಿರಿ; ಪರಮಾತ್ಮನ ಅಂಶವು ಪುರುಷನು; ಆ ಪುರುಷನ ಅಂಶವು ಮಾಯೆಯು; ಮಾಯೆಯ ಅಂಶಗಳು ಗುಣಗಳು; ಲೇಶವಾದ ಆ ಗುಣಗಳಿಂದ ಈ ಪ್ರಪಂಚದ ಸೃಷ್ಟ್ಯಾದಿಗಳು ಆಗುವವು! ಪರಮಾತ್ಮನಾಗಿ ವಿಶ್ವಾತ್ಮಕರಾದಂಥಾ ನಿಮ್ಮನ್ನು ನಾನು ಮರೆಹೊಕ್ಕೆನು; ಬಹುಕಾಲಕ್ಕೆ ಮೊದಲು ಮೃತನಾದ ತನ್ನ ಪುತ್ರನನ್ನು ತಂದುಕೊಡುವದಕ್ಕಾಗಿ ಗುರುವಾದ ಸಾಂದೀಪನಿ ಋಷಿಯಿಂದ ಪ್ರೇರಿತರಾಗಿ ನೀವು ಯಮಲೋಕಸ್ಥನಾದ ಆ ಪುತ್ರನನ್ನು ಕರತಂದು ಗುರುದಕ್ಷಿಣೆಯಾಗಿ ಒಪ್ಪಿಸಿದಿರಿ; ಅದೇರೀತಿ ಯೋಗೀಶ್ವರರಾದ ನೀವು ನನ್ನ ಇಷ್ಟಾರ್ಥವನ್ನು ಸಲ್ಲಿಸೀ; ಕಂಸನಿಂದ ಹತರಾದ ನನ್ನ ಪುತ್ರರನ್ನು ಕರತಂದು ನನಗೆ ತೋರಿಸಿದರೆ ಅವರನ್ನು ನೋಡುವೆನು" ಎಂದು ಪ್ರಾರ್ಥಿಸಿದಳು.

ಅದನ್ನು ಕೇಳಿ ಕೃಷ್ಣರಾಮರಿಬ್ಬರು ಯೋಗಮಾಯೆಯನ್ನಾಶ್ರಯಿಸಿ ಸುತಲವನ್ನು ಪ್ರವೇಶಿಸಿದರು; ಹಾಗೆ ರಸಾತಳ ಪ್ರವೇಶಮಾಡಿದ ವಿಶ್ವಾಂತರ್ಯಾಮಿಗಳಾಗಿ ವಿಶೇಷವಾಗಿ ತನಗೆ ಇಷ್ಟದೇವತೆಗಳಾದ ರಾಮಕೃಷ್ಣರನ್ನು ಕಂಡು ದೈತ್ಯೇಂದ್ರನಾದ ಬಲಿಯು ಅವರ ದರ್ಶನದಿಂದುಂಟಾದ ಸಂತೋಷದಿಂದ ಪರವಶಚಿತ್ತನಾಗಿ ಆಕ್ಷಣದಲ್ಲೆದ್ದು ಪತ್ನಿಪುತ್ರಾದಿಗಳೊಡಗೂಡಿ ಅವರ ಪಾದಗಳಿಗೆ ನಮಸ್ಕರಿಸಿ ದಿವ್ಯಗಳಾದ ಪೀಠಗಳನ್ನು ಸಮರ್ಪಿಸಿ ಸಂತೋಷದಿಂದ ಪೀಠಗಳಲ್ಲಿ ಕುಳಿತಿದ್ದ ಅವರಿಬ್ಬರ ಪಾದಾರವಿಂದಗಳನ್ನು ತೊಳೆದು ಬ್ರಹ್ಮಾದಿಗಳನ್ನು ಸಹಾ ಪಾವನಮಾಡುವ ಆ ಜಲವನ್ನು ಸಪರಿವಾರನಾಗಿ ಶಿರಸ್ಸಿನಲ್ಲಿ ಧರಿಸಿಕೊಂಡು ಮಹಾ ವಿಭವದಿಂದ ಅಮೂಲ್ಯಗಳಾದ ವಸ್ತ್ರಾಭರಣಾನುಲೇಪನ ದಿವ್ಯಮಾಲ್ಯ ಧೂಪದೀಪಾಮೃತ ವಚನಗಳಿಂದಲು ಸರ್ವಸ್ವಾರ್ಪಣದಿಂದಲೂ ಪೂಜಿಸಿ ಅನಂತರದಲ್ಲಿ ಆನಂದಬಾಷ್ಪಪೂರ್ಣನೇತ್ರನಾಗಿ ರೋಮಾಂಚಯುಕ್ತವಾದ ಶರೀರವುಳ್ಳವನಾಗಿ ಗದ್ಗದಸ್ವರದಿಂದ ಮಾತನಾಡುತ ಪರಮಭಕ್ತಿಯುಳ್ಳ ಬುದ್ಧಿಯಿಂದ ಬಾರಿಬಾರಿಗೂ ಭಗವತ್ಪಾದಾರವಿಂದವನ್ನು ಶಿರಸ್ಸಿನಲ್ಲಿ ಧರಿಸುತ ಅವರನ್ನು ಕುರಿತು "ಎಲೈ ಪರಮಪುರುಷರೆ, ಮಹಾ ಶೇಷನಾಗಿ ಅನಂತರೂಪನಾಗಿ ಹೆಡೆಗಳ ಏಕದೇಶದಿಂದ ಈ ಭೂಮಿಯನ್ನು ಧರಿಸುವ ಸರ್ವೋತ್ತಮನಾಗಿ ಜಗದುದ್ಧಾರಕನಾಗಿ ಸಾಂಖ್ಯಯೋಗವಿಧಾನಸ್ವರೂಪನಾಗಿ ಶ್ರೀಪರಮಾತ್ಮನಾಗಿ ಪರಬ್ರಹ್ಮನಿಗೆ ನಮಸ್ಕಾರಮಾಡುಯುತ್ತೇನೆ! ಯೋಗೀಶ್ವರರಿಂದ ಪಡೆಯಲಶಕ್ಯರಾದ ನೀವು ಬಂದದ್ದರಿಂದ ನಾವು ಭಾಗ್ಯವಂತರು; ನಿಮ್ಮ ದರ್ಶನವು ಮಹಾ ಯೋಗೀಶ್ವರರಿಗೂ ದುರ್ಲಭವು; ರಜಸ್ತಮಸ್ಸ್ವಭಾವವುಳ್ಳ ನಮಗೆ ನಿಮ್ಮ ದರ್ಶನವು ಲಭ್ಯವಾದ ಕಾರಣ ನಮಗಿಂತಲು ಭಾಗ್ಯವಂತರಿಲ್ಲ; ದೈತ್ಯರು ದಾನವರು ಗಂಧರ್ವರು ಸಿದ್ಧರು ವಿದ್ಯಾಧರರು ಚಾರಣರು ಯಕ್ಷರು ರಾಕ್ಷಸರು ಪಿಶಾಚರು ಭೂತಗಣಗಳು ಪ್ರಮಥನಾಯಕರು ಮೊದಲಾದವರಲ್ಲಿ ನಾನೇ ಅತಿ ಭಾಗ್ಯವಂತನು; ವಿಶುದ್ಧವಾದ ಸತ್ವಸ್ವರೂಪನಾಗಿ ಶಾಸ್ತ್ರಮಯವಾದ ಶರೀರವುಳ್ಳವನಾದ ನಿನ್ನಲ್ಲಿ ಮಾಡಲ್ಪಟ್ಟ ವೈರದಿಂದ ಕೆಲವರು ನಿನ್ನ ಅನುಗ್ರಹಕ್ಕೆ ಪಾತ್ರರಾದರು; ನಮ್ಮಂಥಾವರು ಬಹುಜನರು ನಿನ್ನಲ್ಲಿ ದ್ವೇಷಭಕ್ತಿಯಿಂದಲೆ ಧನ್ಯರಾದರು! ಎಲೈ ಭಗವಂತನೆ, ಶಿಶುಪಾಲನು ಮುಂತಾದ ಕೆಲವರು ನಿನ್ನಲ್ಲಿ ಮಾಡಿದ ವೈರದಿಂದಲೇ ಕೃತಾರ್ಥರಾದರು; ಗೋಪಸ್ತ್ರೀಯರು ಮೊದಲಾದ ಕೆಲವರು ನಿನ್ನಲ್ಲಿ ಕಾಮದಿಂದ ಕೃತಾರ್ಥರಾದರು; ಸತ್ವಗುಣಜನ್ಯವಾದ ಶುದ್ಧಭಕ್ತಿಯಿಂದ ನಿನ್ನನ್ನು ಭಜಿಸುವ ದೇವತೆಗಳು ಆ ಶಿಶುಪಾಲಾದಿಗಳಂತೆಯೂ ಗೋಪಸ್ತ್ರೀಯರಂತೆಯೂ ಕೃತಾರ್ಥರಾಗಲಿಲ್ಲ; ಆದಕಾರಣ ಯೋಗೀಶ್ವರೇಶ್ವರನಾದ ಶ್ರೀ ಭಗವಂತನೆ, ಯೋಗೀಶ್ವರರಾದ ಮಹಾತ್ಮರೂ ನಿನ್ನ ಮಾಯೆಯು ಹ್ಯಾಗಿರುವದೆಂಬದಾಗಿ ತಿಳಿಯಲಾರರು; ಮೂಢರಾದ ನಾವು ಹ್ಯಾಗೆ ತಿಳಿದೇವು! ಆದಕಾರಣ ಪೂರ್ಣಕಾಮರಾದ ಮಹಾ ಯೋಗಿಗಳಿಂದಲೂ ಹುಡುಕಲ್ಪಡುತಲಿರುವ ನಿನ್ನ ಪಾದ

ಪದ್ಮಗಳಲ್ಲಿ ಭಕ್ತಿಯೆಂಬ ಆಶ್ರಯವನ್ನವಲಂಬಿಸಿ ಗೃಹಾದಿಗಳೆಂಬ ಅಂಧಕೂಪದದೆಸೆಯಿಂದ ತಪ್ಪಿಸಿಕೊಂಡು ಹೊರಟು ವನವನ್ನೈದಿ ವೃಕ್ಷಗಳ ಮೂಲಗಳಲ್ಲಿ ತಾವಾಗಿ ಕಳದುಬೀಳುವ ಫಲಾದಿಗಳಿಂದ ಜೀವಿಸುತ ಶಾಂತನಾಗಿ ನಾನೊಬ್ಬನೆ ಹ್ಯಾಗೆ ಸಂಚರಿಸುವೆನೊ—ಅಥವಾ ಸರ್ವಸುಹೃತ್ತುಗಳಾದ ನಿನ್ನ ಭಕ್ತರೊಡನೆ ಸಹವಾಸವನ್ನು ಮಾಡಿಕೊಂಡು ಹ್ಯಾಗೆ ಸಂಚರಿಸುವೆನೊ ಆ ಪ್ರಕಾರವಾಗಿ ನನ್ನಲ್ಲಿ ಪ್ರಸನ್ನನಾಗು ! ಸಮಸ್ತ ಜೀವರಿಗೂ ಸ್ವಾಮಿಯಾಗಿ ಸಮರ್ಥನಾದ ಎಲೈ ಶ್ರೀಕೃಷ್ಣನೆ, ನಿನ್ನಲ್ಲಿ ದೃಢಭಕ್ತಿಯುನ್ನು ಮಾಡಿ ಆ ಭಕ್ತಿಪಾರವಶ್ಯದಿಂದ ವಿಧಿನಿಷೇಧಮಾರ್ಗಗಳಿಗೆ ದೂರನಾಗಿ ಅವಧೂತಾಶ್ರಮಿಯಾಗಿ ನಾನು ಸಂಚರಿಸುವಹಾಗೆ ನನ್ನ ಪಾಪವನ್ನು ಪರಿಹರಿಸಿ ನನ್ನನ್ನು ರಕ್ಷಿಸು " ಎಂದು ನುಡಿದನು.

ಈ ಪ್ರಕಾರವಾಗಿ ಬಲಿಯಿಂದ ಪ್ರಾರ್ಥಿತನಾದ ಭಗವಂತನು ಆ ವಾಕ್ಯಗಳನ್ನನುಮೋದನಂಗೈದು ಆತನನ್ನು ಕುರಿತು "ಎಲೈ ಬಲಿಯೆ, ಸ್ವಾಯಂಭುವ ಮನ್ವಂತರದಲ್ಲಿ ಮರೀಚಿಬ್ರಹ್ಮನಿಗೆ ಊರ್ಣಾ ನಾಮಕಳಾದ ಪತ್ನಿಯಲ್ಲಿ ಆರುಮಂದಿ ಪುತ್ರರು ಜನಿಸಿದರು ; ಅವರು ತನ್ನ ಪುತ್ರಿಯಾದ ಸರಸ್ವತಿಯಲ್ಲಿ ಕಾಮುಕನಾದ ಬ್ರಹ್ಮನನ್ನು ನೋಡಿ ನಕ್ಕರು ; ಆ ಪಾಪಕರ್ಮದಿಂದ ಆ ಆರುಜನರೂ ಅಸುರಯೋನಿಯನ್ನೈದಿ ಹಿರಣ್ಯಕಶ್ಯಪನದೆಸೆಯಿಂದುತ್ಪನ್ನರಾಗಿ ಅನಂತರದಲ್ಲಿ ಯೋಗಮಾಯಾಪ್ರಭಾವದಿಂದ ದೇವಕೀದೇವಿಯ ಉದರದಲ್ಲಿ ಜನಿಸಿ ಕಂಸನಿಂದ ಸಂಹರಿಸಲ್ಪಟ್ಟರು ; ದೇವಕೀದೇವಿಯು ಅವರನ್ನು ತನ್ನ ಮಕ್ಕಳೆಂದೆಣಿಸಿ ಶೋಕಪಡುತಿಧ್ದಾಳೆ ; ಈಗ ಅವರು ನಿನ್ನ ಸಮೀಪದಲ್ಲಿದ್ದಾರೆ ; ಮಾತೃವಾದ ದೇವಕಿಯ ಶೋಕಪರಿಹಾರಾರ್ಥವಾಗಿ ಇಲ್ಲಿಂದ ಅವರನ್ನು ಕರೆದುಕೊಂಡು ಹೋಗುವೆವು ; ಅವರನ್ನು ಕಳುಹಿಸು ; ಅನಂತರದಲ್ಲಿ ಶಾಪವಿಮುಕ್ತರಾಗಿ ನಿಶ್ಚಿಂತರಾಗಿ ತಮ್ಮ ದೇವಲೋಕಕ್ಕೆ ಹೋಗಲಿ; ಸ್ಮರನು ಉದ್ಗೀತನು ಪರಿಷ್ವಂಗನು ಪತಂಗನು ಕ್ಷುದ್ರಭೃತೂ ಘೃಣಿ ಎಂಬ ಆ ಆರುಮಂದಿಯಲ್ಲಿ ಸ್ಮರನೆಂಬ ಪ್ರಥಮನು ಕೀರ್ತಿವಂತನೆಂಬ ನಾಮದಿಂದ ವಸುದೇವನ ಪುತ್ರನಾದನು ; ಈ ಆರುಜನರೂ ನನ್ನ ಪ್ರಸಾದದಿಂದ ಪುನಹ ಸದ್ಗತಿಯನ್ನೈದುವರು " ಎಂದು ನುಡಿದನು.

ಬಲಿಯು ಅವರನ್ನು ಒಪ್ಪಿಸಲು ಆತನಿಂದ ಪೂಜಿತರಾಗಿ ಆ ಆರುಪುತ್ರರೊಡನೆ ದ್ವಾರಕಾಪುರವನ್ನೈದಿ ತಾಯಿಗೆ ಆ ಪುತ್ರರನ್ನು ಕೊಟ್ಟರು ; ದೇವಕೀದೇವಿಯು ಆ ಬಾಲಕರನ್ನು ನೋಡಿ ಅವರನ್ನಾಲಿಂಗನಂಗೈದು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಶಿರಸ್ಸನ್ನಾಘ್ರಾಣಂಗೈದು ಸಮಸ್ತ ಜನಗಳನ್ನು ಸೃಷ್ಟಿಸುವ ಭಗವಂತನ ಮಾಯೆಯಿಂದ ಮೋಹಿತಳಾಗಿ ಪುತ್ರರ ಸ್ಪರ್ಶದಿಂದ ಕ್ಷೀರಪೂರ್ಣಗಳಾದ ಸ್ತನಗಳುಳ್ಳವಳಾಗಿ ಸಂತುಷ್ಟಳಾಗಿ ಆ ಪುತ್ರರಿಗೆ ಆ ಸ್ತನ ಕ್ಷೀರವನ್ನು ಪಾನಂಗೈಸಿದಳು ; ಆ ಪುತ್ರರು ಶ್ರೀಕೃಷ್ಣನಿಂದ ಪಾನಂಗೈಯಲ್ಪಟ್ಟು ಮಿಕ್ಕಿದ ಆ ಸ್ತನ ರಸವನ್ನು ಪಾನಂಗೈದದ್ದರಿಂದ ಭಗವಂತನ ಶರೀರ ಸ್ಪರ್ಶವುಂಟಾಗಿ ಅದರ ಮಹಿಮೆಯಿಂದ ತಾವು ದೇವತೆಗಳೆಂಬ ಪೂರ್ವಜ್ಞಾನವುಳ್ಳವರಾಗಿ ಶ್ರೀಕೃಷ್ಣನನ್ನೂ ತಂದೆಯಾದ ವಸುದೇವನನ್ನೂ ತಾಯಾದ ದೇವಕೀದೇವಿಯನ್ನೂ ಬಲರಾಮನನ್ನೂ ನಮಸ್ಕರಿಸಿ ಸರ್ವಜನರೂ ನೋಡುತ್ತಿರಲು ಆಕಾಶಮಾರ್ಗದಿಂದ ದೇವಲೋಕವನ್ನೈದಿದರು ! ಎಲೈ ಅರಸೆ, ದೇವಕೀದೇವಿಯು ಮೃತರಾದ ಆ ಪುತ್ರರ ಆಗಮನವನ್ನೂ ನಿರ್ಗಮನವನ್ನೂ ನೋಡಿ ಅತ್ಯಂತ ಆಶ್ಚರ್ಯವುಳ್ಳವಳಾಗಿ ಅದು ಭಗವನ್ಮಾಯಾವಿಲಾಸವೆಂದೆಣಿಸಿದಳು ! ಎಲೈ ಅರಸೆ, ಅಪರಿಮಿತ ಸಾಮರ್ಥ್ಯವುಳ್ಳ ಪರಮಾತ್ಮನಾದ ಶ್ರೀಕೃಷ್ಣನ ಅದ್ಭುತಗಳಾಗಿ ಅನಂತಗಳಾದ ಪರಾಕ್ರಮಗಳು ಇನ್ನೂ ಅನೇಕವುಂಟು ; ಅವ್ಯಾಹತ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಕೃಷ್ಣನಲ್ಲಿಡಲ್ಪಟ್ಟ ಚಿತ್ತವುಳ್ಳವನಾಗಿ ಯಾವ ಪುರುಷನು ಜಗತ್ತಿನ ಅಸೇಷಪಾಪವನ್ನು ಪರಿಹರಿಸುವಂಥಾದ್ದಾಗಿ ಭಕ್ತರ ಕರ್ಣಕ್ಕೆ ಅಮೂಲ್ಯವಾದ ರತ್ನಕುಂಡಲಗಳಂತಿರುವಂಥಾದ್ದಾಗಿ ಅಮೃತಸದೃಶವಾದ ಕೀರ್ತಿಯುಳ್ಳ ಮುರವೈರಿಯ ಚರಿತ್ರಗಳನ್ನು ಕೇಳುವನೋ—ಮತ್ತೊಬ್ಬರಿಗೆ ಹೇಳುಸುವನೋ ಆ ಪುರುಷನು ನಾರಾಯಣನ ನಿತ್ಯಸುಖವುಳ್ಳದ್ದಾಗಿ ಶಾಶ್ವತವಾದ ಸ್ಥಾನವನ್ನೈದುವನು !

## ೮೬ನೇ ಅಧ್ಯಾಯ.

### ಸುಭದ್ರಾಪಹರಣ—ಬೃಹದಾಶ್ವ ಶೃತದೇವರ ವೃತ್ತಾಂತ.

[ಪರೀಕ್ಷಿದ್ರಾಯನು ಶುಕಾಚಾರ್ಯನನ್ನು ಕುರಿತು—ಎಲೈ ಬ್ರಾಹ್ಮಣೋತ್ತಮನಾದ ಶುಕಾಚಾರ್ಯನೇ, ರಾಮಕೃಷ್ಣರಿಗೆ ತಂಗಿಯಾಗಿ ನನಗೆ ಪಿತಾಮಹಿಯಾದ ಸುಭದ್ರಾದೇವಿಯನ್ನು ಅರ್ಜುನನು ಯಾವ ಪ್ರಕಾರ ವಿವಾಹಮಾಡಿಕೊಂಡನು ? ಆ ಅರ್ಥವನ್ನು ತಿಳಿಯಲಿಚ್ಛೈಸುತ್ತೇನೆ—ಎಂದು ಪ್ರಶ್ನೆಗೈದನು.]

ಶುಕಮುನಿಯು ಆತನನ್ನು ಕುರಿತು—ಎಲೈ ಅರಸೆ, ಅರ್ಜುನನು ಬಂದು ನಿಮಿತ್ಯದಿಂದ ತೀರ್ಥಯಾತ್ರಾರ್ಥವಾಗಿ ಭೂಮಿಯಲ್ಲಿ ಸಂಚರಿಸುತ ಸ್ನಾನಾರ್ಥವಾಗಿ ಪ್ರಭಾಸಕ್ಷೇತ್ರಕ್ಕೆ ಬಂದು ಅಲ್ಲಿ ತನ್ನ ಸೋದರಮಾವನಾದ ವಸುದೇವನ ಪುತ್ರಿಯಾದ ಸುಭದ್ರಾದೇವಿಯನ್ನು ಸ್ಮರಿಸಿ ಆ ದೇವಿಯನ್ನು ಬಲಭದ್ರನು ದುರ್ಯೋಧನನಿಗೆ ಕೊಡಬೇಕೆಂದಿರಲು ವಸುದೇವಾದಿಗಳು ಅದಕ್ಕೆ ಸಮ್ಮತಿಸದಿರುವದನ್ನು ತಿಳಿದು ಸುಭದ್ರೆಯನ್ನು ವಿವಾಹಂಗೈಯಲಿಚ್ಛೆಯುಳ್ಳವನಾಗಿ ತ್ರಿದಂಡ ಸನ್ಯಾಸಿ ವೇಷವನ್ನು ಧರಿಸಿ ದ್ವಾರಕಾಪುರವನ್ನೈದಿ ಸ್ವಮನೋರಥ ಪೂರ್ಣಾರ್ಥವಾಗಿ ಚಾತುರ್ಮಾಸ ವ್ರತಸಾಧನವೆಂಬ ವ್ಯಾಜದಿಂದ ಅಲ್ಲೇ ವಾಸಂಗೈದನು ; ಬಂದಾನೊಂದು ದಿವಸದಲ್ಲಿ ಬಲರಾಮನು ಆ ಕಪಟ ಎತಿಯನ್ನು ಭಿಕ್ಷೆಗೋಸ್ಕರ ಪ್ರಾರ್ಥಿಸಿ ಮನೆಗೆ ಕರೆದುಕೊಂಡು ಹೋಗಿ ಭಕ್ತಿಯಿಂದ ಭೋಜನ ಮಾಡಿಸಿದನು ; ಅರ್ಜುನನು ಆ ರಾಜಮಂದಿರದಲ್ಲಿ ಶೂರರ ಮನಸ್ಸನ್ನಪಹರಿಸುವ ಅತ್ಯಂತ ಸುಂದರಿಯಾದ ಸುಭದ್ರೆಯನ್ನುನೋಡಿ ಆಕೆಯಲ್ಲಿ ಅಭಿಪ್ರಾಯ ಯುಕ್ತವಾದ ಮನಸ್ಸನ್ನಿಟ್ಟನು ; ಸುಭದ್ರೆಯು ಪೂರ್ವದಲ್ಲಿ ತನ್ನಿಂದ ಕೇಳಲ್ಪಟ್ಟ ಗುರುತುಗಳಿಂದಲೂ ಸ್ತ್ರೀಯರನ್ನು ಮೋಹಿಸುವಂತೆ ಮಾಡುವ ಸೌಂದರ್ಯದಿಂದಲೂ ಆತನು ಅರ್ಜುನನೆಂದು ತಿಳಿದು ಮರುಳಾಗಿ ಅವನಲ್ಲಿ ಮನಸ್ಸನ್ನಿರಿಸಿ ಲಜ್ಜಾಯುಕ್ತವಾದ ಮುಗುಳುನಗೆಯುಳ್ಳ ಕಡೆಗಣ್ಣೋಟವುಳ್ಳವಳಾಗಿ ಆತನನ್ನ ಪೇಕ್ಷಿಸಿದಳು ; ಅರ್ಜುನನು ಸುಭದ್ರೆಯನ್ನು ನಿರಂತರದಲ್ಲಿಯು ಧ್ಯಾನಿಸುತ ಆಕೆಯನ್ನಪಹರಿಸಿಕೊಂಡು ಹೋಗುವದಕ್ಕೆ ಸಮಯವನ್ನು ನಿರೀಕ್ಷಿಸುತ ಅತ್ಯಂತ ಬಲಿಷ್ಟನಾದ ಕಾಮನ ಬಾಣಗಳಿಂದ ವ್ಯಥೆಪಡಿಸಲ್ಪಟ್ಟ ಮನಸ್ಸುಳ್ಳವನಾಗಿ ಚಿತ್ತಸ್ವಸ್ಥವನ್ನೈದದೆ ಬಂದು ದಿವಸ ಮಹತ್ತಾದ ದೇವಯಾತ್ರೆಯಲ್ಲಿ ರಥದಲ್ಲಿ ಕುಳಿತು ಹೊರಕ್ಕೆ ಹೊರಟಂಥಾ ಸುಭದ್ರೆಯನ್ನು ದೇವಕೀ ವಸುದೇವ ಕೃಷ್ಣರ ಸಮ್ಮತಿಯಿಂದ ಅಪಹರಿಸಿ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟು ಮಾರ್ಗದಲ್ಲಿ ತಡೆಯಲೋಸುಗ ಬಂದ ಭಟರನ್ನು ತನ್ನ ಮಹಾ ಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳಿಂದ ಪ್ರಹರಿಸಿ ಪಲಾಯನಂಗೈಸಿ ಆ ಯಾದವರು ನೋಡುತ್ತಿರಲು ಸಿಂಹವು ತನ್ನ ವಸ್ತುವನ್ನಪಹರಿಸುವಂತೆ ಸುಭದ್ರೆಯನ್ನಪಹರಿಸಿಕೊಂಡು ಹೋದನು. ಅನಂತರದಲ್ಲಿ ಬಲರಾಮನು ಆ ವೃತ್ತಾಂತವನ್ನು ಕೇಳಿ ಕೋಪದಿಂದ ಕಲುಷಚಿತ್ತನಾಗಿ ಪರ್ವಕಾಲದ ಮಹಾ ಸಮುದ್ರದಂತೆ ಮೊರೆದೆದ್ದನು ; ಆಗ ಶ್ರೀಕೃಷ್ಣನು ಬಲರಾಮನ ಪಾದಗಳನ್ನಿಡಿದು ಸಮಾಧಾನಂಗೈಯುತ್ತಿರಲು ಇತರ ಬಂಧುಗಳೂ ಬಡಂಬಡಿಸಿದರು ; ಆದರಿಂದ ಬಲರಾಮನು ಕೋಪವನ್ನು ಬಿಟ್ಟು ಶಾಂತನಾಗಿ ಸಂತೋಷದಿಂದ ವಧೂವರರಿಗೆ ಉಡುಗರೆಗಳನ್ನೂ ಅಮೂಲ್ಯಗಳಾದ ಭೋಗೋಪಕರಣಗಳನ್ನೂ ಗಜಾಶ್ವರಥಗಳನ್ನೂ ದಾಸಿಯರನ್ನೂ ಕಳುಹಿಸಲು ಬಾಂಧವರಾದ ಯದುಶ್ರೇಷ್ಠರು ಸಂತೋಷಪಟ್ಟರು.

ಎಲೈ ಅರಸೆ, ಶ್ರೀಕೃಷ್ಣನಿಗೆ ಭಕ್ತರಲ್ಲಿರುವ ವಾತ್ಸಲ್ಯಮಂ ಕೇಳು : ಶ್ರೀಕೃಷ್ಣನಲ್ಲಿ ಭಕ್ತಿಮಾತ್ರದಿಂದಲೆ ಪೂರ್ಣವಾದ ಮನೋರಥವುಳ್ಳವನಾಗಿ ಶಾಂತನಾಗಿ ಜ್ಞಾನಿಯಾಗಿ ವಿಷಯಲಂಪಟನಲ್ಲದವನಾಗಿ ಶೃತದೇವನೆಂಬ ನಾಮಧೇಯವುಳ್ಳ ಬ್ರಾಹ್ಮಣನೊಬ್ಬನುಂಟು ; ಗೃಹಸ್ಥಾಶ್ರಮಿಯಾಗಿ ತನ್ನ ಯತ್ನದಿಂದ ಪ್ರಾಪ್ತವಾದ ದೇಹಧಾರಣ ಮಾತ್ರೋಪಯುಕ್ತವಾದ ವಸ್ತುವಿನಿಂದ ಜೀವನವನ್ನು ಮಾಡಿಕೊಂಡು ಸತ್ಕರ್ಮಗಳನ್ನು ನಿರ್ವಹಿಸಿಕೊಂಡಿದ್ದ ಆ ಬ್ರಾಹ್ಮಣನು ವಿದೇಹದೇಶದ ಮಿಥಿಲಾಪುರದಲ್ಲಿ ವಾಸಂಗೈದನು ; ಆತನು ಶರೀರಧಾರಣ ಮಾತ್ರಕ್ಕೆ

ಸಾಧನವಾಗಿ ದೈವವಶದಿಂದ ಯತ್ನಲಬ್ಧವಾಗಿ ಬಂದ ವಸ್ತುವನ್ನು ಸ್ವೀಕರಿಸಿ ಅದಕ್ಕಿಂತಲು ಅಧಿಕವನ್ನಪೇಕ್ಷಿಸದೆ ಅಷ್ಟುಮಾತ್ರದಿಂದಲೆ ಸಂತುಷ್ಟನಾಗಿ ಪುರುಷೋತ್ತಮನಿಗೆ ಸಂತೋಷಕರಗಳಾದ ಸತ್ಕರ್ಮಗಳನ್ನು ಮಾಡಿಕೊಂಡಿದ್ದನು! ಎಲೈ ಪರೀಕ್ಷಿದ್ರಾಯನೆ, ಅದೇಪ್ರಕಾರವಾಗಿ ಆ ರಾಷ್ಟ್ರಕ್ಕೆ ಅಧಿಪತಿಯಾದ ಬಹುಳಾಶ್ವನೆಂದು ಪ್ರಸಿದ್ಧನಾಗಿ ಅಹಂಕಾರರಹಿತನಾಗಿ ಭಗವದ್ಭಕ್ತನಾದ ಅರಸನೊಬ್ಬನಿದ್ದನು ; ಅವರಿಬ್ಬರೂ ಅಚ್ಯುತನಿಗೆ ಪ್ರಿಯರಾದವರು ; ಅವರಿಬ್ಬರಿಗೂ ಪ್ರಸನ್ನನಾಗಿ ಭಗವಂತನಾದ ಶ್ರೀಕೃಷ್ಣನು ದಾರುಕನಿಂದ ತರಲ್ಪಟ್ಟ ರಥವನ್ನಾರೋಹಣಂಗೈದು ಮುನಿಜನರೊಡನೆ ವಿದೇಹದೇಶಗಳನ್ನು ಕುರಿತು ಹೊರಟನು ; ನಾರದನು ವಾಮದೇವನು ಅತ್ರಿಯು ವ್ಯಾಸನು ಭಾರ್ಗವರಾಮನು ಅಸಿತನು ಅರುಣಿಯು ಬೃಹಸ್ಪತಿಯು ನಾನು ಕಣ್ವನು ಮೈತ್ರೇಯನು ಚ್ಯವನನು ಮೊದಲಾದ ಮಹರ್ಷಿಗಳ ಸಮೇತನಾಗಿ ಶ್ರೀಕೃಷ್ಣನು ಮಾರ್ಗದಲ್ಲಿ ಹೋಗುತ ಆಯಾ ದೇಶಗಳಲ್ಲಿದ್ದ ಜನರೂ ಧೊರೆಗಳೂ ಕಾಣಿಕೆಗಳನ್ನು ತೆಗೆದುಕೊಂಡು ಮಹಾತ್ಮರು ಸೂರ್ಯನನ್ನೆದುರುಗೊಂಡಂತೆ ಎದುರುಗೊಂಡು ಪೂಜಿಸಲು ಆರ್ತಧನ್ವ ಕುರುಜಾಂಗಲ ಟಂಕ ಮತ್ಸ್ಯ ಪಾಂಚಾಲ ಕುಂತಿ ಮಧು ಕೇಕಯ ಕುಂತಲ ಮೊದಲಾದ ದೇಶಗಳಲ್ಲಿದ್ದ ಸ್ತ್ರೀಪುರುಷರು ಗಂಭೀರವಾದ ಮುಗುಳುನಗೆಯಿಂದ ಮನೋಹರವಾದ ನೇತ್ರಗಳುಳ್ಳ ಆತನ ಮುಖಪದ್ಮವನ್ನು ನೇತ್ರಗಳಿಂದ ಪಾನಂಗೈಯುವಂತೆ ನೋಡುತ್ತಿರಲು ತನ್ನ ದರ್ಶನಮಾತ್ರದಿಂದಲೆ ಅಜ್ಞಾನವೆಂಬ ಅಂಧಕಾರವು ನಷ್ಟವಾಗುವಹಾಗೆ ಅವರಿಗೆ ಅಭಯವನ್ನೂ ತತ್ವಜ್ಞಾನವನ್ನೂ ಕೊಡುತ ಸುರನರರಿಂದ ಗಾನಂಗೈಯಲ್ಪಡುವಂಥಾದ್ದಾಗಿ ದಿಗಂತವ್ಯಾಪ್ತವಾದ್ದಾಗಿ ಶುದ್ಧವಾಗಿ ಅಶುಭಪರಿಹಾರಕವಾದ ತನ್ನ ಕೀರ್ತಿಯನ್ನು ಕೇಳುವ ವಿದೇಹದೇಶಗಳನ್ನೈದಿದನು ; ಅಲ್ಲಿದ್ದ ಪುರಜನರೂ ದೇಶವಾಸಿಗಳೂ ಅರಸರೂ ಶ್ರೀಕೃಷ್ಣನು ಬಂದನೆಂದು ಕೇಳಿ ಪೂಜಾದ್ರವ್ಯಗಳನ್ನು ಕೈಗಳಲ್ಲಿ ತೆಗೆದುಕೊಂಡು ಸಂತೋಷದಿಂದ ಆತನನ್ನೆದುರುಗೊಂಡು ಉತ್ತಮಶ್ಲೋಕನಾದ ಅಚ್ಯುತನನ್ನು ಕಂಡು ಭಕ್ತಿಪ್ರೀತಿಗಳಿಂದ ವಿಕಸಿತಗಳಾದ ಮುಖ ಚಿತ್ತಗಳುಳ್ಳವರಾಗಿ ಅಂಜಲೀಬಂಧಗಳನ್ನು ಮಾಡಿಕೊಂಡು ಪೂರ್ವದಲ್ಲಿ ಕೇಳಲ್ಪಟ್ಟಿದ್ದ ಶ್ರೀಹರಿಯನ್ನೂ ಮಹಾಮುನಿಗಳನ್ನೂ ಅವರ ಪಾದಗಳಿಗೆರಗಿ ತಮ್ಮ ಶಿರಸ್ಸುಗಳಿಂದ ನಮಸ್ಕರಿಸಿದರು ; ತಮ್ಮನ್ನನುಗ್ರಹಿಸಲೋಸುಗ ದಯೆಮಾಡಿ ಬಂದಂಥಾ ಸರ್ವಭೂತಾತ್ಮಕನಾಗಿ ಜಗದ್ಗುರುವಾದ ಶ್ರೀಕೃಷ್ಣನನ್ನು ಮಿಥಿಲಾಪತಿಯಾದ ಬಹುಳಾಶ್ವನೂ ಬ್ರಾಹ್ಮಣೋತ್ತಮನಾದ ಶ್ರುತದೇವನೂ ನಮಸ್ಕರಿಸಿ ಅಂಜಲೀಬಂಧವಂಗೈದು ಶ್ರೀಕೃಷ್ಣನನ್ನೂ ಆ ಮಹಾಮುನಿಗಳನ್ನೂ ಆತಿಥ್ಯವನ್ನಂಗೀಕರಿಸಬೇಕೆಂದು ಪ್ರಾರ್ಥಿಸಿದರು ; ಭಗವಂತನಾದ ಶ್ರೀಕೃಷ್ಣನು ಅವರ ಪ್ರಾರ್ಥನೆಯನ್ನಂಗೀಕರಿಸಿ ಈರ್ವರಿಗೂ ಪ್ರಿಯವನ್ನಾಚರಿಸಬೇಕೆಂಬ ಇಚ್ಛೆಯಿಂದ ಅವರರಿಯದಂತೆ ಎರಡು ರೂಪಗಳನ್ನು ಧರಿಸಿ ಇಬ್ಬರ ಮನೆಗಳಿಗೂ ಹೋದನು ; ಶ್ರೇಷ್ಠವಾದ ಮನಸ್ಸುಳ್ಳ ಬಹುಳಾಶ್ವನು ಅಸಜ್ಜನರ ಶ್ರೋತ್ರಮಾರ್ಗಗಳಿಗೆ ದೂರವಾದವನಾಗಿ ದಯೆಮಾಡಿ ಬಂದಂಥಾ ಶ್ರೀಕೃಷ್ಣನು ಮೊದಲಾದ ಮಹರ್ಷಿಗಳನ್ನು ಎದುರುಗೊಂಡು ಮನೆಗೆ ಕರೆದುಕೊಂಡು ಹೋಗಿ ದಿವ್ಯಪೀಠಗಳಲ್ಲಿ ಕುಳ್ಳಿರಿಸಿ ಅಧಿಕವಾದ ಭಕ್ತಿಯಿಂದ ಮಹಾ ಹರ್ಷವುಳ್ಳವನಾಗಿ ಆನಂದಬಾಷ್ಪ ಪೂರ್ಣನೇತ್ರನಾಗಿ ನಮಸ್ಕರಿಸಿ ಅವರ ಪಾದಗಳನ್ನು ತೊಳೆದು ಲೋಕಪಾವನವಾದ ಆ ಜಲವನ್ನು ಸಕುಟುಂಬನಾಗಿ ಶಿರಸ್ಸಿನಲ್ಲಿ ಧರಿಸಿ ದಿವ್ಯ ಗಂಧದಿಂದಲೂ ನೂತನ ಪುಷ್ಪಮಾಲೆಗಳಿಂದಲೂ ಧೂಪದೀಪಗಳಿಂದಲೂ ಮಧುಪರ್ಕಾದಿಗಳಿಂದಲೂ ಗೋವೃಷಭಗಳಿಂದಲೂ ದಿವ್ಯಾನ್ನಾದಿಗಳಿಂದಲೂ ಪೂಜಿಸಿ ಮೃದುವಾದ ಹಾಸಿಗೆಯುಳ್ಳ ಮಂಚದಲ್ಲಿ ವಿಶ್ರಮಿಸಿಕೊಂಡಿದ್ದ ಶ್ರೀಕೃಷ್ಣನ ಪಾದಗಳನ್ನು ತನ್ನ ತೊಡೆಯಮೇಲಿಟ್ಟುಕೊಂಡು ಸಂತೋಷದಿಂದ ಮೆಲ್ಲಮೆಲ್ಲಗೆ ಒತ್ತುತ ಮಧುರವಾದ ವಾಕ್ಯದಿಂದ ಆತನನ್ನು ಕುರಿತು "ಸಮಸ್ತ ಭೂತಗಳಿಗೂ ಚೈತನ್ಯವನ್ನುಂಟುಮಾಡುವವನೂ ಪ್ರಕಾಶವನ್ನುಂಟುಮಾಡುವವನೂ ಸ್ವಪ್ರಕಾಶನೂ ನೀನೇ ; ಸರ್ವಾತ್ಮನಾಗಿ ಸರ್ವಸಾಕ್ಷಿಯಾದ ಕಾರಣ ನಿನ್ನ ಪಾದಪದ್ಮವನ್ನು ಸ್ಮರಿಸುವ ನಮಗೆ ನೀನು ಪ್ರತ್ಯಕ್ಷನಾದೆ ; ನಿನ್ನ ವಾಕ್ಯವನ್ನು ಸತ್ಯಮಾಡಲೋಸುಗ ನೀನು ನಮ್ಮ ದೃಷ್ಟಿಗೆ ಗೋಚರನಾದೆ ; ನಿನ್ನ ಏಕಾಂತ ಭಕ್ತನಿಗಿಂತಲು ಸನ್ನಿಹಿತ ಬಂಧುವಾದ ಅನಂತನು ಅತಿ ಪ್ರಿಯನಲ್ಲವೆಂದೂ ಪತ್ನಿಯಾದ ಲಕ್ಷ್ಮಿಯೂ ಅತಿ ಪ್ರಿಯಳಲ್ಲವೆಂದೂ ಪುತ್ರನಾದ ಬ್ರಹ್ಮನೂ ಅತಿ ಪ್ರಿಯನಲ್ಲವೆಂದೂ ನೀನು

ಹೇಳಿದ ವಾಕ್ಯವನ್ನು ತಿಳಿದವನು ಯಾವನು ತಾನೇ ನಿನ್ನ ಪಾದಪದ್ಮವನ್ನು ಬಿಟ್ಟಾನು! ಯದುವಂಶದಲ್ಲಿ ಅವತರಿಸಿ ದರಿದ್ರರಾಗಿ ಶಾಂತರಾಗಿ ಸಂಸಾರಿಗಳಾದ ಮನುಷ್ಯರಿಗೆ ಸ್ವಸ್ವರೂಪವನ್ನು ಕೊಡುತ ಭಕ್ತರ ಪಾಪಪರಿಹಾರಕಸ್ಕೋಸ್ಕರ ಮೂರು ಲೋಕಗಳ ಪಾಪವನ್ನೂ ಪರಿಹರಿಸುವ ಕೀರ್ತಿಯನ್ನು ವಿಸ್ತರಿಸಿದೆ; ಅಪ್ರತಿಹತವಾದ ಜ್ಞಾನವುಳ್ಳ ನಾರಾಯಣ ಋಷಿಯಾಗಿ ಅತ್ಯಂತ ಶಾಂತವಾದ ತಪಸ್ಸನ್ನೈದಿರುವ ಭಗವಂತನಾಗಿ ಶ್ರೀಕೃಷ್ಣನಾದಂಥಾ ನಿನಗೆ ನಮಸ್ಕಾರ! ಎಲೈ ಮಹಾಮಹಿಮೆಯುಳ್ಳ ಭಗವಂತನೆ, ಈ ಮಹರ್ಷಿಗಳೊಡನೆ ಕೆಲವು ದಿವಸಗಳು ನಮ್ಮ ಮನೆಗಳಲ್ಲಿ ವಾಸಂಗೈದು ನಮ್ಮ ಕುಲವನ್ನು ಪಾವನಮಾಡು" ಎಂದು ಪ್ರಾರ್ಥಿಸಿದನು.

ಸರ್ವಲೋಕೇಶ್ವರನಾದ ಶ್ರೀಕೃಷ್ಣನು ಬಹುಳಾಶ್ವನಿಂದ ಈ ಪ್ರಕಾರವಾಗಿ ಪ್ರಾರ್ಥಿಸಲ್ಪಟ್ಟು ಮಿಥಿಲಾಪುರದಲ್ಲಿದ್ದ ನರನಾರೀ ಜನರಿಗೆ ಕಲ್ಯಾಣವನ್ನುಂಟುಮಾಡುತ ಅಲ್ಲಿ ವಾಸಂಗೈದನು.

ಅನಂತರದಲ್ಲಿ ಬ್ರಾಹ್ಮಣೋತ್ತಮನಾದ ಶೃತದೇವನು ಬಹುಳಾಶ್ವನ ಮನೆಗೆ ಬಂದಂತೆ ತನ್ನ ಮನೆಗೂ ಬಂದ ಅಚ್ಯುತನನ್ನೂ ಮುನಿಗಳನ್ನೂ ಸರ್ವಾಸ್ವದಿಂದ ಪೂಜಿಸಿ ಸಂತುಷ್ಟನಾಗಿ ಉತ್ತರೀಯ ವಸ್ತ್ರವನ್ನು ಕೊಡಹಿಕೊಂಡು ನರ್ತನಂಗೈಯುತ ದರ್ಭಾಸನಗಳಲ್ಲಿಯೂ ಪೀಠಗಳಲ್ಲಿಯೂ ಅವರನ್ನು ಕುಳ್ಳಿರಿಸಿ ಕುಶಲಪ್ರಶ್ನೆಯನ್ನು ಮಾಡಿ ಅವರ ಪಾದಗಳಿಗೆ ನಮಸ್ಕರಿಸಿ ಪತ್ನೀಸಮೇತನಾಗಿ ಪಾದಗಳನ್ನು ತೊಳೆದು ಆ ಜಲದಿಂದ ತನ್ನನ್ನೂ ತನ್ನ ಮನೆಯನ್ನೂ ತನ್ನ ಕುಟುಂಬವನ್ನೂ ಬಂಧುಗಳನ್ನೂ ಅಧಿಕ ಹರ್ಷದಿಂದ ಸ್ನಾನಮಾಡಿಸಿ ಆಮಲಕಾದಿ ಫಲಗಳಿಂದಲೂ ಉತ್ತಮಗಳಾದ ಲಾಮಂಚ ಮುಡಿವಾಳ ಕಸ್ತೂರಿ ಮೊದಲಾದ ಪರಿಮಳದ್ರವ್ಯಗಳಿಂದಲೂ ಸುಗಂಧಿಯಾಗಿ ಅಮೃತದಂತೆ ಸ್ವಾದುವಾದ ಜಲದಿಂದಲೂ ಪ್ರಾಣಿಗಳಿಗೆ ಉಪದ್ರವವಿಲ್ಲದೆ ಅನಾಯಾಸದಿಂದ ಲಬ್ಧಗಳಾದ ವಸ್ತುಗಳಿಂದಲೂ ಸತ್ವಗುಣವೃದ್ಧಿಯಂಗೈವ ಅನ್ನಾದಿಗಳಿಂದಲೂ ಆರಾಧನಂಗೈದು ತನ್ನ ಮನಸ್ಸಿನಲ್ಲಿ ಗೃಹಸ್ಥಾಶ್ರಮವೆಂಬ ಅಂಧಕೂಪದಲ್ಲಿ ಬಿದ್ದಿರುವ ತನಗೆ ಸಮಸ್ತ ತೀರ್ಥಗಳಿಗೂ ಆಶ್ರಯಗಳಾದ ಪಾದಧೂಳಿಯುಳ್ಳ ಶ್ರೀಕೃಷ್ಣನ ಸಂಗವೂ ಭಗವತ್ಸಾನ್ನಿಧ್ಯಕ್ಕೆ ಅಧಿಷ್ಠಾನಭೂತರಾದ ಈ ಮಹರ್ಷಿಗಳ ಸಂಗವೂ ಹ್ಯಾಗೆ ಘಟಿಸೀತೋ ಎಂದು ಚಿಂತಿಸುತ ತನ್ನಿಂದ ಮಾಡಲ್ಪಟ್ಟ ಅತಿಥಿಸತ್ಕಾರವುಳ್ಳವರಾಗಿ ಸುಖದಿಂದ ವಿಶ್ರಮಿಸಿಕೊಂಡಿದ್ದ ಶ್ರೀಕೃಷ್ಣನು ಮೊದಲಾದ ಮಹರ್ಷಿಗಳನ್ನುಪಚರಿಸಿ ಸಮೀಪದಲ್ಲಿ ಕುಳಿತಿರುವ ಪತ್ನಿ ಪುತ್ರ ಸ್ವಜನರೊಡನೆ ಶ್ರೀಕೃಷ್ಣನ ಪಾದಗಳನ್ನೊತ್ತುತ ಆತನನ್ನು ಕುರಿತು "ಎಲೈ ಶ್ರೀಕೃಷ್ಣನೆ, ಪರಮಪುರುಷನಾದ ನೀನು ಈಗಲೇ ನಮ್ಮ ದರ್ಶನಮಾರ್ಗವನ್ನೈದಿದವನಲ್ಲ; ಯಾವಾಗ ನೀನು ಈ ಪ್ರಪಂಚವನ್ನು ಸ್ವಶಕ್ತಿಗಳಿಂದ ಸೃಷ್ಟಿಸಿ ಸ್ವಕೀಯವಾದ ಸತ್ವದಿಂದ ಅದರಲ್ಲಿ ಪ್ರವೇಶಂಗೈದೆಯೊ ಆಗಲೇ ನಮಗೆ ದರ್ಶನವನ್ನು ಕೊಟ್ಟೆ; ಯಾವರೀತಿಯಿಂದ ಮಲಗಿರುವ ಮನುಷ್ಯನು ಮನಸ್ಸಿನಿಂದಲೆ ಅವಿದ್ಯಾಕೃತಗಳಾಗಿ ಸ್ವಪ್ನಗತಗಳಾದ ಮಿಥ್ಯಾವಸ್ತುಗಳಲ್ಲಿ ಪ್ರವೇಶಂಗೈಯುದಿರುವನೊ ಅದೇ ರೀತಿಯಲ್ಲಿ ನೀನು ಮಾಯಾಕಲ್ಪಿತಗಳಾದ ಪ್ರಪಂಚವಸ್ತುಗಳಲ್ಲಿ ಪ್ರವೇಶಂಗೈದಿದ್ದೀ! ಎಲೈ ಭಗವಂತನೆ, ನಿನ್ನ ಚರಿತ್ರವನ್ನು ಶ್ರವಣಂಗೈಯುವವರಾಗಿ ನಿನ್ನ ಲೀಲೆಗಳನ್ನು ಬಣ್ಣಿಸುವವರಾಗಿ ಬಾರಿಬಾರಿಗು ನಿನ್ನನ್ನು ಪೂಜಿಸುವವರಾಗಿ ನಮಸ್ಕರಿಸುವವರಾಗಿ ನಿನ್ನ ಲೀಲೆಯನ್ನು ಸಲ್ಲಾಪಂಗೈವವರಾಗಿ ನಿರ್ಮಲವಾದ ಮನಸ್ಸುಳ್ಳ ಶುದ್ಧರಾದ ಭಕ್ತರ ಹೃದಯದಲ್ಲಿ ನೀನು ಯಾವಾಗಲೂ ಪ್ರಕಾಶಿಸುತ್ತೀ! ಕರ್ಮವಾಸನೆಗಳಿಂದ ಕಲುಷವಾದ ಮನಸ್ಸುಳ್ಳ ಜನರ ಅಹಂಕಾರಾದಿಗಳಿಂದ ಮರೆಯಾದವನಾದಾಗ್ಯು ಸತ್ವಗುಣದಿಂದ ಪ್ರಾಪ್ತವಾದ ಶ್ರವಣ ಕೀರ್ತನಾದಿ ನಾಸ್ಕಾರವುಳ್ಳ ಅಂತಃಕರಣವುಳ್ಳವರಿಗೆ ಅತಿ ಸಮೀಪದಲ್ಲಿಯೇ ಇರುತ್ತೀ! ದೇಹಾದ್ಯಹಂಕಾರರಹಿತರಾದ ಮಹಾತ್ಮರಿಗೆ ಪರಮಾತ್ಮನಾಗಿ ಪ್ರಕಾಶಿಸುತ ಮೋಕ್ಷಪ್ರದನಾಗಿ ದೇಹಾಭಿಮಾನಿಯಾದ ಜೀವಸಮೂಹಕ್ಕೆ ಮಿಂಗಡಿಸಿಕೊಡಲ್ಪಟ್ಟ ಸಂಸಾರವುಳ್ಳವನಾಗಿ ಮಹದಹಂಕಾರಾದಿ ಕಾರ್ಯಕ್ಕೂ ಕಾರಣವಾದ ಪ್ರಕೃತಿಗೂ ನಿಯಾಮಕನಾಗಿ ಮಾಯಾಸಂವೃತನಾದ್ದರಿಂದ ಭಕ್ತರಲ್ಲದವರಿಗೆ ಅಗೋಚರನಾದ ನಿನಗೆ ನಮಸ್ಕಾರ! ಎಲೈ ಸ್ವಾಮಿಯೆ, ದಾಸರಾದ ನಮ್ಮನ್ನು ಶಿಕ್ಷಿಸುವ ನಿನಗೆ ನಾವು ಯಾವ ಸೇವೆಯನ್ನು ಮಾಡಬೇಕೊ ಅದನ್ನು ಉಪದೇಶಂಗೈವವನಾಗು; ಎಷ್ಟುಪ

ಯಾವಂತರವು ನಿನ್ನ ದರ್ಶನವುಂಟಾಗುವದಿಲ್ಲವೊ ಅಷ್ಟುಪರ್ಯಂತರವೂ ಪ್ರಾಣಿಗಳಿಗೆ ಸಂಸಾರಕ್ಲೇಶವಿರುವದು ; ನಿನ್ನ ದರ್ಶನವಾದಮೇಲೆ ಸರ್ವಕ್ಲೇಶಗಳೂ ನಷ್ಟವಾಗುವವು" ಎಂದು ಸ್ತೋತ್ರಮಾಡಿದನು.

ಎಲೈ ಅರಸೇ, ನಮಸ್ಕರಿಸುವ ಭಕ್ತರ ಸಮಸ್ತ ಕಷ್ಟಗಳನ್ನೂ ಪರಿಹರಿಸುವ ಭಗವಂತನು ಈಪ್ರಕಾರವಾಗಿ ಅವರೀರ್ವರಿಂದಲೂ ವಿಜ್ಞಾಪಿಸಲ್ಪಟ್ಟ ಅರ್ಥವನ್ನು ಕೇಳಿ ತನ್ನ ಹಸ್ತದಿಂದ ಆ ಬ್ರಾಹ್ಮಣನ ಹಸ್ತವನ್ನಿಡಿದು ಮುಗುಳುನಗೆಯುಳ್ಳವನಾಗಿ "ಎಲೈ ಬ್ರಾಹ್ಮಣನೆ, ಈ ಮುನಿಗಳು ನಿಮ್ಮನ್ನನುಗ್ರಹಿಸುವದಕ್ಕೋಸ್ಕರ ಒಂದರೆಂದು ತಿಳಿ ; ಇವರು ಜನರನ್ನು ಪಾವನಂಗೈವವರಾಗಿ ನನ್ನೊಡನೆ ಸಂಚರಿಸುತ್ತಾರೆ ; ದೇವತೆಗಳೂ ಕ್ಷೇತ್ರಗಳೂ ತೀರ್ಥಗಳೂ ದರ್ಶನ ಸ್ಪರ್ಶನಾಚಮನಗಳಿಂದ ಮೆಲ್ಲಮೆಲ್ಲಗೆ ಕಾಲಾಂತರಗಳಲ್ಲಿ ಪಾವನಂಗೈವವು ; ಸಾಧುಗಳು ದರ್ಶನಮಾತ್ರದಿಂದಲೇ ತತ್ಕಾಲದಲ್ಲಿಯೇ ಪಾವನಂಗೈವರು ; ಬ್ರಾಹ್ಮಣನು ಸಮಸ್ತ ಪ್ರಾಣಿಗಳಲ್ಲಿಯೂ ಶ್ರೇಷ್ಠನು ; ತಪಸ್ಸಿನಿಂದಲೂ ಜ್ಞಾನದಿಂದಲೂ ಸಂತೋಷದಿಂದಲೂ ಯುಕ್ತನಾಗಿ ನನ್ನ ಧ್ಯಾನದಿಂದ ಕೂಡಿರುವ ಬ್ರಾಹ್ಮಣನು ಜಗತ್ಪಾವನಂಗೈವನೆಂದು ಹೇಳತಕ್ಕದ್ದು! ಎಲೈ ಬ್ರಾಹ್ಮಣನೆ, ನನಗೆ ಚತುರ್ಭುಜಗಳಿಂದ ಯುಕ್ತವಾದ ಈ ರೂಪವು ಬ್ರಾಹ್ಮಣನಿಗಿಂತಲೂ ಪ್ರಿಯವಲ್ಲ ; ಬ್ರಾಹ್ಮಣನು ಸರ್ವವೇದಸ್ವರೂಪನು ; ನಾನು ಸರ್ವದೇವಸ್ವರೂಪನು ; ವೇದಗಳು ನನ್ನ ಸ್ವರೂಪಪ್ರಕಾಶಗಳಾದ್ದರಿಂದ ಅವುಗಳನ್ನು ಧರಿಸುವ ಬ್ರಾಹ್ಮಣರು ನನಗೆ ಅತ್ಯಂತ ಪ್ರಿಯರು ; ಪ್ರಜ್ಞಾಹೀನರಾದವರು ಈ ಅರ್ಥವನ್ನು ತಿಳಿಯದೆ ಅಸೂಯೆಪಡುವವರಾಗಿ ಪ್ರತಿಮೆಗಳು ಮೊದಲಾದ ಶಿಲಾದಿಗಳಲ್ಲಿ ಪೂಜ್ಯದೃಷ್ಟಿಯುಳ್ಳವರಾಗಿ ಪೂಜ್ಯನಾದ ಬ್ರಾಹ್ಮಣನನ್ನು ಪೂಜ್ಯನೆಂದು ತಿಳಿಯಲಾರರು ; ಈ ಚರಾಚರಾತ್ಮಕವಾದ ಪ್ರಪಂಚವು ಇದಕ್ಕೆ ಕಾರಣಗಳಾದ ಭಾವಗಳು ಸಹಾ ನನ್ನ ರೂಪಗಳೆಂದು ಜ್ಞಾನಿಗಳು ತಿಳಿಯುವರು ! ಎಲೈ ಬ್ರಾಹ್ಮಣನೆ, ಆದಕಾರಣ ಈ ಬ್ರಹ್ಮರ್ಷಿಗಳನ್ನು ಭಕ್ತಿಯಿಂದ ಪೂಜಿಸು ; ಇವರನ್ನು ಪೂಜಿಸಿದರೆ ನಾನು ಪೂಜಿಸಲ್ಪಟ್ಟವನೇ ಸರಿ ; ಹೀಗಲ್ಲದೆ ಮಹಾ ವಿಭವಗಳಿಂದ ವಿಗ್ರಹಾದಿಗಳಲ್ಲಿ ನನ್ನನ್ನು ಪೂಜಿಸಿದರೆ ಈ ಸಂತೋಷವಿಲ್ಲ" ಎಂದು ನುಡಿದನು.

ಈ ಪ್ರಕಾರವಾಗಿ ಶ್ರೀಹರಿಯಿಂದ ಆಜ್ಞಾಪ್ತರಾದ ಅವರೀರ್ವರೂ ಶ್ರೀಕೃಷ್ಣಸಹಿತರಾದ ಆ ಬ್ರಹ್ಮರ್ಷಿಗಳನ್ನು ಅತಿಶಯ ಭಕ್ತಿಭಾವಗಳಿಂದ ಅರ್ಚಿಸಿ ಸದ್ಗತಿಯನ್ನೈದಿದರು ! ಎಲೈ ಅರಸೆ, ಈ ಪ್ರಕಾರವಾಗಿ ಶ್ರೀಹರಿಯು ತನ್ನ ಭಕ್ತರಿಗೆ ಭಕ್ತನಾದಕಾರಣ ಅವರೀರ್ವರಿಗೂ ಜ್ಞಾನೋಪದೇಶಂಗೈದು ಕೆಲವು ದಿವಸಗಳು ಅಲ್ಲಿ ವಾಸಂಗೈದು ಪುನಹ ದ್ವಾರಕಾಪುರವನ್ನೈದಿದನು.

---

## ೮೭ನೇ ಅಧ್ಯಾಯ.

### ನಾರದ ನಾರಾಯಣ ಸಂವಾದ.

[ಪರೀಕ್ಷಿದ್ರಾಯನು ಶುಕಮುನಿಯನ್ನು ಕುರಿತು—ಎಲೈ ಬ್ರಾಹ್ಮಣೋತ್ತಮನೆ, ಗುಣಗಳನ್ನವಲಂಬಿಸಿಕೊಂಡಿರುವವಾದಾಗ್ಯು ಶ್ರುತಿಗಳು ನಿರ್ದೇಶಂಗೈಯಲಶಕ್ಯವಾಗಿ ಗುಣರಹಿತವಾಗಿ ಕಾರ್ಯಾಕಾರಣಗಳಿಗಿಂತಲು ಪರವಾಗಿರುವ ಬ್ರಹ್ಮಸ್ವರೂಪವನ್ನು ಪ್ರತ್ಯಕ್ಷವಾಗಿ ಮತ್ತೊಂದು ಸಂಬಂಧದಿಂದಲಾದರು ಹ್ಯಾಗೆ ಹೇಳುವವು ?—ಎಂದು ಕೇಳಿದನು.।

ಆ ವಾಕ್ಯವನ್ನು ಕೇಳಿ ಶುಕಮುನಿಯು—ಎಲೈ ಆರಸೆ ಕೇಳು : ಪೂರ್ವದಲ್ಲಿ ಈಶ್ವರನು ತನ್ನಲ್ಲಿರುವ ಜೀವಾತ್ಮರಿಗೆ ವಿಷಯಾನುಭವಾರ್ಥವಾಗಿ ಜನ್ಮವನ್ನು ಕರ್ಮಾಚರಣಾರ್ಥವಾಗಿಯೂ ಆಯಾ ಲೋಕಗಳನ್ನೈದಿ ಆಯಾ ಫಲಗಳನ್ನನುಭವಿಸಿ ಮುಕ್ತಿಯನ್ನು ಪಡೆಯುವದಕ್ಕಾಗಿಯೂ ಬುದ್ಧಿ ಇಂದ್ರಿಯ ಮನಃ ಪ್ರಾಣಗಳೆಂಬ ಉಪಾಧಿಗಳನ್ನು ಸೃಷ್ಟಿಸಿದನೆಂಬ ಶ್ರುತ್ಯರ್ಥವನ್ನು ಪೂರ್ವಿಕರಾದ ಸನಕಾದಿಗಳಿಗೂ ಮೂಲಪುರುಷರಾದ

ಬ್ರಹ್ಮಾದಿಗಳು ಅನುಸಂಧಾನಂಗೈಯುತಲಿಧಾರೆ; ಆದಕಾರಣ ಯಾವ ಪುರುಷನು ಬ್ರಹ್ಮಪ್ರತಿಪಾದಕವಾದ ಈ ಶ್ರುತಿಯ ಅರ್ಥವನ್ನು ಶ್ರದ್ಧೆಯಿಂದ ಶ್ರವಣಾದಿಗಳಿಂದ ಅಂತಃಕರಣದಲ್ಲಿ ಧರಿಸುವನೋ ಆ ಪುರುಷನು ನಿರಾಕರಿಸಲ್ಪಟ್ಟ ದೇಹಾದಿ ಸಮಸ್ತ ಉಪಾಧಿಗಳುಳ್ಳವನಾಗಿ ಮುಕ್ತಿಯನ್ನು ಪಡೆಯುವನು. ಎಲೈ ಅರಸೇ ಕೇಳು: ಈ ಅರ್ಥದಲ್ಲಿ ಆದಿಋಷಿಯಾದ ನಾರಾಯಣನಿಗೂ ನಾರದಮುನಿಗೂ ಪೂರ್ವದಲ್ಲಿ ಸಂವಾದವುಂಟಾಗಲು ನಾರಾಯಣನಿಂದ ಹೇಳಲ್ಪಟ್ಟ ಒಂದು ಇತಿಹಾಸವನ್ನು ನಿನಗೆ ಹೇಳುತ್ತೇನೆ. ಕೇಳೈ ಅರಸೆ, ಭಗವಂತನಿಗೆ ಪ್ರಿಯನಾದ ನಾರದಮುನಿಯು ಲೋಕಗಳಲ್ಲಿ ಸಂಚರಿಸುತ ಒಂದು ಸಮಯದಲ್ಲಿ ಆದಿಋಷಿಯಾದ ಶ್ರೀ ನಾರಾಯಣನನ್ನು ದರ್ಶನಂಗೈಯಲೋಸುಗ ಬದರಿಕಾಶ್ರಮವನ್ನೈದಿದನು; ಈ ಭರತವರ್ಷದಲ್ಲಿ ಸಮಸ್ತ ಜನರ ಕ್ಷೇಮಕ್ಕೋಸ್ಕರ ಧರ್ಮ ಜ್ಞಾನ ಶಾಂತಿಗಳೊಡನೆ ಯುಕ್ತವಾದ ತಪಸ್ಸನ್ನು ಕಲ್ಪಪರ್ಯಂತರವು ಮಾಡುತಲಿರುವಂಥಾ ಶ್ರೀ ನಾರಾಯಣನನ್ನು ದರ್ಶನಂಗೈಯಲೋಸುಗ ನಾರದನು ಬದರಿಕಾಶ್ರಮವನ್ನೈದಿ ಅಲ್ಲಿ ಕಲಾಪವೆಂಬ ಗ್ರಾಮದಲ್ಲಿ ವಾಸಂಗೈವ ಋಷಿಗಳಿಂದ ಪರಿವೃತನಾಗಿ ಕುಳಿತಿದ್ದ ಶ್ರೀನಾರಾಯಣನನ್ನು ಕಂಡು ನಮಸ್ಕರಿಸಿ ನಿರ್ಗುಣವಾದ ಬ್ರಹ್ಮಸ್ವರೂಪವನ್ನು ಗುಣಗಳನ್ನವಲಂಬಿಸಿಕೊಂಡಿರುವ ಶ್ರುತಿಗಳು ಹ್ಯಾಗೆ ನಿರೂಪಿಸುವವೆಂಬ ಅರ್ಥವನ್ನು ಪ್ರಶ್ನೆಗೈದನು; ಭಗವಂತನಾದ ಶ್ರೀ ನಾರಾಯಣನು ಋಷಿಗಳು ಶ್ರವಣಂಗೈಯುತಿರಲು ಪೂರ್ವದಲ್ಲಿ ಜನೋಲೋಕದಲ್ಲಿ ವಾಸಂಗೈಯುತಿದ್ದ ಪೂರ್ವಿಕರಾದ ಋಷಿಗಳಿಗೆ ಪರಸ್ಪರ ಬ್ರಹ್ಮಸ್ವರೂಪ ವಿಚಾರಣಾರ್ಥವಾಗುಂಟಾದ ಸಂವಾದವನ್ನು ನಾರದಮುನಿಗೆ ನಿರೂಪಿಸುತ ಆತನನ್ನು ಕುರಿತು “ಎಲೈ ನಾರದಮುನಿಯೇ ಕೇಳು; ಯಾವದಲ್ಲಿ ಸಮಾನರಾದ ಋಷಿಗಳು ಪರಸ್ಪರ ಗುರುಶಿಷ್ಯಭಾವವನ್ನೈದಿ ಬ್ರಹ್ಮವಿಚಾರವನ್ನು ಮಾಡುವರೋ ಅದನ್ನೇ ಬ್ರಹ್ಮಸತ್ರವೆಂದು ಜ್ಞಾನಿಗಳು ಹೇಳುವರು; ಪೂರ್ವದಲ್ಲಿ ಜನೋಲೋಕದಲ್ಲಿ ಅಂಥಾ ಬ್ರಹ್ಮಸತ್ರವೆಂಬ ಜ್ಞಾನಯಾಗವುಂಟಾಯಿತು; ಆ ಸಮಯದಲ್ಲಿ ನೀನು ಶ್ವೇತದ್ವೀಪದಲ್ಲಿದ್ದ ಅನಿರುದ್ಧನೆಂಬ ನನ್ನನ್ನು ದರ್ಶನಂಗೈಯಲೋಸುಗ ಆ ದ್ವೀಪವನ್ನೈದಿದೆ; ಆ ಬ್ರಹ್ಮಸತ್ರವೆಂಬ ಜ್ಞಾನಯಾಗದಲ್ಲಿ ದೀಕ್ಷಿತರಾಗಿ ಕುಳಿತಿದ್ದ ಜನ್ನವು ಮೊದಲುಗೊಂಡು ಇಂದ್ರಿಯನಿಗ್ರಹಯುಕ್ತರಾಗಿ ಬ್ರಹ್ಮದೇವನಿಗೆ ಮಾನಸಪುತ್ರರಾಗಿ ಮಹಾಮುನಿಗಳಾದ ಸನಕಾದಿಗಳಿಗೆ ಯಾವ ಬ್ರಹ್ಮವಿಚಾರದಲ್ಲಿ ಶ್ರುತಿಗಳೂ ಮೋಹಪಡುವವೋ ಅಂಥಾ ಬ್ರಹ್ಮವಿಚಾರವು ಪರಸ್ಪರವಾಗುಂಟಾಯಿತು; ಆಗ ಆ ಸಭೆಯಲ್ಲಿ ಈಗ ನನ್ನನ್ನು ಕುರಿತು ನೀನು ಯಾವ ಅರ್ಥವನ್ನು ಪ್ರಶ್ನೆಗೈದೆಯೋ ಆ ಅರ್ಥವಿಷಯವಾಗಿಯೇ ಪ್ರಶ್ನೆಯುಂಟಾಯಿತು; ಪರಸ್ಪರ ಸಮಾನವಾದ ಶಾಸ್ತ್ರಜ್ಞಾನವೂ ತಪಸ್ಸೂ ಸದಾಚಾರವೂ ಉಳ್ಳವರಾಗಿ ಶತ್ರುಮಿತ್ರ ಉದಾಸೀನರಲ್ಲಿ ಸಮಾನಬುದ್ಧಿಯುಳ್ಳವರಾಗಿ ಅತಿ ದಯಾಯುಕ್ತರಾದ್ದರಿಂದ ಆ ಋಷಿಗಳು ತಾವೇ ಬ್ರಹ್ಮಸ್ವರೂಪವನ್ನುಪದೇಶಂಗೈಯಲು ಯೋಗ್ಯರಾಗಿದ್ದಾಗ್ಯೂ ಕುತೂಹಲದಿಂದ ತಮ್ಮಲ್ಲಿ ಒಬ್ಬ ಋಷಿಯನ್ನು ಗುರುವಾಗಿ ಕಲ್ಪಿಸಿಕೊಂಡು ಆ ಋಷಿಯನ್ನು ಕುರಿತು ಇದೇರೀತಿ ಪ್ರಶ್ನೆಗೈದರು. ಆಗ ಗುರುವಾಗಿದ್ದ ಸನಂದನನೆಂಬ ಮಹಾಮುನಿಯು ಮಿಕ್ಕ ಋಷಿಗಳನ್ನು ಕುರಿತು ಒಂದು ಉಪಾಖ್ಯಾನವಿಶೇಷವನ್ನು ನಿರೂಪಿಸುತ ‘ಎಲೈ ಋಷಿಗಳಿರಾ ಕೇಳಿ: ಪೂರ್ವದಲ್ಲಿ ತನ್ನಿಂದ ನಿರ್ಮಿಸಲ್ಪಟ್ಟ ಸಮಸ್ತ ಪ್ರಪಂಚವನ್ನು ಪ್ರಳಯಕಾಲದಲ್ಲಿ ಸಂಹರಿಸಿ ಯೋಗಶಕ್ತಿಯಿಂದ ತನ್ನ ಶಕ್ತಿಗಳೊಡಗೂಡಿಸಿ ನಿದ್ರೆಗೈವವನಂತಿದ್ದ ಪರಮೇಶ್ವರನನ್ನು ಪ್ರಳಯಾಂತರದಮೇಲೆ ಪ್ರಪಂಚದ ಸೃಷ್ಟಿಕಾಲದಲ್ಲಿ ಪ್ರಥಮನಿಶ್ವಾಸದಿಂದ ಜನಿಸಿರುವ ಶ್ರುತ್ಯಭಿಮಾನ ದೇವತೆಗಳು (ಆಶ್ರಯಿತರಾದ ಸ್ತುತಿಪಾಠಕರು ವೃಷಃಕಾಲದಲ್ಲಿ ನಿದ್ರೆಗೈಯುತಲಿರುವ ಚಕ್ರವರ್ತಿಯನ್ನು ಉತ್ಕೃಷ್ಟಗಳಾದ ಕೀರ್ತಿಗಳೊಡಗೂಡಿರುವ ಅವನ ಪರಾಕ್ರಮಗಳನ್ನು ವರ್ಣಿಸುವದರಿಂದ ಎಚ್ಚರಗೊಳಿಸುವರೀತಿಯಲ್ಲಿ) ಆ ಭಗವಂತನ ಸರ್ವಜ್ಞತ್ವಾದಿ ಗುಣಗಳನ್ನು ವರ್ಣಿಸುವ ವಾಕ್ಯಗಳಿಂದೆಚ್ಚರಗೊಳಿಸುತ ‘—ಎಲೈ ಯಾರಿಂದಲೂ ಜಯಿಸಲ್ಪಡದಿರುವ ಭಗವಂತನೆ; ಸ್ಥಾವರಗಳೂ ಜಂಗಮಗಳೂ ಶರೀರಗಳಾಗುಳ್ಳ ಜೀವಾತ್ಮರಿಗೆ ಉಪಾಧಿರೂಪವಾಗಿ ಆ ಜೀವರ ಆನಂದಾದಿಗಳನ್ನಾಚ್ಛಾದನಂಗೈಯಲೋಸುಗ ಗುಣಗಳನ್ನು ಪರಿಗ್ರಹಿಸಿಕೊಂಡಿರುವ ಅವಿದ್ಯೆಯು ವ್ಯಭಿಚಾರಿಣಿಯಾದ ಸ್ತ್ರೀಯಂತೆ ಅನ್ಯರನ್ನು ವಂಚಿಸಲೋಸುಗ ಗುಣಗಳನ್ನು ಗ್ರಹಿಸುತಲಿದೆ; ಆದಕಾರಣ ನಿಗ್ರಹಂಗೈಯಲು ಯೋಗ್ಯವಾದ ಆ

ಅವಿದ್ಯೆಯನ್ನು ಸ್ವರೂಪದಿಂದಲೇ ಸಮಸ್ತ ಸಾಮರ್ಥ್ಯವನ್ನೂ ಪಡೆದವನಾಗಿರುವ ನೀನು ಜಯಿಸಿ ನಿನ್ನ ಸರ್ವೋತ್ಕೃಷ್ಟತ್ವವನ್ನು ಪ್ರಕಟಪಡಿಸು; ಜೀವಾತ್ಮರು ತಾವೇ ಜ್ಞಾನವೈರಾಗ್ಯಾದಿಗಳಿಂದ ಅವಿದ್ಯೆಯನ್ನು ಜಯಿಸಲಾರರು; ನೀನು ಅಂತರ್ಯಾಮಿಯಾಗಿ ಸಮಸ್ತ ಶಕ್ತಿಗಳನ್ನೂ ವೃದ್ಧಿಹೊಂದಿಸುತಲಿದ್ದೀಯಾದಕಾರಣ ಅವರು ಜ್ಞಾನವೈರಾಗ್ಯಾದಿಗಳನ್ನು ಪಡೆಯುವದರಲ್ಲಿ ಸ್ವತಂತ್ರರಲ್ಲ; ಎಲ್ಲಿಯೂ ತಡೆಯಿಲ್ಲದಿರುವ ಜ್ಞಾನೈಶ್ವರ್ಯಾದಿಗಳುಳ್ಳ ನೀನೇ ಜೀವಾತ್ಮರಿಗೆ ಕರ್ಮಜ್ಞಾನಾದಿ ಶಕ್ತಿಗಳನ್ನು ವೃದ್ಧಿಹೊಂದಿಸುವದರಿಂದ ಅವರ ಅವಿದ್ಯೆಯನ್ನು ಪರಿಹರಿಸು; ವೇದಕ್ಕೆ ನೀನೇ ಪ್ರಮಾಣವೆಂದೂ ಸೃಷ್ಟ್ಯಾದಿ ಸಮಯದಲ್ಲಿ ಮಾಯೆಯೊಡನೆ ಕ್ರೀಡಿಸುವವನಾಗಿ ನಿರಂತರದಲ್ಲಿಯು ನ್ಯೂನವಲ್ಲದ ಐಶ್ವರ್ಯವುಳ್ಳವನಾದ್ದರಿಂದ ಸತ್ಯಜ್ಞಾನಾನಂದಗಳಿಂದ ಪರಿಪೂರ್ಣವಾದ ಸ್ವಸ್ವರೂಪದಿಂದ ಪ್ರಕಾಶಿಸುವವನಾಗಿರುವ ನಿನ್ನನ್ನು ಪ್ರಪಂಚದ ಸೃಷ್ಟ್ಯಾದಿಗಳಿಗೆ ಮೂಲಕಾರಣನೆಂದೂ ಸರ್ವಜ್ಞನೆಂದೂ ಸರ್ವೇಶ್ವರನೆಂದೂ ಅನಂತಶಕ್ತಿಯುಳ್ಳವನೆಂದೂ ಬಹುಪ್ರಕಾರವಾಗಿ ಹೇಳುತಲಿದೆ; ಇಂದ್ರನು ಚರಾಚರಭೂತಗಳ ಅಧಿಪತಿಯೆಂದೂ ಅಗ್ನಿಯು ಸ್ವರ್ಗಕ್ಕೆ ಮುಖ್ಯನಾದವನೂ ಭೂಮಿಗೆ ಪತಿಯಾದವನೂ ಎಂದೂ ಅನೇಕ ವಾಕ್ಯಗಳಿಂದ ವೇದಗಳು ಇಂದ್ರಾಗ್ನಿ ಮೊದಲಾದ ದೇವತೆಗಳನ್ನು ಸ್ತುತಿಸುವವು. ಆ ವೇದಗಳು ನಿನ್ನನ್ನೇ ಸರ್ವಜಗತ್ಕಾರಣನೆಂದು ಸ್ತುತಿಸುವವು! ಎಲೈ ಹರಿಯೆ, ಕಾರಣವಾದ ಮೃತ್ತಿಗೆಯಿಂದ ಘಟ ಮೊದಲಾದ ವಿಕಾರಗಳಿಗೆ ಉತ್ಪತ್ತಿ ಲಯಗಳುಂಟಾಗುತಲಿವೆಯಾದಕಾರಣ ಮೃತ್ತಿಗೆಯು ಸತ್ಯವಾಗುವದೇ ಹೊರ್ತು ವಾಙ್ಮಾತ್ರದಿಂದ ವ್ಯವಹರಿಸಲು ಯೋಗ್ಯಗಳಾದ ಘಟಾದಿ ವಿಕಾರಗಳು ಸತ್ಯಗಳಾಗಲಾರವು; ಅದೇರೀತಿಯಲ್ಲಿ ಕಾರ್ಯಗಳಾದ ಆಕಾಶಾದಿ ಸಮಸ್ತಗಳಿಗೂ ಅಧಿಷ್ಠಾನರೂಪನಾದ್ದರಿಂದ ವಿಕಾರರಹಿತನಾಗಿ ಸರ್ವಕ್ಕೂ ಮೂಲಕಾರಣನಾಗಿ ಪರಿಪೂರ್ಣನಾದ ನಿನ್ನ ದೆಶೆಯಿಂದ ಸಮಸ್ತ ಪ್ರಪಂಚಕ್ಕು ಉತ್ಪತ್ತಿ ಲಯಗಳುಂಟಾಗುತಲಿವೆ; ಆದಕಾರಣ ಯಾವರೀತಿ ಘಟಾದಿಗಳು ಲಯವನ್ನೈದಿದಾಗ್ಯು ಸತ್ಯವಾದ ಮೃತ್ತಿಗೆ ಮಾತ್ರವೇ ಉಳಿಯುವದೋ ಆರೀತಿ ಸಮಸ್ತ ಪ್ರಪಂಚಕ್ಕೂ ಲಯವುಂಟಾದಾಗ್ಯು ಪರಿಪೂರ್ಣನಾಗಿ ಸತ್ಯರೂಪನಾಗಿರುವ ನೀನೊಬ್ಬನೆ ಅವಶಿಷ್ಟನಾಗಿ ಉಳಿಯುವೆ; ಋಷಿಗಳು ಇಂದ್ರಾಗ್ನಿ ಮೊದಲಾದ ದೃಶ್ಯವಾದ ಸಮಸ್ತ ಪ್ರಪಂಚವೂ ಬ್ರಹ್ಮನಾದ ನೀನೇ ಸರಿಯೇಹೊರ್ತು ಮತ್ತೊಂದಿಲ್ಲವೆಂದು ಋಷಿಗಳು ಹೇಳುತಲಿಧಾರೆ; ಆದಕಾರಣ ಸಮಸ್ತ ಮಂತ್ರಗಳೂ ನಿನ್ನಲ್ಲೇ ತಾತ್ಪರ್ಯವನ್ನೂ ವಾಗ್ವ್ಯಾಪಾರವನ್ನೂ ಧರಿಸಿಕೊಂಡಿರುವವೇ ಹೊರ್ತು ಇತರ ವಿಕಾರಗಳಲ್ಲಿ ಅವಕ್ಕೆ ತಾತ್ಪರ್ಯವೂ ವಾಗ್ವ್ಯಾಪಾರವೂ ಇಲ್ಲ; ಭೂಮಿಯಲ್ಲಿ ಸಂಚರಿಸುತಿರುವ ಸಮಸ್ತ ಪ್ರಾಣಿಗಳ ಪಾದಗಳು ಮೃತ್ಪಾಷಾಣ ಲೋಷ್ಟ ಕಾಷ್ಠಾದಿಗಳಲ್ಲಿರಿಸಲ್ಪಟ್ಟರೂ ಹ್ಯಾಗೆ ಭೂಮಿಯನ್ನು ಬಿಟ್ಟು ನಿಲ್ಲಲಾರವೋ ಆರೀತಿಯಲ್ಲಿ ವೇದಗಳು ಯಾವ ವಿಕಾರಸಮೂಹವನ್ನು ಹೇಳುತಲಿದ್ದಾಗ್ಯೂ ಸರ್ವಕಾರಣನಾಗಿ ಪರಮಾರ್ಥರೂಪನಾದ ನಿನ್ನನ್ನೇ ಹೇಳುತಲಿವೆ! ಎಲೈ ತ್ರಿಗುಣಾತ್ಮಕವಾದ ಮಾಯೆಯೆಂಬ ಸ್ತ್ರೀಮೃಗವನ್ನು ನರ್ತನಂಗೈಸುವ ಪರಮೇಶ್ವರನೇ, ಈರೀತಿ ವಿವೇಕಿಗಳಾದ ಪುರುಷರು ಸಮಸ್ತ ಜನರ ಪಾಪವನ್ನು ಪರಿಹರಿಸುವದರಲ್ಲಿ ಕಾರಣವಾಗಿ ನಿನ್ನ ಕಥಾರೂಪವಾದ ಅಮೃತಸಮುದ್ರವನ್ನು ಸೇವಿಸಿದ ಮಾತ್ರದಿಂದಲೆ ಸಮಸ್ತ ದುಃಖಗಳನ್ನು ಬಿಡುವರು; ಹೀಗಿರುವಲ್ಲಿ ಬ್ರಹ್ಮಸ್ವರೂಪಸ್ಫುರಣದಿಂದ ನಷ್ಟಗಳಾದ ರಾಗದ್ವೇಷಾದಿಗಳೂ ಜರಾಮರಣಾದಿಗಳೂ ಉಳ್ಳವರಾಗಿ ನಿನ್ನ ಅಖಂಡಾನಂದಾನುಭವವುಳ್ಳ ಸ್ವರೂಪವನ್ನು ಸೇವಿಸುವಂಥಾ ಮಹಾತ್ಮರು ಸಮಸ್ತ ಪಾಪಗಳನ್ನೂ ದುಃಖಗಳನ್ನೂ ಬಿಡರೇ; ಯಾವರೀತಿ ಪದ್ಮಪತ್ರದಲ್ಲಿರುವ ಜಲಬಿಂದುಗಳು ಅದರಲ್ಲಿ ತಗಲದಿರುವವೋ ಆರೀತಿ ನೀನೇ ಪರತತ್ವರೂಪನೆಂದು ತಿಳಿಯುವ ಪುರುಷರಲ್ಲಿ ಪಾಪಕರ್ಮ ಸಂಬಂಧವುಂಟಾಗಲಾರದು! ಎಲೈ ಪರಮಪುರುಷನೆ, ಲೋಕದಲ್ಲಿ ಪುರುಷರು ನಿನ್ನ ಭಕ್ತರಾದರೆ ಆಗ ಸಫಲವಾದ ಜೀವನವುಳ್ಳವರಾಗುತ್ತಾರೆ; ನಿನ್ನಲ್ಲಿ ಭಕ್ತಿಯುಕ್ತರಾಗದಿದ್ದರೆ ಕೊಲಿಮೆತಿತ್ತಿಗಳಂತೆ ನಿಷ್ಫಲವಾದ ನಿಶ್ವಾಸವುಳ್ಳವರಾಗುತ್ತಾರೆ; ಮಹತತ್ವವು ಅಹಂಕಾರವು ಮೊದಲಾದ ತತ್ವಗಳು ತಾವು ಜಡಗಳಾದಾಗ್ಯೂ ಯಾವ ನಿನ್ನ ಅನುಪ್ರವೇಶದಿಂದ ಸಾಮರ್ಥ್ಯವನ್ನು ಪಡೆದು ಸಮಷ್ಟಿವ್ಯಷ್ಟಿರೂಪಗಳಾದ ದೇಹಗಳನ್ನು ನಿರ್ಮಿಸುವವೋ—ಆ ಸಮಷ್ಟಿ ವ್ಯಷ್ಟಿದೇಹಗಳಲ್ಲಿರುವ ಅನ್ನಮಯಾದಿ ಪಂಚಕೋಶಗಳನ್ನು ಪ್ರವೇಶಿಸಿ

ಅವುಗಳಲ್ಲಿ ಅನುವರ್ತಿಸಿಕೊಂಡಿರುವನಾದ್ದರಿಂದ ಆಯಾಯ ಕೋಶದ ಆಕಾರದಂತೆ ಆಕಾರವುಳ್ಳವನಾಗಿ ಯಾವನು ಚೈತನ್ಯವನ್ನುಂಟುಮಾಡುವನೋ—ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯಗಳೆಂಬ ಪಂಚಕೋಶಂಗಳು ಉಪದೇಶಂಗೈಯಲ್ಪಡುವಲ್ಲಿ ಯಾವನು ಮತ್ಸ್ಯರೂಪದಿಂದ ಉಪದೇಶಂಗೈಯಲ್ಪಡುವನೊ ಅಂಥಾ ಪರಬ್ರಹ್ಮನೇ ನೀನು; ಸ್ಥೂಲಸೂಕ್ಷ್ಮಗಳಾದ ಅನ್ನಮಯಾದಿ ಪಂಚಕೋಶಗಳಗಿಂತಲು ವ್ಯತಿರಿಕ್ತನಾದ್ದರಿಂದ ಅವಕ್ಕೆ ಸಾಕ್ಷಿರೂಪನಾಗಿ ಅಬಾಧ್ಯನಾಗಿ ಸತ್ಯಸ್ವರೂಪನಾಗಿರುವ ಪರಬ್ರಹ್ಮನು ನೀನೇ; ಆದಕಾರಣ ಸಮಸ್ತ ಪ್ರಾಣಿಗಳ ಜೀವನಕ್ಕೆ ಕಾರಣನಾದ ನಿನ್ನನ್ನು ಯಾವತೆರದಿಂದಲೂ ಸೇವಿಸದೆ ಕೃತಘ್ನರಾದ ಪುರುಷರಿಗೆ ಕಾವದಾದಿ ಫಲವು ಸಿದ್ಧಿಸಲಾರದು! ಎಲೈ ಅನಂತನೆ, ಋಷಿಗಳ ಸಂಪ್ರದಾಯ ಮಾರ್ಗಗಳಲ್ಲಿ ಯಾರು ಸ್ಥೂಲದೃಷ್ಟಿಯುಳ್ಳವರೋ ಆ ಪುರುಷರು ಉದರಸ್ಥಾನದಲ್ಲಿರುವ ಮಣಿಪೂರವೆಂಬ ಚಕ್ರದಲ್ಲಿ ಪ್ರಕಾಶಿಸುವ ಪರಬ್ರಹ್ಮನನ್ನು ಧ್ಯಾನಂಗೈಯುತಲಿಧಾರೆ; ಅರುಣಿಗಳೆಂಬ ಋಷಿಗಳಾದರೋ ಸೂಕ್ಷ್ಮದೃಷ್ಟಿಯುಳ್ಳವರಾದಕಾರಣ ಇಳಾ ಪಿಂಗಳಾ ಸುಷುಮ್ನೆಗಳು ಮೊದಲಾದ ಸಮಸ್ತ ನಾಡಿಗಳಿಗೂ ಪ್ರಸರಣಸ್ಥಾನವಾದ ಅನಾಹತಚಕ್ರದಲ್ಲಿರುವ ದಹರಾಕಾಶರೂಪನಾದ್ದರಿಂದ ಸೂಕ್ಷ್ಮರೂಪನಾದ ಬ್ರಹ್ಮನನ್ನು ಉಪಾಸನಂಗೈಯುತಲಿಧಾರೆ; ಹೃದಯಸ್ಥಾನದ ದೆಶೆಯಿಂದ ನಿನಗೆ ಪ್ರಕಾಶಸ್ಥಾನವಾದ ಸುಷುಮ್ನಾಮುಖವಾಗಿ ಶ್ರೇಷ್ಠವಾಗಿ ಜ್ಯೋತಿರ್ಮಯವಾದ ಬ್ರಹ್ಮರಂಧ್ರಸ್ಥಾನವನ್ನೈದಿಸಿ ಆ ಸಹಸ್ರಾರಚಕ್ರದಲ್ಲಿ ಪರಬ್ರಹ್ಮನಾದ ನಿನ್ನನ್ನು ಭಾವಿಸುವ ಪುರುಷರು ಪುನಹಾ ಈ ಲೋಕದಲ್ಲಿ ಸಂಸಾರಕೂಪದಲ್ಲಿ ಬೀಳುವದಿಲ್ಲ; ಪರಮೇಶ್ವರನಿಗೆ ಜೀವಾತ್ಮನ ತೆರದಿಂದ ಉದರ ಹೃದಯಾದಿಸ್ಥಾನಸಂಬಂಧವುಂಟಾದಲ್ಲಿ ಆ ಉದರ ಹೃದಯಾದಿಗಳಲ್ಲಿ ಅನುಪ್ರವೇಶಂಗೈದಿರುವ ಆ ಬ್ರಹ್ಮಜ್ಯೋತಿಸ್ಸಿಗೆ ತಾರತಮ್ಯವುಂಟಾಗುವದು! ಎಲೈ ಪರಮಾತ್ಮನೆ, ಯಾವರೀತಿ ಅಗ್ನಿಯು ಸ್ವತಃ ತಾರತಮ್ಯವಿಲ್ಲದಿದ್ದಾಗ್ಯೂ ಆಯಾ ಕಾಷ್ಠಗಳನ್ನನುಸರಿಸಿಕೊಂಡು ಆಯಾ ಪ್ರಕಾರವಾಗಿ ಪ್ರಕಾಶಿಸುವದೋ ಆರೀತಿ ಸರ್ವಾತ್ಮನಾದ ನೀನು ಸ್ವಕಲ್ಪಿತಗಳಾಗಿ ವಿಚಿತ್ರಗಳಾಗಿ ಉತ್ತಮ ಮಧ್ಯಮಾಧಮಗಳಾಗಿ ನಿನ್ನ ಅಭಿವ್ಯಕ್ತಿಗೆ ಸ್ಥಾನಗಳಾಗಿ ಕಾರ್ಯಗಳಾಗಿರುವ ದೇಹಾದಿಗಳಲ್ಲಿ ಮೂಲಕಾರಣನಾದ್ದರಿಂದ ಕಾರ್ಯೋತ್ಪತ್ತಿಗಿಂತಲು ಪೂರ್ವದಲ್ಲಿಯೇ ಸಿದ್ಧವಾಗಿರುವವನಾದಕಾರಣ ಆ ದೇಹಗಳಲ್ಲಿ ಮುಖ್ಯವಾಗಿ ನಿನಗೆ ಪ್ರವೇಶವಿಲ್ಲದಿದ್ದಾಗ್ಯೂ ಪ್ರವೇಶಂಗೈದವನಂತೆ ಇರುವವನಾಗಿ ಆ ದೇಹಾದಿಗಳು ಇದ್ದಂತೆ ಅವನ್ನೇ ಅನುಸರಿಸುತ ನೀನು ನ್ಯೂನಾಧಿಕಭಾವದಿಂದ ತೋರುತಲಿದ್ದಿಯೇ ಹೊರ್ತು ಮತ್ತೊಂದಿಲ್ಲ; ನಿರ್ಮಲವಾದ ಬುದ್ಧಿಯುಳ್ಳ ಮಹಾತ್ಮರು ಇಹಲೋಕ ಪರಲೋಕಗಳಲ್ಲಿ ಪಡೆಯತಕ್ಕ ಕರ್ಮಫಲಗಳನ್ನು ತ್ಯಾಗಂಗೈದವರಾದಕಾರಣ ಅಸತ್ಯಗಳಾದ ದೇಹಾದಿಗಳಲ್ಲಿ ವಿಶೇಷರಹಿತವಾದ್ದರಿಂದ ಸತ್ಯಸ್ವರೂಪವಾಗಿ ಸತ್ತಾಮಾತ್ರವಾಗಿರುವ ನಿನ್ನ ಸ್ವರೂಪವನ್ನು ತಿಳಿಯುತಲಿಧಾರೆ; ನಿನಗೆ ಉಪಾಧಿಕಲ್ಪಿತವಾದ ತಾರತಮ್ಯವಿಲ್ಲವಾದಕಾರಣ ಚ್ಯುತಿಯಿಲ್ಲದಿರುವ ಐಶ್ವರ್ಯವುಳ್ಳ ನೀನು ಉಪಾಸನಂಗೈಯಲು ಯೋಗ್ಯನೇ ಸರಿ! ಲೋಕಾನುಗ್ರಹಾರ್ಥವಾಗಿ ಅವತರಿಸುವ ನಿನ್ನ ಪಾದಸೇವೆಯು ಮುಕ್ತಿಗೆ ಮುಖ್ಯ ಸಾಧನವಾದ್ದೆಂದು ವೇದಗಳು ಹೇಳುವವು! ಎಲೈ ಈಶ್ವರನೆ, ತಮ್ಮ ತಮ್ಮ ಕರ್ಮಗಳಿಂದ ಸಂಪಾದಿಸಲ್ಪಟ್ಟ ಈ ಮನುಷ್ಯಾದಿ ಶರೀರಗಳಲ್ಲಿ ಭೋಕ್ತೃರೂಪದಿಂದಿರುವ ಜೀವಾತ್ಮನು ವಸ್ತುತಃ ಕಾರ್ಯಾಕಾರಣಗಳು ಅಸತ್ಯಗಳಾದಕಾರಣ ಒಳಗೂ ಹೊರಗೂ ಕಾರ್ಯಗಳಾದ ದೇಹಾದಿಗಳಿಂದ ಕಾರಣವಾದ ಅವಿದ್ಯೆಯಿಂದಲು ಅವತರಣವಿಲ್ಲದಿರುವನಾದ್ದರಿಂದ ಆ ಜೀವಾತ್ಮನನ್ನು ಸರ್ವಶಕ್ತಿಗಳಿಗೂ ಆಶ್ರಯನಾಗಿ ಪೂರ್ಣನಾಗಿರುವ ನಿನ್ನ ಸ್ವರೂಪವನ್ನಾಗಿ ವೇದಗಳು ಹೇಳುತಲಿವೆ ಎಂದೂ ಜೀವಾತ್ಮನ ತತ್ವವನ್ನು ವಿಚಾರದಿಂದ ಚನ್ನಾಗಿ ಶೋಧಿಸಿ ಮತ್ತೊಂದು ಪ್ರಕಾರದಿಂದ ತತ್ವಜ್ಞಾನವು ಪಡೆಯಲಶಕ್ಯವೆಂದೂ ತಿಳಿಯುತಲಿರುವವರಾಗಿ ಋಷಿಗಳು ಭೂಲೋಕದಲ್ಲಿ ವೇದೋಕ್ತಗಳಾದ ಸಮಸ್ತ ಕರ್ಮಗಳು ಎಲ್ಲಿ ಸಮರ್ಪಿಸಲ್ಪಟ್ಟಂಥಾವಾಗಿ ಮುಕ್ತಿಯೆಂಬ ಮಹಾ ಫಲವನ್ನುಂಟುಮಾಡುವವೋ ಅಂಥಾ ಸಂಸಾರನಿವರ್ತಕವಾದ ನಿನ್ನ ಪಾದಾರವಿಂದವನ್ನು ಅತಿ ವಿಶ್ವಾಸಯುಕ್ತರಾಗಿ ಪೂಜಾನಮಸ್ಕಾರಾದಿಗಳಿಂದ ಸೇವಿಸುತಲಿಧಾರೆ! ಎಲೈ ಪರಮೇಶ್ವರನೆ, ಲೋಕದಲ್ಲಿ ಪ್ರಶಸ್ತ್ಯಾತ್ಮರಾದ ಕೆಲವು ಪುರುಷರು ತಿಳಿಯಲಶಕ್ಯವಾದ ಆತ್ಮತತ್ವವನ್ನು ಭಕ್ತರಿಗೆ ತಿಳಿಸಲೋಸುಗ ಸ್ವೀಕರಿಸಲ್ಪ

ಟ್ಟ ಲೀಲಾಶರೀರವುಳ್ಳ ನಿನ್ನ ಕಥೆಯೆಂಬ ಮಹತ್ತಾದ ಅಮೃತಸಮುದ್ರದಲ್ಲಿ ಮಜ್ಜನವನ್ನು ಮಾಡೋಣದರಿಂದ ಪರಿಹರಿಸಲ್ಪಟ್ಟ ಸಂಸಾರಶ್ರಮೆಯುಳ್ಳವರಾಗಿ ನಿನ್ನ ಚರಣವೆಂಬ ಪದ್ಮದಲ್ಲಿ ಹಂಸಗಳಂತೆ ರಮಿಸುತಲಿರುವ ನಿನ್ನ ಭಕ್ತಸಮೂಹದೊಡನೆ ಸಂಗವನ್ನು ಮಾಡುವದರಿಂದ ತ್ಯಜಿಸಲ್ಪಟ್ಟ ಗೃಹಗಳುಳ್ಳವರಾಗಿಯೂ ಸರ್ವೋತ್ಕೃಷ್ಟವಾದ ಮೋಕ್ಷವನ್ನೂ ಅಪೇಕ್ಷಿಸುವದಿಲ್ಲ; ಹೀಗಿರುವಲ್ಲಿ ತುಚ್ಛವಾದ ಅನ್ಯಫಲವನ್ನು ಅವರು ಅಪೇಕ್ಷಿಸುವರೇ! ಎಲೈ ಪರಮಾತ್ಮನೇ, ಶರೀರಾದಿಗಳನ್ನು ಪೋಷಿಸುವದರಲ್ಲೇ ವಾಸನೆಯುಳ್ಳ ಮೂಢರು ನಿನ್ನ ಸೇವೆಗೆ ಉಪಯುಕ್ತವಾದ ಈ ಶರೀರವು ಆತ್ಮನಂತೆಯೂ ಬಂಧುವಂತೆಯೂ ಪ್ರಿಯನಂತೆಯೂ ಸ್ವಾಧೀನವಾಗಿದ್ದಾಗ್ಯೂ ಅದೇರೀತಿ ಅಭಿಮುಖನಾಗಿ ಹಿತನಾಗಿ ಪ್ರಿಯನಾಗಿ ಆತ್ಮನಾಗಿರುವ ನೀನು ಸುಖದಿಂದ ಸೇವಿಸಲು ಯೋಗ್ಯನಾಗಿದ್ದಾಗ್ಯೂ— ಕಟಕಟಾ—ನಿನ್ನನ್ನು ಸ್ನೇಹಾದಿಗಳಿಂದ ಭಜಿಸದೆ ತುಚ್ಛಗಳಾದ ದೇಹಾದಿಗಳಲ್ಲಿರುವ ಆಸಕ್ತಿಯಿಂದ ಪ್ರವೃತ್ತರಾಗಿ ನಿಕೃಷ್ಟವಾದ ಶರೀರವನ್ನು ಪೋಷಿಸುತ ಸಂಸಾರಕೂಪದಲ್ಲಿ ಬಿದ್ದು ಹೊರಳುತಲಿಧಾರೆ; ಆದಕಾರಣ ಅವರು ಆತ್ಮದ್ರೋಹಿಗಳು! ಎಲೈ ಸರ್ವೇಶ್ವರನೆ, ಪ್ರಾಣಾದಿ ವಾಯುಗಳನ್ನೂ ಮನಸ್ಸೇಂದ್ರಿಯಗಳನ್ನೂ ನಿಗ್ರಹಿಸಿ ದೃಢವಾದ ಯೋಗಾಭ್ಯಾಸದಲ್ಲಿ ಆಸಕ್ತರಾದ ಮುನಿಗಳು ಹೃದಯದಲ್ಲಿ ಯಾವ ನಿನ್ನ ಪರತತ್ವಸ್ವರೂಪವನ್ನು ಉಪಾಸನಂಗೈವರೋ ಅಂಥಾ ಪರತತ್ವವನ್ನೇ ನಿನ್ನ ಶತ್ರುಗಳೂ ನಿನ್ನ ಸ್ಮರಣೆಯಿಂದ ಐದಿದರು; ಕಾಮದಿಂದ ಮಹಾಸರ್ಪಶರೀರಕ್ಕೆ ಸಮಾನಗಳಾದ ನಿನ್ನ ಭುಜದಂಡಗಳಲ್ಲಿ ಆಸಕ್ತವಾದ ಬುದ್ಧಿಯುಳ್ಳ ಸ್ತ್ರೀಯರೂ ಅಪರಿಚ್ಛಿನ್ನನಾದ ನಿನ್ನನ್ನು ನೋಡುತ ನಿನ್ನ ಪಾದಾರವಿಂದವನ್ನು ಭಾವಿಸುವವರಾಗಿ ಶೃತ್ಯಭಿಮಾನಿದೇವತೆಗಳಾದ ನಾವೂ ನಿನ್ನ ಕೃಪೆಗೆ ಸಮವಾಗಿ ಪಾತ್ರರಾಗುತಲಿಧೇವೆ; ನಿನ್ನ ಚರಣಪ್ರಭಾವವು ಇಂಥಾದ್ದಲ್ಲವೆ! ಯಾವ ಯೋಗಿಗಳು ನಿನ್ನನ್ನು ಹೃದಯಕಮಲದಲ್ಲಿ ಉಪಾಸನಂಗೈಯುವರೋ—ಯಾವ ಶೃತ್ಯಭಿಮಾನಿ ದೇವತೆಗಳಾದ ನಾವು ಅಪರಿಚ್ಛಿನ್ನನಾದ ನಿನ್ನನ್ನು ಭಾವಿಸುತಲಿದ್ದೇವೋ—ಯಾವ ಸ್ತ್ರೀಯರು ಕಾಮದಿಂದ ನಿನ್ನ ಪರಿಚ್ಛಿನ್ನವಾದ ರೂಪವನ್ನು ಭಜಿಸುವರೋ—ಯಾವ ಶತ್ರುಗಳು ವೈರದಿಂದ ನಿನ್ನನ್ನು ಸ್ಮರಿಸುವರೋ ಅವರೆಲ್ಲರನ್ನೂ ನೀನು ನಿನ್ನ ಸ್ವರೂಪವನ್ನೈದಿಸುವನಾಗುತ್ತೀ; ಅನೇಕ ಶಾಸ್ತ್ರಗಳು ಪರಮಾತ್ಮಸ್ವರೂಪವು ತಿಳಿಯಲಶಕ್ಯವೆಂದು ಹೇಳುತ ಭಕ್ತಿಯನ್ನೇ ಮುಖ್ಯಸಾಧನವೆಂದು ಅಂಗೀಕರಿಸುತಲಿವೆ! ಎಲೈ ಭಗವಂತನೆ, ಸೃಷ್ಟ್ಯಾದಿಯಲ್ಲಿ ನಿನ್ನ ದೆಶೆಯಿಂದ ಮೊದಲು ಬ್ರಹ್ಮದೇವನು ಜನಿಸಿದನು; ಅನಂತರದಲ್ಲಿ ಆಧ್ಯಾತ್ಮಿಕ ಆಧಿದೈವಿಕರೆಂಬ ದೇವಸಮೂಹಗಳು ಜನಿಸಿದವು; ಆಮೇಲೆ ಸಮಸ್ತ ಪ್ರಾಣಿಗಳೂ ಜನಿಸಿದವು; ಆದಕಾರಣ ಈ ಜಗತ್ತಿನಲ್ಲಿ ಬ್ರಹ್ಮದೇವಾದಿ ಸಮಸ್ತರಿಗಿಂತಲು ಪೂರ್ವದಲ್ಲೇ ಸಿದ್ಧನಾಗಿದ್ದ ನಿನ್ನನ್ನು ಆಮೇಲೆ ಜನಿಸಿ ಲಯವನ್ನೈದುವ ಯಾವ ಪುರುಷನು ತಿಳಿದಾನು! ಯಾವಾಗ ನೀನು ಸಮಸ್ತ ಪ್ರಪಂಚವನ್ನೂ ನಿನ್ನಲ್ಲಿ ಲಯವನ್ನೈದಿಸಿ ಯೋಗನಿದ್ರೆಯಂಗೈವೆಯೊ ಆ ಸಮಯದಲ್ಲಿ ಆಕಾಶಾದಿ ಸ್ಥೂಲಭೂತಗಳೂ ಇಲ್ಲ—ಸೂಕ್ಷ್ಮಗಳಾದ ಮಹದಹಂಕಾರಾದಿಗಳೂ ಇಲ್ಲ—ಆಕಾಶಾದಿಗಳಿಂದಲೂ ಮಹದಹಂಕಾರಾದಿಗಳಿಂದಲೂ ಕಲ್ಪಿಸಲ್ಪಟ್ಟ ಶರೀರವೂ ಇಲ್ಲ; ಇವೆಲ್ಲಕ್ಕೂ ನಿಮಿತ್ತವಾಗಿರುವ ಕಾಲವೈಷಮ್ಯವೂ ಇಲ್ಲ; ಆಗ ಇಂದ್ರಿಯ ಪ್ರಾಣಾದಿಗಳೂ ಇಲ್ಲ—ಜ್ಞಾನಸಾಧಕವಾದ ಶಾಸ್ತ್ರವೂ ಇಲ್ಲ; ಆ ಪ್ರಳಯಕಾಲದಲ್ಲಿ ವಾಸನಾಮಾತ್ರದಿಂದ ನಿನ್ನಲ್ಲಿ ಮಲಗಿರುವ ಜೀವರಿಗೆ ಜ್ಞಾನಸಾಧನವಾದದ್ದೊಂದೂ ಇಲ್ಲ; ಆದ್ದರಿಂದ ಸಮಸ್ತ ಪ್ರಪಂಚದ ಉತ್ಪತ್ತಿಗಿಂತಲು ಪೂರ್ವದಲ್ಲೇ ಸಿದ್ಧನಾಗಿರುವ ನಿನ್ನನ್ನು ಆಮೇಲೆ ಜನಿಸಿದವನೊಬ್ಬನೂ ತಿಳಿಯಲಾರನು; ಆದಕಾರಣ ನಿನ್ನನ್ನೇ ಶರಣುಹೊಂದಿ ನಿನ್ನಲ್ಲಿ ಶ್ರವಣ ಕೀರ್ತನಾದಿ ರೂಪವಾದ ಭಕ್ತಿಯನ್ನು ಮಾಡುವದು ನಿನ್ನ ತತ್ವವನ್ನು ತಿಳಿಯುವದಕ್ಕೆ ಸುಲಭವಾದ ಉಪಾಯವೇ ಹೊರ್ತು ಮತ್ತೊಂದಿಲ್ಲ! ಭಕ್ತಿಗಿಂತಲೂ ಜ್ಞಾನವು ಸುಲಭವಾದ ಉಪಾಯವೆಂದು ಉಪದೇಶಂಗೈವ ಪುರುಷರು ಅತ್ಯಂತ ಭ್ರಾಂತರು! ಎಲೈ ಸರ್ವಾತ್ಮಕನೆ, ಯಾವ ವೈಶೇಷಿಕಾದಿಗಳು ಸೃಷ್ಟಿಗಿಂತಲು ಪೂರ್ವದಲ್ಲಿ ಜಗತ್ತಿಲ್ಲವೆಂಬ ಅರ್ಥವನ್ನು ಅಂಗೀಕರಿಸಿ ಅಂಥಾ ಅಸತ್ಯವಾದ ಜಗತ್ತಿಗೆ ಉತ್ಪತ್ತಿಯನ್ನು ಹೇಳುವರೋ—ಯಾವ ಯೋಗಶಾಸ್ತ್ರಪ್ರವರ್ತಕರು ಜೀವನಿಗೆ ಪೂರ್ವದಲ್ಲಿ ಬ್ರಹ್ಮತ್ವವಿಲ್ಲವೆಂಬ ಅರ್ಥವ

ನ್ನಂಗೀಕರಿಸಿ ಅಂಥಾ ಅಸತ್ಯವಾದ ಬ್ರಹ್ಮತ್ವಕ್ಕೆ ಉತ್ಪತ್ತಿಯುಂಟಾಗುವದೆಂದು ಹೇಳುವರೊ—ಯಾವ ನ್ಯಾಯ ಶಾಸ್ತ್ರಪ್ರವರ್ತಕರು ದುಃಖವು ಸತ್ಯವೆಂಬ ಅರ್ಥವನ್ನು ಅಂಗೀಕರಿಸಿ ಇಪ್ಪತ್ತೊಂದುಪ್ರಕಾರವಾಗಿ ಸತ್ಯವಾಗಿ ರುವ ಆ ದುಃಖದ ಲಯವನ್ನೇ ಮೋಕ್ಷವೆಂದು ಹೇಳುವರೋ—ಯಾವ ಸಾಂಖ್ಯಾದಿಗಳು ಆತ್ಮನಲ್ಲಿ ಭೇದವನ್ನಂ ಗೀಕರಿಸುವರೊ—ಯಾವ ಮೀಮಾಂಸಕರು ಕರ್ಮಫಲಾದ್ಯವಹಾರವನ್ನು ಸತ್ಯವಾಗಿ ಹೇಳುವರೊ ಅವರೆಲ್ಲರು ಈ ಪ್ರಪಂಚವು ಸೃಷ್ಟಿಗಿಂತಲು ಪೂರ್ವದಲ್ಲಿ ಸದ್ರೂಪವಾಗಿತ್ತೆಂದೂ ಪುರುಷನು ಬ್ರಹ್ಮಸ್ವರೂಪನಾಗಿ ಬ್ರಹ್ಮಸ್ವ ರೂಪವನ್ನೈದುವನೆಂದೂ ಹೇಳುವ ಅನೇಕ ಶ್ರುತಿಗಳಿಗೆ ವಿರುದ್ಧಗಳಾದ ಅರ್ಥಗಳನ್ನು ಭ್ರಾಂತಿಯಿಂದಲೆ ಹೇಳುವ ರೇ ಹೊರ್ತು ತತ್ವದೃಷ್ಟಿಯಿಂದ ಉದ್ದೇಶಂಗೈವವರಲ್ಲ; ಪುರುಷನು ತ್ರಿಗುಣಮಯನೆಂಬ ಕಾರಣದಿಂದ ಆತ್ಮನ ಲ್ಲಿ ಯಾವ ಭೇದಾದಿಗಳುಂಟೋ ಅವು ನಿನ್ನಲ್ಲಿ ಅಜ್ಞಾನದಿಂದ ವೃದ್ಧಿಹೊಂದಿಸಲ್ಪಡಲಾರವು; ಅಜ್ಞಾನಕ್ಕಿಂತಲೂ ಪರ ನಾಗಿ ಸಂಗರಹಿತನಾಗಿ ಜ್ಞಾನಘನನಾಗಿರುವ ನಿನ್ನಲ್ಲಿ ವಸ್ತುತ ಅಜ್ಞಾನವು ಇಲ್ಲ; ಪುರುಷನು ಗುಣಮಯನಲ್ಲವಾದ ಕಾರಣ ಆ ವೈಸೇಷಿಕಾದಿ ಶಾಸ್ತ್ರಪ್ರವರ್ತಕರಿಂದ ಹೇಳಲ್ಪಡುವ ಅರ್ಥಗಳೆಲ್ಲವು ಅಸಂಗತಗಳೇ ಸರಿ! ಅಸದ್ರೂ ಪವಾದ ವಸ್ತುವಿಗೆ ಉತ್ಪತ್ತಿಯಿಲ್ಲ—ಪುರುಷನು ತ್ರಿಗುಣಮಯನಲ್ಲ ಎಂಬ ಈ ಉಭಯಾರ್ಥವೇ ಸತ್ಯವಾದಲ್ಲಿ ಈ ಪ್ರಪಂಚಸಮೂಹವೂ ಪುರುಷನೂ ಪ್ರತ್ಯೇಕವಾಗಿಲ್ಲವೆಂದು ಹೇಳಲ್ಪಟ್ಟದ್ದಾಯಿತು; ಹಾಗಾದಾಗ್ಯೂ ಪ್ರಪಂಚ ಮನುಷ್ಯರು ಸದ್ರೂಪರೆಂಬ ಜ್ಞಾನಕ್ಕೆ ವಿಷಯರಾಗುವರು. ಎಲೈ ಪರಮಾತ್ಮನೆ ನಿನ್ನಲ್ಲಿ ಮನೋಮಾತ್ರದಿಂದ ಕಲ್ಪಿತವಾಗಿ ತೋರುತಲಿರುವ ಈ ತ್ರಿಗುಣಾತ್ಮಕವಾದ ಪ್ರಪಂಚಸಮೂಹವು ಪುರುಷನನ್ನು ವ್ಯಾಪಿಸಿಕೊಂಡು ತಾನು ಅಸತ್ಯವಾದಾಗ್ಯೂ ಅಧಿಷ್ಠಾನರೂಪನಾದ ನಿನ್ನ ಸತ್ವದಿಂದ ಸದ್ರೂಪದಂತೆ ತೋರುತಲಿದೆ; ಪುರುಷನು ಅಧಿ ಷ್ಠಾನರೂಪನಾದ ನಿನಗಿಂತಲು ಪ್ರತ್ಯೇಕನಾಗಿ ಸದ್ರೂಪದಿಂದ ತೋರುವದೂ ಮಾಯಾಕಲ್ಪಿತವೇ ಹೊರ್ತು ಮ ತ್ತೊಂದಲ್ಲವೆಂದು ಅನೇಕ ಶ್ರುತಿಗಳು ಹೇಳುತಲಿವೆ; ಆತ್ಮಜ್ಞರಾದ ಪುರುಷರಿಗೆ ಈ ಪ್ರಪಂಚವು ಸದ್ರೂಪದಿಂದಲೆ ತೋರುತಲಿದ್ದಾದರೂ ಈ ಪ್ರಪಂಚವು ಅಸತ್ಯವಾಗುವದು; ಆತ್ಮಜ್ಞರು ಕಾರಣವ್ಯತಿರಿಕ್ತವಾಗಿ ಕಾರ್ಯವಿಲ್ಲ ವಾದಕಾರಣ ಬ್ರಹ್ಮನಿಗೆ ಕಾರ್ಯವಾಗಿ ಭೋಕ್ತೃಭೋಗ್ಯಾತ್ಮಕವಾಗಿಯೂ ಇರುವ ಈ ಪ್ರಪಂಚವು ಆತ್ಮರೂ ಪವಾದ್ದರಿಂದ ಅದನ್ನೂ ಸತ್ಯವೆಂದು ಹೇಳುವರು; ಲೋಕದಲ್ಲಿ ಸುವರ್ಣಾರ್ಥಿಗಳಾದ ಪುರುಷರು ಸುವರ್ಣವಿಕಾರ ಗಳಾದ ಕುಂಡಲಾದಿಗಳನ್ನು ಸುವರ್ಣರೂಪಗಳಾದಕಾರಣ ತ್ಯಜಿಸುವದಿಲ್ಲ; ಆದ್ದರಿಂದ ಬ್ರಹ್ಮಕಾರ್ಯವಾದ ಪ್ರಪಂ ಚವು ಅದರಲ್ಲಿ ಪ್ರವೇಶಂಗೈದಿರುವ ಪುರುಷನು ಆತ್ಮಸ್ವರೂಪವೆಂತಲೆ ನಿಶ್ಚಯಿಸಿ ಆತ್ಮಜ್ಞರು ಸಮಸ್ತವನ್ನೂ ಆತ್ಮಸ್ವರೂಪವೆಂದು ತಿಳಿಯುವರೇ ಹೊರ್ತು ಮತ್ತೊಂದಲ್ಲ; ಪರಬ್ರಹ್ಮವಸ್ತುವು ಸತ್ಯಸ್ವರೂಪವಾಗಿಯೂ ಜ್ಞಾ ನಸ್ವರೂಪವಾಗಿಯೂ ಅಪರಿಚ್ಛಿನ್ನವಾಗಿಯೂ ಇರುವದು; ಬ್ರಹ್ಮವಸ್ತುವಿನಲ್ಲಿ ಯಾವ ಭೇದವೂ ಇಲ್ಲ; ಇಂಥಾ ಬ್ರಹ್ಮವಸ್ತುವಿನಲ್ಲಿ ಯಾವನು ಭೇದಬುದ್ಧಿಯನ್ನು ಮಾಡುವನೊ ಅವನಿಗೆ ಮೃತ್ಯುರೂಪವಾದ ಸಂಸಾರವು ತಪ್ಪುವ ದಿಲ್ಲ; ಇಂಥಾ ಬ್ರಹ್ಮವಿಷಯಕವಾದ ಜ್ಞಾನವೂ ಸುಲಭವೇ ಸರಿ; ಆದರೂ ಭಕ್ತಿಯಿಂದ ಪ್ರಯೋಜನವುಂಟು! ಎಲೈ ಪರಮಾತ್ಮನೆ, ನಿನ್ನನ್ಯಾರು ಸರ್ವಭೂತಾಂತರ್ಯಾಮಿಯೆಂದು ಉಪಾಸನಂಗೈಯುತ್ತಾರೆಯೋ ಅವರು ಸಂಸಾ ರವೆಂಬ ಮೃತ್ಯುವನ್ನು ಗಣನೆಮಾಡದೆ ಅದರ ಶಿರಸ್ಸಿನಲ್ಲಿ ಪಾದವನ್ನಿಟ್ಟು ಸಂಸಾರಪಾಶದಿಂದ ಮುಕ್ತರಾಗುತ್ತಾರೆ; ಯಾವ ಪುರುಷರು ನಿನ್ನಲ್ಲಿ ವಿಮುಖರಾಗಿ ಭಕ್ತರಲ್ಲದಿರುವರೋ ಅವರು ತಿಳಿದಂಥಾವರಾದಾಗ್ಯೂ ಅವರನ್ನು ಹಗ್ಗ ದಿಂದ ಪಶುಗಳನ್ನು ಬಂಧಿಸುವಂತೆ ಶ್ರುತಿರೂಪವಾದ ವಾಕ್ಯದಿಂದ ಬಂಧಿಸುವೆ; ನಿನ್ನಲ್ಲಿ ಮಾಡಲ್ಪಟ್ಟ ಪ್ರೇಮರೂಪ ವಾದ ಭಕ್ತಿಯುಳ್ಳಂಥಾವರು ತಮ್ಮನ್ನೂ ಇತರರನ್ನೂ ಸಹಾ ನಿಶ್ಚಯವಾಗಿ ಪರಿಶುದ್ಧರನ್ನು ಮಾಡುತ್ತಾರೆ! ಶ್ರುತಿ ಗಳು ಇಂಥಾ ಬ್ರಹ್ಮಸ್ವರೂಪವನ್ನು ಹೇಳುತಲಿವೆ; ಅಂಥಾ ಬ್ರಹ್ಮವಿಷಯಕವಾದ ಜ್ಞಾನವು ಸುಲಭವೆಂದು ತೋ ರಿದಾಗ್ಯೂ ಬ್ರಹ್ಮವಸ್ತು ಅಪರೋಕ್ಷವಾದಕಾರಣ ವಿಚಾರದಿಂದ ಪರೋಕ್ಷಜ್ಞಾನವೆ ಹುಟ್ಟುತ್ತೆ; ಆದಾಗ್ಯೂ ಅಸಂ ಭಾವನೆಯಿಂದಲೂ ವಿಪರೀತಭಾವನೆಯಿಂದಲೂ ತಿರಸ್ಕೃತವಾದಕಾರಣ ಮಲಿನಚಿತ್ತರಾದ ಪುರುಷರಲ್ಲಿ ಅಜ್ಞಾನವು ಪರೋಕ್ಷದಂತೆ ಆಗುವದು; ಆದಕಾರಣ ಅಂಥಾ ಸಂದಿಗ್ಧಜ್ಞಾನವು ಸಂಸಾರಭ್ರಮನಿವರ್ತಕವಾಗಲಾರದು; ಭಗವ

ಶ್ರೀವೆಯಿಂದಲಾದರೂ ಚನ್ನಾಗಿ ನಿರ್ಮಲವಾದ ಚಿತ್ತವುಳ್ಳಂಥಾವರಾಗಿ ಆ ಭಗವದನುಗ್ರಹದಿಂದ ಪಡೆಯಲ್ಪಟ್ಟ ಅಪರೋಕ್ಷಜ್ಞಾನವುಳ್ಳ ಪುರುಷನಿಗೆ ಅಯತ್ನದಿಂದಲೇ ಮೋಕ್ಷವು ಹಸ್ತಗತವಾಗಿರುವದು! ಎಲೈ ಭಗವಂತನೆ, ಸ್ವತಃ ಪ್ರಕಾಶರೂಪನಾದ ನೀನು ಶ್ರೋತ್ರಾದಿ ಇಂದ್ರಿಯರಹಿತನಾದಾಗ್ಯೂ ಸರ್ವ ಜೀವರಿಗೂ ಇಂದ್ರಿಯಶಕ್ತಿಗಳನ್ನುಂಟುಮಾಡುವವನು; ಸ್ವತಃ ಸಿದ್ಧವಾದ ಜ್ಞಾನಶಕ್ತಿಯುಳ್ಳ ನಿನಗೆ ಇಂದ್ರಿಯಾಪೇಕ್ಷೆಯು ಉಂಟಾಗಲಾರದಾದ ಕಾರಣ ಅವಿದ್ಯಾವೃತರಾದ ಇಂದ್ರಾದಿಗಳೂ ಅವರಿಗೆ ಪೂಜ್ಯರಾದ ಬ್ರಹ್ಮಾದಿಗಳೂ ಮನುಷ್ಯರಿಂದ ಕೊಡಲ್ಪಟ್ಟ ಹವ್ಯಕವ್ಯರೂಪವಾದ ವಸ್ತುವನ್ನು ಭಕ್ಷಿಸುವರಾದಾಗ್ಯೂ ಭಯಪಡುತ ನಿನ್ನನ್ನು ಪೂಜಿಸುತಲಿಧಾರೆ; ಅಖಂಡಮಂಡಲಾಧಿಪತಿಗಳಾಗಿ ಸ್ವಲ್ಪವಾದ ಐಶ್ವರ್ಯವುಳ್ಳ ಅರಸರು ತಮ್ಮ ತಮ್ಮ ದೇಶಗಳಲ್ಲಿ ತಮ್ಮ ಸ್ವಾಧೀನರಾಗಿರುವ ಪ್ರಜೆಗಳಿಂದ ಕೊಡಲ್ಪಟ್ಟ ಕಾಣಿಕೆಗಳಿಂದ ತಾವೇ ನಿಗ್ರಹಿಸುವವರಾದಾಗ್ಯೂ ಅಖಂಡಮಂಡಲಾಧಿಪತಿಯಾಗಿ ಸಾರ್ವಭೌಮನಾದ ಚಕ್ರವರ್ತಿಗೆ ಭಯಪಡುತ ಕಾಣಿಕೆಗಳನ್ನು ಒಪ್ಪಿಸುವ ರೀತಿಯಲ್ಲಿ ಬ್ರಹ್ಮಾದಿಗಳು ತಾವು ಸರ್ವರಿಂದಲೂ ಪೂಜ್ಯರಾದಾಗ್ಯೂ ಭಯದಿಂದ ನಿನ್ನನ್ನು ಪಚರಿಸುವರು; ಬ್ರಹ್ಮಾದಿಗಳಲ್ಲಿ ಯಾರ್ಯಾರು ಯಾವ ಯಾವ ಅಧಿಕಾರದಲ್ಲಿ ನಿನ್ನಿಂದ ನಿಯಮಿಸಲ್ಪಟ್ಟಧಾರೆಯೋ ಅವರು ಆಯಾ ಅಧಿಕಾರಗಳನ್ನು ನಿರ್ವಹಿಸಿಕೊಂಡು ನಿನ್ನ ಆಜ್ಞಾಪಾಲನವನ್ನು ಮಾಡುತ್ತಾರೆ ಎಂದು ತಿಳಿಯುವದೇ ನಿನ್ನ ಪೂಜೆಯು! ಎಲೈ ನಿತ್ಯಮುಕ್ತನಾದ ಭಗವಂತನೆ, ನೀನು ಮಾಯೆಗಿಂತಲೂ ವ್ಯತಿರಿಕ್ತನಾಗಿದ್ದಾಗ್ಯೂ ಯಾವಾಗ ನಿನಗೆ ಆ ಮಾಯೆಯೊಡನೆ ಕ್ಷಣಲೇಶದಿಂದ ಕ್ರೀಡೆಯುಂಟಾಗುವದೋ ಆ ಸಮಯದಲ್ಲಿ ನಿನ್ನ ವೀಕ್ಷಣದಿಂದಲೇ ಆವಿರ್ಭವಿಸಿರುವ ನಿಮಿತ್ತಗಳಾದ ಕರ್ಮಗಳೊಡನೆ ಕೂಡಿರುವ ಚರಾಚರಾದಿ ರೂಪಗಳಾದ ದೇಹಗಳುಳ್ಳ ಜೀವರು ಜನಿಸುವರು; ಉತ್ತಮನಾಗಿ ಪರಮ ದಯಾಶೀಲನಾಗಿ ಆಕಾಶಕ್ಕೆ ಸಮಾನನಾಗಿ ಮನೋವಾಕ್ಕುಗಳಿಗೆ ಅಗೋಚರನಾದ್ದರಿಂದ ಶೂನ್ಯದಂತೆ ತೋರುವವನಾಗಿರುವ ನಿನಗೆ ಒಬ್ಬನು ಸ್ವಕೀಯನೆಂದೂ ಒಬ್ಬನು ಪರಕೀಯನೆಂದೂ ವೈಷಮ್ಯವಿಲ್ಲ; ಆದಕಾರಣ ನಿನ್ನ ಇಚ್ಛೆಯಿಂದ ಜೀವರ ಸೃಷ್ಟಿಯುಂಟಾಗುವದಿಲ್ಲ; ವಿಚಿತ್ರಗಳಾದ ಕರ್ಮಗಳ ದೆಸೆಯಿಂದ ವಿಚಿತ್ರಗಳಾದ ಸುಖದುಃಖಗಳುಳ್ಳ ಜೀವರು ಜನಿಸುವರು; ಈ ಪ್ರಕಾರವಾಗಿ ಹೇಳಿದ್ದರಿಂದ ಪರಮಾತ್ಮನ ದೆಶೆಯಿಂದ ಅವಿದ್ಯಾಕಲ್ಪಿತಗಳಾದ ಕಾರ್ಯೋಪಾಧಿಗಳುಳ್ಳವರಾಗಿ ಆ ಪರಮಾತ್ಮನ ಅಂಶಭೂತರಾಗಿ ಜೀವರು ಜನಿಸಿ ಸಂಸಾರವನ್ನು ಮಾಡುತಲಿಧಾರೆ ಎಂದು ಹೇಳಲ್ಪಟ್ಟಿತು; ಅದರಲ್ಲಿ ಉಪಾಧಿಯಾದ ಅವಿದ್ಯೆಯು ಒಂದೇ ಆದರೆ ಜೀವನೊಬ್ಬನೇ ಆಗುವನು; ಒಬ್ಬ ಜೀವನಿಗೆ ಮುಕ್ತಿಯುಂಟಾದಲ್ಲಿ ಸಮಸ್ತ ಜೀವರಿಗೂ ಮುಕ್ತಿಯುಂಟಾಗಬೇಕು; ಅವಿದ್ಯೆಗಳು ಅನೇಕಗಳೆಂಬ ಪಕ್ಷದಲ್ಲಿ ಒಂದು ಶರೀರದಲ್ಲಿರುವ ಜೀವನಿಗೆ ಅವಿದ್ಯೆಯು ನಷ್ಟವಾದಾಗ್ಯೂ ಮತ್ತೊಂದು ದೇಹದಲ್ಲಿರುವ ಆದೇ ಜೀವನಿಗೆ ಆ ದೇಹ ಸಂಬಂಧಿಯಾದ ಅವಿದ್ಯೆಯು ನಷ್ಟವಾಗುವದಿಲ್ಲವಾದಕಾರಣ ಮುಕ್ತಿಯೇ ಇಲ್ಲದೆ ಹೋಗುವದು; ಇಂಥಾ ತರ್ಕ ಬಲದಿಂದ ವಸ್ತುತಃ ಜೀವರು ಅನೇಕರು ಒಡಂಬಟ್ಟಲ್ಲಿ ಆ ಜೀವರಿಗೆ ಅಣುಪರಿಮಾಣವನ್ನಂಗೀಕರಿಸಿದರೆ ಆಗ ಚೈತನ್ಯಕ್ಕೆ ಸಮಸ್ತ ಶರೀರವ್ಯಾಪ್ತಿಯಿಲ್ಲದೆ ಹೋಗುವದು; ದೇಹವು ಎಷ್ಟು ಪ್ರಮಾಣವುಳ್ಳದ್ದೋ ಚೈತನ್ಯವು ಅಷ್ಟುಮಾತ್ರ ಪ್ರಮಾಣವುಳ್ಳದ್ದಾಗಿರುವದೆಂಬ ಪಕ್ಷದಲ್ಲಿ ಅಂಥಾ ಮಧ್ಯಮಪ್ರಮಾಣವುಳ್ಳ ವಸ್ತುಗಳು ಘಟಾದಿಗಳಂತೆ ಅವಯವಯುಕ್ತಗಳಾಗುವದರಿಂದ ಜೀವರಿಗೆ ಅನಿತ್ಯತ್ವವು ಉಂಟಾಗಬೇಕು; ಆದ್ದರಿಂದ ಜೀವರು ಸರ್ವಶರೀರ ವ್ಯಾಪಿಗಳಾಗಿ ನಿತ್ಯರಾಗಿರುವರೆಂದು ಕೆಲವು ಶಾಸ್ತ್ರಪ್ರವರ್ತಕರು ತಿಳಿಯುತಿದ್ಧಾರೆ; ಆ ಪಕ್ಷದಲ್ಲಿ ಪೂರ್ವೋಕ್ತಗಳಾದ ದೋಷಗಳು ಸಂಭವಿಸುವದಿಲ್ಲ; ಅವಿದ್ಯೆಗಳು ಅನೇಕವಿಧಗಳಾದ್ದರಿಂದ ಅವಿದ್ಯಾನಾಶವಿಲ್ಲದ ಜೀವನಿಗೆ ಬಂಧವು ಸಹಾ ಉಂಟಾಗಬಹುದು; ಈಶ್ವರನಿಗಾದರೆ ಯಾವ ಅಂಶದಿಂದಲು ಸಂಸಾರಶಂಕೆ ಇಲ್ಲ; ಆತ್ಮೈಕ್ಯವು ಸಮಸ್ತ ಶ್ರುತಿಗಳಲ್ಲಿಯೂ ಪ್ರಸಿದ್ಧವಾಗಿದೆಯಾದ್ದರಿಂದ ಆ ಪಕ್ಷವನ್ನು ಅಂತರ್ಯಾಮಿ ಬ್ರಾಹ್ಮಣವೆಂಬ ಉಪನಿಷತ್ತು ಸಮ್ಮತಿಸುವದಿಲ್ಲ! ಎಲೈ ಭಗವಂತನೆ, ವಸ್ತುತಃ ಜೀವರು ಅನೇಕರಾಗಿ ನಿತ್ಯರಾಗಿ ಸರ್ವವ್ಯಾಪಿಗಳಾಗಿರುವರು ಎಂದು ಹೇಳದಲ್ಲಿ ಸಮಸ್ತ ಜೀವರೂ ನಿನಗೆ ಸಮಾನರಾದ್ದರಿಂದ ಅವರಿಗೆ ನಿಯಮ್ಯತ್ವವು ಘಟಿಸಲಾರದಾದಕಾರಣ ನಿನ್ನಿಂದ ಅವರಿಗೆ ನಿಯಮನವು ಎಂತು ಸಂಭವಿಸುವದು! ಮತ್ತೊಂದುಪ್ರಕಾರದಿಂದಲಾದರು ನಿನ್ನಿಂದ ಅವರಿಗೆ ನಿಯಮನವು ಸಂಭ

ವಿಸಬಹುದು ; ಯಾವ ಈಶ್ವರಮಯವಾದ ಪ್ರಾಣಿಸಮೂಹವು ಉಪಾಧಿಯಿಂದ ವಿಕೃತಿರೂಪವಾಗಿ ಜೀವಸಮೂಹ ವೆನಿಸಿಕೊಂಡು ಜನಿಸುವದೋ ಆ ಈಶ್ವರನು ತನ್ನ ವಿಕೃತಿಗಳಾಗಿರುವ ಜೀವರಿಗೆ ನಿಯಾಮಿಕನಾಗಬಹುದು ; ಯಾವ ಪರಮಾತ್ಮರೂಪವಾದ ವಸ್ತುವು ಮೂಲಕಾರಣವಾದ್ದರಿಂದ ಕಾರ್ಯಸಮೂಹವನ್ನು ಬಿಡದೆ ಅನುಸೂತವಾಗಿರುವದೋ ಅಂಥಾ ನಿನ್ನ ಸ್ವರೂಪವನ್ನು ಯಾರು ತಿಳಿಯದವರೊ ಅವರು ಬ್ರಹ್ಮಸ್ವರೂಪವನ್ನರಿಯರು ; ಅವರಿಂದ ತಿಳಿಯಲ್ಪಟ್ಟ ಅರ್ಥವು ದೋಷಯುಕ್ತವಾಗುವದಾದಕಾರಣ ಅವರು ಅಜ್ಞರೇ ಸರಿ ; ಮತ್ತು ಜೀವರು ಪರಮಾತ್ಮನ ದೆಶೆಯಿಂದ ಉತ್ಪನ್ನರಾಗುತ್ತಾರೆಂದು ನಿಯಂತೃ ನಿಯಮ್ಯಭಾವವು ಹೇಳಲ್ಪಡುವ ಪಕ್ಷದಲ್ಲಿ ಜೀವರು ಅನಿತ್ಯರಾದಕಾರಣ ಆ ಜೀವರಿಗೆ ಪ್ರತಿದಿವಸದಲ್ಲಿಯು ಮಾಡಲ್ಪಟ್ಟ ಸುಕೃತ ದುಷ್ಕೃತಗಳಿಗೆ ನಾಶವು ಮಾಡಲ್ಪಡದ ಪುಣ್ಯಾಪಾಪಗಳ ಪ್ರಾಪ್ತಿಯುಂಟಾಗಬೇಕಾದೀತು ; ಜೀವರಿಗೆ ಸ್ವರೂಪನಾಶವು ಮೋಕ್ಷವಾಗಬೇಕಾದೀತು ; ಈ ಅರ್ಥವನ್ನು ಹೇಳಕೂಡದು ; ಸ್ವಪ್ರಕಾಶಾನಂದಸ್ವರೂಪನಾದ ಆತ್ಮನಿಗೆ ವಿವ್ಯಾಕೃತವಾದ ಬಂಧದ ನಿವೃತ್ತಿಯೇ ಮೋಕ್ಷವೆಂದು ಸಿದ್ಧಾಂತಿತವಾದಕಾರಣ ಜೀವರಿಗೆ ಉತ್ಪತ್ತಿಯು ಎಂತು ಸಂಗತವಾಗುವದೆಂದು ಶಂಕೆ ಮಾಡಬಾರದು ; ಉಪಾಧಿಗಳ ಉತ್ಪತ್ತಿಯಿಂದಲೆ ಜೀವರಿಗೆ ಉತ್ಪತ್ತಿಯು ತೋರುವದು ; ಸ್ವತಃ ಇಲ್ಲವೆಂಬ ಅರ್ಥವನ್ನು ವೇದಾಭಿಮಾನಿ ದೇವತೆಗಳು ನುಡಿಯುವರು ; ಅನಾದಿಗಳಾದ ಪ್ರಕೃತಿ ಪುರುಷರಿಗೆ ಉತ್ಪತ್ತಿಯು ಘಟಿಸುವದಿಲ್ಲ ; ವಾಯು ಜಲ ಮೇಲಣದಿಂದ ಜಲದಲ್ಲಿ ಗುಳ್ಳೆಗಳು ಜನಿಸುವಂತೆ ಪ್ರಕೃತಿ ಪುರುಷಸಂಬಂಧದಿಂದ ಪ್ರಾಣಾದ್ಯುಪಾಧಿಗಳುಳ್ಳ ಜೀವರು ಹುಟ್ಟುವರು ; ಉಪಾಧಿಲಯಾನಂತರದಲ್ಲಿ ಪರಮಾತ್ಮನಾದ ನಿನ್ನಲ್ಲಿ ಸರ್ವಜೀವರು ಜೇನುತುಪ್ಪದಲ್ಲಿ ಸಕಲ ಪುಷ್ಪರಸಗಳು ಲೀನಗಳಾಗುವಂತೆಯೂ ಸಮುದ್ರದಲ್ಲಿ ನದಿಗಳು ಲೀನವಾಗುವಂತೆಯೂ ಅನೇಕ ವಿಧಗಳಾಗಿ ನಾಮರೂಪಗಳೊಡನೆ ಲಯವನ್ನೈದುವರು ; ಸುಷುಪ್ತಿ ಪ್ರಳಯಗಳಲ್ಲಿ ಜೇನುತುಪ್ಪದಲ್ಲಿ ಸರ್ವ ಕುಸುಮರಸಗಳೂ ಪರಸ್ಪರ ಭೇದಗಳು ತೋರದೆ ಸಾಮಾನ್ಯಾಕಾರವಾಗಿ ಲೀನಗಳಾಗಿರುವಹಾಗೆ ಜೀವರು ಪರಮಾತ್ಮನಲ್ಲಿ ವಿಶೇಷಗಳು ತೋರದೆ ಕಾರಣವಾದ ಅವಿದ್ಯೆಯೊಡನೆ ಲೀನರಾಗಿರುವರು ; ಮುಕ್ತಿಯಲ್ಲಿ ಯಾದರೂ ಮೂಲವಿದ್ಯೆ ನಾಶವಾಗುವದರಿಂದ ಸಮುದ್ರದಲ್ಲಿ ನದಿಗಳಂತೆ ಉಪಾಧಿರಹಿತನಾದ ಪರಮಾತ್ಮನಾದ ನಿನ್ನಲ್ಲಿ ಲಯವನ್ನೈದುವರು ! ಈ ಪ್ರಕಾರದಲ್ಲಿ ಪರಮೇಶ್ವರನದೆಶೆಯಿಂದ ಜೀವರು ಉತ್ಪನ್ನರಾಗುತ್ತಾರೆ ; ಆ ಜೀವರು ಕರ್ಮಗಳನ್ನು ಮಾಡುತ್ತಾರೆ ; ಪುನಹ ಆ ಪರಮಾತ್ಮನಲ್ಲಿ ಲೀನರಾಗುತ್ತಾರೆ ; ಈ ಪ್ರಕಾರವಾದ ಸಂಸಾರಚಕ್ರ ಭ್ರಮಣವು ಹೇಳಲ್ಪಟ್ಟಿತು ; ಈಗ ಆ ಸಂಸಾರಭ್ರಮಣ ಕ್ಲೇಶನಿವರ್ತಿಗೋಸ್ಕರ ಮಹಾ ಪುರುಷರು ಭಗವಂತನಾದ ನಿನ್ನನ್ನನುವರ್ತಿಸುತ್ತಾರೆ ! ಎಲೈ ಪರಮಾತ್ಮನೆ, ಬುದ್ಧಿಶಾಲಿಗಳಾದವರು ನಿನ್ನ ಮಾಯೆಯಿಂದ ಕಲ್ಪಿತವಾದ ಈ ಸಂಸಾರಚಕ್ರಭ್ರಮಣವನ್ನು ಪ್ರಾಣಿಗಳಿಗೆ ತಪ್ಪದಿರುವದನ್ನು ತಿಳಿದು ಸಂಸಾರನಿವರ್ತಕನಾದ ನಿನ್ನಲ್ಲಿ ಅವಿಚ್ಛಿನ್ನವಾದ ಅನುವೃತ್ತಿಯನ್ನು ಮಾಡುತ್ತಾರೆ ; ಆರೀತಿಯಲ್ಲಿ ನಿನ್ನನ್ನೇ ಅನುವರ್ತಿಸಿಕೊಂಡಿರುವ ಭಕ್ತರಿಗೆ ಸಂಸಾರ ಭಯವುಂಟಾಗದು ; ನಿನ್ನ ಭ್ರೂವಿಕ್ಷೇಪರೂಪವಾದ ಶೀತೋಷ್ಣ ವರ್ಷಾಕಾಲಗಳೆಂಬ ಮೂರು ನೇಮಿಗಳುಳ್ಳ ಸಂವತ್ಸರಾತ್ಮಕವಾದ ಕಾಲಚಕ್ರವು ನಿನ್ನನ್ನನುವರ್ತಿಸದೆ ಪ್ರಮಥರಾದ ಅಜ್ಞರಿಗೆ ಜನನಮರಣರೂಪವಾದ ಸಂಸಾರಭಯವನ್ನುಂಟುಮಾಡುತಲಿದೆ ; ಈ ಪ್ರಕಾರ ಭಗವಂತನಲ್ಲಿ ಚಿತ್ತವನ್ನಿರಿಸಿ ಅನುಸಂಧಾನಂಗೈವವರಿಗೆ ಸಂಸಾರಭಯವಿಲ್ಲವೆಂದು ಹೇಳಲ್ಪಟ್ಟಿತು ; ಅಂಥಾ ಆತ್ಮಾನುಸಂಧಾನವು ಮನೋನಿಗ್ರಹದಿಂದಾಗಬೇಕು ; ಅಂಥಾ ಮನೋನಿಗ್ರಹವು ಗುರೂಪಸರ್ಪಣದಿಂದುಂಟಾಗಬೇಕು ! ಎಲೈ ನಿತ್ಯಸ್ವರೂಪನಾದ ಪರಮೇಶ್ವರನೇ, ಜಯಿಸಲ್ಪಟ್ಟ ಇಂದ್ರಿಯಗಳೂ ಪ್ರಾಣಾದಿ ವಾಯುಗಳೂ ಉಳ್ಳ ಯೋಗಿಗಳಿಂದಲೂ ಸ್ಥಿರೀಕರಿಸಲ್ಪಡದಿರುವ ಅತಿ ಚಂಚಲವಾದ ಮನಸ್ಸೆಂಬ ಕುದುರೆಯನ್ನು ಯಾವ ಪುರುಷರು ಗುರುಚರಣಾನುಗ್ರಹದಿಂದ ಹೊರ್ತು ನಿಗ್ರಹಿಸಲೋಸುಗ ಯತ್ನಂಗೈಯುತ್ತಾರೆಯೋ ಆ ಪುರುಷರು ಉಪಾಯಗಳನ್ನರಿಯದೆ ಭೇದಪಡುವವರಾಗಿ ವ್ಯಸನಶತಗಳಿಂದ ಪೀಡಿತರಾಗಿ ಸಂಸಾರಸಮುದ್ರದಲ್ಲಿ (ಹಡಗಿನ ವ್ಯಾಪಾರವುಳ್ಳ ವರ್ತಕರು ನಾವೆಗಳನ್ನು ನಡಿಸುವ ಅಂಬಿಗರನ್ನು ಬಿಟ್ಟು

ಸಮುದ್ರಮಧ್ಯದಲ್ಲಿ ತಗಲಿಕೊಂಡು ತಡಿಯನ್ನೈದುವ ಉಪಾಯವನ್ನು ಕಾಣದೆ ಶ್ರಮೆಪಡುವರೋ ಹಾಗೆ ಶ್ರಮೆಪಡುವರು ; ಆದಕಾರಣ ಗುರುಭಕ್ತಿಯಿಂದ ಗುರೂಪದಿಷ್ಟವಾದ ಅರ್ಥವನ್ನು ತಿಳಿದು ಕೃತಾರ್ಥನಾಗಬೇಕು ; ಪ್ರಾಜ್ಞರಾದವರು ಕರ್ಮಜನನಗಳಾದ ಪುಣ್ಯಲೋಕಗಳು ಅನಿತ್ಯಗಳೆಂದು ಪರೀಕ್ಷಿಸಿ ಇಹಲೋಕಸುಖಗಳು ಅನಿತ್ಯಗಳೆಂದು ತಿಳಿದು ಈ ತುಚ್ಛಸುಖಗಳಲ್ಲಿ ಅಪೇಕ್ಷೆಯನ್ನು ಬಿಟ್ಟು ವೈರಾಗ್ಯಸಂಪನ್ನರಾಗಿ ಪರಮಾತ್ಮಲಾಭವನ್ನೇ ಸಂಪಾದಿಸಬೇಕು! ಎಲೈ ಪರಮೇಶ್ವರನೆ, ಸಮಸ್ತ ಸುಖಸಮೂಹರೂಪನಾಗಿ ಪರಮಾತ್ಮನಾದ ನೀನು ಸಿದ್ಧವಾಗಿರಲು ನಿನ್ನನ್ನು ಭಜಿಸುವ ಮಹಾಪುರುಷನಿಗೆ ಸ್ವಜನರು ಪುತ್ರರು ಶರೀರವು ಪತ್ನಿಯರು ಧನವು ಗೃಹವು ಪ್ರಾಣಗಳು ಎಂಬ ವಿಷಯಗಳಿಂದ ಉಂಟಾಗುವ ತುಚ್ಛಸುಖಗಳಿಂದ ಏನು ಫಲವು ! ಈ ಪರಮಾರ್ಥವನ್ನು ತಿಳಿಯದೆ ನಶ್ವರವಾಗಿ ಅಸಾರವಾದ ಸಂಸಾರದಲ್ಲಿ ಮಗ್ನರಾಗಿ ಸ್ತ್ರೀಯರಿಂದ ಕೂಡಿ ಮಾಯಾಸುಖಾನುಭವಾರ್ಥವಾಗಿ ಚರಿಸುತಲಿರುವ ಪ್ರಾಣಿಗಳನ್ನು ಯಾವ ಅರ್ಥವು ಸುಖಪಡಿಸೀತು ! ಈ ರೀತಿಯಲ್ಲಿ ಗುರೂಪದೇಶದಿಂದ ತತ್ವವನ್ನು ತಿಳಿದು ಸಾಂಸಾರವಿಚಾರದಿಂದ ಪ್ರಾಪಂಚಿತಸುಖದಲ್ಲಿ ಜಿಗುಪ್ಸೆಯನ್ನೈದಿ ಆ ತತ್ವಸ್ವರೂಪವನ್ನೇ ಮಹತ್ಸಂಗದಿಂದಲೂ ಊಹಾಪೋಹಂಗಳಿಂದಲು ಚನ್ನಾಗಿ ನಿಶ್ಚೈಸುವದಕ್ಕೋಸ್ಕರ ಮಹಾ ತೀರ್ಥಸ್ನಾನಗಳನ್ನು ಕುರಿತು ಮಹರ್ಷಿಗಳು ಸಂಚರಿಸುತಲಿಧಾರೆ! ಪೂರ್ವದಲ್ಲಿ ನಿರೂಪಿತರಾದ ಮಹರ್ಷಿಗಳು ಅಹಂಕಾರರಹಿತರಾಗಿ ಯಾವಕಾರಣದಿಂದ, ಎಲೈ ಭಗವಂತನೆ, ನಿನ್ನ ಪಾದಪದ್ಮಗಳಲ್ಲಿ ನಿಲ್ಲಿಸಲ್ಪಟ್ಟ ಚಿತ್ತವುಳ್ಳವರೋ ಆ ಕಾರಣದಿಂದ ತಾವೇ ಸಕಲ ಪಾಪಪರಿಹಾರಕವಾದ ಪಾದೋದಕವುಳ್ಳವರಾದಾಗ್ಯೂ ಭೂಮಿಯಲ್ಲಿ ಬಹು ಪುಣ್ಯಾಕರಗಳಾದ ತೀರ್ಥಗಳುಳ್ಳ ಮಹಾ ಕ್ಷೇತ್ರಗಳನ್ನು ಸೇವಿಸುತ್ತಾರೆ ; ಯಾರು ನಿತ್ಯಸುಖಸ್ವರೂಪನಾಗಿ ಪರಮಾತ್ಮನಾದ ನಿನ್ನಲ್ಲಿ ಒಂದಾವರ್ತಿಯಾದಾಗ್ಯೂ ಚಿತ್ತವನ್ನು ನಿಲ್ಲಿಸುವರೋ ಆ ಪುರುಷರು ಜನರುಗಳ ವಿವೇಕ ಧೈರ್ಯ ಕ್ಷಮಾ ಶಾಂತಿ ಮುಂತಾದವನ್ನ ಪಹರಿಸುವ ಗೃಹಾದಿಗಳಲ್ಲಿ ವಾಸವನ್ನು ಮಾಡುವದಿಲ್ಲ ; ತತ್ವನಿಶ್ಚಯಾರ್ಥವಾಗಿ ಮುನಿಗಳು ಉತ್ತಮಕ್ಷೇತ್ರಾದಿಗಳಲ್ಲಿ ಸಂಚರಿಸುತ್ತಾರೆ ; ಈ ಜಗತ್ತು ಸದ್ರೂಪನಾದ ಪರಮಾತ್ಮನ ದೆಶೆಯಿಂದ ಜನಿಸಿದ್ದಾದಕಾರಣ ಸದ್ರೂಪವಾದದ್ದು ; ಅವಿದ್ಯಾವಿಶಿಷ್ಟವಾದ ಸದ್ವಸ್ತುವಿನಲ್ಲಿ ಹುಟ್ಟಿದ್ದಾದಕಾರಣ ಈ ಜಗತ್ತು ರಜ್ಜುಸರ್ಪದಂತೆ ಅವಸ್ತುವೇ ಹೊರ್ತು ವಸ್ತುವಲ್ಲ; ರಜ್ಜುಸರ್ಪವು ಅರ್ಥಕ್ರಿಯಾಕಾರಿಯಲ್ಲದ ಕಾರಣ ವಸ್ತುವಲ್ಲ ; ವ್ಯವಹಾರಾರ್ಥವಾಗಿ ಅರ್ಥಕ್ರಿಯಾಕಾರಿತ್ವ ರೂಪವಾದ ಭ್ರಮೆಯೇ ಹೊರ್ತು ಯಥಾರ್ಥವಲ್ಲ; ಕಪಟ ಸುವರ್ಣಾದಿಗಳಿಂದಲೂ ಕೆಲವು ಕಡೆಯಲ್ಲಿ ವ್ಯವಹಾರವುಂಟು ; ಆದರೆ ಅದು ಯಥಾರ್ಥವಾಗಲಾರದು ; ಆದಕಾರಣ ಈ ಪ್ರಪಂಚಕ್ಕೆ ಸತ್ಯತ್ವಭ್ರಮೆಯು ಅಂಧಪರಂಪರಪ್ರಾಪ್ತವಾದದ್ದು ! ಎಲೈ ಈಶ್ವರನೆ, ನಿನ್ನ ವಾಗ್ರೂಪವಾದ ವೇದವೂ ಕರ್ಮಶ್ರದ್ಧಾಭಾರಾಕ್ರಾಂತ ಮಂದಮತಿಗಳಾದವರನ್ನು ಭ್ರಮೆಪಡಿಸುತಲಿದೆ ; ಆದಕಾರಣ ನಿತ್ಯಸ್ವರೂಪನಾದ ನೀನೇ ನಿತ್ಯವಸ್ತುವಾದವನು ; ಈ ಪ್ರಪಂಚವು ಭ್ರಾಂತಿಕಲ್ಪಿತವೇ ಹೊರ್ತು ಸತ್ಯವಲ್ಲ ! ಎಲೈ ಪರಮಾತ್ಮನೆ, ಈ ಜಗತ್ತು ಸೃಷ್ಟಿಗಿಂತ ಪೂರ್ವದಲ್ಲಿಯೂ ಇಲ್ಲ ; ಪ್ರಳಯಾನಂತರದಲ್ಲಿಯೂ ಇಲ್ಲ ; ಆದಕಾರಣ ಸ್ಥಿತಿಕಾಲದಲ್ಲಿ ಸೃಷ್ಟಿಲಯಗಳಿಗೆ ಮಧ್ಯದಲ್ಲಿ ಕೇವಲನಾದ ನಿನ್ನಲ್ಲಿ ತೋರುವಂಥಾ ಈ ಜಗತ್ತು ಮಿಥ್ಯಾರೂಪವೆಂದು ನಿಶ್ಚಯಿಸಲ್ಪಟ್ಟಿತು ; ಅದರಿಂದ ಸುವರ್ಣ ಮೃತ್ತು ಲೋಹ ಕಾಷ್ಠಾಯಸ ಮೊದಲಾದ ವಸ್ತುಗಳ ಭೇದಗಳಾದ ಕುಂಡಲಾದಿಗಳ ಮಾರ್ಗಗಳಿಂದ ಹೊರಿಸಲ್ಪಡುತ್ತೆ ; ಕುಂಡಲಾದಿಗಳೆಲ್ಲವು ಸುವರ್ಣವೇ ಹೊರ್ತು ಬೇರೆ ಇಲ್ಲ ; ಘಟಕುಡ್ಯಾದಿಗಳೆಲ್ಲವೂ ಮೃತ್ತೇ ಹೊರ್ತು ಬೇರಲ್ಲ ; ಕಲ್ಪಿತಗಳಾದ ನಾಮರೂಪಗಳು ತೋರುವವೇ ಹೊರ್ತು ಬೇರಲ್ಲ ; ಹಾಗೆ ನಿನ್ನಲ್ಲಿ ತೋರುವ ಪ್ರಪಂಚವು ಮಿಥ್ಯಾರೂಪಗಳಾದ ನಾಮರೂಪಗಳಿಂದ ತೋರುವವಾದಕಾರಣ ಮಿಥ್ಯವೇ ಸರಿ ; ಮನೋವಿಕಾರರೂಪವಾದ ಈ ಪ್ರಪಂಚವನ್ನು ಯಾರು ಸತ್ಯವೆಂದು ತಿಳಿಯುತ್ತಾರೆಯೋ ಅವರು ಅಜ್ಞರೇ ಸರಿ ! ಎಲೈ ಪರಮೇಶ್ವರನೇ, ಜೀವನು ಮಾಯೆಯಿಂದ ಅವಿದ್ಯೆಯನ್ನವಲಂಬಿಸುವಕಾರಣ ದೇಹೇಂದ್ರಿಯಾದಿಗಳನ್ನೈದಿ ಮಾಯಾರೂಪವನ್ನಾಶ್ರಯಿಸಿದವನಾಗಿ ಆ ಮಾಯಾಸಂಬಂಧಿಗಳಾದ ಧರ್ಮಗಳನ್ನು ತನ್ನಲ್ಲಿ ಅಧ್ಯಸ್ತಮಾಡಿಕೊಂಡು

ತಿರೋಹಿತವಾದ ಆನಂದವುಳ್ಳವನಾಗಿ ಸಂಸಾರವನ್ನೈದುತ್ತಾನೆ; ನೀನು ನಿತ್ಯಪ್ರಾಪ್ತವಾದ ಐಶ್ವರ್ಯವುಳ್ಳವನಾದ ಕಾರಣ ಸರ್ಪವು ಪೊರೆಯನ್ನು ತ್ಯಜಿಸುವಂತೆ ಮಾಯೆಯನ್ನು ತ್ಯಜಿಸುತ್ತೀ; ನಿರಂತರಾಹ್ಲಾದ ಸಂವಿದ್ರೂಪನಾದ ನಿನಗೆ ಮಾಯೆಯಿಂದ ಕಾರ್ಯವಿಲ್ಲವಾದ್ದರಿಂದ ಆ ಮಾಯೆಯನ್ನುಪೇಕ್ಷಿಸುತ್ತೀ; ಅಪರಿಮಿತೈಶ್ವರ್ಯನಾದ ನೀನು ಅಷ್ಟಮಹಾಸಿದ್ಧಿಗಳುಳ್ಳ ಸ್ವರೂಪಾನಂದದಲ್ಲಿ ರಮಿಸುತ ಪ್ರಕಾಶಿಸುತ್ತೀ! ಈ ಪ್ರಕಾರವಾಗಿ ಹೇಳಲ್ಪಟ್ಟ ಸಾಧನಸಮೂಹದಿಂದ ಯಾವ ಪುರುಷರು ಪರಮೇಶ್ವರನನ್ನುಪಾಸನಗೈವರೋ ಅವರು ಸಂಸಾರವನ್ನು ದಾಟುವರು; ಇತರರಾದವರು ದಾಟಲಾರರು! ಯಾರು ಬಾಹ್ಯಸಂಗವನ್ನು ಪರಿತ್ಯಜಿಸಿ ಮನಸ್ಸಿನಲ್ಲಿ ವಿಷಯಾಸಕ್ತರಾಗಿ ಕಾಮಗಳನ್ನು ಬಿಡುವದಿಲ್ಲವೋ ಅವರು ಭಗವಂತನನ್ನೈದುವದಿಲ್ಲ; ಇಹಲೋಕದಲ್ಲಿ ಸುಖವನ್ನು ಪಡೆಯುವದಿಲ್ಲ; ಮತ್ತು ಮತ್ತು ಯೋನಿಗಳನ್ನೈದುವರು! ಎಲೈ ಭಗವಂತನೆ, ಯಾವ ಯತಿಗಳು ಮನಸ್ಸಿನಲ್ಲಿರುವ ಕಾಮವಾಸನೆಗಳನ್ನು ಮೂಲೋತ್ಪಾಟನ ಮಾಡುವದಿಲ್ಲವೋ ಅಂಥಾ ಸತ್ಪುರುಷರ ಹೃದಯದಲ್ಲಿ ನೀನಿದ್ದಾಗ್ಯೂ ಅವರಿಗೆ ದುರ್ಲಭನು; ತನ್ನ ಕಂಠದಲ್ಲಿರುವ ಮಣಿಯನ್ನು ಮರೆತಿರುವ ಪುರುಷನಿಗೆ ಮಣಿಯು ತನ್ನ ಸಮೀಪದಲ್ಲಿದ್ದಾಗ್ಯೂ ಇಲ್ಲದಹಾಗೆ ನೀನು ಅವರಿಗೆ ಸಿಕ್ಕದವನಲ್ಲ! ಇಂದ್ರಿಯಸಂತರ್ಪಣಪರರಾದ ಯೋಗಿಗಳೆಂಬ ಹೆಸರುಳ್ಳ ಅವಿವೇಕಿಗಳಿಗೆ ಇಹಪರಂಗಳಲ್ಲಿಯೂ ದುಃಖವೇ ಸರಿ; ಹೋಗದಿರುವ ಸಂಸಾರವೆಂಬ ಮೃತ್ಯುವುಳ್ಳ ಲೋಕಾರಾಧನ ಧನಾರ್ಜನಾದಿ ಕ್ಲೇಶಪಡೆಶೆಯಿಂದಲೂ ಭೋಗವಿಭವವು ಪ್ರಕಟವಾದೀತೆಂಬ ಭಯದರೆಸೆಯಿಂದಲೂ ಇಹಲೋಕದಲ್ಲಿ ದುಃಖವೂ ನಿನ್ನನ್ನೈದದಿರುವದರಿಂದ ಪರಲೋಕದಲ್ಲಿ ಭಯವೂ ಪ್ರಾಪ್ತವಾಗುವವೇ ಹೊರ್ತು ಸುಖವಿಲ್ಲ; ಸ್ವಧರ್ಮಾನುಷ್ಠಾನವಿಲ್ಲದಕಾರಣ ನರಕಪ್ರಾಪ್ತಿಯೇ ಉಂಟಾಗುವದು! ಎಲೈ ಷಡ್ಗುಣೈಶ್ವರ್ಯನಾದ ಪರಮೇಶ್ವರನೇ, ನಿನ್ನ ಸ್ವರೂಪವನ್ನು ತಿಳಿದಿರುವ ಮಹಾಯೋಗಿಯು ಶುಭಾಶುಭಕರ್ಮಫಲದಾತೃವಾದ ನಿನ್ನಿಂದ ಉಂಟುಮಾಡಲ್ಪಟ್ಟ ಸುಕೃತ ದುಷ್ಕೃತಗಳ ಫಲರೂಪಗಳಾದ ಸುಖದುಃಖಗಳನ್ನು ಚಿಂತಿಸುವದಿಲ್ಲ; ಅದೇರೀತಿ ಪ್ರಾಣಿಗಳಿಗೆ ಪ್ರವೃತ್ತಿ ನಿವೃತ್ತಿ ಬೋಧಕಗಳಾದ ವಿಧಿನಿಷೇಧ ವಚನಗಳನ್ನು ಸಹಾ ಚಿಂತಿಸುವದಿಲ್ಲ; ದೇಹಾಭಿಮಾನವಿಲ್ಲದಕಾರಣ ವಿಧಿ ನಿಷೇಧ ಶಂಕೆಗಳಿಲ್ಲ; ಪ್ರತಿಯುಗದಲ್ಲಿಯು ಪೂರ್ವಾಚಾರ್ಯರಿಂದ ನಿರೂಪಿಸಲ್ಪಟ್ಟ ಆಧ್ಯಾತ್ಮಜ್ಞಾನೋಪದೇಶ ಪರಂಪರೆಯಿಂದ ಯಾವ ಪುರುಷರು ಪ್ರತಿದಿವಸದಲ್ಲಿಯು ನಿನ್ನನ್ನೇ ಅನುಸಂಧಾನಂಗೈಯುತ ಚಿತ್ತದಲ್ಲಿ ಶ್ರವಣಾದಿಗಳಿಂದ ಧರಿಸುತ್ತಾರೆಯೋ ಅಂಥಾವರಿಗೆ ನೀನು ಪರಮಗತಿಯನ್ನುಂಟುಮಾಡುವೆ; ಆದಕಾರಣ ಅವರಿಗೆ ವಿಧಿನಿಷೇಧ ಶಾಸ್ತ್ರಾನುವರ್ತನವಿಲ್ಲ! ನಿನ್ನನ್ನು ತಿಳಿಯುವ ಪುರುಷನು ಸುಖದುಃಖಗಳನ್ನು ಗಣನೆಮಾಡುವದಿಲ್ಲ! ಎಲೈ ಭಗವಂತನೆ, ನಿನ್ನ ಪರಿಮಿತಿಯನ್ನು ಸ್ವರ್ಗಾದಿ ಲೋಕಪತಿಗಳಾದ ಬ್ರಹ್ಮಾದಿಗಳು ಸಹಾ ಕಾಣಲಾರರು; ಯಾವನು ನಿನ್ನ ಮಧ್ಯದಲ್ಲಿ ಉತ್ತರೋತ್ತರ ದಶಗುಣ ಪ್ರಮಾಣವುಳ್ಳ ಸಪ್ತಾವರಣ ಯುಕ್ತಗಳಾದ ಅನೇಕ ಬ್ರಹ್ಮಾಂಡಗಳು ಕಾಲಚಕ್ರದಿಂದ ಪರಿವರ್ತಮಾನಗಳಾದ ಆಕಾಶದಲ್ಲಿ ರಜಸ್ಸುಗಳಂತೆ ಏಕಕಾಲದಲ್ಲಿ ಸುತ್ತುತಲಿವೆಯೊ ಅಂಥಾ ನಿನ್ನ ಮಹಿಮೆಯು ಅಪಾರವು; ಆದಕಾರಣ ವೇದಗಳು ದೃಶ್ಯಗಳಾದ ಸಮಸ್ತ ವಸ್ತುಗಳನ್ನು ನಿಷೇಧಿಸಿ ನಿನ್ನಲ್ಲೇ ಪರಿಸಮಾಪ್ತಗಳಾಗಿ ನಿನ್ನಲ್ಲೇ ತಾತ್ಪರ್ಯವನ್ನಿಡುತಲಿವೆ; ಸಮಸ್ತ ಶ್ರುತಿಗಳಿಗೂ ತಾತ್ಪರ್ಯ ವಿಷಯವಾದ ವಸ್ತುವು ನೀನೇ ಸರಿ!—' ಎಂದು ಪ್ರಾರ್ಥಿಸಿದವು.'

"ಎಲೈ ನಾರದಮುನಿಯೆ, ಬ್ರಹ್ಮದೇವನಿಗೆ ಮಾನಸಪುತ್ರರಾದ ಸನಕಾದಿಗಳು ಈರೀತಿ ಸನಂದನ ಮುನಿಯಿಂದ ನಿರೂಪಿಸಲ್ಪಟ್ಟ ಈ ಆತ್ಮೋಪದೇಶವನ್ನು ಕೇಳಿ ಆತ್ಮತತ್ವವನ್ನು ತಿಳಿದು ಕೃತಾರ್ಥರಾಗಿ ಅನಂತರದಲ್ಲಿ ಆ ಸನಂದನ ಮುನಿಯನ್ನು ಪೂಜಿಸಿದರು. ಕೇಳೈ ನಾರದಮುನಿಯೆ, ಮಹಾತ್ಮರಾಗಿ ದೇವರ್ಷಿಗಳಾಗಿ ನಿನಗೆ ಅಣ್ಣಂದಿರಾದ ಸನಕಾದಿಗಳಿಂದ ಈರೀತಿ ಸಮಸ್ತ ಶ್ರುತಿ ಪುರಾಣರಹಸ್ಯ ತಾತ್ಪರ್ಯವೂ ಉದ್ಧರಿಸಲ್ಪಟ್ಟಿತು! ಎಲೈ ಬ್ರಹ್ಮಪುತ್ರನೆ, ಮನುಷ್ಯರ ಸಮಸ್ತ ಕಾಮವಿಕಾರಗಳನ್ನು ಪರಿಹರಿಸುವ ಈ ಆತ್ಮೋಪದೇಶಕ್ರಮವನ್ನು ನೀನು ಶ್ರದ್ಧೆಯಿಂದ ಏಕಾಗ್ರಚಿತ್ತನಾಗಿ ಹೃದಯದಲ್ಲಿ ಧರಿಸಿ ಆ ಬ್ರಹ್ಮಸ್ವರೂಪವನ್ನು ಭಜಿಸು" ಎಂದು ನಿರೂಪಿಸಿದನು.

ಎಲೈ ಪರೀಕ್ಷಿದ್ರಾಯನೆ, ಪರಮ ನೈಷ್ಠಿಕನಾಗಿ ಆತ್ಮಜ್ಞನಾದ ನಾರದಮುನಿಯು ಈರೀತಿ ತನ್ನ ಗುರುವಾಗಿ ಆದಿಮುನಿಯಾದ ಶ್ರೀನಾರಾಯಣನಿಂದ ಉಪದೇಶಂಗೈಯಲ್ಪಟ್ಟ ಆತ್ಮತತ್ವವನ್ನು ಶ್ರದ್ಧೆಯಿಂದ ಗ್ರಹಿಸಿ ಕೃತಾರ್ಥನಾಗಿ ಶ್ರವಣಂಗೈಯಲ್ಪಟ್ಟ ಆ ತತ್ವಾರ್ಥವನ್ನು ಮನಸ್ಸಿನಲ್ಲಿ ಧರಿಸಿ ಶ್ರೀನಾರಾಯಣನನ್ನು ಕುರಿತು "ಎಲೈ ನಾರಾಯಣಮೂರ್ತಿಯೇ, ಯಾವ ಭಗವಂತನು ಸಮಸ್ತ ಭೂತಗಳ ಮೋಕ್ಷಕ್ಕೋಸ್ಕರ ಅತಿ ರಮಣೀಯಗಳಾದ ಅಂಶಾವತಾರಗಳನ್ನು ಧರಿಸುತಲಿದ್ದಾನೋ ಅಂಥಾ ಶ್ರೀಕೃಷ್ಣ ಸ್ವರೂಪನಾಗಿ ನಿರ್ಮಲವಾದ ಕೀರ್ತಿಯುಳ್ಳವನಾಗಿ ಜ್ಞಾನೈಶ್ವರ್ಯಾದಿ ಸಂಪನ್ನನಾಗಿರುವ ನಿನಗೆ ನಮಸ್ಕಾರ" ಎಂದು ಆದಿಮುನಿಯಾದ ಶ್ರೀನಾರಾಯಣನನ್ನೂ ನಿರ್ಮಲಚಿತ್ತರಾದ ಆತನ ಶಿಷ್ಯರನ್ನೂ ನಮಸ್ಕರಿಸಿ ಅಪ್ಪಣೆ ತೆಗೆದುಕೊಂಡು ನನಗೆ ಸಾಕ್ಷಾತ್ ತಂದೆಯಾದ ವ್ಯಾಸಮುನಿಯ ಆಶ್ರಮವನ್ನೈದಿ ಆ ಮುನಿಯಿಂದ ಪೂಜಿಸಲ್ಪಟ್ಟು ಪೀಠವನ್ನು ಪರಿಗ್ರಹಿಸಿ ಶ್ರೀನಾರಾಯಣನ ಮುಖದ ದೆಸೆಯಿಂದ ಶ್ರವಣಂಗೈಯಲ್ಪಟ್ಟ ತತ್ವಾರ್ಥವನ್ನು ಆತನಿಗೆ ನಿರೂಪಿಸಿದನು! ಎಲೈ ಅರಸೆ, ನಿನ್ನಿಂದ ನಾನು ಯಾವ ಅರ್ಥವನ್ನು ಪ್ರಶ್ನೆಗೈಯಲ್ಪಟ್ಟೆನೊ ನಿರ್ದೇಶಂಗೈಯಲು ಅಶಕ್ಯನಾಗಿ ನಿರ್ಗುಣನಾಗಿರುವ ಪರಬ್ರಹ್ಮನಲ್ಲಿ ಗುಣಗಳನ್ನವಲಂಬಿಸಿಕೊಂಡಿರುವ ಶೃತಿಗಳೂ ಮನಸ್ಸೂ ಪ್ರವರ್ತಿಸುವ ಆ ಕ್ರಮವನ್ನು ನಾನು ನಿನಗೆ ನಿರೂಪಿಸಿದೆನು! ಎಲೈ ಅರಸೆ, ಯಾವ ಪರಮೇಶ್ವರನು ಪ್ರಳಯಾನಂತರದಲ್ಲಿ ಪುನಹ ದೃಷ್ಟಿಪ್ರಾಶಕ್ತಿಯಲ್ಲಿ ತನ್ನಲ್ಲಿ ಲೀನರಾದ ಸಮಸ್ತ ಪ್ರಾಣಿಗಳಿಗೂ ಪುರುಷಾರ್ಥ ಸಿದ್ಧಿಗೋಸ್ಕರ ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳನ್ನುಂಟುಮಾಡಿ ಆಯಾ ಜೀವರಿಗೆ ಸ್ವಕರ್ಮಾನುಸಾರವಾಗಿ ಸುಖದುಃಖಗಳನ್ನನುಭವಿಸುವಂತೆ ಮಾಡಬೇಕೆಂದು ಆಲೋಚಿಸಿ ಜಗತ್ತಿನ ಸೃಷ್ಟಿಸ್ಥಿತಿ ಸಂಹಾರ ವ್ಯಾಪಾರಗಳಲ್ಲಿರುವನೋ—ಯಾವ ಪರಮೇಶ್ವರನು ಮಾಯೆಗೂ ಪುರುಷನಿಗೂ ನಿಯಾಮಕನೋ—ಯಾವನು ಸೃಜಿಸಲ್ಪಟ್ಟ ಜಗತ್ತಿನಲ್ಲಿ ಜೀವರೂಪದಿಂ ಪ್ರವೇಶಿಸಿ ಜೀವರಿಗೆ ಸುಖದುಃಖ ಭೋಗ ಸಾಧನಗಳಾದ ಶರೀರಗಳನ್ನು ನಿರ್ಮಿಸಿ ಅಂತರ್ಯಾಮಿಯಾಗಿ ಕರ್ಮಗಳಲ್ಲಿ ಆ ಜೀವರನ್ನು ಪ್ರವರ್ತಿಸುವಂತೆ ಮಾಡುತ ಜಗತ್ತನ್ನು ರಕ್ಷಿಸುತ್ತಾನೆಯೋ—ಜೀವರು ಯಾವ ಪರಮೇಶ್ವರನ ಶರಣುಹೊಂದಿ ಅವಿದ್ಯೆಯನ್ನು ತ್ಯಜಿಸುವರೊ—ಅವಿದ್ಯೆಯನ್ನು ತ್ಯಜಿಸಿ ಜೀವನ್ಮುಕ್ತರಾದ ಜೀವರು ನಿದ್ರ್ಯೈವ ಪುರುಷರು ಯಾವ ಪದಾರ್ಥವನ್ನೂ ನೋಡದೆ ಎಲ್ಲರಿಂದಲು ತಾವು ನೋಡಿಸಿಕೊಳ್ಳುವಹಾಗೆ ಅನ್ಯರಿಂದ ನೋಡಿಸಿಕೊಳ್ಳುವವರಾಗಿರುವ ಜೀವನ್ಮುಕ್ತರು ತಾವು ಯಾವ ಪದಾರ್ಥವನ್ನು ನೋಡುವದಿಲ್ಲವೋ—ಅಂಥಾ ಭಯನಿವರ್ತಕನಾಗಿ ಅಪ್ರಚ್ಯುತಸ್ವರೂಪಾವಸ್ಥಾನದಿಂದ ಪರಿಹರಿಸಲ್ಪಟ್ಟ ಮಾಯೆಯುಳ್ಳ ಶ್ರೀಹರಿಯನ್ನು ನಿರಂತರದಲ್ಲಿಯೂ ಧ್ಯಾನಂಗೈಯಬೇಕು.

---

## ೮೮ ನೇ ಅಧ್ಯಾಯ.

### ವಿಷ್ಣುಭಕ್ತರಿಗೆ ಮೋಕ್ಷವೂ ಮಿಕ್ಕ ದೇವತೆಗಳ ಭಕ್ತರಿಗೆ ಐಶ್ವರ್ಯವೂ ಲಭಿಸುವವು.

[ಪರೀಕ್ಷಿದ್ರಾಯನು—ಎಲೈ ಶುಕಾಚಾರ್ಯನೆ, ದೇವಾಸುರ ಮನುಷ್ಯರಲ್ಲಿ ಯಾವ ಪುರುಷರು ಭೋಗಪರಾಙ್ಮುಖನಾದ ಪರಮೇಶ್ವರನನ್ನು ಭಜಿಸುವರೋ ಅವರು ಬಹುತರವಾಗಿ ಧನವಂತರೂ ಭೋಗವಂತರೂ ಆಗುವರು; ಲಕ್ಷ್ಮೀಪತಿಯಾದ ವಿಷ್ಣುವನ್ನು ಭಜಿಸುವವರು ಐಶ್ವರ್ಯವಂತರೂ ಭೋಗವಂತರೂ ಆಗುವದಿಲ್ಲ; ಈ ನಿಮಿತ್ತವನ್ನು ತಿಳಿಯಲಿಚ್ಛೈಸುತ್ತೇನೆ; ನನಗೆ ಈ ವಿಷಯದಲ್ಲಿ ಮಹತ್ತಾದ ಸಂದೇಹವುಂಟಾಗಿಧೆ—ಎಂದು ಕೇಳಿದನು.]

ಶುಕಮುನಿಯು—ಎಲೈ ಅರಸೆ, ಶ್ರೀಶಿವನು ಶಕ್ತಿಯುಕ್ತನಾಗಿ ಸತ್ವಾದಿ ಗುಣತ್ರಯವನ್ನವಲಂಬಿಸಿ ಆ ಗುಣಗಳ ಪರಸ್ಪರೋಪಮರ್ದದಿಂದ ಮೂರುವಿಧವಾದ ಅಹಂಕಾರವನ್ನವಲಂಬಿಸಿ ತ್ರಿಲಿಂಗನೆನಿಸಿಕೊಳ್ಳುವನು; ಈ ತ್ರಿವಿಧವಾದ ಅಹಂಕಾರದಿಂದ ಹದಿನಾರು ವಿಕಾರಗಳುಂಟಾಗುವವು; ಆ ಷೋಡಶ ವಿಕಾರಗಳಲ್ಲಿ ಯಾವ ಉಪಾಧಿ

ಯನ್ನವಲಂಬಿಸುವನೋ ಆ ಉಪಾಧ್ಯನುಸಾರಿಗಳಾದ ವಿಭೂತಿಗಳ ಸ್ವರೂಪವನ್ನು ಪಡೆಯುವನು ; ಶ್ರೀಹರಿಯು ನಿರ್ಗುಣನಾಗಿ ಸರ್ವಸಾಕ್ಷಿಯಾಗಿ ಪ್ರಕೃತಿಗೆಪರನಾಗಿ ಸಾಕ್ಷಾತ್ ಪುರುಷನಾದಕಾರಣ ಆತನನ್ನು ಭಜಿಸುವ ಪುರುಷನು ನಿರ್ಗುಣನಾಗುವನು.

ಕೇಳೈ ಅರಸೆ, ನಿನ್ನ ಪಿತಾಮಹನಾದ ಧರ್ಮರಾಯನು ಅಶ್ವಮೇಧ ಕ್ರತುಗಳು ಸಂಪೂರ್ಣವಾದಮೇಲೆ ಭಗವಂತನಾದ ಯಾವ ಹರಿಯು ಭಕ್ತರ ಇಷ್ಟಾರ್ಥವನ್ನು ಪೂರ್ತಿಮಾಡಲೋಸುಗ ಯದುವಂಶದಲ್ಲಿ ಅವತರಿಸಿದನೋ ಅಂಥಾ ಶ್ರೀಕೃಷ್ಣನನ್ನು ಕುರಿತು ಭಗವತ್ಪ್ರೀತಿಕರಗಳಾದ ಧರ್ಮಗಳನ್ನು ಕೇಳುತ ಬಂದು ಪ್ರಶ್ನೆಗೈದನು ; ಅನಂತರದಲ್ಲಿ ಭಕ್ತರ ಇಷ್ಟಾರ್ಥಪ್ರದನಾಗಿ ಯದುಕುಲಶ್ರೇಷ್ಠನಾದ ಆ ಭಗವಂತನು ಪ್ರೀತಿಯುಕ್ತನಾಗಿ ಭಕ್ತನಾದ ಧರ್ಮರಾಯನಿಗೋಸ್ಕರ ಹೇಳಿದನದೆಂತೆನೆ : “ಎಲೈ ಧರ್ಮರಾಯನೆ, ಯಾವ ಭಕ್ತನಲ್ಲಿ ನಾನು ಅನುಗ್ರಹವನ್ನು ಮಾಡುತ್ತೇನೆಯೋ ಆ ಭಕ್ತನ ಧನವನ್ನು ಮೆಲ್ಲಮೆಲ್ಲಗೆ ಅಪಹರಿಸುತ್ತೇನೆ ; ಅನಂತರದಲ್ಲಿ ಧನರಹಿತನಾಗಿ ಅತ್ಯಂತ ದುಃಖಿತನಾದ ಆ ಪುರುಷನನ್ನು ಸ್ವಜನರು ಪರಿತ್ಯಜಿಸುವರು ; ಅನಂತರದಲ್ಲಿ ಆ ಪುರುಷನು ಧನ ಇಚ್ಛೆಯಿಂದ ಬಹು ಪ್ರಯತ್ನಗಳನ್ನು ಮಾಡಿ ಆ ಪ್ರಯತ್ನಗಳು ಸಿದ್ಧಿಸದೇ ಹೋದಮೇಲೆ ಅತ್ಯಂತ ನಿರ್ವಿಣ್ಣನಾಗಿ ನನ್ನ ಭಕ್ತರಾದ ವಿರಕ್ತರೊಡನೆ ಮೈತ್ರಿಯನ್ನು ಮಾಡುವನು ; ಅದೇ ನನ್ನ ಅನುಗ್ರಹವು ; ಆದಕಾರಣ ಸೂಕ್ಷ್ಮನಾಗಿ ಚಿನ್ಮಾತ್ರನಾಗಿ ಸದಸತ್ಪರನಾಗಿ ಆರಾಧಿಸಲಶಕ್ಯನಾಗಿ ಪರಬ್ರಹ್ಮನಾದ ನನ್ನನ್ನು ಬಿಟ್ಟು ಅನ್ಯರನ್ನು ಭಜಿಸುವವರು ಶೀಘ್ರಸಂತೋಷಿಗಳಾದ ಅನ್ಯದೇವತೆಗಳನ್ನು ಭಜಿಸಿ ಆ ದೇವತೆಗಳಿಂದ ಕೊಡಲ್ಪಟ್ಟ ವರಗಳಿಂದ ರಾಜ್ಯಾಧಿಪತ್ಯ ಮೊದಲಾದ ಉತ್ಕೃಷ್ಟೈಶ್ವರ್ಯಗಳನ್ನು ಪಡೆದು ಮದಮತ್ತರಾಗಿ ವರಗಳನ್ನು ಕೊಟ್ಟ ಆ ದೇವತೆಗಳನ್ನೇ ಮರೆತು ಅವರಲ್ಲಿ ದ್ರೋಹಬುದ್ಧಿಯನ್ನು ಮಾಡುವರು ; ಬ್ರಹ್ಮ ವಿಷ್ಣು ಮಹೇಶ್ವರರು ಕೋಪಪ್ರಸಾದಗಳಲ್ಲಿ ಸಮರ್ಥರು ; ಅವರಲ್ಲಿ ಮಹೇಶ್ವರನು ಶೀಘ್ರಕೋಪವು ಶೀಘ್ರಪ್ರಸಾದವೂ ಉಳ್ಳವನು ; ಬ್ರಹ್ಮ ವಿಷ್ಣುಗಳಾದರೋ ಶೀಘ್ರಕೋಪಿಗಳೂ ಅಲ್ಲ—ಶೀಘ್ರಪ್ರಸಾದ ಉಳ್ಳವರೂ ಅಲ್ಲ ; ಈ ಅರ್ಥದಲ್ಲಿ ಪೂರ್ವ ವೃತ್ತಾಂತಗಳನ್ನು ಬಲ್ಲವರು ಇತಿಹಾಸವನ್ನುದಹರಿಸುವರು : ಶಿವನು ವೃಕನೆಂಬ ಅಸುರನಿಗೆ ವರವನ್ನಿತ್ತು ಅವನಿಂದ ತಾನು ಕಷ್ಟಪಟ್ಟನು ; ಶಕುನಿಯೆಂಬ ಅಸುರನ ಪುತ್ರನಾದ ವೃಕನೆಂಬ ಅಸುರನು ದುರ್ಬುದ್ಧಿಯುಳ್ಳವನಾದಕಾರಣ ಮಾರ್ಗದಲ್ಲಿ ನಾರದ ಋಷಿಯನ್ನು ಕಂಡು ತ್ರಿಮೂರ್ತಿಗಳಲ್ಲಿ ಕ್ಷಿಪ್ರವಾಗಿ ಅನುಗ್ರಹವನ್ನು ಮಾಡುವವನ್ಯಾರೆಂದು ಕೇಳಿದನು ; ನಾರದಮುನಿಯು ಪೂಜಿಸುವ ಭಕ್ತರಲ್ಲಿ ಕ್ಷಿಪ್ರಪ್ರಸಾದ ಉಳ್ಳವನೂ ಅಪರಾಧದಿಂದ ಶೀಘ್ರಕೋಪವುಳ್ಳವನೂ ಶ್ರೀಪರಮೇಶ್ವರನೆಂದೂ ಅಂಥಾ ಶಿವನನ್ನೇ ಭಜಿಸಬೇಕೆಂದೂ ಆಜ್ಞಾಪಿಸಿದನು ; ವೃಕನು ಪುನಹಾ ಪ್ರಶ್ನೆಗೈಯಲು ನಾರದಮುನಿಯು ಪುನಃ ಆತನನ್ನು ಕುರಿತು “ಎಲೈ ವೃಕಾಸುರನೆ, ಪೂರ್ವದಲ್ಲಿ ರಾವಣನು ಸ್ತುತಿಪಾಠಕನಂತೆ ಸ್ತುತಿಮಾಡುತ್ತಿರಲು ಸಂತುಷ್ಟನಾದ ಪರಮೇಶ್ವರನು ಉತ್ಕೃಷ್ಟೈಶ್ವರ್ಯವನ್ನು ಅವನಿಗಿತ್ತು ಆ ರಾವಣನಿಂದ ಉಪದ್ರವನ್ನು ಪಡೆದನು ; ಐಶ್ವರ್ಯಮದದಿಂದ ಮತ್ತನಾಗಿ ಬಲದರ್ಪದಿಂದ ಕೈಲಾಸವನ್ನೆತ್ತಿ ಈಶ್ವರನಿಗೆ ಉಪದ್ರವನ್ನು ಮಾಡಲು ಕೋಪವುಳ್ಳ ಶ್ರೀಪರಮೇಶ್ವರನಿಂದ ನಿಗ್ರಹಿಸಲ್ಪಟ್ಟನು ; ಅದೇರೀತಿಯಲ್ಲಿ ಬಾಣಾಸುರನು ಈಶ್ವರೋಪಾಸನದಿಂದ ಅಭ್ಯುದ್ಭುತೈಶ್ವರ್ಯವನ್ನು ಪಡೆದು ಆ ಪರಮೇಶ್ವರನನ್ನೇ ತನ್ನ ಪುರಪಾಲಕನಾಗಿ ಮಾಡಿಕೊಂಡನು ; ಆದಕಾರಣ ನೀನು ಆ ಶ್ರೀಪರಮೇಶ್ವರನನ್ನೇ ಭಜಿಸು” ಎಂದು ನುಡಿದನು.

ಅನಂತರದಲ್ಲಿ ವೃಕಾಸುರನು ಕೇದಾರ ಕ್ಷೇತ್ರವನ್ನೈದಿ ಅಲ್ಲಿ ತಪಸ್ಸನ್ನು ಮಾಡಿ ತನ್ನ ಶರೀರ ಮಾಂಸದಿಂದ ಯಜ್ಞೇಶ್ವರನನ್ನೇ ಮುಖವಾಗುಳ್ಳ ಪರಮೇಶ್ವರನನ್ನು ಕುರಿತು ಹೋಮಗೈದನು ; ಕೆಲವು ದಿವಸಗಳ ಮೇಲೆ ವೃಕಾಸುರನು ಪರಮೇಶ್ವರ ಪ್ರಸಾದವಾಗದಿದ್ದಕಾರಣ ಮಹಾದುಃಖವುಳ್ಳವನಾಗಿ ಆ ಕೇದಾರ ತೀರ್ಥದಿಂದ ನೆನೆಯಿಸಲ್ಪಟ್ಟ ಕೇಶಗಳುಳ್ಳ ತನ್ನ ಶಿರಸ್ಸನ್ನು ಶಸ್ತ್ರದಿಂದ ಛೇದಿಸಿ ಏಳನೇ ದಿವಸದಲ್ಲಿ ಹೋಮಗೈಯಲು ಯತ್ನವನ್ನು ಮಾಡಿದನು ; ಆಗ ಮಹಾ ದಯಾಶಾಲಿಯಾದ ಶ್ರೀಪರಮೇಶ್ವರನು ಮಹತ್ತಾದ ಯಜ್ಞೇಶ್ವರನಂತೆ ದೇದೀಪ್ಯಮಾನ

ನಾಗಿ ಅಲ್ಲಿ ಆವಿರ್ಭವಿಸಿ ನಮ್ಮಂಥಾವರು ದುಃಖದಿಂದ ಮೃತಿಯನ್ನೈದುವ ಪ್ರಾಣಿಯನ್ನು ತಡೆದು ರಕ್ಷಿಸುವಂತೆ ಅಸುರನನ್ನು ತಮ್ಮ ಭುಜಗಳಿಂದ ತಬ್ಬಿ ನಿಲ್ಲಿಸಿದನು ; ಆ ಪರಮೇಶ್ವರನ ಹಸ್ತಸ್ಪರ್ಶದಿಂದ ಛೇದಿಸಲ್ಪಟ್ಟದ್ದ ಸರ್ವಾವಯವಗಳೂ ಪುನಹ ಉತ್ಪನ್ನಗಳಾಗಲು ಪೂರ್ವಕ್ಕಿಂತಲೂ ಪ್ರಕಾಶಮಾನವಾದ ದೇಹವುಳ್ಳಂಥಾವನಾದನು ; ಅನಂತರದಲ್ಲಿ ಶ್ರೀಪರಮೇಶ್ವರನು ಅವನನ್ನು ಕುರಿತು 'ಎಲೈ ವೃಕಾಸುರನೆ, ಈ ತಪಸ್ಸನ್ನು ಸಾಕುಮಾಡು; ನಿನ್ನ ಮನಸ್ಸಿನಲ್ಲಿ ಯಾವ ಅರ್ಥವಿದೆಯೋ ಆ ಅರ್ಥವನ್ನು ಕೇಳಿಕೊಳ್ಳುವವನಾಗು ; ನಾನು ಆ ವರವನ್ನು ಕೊಡುತ್ತೇನೆ ; ನಾನು ಭಜಿಸುವ ಭಕ್ತರಿಗೆ ಸಂತುಷ್ಟನಾಗಿ ವರಗಳನ್ನೀವೆನು ; ನೀನು ವ್ಯರ್ಥವಾಗಿ ದೇಹವನ್ನು ಯಾಕೆ ಛೇದಿಸಿಕೊಳ್ಳುತ್ತೀ !' ಎಂದು ನುಡಿದನು. ಅದನ್ನು ಕೇಳಿ ಪಾಪಿಷ್ಟನಾದ ವೃಕಾಸುರನು 'ನಾನು ಯಾವನ ಶಿರಸ್ಸಿನಲ್ಲಿ ಹಸ್ತವನ್ನಿರಿಸುತ್ತೇನೆಯೋ ಅವನು ಮೃತನಾಗಲೀ' ಎಂದು ಸರ್ವ ಪ್ರಾಣಿಗಳಿಗೂ ಭಯವನ್ನುಂಟುಮಾಡುವಂಥಾ ವರವನ್ನು ಯಾಚಿಸಿದನು.

"ಭಗವಂತನಾದ ಶ್ರೀಪರಮೇಶ್ವರನು ಆ ಅರ್ಥವನ್ನು ಕೇಳಿ ವ್ಯಸನಯುಕ್ತನಾಗಿಯೂ ಮುಗುಳುನಗೆಯುಳ್ಳವನಾಗಿಯೂ ಸರ್ಪಕ್ಕೆ ಅಮೃತವನ್ನಿತ್ತಂತೆ ಹಾಗೇ ಆಗಲೆಂದು ಆ ಅಸುರನಿಗೆ ವರವನ್ನಿತ್ತನು ; ಈ ಪ್ರಕಾರವಾಗಿ ವರವನ್ನು ಪಡೆದ ಆ ಅಸುರನು ಪಾರ್ವತಿಯನ್ನು ಅಪಹರಿಸಬೇಕೆಂಬ ಕುತೂಹಲವುಳ್ಳವನಾಗಿ ಆ ವರ ಪರೀಕ್ಷಾರ್ಥವಾಗಿ ಪರಮೇಶ್ವರನ ಶಿರಸ್ಸಿನಲ್ಲಿ ತನ್ನ ಹಸ್ತವನ್ನಿರಿಸುವದಕ್ಕಾರಂಭಿಸಿದನು ; ಅದನ್ನು ನೋಡಿ ಶಿವನು ತನ್ನಿಂದ ಕೊಡಲ್ಪಟ್ಟ ವರದಿಂದ ಭಯಪಡುತ ಪಲಾಯನಂಗೈದು ದಿಕ್ಕುದಿಕ್ಕುಗಳಲ್ಲಿಯೂ ಆವನಿಂದ ಹಿಂಬಟ್ಟಲ್ಪಟ್ಟನು ; ಆ ಪ್ರಕಾರ ಉತ್ತರದಿಕ್ಕಿಗೆ ಪಲಾಯನಂಗೈಯುತಿದ್ದ ಪರಮೇಶ್ವರನನ್ನು ನೋಡಿ ದೇವತೆಗಳು ಪ್ರತಿಕಾರವನ್ನರಿಯದೆ ಸುಮ್ಮನಿದ್ದರು ; ಅನಂತರದಲ್ಲಿ ಶಿವನು ಪ್ರಕಾಶಮಾನನಾಗಿ ತಪಸ್ಸಿಗೆ ಹೊರಚ್ಚಾದ ವೈಕುಂಠನಾಮಕವಾದ ಶ್ವೇತದ್ವೀಪವನ್ನೈದಿದನು ; ಯಾವ ಭಗವಂತನನ್ನೈದಿದವರು ಪುನರಾವೃತ್ತಿಯನ್ನೈದುವದಿಲ್ಲವೋ—ಉಪಶಾಂತರಾಗಿ ಸರ್ವವನ್ನು ಪರಿತ್ಯಾಗಂಗೈದು ಧ್ಯಾನಾರೂಢರಾದ ಯೋಗಿಗಳಿಗೆ ಯಾವ ಭಗವಂತನು ಪರಮ ಗತಿಪ್ರದನೋ—ಅಂಥಾ ಪರಮಾತ್ಮನು ಯಾವ ಶ್ವೇತದ್ವೀಪದಲ್ಲಿ ವಾಸಮಾಡುತಾನೆಯೋ ಅಲ್ಲಿಗೆ ಪರಮೇಶ್ವರನು ಹೋದನು ; ಅನಂತರದಲ್ಲಿ ದುಃಖಪರಿಹಾರಕನಾಗಿ ಭಗವಂತನಾದ ನಾರಾಯಣನು ವ್ಯಸನಯುಕ್ತನಾದ ಪರಮೇಶ್ವರನನ್ನೂ ಆ ವೃಕಾಸುರನನ್ನೂ ನೋಡಿ ಯೋಗಮಾಯೆಯಿಂದ ಬ್ರಹ್ಮಚಾರಿಯಾಗಿ ದೂರದಲ್ಲಿಯೇ ಆ ಅಸುರನಿಗೆ ಪ್ರತ್ಯುತ್ಥಾನವನ್ನು ಮಾಡಿದನು ; ಮೌಂಜೀಯಿಂದಲು ಕೃಷ್ಣಾಜಿನ ದಂಡಗಳಿಂದಲೂ ತನ್ನ ದಿವ್ಯತೇಜಸ್ಸಿನಿಂದಲೂ ಯಜ್ಞೇಶ್ವರನಂತೆ ಹೊಳೆಯುತಲಿರುವ ಭಗವಂತನು ಬಹು ವಿನಯ ಸಂಪನ್ನನಂತೆ ದರ್ಭ ಪವಿತ್ರವನ್ನಿಟ್ಟುಕೊಂಡು ವೃಕಾಸುರನಿಗೆ ಅಭಿವಾದನಂಗೈದು ಆತನನ್ನು ಕುರಿತು 'ಎಲೈ ಶಕುನಿಪುತ್ರನಾದ ವೃಕಾಸುರನೆ, ಇದೇನು ಬಳಲಿಕೆಯುಳ್ಳವನಂತೆ ಕಾಣಲ್ಪಡುತ್ತೀ ! ದೂರದಿಂದ ಬಂದಿಯೇ ಏನು ! ಒಂದು ಕ್ಷಣಮಾತ್ರ ವಿಶ್ರಮಿಸಿಕೊಳ್ಳು ; ಪುರುಷನಿಗೆ ಸರ್ವಕಾಮಗಳನ್ನು ಕೊಡುವದು ಶರೀರವಲ್ಲವೆ ! ಆ ಶರೀರವನ್ನು ಯಾಕೆ ಬಳಲಿಸಬೇಕು ! ಎಲೈ ಸಮರ್ಥನೆ, ನಿನ್ನ ಮನೋಗತವಾದ ಅರ್ಥವು ನಮ್ಮಿಂದ ಕೇಳುವದಕ್ಕೆ ಯೋಗ್ಯವಾದರೆ ನನ್ನನ್ನು ಕುರಿತು ಹೇಳು ; ಲೋಕದಲ್ಲಿ ಜನರು ಆಪ್ತರಾದವರಿಗೆ ತಮ್ಮ ಕಾರ್ಯಗಳನ್ನು ಹೇಳಿ ಸ್ವಕಾರ್ಯಗಳನ್ನು ಸಾಧಿಸುವರು' ಎಂದು ಕೇಳಿದನು.

"ಈ ಪ್ರಕಾರದಲ್ಲಿ ಭಗವಂತನಿಂದ ಅಮೃತಸಮಾನವಾದ ವಾಕ್ಯಿನಿಂದ ಕೇಳಲ್ಪಟ್ಟ ಆ ಅಸುರನು ಮಾರ್ಗಶ್ರಮೆಯನ್ನು ಪರಿಹರಿಸಿಕೊಂಡು ತನ್ನಿಂದ ಪೂರ್ವದಲ್ಲಿ ಮಾಡಲ್ಪಟ್ಟ ಕೆಲಸವನ್ನು ಆ ಭಗವಂತನನ್ನು ಕುರಿತು ಹೇಳಿದನು ; ಆ ಮಾತನ್ನು ಕೇಳಿ ಭಗವಂತನು ವೃಕನನ್ನು ಕುರಿತು 'ಎಲೈ ವೃಕಾಸುರನೆ, ಈಶ್ವರನ ವಾಕ್ಯವನ್ನು ನಾವು ಸರ್ವಥಾ ನಂಬುವದಿಲ್ಲ ; ಆತನು ಪೂರ್ವದಲ್ಲಿ ದಕ್ಷನಶಾಪದಿಂದ ಪಿಶಾಚಭಾವವನ್ನೈದಿ ಭೂತಪ್ರೇತಾದಿಗಳಿಗೆ ಅಧಿಪತಿಯಾಗಿಧಾನೆ ; ಆದ್ದರಿಂದ ಅಂಥಾ ಈಶ್ವರನ ವಾಕ್ಯದಲ್ಲಿ ನೀನು ನಂಬಿಕೆ ಇಡಬೇಡ ; ಅಥವಾ ಜಗ

ದುಗ್ರರೂಪನಾದ ಈಶ್ವರನಲ್ಲಿ ನಿನಗೆ ನಂಬಿಕೆಯಿದ್ದ ಪಕ್ಷದಲ್ಲಿ ನಿನ್ನ ಶಿರಸ್ಸಿನಲ್ಲಿ ಹಸ್ತವನ್ನಿಟ್ಟು ಪರೀಕ್ಷಿಸಿನೋಡು! ಎಲೈ ಅಸುರನೆ, ಈಶ್ವರನ ವಾಕ್ಯವು ಅಸತ್ಯವೆಂದು ತಿಳಿದು ಪುನಹ ಇಂಥಾ ಅಸತ್ಯವನ್ನು ಹೇಳದಂತೆ ಮಿಥ್ಯಾವಾಕ್ಯವುಳ್ಳ ಆತನನ್ನು ಸಂಹರಿಸು ' ಅಂದನು.

" ಈ ಪ್ರಕಾರಗಳಾಗಿ ಮಧುರವಾಗಿ ವಿಚಿತ್ರಗಳಾದ ಭಗವಂತನ ವಾಕ್ಯಗಳಿಂದ ಮೋಹಿತವಾದ ಬುದ್ಧಿಯುಳ್ಳವನಾಗಿ ಈಶ್ವರನು ಅಂಥಾ ಮೋಸಗಾರನೇ ಎಂದು ಆಶ್ಚರ್ಯಪಡುತ ದುರ್ಬುದ್ಧಿಯುಳ್ಳ ವೃಕನು ತನ್ನ ಶಿರಸ್ಸಿನಲ್ಲಿ ತನ್ನ ಹಸ್ತವನ್ನಿಡಲು ವಜ್ರದಿಂದ ಹತನಾದಂತೆ ಒಡೆಯಲ್ಪಟ್ಟ ಶಿರಸ್ಸುಳ್ಳವನಾಗಿ ಆ ಕ್ಷಣದಲ್ಲೇ ಬಿದ್ದನು; ಆಗ ಅಂತರಿಕ್ಷದಲ್ಲಿ ಜಯಶಬ್ದವೂ ನಮಃಶಬ್ದವೂ ಸಾಧು ಸಾಧುವೆಂಬ ಶಬ್ದವೂ ಉಂಟಾದವು; ದೇವಋಷಿ ಪಿತೃ ಗಂಧರ್ವರು ಪಾಪಿಷ್ಟನಾದ ವೃಕಾಸುರನು ಹತನಾದಮೇಲೆ ಪುಷ್ಪವೃಷ್ಟಿಗಳನ್ನು ಕರೆದರು; ಶ್ರೀಪರಮೇಶ್ವರನು ಆ ಉಪದ್ರವವನ್ನು ಪರಿಹರಿಸಿಕೊಂಡು ಸ್ವಸ್ಥನಾದನು; ಅನಂತರದಲ್ಲಿ ಪುರುಷೋತ್ತಮನಾದ ಭಗವಂತನು ವೃಕಾಸುರನ ಉಪದ್ರದಿಂದ ಮುಕ್ತನಾದ ಪರಮೇಶ್ವರನನ್ನು ಕುರಿತು 'ಎಲೈ ಮಹಾದೇವನಾದ ಶ್ರೀಪರಮೇಶ್ವರನೆ, ಪಾಪಿಷ್ಟನಾದ ಈ ಅಸುರನು ತನ್ನ ಪಾಪದಿಂದ ತಾನೇ ಹತನಾದನು; ಮಹಾತ್ಮರ ವಿಷಯದಲ್ಲಿ ದ್ರೋಹಬುದ್ಧಿಯನ್ನು ಮಾಡುವ ಪುರುಷನು ಯಾವನು ಹತನಾಗದೇ ಹೋದಾನು! ಎಲೈ ಈಶ್ವರನೆ, ವಿಶ್ವೇಶ್ವರನಾಗಿ ಜಗದ್ಗುರುವಾದ ನಿನ್ನಲ್ಲಿ ದ್ರೋಹಬುದ್ಧಿಯನ್ನು ಮಾಡಿದಂಥಾವನು ಕ್ಷೇಮವಂತನಾದಾನೆ!' ಎಂದು ನುಡಿದನು.

ಈ ಪ್ರಕಾರದಲ್ಲಿ ಅವ್ಯಾಹತಶಕ್ತಿ ಸಮುದ್ರನಾಗಿ ಸಾಕ್ಷಾತ್ಪರಮಾತ್ಮನಾದ ಶ್ರೀಹರಿಯಿಂದ ಮಾಡಲ್ಪಟ್ಟ ಪರಮೇಶ್ವರನ ಉಪದ್ರವ ಪರಿಹಾರರೂಪವಾದ ಉಪಾಖ್ಯಾನವನ್ನು ಯಾವ ಪುರುಷನು ಹೇಳುವನೊ—ಕೇಳುವನೋ ಆ ಪುರುಷನು ಶತ್ರುಭಯರಹಿತನಾಗಿ ಸಂಸಾರದಿಂದ ಮುಕ್ತನಾಗುವನು.

---

## ೮೯ ನೇ ಅಧ್ಯಾಯ.

### ಭೃಗುಋಷಿಯು ತ್ರಿಮೂರ್ತಿಗಳನ್ನು ಪರೀಕ್ಷಿಸಿದ್ದು—ಶ್ರೀಕೃಷ್ಣನು ಮೃತರಾದ ಬ್ರಾಹ್ಮಣಪುತ್ರರನ್ನು ಬದುಕಿಸಿಕೊಟ್ಟದ್ದು.

ಎಲೈ ಅರಸೆ, ಸರಸ್ವತೀತೀರದಲ್ಲಿ ಋಷಿಗಳು ಸತ್ರಯಾಗವನ್ನು ಪಕ್ರಮಿಸಿರುವಾಗ ತ್ರಿಮೂರ್ತಿಗಳಲ್ಲಿ ಯಾವನು ದೊಡ್ಡವನೆಂದು ಆ ಋಷಿಗಳಿಗೆ ಸಂದೇಹವುಂಟಾಯಿತು; ಆ ಅರ್ಥವನ್ನು ನಿಶ್ಚಯಿಸಬೇಕೆಂದು ಆಲೋಚಿಸಿ ಆ ಮಹರ್ಷಿಗಳು ಬ್ರಹ್ಮಪುತ್ರನಾದ ಭೃಗುಋಷೀಶ್ವರನನ್ನು ಕಳುಹಿಸಿದರು; ಆತನು ಬ್ರಹ್ಮದೇವನ ಸಭೆಯನ್ನು ಕುರಿತು ತೆರಳಿ ಸತ್ವಸ್ವಭಾವವನ್ನು ತಿಳಿಯಲೋಸುಗ ಬ್ರಹ್ಮದೇವನಿಗೆ ನಮಸ್ಕಾರವನ್ನಾದರೂ ಸ್ತೋತ್ರವನ್ನಾದರೂ ಮಾಡದೆ ಸುಮ್ಮನೆ ನಿಂತಿರಲು ಭಗವಂತನಾದ ಬ್ರಹ್ಮದೇವನು ತನ್ನ ತೇಜಸ್ಸಿನಿಂದ ಯಜ್ಞೇಶ್ವರನಂತೆ ಜ್ವಲಿಸುತ ಭೃಗುಋಷೀಶ್ವರನಲ್ಲಿ ಕೋಪಿಸಿ ಅನಂತರದಲ್ಲಿ ಮಗನಾದ ಭೃಗುವಿನಿಂದುಂಟುಮಾಡಲ್ಪಟ್ಟ ಕೋಪವನ್ನು ಜಲದಿಂದ ಯಜ್ಞೇಶ್ವರನನ್ನು ಶಾಂತಿಯನ್ನೈದಿಸುವಂತೆ ತನ್ನ ಬುದ್ಧಿಯಿಂದ ಉಪಶಾಂತಿಯನ್ನೈದಿಸಿದನು! ಅನಂತರದಲ್ಲಿ ಭೃಗುಋಷಿಯು ಕೈಲಾಸವನ್ನು ಕುರಿತು ಹೋದನು; ಮಹೇಶ್ವರನಾದ ಮಹಾದೇವನು ತಮ್ಮನಾದ ಭೃಗುಋಷಿಯನ್ನು ನೋಡಿ ಸಂತೋಷದಿಂದ ಆಲಿಂಗನಗೈಯಲೋಸುಗ ಯತ್ನವನ್ನು ಮಾಡಲು ಭೃಗುವು ಈಶ್ವರನನ್ನು ಕುರಿತು " ನೀನು ಲೋಕವಿರುದ್ಧಮಾರ್ಗದಲ್ಲಿ ಹೋಗುವವನು " ಎಂದು ಹೇಳಿ ಆಲಿಂಗನವನ್ನು ಸಮ್ಮತಿಸಲಿಲ್ಲ; ಅಗ್ನಿಲೋಚನನಾದ ಪರಮೇಶ್ವರನು ಕೋಪವನ್ನು ಮಾಡಿ ಶೂಲವನ್ನೆತ್ತಿಕೊಂಡು ಭೃಗುಋಷಿಯನ್ನು ಸಂಹರಿಸಲು ಯತ್ನವನ್ನು ಮಾಡಿದನು; ಅದನ್ನು ನೋಡಿ ಪಾರ್ವತಾದೇವಿಯು ಪರಮೇಶ್ವರನ ಪಾದಗಳಲ್ಲಿ ನಮಸ್ಕರಿಸಿ ಪ್ರಾರ್ಥಿಸಿ ಕೋಪವನ್ನು ಸಮಾಧಾನಗೈದಳು! ಅನಂತರದಲ್ಲಿ ಭೃಗುಋಷಿಯು ಜನಾರ್ದನನಿಗೆ ಆವಾ

ಸಸ್ಥಾನವಾದ ವೈಕುಂಠವನ್ನೈದಿ ಅಲ್ಲಿ ಲಕ್ಷ್ಮೀದೇವಿಯ ತೊಡೆಯಮೇಲೆ ಮಲಗಿದ್ದ ಶ್ರೀಹರಿಯನ್ನು ತನ್ನ ಪಾದದಿಂದ ವಕ್ಷಸ್ಥಳದಲ್ಲಿ ಒದ್ದನು; ಸತ್ಪುರುಷರಿಗೆ ಆಶ್ರಯನಾದ ಶ್ರೀಹರಿಯು ಲಕ್ಷ್ಮೀದೇವಿಯೊಡನೆ ಶೀಘ್ರವಾಗೆದ್ದು ತನ್ನ ಹಾಸಿಗೆಯಿಂದಿಳಿದು ಶಿರಸ್ಸಿನಿಂದ ಆ ಋಷಿಗೆ ನಮಸ್ಕಾರವನ್ನು ಮಾಡಿ ಆತನನ್ನು ಕುರಿತು "ಎಲೈ ಬ್ರಾಹ್ಮಣೋತ್ತಮನಾದ ಭೃಗುಋಷಿಯೇ, ನಿನಗೆ ಸುಖದಿಂದ ಆಗಮನವುಂಟಾಯಿತೆ! ಈ ಪೀಠದಲ್ಲಿ ಕ್ಷಣಮಾತ್ರವು ಕುಳಿತುಕೊ; ನೀನು ಬಂದ ಅರ್ಥವನ್ನರಿಯದ ನಮ್ಮ ಅಪರಾಧವನ್ನು ಕ್ಷಮಿಸು! ಎಲೈ ಪ್ರಭುವಾದ ಋಷಿಯೆ, ಸಮಸ್ತ ಲೋಕಸಹಿತನಾದ ನನ್ನಲ್ಲಿರುವ ಲೋಕಪಾಲಕರನ್ನು ಸಹಾ ಪವಿತ್ರರಾಗಿ ಮಾಡುವವನಾಗು; ಸಮಸ್ತ ತೀರ್ಥಗಳಿಗೂ ತೀರ್ಥರೂಪವಾದ ನಿನ್ನ ಪಾದೋದಕದಿಂದ ನಮ್ಮನ್ನು ಪಾವನಂಗೈವವನಾಗು! ಎಲೈ ಭಗವಂತನಾದ ಋಷಿಯೆ, ಈಗ ನಾನು ಲಕ್ಷ್ಮಿಯೊಡನೆ ಏಕಾಂತದಲ್ಲಿದ್ದಂಥಾವನಾದೆನು; ನಿನ್ನ ಪಾದಪ್ರಹಾರದಿಂದ ನಷ್ಟವಾದ ಪಾಪವುಳ್ಳ ನನ್ನ ವಕ್ಷಸ್ಥಳದಲ್ಲಿ ಮಹಾಲಕ್ಷ್ಮಿಯು ವಾಸಂಗೈಯುತ್ತಾಳೆ" ಎಂದು ಪ್ರಾರ್ಥಿಸಿ ಸತ್ಕರಿಸಿದನು.

ಭೃಗುಋಷಿಯು ಶ್ರೀಹರಿಯ ಗಂಭೀರವಾದ ವಾಕ್ಯದಿಂದ ಸುಖಿತನಾಗಿ ಭಕ್ತಿಯಿಂದ ಹುಟ್ಟಿದ ಆನಂದಬಾಷ್ಪವುಳ್ಳವನಾಗಿ ಸುಮ್ಮನಿದ್ದನು! ಎಲೈ ಅರಸೆ, ಅನಂತರದಲ್ಲಿ ಭೃಗುಋಷಿಯು ಸರಸ್ವತೀತೀರದಲ್ಲಿ ನಡೆಯುತ್ತಿದ್ದ ಸತ್ರವನ್ನೈದಿ ಬ್ರಹ್ಮವಾದಿಗಳಾದ ಋಷಿಗಳಿಗೆ ಸ್ಥಾನತ್ರಯದಲ್ಲಿರುವ ತ್ರಿಮೂರ್ತಿಗಳ ವೃತ್ತಾಂತವನ್ನು ಸಮಗ್ರವಾಗಿ ತಿಳಿಸಿದನು; ಆ ಮುನಿಗಳು ಆ ವೃತ್ತಾಂತವನ್ನು ಕೇಳಿ ಆಶ್ಚರ್ಯಯುಕ್ತರಾಗಿ ಸಂಶಯವನ್ನು ಬಿಟ್ಟು ಯಾವನೆದೆಸೆಯಿಂದ ಶಾಂತಿಯೂ ಅಭಯವೂ ಉಂಟಾಗುವದೋ ಅಂಥಾ ವಿಷ್ಣುವನ್ನೇ ಅಧಿಕನಾಗಿ ತಿಳಿದರು; ಯಾವನೆದೆಸೆಯಿಂದ ಸಾಕ್ಷಾತ್ ಧರ್ಮವೂ ಜ್ಞಾನವೂ ಜ್ಞಾನಯುಕ್ತವಾದ ವೈರಾಗ್ಯವೂ ಅಷ್ಟವಿಧಗಳಾದ ಐಶ್ವರ್ಯಗಳೂ ಚಿತ್ತಕಲ್ಮಷಪರಿಹಾರಕವಾದ ಯಶಸ್ಸೂ ಉಂಟಾಗುವವೋ—ಸರ್ವಸಂಗ ತ್ಯಾಗಿಗಳಾಗಿ ಶಾಂತರಾಗಿ ಸಮಚಿತ್ತವುಳ್ಳವರಾಗಿ ದರಿದ್ರರಾಗಿ ಸಾಧುಗಳಾಗಿ ಮನನಶೀಲರಾದ ಭಕ್ತರಿಗೆ ಯಾವ ಪರಮಾತ್ಮನು ಪರಮಗತಿಯಾದವನೊ—ಯಾವ ಭಗವಂತನಿಗೆ ಸತ್ವವೇ ಪ್ರಿಯವಾದ ಮೂರ್ತಿಯೋ—ಯಾವ ಹರಿಗೆ ಬ್ರಾಹ್ಮಣರೇ ಇಷ್ಟದೇವತೆಗಳೊ ನಿಸ್ಪೃಹರಾಗಿ ಉಪಶಾಂತರಾಗಿ ಕುಶಲಬುದ್ಧಿಯುಳ್ಳ ಭಕ್ತರು ಯಾವ ಪರಮಾತ್ಮನನ್ನು ಭಜಿಸುವರೊ ಅಂಥಾ ಭಗವಂತನ ಮೂರ್ತಿಗಳು ಮೂರುಪ್ರಕಾರ ರಾಕ್ಷಸರೂಪಗಳಾಗಿಯೂ ಅಸುರರೂಪಗಳಾಗಿಯೂ ದೇವರೂಪಗಳಾಗಿಯೂ ಇರುವವು; ಅವಲ್ಲಿ ಸತ್ವರೂಪವಾದ ಮೂರ್ತಿಯಾವದುಂಟೋ ಅದು ಮೋಕ್ಷಸಾಧನವಾದದ್ದು! ಈ ಪ್ರಕಾರವಾಗಿ ಸರಸ್ವತೀತೀರವಾಸಿಗಳಾದ ಆ ಬ್ರಾಹ್ಮಣರು ಮನುಷ್ಯರ ಸಂಶಯಪರಿಹಾರಾರ್ಥವಾಗಿ ನಿಶ್ಚಯಿಸಿ ಪರಮಪುರುಷನ ಪಾದಪದ್ಮಗಳ ಸೇವೆಯಿಂದ ಸದ್ಗತಿಯನ್ನೈದಿದರು! ಎಂದು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನು.

[ಸೂತಪೌರಾಣಿಕನು ಶೌನಕಾದಿ ಋಷಿಗಳನ್ನು ಕುರಿತು—ಎಲೈ ಮಹರ್ಷಿಗಳಿರಾ, ಈ ರೀತಿಯಲ್ಲಿ ವ್ಯಾಸಪುತ್ರನಾದ ಶುಕಾಚಾರ್ಯನ ಮುಖಪದ್ಮದಿಂದ ಹೊರಡುತಲಿದ್ದ ಪರಮಪುರುಷನ ಚರಿತ್ರವೆಂಬ ಅಮೃತವನ್ನು ಉತ್ತಮ ಕೀರ್ತಿಪ್ರದವನ್ನಾಗಿ ತಿಳಿದು ಶ್ರೋತ್ರಪುಟಗಳಿಂದ ಯಾವ ಪುರುಷರು ಬಾರಿಬಾರಿಗು ಪಾನಂಗೈವರೋ ಆ ಪುರುಷರು ಸಂಸಾರ ಕ್ಲೇಶವನ್ನು ಬಿಡುವರು.]

ಆ ಬಳಿಕ ಶುಕಮುನಿಯು ಪರೀಕ್ಷಿದ್ರಾಯನನ್ನು ಕುರಿತು—ಎಲೈ ಅರಸೆ, ಒಂದಾನೊಂದು ಸಮಯದಲ್ಲಿ ದ್ವಾರಕಾಪುರದಲ್ಲಿ ಒಬ್ಬ ಬ್ರಾಹ್ಮಣನ ಪತ್ನಿಯು ಕುಮಾರನನ್ನು ಪಡೆಯಲು ಆ ಶಿಶುವು ಹುಟ್ಟಿ ಭೂಸ್ಪರ್ಶಮಾತ್ರವನ್ನೈದಿ ಮೃತವಾಯಿತು; ಆ ಶಿಶುವಿಗೆ ತಂದೆಯಾದ ಬ್ರಾಹ್ಮಣನು ಮೃತವಾದ ಆ ಶಿಶುವನ್ನು ತೆಗೆದುಕೊಂಡು ಬಂದು ರಾಜದ್ವಾರದಲ್ಲಿ ಹಾಕಿ ಪ್ರಲಾಪಂಗೈಯುತ ದೀನನಾಗಿ ಪುತ್ರಶೋಕಾತುರನಾಗಿ "ಬ್ರಹ್ಮದ್ವೇಷಿಯಾಗಿ ವಂಚಕನಾಗಿ ಲುಬ್ಧನಾಗಿ ವಿಷಯಾಸಕ್ತನಾಗಿ ಕ್ಷತ್ರಿಯರಲ್ಲಿ ನೀಚನಾದ ಅರಸನ ದೋಷದಿಂದ ನನ್ನ ಮಗನು ಮೃತನಾದನು; ಹಿಂಸಾಪರನಾಗಿ ದುಷ್ಟನಾಗಿ ಇಂದ್ರಿಯಾಧೀನನಾದ ಅರಸನನ್ನು ನಂಬಿದ ಪ್ರಜೆಗಳು ದರಿದ್ರರಾಗಿ ನಿತ್ಯದುಃಖಿತರಾಗಿ ಬಳಲುವರು" ಎಂದು ರೋದನಂಗೈದನು.

ಅದೇಪ್ರಕಾರವಾಗಿ ಎರಡನೇ ಶಿಶುವನ್ನೂ ಮೂರನೇ ಶಿಶುವನ್ನೂ ತಂದು ರಾಜದ್ವಾರದಲ್ಲಿ ಹಾಕಿ ಪೂರ್ವದಂತೆ ರೋದನಂಗೈದನು; ಹೀಗೆ ಕ್ರಮವಾಗಿ ಎಂಟು ಶಿಶುಗಳು ಮೃತರಾಗಲು ಒಂಭತ್ತನೇ ಬಾಲಕನು ಪೂರ್ವದಂತೆ ಪ್ರಾಣರಹಿತನಾಗಲು ಪ್ರಲಾಪಿಸುತಿದ್ದ ಬ್ರಾಹ್ಮಣನನ್ನು ಕೃಷ್ಣನ ಸಮೀಪದಲ್ಲಿದ್ದ ಅರ್ಜುನನು ನೋಡಿ ಆ ವಿಪ್ರನನ್ನು ಕುರಿತು "ಎಲೈ ಬ್ರಾಹ್ಮಣನೇ, ನೀನು ಯಾತಕ್ಕೋಸ್ಕರ ವ್ಯರ್ಥವಾಗಿ ರೋದನಂಗೈಯುತ್ತಿ? ನಿನ್ನ ಆವಾಸದಲ್ಲಿ ಧನುಸ್ಸನ್ನಿಡಿದಂಥಾವನೊಬ್ಬನೂ ಇಲ್ಲ; ಕ್ಷತ್ರಿಯಾಧಮನು ಒಬ್ಬನೂ ಇಲ್ಲ; ಬ್ರಾಹ್ಮಣಪೋಷಕನಾದಂಥಾವನು ಎಲ್ಲಿ ಬಂದಾನು! ಸತ್ರಯಾಗದಲ್ಲಿ ಬ್ರಾಹ್ಮಣರು ಗುಂಪುಕೂಡುವಂತೆ ಸುಮ್ಮನೆ ಗುಂಪುಕೂಡುವ ಕ್ಷತ್ರಿಯರಿದ್ದಾರೆ; ಯಾವ ಅರಸುಗಳ ದೇಶಗಳಲ್ಲಿ ಬ್ರಾಹ್ಮಣರು ಪುತ್ರದಾರಾಧನಾದಿಗಳಿಂದ ವಿಯುಕ್ತರಾಗಿ ವ್ಯಸನಪಡುವರೋ ಆ ಅರಸರು ವೇಷಧಾರಿಗಳಂತೆ ಮೋಸಗಾರರಾಗಿ ಸ್ವೋದರಂಭರರೇ ಹೊರ್ತು ಅವರು ಅರಸರಲ್ಲ! ಎಲೈ ಭಗವಂತನಾದ ಬ್ರಾಹ್ಮಣನೆ, ಪ್ರಜಾಪಾಲನವನ್ನು ಮಾಡುವ ನಾನು ದೀನರಾದ ನಿಮ್ಮಿಬ್ಬರ ಶೋಕವನ್ನು ಪರಿಹರಿಸುತ್ತೇನೆ; ನಿಮ್ಮ ಶೋಕವನ್ನು ಪರಿಹರಿಸಲಾರದವನಾದರೆ ಪಾಪಿಷ್ಟನಾದ ನಾನು ಅಗ್ನಿಪ್ರವೇಶವನ್ನು ಮಾಡುತ್ತೇನೆ" ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ಆ ಬ್ರಾಹ್ಮಣನು ಅರ್ಜುನನನ್ನು ಕುರಿತು "ಎಲೈ ಅರ್ಜುನನೆ, ಬಲರಾಮನು ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಪ್ರದ್ಯುಮ್ನನು ಅಪ್ರತಿರಥನಾದ ಅನಿರುದ್ಧನು ಮೊದಲಾದವರು ಯಾವ ಕಾರ್ಯವನ್ನು ನಿರ್ವಹಿಸಲಾರರೋ ಅಂಥಾ ಜಗದೀಶ್ವರರಿಂದಲೂ ಮಾಡಲಶಕ್ಯವಾದ ವ್ಯಾಪಾರವನ್ನು ನೀನು ಮೂರ್ಖಭಾವದಿಂದ ಮಾಡುವದಾಗಿ ಹೇಳುತ್ತಿ; ನಿನ್ನ ವಚನವನ್ನು ನಾವು ನಂಬುವದಿಲ್ಲ" ಅಂದನು.

ಅರ್ಜುನನು "ಎಲೈ ಬ್ರಾಹ್ಮಣನೆ, ನಾನು ಬಲರಾಮನಲ್ಲ—ಕೃಷ್ಣನಲ್ಲ—ಪ್ರದ್ಯುಮ್ನನಲ್ಲ—ಅನಿರುದ್ಧನಲ್ಲ; ಗಾಂಡೀವ ಧನುರ್ಧಾರಿಯಾಗಿ ಕುಂತೀಪುತ್ರನಾದ ಅರ್ಜುನನು! ಎಲೈ ಬ್ರಾಹ್ಮಣನೆ, ಪರಮೇಶ್ವರನನ್ನು ಸಂತೋಷಪಡಿಸಿದ ನನ್ನ ಪರಾಕ್ರಮವನ್ನು ನೀನು ಅವಮಾನಂಗೈಯಬೇಡ! ಎಲೈ ಪ್ರಭುವಾದ ಬ್ರಾಹ್ಮಣನೆ, ಯುದ್ಧದಲ್ಲಿ ಮೃತ್ಯುವನ್ನು ಜಯಿಸಿ ನಿನ್ನ ಪುತ್ರರನ್ನು ತಂದುಕೊಡುತ್ತೇನೆ" ಅಂದನು.

ಈ ಪ್ರಕಾರದಲ್ಲಿ ಅರ್ಜುನನಿಂದ ಹೇಳಲ್ಪಟ್ಟ ನಂಬಿಕೆ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ಪ್ರೀತನಾಗಿ ಅರ್ಜುನನ ಪರಾಕ್ರಮವನ್ನು ಸ್ಮರಿಸುತ ತನ್ನ ಮನೆಗೆ ಹೋಗಿ ಪುನಹ ಪ್ರಸವಕಾಲವು ಪ್ರಾಪ್ತವಾಗಲು "ಎಲೈ ಅರ್ಜುನನೆ, ನನ್ನ ಶಿಶುವನ್ನು ಮೃತ್ಯುವಿನ ದೆಶೆಯಿಂದ ರಕ್ಷಿಸೂ—ರಕ್ಷಿಸೂ" ಎಂದು ದುಃಖಿತನಾಗಿ ಕೂಗಿದನು; ಅದನ್ನು ಕೇಳಿ ಅರ್ಜುನನು ಪರಿಶುದ್ಧವಾದ ಉದಕದಿಂದ ಆಚಮನಂಗೈದು ಮಹೇಶ್ವರನನ್ನು ನಮಸ್ಕರಿಸಿ ದಿವ್ಯಾಸ್ತ್ರಗಳನ್ನು ಸ್ಮರಿಸಿಕೊಂಡು ಏರಿಸಲ್ಪಟ್ಟ ಹೆದೆಯುಳ್ಳ ಗಾಂಡೀವ ಧನುಸ್ಸನ್ನು ತೆಗೆದುಕೊಂಡು ಆ ಸೂತಿಕಾಗೃಹಕ್ಕೆ ಸುತ್ತಲೂ ನಾನಾ ಅಸ್ತ್ರಗಳಿಂದ ಪ್ರೇರಿತಗಳಾದ ಬಾಣಗಳಿಂದ ಊರ್ಧ್ವಭಾಗದಲ್ಲಿಯೂ ಅಧೋಭಾಗದಲ್ಲಿಯೂ ಅಷ್ಟದಿಕ್ಕುಗಳಲ್ಲಿಯೂ ಶರಪಂಜರದಿಂದ ಬಂಧಿಸಿದನು; ಆಗ ಆ ಬ್ರಾಹ್ಮಣನ ಪತ್ನಿಯು ಗರ್ಭವೇದನೆಯಿಂದ ಬಾರಿಬಾರಿಗೂ ರೋದನಂಗೈಯುತಿರಲು ಬಾಲಕನು ಉತ್ಪನ್ನನಾಗಿ ಆ ಕ್ಷಣದಲ್ಲೇ ಪ್ರಾಣರಹಿತನಾದನು; ಶರೀರಮಾತ್ರ ಉಳಯಿತು; ಅದನ್ನು ಕಂಡು ಬ್ರಾಹ್ಮಣನು ಕೃಷ್ಣನ ಸಮೀಪದಲ್ಲಿ ಅರ್ಜುನನನ್ನು ನಿಂದಿಸುತ "ಯಾವ ನಾನು ಕ್ಲೀಬನಾದಂಥಾ ಪುರುಷನ ಆತ್ಮಶ್ಲಾಘನ ವಾಕ್ಯವನ್ನು ನಂಬಿದಂಥಾವನಾದೆನೋ ಅಂಥಾ ನನ್ನ ಮೂಢತ್ವಕ್ಕೆ ಏನು ಹೇಳಬೇಕು! ಪ್ರದ್ಯುಮ್ನನೂ ಅನಿರುದ್ಧನೂ ಬಲರಾಮನೂ ಕೃಷ್ಣನೂ ಯಾವ ನನ್ನ ಶೋಕವನ್ನು ಪರಿಹರಿಸಲಾರದೇ ಹೋದರೋ ಅಂಥಾ ನನ್ನ ಕಷ್ಟವನ್ನು ಪರಿಹರಿಸುವದಕ್ಕೆ ಮತ್ತ್ಯಾವನು ಸಮರ್ಥನಾದಾನು! ಅಸತ್ಯವಾಕ್ಯವುಳ್ಳ ಅರ್ಜುನನು ಅಧಮನೇ ಸರಿ; ಆತ್ಮಶ್ಲಾಘನೆಯನ್ನು ಮಾಡುತಲಿರುವ ಅರ್ಜುನನ ಧನುಸ್ಸು ವ್ಯರ್ಥವೇ ಸರಿ; ದುರ್ಬುದ್ಧಿಯುಳ್ಳ ಅರ್ಜುನನು ದೈವದಿಂದ ಪರಿಹರಿಸಲ್ಪಟ್ಟ ನನ್ನ ಶಿಶುಗಳನ್ನು ಮೂಢಭಾವದಿಂದ ತೆಗೆದುಕೊಂಡು ಬರಲಿಚ್ಛೈಸುತ್ತಾನೆ" ಎಂದು ನಿಂದಿಸಿದನು.

ಅರ್ಜುನನು ಯೋಗವಿದ್ಯೆಯನ್ನವಲಂಬಿಸಿ ಭಗವಂತನಾದ ಯಮನ ಆವಾಸಸ್ಥಾನವಾದ ಸಂಯಮನೀ ಪಟ್ಟಣವನ್ನೈದಿ ಆ ಪುರದಲ್ಲಿ ಬ್ರಾಹ್ಮಣ ಪುತ್ರನನ್ನು ಕಾಣದೆ ಅಲ್ಲಿಂದ ಇಂದ್ರಪುರವನ್ನೈದಿ ಅಲ್ಲಿಂದ ಅಗ್ನಿಪುರವನ್ನೂ ನಿರುತಿಪುರವನ್ನೂ ಕುಬೇರಪುರವನ್ನೂ ವಾಯುಪುರವನ್ನೂ ವರುಣಲೋಕವನ್ನೂ ರಸಾತಳವನ್ನೂ ನಾಗಲೋಕವನ್ನೂ ಮಿಕ್ಕ ಸ್ಥಾನಗಳನ್ನೂ ಧನುರ್ಧಾರಿಯಾಗಿ ಸಂಚರಿಸಿ ಯಾವಸ್ಥಳದಲ್ಲಿಯೂ ಬ್ರಾಹ್ಮಣಪುತ್ರರನ್ನು ಕಾಣದೆ ವ್ಯರ್ಥವಾದ ಪ್ರತಿಜ್ಞೆಯುಳ್ಳವನಾಗಿ ಅಗ್ನಿಪ್ರವೇಶವನ್ನು ಮಾಡಲು ನಿಶ್ಚಯಿಸಿದನು. ಆಗ ಶ್ರೀಕೃಷ್ಣನು "ಎಲೈ ಅರ್ಜುನನೆ, ಬ್ರಾಹ್ಮಣಪುತ್ರನನ್ನು ನಾನು ತೋರಿಸುತ್ತೇನೆ; ನೀನು ವ್ಯರ್ಥವಾಗಿ ದೇಹವನ್ನು ಹೋಗಲಾಡಿಸಿಕೊಳ್ಳಬೇಡ; ಯಾರು ನಮ್ಮನ್ನು ದೂಷಿಸುತ್ತಾರೋ ಅವರು ನಮ್ಮ ಕೀರ್ತಿಯನ್ನು ವಿಸ್ತರಿಸುವರು" ಎಂದು ಹೇಳಿ ಉತ್ತಮಾಶ್ವಗಳುಳ್ಳ ರಥವನ್ನೇರಿ ಅರ್ಜುನಸಮೇತನಾಗಿ ಪಶ್ಚಿಮದಿಕ್ಕಾಗಿ ಹೊರಟು ಸಮಸ್ತ ದ್ವೀಪಗಳನ್ನೂ ಸಪ್ತಸಮುದ್ರಗಳನ್ನೂ ಸಪ್ತಕುಲಾಚಲಗಳನ್ನೂ ಲೋಕಾಲೋಕ ಪರ್ವತವನ್ನೂ ಅತಿಕ್ರಮಿಸಿ ಬಂದು ಮಹತ್ತಾದ ಅಂಧಕಾರಪ್ರದೇಶವನ್ನು ಪ್ರವೇಶಿಸಿದನು; ಆ ಸ್ಥಳದಲ್ಲಿ ಸೈನ್ಯ ಸುಗ್ರೀವ ಮೇಘಪುಷ್ಪ ಬಲಾಹಕಗಳೆಂಬ ನಾಲ್ಕು ಅಶ್ವಗಳು ಆ ಅಂಧಕಾರದಲ್ಲಿ ಮಾರ್ಗಗಮನವನ್ನರಿಯದೆ ನಿಲ್ಲಲು ಮಹಾ ಯೋಗೀಶ್ವರೇಶ್ವರನಾದ ಶ್ರೀಕೃಷ್ಣನು ಮುಂದೆ ನಡೆಯಲಾರದಿದ್ದ ತನ್ನ ರಥಾಶ್ವಗಳನ್ನು ನೋಡಿ ಸಹಸ್ರಸೂರ್ಯಪ್ರಕಾಶವುಳ್ಳ ತನ್ನ ಚಕ್ರವನ್ನು ಮುಂದೇ ಕಳುಹಿಸಿದನು; ಸುದರ್ಶನನಾಮಕವಾದ ಆ ಚಕ್ರವು ಮಹಾ ಭಯಂಕರವಾಗಿ ಭೇದಿಸಲಶಕ್ಯವಾದ ಆ ಮಹಾ ಅಂಧಕಾರವನ್ನು ಮನೋವೇಗದಿಂದ ಧನುಸ್ಸಿನ ಹೆದೆಯಿಂದ ಹೊರಟ ಶ್ರೀರಾಮಬಾಣವು ಶತ್ರುಸೇನೆಗಳನ್ನು ಭೇದಿಸುವಂತೆ ಪರಿಹರಿಸುತ ಮುಂದೆ ನಡೆಯಿತು; ಆ ಚಕ್ರಾಯುಧದ ಮಾರ್ಗದಿಂದ ಆ ಅಂಧಕಾರವನ್ನು ದಾಟಿ ತಮಸ್ಸಿಗೆ ಹೊರಗಾಗಿ ಸರ್ವತ್ರ ವ್ಯಾಪ್ತವಾಗಿ ಶ್ರೇಷ್ಠವಾದ ಭಗವತ್ಸಮ್ಬಂಧಿಯಾದ ಜ್ಯೋತಿಸ್ಸನ್ನು ನೋಡಿ ಅರ್ಜುನನು ಆ ತೇಜಸ್ಸಿನಿಂದ ಪ್ರತಿಹತವಾದ ನೇತ್ರವುಳ್ಳವನಾಗಿ ಕಣ್ಣುಗಳನ್ನು ಮುಚ್ಚಿಕೊಂಡನು; ಅನಂತರದಲ್ಲಿ ಮಹಾ ಬಲಿಷ್ಟವಾದ ವಾಯುವಿನಿಂದ ವೃದ್ಧಿಯನ್ನೈದಿಸಲ್ಪಟ್ಟದ್ದಾಗಿ ಮಹಾ ತರಂಗಗಳಿಂದ ಭೂಷಿತವಾದ ಮಹಾ ಜಲವನ್ನು ಪ್ರವೇಶಿಸಿ ಆ ಜಲದಲ್ಲಿ ಅತ್ಯಾಶ್ಚರ್ಯಕರವಾಗಿ ಮಹಾ ಕಾಂತಿಯುಕ್ತವಾಗಿ ಪ್ರಕಾಶಮಾನಗಳಾದ ರತ್ನಸ್ತಂಭ ಸಹಸ್ರದಿಂದ ಶೋಭಿತವಾದ ದಿವ್ಯ ಭವನವನ್ನು ನೋಡಿ ಆ ದಿವ್ಯಭವನದಲ್ಲಿ ಮಹಾ ಭಯಂಕರನಾಗಿ ಆಶ್ಚರ್ಯಕರನಾಗಿ ಸಹಸ್ರಸಂಖ್ಯಾತಗಳಾದ ಹೆಡೆಗಳಲ್ಲಿರುವ ರತ್ನಗಳ ಕಾಂತಿಗಳಿಂದ ಪ್ರಕಾಶಮಾನನಾಗಿ ಎರಡು ಸಾವಿರ ನೇತ್ರಗಳುಳ್ಳವನಾಗಿ ಕೈಲಾಸ ಪರ್ವತಕ್ಕೆ ಸಮಾನನಾಗಿ ನೀಲವರ್ಣವಾದ ನಾಲಿಗೆಗಳೂ ಕಂಠವೂ ಉಳ್ಳವನಾಗಿ ಪ್ರಕಾಶಿಸುವ ಅನಂತನಾಮಕನಾದ ಮಹಾಶೇಷನನ್ನೂ ಆ ಮಹಾಶೇಷನ ಶರೀರದಮೇಲೆ ಸುಖದಿಂದ ಕುಳಿತಿರುವ ಮಹಾಮಹಿಮಶಾಲಿಯಾಗಿ ಪುರುಷೋತ್ತಮನಾಗಿ ವ್ಯಾಪಕನಾದ ಪರಮಾತ್ಮನನ್ನೂ ಅರ್ಜುನನು ನೋಡಿದನು; ನೀಲಮೇಘದಂತೆ ಪ್ರಕಾಶಮಾನನಾಗಿ ಪೀತಾಂಬರಧಾರಿಯಾಗಿ ಪ್ರಸನ್ನವಾದ ಮುಖವುಳ್ಳವನಾಗಿ ವಿಶಾಲವಾದ ನೇತ್ರಗಳುಳ್ಳವನಾಗಿ ಮಹಾ ರತ್ನಖಚಿತವಾದ ಕಿರೀಟ ಕುಂಡಲಾದಿಗಳ ಕಾಂತಿಯಿಂದ ವ್ಯಾಪ್ತವಾದ ಸಹಸ್ರ ಕುಂಡಲಗಳುಳ್ಳವನಾಗಿ ಜೋಲುತಿರುವ ಮನೋಹರವಾದ ಅಷ್ಟಭುಜಗಳುಳ್ಳವನಾಗಿ ಕೌಸ್ತುಭರತ್ನದಿಂದಲೂ ಶ್ರೀವತ್ಸದಿಂದಲೂ ಶೋಭಿಸುವ ವಕ್ಷಸ್ಥಳವುಳ್ಳವನಾಗಿ ವನಮಾಲೆಯನ್ನು ಧರಿಸಿದವನಾಗಿ ಸುನಂದನು ನಂದನು ಮೊದಲಾದ ಸಭಾಜನರಿಂದಲೂ ಶರೀರಧಾರಿಗಳಾದ ಚಕ್ರಾದ್ಯಾಯುಧಗಳಿಂದಲೂ ಪುಷ್ಟಿಯಿಂದಲೂ ಲಕ್ಷ್ಮಿಯಿಂದಲೂ ಕೀರ್ತಿಯಿಂದಲೂ ಮಾಯೆಯಿಂದಲೂ ಅಷ್ಟಸಿದ್ಧಿಗಳಿಂದಲೂ ಸೇವಿಸಲ್ಪಟ್ಟವನಾಗಿ ಬ್ರಹ್ಮಾದಿಗಳಿಗೂ ಅಧಿಪತಿಯಾದಂಥಾ ಶ್ರೀ ನಾರಾಯಣನನ್ನು ನೋಡಿ ಶ್ರೀಕೃಷ್ಣನು ತನ್ನ ಸ್ವರೂಪನಾದ ಆ ಭಗವಂತನನ್ನು ನಮಸ್ಕರಿಸಿದನು; ಆ ಭಗವಂತನ ದರ್ಶನದಿಂದುಂಟಾದ ಭಯವುಳ್ಳವನಾಗಿ ಅರ್ಜುನನೂ ನಮಸ್ಕರಿಸಿದನು; ಮಹಾಮಹಿಮನಾಗಿ ಸಮಸ್ತ ಪ್ರಜೇಶ್ವರರಿಗೂ ಅಧಿಪತಿಯಾದ ಆ ಭಗವಂತನು ಅಂಜಲೀಬಂಧಗೈದು ನಿಂತಿದ್ದ ಕೃಷ್ಣಾರ್ಜುನರನ್ನು ಕುರಿತು ಅತಿ ಗಂಭೀರವಾದ ವಾಕ್ಯದಿಂದ "ನನ್ನ ಅಂಶದಿಂದ ಉತ್ಪನ್ನರಾದ ಎಲೈ ಕೃಷ್ಣಾರ್ಜುನರಿರಾ, ನಿಮ್ಮಿಬ್ಬರನ್ನು ನೋಡಬೇಕೆಂಬ

ಇಚ್ಛೆಯಿಂದ ಬ್ರಾಹ್ಮಣನ ಶಿಶುಗಳು ನನ್ನಿಂದ ಇಲ್ಲಿಗೆ ತರಲ್ಪಟ್ಟವು; ನೀವಿಬ್ಬರೂ ಭೂಮಿಗೆ ಭಾರರೂಪರಾದ ಅಸುರರನ್ನು ಸಂಹರಿಸಿ ಶೀಘ್ರವಾಗಿ ಇಲ್ಲಿಗೆ ಬರುವಂಥಾವರಾಗೀ; ನೀವು ಪೂರ್ಣಕಾಮರಾದಾಗ್ಯೂ ಸಾಕ್ಷಾತ್ ನರನಾರಾಯಣ ಋಷಿಗಳು; ಲೋಕಗಳಿಗೆ ಧರ್ಮೋಪದೇಶಾರ್ಥವಾಗಿ ಮಹಾ ತಪಸ್ಸನ್ನಾಚರಿಸುತ್ತೀರಿ" ಎಂದು ನುಡಿದನು.

ಈ ಪ್ರಕಾರವಾಗಿ ಪರಮಾತ್ಮನಿಂದ ಆಜ್ಞಪ್ತರಾದ ಕೃಷ್ಣಾರ್ಜುನರು ಹಾಗೇ ಆಗಲೆಂದು ಆ ಭಗವಂತನ ಆಜ್ಞೆಯನ್ನವಲಂಬಿಸಿ ಬ್ರಾಹ್ಮಣ ಶಿಶುಗಳನ್ನು ಕರೆದುಕೊಂಡು ಸಂತುಷ್ಟರಾಗಿ ತಿರಿಗಿ ತಮ್ಮ ಸ್ಥಾನಕ್ಕೆ ಬಂದು ಶಿಶುಗಳನ್ನು ಆ ಬ್ರಾಹ್ಮಣನಿಗೆ ಒಪ್ಪಿಸಿದರು; ಅರ್ಜುನನು ಆ ನಾರಾಯಣನ ಸ್ಥಾನವನ್ನು ನೋಡಿ ಆತ್ಯಾಶ್ಚರ್ಯಯುಕ್ತನಾಗಿ ಲೋಕದಲ್ಲಿ ಸಮಸ್ತ ಪುರುಷರ ಸಾಮರ್ಥ್ಯ ಶಕ್ತಿಗಳೆಲ್ಲವು ಶ್ರೀಕೃಷ್ಣಾಧೀನಗಳೇ ಎಂದು ತಿಳಿದನು! ಎಲೈ ಅರಸೆ, ಶ್ರೀಕೃಷ್ಣನು ಈ ಪ್ರಕಾರವಾಗಿ ಅನೇಕವಾದ ವ್ಯಾಪಾರಗಳನ್ನು ತೋರಿಸುತ ಲೌಕೀಕ ವಿಷಯಭೋಗಗಳನ್ನನುಭವಿಸುತ ಅನೇಕ ಕ್ರತುಗಳನ್ನು ಮಾಡಿದನು; ಪ್ರಜೆಗಳಿಗೆ ಸಮಸ್ತ ಇಷ್ಟಾರ್ಥಗಳನ್ನು ಕೊಡುತ ಬ್ರಾಹ್ಮಣರಲ್ಲಿ ಮತ್ತೂ ವಿಶೇಷವಾಗಿ ಕೊಡುತ ಸಾಕ್ಷಾತ್ ದೇವೇಂದ್ರನಂತೆ ಪರಮ ಶ್ರೇಷ್ಠನಾಗಿ ಕಾಲವಶದಿಂದ ಅಧರ್ಮಿಷ್ಟರಾದ ಅರಸುಗಳನ್ನು ಸಂಹರಿಸಿಯೂ ಅರ್ಜುನಾದಿಗಳಿಂದ ಸಂಹಾರವನ್ನು ಮಾಡಿಸಿಯೂ ಧರ್ಮರಾಯನು ಮೊದಲಾದ ಪಾಂಡವರಿಂದ ಶೀಘ್ರವಾಗಿ ಧರ್ಮಮಾರ್ಗವನ್ನು ನಡಿಸಿದನು.

---

## ೯೦ ನೇ ಅಧ್ಯಾಯ.

### ಸಂಕ್ಷೇಪ ಕೃಷ್ಣಲೀಲೆ—ಯದುವಂಶ ಪರಂಪರೆ.

ಎಲೈ ಅರಸೆ, ಲಕ್ಷ್ಮೀಪತಿಯಾದ ಶ್ರೀಕೃಷ್ಣನು ಸರ್ವಸಂಪತ್ಸಮೃದ್ಧಿಯುಳ್ಳ ಯಾದವಶ್ರೇಷ್ಠರಿಂದ ನಿಬಿಡವಾಗಿ ಉತ್ತಮವಾದ ಅಲಂಕಾರವುಳ್ಳವರಾಗಿ ನೂತನವಾದ ಯೌವನಕಾಂತಿಗಳುಳ್ಳವರಾಗಿ ಚಂಡು ಮುಂತಾದ ಕ್ರೀಡಾವಸ್ತುಗಳಿಂದ ಉಪ್ಪರಿಗೆಗಳಲ್ಲಿ ವಿಹರಿಸುತ ಮಿಂಚುಗಳಂತೆ ಹೊಳೆಯುತಲಿರುವ ಸ್ತ್ರೀಯರಿಂದ ಶೋಭಿತವಾದ್ದಾಗಿ ಮದೋದಕಗಳನ್ನು ಪ್ರವಹಿಸುವ ಮಹಾ ಗಜಗಳಿಂದ ನಿರಂತರದಲ್ಲಿಯೂ ಸಂಕುಲವಾದ್ದಾಗಿ ಕೃತಗಳಾದ ರಥಗಳಿಂದ ಶೋಭಿತವಾದ್ದಾಗಿ ತೋಪುಗಳಿಂದಲೂ ತೋಟಗಳಿಂದಲೂ ಯುಕ್ತವಾದ್ದಾಗಿ ಪುಷ್ಪಿಸಿರುವ ವೃಕ್ಷಸಮೂಹಗಳಲ್ಲಿ ನಾದಂಗೈಯುತ ವಿಹರಿಸುತಲಿರುವ ಬೃಂಗಗಳಿಂದಲೂ ಪಕ್ಷಿಗಳಿಂದಲೂ ಶಬ್ದಾಯಮಾನವಾಗಿರುವಂಥಾ ದ್ವಾರಕಾಪುರದಲ್ಲಿ ಹದಿನಾರುಸಾವಿರ ರೂಪಗಳಿಂದ ಹದಿನಾರು ಸಾವಿರ ಪತ್ನಿಯರಿಗೆ ಏಕವಲ್ಲಭನಾಗಿ ಆ ಪತ್ನಿಯರ ಗೃಹಗಳಲ್ಲಿ ವಿಹರಿಸುತಿದ್ದನು; ಮತ್ತು ವಿಕಸಿತಗಳಾದ ಪದ್ಮಗಳು ಸೌಗಂಧಿಕೆಗಳು ಬಿಳೀ ನೈದಲೆಗಳು ಮೊದಲಾದವುಗಳ ಪರಾಗದಿಂದ ಪರಿಮಳಯುಕ್ತವಾದ ನಿರ್ಮಲೋದಕವುಳ್ಳವಾಗಿ ಧ್ವನಿಗೈವ ಪಕ್ಷಿಸಮೂಹವುಳ್ಳವಾಗಿರುವಂಥಾ ಸರೋವರಗಳಲ್ಲಿ ಜಲಕ್ರೀಡಾರ್ಥವಾಗಿ ಜಲವನ್ನು ಪ್ರವೇಶಿಸಿ ಆ ಸ್ತ್ರೀಯರನ್ನಾಲಿಂಗನಂಗೈಯುತ ಅವರ ಕುಚಕುಂಕುಮಗಳಿಂದ ಲಿಪ್ತವಾದ ಶರೀರವುಳ್ಳವನಾಗಿ ವಿಹರಿಸುತಿದ್ದನು; ಗಂಧರ್ವರಿಂದ ಗಾನಮಾಡಲ್ಪಟ್ಟವನಾಗಿ ಮೃದಂಗಾದಿ ವಾದ್ಯಗಳನ್ನೂ ವೀಣೆಗಳನ್ನೂ ಬಾರಿಸುವ ಗಾಯಕರಿಂದಲೂ ಸ್ತುತಿಪಾಠಕರಿಂದಲೂ ಸ್ತೋತ್ರಂಗೈಯಲ್ಪಡುತ ನಗುತಲಿರುವ ಆ ಸ್ತ್ರೀಯರಿಂದ ಜಲಯಂತ್ರಗಳಿಂದ ನೆನೆಯಿಸಲ್ಪಟ್ಟವನಾಗಿ ಶ್ರೀಕೃಷ್ಣನು ಆ ಸ್ತ್ರೀಯರಮೇಲೆ ತಾನು ನೀರನ್ನೆರಚುತ ಯಕ್ಷಸ್ತ್ರೀಯರೊಡನೆ ಕ್ರೀಡಿಸುವ ಕುಬೇರನಂತೆ ರಮಿಸಿದನು; ಆ ಸ್ತ್ರೀಯರು ನೆನೆಯಿಸಲ್ಪಟ್ಟ ಸೂಕ್ಷ್ಮವಸ್ತ್ರಗಳುಳ್ಳವರಾಗಿ ವ್ಯಕ್ತವಾಗಿ ಕಾಣಲ್ಪಡುವ ತೊಡೆಗಳೂ ಕುಚಗಳೂ ನಿತಂಬಗಳೂ ಉಳ್ಳವರಾಗಿ ಉದುರುತಲಿರುವ ಪುಷ್ಪಗಳುಳ್ಳ ಕೇಶಗಳುಳ್ಳವರಾಗಿ ಚಿತ್ತದಲ್ಲಿ ಹುಟ್ಟಿದ ಕಾಮವಿಕಾರದಿಂದ ಪ್ರಕಾಶಿಸುತಲಿರುವ ಮುಖಗಳುಳ್ಳವರಾಗಿ ಕಾಂತನಾದ ಶ್ರೀಕೃ

ಷ್ಣನನ್ನು ಜಲದಿಂದ ನೆನೆಯಿಸುತ ಪ್ರಕಾಶಿಸಿದರು; ಶ್ರೀಕೃಷ್ಣನು ಆ ಸ್ತ್ರೀಯರ ಸ್ತನಗಳಲ್ಲಿರುವ ಕುಂಕುಮದಿಂದ ಲಿಪ್ತವಾದ ವನಮಾಲೆಯುಳ್ಳವನಾಗಿ ಜಲಕ್ರೀಡೆಯಲ್ಲಿ ಆಸಕ್ತಿಯಿಂದ ಎತ್ತಿ ಕಟ್ಟಲ್ಪಟ್ಟ ಕೇಶಬಂಧವುಳ್ಳವನಾಗಿ ಆ ಸ್ತ್ರೀಯರಮೇಲೆ ತಾನೂ ನೀರನ್ನೆರಚುತ ಅವರಿಂದ ಅಭಿಷಿಕ್ತನಾಗಿ ಸ್ತ್ರೀಗಜಗಳೊಡನೆ ಮೆರೆಯುವ ಪುರುಷಗಜದಂತೆ ವಿಹರಿಸುತ ಕ್ರೀಡಾನಂತರದಲ್ಲಿ ನಟರಿಗೂ ನರ್ತಕಿಯರಾದ ವೇಶ್ಯಾಸ್ತ್ರೀಯರಿಗೂ ಗಾಯಕರಿಗೂ ಸ್ತುತಿಪಾಠಕರಿಗೂ ಶ್ರೀಕೃಷ್ಣನು ವಸ್ತ್ರಗಳನ್ನೂ ಭೂಷಣಗಳನ್ನೂ ಸುವರ್ಣಗಳನ್ನೂ ಕೊಡುವನು; ಆತನ ಪತ್ನಿಯರೂ ಅದೇ ಪ್ರಕಾರವಾಗಿ ಕೊಡುತಿದ್ದರು; ಈ ಪ್ರಕಾರದಲ್ಲಿ ವಿಹರಿಸುತಲಿರುವ ಶ್ರೀಕೃಷ್ಣನ ಒಯ್ಯಾರಗಮನದಿಂದಲೂ ಮಧುರಾಲಾಪಗಳಿಂದಲೂ ಸವಿನೋಟಗಳಿಂದಲೂ ಮುಗುಳುನಗೆಯಿಂದಲೂ ಹಾಸ್ಯಗಳಿಂದಲೂ ವಿಲಾಸಗಳಿಂದಲೂ ಆಲಿಂಗನೆಗಳಿಂದಲೂ ಆ ಸ್ತ್ರೀಯರ ಚಿತ್ತವು ಪರವಶವಾಗುತಿತ್ತು! ಶ್ರೀಕೃಷ್ಣನಲ್ಲಿ ಲೀನವಾದ ಬುದ್ಧಿಯುಳ್ಳವರಾದಕಾರಣ ಅವರು ಆನಂದಾಧಿಕ್ಯದಿಂದ ಮೌನವನ್ನು ಧರಿಸಿ ಆತನನ್ನೇ ಚಿಂತಿಸುತ ಉನ್ಮತ್ತರಂತೆ "ಎಲೇ ಕುರರೀ ಪಕ್ಷಿಯೆ, ಶ್ರೀಕೃಷ್ಣನು ನಿದ್ರೆಗೈಯುತಲಿಧಾನೆ; ಆತನಿಂದ ತಿರೋಹಿತವಾದ ಜ್ಞಾನವುಳ್ಳ ಲೋಕವು ನಿದ್ರೆಗೈಯುತ್ತಿರಲು ನೀನು ನಿದ್ರಾಭಂಗವನ್ನು ಮಾಡುವದಕ್ಕಾಗಿ ಬಹು ಮಾತುಗಳನ್ನಾಡುತ ಮಲಗದಿದ್ದಿ; ಇದು ನಿನಗುಚಿತವಲ್ಲ; ಇದು ನಿನ್ನ ಅಪರಾಧವಲ್ಲ; ಕಮಲಾಕ್ಷನಾದ ಶ್ರೀಕೃಷ್ಣನ ಮಂದಹಾಸಯುಕ್ತವಾಗಿ ಗಂಭೀರವಾದ ನೋಟದಿಂದ ನೀನೂ ನಮ್ಮಂತೆ ಸ್ತಬ್ಧವಾದ ಬುದ್ಧಿಯುಳ್ಳದ್ದಾಗಿರಬೇಕು!— —ಎಲೇ ಚಕ್ರವಾಕಸ್ತ್ರೀಪಕ್ಷಿಯೆ, ನೀನು ಕಣ್ಣುಗಳನ್ನು ಮುಚ್ಚದೆ ರಾತ್ರಿಯಲ್ಲಿ ನಿನ್ನ ಪುರುಷನನ್ನು ಕಾಣದೆ ಶೋಕದಿಂದ ಧ್ವನಿಗೈಯುತ್ತಿದ್ದೀಯೋ; ಇಲ್ಲ ದಾಸಿಯರಾದ ನಮ್ಮಂತೆ ಶ್ರೀಕೃಷ್ಣನ ಪಾದಗಳಲ್ಲಿ ಸಮರ್ಪಿತವಾದ ಪುಷ್ಪಮಾಲಿಕೆಗಳನ್ನು ತುರುಬಿನಲ್ಲಿ ಧರಿಸಲಿಚ್ಛೈಸುತ್ತೀಯೋ!— —ಎಲೈ ಸಮುದ್ರನೆ, ನಿದ್ರೆಮಾಡುವದನ್ನು ಬಿಟ್ಟು ಜಾಗ್ರತೆಯುಳ್ಳವನಾಗಿ ಯಾತಕ್ಕೋಸ್ಕರ ಬಹಳವಾಗಿ ಮೊರೆಯುತಿದ್ದೀ! ನಾವು ಸಂಭೋಗ ಸಮಯದಲ್ಲಿ ಮುಕುಂದನಿಂದ ಅಪಹರಿಸಲ್ಪಟ್ಟ ಕುಚಕುಂಭಗಳಲ್ಲಿರುವ ಕುಂಕುಮ ಕಸ್ತೂರಿ ಮೊದಲಾದ ಪರಿಮಳದ್ರವ್ಯಗಳಿಂದ ನಿರ್ಮಿತಗಳಾದ ಮಕರಿಕಾ ಪತ್ರಲಾಂಛನಗಳುಳ್ಳವರಾಗಿರುವ ರೀತಿಯಲ್ಲಿ ನೀನೂ ಶ್ರೀಕೃಷ್ಣನಿಂದ ಅಪಹರಿಸಲ್ಪಟ್ಟ ಕೌಂಸ್ತುಭಾದಿ ಚಿನ್ಹೆಗಳುಳ್ಳವನಂತೆ ಕಾಣಲ್ಪಡುತ್ತೀ!— —ಎಲೇ ಮಲಯಮಾರುತವೆ, ನಾವು ನಿನಗೆ ಯಾವ ಅಪಕಾರವನ್ನು ಮಾಡಿದೆವು! ನೀನು ಶ್ರೀಕೃಷ್ಣನ ಕಡೆಗಣ್ಣ ನೋಟಗಳಿಂದ ಭಿನ್ನವಾದ ನಮ್ಮ ಹೃದಯದಲ್ಲಿ ಮನ್ಮಥನನ್ನು ಪ್ರೇರಿಸುತ್ತೀ!— —ಎಲೈ ಚಂದ್ರನೇ, ನೀನು ಬಲಿಷ್ಟವಾದ ರಾಜಯಕ್ಷ್ಮದಿಂದ ನಿಗ್ರಹಿಸಲ್ಪಟ್ಟವನಾದ್ದರಿಂದ ಕ್ಷೀಣನಾಗಿ ಕಿರಣಗಳಿಂದ ಅಂಧಕಾರವನ್ನು ಪರಿಹರಿಸಲಾರದಿದ್ದೀ! ಶ್ರೀಕೃಷ್ಣನಿಂದ ಹೇಳಲ್ಪಟ್ಟ ರಹಸ್ಯಗಳನ್ನು ಮರತು ಆ ಚಿಂತೆಯಿಂದ ಮಾತುಗಳು ತೋರದೆ ನಮ್ಮಂತೆ ಸ್ತಬ್ಧನಾಗಿದ್ದೀಯೋ!— —ಎಲೇ ಮೇಘವೇ, ನೀನು ಶ್ರೀಮಂತನು; ಲೋಕಸಂತಾಪವನ್ನು ಪರಿಹರಿಸುವದರಿಂದ ಶ್ರೀಕೃಷ್ಣನ ಸಾಮ್ಯವನ್ನೈದಿ ಆತನಿಗೆ ಅತ್ಯಂತ ಇಷ್ಟನಾದ ಮಿತ್ರನಾಗಿದ್ದೀ; ನೀನೂ ನಮ್ಮಂತೆ ಶ್ರೀವತ್ಸ ಚಿನ್ಹೆಯುಳ್ಳ ಶ್ರೀಕೃಷ್ಣನನ್ನು ಧ್ಯಾನಗೈಯುತ ಪ್ರೇಮಪರವಶನಾಗಿ ಚಂಚಲಹೃದಯನಾಗಿ ಅತ್ಯಂತಾಭಿಲಾಷೆಯುಳ್ಳವನಾದಕಾರಣ ಆತನನ್ನು ಸ್ಮರಿಸಿ ನೇತ್ರೋದಕಧಾರೆಗಳನ್ನು ಬಿಡುತ್ತಿ; ಆದ್ದರಿಂದ ಕೃಷ್ಣನ ಸ್ನೇಹವು ಮಹಾ ವ್ಯಸನಪ್ರದವಾದದ್ದು!— —ಎಲೇ ಮನೋಹರವಾದ ಕಂಠಧ್ವನಿಯುಳ್ಳ ಕೋಗಿಲೆಯೆ, ನೀನು ಮೃತರಾದವರನ್ನು ಬದುಕಿಸುವ ಮಧುರವಾಕ್ಯದಿಂದ ಶ್ರೀಕೃಷ್ಣನಂತೆ ಮಾತುಗಳನ್ನಾಡುತ್ತೀ; ನಿನಗೆ ನಾವು ಯಾವ ಉಪಕಾರವನ್ನು ಮಾಡಬೇಕು ಹೇಳು!— —ಎಲೈ ಪರ್ವತವೆ, ಗಂಭೀರವಾದ ಬುದ್ಧಿಯುಳ್ಳ ನೀನು ಇದ್ದ ಠಾವಿನಿಂದ ಚಲಿಸದೆಯೂ ಮಾತನಾಡದೆಯೂ ಮೌನಿಯಾಗಿರುವದರಿಂದ ಮಹಾ ದೊಡ್ಡ ಕಾರ್ಯವನ್ನಾಲೋಚಿಸುವವನಂತೆ ಕಾಣಲ್ಪಡುತ್ತೀ! ನಮ್ಮಂತೆ ವಸುದೇವನ ಪುತ್ರನಾದ ಶ್ರೀಕೃಷ್ಣನ ಪಾದವನ್ನು ನಮ್ಮ ಕುಚಗಳಿಗೆ ಸಮಾನವಾದ ಶೃಂಗಗಳಿಂದ ಧರಿಸಲಿಚ್ಛೈಸುತ್ತೀಯೋ!— —ಎಲೇ ನದಿಗಳಿರಾ, ನೀವು ಶ್ರೀಕೃಷ್ಣನ ಪ್ರೇಮಾವಲೋಕನಗಳನ್ನು ಪಡೆದು ಶುಷ್ಕವಾದ ಹೃದಯವುಳ್ಳವರಾಗಿ ಬಹಳವಾಗಿ ಕಾರ್ಶ್ಯವನ್ನೈದಿದವು; ಹಾಗೆ ಈ ಗ್ರೀಷ್ಮಕಾಲದಲ್ಲಿ ಶೋಷಿಸಿದ ಮಡುಗಳುಳ್ಳವಾಗಿ ಪದ್ಮಕಾಂತಿ ರಹಿತಗ

ಳಾಗಿದ್ದೀರಿ!— —ಎಲೇ ಹಂಸವೇ, ಸುಖವಾಗಿ ಬರೋಣವಾಯಿತೇ! ಇಲ್ಲಿ ಕುಳಿತುಕೋ; ಕ್ಷೀರಪಾನವನ್ನು ಮಾಡು; ನಿನ್ನನ್ನು ಶ್ರೀಕೃಷ್ಣನ ದೂತನೆಂದು ತಿಳಿಯುತ್ತೇವೆ! ಎಲೈ ದೂತನೆ, ಶ್ರೀಕೃಷ್ಣನ ಕಥೆಗಳನ್ನು ಹೇಳು; ಅಪರಾಜಿತನಾದ ಶ್ರೀಕೃಷ್ಣನು ಸುಖದಿಂದಿಧಾನೆಯೋ! ಪೂರ್ವದಲ್ಲಿ ನಮ್ಮನ್ನು ಕುರಿತು ಕೃಷ್ಣನು ಏನೇನೋ ಹೇಳಿದನು; ಚಂಚಲವಾದ ಪ್ರೇಮೆಯುಳ್ಳ ಕೃಷ್ಣನಿಂದ ನಮಗೆ ಏನಾಗಬೇಕು! ಆದಾಗ್ಯೂ ನಮ್ಮನ್ನು ಒಂದು ವೇಳೆಯಾದರೂ ಸ್ಮರಿಸುತ್ತಾನೆಯೋ! ಆತನು ಯಾವ ದೊಡ್ಡ ಗೃಹಸ್ಥನು! ಅಂಥಾವನ ದೂತನಾದ ನಿನ್ನನ್ನು ಹ್ಯಾಗೆ ನಂಬಬೇಕು! ಜೇನುತುಪ್ಪವು ಸೋರುವಂತೆ ಮಾತುಗಳನ್ನು ಮಾತ್ರವೇ ಆಡುವ ಕೃಷ್ಣನನ್ನು ನಾವು ಯಾಕೆ ಐದಬೇಕು! ನಿನ್ನ ಕೂಡೆ ಏನು ಮಾತು! ಆತನನ್ನೇ ಇಲ್ಲಿಗೆ ಕರೆದುಕೊಂಡು ಬಾ!— —ಎಲೇ ರಾಜಹಂಸವೇ, ವಂಚಕನಾದ ಕೃಷ್ಣನು ನಮ್ಮೆಲ್ಲರನ್ನು ವಂಚಿಸಿ ಮಹಾ ಲಕ್ಷ್ಮಿಯೊಡನೆ ರಮಿಸುತಿದ್ದಾನೆ; ಆ ದೇವಿಗೆ ತಿಳಿಯದಂತೆ ಆತನನ್ನು ರಹಸ್ಯವಾಗಿ ಮಾತನಾಡಿ ಇಲ್ಲಿಗೆ ಕರೆದುಕೊಂಡು ಬಾ; ಲಕ್ಷ್ಮೀದೇವಿಗೆ ಹೊರ್ತು ಮತ್ತ್ಯಾರಿಗೂ ಕಾಮಪ್ರದನಾಗದೆ ನಮ್ಮ ಸಮೀಪಕ್ಕೆ ಆತನು ಬರದಪಕ್ಷದಲ್ಲಿ ನಮಗೆ ಕೃಷ್ಣನ ಸೇವಾಸೌಖ್ಯವು ಸಾಕು; ಆದರೂ ನಾವೆಲ್ಲರೂ ಆತನ ದಾಸಿಯರಾಗಿರುತ್ತೇವೆ; ನಮ್ಮನ್ನು ರಕ್ಷಿಸಲಿ!" ಎಂದು ನುಡಿಯುತಿದ್ದರು.

ಎಲೈ ಅರಸೆ, ಈ ಪ್ರಕಾರದಲ್ಲಿ ಶ್ರೀಕೃಷ್ಣನ ಪತ್ನಿಯರಾದ ಆ ಸ್ತ್ರೀಯರು ಯೋಗೀಶ್ವರನಾದ ಶ್ರೀಕೃಷ್ಣನೇ— ಮಾಡಿದ ಇಂಥಾ ಭಾವ ಭಕ್ತಿಯಿಂದ ವಿಷ್ಣುಸಂಬಂಧಿಯಾಗಿ ಉತ್ತಮವಾದ ಸ್ಥಾನವನ್ನೈದಿದರು! ಯಾವ ಭಗವಂತನು ಶ್ರೋತ್ರಗಳಿಂದ ಕೇಳಲ್ಪಟ್ಟ ಮಾತ್ರದಿಂದಲೆ ಸ್ತ್ರೀಯರ ಮನಸ್ಸನ್ನು ಬಲಾತ್ಕಾರದಿಂದ ಅಪಹರಿಸುವನೊದ್ದ್ಗರು ಯಾವಭಗವಂತನು ತನ್ನನ್ನು ಅಧಿಕವಾಗಿ ಗಾನಮಾಡುವಂಥಾವರ ಚಿತ್ತವನ್ನ ಪಹರಿಸುವನೋ—ಅಂಥಾ ಶ್ರೀಕೃಷ್ಣಪೂರ್ವ ತನ್ನನ್ನು ಪ್ರತ್ಯಕ್ಷವಾಗಿ ನೋಡುತಿದ್ದ ಆ ಸ್ತ್ರೀಯರ ಮನಸ್ಸನ್ನ ಪಹರಿಸುವದರಲ್ಲಿ ಹೇಳತಕ್ಕದ್ದೇನು! ಜದ ಶ್ರೀಕೃವಾದ ಆ ಕೃಷ್ಣನನ್ನು ಪತಿಯೆಂಬ ಬುದ್ಧಿಯಿಂದ ಪಾದಗಳನ್ನೊತ್ತುವದೇ ಮೊದಲಾದ ಸೇವೆಗಳಿಂದ ಪ್ರೇಮ್ಮಿಗಳಿಗೆ ಕವಾಗಿ ಪೂಜಿಸುತಿದ್ದ ಆ ಸ್ತ್ರೀಯರ ತಪಸ್ಸನ್ಯಾರು ವರ್ಣಿಸಲಾಪುವರು! ಸತ್ಪುರುಷರಿಗೆ ಗತಿಪ್ರದನಾತನಿಗೆ ಹದಿಷ್ಣನು ಈ ಪ್ರಕಾರವಾಗಿ ವೇದೋಕ್ತವಾದ ಧರ್ಮವನ್ನು ನಡೆಯಿಸುತ ಬಾರಿಬಾರಿಗೂ ಗೃಹಸ್ಥ್ಯಮಹಿಷಿಯ ಧರ್ಮಾರ್ಥ ಕಾಮಗಳ ಮಾರ್ಗವನ್ನು ತೋರಿಸುತ ಗಾರ್ಹಸ್ಪತ್ಯ ಧರ್ಮವನ್ನಾಶ್ರಯಿಸಿದ್ದನು; ಹದಿನಾರು ಸಾನಾರು ಸಾವಿರದ ನೂರುಮಂದಿ ಪತ್ನಿಯರಿದ್ದರು; ಅವರ ಮಧ್ಯದಲ್ಲಿದ್ದ ರುಕ್ಮಿಣೀ ಮೊದಲಾ ಪುತ್ರರನ್ನು ಪಡೆದರು ಮೊದಲೆ ನನ್ನಿಂದ ಹೇಳಲ್ಪಟ್ಟರು; ಅವರ ಪುತ್ರರನ್ನು ಕ್ರಮವಾಗಿ ಹೇಳುತ್ತೇನೆ ಕೇಳ ನಲ್ಲಿಯು ಅದೇ ಕ್ರವಿರದ ನೂರ ಎಂಟುಮಂದಿ ಪತ್ನಿಯರಲ್ಲಿಯೂ ಶ್ರೀಕೃಷ್ಣನು ಒಬ್ಬೊಬ್ಬಳಲ್ಲಿ ಹತ್ತತ್ತುಮಂದಿ ಮಹಾರಥಿಕರಾನು; ಅಮೋಘವಾದ ಮಹಿಮೆಯುಳ್ಳ ಶ್ರೀಕೃಷ್ಣನು ಪೂರ್ವೋಕ್ತರಾದ ಅಷ್ಟಮಹಿಷಿಯು ದಿನಾರು ಸಾವಿರದ ಮವಾಗಿ ಪುತ್ರರನ್ನು ಪಡೆದನು; ಗಂಭೀರವಾದ ಪರಾಕ್ರಮವುಳ್ಳ ಆ ಪುತ್ರರಲ್ಲಿ ಹದಿನೆಂಟುಮ ಎಂಭತ್ತುಮಂದಿ ದರು; ಉತ್ಕೃಷ್ಟ ಕೀರ್ತಿಯುಳ್ಳ ಆ ಹದಿನೆಂಟು ಮಂದಿಯ ನಾಮಧೇಯಗಳನ್ನು ಕೇಳು; ನುವು ಭಾನುವಿಂದ ನೂರೆಂಟು ಮಂದಿಯರಾದ ಪತ್ನಿಯರಲ್ಲಿ ಉತ್ಪನ್ನರಾದ ಒಂದು ಲಕ್ಷವು ಅರವತ್ತೊಂದು ಸಾ ವಿರೋಧಿಯು ಕವಿಯಲ್ಲಿ ಪ್ರದ್ಯುಮ್ನನು ಅನಿರುದ್ಧನು ದೀಪ್ತಿಮಂತನು ಭಾನುವು ಸಾಂಬನು ಮಿತ್ರನು ಬೃಹದ್ಭಾಳ ಕುಬ್ಜೆಯಲ್ಲಿನು ವೃಕನು ಅರುಣನು ಪುಷ್ಕರನು ದೇವಬಾಹುವು ಶೃತದೇವನು ಸುನಂದನು ಚಿತ್ರಭಾನುವು ಆತನು ಸಾಕ್ಷಾತ್ಯು ನೆಗ್ರೋಧನು ಎಂಬವರು ಮಹಾರಥಿಕರು. ಮತ್ತು ತ್ರಿವಿಕ್ರಾ ಎಂಬ ನಾಮಧೇಯಳ್ಳವು ಹೇಳಲ್ಪ ಉಪಶ್ಲೋಕನು ಎಂಬ ಪುತ್ರನು ಜನಿಸಿ ತಂದೆಯಾದ ಶ್ರೀಕೃಷ್ಣನನ್ನೇ ಅನುಸರಿಸಿದ್ದನು; ನು; ಅದರಲ್ಲಿ ನಾರದನ ಶಿಷ್ಯನಾಗಿ ಬ್ರಹ್ಮನಿಷ್ಠನಾದನು; ಉಪಶ್ಲೋಕನಿಂದ ಸಾತ್ವತವೆಂಬ ಪಾಂಚರ 67. ಟ್ಟಿತು; ಸಾತ್ವತನಾಮಕವಾದ ಆ ಪಾಂಚರಾತ್ರವನ್ನು ತಿಳಿದ ಪುರುಷನು ಮುಕ್ತಿಯನ್ನೈದುವ

ಸ್ತ್ರೀಯರಿಗೂ ಶೂದ್ರಾದಿಗಳಿಗೂ ವೈಷ್ಣವ ದೀಕ್ಷೆಯು ಹೇಳಲ್ಪಟ್ಟಿದೆ! ಎಲೈ ರಾಜಶ್ರೇಷ್ಠನೆ, ಶ್ರೀಕೃಷ್ಣನ ಪುತ್ರರಲ್ಲಿ ಪ್ರದ್ಯುಮ್ನನು ಪ್ರಥಮಪುತ್ರನು; ಆತನು ರುಕ್ಮಿಣೀದೇವಿಯಲ್ಲಿ ಜನಿಸಿದವನು; ತಂದೆಯಾದ ಶ್ರೀಕೃಷ್ಣನಂತೆ ಮಹಿಮೆಯುಳ್ಳವನು; ಮಹಾ ರಥಿಕನಾದ ಪ್ರದ್ಯುಮ್ನನು ರುಕ್ಮಿರಾಯನ ಮಗಳಾದ ರುಕ್ಮವತಿಯನ್ನು ಮದುವೆಯಾದನು; ಆತನಿಗೆ ಹತ್ತುಸಾವಿರ ಆನೆಗಳ ಬಲವುಳ್ಳ ಅನಿರುದ್ಧನು ಜನಿಸಿದನು; ಅನಿರುದ್ಧನು ರುಕ್ಮಿಯ ಪೌತ್ರಿಯಾದ ರೋಚನೆಯನ್ನು ಪರಿಗ್ರಹಿಸಿ ಆಕೆಯಲ್ಲಿ ವಜ್ರನು ಎಂಬ ಪುತ್ರನನ್ನು ಪಡೆದನು; ಗರ್ಗಾಚಾರ್ಯನ ಕೋಪದಿಂದ ಹುಟ್ಟಿದ ಮುಸಲದಿಂದ ಸಮಸ್ತ ಯಾದವರೂ ನಾಶವನ್ನೈದಲು ಅನಿರುದ್ಧ ಪುತ್ರನಾದ ವಜ್ರನೊಬ್ಬನು ಮಾತ್ರವೇ ಉಳಿದನು; ಆತನಿಗೆ ಪ್ರತಿಬಾಹು ಎಂಬ ಪುತ್ರನೂ ಅವನಿಗೆ ಸುಬಾಹು ಎಂಬ ಪುತ್ರನೂ ಸುಬಾಹುವಿಗೆ ಶಾಂತಸೇನನೂ ಜನಿಸಿದರು; ಆತನ ಪುತ್ರನು ಶತಸೇನನು; ಈ ಕುಲದಲ್ಲಿ ಜನಿಸಿದವರೆಲ್ಲರು ಧನವಂತರು; ದೀರ್ಘಾಯುಷ್ಮಂತರು; ಮಹಾ ಪರಾಕ್ರಮವುಳ್ಳವರು; ಬಹು ಪುತ್ರವಂತರು; ಬ್ರಾಹ್ಮಣಪೋಷಕರು; ಯದುವಂಶದಲ್ಲಿ ಉತ್ಪನ್ನರಾಗಿ ಪ್ರಖ್ಯಾತವಾದ ವ್ಯಾಪಾರವುಳ್ಳ ಪುರುಷರ ಸಂಖ್ಯೆಯು ನೂರು ವರುಷಗಳಾದಾಗ್ಯೂ ಇಷ್ಟಷ್ಟೆಂದು ನಿಶ್ಚಯಿಸುವದಕ್ಕೆ ಶಕ್ಯವಲ್ಲ! ಮೂರುಕೋಟಿಯು ಎಂಟುಸಾವಿರದ ಎಂಟುನೂರುಮಂದಿ ಆಚಾರ್ಯರು ಯದುಕುಲದಲ್ಲಿ ಜನಿಸಿದ ಕುಮಾರರಿಗೆ ವಿದ್ಯಾಭ್ಯಾಸಗೈಸುವರು; ಮಹಾತ್ಮರಾಗಿ ಯದುವಂಶೋತ್ಪನ್ನರಾ ಕುಮಾರರ ಸಂಖ್ಯೆಯನ್ನು ತಿಳಿಯುವವರ್ಯಾರು! ಆಹುಕನೆಂಬ ಒಬ್ಬ ಯಾದವನು ಹತ್ತುಕೋಟಿ ಸಂಖ್ಯಾತರಾದ ಜನ್ನರಿಂದ ಯುಕ್ತನಾಗಿದ್ದನು! ಎಲೈ ಅರಸೇ, ದೇವಾಸುರರ ಯುದ್ಧದಲ್ಲಿ ದೇವತೆಗಳಿಂದ ಸಂಹೃತರಾದಂಥಾ ಅತಿ ಕ್ರೂರಗಳಾದ ಅಸುರರೆಲ್ಲರು ಮನುಷ್ಯರಲ್ಲಿ ಉತ್ಪನ್ನರಾಗಿ ದುಷ್ಟಭಾವದಿಂದ ಪ್ರಜೆಗಳನ್ನು ಬಾಧಿಸಲು ಅವರನ್ನು ನಿಗ್ರಹಿಸಲೋಸುಗ ಹರಿಯಿಂದ ಆಜ್ಞಾಪಿಸಲ್ಪಟ್ಟವರಾಗಿ ದೇವತೆಗಳು ಯದುವಂಶದಲ್ಲಿ ನೂರು ಒಂದು ಕುಲಗಳಾಗಿ ಅವತರಿಸಿದರು; ಆ ನೂರೊಂದು ಕುಲಗಳಲ್ಲಿ ಜನಿಸಿದ ಸಮಸ್ತ ಯಾದವರಿಗೂ ಪ್ರಭುವಾಗಿ ಶ್ರೀಕೃಷ್ಣನು ಅರ್ಪಿತಮಸ್ತರನ್ನೂ ಪೋಷಿಸುತಿದ್ದನು; ಆ ಯಾದವರೆಲ್ಲರು ಶ್ರೀಕೃಷ್ಣನ ಚಿತ್ತವನ್ನನುಸರಿಸಿ ವೃದ್ಧಿಯನ್ನೈದಿ ಹದಿನೆಂಟುಕಾಲದಲ್ಲಿಯೂ ವಿಹಾರಕಾಲದಲ್ಲಿಯೂ ಸಲ್ಲಾಪ ಸ್ನಾನ ಭೋಜನಾದಿ ಕಾಲಗಳಲ್ಲಿಯೂ ಶ್ರೀಕೃಷ್ಣ ವೇದಗಳ ರಹಸ್ಯದ ಚಿತ್ತವುಳ್ಳವರಾಗಿ ಆತನನ್ನು ಪರಮಾತ್ಮನೆಂದು ಸೇವಿಸುತಿದ್ದರು! ಶ್ರೀಕೃಷ್ಣನು ಕುರುಕ್ಷೇತ್ರ ಸ್ನಾನವಿಷೇಶವು ಪುರುಷಗಳ ಪರ್ಯಂತವು ತನ್ನ ಯೋಗಮಾಯೆಯಿಂದ ಕಲ್ಪಿತಗಳಾದ ವಸ್ತುಗಳಿಂದ ಸಮಸ್ತ ತನ್ನ ಎಂಟುಮಂದಿ ರೂಪನಾದ ಪರಮಾತ್ಮನನ್ನು ಕ್ರತುಗಳಿಂದ ಆರಾಧಿಸುತ ಗರ್ಗಋಷಿಯು ಅಸಿತಋಷಿಯು ಆಗ ಯದುವಂಶದಲ್ಲಿ ಪರಶುರಾಮ ಋಷಿಯು ಮೊದಲಾದವರನ್ನು ಆಚಾರ್ಯರಾಗಿ ಮಾಡಿಕೊಂಡು ಪುಣ್ಯಶ್ಲೋಕನಾಗಿ ಯನ್ನು ಸ್ವಲ್ಪಶ್ರೇಷ್ಠ ಪಟ್ಟಸ್ತ್ರೀಯರೊಡನೆ ದೀಕ್ಷಿತನಾಗಿ ಪ್ರಕಾಶಿಸುತಿದ್ದನು! ಎಲೈ ಅರಸೆ, ಯಾವ ಶ್ರೀಕೃಷ್ಣನು ಗತಿಯನ್ನೀಯನೋ ಸಿ ಲೋಕಪಾವನವಾಗಿ ತನ್ನ ಕೀರ್ತಿರೂಪವಾದ ತೀರ್ಥವಾಗಿ ತನ್ನ ಪಾದದಲ್ಲಿ ಹುಟ್ಟಿದ ಗಂಗೆ ಯಾವಕೃಷ್ಣನ ಶಿಷ್ಯಳದ್ದಾಗಿ ಮಾಡಿದನೋ—ಯಾವ ಕೃಷ್ಣನು ದ್ವೇಷಿಗಳಿಗೂ ಮಿತ್ರರಿಗೂ ಸಹಾ ಉತ್ತಮ ಮಹರ್ಷಿಗಳ ಸೇ!—ಬ್ರಹ್ಮಾದಿಗಳಿಂದಲೂ ಪ್ರಸಾದಾರ್ಥವಾಗಿ ಪ್ರಯತ್ನಂಗೈಯಲ್ಪಡುವಂಥಾ ಲಕ್ಷ್ಮೀದೇವಿಯು ಕಾಲಸ್ವರೂಪನಧೀನಳೊ—ಯಾವ ಶ್ರೀಕೃಷ್ಣನ ದಿವ್ಯ ನಾಮಧೇಯವು ಅಮಂಗಲಪರಿಹಾರಕವಾದದ್ದೋ—ಸಮಸ್ತ ಜೀವಾಂಶಗಳಲ್ಲಿ ಧರ್ಮಮಾರ್ಗವನ್ನು ಯಾವ ಕೃಷ್ಣನು ಪ್ರವರ್ತಿಸುವಂತೆ ಮಾಡುವನೋ—ಅಂಥಾ ಸಮೂಹಕ್ಕೆ ಪ್ರಚಕ್ರಾಯುಧವುಳ್ಳ ಶ್ರೀಕೃಷ್ಣನು ಭೂಭಾರಪರಿಹಾರವನ್ನು ಮಾಡಿದನೆಂಬದು ಆಶ್ಚರ್ಯವಲ್ಲ; ಪಾದಗಳನು ಆಶ್ರಯನಾಗಿ ದೇವಕೀಗರ್ಭದಲ್ಲಿ ಉತ್ಪತ್ತೀ ವ್ಯಾಜದಿಂದ ಆವಿರ್ಭವಿಸಿದವನಾಗಿ ಯಾದವರಿಗೂ ಪ್ರಭುವಾಗಿ ತನ್ನ ಭುಜಗಳಿಂದ ಅಧರ್ಮವನ್ನು ನಿರಾಕರಿಸುವವನಾಗಿ ಸ್ಥಾವರ ಜಂಗಮ ಪ್ರಾಣಿಗ ಪರಿಹರಿಸುವವನಾಗಿ ಮುಗುಳುನಗೆ ವಿದ್ಯುಕ್ತವಾದ ಮುಖದಿಂದ ವ್ರಜದಲ್ಲಿದ್ದ ಗೋಪಸ್ತ್ರೀ ಸ್ತ್ರೀಯರಿಗೂ ಕಾಮವಿಕಾರವನ್ನು ವೃದ್ಧಿಮಾಡುತ ಶ್ರೀಕೃಷ್ಣನು ಸರ್ವೋತ್ಕೃಷ್ಟದಿಂದ

ಪ್ರಕಾಶಿಸುತ್ತಿದ್ದನು! ಸ್ವಕೀಯ ಧರ್ಮವನ್ನು ರಕ್ಷಿಸುವ ಇಚ್ಛೆಯಿಂದ ಪಡೆಯಲ್ಪಟ್ಟ ಮತ್ಸ್ಯ ಕೂರ್ಮಾದಿ ಲೀಲಾಶರೀರಗಳುಳ್ಳ ಯದೂತ್ತಮನಾದ ಶ್ರೀಕೃಷ್ಣನ ಅವತಾರಾನುರೂಪಗಳಾಗಿ ಜನರ ಸಮಸ್ತ ಕರ್ಮಗಳನ್ನು ಪರಿಹರಿಸುವಂಥಾ ಚರಿತ್ರಗಳನ್ನು ಶ್ರೀಕೃಷ್ಣನ ಪಾದಪದ್ಮಾನುಶರಣವನ್ನಪೇಕ್ಷಿಸುವ ಪುರುಷನು ಭಕ್ತಿಯಿಂದ ಕೇಳಬೇಕು; ಭಕ್ತಿಪೂರ್ವಕವಾಗಿ ಪೂಜಾದಿಗಳನ್ನು ಮಾಡುತ ಪ್ರತಿದಿವಸದಲ್ಲಿಯೂ ಅಧಿಕವಾದ ಸೇವೆಯಿಂದ ಶ್ರೀಕೃಷ್ಣನ ಕಥಾಶ್ರವಣ ನಾಮಸಂಕೀರ್ತನ ಧ್ಯಾನಾದಿಗಳಿಂದ ಕೂಡಿರುವವರು ಭಕ್ತಜನ ಸಮೂಹಕ್ಕೆ ಮುಕ್ತಿರೂಪವಾಗಿ ದುರ್ಲಭವಾದ ಭಗವಂತನ ಸ್ಥಾನವನ್ನೈದುವರು; ಇಂಥಾ ಪರಮ ಪುರುಷಾರ್ಥಕ್ಕೋಸ್ಕರವೇ ಭೂಪತಿಗಳಾದ ಸಾರ್ವಭೌಮರೂ ಐಹಿಕ ಸಾಮ್ರಾಜ್ಯ ಸೌಖ್ಯವನ್ನು ಬಿಟ್ಟು ಪುಣ್ಯಾರಣ್ಯಗಳನ್ನೈದಿ ತಪಸ್ಸು ಮಾಡುವರು!—ಎಂದು ಶ್ರೀ ಶುಕಾಚಾರ್ಯನು ಪರೀಕ್ಷಿದ್ರಾಯನನ್ನು ಕುರಿತು ನಿರೂಪಿಸಿದನು—ಎಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳನ್ನು ಕುರಿತು ಹೇಳಿದನು.

ಇಂತು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಪ್ರತಿಮ ವೀರ ನರಪತಿ ಬಿರುದೆಂತೆಂಬರ ಗಂಡ ಲೋಕೈಕವೀರ
ಯದುಕುಲ ಪಯಃಪಾರಾವಾರ ಕಳಾನಿಧಿ ಶಂಖ ಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ
ಧರಣೀ ವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಮಹಿಶೂರ ಶ್ರೀಚಾಮರಾಜ ಮಹೀಪಾಲ
ಧರ್ಮಪತ್ನಿ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀಚಾಮುಂಡಿ
ಕಾಂಬಾ ವರಪ್ರಸಾದೋದ್ಭವರಾದ ಶ್ರೀಕೃಷ್ಣರಾಜ ಒಡೆಯರವರಿಂದ ಬುಧಜನ
ಸಮ್ಮತಿಯಿಂದ ರಚಿಸಲ್ಪಟ್ಟ ಕರ್ಣಾಟಕಭಾಷಾರೂಪವಾದ ಶ್ರೀಕೃಷ್ಣರಾಜ
ವಾಣೀವಿಲಾಸವೆಂಬ ಶ್ರೀಮದ್ಭಾಗವತದ ಟೀಕಿನ

**ದಶಮಸ್ಕಂಧ ಸಮಾಪ್ತಿ.**



ಶ್ರೀ ಚಾಮುಂಡೇಶ್ವರೀ ಪ್ರೆಸ್, ಲಾಲ್‌ಬಾಗ್ ರೋಡ್, ಬೆಂಗಳೂರ್—೧೮೯೩.

